ಶ್ರೀ ಜಯಚಾಮರಾಜೇಂದ್ರ ಗ್ರಂಥರತ್ನಮಾ ೨ ಸ

# ಶ್ರೀಸ್ಕಾಂದಮಹಾಪುರಾಣಂ

೫

## ಆವಂತ್ಯಖಂಡ

೩

ರೇವಾಖಂಡ (ಭಾಗ ೩)

(ಮೂಲ ಮತ್ತು ಅನುವಾದ ಸಹಿತ)

ಅನುವಾದಕ
ಆಸ್ಥಾನ ವಿದ್ವಾನ್
ಮೋಟಗಾನಹಳ್ಳಿ ಸುಬ್ರಹ್ಮಣ್ಯಶಾಸ್ತ್ರೀ



ಬೆಂಗಳೂರು ಪ್ರೆಸ್
ಮೈಸೂರು ರೋಡು, ಬೆಂಗಳೂರು ಸಿಟಿ
೧೯೫೦

# ಶ್ರೀಸ್ಕಾಂದಮಹಾಪುರಾಣಂ

೫

## ಆವಂತ್ಯಖಂಡ

೩

## ರೇವಾಖಂಡ (ಭಾಗ ೩)

(ಮೂಲ ಮತ್ತು ಅನುವಾದ ಸಹಿತ)

ಶ್ರೀ ಜಯಚಾಮರಾಜೇಂದ್ರ ಗ್ರಂಥರತ್ನಮಾಲಾ ಸಂಖ್ಯಾ ೧೪

# ಶ್ರೀಸ್ಕಾಂದಮಹಾಪುರಾಣಂ

೫

## ಆವಂತ್ಯಖಂಡ

೩

ರೇವಾಖಂಡ (ಭಾಗ ೩)

(ಮೂಲ ಮತ್ತು ಅನುವಾದ ಸಹಿತ)

ಅನುವಾದಕ

ಆಸ್ಥಾನ ವಿದ್ವಾನ್

**ಮೋಟಗಾನಹಳ್ಳಿ ಸುಬ್ರಹ್ಮಣ್ಯಶಾಸ್ತ್ರೀ**

ಬೆಂಗಳೂರು ಪ್ರೆಸ್

ಮೈಸೂರು ರೋಡು, ಬೆಂಗಳೂರು ೨೮

೧೯೫೦

# ಅರಿಕೆ

ಈ ಸಂಪುಟದಲ್ಲಿ ಶ್ರೀ ಸ್ಕಾಂದಮಹಾಪುರಾಣದ ಐದನೆಯ ಆವಂತ್ಯಖಂಡದ ಮೂರನೆಯ ರೇವಾಖಂಡವು ಸಂಪೂರ್ಣವಾಗಿರುತ್ತದೆ. ಇದರೊಡನೆಯೆ ಆವಂತ್ಯಖಂಡವೂ ಸಮಾಪ್ತವಾಗಿರುತ್ತದೆ.

ಅವಂತೀಕ್ಷೇತ್ರಕ್ಕೆ 'ಮಹಾಕಾಲವನ'ವೆಂಬ ಮತ್ತೊಂದು ಹೆಸರೂ ಉಂಟು. ಮಹಾಕಾಲವನದಲ್ಲಿಯೇ 'ಮಹಾಕಾಲೇಶ್ವರಲಿಂಗ'ವು ವಿರಾಜಿಸುತ್ತಿರುವುದು. ಕಾಲಿದಾಸಾದಿ ಮಹಾಕವಿಗಳೆಲ್ಲರೂ ಈ ಕ್ಷೇತ್ರವನ್ನು ತಮ್ಮ ಕಾವ್ಯಗಳಲ್ಲಿ ಬಹುವಾಗಿ ವರ್ಣಿಸಿರುತ್ತಾರೆ. ಮಹಾಕಾಲೇಶ್ವರ ದೇವಾಲಯವನ್ನೊಳಕೊಂಡು ಶೋಭಿಸುತ್ತಿರುವ ಅವಂತಿಯು ಉಜ್ಜಯಿನೀನಗರವು ಚಾರಿತ್ರಕವಾಗಿಯೂ ಪ್ರಸಿದ್ಧವಾದುದೇ ಆಗಿರುವುದು. ಪೂರ್ವದಲ್ಲಿ ಇಲ್ಲಿ ಅನೇಕ ವಿಶ್ವವಿದ್ಯಾನಿಲಯಗಳಿದ್ದುವೆಂದು ಸಂಶೋಧನೆಗಳಿಂದ ತಿಳಿದುಬಂದಿದೆ. ಭಾರತ ಸಂಸ್ಕೃತಿಯ ಸಂರಕ್ಷಣೆಯಸಲುವಾಗಿ ಮಹಾ ಮಹಾ ಮೇಧಾವಿಗಳು ಹಗಲಿರುಳೂ ಶ್ರಮವಹಿಸಿ ದುಡಿದ ದುಡಿಮೆಯ ಸತ್ಫಲಸಂಕೇತಗಳು ಇಂದಿಗೂ ಈ ದೇಶದಲ್ಲಿ ಚಿರಸ್ಥಾಯಿಯಾಗಿ ಕಂಗೊಳಿಸುತ್ತಿವೆ. ಇಂಥ ಸುಂದರ ಪ್ರಾಂತ್ಯವಾದ ಅವಂತಿಯನ್ನು ಕುರಿತ ಈ ಖಂಡವು ತನ್ನೊಂದು ಐತಿಹಾಸಿಕ, ಸಾಮಾಜಿಕ ಮತ್ತು ನೈತಿಕ ಕಥಾನುಕಥನಗುಣದಿಂದಲೂ, ದೇವ ದೇವಿಯರ ಭಕ್ತಿಪಾರಮ್ಯಸಂಕಥನ ವೈಭವದಿಂದಲೂ, ಹರಿಹರಕ್ಷೇತ್ರಗಳ ಮಾಹಾತ್ಮ್ಯ ನಿರೂಪಣ ವೈಖರಿಯಿಂದಲೂ ಓದುಗರಿಗೆ ಹೃದಯಹಾರಿಯಾಗಿ ಪರಿಣಮಿಸದಿರದು.

ಇಂತಹ ಅನೇಕಾನೇಕ ಕ್ಷೇತ್ರಮಾಹಾತ್ಮ್ಯಗಳ ಸಂಪುಟವೆನಿಸಿರುವ ಈ ಮಹಾಪುರಾಣವನ್ನು ಕನ್ನಡದ ಅನುವಾದದೊಡನೆ ಪ್ರಕಟಿಸಲು ಪ್ರೇರೇಪಿಸಿ ಕನ್ನಡಿಗರೆಲ್ಲರಿಗೂ ಮಹೋಪಕೃತಿಯೆನ್ನಸಗಿ ಅವರೆಲ್ಲರ ಚಿರಕೃತಜ್ಞತೆಗೆ ಪಾತ್ರರಾಗಿರುವ ನಮ್ಮನ್ನಾಳುವ ಶ್ರೀಮದ್ ಜಯಚಾಮರಾಜೇಂದ್ರ ಒಡೆಯರ್ ಬಹದ್ದೂರ್, ಜಿ.ಸಿ.ಬಿ., ಜಿ.ಸಿ.ಎಸ್.ಐ. ಮಹಾಪ್ರಭುಗಳವರಿಗೆ ಪರಮೇಶ್ವರನು ಇತೋಪ್ಯತಿಶಯವಾದ ಸಮಸ್ತ ಸನ್ಮಂಗಳಗಳನ್ನೂ ದಯೆಪಾಲಿಸಿ ಸಂರಕ್ಷಿಸಲೆಂದು ಸಂಪ್ರಾರ್ಥಿಸುತ್ತೇನೆ.

**ಮೋಟಗಾನಹಳ್ಳಿ ಸುಬ್ರಹ್ಮಣ್ಯಶಾಸ್ತ್ರೀ**

# ವಿಷಯಾನುಕ್ರಮಣಿಕೆ

ಪುಟ ಸಂಖ್ಯೆ

॥ ಶ್ರೀಃ ॥

**ಅಥ ಮಂಗಳಾಚರಣಶ್ಲೋಕಃ**

**ಯಸ್ಯಾಜ್ಞಯಾ ಜಗತ್ಸ್ರಷ್ಟಾ ವಿರಿಂಚಿಃ ಪಾಲಕೋ ಹರಿಃ ।**
**ಸಂಹರ್ತಾ ಕಾಲರುದ್ರಾಖ್ಯೋ ನಮಸ್ತಸ್ಮೈ ಪಿನಾಕಿನೇ ॥**

**ತಾತ್ಪರ್ಯ**

ಯಾವ ಪ್ರಭುವಿನ ಅಪ್ಪಣೆಯಿಂದ
ಬ್ರಹ್ಮನು ಜಗತ್ತನ್ನು ಸೃಜಿಸುವವನಾಗಿಯೂ
ಶ್ರೀಮನ್ನಾರಾಯಣಮೂರ್ತಿಯು ಸಂರಕ್ಷಿಸುವವನಾಗಿಯೂ
ಕಾಲರುದ್ರನೆಂದು ಹೆಸರಾದ ಸ್ವಾಮಿಯು ಸಂಹಾರಕರ್ತನಾಗಿಯೂ ಇರುವರೋ
ಆ ಪಿನಾಕಪಾಣಿಯಾದ ಪರಮಶಿವನಿಗೆ
ನಮಸ್ಕಾರವು

॥ ಶ್ರೀಃ ॥

॥ ಶ್ರೀಶಂಕರಃ ಶಂಕರಃ ॥

# ಶ್ರೀ ಸ್ಕಾಂದಮಹಾಪುರಾಣಂ

## ಅಥಾಽವಂತ್ಯಖಂಡೇ
## ತೃತೀಯೇ ರೇವಾಖಂಡೇ ತೃತೀಯೋ ಭಾಗಃ ಪ್ರಾರಭ್ಯತೇ

ಓಂ ಶ್ರೀ ಗಣೇಶಾಯ ನಮಃ । ಓಂ ನಮೋ ಬೃಹಸ್ಪತಯೇ ।
ನಮಸ್ತಸ್ಮೈ ಬ್ರಹ್ಮಣೇ । ವಿಷ್ಣವೇ ನಮಃ ॥

ಶ್ರೀಮತ್ಸುಂದರಮೀಶಾನಂ ಶ್ರೀಮತ್ಸಿದ್ಧಿವಿನಾಯಕಂ ।
ಷಣ್ಮುಖಂ ಸ್ಕಂದಮಾನಂದಂ ಬ್ರಹ್ಮಾಣಂ ವಿಷ್ಣುಮಾಶ್ರಯೇ ॥
ಯಸ್ಯಾಜ್ಞಯಾ ಜಗತ್ಸ್ರಷ್ಟಾ ವಿರಿಂಚಿಃ ಪಾಲಕೋ ಹರಿಃ ।
ಸಂಹರ್ತಾ ಕಾಲರುದ್ರಾಖ್ಯೋ ನಮಸ್ತಸ್ಮೈ ಪಿನಾಕಿನೇ ॥

### ಅಥ ತ್ರ್ಯಯಸ್ತ್ರಿಂಶದಧಿಕಶತತಮೋಽಧ್ಯಾಯಃ

**ಕುಬೇರಾದಿತೀರ್ಥಚತುಷ್ಟಯಮಾಹಾತ್ಮ್ಯವರ್ಣನಂ**

ಶ್ರೀ ಮಾರ್ಕಂಡೇಯ ಉವಾಚ :—

**ತತೋ ಗಚ್ಛೇನ್ಮಹೀಪಾಲ ಪರಂ ತೀರ್ಥಚತುಷ್ಟಯಂ ।**
**ಯೇಷಾಂ ದರ್ಶನಮಾತ್ರೇಣ ಸರ್ವಪಾಪಕ್ಷಯೋ ಭವೇತ್ ॥ ೧ ॥**
**ಕೌಬೇರಂ ವಾರುಣಂ ಯಾಮ್ಯಂ ವಾಯವ್ಯಂ ತು ತತಃ ಪರಂ ।**
**ಯತ್ರ ಸಿದ್ಧಾ ಮಹಾಪ್ರಾಜ್ಞಾ ಲೋಕಪಾಲಾ ಮಹಾಬಲಾಃ ॥ ೨ ॥**

---

### ಕನ್ನಡದ ಅನುವಾದ

**ಕುಬೇರಾದಿತೀರ್ಥಚತುಷ್ಟಯಮಾಹಾತ್ಮ್ಯವರ್ಣನ**

೧. ಮಾರ್ಕಂಡೇಯನು ಹೇಳುತ್ತಾನೆ:—ಮಹಾರಾಜನೆ! ಅಲ್ಲಿಂದ ಮುಂದೆ ನಾಲ್ಕು ತೀರ್ಥಗಳಿರುವುವು. ಅವುಗಳನ್ನು ನೋಡಿದ ಮಾತ್ರದಿಂದಲೇ ಸಕಲ ಪಾತಕಗಳೂ ನಾಶವಾಗುವುವು.

೨. ಕೌಬೇರ, ವಾರುಣ, ಯಾಮ್ಯ ಮತ್ತು ವಾಯುವ್ಯಗಳೆಂಬ ಈ ತೀರ್ಥಗಳಲ್ಲಿ ಮಹಾಜ್ಞಾನಿಗಳೂ ಅತ್ಯಂತ ಬಲಶಾಲಿಗಳೂ ಆದ ಆಯಾ ದಿಕ್ಪಾಲಕರು ತಪಸ್ಸಿದ್ಧಿಯನ್ನು ಪಡೆದರು.

ಯುಧಿಷ್ಠಿರ ಉವಾಚ :—

ಕಿಮರ್ಥಂ ಲೋಕಪಾಲೈಶ್ಚ ತಪಶ್ಚೀರ್ಣಂ ಪುರಾಽನಘ ।
ನರ್ಮದಾತಟಮಾಶ್ರಿತ್ಯ ಹ್ಯೇತನ್ಮೇ ವಕ್ತು ಮರ್ಹಸಿ ॥ ೩ ॥

ಶ್ರೀ ಮಾರ್ಕಂಡೇಯ ಉವಾಚ :—

ಅಧಿಷ್ಠಾನಂ ಸಮಿಚ್ಛಂತಿ ಹ್ಯಚಲಂ ನಿರ್ಬಲೇ ಸತಿ ।
ಸಂಸಾರೇ ಸರ್ವಭೂತಾನಾಂ ತೃಣಬಿಂದುವದಸ್ಥಿರೇ ॥ ೪ ॥
ಕದಲೀಸಾರನಿಃಸಾರೇ ಮೃಗತೃಷ್ಣೇವ ಚಂಚಲೇ ।
ಸ್ಥಾವರೇ ಜಂಗಮೇ ಸರ್ವೇ ಭೂತಗ್ರಾಮೇ ಚತುರ್ವಿಧೇ ॥ ೫ ॥
ಧರ್ಮೋ ಮಾತಾ ಪಿತಾ ಧರ್ಮೋ ಧರ್ಮೋ ಬಂಧುಃ ಸುಹೃತ್ತಥಾ ।
ಆಧಾರಃ ಸರ್ವಭೂತಾನಾಂ ತ್ರೈಲೋಕ್ಯೇ ಸಚರಾಚರೇ ॥ ೬ ॥
ಏವಂ ಜ್ಞಾತ್ವಾ ತು ತೇ ಸರ್ವೇ ಲೋಕಪಾಲಾಃ ಕೃತಕ್ಷಣಾಃ ।
ತಪಸ್ತೇ ಚಕ್ರುರತುಲಂ ಮಾರುತಾಹಾರತತ್ಪರಾಃ ॥ ೭ ॥
ತತಸ್ತುಷ್ಟೋ ಮಹಾದೇವಃ ಕೃತಸ್ಯಾರ್ಧೇ ಗತೇ ತದಾ ।
ಅನುರೂಪೇಣ ರಾಜೇಂದ್ರ ಯುಗಸ್ಯ ಪರಮೇಶ್ವರಃ ॥ ೮ ॥

---

೩. ಯುಧಿಷ್ಠಿರನು ಹೇಳುತ್ತಾನೆ:—ನಿಷ್ಕಲ್ಮಷನೆ! ಈ ಲೋಕಪಾಲಕರು ಹಿಂದೆ ನರ್ಮದಾ ತೀರವನ್ನಾಶ್ರಯಿಸಿ ತಪಸ್ಸನ್ನಾಚರಿಸಿದರೇಕೆಂಬುದನ್ನು ನನಗೆ ಹೇಳುವವನಾಗು.

೪. ಮಾರ್ಕಂಡೇಯನು ಹೇಳುತ್ತಾನೆ:—ಸಕಲ ಪ್ರಾಣಿಗಳಿಗೂ ಸಂಸಾರವು ದುರ್ಬಲವೂ, ತೃಣಾಗ್ರದ ಜಲಬಿಂದುವಿನಂತೆ ಅಸ್ಥಿರವೂ ಆದುದೆಂಬ ಕಾರಣ ದಿಂದ ಎಲ್ಲರೂ ಅಚಲವಾದ ಅಧಿಷ್ಠಾನವೊಂದನ್ನಪೇಕ್ಷಿಸುವರಷ್ಟೆ.

೫. ಸ್ಥಾವರಗಳೂ, ನಾಲ್ಕು ವಿಧಗಳಾದ ಜಂಗಮಪ್ರಾಣಿಗಳೂ ಕೂಡಿದ ಸಕಲ ಪ್ರಪಂಚವೂ ಬಾಳೆಯ ತಿರುಳಿನಂತೆ ನಿಸ್ಸಾರವೂ, ಬಿಸಿಲ್ಗುದುರೆಯಂತೆ ಚಂಚಲವೂ ಆಗಿರುವುದು.

೬. ಆದುದರಿಂದ ಚರಾಚರಗಳನ್ನೊಳಗೊಂಡ ಬ್ರಹ್ಮಾಂಡದಲ್ಲಿ ಧರ್ಮವೇ ತಾಯಿಯು, ಅದೇ ತಂದೆಯು; ಬಂಧುವು; ಸ್ನೇಹಿತನು; ಸಕಲ ಜೀವರಿಗೂ ಅದೇ ಆಧಾರವಾಗಿರುವುದು.

೭. ಇದನ್ನು ತಿಳಿದು ಲೋಕಪಾಲಕರೆಲ್ಲರೂ ಅವಕಾಶವನ್ನು ಕಲ್ಪಿಸಿ ಕೊಂಡು ವಾಯ್ವಾಹಾರಿಗಳಾಗಿ ಬಹಳ ಕಾಲದವರೆಗೂ ತಪಸ್ಸನ್ನಾಚರಿಸಿದರು.

೮. ಹೀಗೆ ಕೃತಯುಗದಲ್ಲಿ ಅರ್ಧಭಾಗವು ಕಳೆದುಹೋಗಲು ಪರಮೇಶ್ವರನು ಸಂತುಷ್ಟನಾಗಿ ಆ ಯುಗಕ್ಕೆ ಅನುಗುಣವಾಗಿ ಅವರಿಗೆ ದರ್ಶನವನ್ನಿತ್ತನು.

ವರೇಣ ಛಂದಯಾಮಾಸ ಲೋಕಪಾಲಾನ್ಮಹಾಬಲಾನ್ ।
ಯೋ ಯಮಿಚ್ಛತಿ ಕಾಮಂ ವೈ ತಂ ತಂ ತಸ್ಯ ದದಾಮ್ಯಹಂ ॥ ೯ ॥
ಏತಚ್ಛ್ರುತ್ವಾ ವಚಸ್ತಸ್ಯ ಲೋಕಪಾಲಾ ಜಗದ್ಧಿತಾಃ ।
ವರದಂ ಪ್ರಾರ್ಥಯಾಮಾಸುರ್ದೇವಂ ವರಮನುತ್ತಮಂ ॥ ೧೦ ॥

ಕುಬೇರ ಉವಾಚ :—

ಯದಿ ತುಷ್ಟೋ ಮಹಾದೇವ ಯದಿ ದೇಯೋ ವರೋ ಮಮ ।
ಯಕ್ಷಾಣಾಮೀಶ್ವರಶ್ಚಾಽಹಂ ಭವಾಮಿ ಧನದಸ್ತ್ವಿತಿ ॥ ೧೧ ॥
ತತಃ ಪ್ರೋವಾಚ ದೇವೇಶಂ ಯಮಃ ಸಂಯಮನೇ ರತಃ ।
ತತ್ರ ಪ್ರಧಾನೋ ಭಗವಾನ್ಭವೇಯಂ ಸರ್ವಜಂತುಷು ॥ ೧೨ ॥
ವರುಣೋಽನಂತರಂ ಪ್ರಾಹ ಪ್ರಣಮ್ಯ ತು ಮಹೇಶ್ವರಂ ।
ಕ್ರೀಡೇಯಂ ವಾರುಣೇ ಲೋಕೇ ಯಾದೋಗಣಸಮನ್ವಿತಃ ॥ ೧೩ ॥
ಜಗಾದಾಶು ತತೋ ವಾಯುಃ ಪ್ರಣಮ್ಯ ತು ಮಹೇಶ್ವರಂ ।
ವ್ಯಾಪಕತ್ವಂ ತ್ರಿಲೋಕೇಷು ಪ್ರಾರ್ಥಯಾಮಾಸ ಭಾರತ ॥ ೧೪ ॥
ತೇಷಾಂ ಯದೀಪ್ಸಿತಂ ಕಾಮಮುಮಯಾಸಹ ಶಂಕರಃ ।
ಸರ್ವೇಷಾಂ ಲೋಕಪಾಲಾನಾಂ ದತ್ವಾ ಚಾಽದರ್ಶನಂ ಗತಃ ॥ ೧೫ ॥

---

೯—೧೦. ಮಹಾಬಲಶಾಲಿಗಳಾದ ಅವರನ್ನು ವರಗಳಿಂದ ಪ್ರಲೋಭಗೊಳಿಸಿ "ಯಾವನು ಯಾವುದನ್ನು ಬಯಸಿದರೂ ಅದನ್ನು ಅವನಿಗೆ ಕೊಡುವೆನು" ಎಂದನು. ದೇವದೇವನ ಈ ಮಾತನ್ನು ಕೇಳಿ ಲೋಕಹಿತದಲ್ಲಿಯೇ ನಿರತರಾದ ಆ ದಿಕ್ಪಾಲಕರು ವರಪ್ರದನಾದ ಆತನಲ್ಲಿ ಉತ್ತಮ ವರವನ್ನು ಕೇಳಿಕೊಂಡರು.

೧೧. ಕುಬೇರನು ಹೇಳುತ್ತಾನೆ:—ಮಹಾದೇವನೆ! ನೀನು ಸಂತುಷ್ಟನಾಗಿ ರುವೆಯಾದರೆ ನನಗೆ ಈ ವರವನ್ನು ಕೊಡು: ನಾನು ಯಕ್ಷರಿಗೆಲ್ಲ ಅಧಿಪತಿಯಾಗಿ ಎಲ್ಲರಿಗೂ ಧನವನ್ನು ಕೊಡುವವನಾಗುವೆನು.

೧೨. ಬಳಿಕ ಜಿತೇಂದ್ರಿಯನಿಗ್ರಹನಾಗಿದ್ದ ಯಮನು, "ಭಗವಂತನೆ! ನಾನು ಸಕಲ ಪ್ರಾಣಿಗಳಲ್ಲಿಯೂ ಪ್ರಧಾನನಾಗಿರಬೇಕು" ಎಂದು ಬೇಡಿಕೊಂಡನು.

೧೩. ಬಳಿಕ ವರುಣನು ಮಹೇಶ್ವರನಿಗೆ ನಮಸ್ಕರಿಸಿ ಇಂತೆಂದನು. "ಯಾದೋಗಣಗಳೊಡಗೂಡಿದವನಾಗಿ ನಾನು ವಾರುಣಲೋಕದಲ್ಲಿ ಕ್ರೀಡಿಸುತ್ತಿರಬೇಕು."

೧೪. ಬಳಿಕ ವಾಯುವು ಸಂಭ್ರಮದಿಂದ ಮುಂದೆ ಬಂದು ಹೇಳತೊಡಗಿದನು. ಮೂರು ಲೋಕಗಳಲ್ಲಿಯೂ ತಾನು ವ್ಯಾಪಕನಾಗಿರಬೇಕೆಂದು ಬೇಡಿಕೊಂಡನು.

೧೫. ಉಮಾಸಮೇತನಾದ ಶಂಕರನು ಆ ದಿಕ್ಪಾಲಕರೆಲ್ಲರಿಗೂ ಅವರವರಿಗೆ ಅಭಿಲಷಿತಗಳಾದ ವರಗಳನ್ನಿತ್ತು ಅದೃಶ್ಯನಾದನು.

ಗತೇ ಮಹೇಶ್ವರೇ ದೇವೇ ಯಥಾಸ್ಥಾನಂ ತು ತೇ ಸ್ಥಿತಾಃ ।
ಸ್ಥಾಪನಾ ಚ ಕೃತಾ ಸರ್ವೈಃ ಸ್ವನಾಮ್ನೈವ ಪೃಥಕ್ ಪೃಥಕ್ ॥ ೧೬ ॥
ಕುಬೇರಶ್ಚ ಕುಬೇರೇಶಂ ಯಮಶ್ಚೈವ ಯಮೇಶ್ವರಂ ।
ವರುಣೋ ವರುಣೇಶಂ ತು ವಾತೋ ವಾತೇಶ್ವರಂ ನೃಪ ॥ ೧೭ ॥
ತರ್ಪಣಂ ವಿದಧುಃ ಸರ್ವೇ ಮಂತ್ರೈಶ್ಚ ವಿವಿಧೈಃ ಶುಭೈಃ ।
ಸರ್ವೇ ಸರ್ವೇಶ್ವರಂ ದೇವಂ ಪೂಜಯಿತ್ವಾ ಯಥಾವಿಧಿ ॥ ೧೮ ॥
ಆಹ್ವಯಾಮಾಸುಸ್ತಾನ್ವಿಪ್ರಾನ್ ಸರ್ವೇ ಸರ್ವೇಶ್ವರಾ ಇವ ।
ಕ್ಷಾಂತದಾಂತಜಿತಕ್ರೋಧಾನ್ ಸರ್ವಭೂತಾಽಭಯಪ್ರದಾನ್ ॥ ೧೯ ॥
ವೇದವಿದ್ಯಾವ್ರತಸ್ನಾತಾನ್ ಸರ್ವಶಾಸ್ತ್ರವಿಶಾರದಾನ್ ।
ಋಗ್ಯಜುಃಸಾಮಸಂಯುಕ್ತಾಂಸ್ತಥಾಽಥರ್ವವಿಭೂಷಿತಾನ್ ॥ ೨೦ ॥
ಚಾತುರ್ವಿಧ್ಯಂ ತು ಸರ್ವೇಷಾಂ ದಾನಂ ದಾಸ್ಯಾಮಗೃಹ್ಣತ ।
ಏವಮುಕ್ತ್ವಾ ತು ಸರ್ವೇಷಾಂ ವಿಪ್ರಾಣಾಂ ದಾನಮುತ್ತಮಂ ॥ ೨೧ ॥
ತತ್ರ ಸ್ಥಾನೇ ದದುಸ್ತೇಷಾಂ ಭೂಮಿದಾನಮನುತ್ತಮಂ ।
ಯಾವಚ್ಚಂದ್ರಶ್ಚ ಸೂರ್ಯಶ್ಚ ಯಾವತ್ತಿಷ್ಠತಿ ಮೇದಿನೀ ।
ತಾವದ್ದಾನಂ ತು ಯುಷ್ಮಾಕಂ ಪರಪಂಥೀ ನ ಕಶ್ಚನ ॥ ೨೨ ॥

---

೧೬. ಮಹೇಶ್ವರನು ಹೊರಟುಹೋಗಲು ಇವರೆಲ್ಲರೂ ತಮ್ಮತಮ್ಮ ಸ್ಥಾನಗಳಲ್ಲಿ ನಿಂತರು. ಮತ್ತು ತಮ್ಮ ಹೆಸರುಗಳಿಂದ ಬೇರೆ ಬೇರೆಯಾಗಿ ಶಿವಲಿಂಗಗಳನ್ನು ಸ್ಥಾಪಿಸಿದರು.

೧೭. ಕುಬೇರನು ಕುಬೇರೇಶ್ವರನನ್ನೂ, ಯಮನು ಯಮೇಶ್ವರನನ್ನೂ, ವರುಣನು ವರುಣೇಶನನ್ನೂ, ವಾಯುವು ವಾತೇಶ್ವರನನ್ನೂ ಪ್ರತಿಷ್ಠಿಸಿದರು.

೧೮. ಎಲ್ಲರೂ ಸರ್ವೇಶ್ವರನಾದ ಮಹಾದೇವನನ್ನು ಯಥಾವಿಧಿಯಾಗಿ ಪೂಜಿಸಿ ಬಹುವಿಧಗಳಾದ ಶುಭಮಂತ್ರಗಳಿಂದ ತರ್ಪಣಗಳನ್ನು ನೆರವೇರಿಸಿದರು.

೧೯. ಸರ್ವೇಶ್ವರರನ್ನು ಹೋಲುವ ಅವರೆಲ್ಲರೂ ಕ್ಷಮೆ, ಇಂದ್ರಿಯನಿಗ್ರಹ, ಕ್ರೋಧಜಯಗಳುಳ್ಳವರಾಗಿ ಸಕಲ ಭೂತಗಳಿಗೂ ಅಭಯಪ್ರದರೆನಿಸಿದ್ದ ಬ್ರಾಹ್ಮಣೋತ್ತಮರನ್ನು ಅಲ್ಲಿಗೆ ಕರೆದರು.

೨೦. ಅವರೆಲ್ಲರೂ ವೇದವಿದ್ಯೆಯನ್ನು ಕಲಿತು ಸ್ನಾತಕರಾಗಿದ್ದರು. ಸಕಲ ಶಾಸ್ತ್ರಗಳಲ್ಲಿಯೂ ವಿಶಾರದರು. ಋಗ್ಯಜುಸ್ಸಾಮಾಥರ್ವವೇದಗಳೆಂಬ ಭೂಷಣಗಳನ್ನು ತಳೆದಿದ್ದರು.

೨೧–೨೨. "ನಿಮಗೆಲ್ಲರಿಗೂ ನಾಲ್ಕು ವಿಧಗಳಾದ ದಾನಗಳನ್ನು ಕೊಡುವೆವು, ಸ್ವೀಕರಿಸಿರಿ" ಎಂದು ನುಡಿದು ದಿಕ್ಪಾಲಕರು ಎಲ್ಲ ಬ್ರಾಹ್ಮಣರಿಗೂ ಉತ್ತಮದಾನಗಳನ್ನಿತ್ತರು. ಆ ತೀರ್ಥದಲ್ಲಿ ಅವರಿಗೆ ಸರ್ವಶ್ರೇಷ್ಠವೆನಿಸಿದ

ರಾಜಾ ವಾ ರಾಜತುಲ್ಯೋ ವಾ ಲೋಕಪಾಲೈರನುತ್ತಮಂ ।
ದತ್ತಂ ಲೋಪಯತೇ ಮೂಢಃ ಶ್ರೂಯತಾಂ ತಸ್ಯ ಯೋ ವಿಧಿಃ ॥ ೨೩ ॥
ಶೋಷಯೇದ್ಧನದೋ ವಿತ್ತಂ ತಸ್ಯ ಪಾಪಸ್ಯ ಭಾರತ ।
ಶರೀರಂ ವರುಣೋ ದೇವಃ ಸಂತತಿಂ ಶ್ವಸನಸ್ತಥಾ ॥ ೨೪ ॥
ಆಯುರ್ನಯತಿ ತಸ್ಯಾಶು ಯಮಃ ಸಂಯಮನೋ ಮಹಾನ್ ।
ನಿಃಶೇಷಂ ಭಸ್ಮಸಾತ್ಕೃತ್ವಾ ಹುತಭುಗ್ಯಾತಿ ಭಾರತ ॥ ೨೫ ॥
ತಸ್ಮಾತ್ಸರ್ವಪ್ರಯತ್ನೇನ ಬ್ರಾಹ್ಮಣೇಭ್ಯೋ ಯುಧಿಷ್ಠಿರ ।
ಭಕ್ತಿಃ ಕಾರ್ಯಾ ನೃಪೈಃ ಸರ್ವೈರಿಚ್ಛದ್ಭಿಃ ಶ್ರೇಯ ಆತ್ಮನಃ ॥ ೨೬ ॥
ರಾಜಾ ವೃಕ್ಷೋ ಬ್ರಾಹ್ಮಣಾಸ್ತಸ್ಯ ಮೂಲಂ
ಭೃತ್ಯಾಃ ಪರ್ಣಾ ಮಂತ್ರಿಣಸ್ತಸ್ಯ ಶಾಖಾಃ ।
ತಸ್ಮಾನ್ಮೂಲಂ ಯತ್ನತೋ ರಕ್ಷಣೀಯಂ
ಮೂಲೇ ಗುಪ್ತೇ ನಾಸ್ತಿ ವೃಕ್ಷಸ್ಯ ನಾಶಃ ॥ ೨೭ ॥

---

ಭೂಮಿದಾನವನ್ನು ಮಾಡಿ, ಇಂತೆಂದರು. ಚಂದ್ರಸೂರ್ಯರು ಇರುವವರೆಗೂ, ಭೂಮಿಯಿರುವವರೆಗೂ ನಿಮಗೆ ಕೊಟ್ಟಿರುವ ಈ ದಾನಕ್ಕೆ ಯಾವನೂ ಅತಂಕ ಪಡಿಸಲಾರನು.

೨೩. ಯಾವ ರಾಜನೇ ಆಗಲಿ, ರಾಜಸಮಾನನೇ ಆಗಲಿ, ಲೋಕಪಾಲಕರು ಮಾಡಿದ ಈ ದಾನವನ್ನು ಮೂಢನಾಗಿ ವ್ಯರ್ಥಗೊಳಿಸುವನೊ, ಅವನಿಗಾಗುವ ಗತಿಯನ್ನು ಕೇಳಿ.

೨೪. ಆ ಪಾಪಿಯ ಐಶ್ವರ್ಯವನ್ನು ಕುಬೇರನು ನಿಶ್ಶೇಷಗೊಳಿಸುವನು. ವರುಣದೇವನು ದೇಹವನ್ನು ಶೋಷಿಸುವನು. ವಾಯುವು ಸಂತಾನವನ್ನು ಕಿತ್ತುಕೊಳ್ಳುವನು.

೨೫. ಮಹಾತ್ಮನೂ, ನಿಯಾಮಕನೂ ಆದ ಯಮನು ಅವನ ಆಯುಷ್ಯವನ್ನಪಹರಿಸುವನು. ಅಗ್ನಿಯು ನಿಶ್ಶೇಷವಾಗಿ ದೇಹವನ್ನು ಸುಟ್ಟುಹಾಕುವನು.

೨೬. ಯುಧಿಷ್ಠಿರನೆ! ಆದುದರಿಂದ ತಮ್ಮ ಶ್ರೇಯಸ್ಸನ್ನಪೇಕ್ಷಿಸುವ ರಾಜರು ಎಲ್ಲರೂ ಸರ್ವಪ್ರಕಾರದಿಂದಲೂ ಬ್ರಾಹ್ಮಣರಲ್ಲಿ ಭಕ್ತಿಯನ್ನು ಮಾಡಬೇಕು.

೨೭. ರಾಜನೇ ಒಂದು ವೃಕ್ಷವು. ಬ್ರಾಹ್ಮಣ ವೃಂದವೇ ಅದರ ಬೇರು. ಸೇವಕರೇ ಎಲೆಗಳು. ಮಂತ್ರಿಗಳೇ ಕೊಂಬೆಗಳು. ಆದುದರಿಂದ ಮೂಲವನ್ನು ಜಾಗರೂಕತೆಯಿಂದ ಕಾಪಾಡಬೇಕು. ಮೂಲವು ಸುರಕ್ಷಿತವಾಗಿರಲು ಆ ವೃಕ್ಷಕ್ಕೆ ನಾಶವಿಲ್ಲ.

ಷಷ್ಟಿವರ್ಷಸಹಸ್ರಾಣಿ ಸ್ವರ್ಗೇ ತಿಷ್ಠತಿ ಭೂಮಿದಃ ।
ಆಚ್ಛೇತ್ತಾ ಚಾನುಮಂತಾ ಚ ತಾನ್ಯೇವ ನರಕೇ ವಸೇತ್ ॥ ೨೮ ॥
ಸ್ವದತ್ತಾ ಪರದತ್ತಾ ವಾ ಪಾಲನೀಯಾ ವಸುಂಧರಾ ।
ಯಸ್ಯ ಯಸ್ಯ ಯದಾ ಭೂಮಿಸ್ತಸ್ಯ ತಸ್ಯ ತದಾ ಫಲಂ ॥ ೨೯ ॥
ದೇವತಾಜ್ಞಾಮನುಸ್ಮೃತ್ಯ ರಾಜಾನೋ ಯೇಽಪಿ ತಾಂ ನೃಪ ।
ಪಾಲಯಿಷ್ಯಂತಿ ಸತತಂ ತೇಷಾಂ ವಾಸಸ್ತ್ರಿವಿಷ್ಟಪೇ ॥ ೩೦ ॥
ಸ್ವದತ್ತಾ ಪರದತ್ತಾ ವಾ ಯತ್ನಾದ್ರಕ್ಷ್ಯಾ ಯುಧಿಷ್ಠಿರ ।
ಮಹೀ ಮಹೀಕ್ಷಿತಾ ನಿತ್ಯಂ ದಾನಾಚ್ಛ್ರೇಯೋಽನುಪಾಲನಂ ॥ ೩೧ ॥
ಆಯುರ್ಯಶೋ ಬಲಂ ವಿತ್ತಂ ಸಂತತಿಶ್ಚಾಽಕ್ಷಯಾ ನೃಪ ।
ತೇಷಾಂ ಭವಿಷ್ಯತೇ ನೂನಂ ಯೇ ಪ್ರಜಾಪಾಲನೇ ರತಾಃ ॥ ೩೨ ॥
ಏವಮುಕ್ತ್ವಾ ತು ತಾನ್ ಸರ್ವಾಂಲ್ಲೋಕಪಾಲಾನ್ದ್ವಿಜೋತ್ತಮಾನ್ ।
ಪೂಜಯಿತ್ವಾ ವಿಧಾನೇನ ಪ್ರಣಿಪತ್ಯ ವ್ಯಸರ್ಜಯನ್ ॥ ೩೩ ॥

---

೨೮. ಭೂಮಿಯ ದಾನವನ್ನು ಮಾಡಿದವನು ಅರುವತ್ತುಸಾವಿರ ವರ್ಷಗಳ ವರೆಗೂ ಸ್ವರ್ಗದಲ್ಲಿ ವಾಸಮಾಡುವನು. ಅದನ್ನು ಕೊನೆಗಾಣಿಸಿದವನೂ, ಕಡೆಗಾಣುವವನೂ ಅಷ್ಟೇ ಕಾಲದವರೆಗೂ ನರಕದಲ್ಲಿ ಬಿದ್ದಿರುವರು.

೨೯. ತಾನು ಕೊಟ್ಟ ಭೂಮಿಯನ್ನೂ, ಪರರು ಕೊಟ್ಟದ್ದನ್ನೂ ರಾಜನಾದವನು ಪಾಲಿಸಬೇಕು. ಭೂಮಿಯು ಯಾವ ಕಾಲದಲ್ಲಿ ಯಾರು ಯಾರಿಗೆ ಸೇರಿರುವುದೊ, ಆಗ ಅವರವರಿಗೆ ದಾನಪಾಲನದ ಫಲವು ಲಭಿಸುವುದು.

೩೦. ಮಹಾರಾಜನೆ! ದೇವತೆಗಳ ಅಪ್ಪಣೆಯನ್ನನುಸರಿಸಿ ಯಾವ ರಾಜರು ನಿತ್ಯವೂ ದಾನಗಳನ್ನು ಪರಿಪಾಲಿಸುತ್ತಿರುವರೊ ಅವರು ಸ್ವರ್ಗಲೋಕದಲ್ಲಿ ವಾಸ ಮಾಡುವರು.

೩೧. ಯುಧಿಷ್ಠಿರನೆ! ಸ್ವದತ್ತವಾದರೂ, ಭೂಪಾಲಕನೂ ಯತ್ನದಿಂದ ಭೂಮಿಯನ್ನು ರಕ್ಷಿಸಿಕೊಂಡು ಬರಬೇಕು. ತಾನು ಮಾಡಿನ ದಾನಕ್ಕಿಂತಲೂ ಇತರರ ದಾನವನ್ನು ನಡೆಸುವುದು ಶ್ರೇಯಸ್ಕರವು.

೩೨. ಯಾರು ಪ್ರಜೆಗಳನ್ನು ಪಾಲಿಸುವುದರಲ್ಲಿಯೇ ನಿರತರಾಗಿರುವರೊ, ಅವರ ಆಯುಷ್ಯವೂ, ಕೀರ್ತಿಯೂ, ಬಲವೂ, ಧನವೂ, ಸಂತತಿಯೂ ಅಕ್ಷಯವಾಗಿರುವುವು.

೩೩–೩೪. ಇಂತೆಂದು ಲೋಕಪಾಲಕರೆಲ್ಲರೂ ಆ ಬ್ರಾಹ್ಮಣೋತ್ತಮರಿಗೆ ತಿಳಿಸಿ ಯಥಾವಿಧಿಯಾಗಿ ಅವರನ್ನು ಪೂಜಿಸಿ ಪೊಡಮಟ್ಟು ಬೀಳುಕೊಟ್ಟರು. ಬ್ರಾಹ್ಮಣಮುಖ್ಯರು ಹೊರಟುಹೋದ ಮೇಲೆ ಲೋಕಪಾಲಕರೆಲ್ಲರೂ ಸ್ನಾನ

ಗತೇಷು ವಿಪ್ರಮುಖ್ಯೇಷು ಸ್ನಾತ್ವಾ ಹುತಹುತಾಶನಾಃ ।
ಲೋಕಪಾಲಾಃ ಕ್ಷುಧಾವಿಷ್ಟಾಃ ಪರ್ಯಟನ್ಭೈಕ್ಷಮಾತ್ಮನಃ ॥ ೩೪ ॥
ಅಸ್ಥಿಚರ್ಮಾಽವಶೇಷಾಂಗಾಃ ಕಪಾಲೋದ್ಧೃತಪಾಣಯಃ ।
ಅಲಬ್ಧಗ್ರಾಸಮರ್ಧಾರ್ಧಂ ನಿರ್ಯಯುರ್ನಗರಾದ್ಬಹಿಃ ॥ ೩೫ ॥
ಶಾಪಂ ದತ್ವಾ ತದಾ ಕ್ರೋಧಾದ್ಬ್ರಾಹ್ಮಣಾಯ ಯುಧಿಷ್ಠಿರ ।
ದರಿದ್ರಾಃ ಸತತಂ ಮೂರ್ಖಾ ಭವೇಯುಶ್ಚ ಯಯುರ್ಗೃಹಾನ್ ॥ ೩೬ ॥
ತದಾ ಪ್ರಭೃತಿ ತೇ ಸರ್ವೇ ಬ್ರಾಹ್ಮಣಾ ಧನವರ್ಜಿತಾಃ ।
ಶಾಪದೋಷೇಣ ಕೌಬೇರ್ಯಾಂ ಸಂಜಾತಾ ದುಃಖಭಾಜನಾಃ ॥ ೩೭ ॥
ನ ಧನಂ ಪೈತೃಕಂ ಪುತ್ರೈರ್ನಪಿತಾಪುತ್ರಪೌತ್ರಿಕಂ ।
ಭುಂಜತೇ ಸಕಲಂ ಕಾಲಮಿತ್ಯೇವಂ ಶಂಕರೋಽಬ್ರವೀತ್ ॥ ೩೮ ॥
ಕುಬೇರೇಶೇ ನರಃ ಸ್ನಾತ್ವಾ ಯಸ್ತು ಪೂಜಯತೇ ಶಿವಂ ।
ಗಂಧಧೂಪನಮಸ್ಕಾರೈಃ ಸೋಽಶ್ವಮೇಧಫಲಂ ಲಭೇತ್ ॥ ೩೯ ॥
ಯಮತೀರ್ಥೇ ತು ಯಃ ಸ್ನಾತ್ವಾ ಸಂಪಶ್ಯತಿ ಯಮೇಶ್ವರಂ ।
ಸರ್ವಪಾಪೈಃ ಪ್ರಮುಚ್ಯೇತ ಸಪ್ತಜನ್ಮಾಂತರಾರ್ಜಿತೈಃ ॥ ೪೦ ॥

---

ಗಳನ್ನು ಮಾಡಿ ಔಪಾಸನಗಳನ್ನು ಮುಗಿಸಿಕೊಂಡು ಹಸಿವುಗೊಂಡು ಭಿಕ್ಷೆಯನ್ನು ಹುಡುಕಿಕೊಂಡು ಹೊರಟರು.

೩೫. ದೇಹಗಳೆಲ್ಲ ಮೂಳೆ ಚರ್ಮಗಳಾಗಿರಲು, ತಲೆಯ ಮೇಲೆ ಕೈಗಳನ್ನಿಟ್ಟುಕೊಂಡು ತಿರುಗಿ ತಿರುಗಿ ಒಂದು ತುತ್ತಿನ ನಾಲ್ಕನೆಯ ಭಾಗವೂ ಸಿಕ್ಕದಿರಲು ಪಟ್ಟಣದಿಂದ ಹೊರಬಿದ್ದರು.

೩೬. ಅವರು ಕೋಪದಿಂದ ಅಲ್ಲಿದ್ದ ಬ್ರಾಹ್ಮಣರಿಗೆ, "ನೀವು ಯಾವ ಕಾಲಕ್ಕೂ ದರಿದ್ರರೂ ಮೂರ್ಖರೂ ಆಗಿರುವಿರಿ" ಎಂದು ಶಾಪವನ್ನಿತ್ತು ತಮ್ಮ ಲೋಕಗಳಿಗೆ ಹೊರಟುಹೋದರು.

೩೭–೩೮. ಆ ಶಾಪದ ಫಲವಾಗಿ ಆ ತೀರ್ಥದ ಬ್ರಾಹ್ಮಣರು ಅಂದಿನಿಂದ ಧನಹೀನರೂ, ಅನೇಕ ದುಃಖಗಳಿಗೆ ಈಡಾದವರೂ ಆದರು. ಅಲ್ಲಿ ತಂದೆಯ ಧನವನ್ನು ಮಗನೂ, ಮಗನ ಮೊಮ್ಮಗನ ಧನವನ್ನು ತಂದೆತಾಯಂದಿರೂ ಎಂದಿಗೂ ಅನುಭವಿಸುವುದಿಲ್ಲವೆಂದು ಮಹಾದೇವನೇ ಹೇಳಿರುವನು.

೩೯. ಕುಬೇರೇಶ್ವರ ತೀರ್ಥದಲ್ಲಿ ನರನು ಸ್ನಾನವನ್ನು ಮಾಡಿ ಗಂಧ, ಧೂಪ, ನಮಸ್ಕಾರಗಳಿಂದ ಶಿವಪೂಜೆಯನ್ನು ಮಾಡಲು, ಅವನು ಅಶ್ವಮೇಧ ಯಜ್ಞದ ಫಲವನ್ನು ಪಡೆಯುವನು.

೪೦. ಯಮತೀರ್ಥದಲ್ಲಿ ಸ್ನಾನವನ್ನು ಮಾಡಿ ಯಮೇಶ್ವರನ ದರ್ಶನವನ್ನು ತೆಗೆದುಕೊಂಡವನು ಹಿಂದಿನ ಏಳು ಜನ್ಮಗಳಲ್ಲಿ ಸಂಪಾದಿಸಿದ ಸಮಸ್ತ ಪಾಪಗಳನ್ನೂ ಕಳೆದುಕೊಳ್ಳುವನು.

**ಪೂರ್ಣಮಾಸ್ಯಾಮಮಾವಾಸ್ಯಾಂ ಸ್ನಾತ್ವಾ ತು ಪಿತೃತರ್ಪಣಂ ।**
**ಯಃ ಕರೋತಿ ತಿಲೈಃ ಸ್ನಾನಂ ತಸ್ಯ ಪುಣ್ಯಫಲಂ ಶೃಣು ॥ ೪೧ ॥**
**ಸುತೃಪ್ತಾಸ್ತೇನ ಭೋ ಯೇಸ ಪಿತರಶ್ಚ ಪಿತಾಮಹಾಃ ।**
**ಸ್ವರ್ಗಸ್ಥಾ ದ್ವಾದಶಾಬ್ದಾನಿ ಕ್ರೀಡಂತಿ ಪ್ರಪಿತಾಮಹಾಃ ॥ ೪೨ ॥**
**ವರುಣೇಶೇ ನರಃ ಸ್ನಾತ್ವಾ ಹ್ಯರ್ಚಯಿತ್ವಾ ಮಹೇಶ್ವರಂ ।**
**ವಾಜಪೇಯಸ್ಯ ಯಜ್ಞಸ್ಯ ಫಲಂ ಪ್ರಾಪ್ನೋತಿ ಪುಷ್ಕಲಂ ॥ ೪೩ ॥**
**ಮೃತಾಂ ಕಾಲೇನ ಮಹತಾ ಲೋಕೇ ಯತ್ರ ಜಲೇಶ್ವರಃ ।**
**ಸ ಗಚ್ಛೇತ್ತತ್ರ ಯಾನೇನ ಗೀಯಮಾನೋಽಪ್ಸರೋಗಣೈಃ ॥ ೪೪ ॥**
**ವಾತೇಶ್ವರೇ ನರಃ ಸ್ನಾತ್ವಾ ಸಂಪೂಜ್ಯ ಚ ಮಹೇಶ್ವರಂ ।**
**ಜಾಯತೇ ಕೃತಕೃತ್ಯೋಽಸೌ ಲೋಕಪಾಲಾನವೇಕ್ಷಯನ್ ॥ ೪೫ ॥**
**ಕಿಂ ತಸ್ಯ ಬಹುಭಿರ್ಯಜ್ಞೈರ್ದಾನೈರ್ವಾ ಬಹುದಕ್ಷಿಣೈಃ ।**
**ಸ್ನಾತ್ವಾ ಚತುಷ್ಟಯೇ ಲೋಕೇ ಅವಾಪ್ತಂ ಜನ್ಮನಃ ಫಲಂ ॥ ೪೬ ॥**

---

೪೧. ಹುಣ್ಣಿಮೆ ಅಮಾವಾಸ್ಯೆಗಳಲ್ಲಿ ಯಾವನು ಸ್ನಾತನಾಗಿ ಅಲ್ಲಿ ಪಿತೃದೇವತೆಗಳಿಗೆ ತಿಲತರ್ಪಣಗಳನ್ನೀಯುವನೊ, ಅವನಿಗೆ ಲಭಿಸುವ ಪುಣ್ಯವನ್ನು ಕೇಳು.

೪೨. ಆ ತಿಲೋದಕದಿಂದ ಪಿತೃಗಳೂ, ಪಿತಾಮಹರೂ ಪರಮಸಂತೋಷವನ್ನು ಹೊಂದುವರು. ಪ್ರಪಿತಾಮಹರು ಹನ್ನೆರಡು ವರ್ಷಗಳವರೆಗೂ ಸ್ವರ್ಗಲೋಕದಲ್ಲಿ ವಿಹರಿಸುತ್ತಿರುವರು.

೪೩. ವರುಣೇಶ್ವರತೀರ್ಥದಲ್ಲಿ ಸ್ನಾನವನ್ನು ಮಾಡಿ ನರನು ಮಹೇಶ್ವರನನ್ನು ಪೂಜಿಸಲು ವಾಜಪೇಯವೆಂಬ ಮಹಾಯಜ್ಞದ ಅಪಾರವಾದ ಫಲಕ್ಕೆ ಭಾಗಿಯಾಗುನನು.

೪೪. ಬಹಳ ಕಾಲದಮೇಲೆ ಮೃತನಾಗಲು, ಅಪ್ಸರೆಯರ ಸಮೂಹಗಳು ತನ್ನನ್ನು ಸ್ತೋತ್ರಮಾಡುತ್ತಿರಲು, ವಿಮಾನದಲ್ಲಿ ಕುಳಿತು ಜಲಾಧಿಪತಿಯಾದ ವರುಣನಿರುವ ಲೋಕಕ್ಕೆ ಹೋಗುವನು.

೪೫. ವಾತೇಶ್ವರತೀರ್ಥದಲ್ಲಿ ಮಿಂದು ಮಹೇಶ್ವರನ ಪೂಜೆಯನ್ನು ಮಾಡಿದವನು ಲೋಕಪಾಲಕರನ್ನು ನೋಡಿದವನಾಗಿ ಕೃತಕೃತ್ಯನೆನಿಸಿ ಬಾಳುವನು.

೪೬. ಮನುಷ್ಯನಿಗೆ ಅನೇಕ ಯಜ್ಞಗಳಿಂದಲೂ ಬಹಳ ದಕ್ಷಿಣೆಗಳೊಡಗೂಡಿದ ದಾನಗಳಿಂದಲೂ ಲಭಿಸುವುದೇನು? ಈ ನಾಲ್ಕು ತೀರ್ಥಗಳಲ್ಲಿ ಸ್ನಾನಗಳನ್ನು ಮಾಡಲು ಪ್ರಪಂಚದಲ್ಲಿ ಜನ್ಮಸಾರ್ಥಕ್ಯವನ್ನು ಪಡೆಯುವನು.

ತೇ ಧನ್ಯಾಸ್ತೇ ಮಹಾತ್ಮಾನಸ್ತೇಷಾಂ ಜನ್ಮ ಸುಜೀವಿತಂ ।
ನಿತ್ಯಂ ವಸಂತಿ ಕೌಬೇರ್ಯ್ಯಾಂ ಲೋಕಪಾಲಾನ್ನಿಮಂತ್ರ್ಯ ಯೇ ॥ ೪೭ ॥
ಏತತ್ಪುಣ್ಯಂ ಪಾಪಹರಂ ಧನ್ಯಮಾಯುರ್ವಿವರ್ಧನಂ ।
ಪಠತಾಂ ಶೃಣ್ವತಾಂ ಚೈವ ಸರ್ವಪಾಪಕ್ಷಯೋ ಭವೇತ್ ॥ ೪೮ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ
ಪಂಚಮೇ ಆವಂತ್ಯಖಂಡೇ ತೃತೀಯೇ ರೇವಾಖಂಡೇ
"ಕುಬೇರಾದಿತೀರ್ಥಚತುಷ್ಟಯಮಾಹಾತ್ಮ್ಯವರ್ಣನಂ"
ನಾಮ ತ್ರಯಸ್ತ್ರಿಂಶದಧಿಕಶತತಮೋಽಧ್ಯಾಯಃ

---

೪೭. ನಿತ್ಯವೂ ಲೋಕಪಾಲಕರನ್ನು ಆಹ್ವಾನಿಸಿ ಸೇವಿಸುತ್ತ ಕುಬೇರ ತೀರ್ಥದಲ್ಲಿ ವಾಸಮಾಡುವವರೇ ಧನ್ಯರು. ಅವರೇ ಮಹಾತ್ಮರು. ಅವರ ಜನ್ಮವೇ ಸಾರ್ಥಕವು.

೪೮. ಪುಣ್ಯಪ್ರದವೂ, ಪಾಪಪರಿಹಾರಕವೂ, ಐಶ್ವರ್ಯಾಯುಷ್ಯವರ್ಧಕವೂ ಆದ ಈ ಆಖ್ಯಾನವನ್ನು ಹೇಳುವವರಿಗೂ ಕೇಳುವವರಿಗೂ ಪಾಪಗಳು ನಾಶವಾಗುವುವು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ
ಶ್ರೀ ಸ್ಕಾಂದಮಹಾಪುರಾಣದ ಐದನೆಯ ಅವಂತ್ಯಖಂಡದ ಮೂರನೆಯ ರೇವಾಖಂಡದಲ್ಲಿ
"ಕುಬೇರಾದಿತೀರ್ಥಚತುಷ್ಟಯಮಾಹಾತ್ಮ್ಯವರ್ಣನ"ವೆಂಬ
ನೂರಮೂವತ್ತಮೂರನೆಯ ಅಧ್ಯಾಯವು ಮುಗಿದುದು



॥ ಶ್ರೀಃ ॥

## ಅಥ ಚತುಸ್ತ್ರಿಂಶದಧಿಕಶತತಮೋಽಧ್ಯಾಯಃ

### ರಾಮೇಶ್ವರತೀರ್ಥಮಾಹಾತ್ಮ್ಯವರ್ಣನಂ

ಶ್ರೀ ಮಾರ್ಕಂಡೇಯ ಉವಾಚ :—

ನರ್ಮದಾದಕ್ಷಿಣೇ ಕೂಲೇ ರಾಮೇಶ್ವರಮನುತ್ತಮಂ ।
ತೀರ್ಥಂ ಪಾಪಹರಂ ಪುಣ್ಯಂ ಸರ್ವದುಃಖಘ್ನಮುತ್ತಮಂ ॥ ೧ ॥
ತತ್ರ ತೀರ್ಥೇ ತು ಯೇ ಸ್ನಾತ್ವಾ ಪೂಜಯಂತಿ ಮಹೇಶ್ವರಂ ।
ಮಹಾದೇವಂ ಮಹಾತ್ಮಾನಂ ಮುಚ್ಯಂತೇ ಸರ್ವಕಿಲ್ಬಿಷೈಃ ॥ ೨ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ
ಪಂಚಮೇ ಆವಂತ್ಯಖಂಡೇ ತೃತೀಯೇ ರೇವಾಖಂಡೇ
"ರಾಮೇಶ್ವರತೀರ್ಥಮಾಹಾತ್ಮ್ಯವರ್ಣನಂ"ನಾಮ
ಚತುಸ್ತ್ರಿಂಶದಧಿಕಶತತಮೋಽಧ್ಯಾಯಃ

---

## ಕನ್ನಡದ ಅನುವಾದ

### ರಾಮೇಶ್ವರತೀರ್ಥಮಾಹಾತ್ಮ್ಯವರ್ಣನ

೧. ಮಾರ್ಕಂಡೇಯನು ಹೇಳುತ್ತಾನೆ:—ನರ್ಮದೆಯ ದಕ್ಷಿಣತೀರದಲ್ಲಿ ಪಾಪಹರವೂ, ಪುಣ್ಯಪ್ರದವೂ, ಸಕಲ ದುಃಖಗಳನ್ನು ದೂರಮಾಡುವುದೂ ಆದ ರಾಮೇಶ್ವರವೆಂಬ ಉತ್ತಮವಾದ ತೀರ್ಥವೊಂದಿರುವುದು.

೨. ಆ ತೀರ್ಥದಲ್ಲಿ ಸ್ನಾನವನ್ನು ಮಾಡಿ ಯಾರು ಮಹಾದೇವನೂ, ಮಹಾತ್ಮನೂ ಆದ ಪರಮೇಶ್ವರನನ್ನು ಪೂಜಿಸುವರೊ ಅವರು ಸಕಲ ಕಿಲ್ಬಿಷಗಳಿಂದಲೂ ಮುಕ್ತರಾಗುವರು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ
ಶ್ರೀ ಸ್ಕಾಂದಮಹಾಪುರಾಣದ ಐದನೆಯ ಆವಂತ್ಯಖಂಡದ ಮೂರನೆಯ ರೇವಾಖಂಡದಲ್ಲಿ
"ರಾಮೇಶ್ವರತೀರ್ಥಮಾಹಾತ್ಮ್ಯವರ್ಣನ"ವೆಂಬ
ನೂರಮೂವತ್ತನಾಲ್ಕನೆಯ ಅಧ್ಯಾಯವು ಮುಗಿದುದು



॥ ಶ್ರೀಃ ॥

## ಅಥ ಪಂಚತ್ರಿಂಶದಧಿಕಶತತಮೋಽಧ್ಯಾಯಃ

### ಸಿದ್ಧೇಶ್ವರತೀರ್ಥಮಾಹಾತ್ಮ್ಯವರ್ಣನಂ

**ಶ್ರೀಮಾರ್ಕಂಡೇಯ ಉವಾಚ:—**

**ತಸ್ಯೈವಾಽನಂತರಂ ಚಾಽನ್ಯತ್ಸಿದ್ಧೇಶ್ವರಮನುತ್ತಮಂ ।**
**ತೀರ್ಥಂ ಸರ್ವಗುಣೋಪೇತಂ ಸರ್ವಲೋಕೇಷು ಪೂಜಿತಂ ॥ ೧ ॥**
**ತತ್ರ ತೀರ್ಥೇ ತು ಯಃ ಸ್ನಾತ್ವಾ ಹ್ಯುಮಾರುದ್ರಂ ಪ್ರಪೂಜಯೇತ್ ।**
**ವಾಜಪೇಯಸ್ಯ ಯಜ್ಞಸ್ಯ ಸಲಭೇತ್ಫಲಮುತ್ತಮಂ ॥ ೨ ॥**
**ತೇನ ಪುಣ್ಯೇನ ಮಹತಾ ಮೃತಃ ಸ್ವರ್ಗಮವಾಪ್ನುಯಾತ್ ।**
**ಅಪ್ಸರೋಗಣಸಂವೀತೋ ಜಯಶಬ್ದಾದಿಮಂಗಲೈಃ ॥ ೩ ॥**
**ಸಹಸ್ರವತ್ಸರಾಂಸ್ತತ್ರ ಕ್ರೀಡಯಿತ್ವಾ ಯಥಾಸುಖಂ ।**
**ಧನಧಾನ್ಯಸಮೋಪೇತೇ ಕುಲೇ ಮಹತಿ ಜಾಯತೇ ॥ ೪ ॥**

---

### ಕನ್ನಡದ ಅನುವಾದ

#### ಸಿದ್ಧೇಶ್ವರತೀರ್ಥಮಾಹಾತ್ಮ್ಯವರ್ಣನ

೧. ಮಾರ್ಕಂಡೇಯನು ಹೇಳುತ್ತಾನೆ:—ಅದಾದ ಅನಂತರದಲ್ಲಿ ಸಿದ್ಧೇಶ್ವರ ವೆಂಬ ತೀರ್ಥವಿರುವುದು. ಸರ್ವಗುಣೋಪಪನ್ನವಾದ ಈ ತೀರ್ಥವನ್ನು ಮೂರು ಲೋಕಗಳಲ್ಲಿಯೂ ಹೊಗಳುತ್ತಿರುವರು.

೨. ಆ ತೀರ್ಥದಲ್ಲಿ ಯಾವ ಮಾನವನು ಸ್ನಾನವನ್ನು ಮಾಡಿ ಉಮಾ ಸಹಿತನಾದ ಮಹಾದೇವನನ್ನು ಪೂಜಿಸುವನೊ, ಅವನು ವಾಜಪೇಯ ಮಹಾ ಯಜ್ಞದ ಉತ್ತಮ ಫಲವನ್ನು ಪಡೆಯುವನು.

೩. ಮಹತ್ತರವಾದ ಆ ಪುಣ್ಯದ ಫಲವಾಗಿ ಜಯಶಬ್ದಗಳೇ ಮುಂತಾದ ಮಂಗಳಧ್ವನಿಗಳಿಂದ ಅಪ್ಸರೆಯರು ಸುತ್ತುವರೆದಿರಲು ಮೃತನಾಗಿ ಸ್ವರ್ಗಕ್ಕೆ ಹೋಗುವನು.

೪. ಅಲ್ಲಿ ಒಂದುಸಾವಿರ ವರ್ಷಗಳವರೆಗೂ ಯಥೇಚ್ಛವಾಗಿ ಕ್ರೀಡಿಸಿದ ಮೇಲೆ ಧನಧಾನ್ಯಗಳಿಂದ ಕೂಡಿದ ಉತ್ತಮ ಕುಲದಲ್ಲಿ ಜನಿಸುವನು.

**ಪೂಜ್ಯಮಾನೋ ನರಶ್ರೇಷ್ಠ ವೇದವೇದಾಂಗಪಾರಗಃ ।**
**ವ್ಯಾಧಿಶೋಕವಿನಿರ್ಮುಕ್ತೋ ಜೀವೇಚ್ಚ ಶರದಾಂ ಶತಂ ॥ ೫ ॥**

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ
ಪಂಚಮೇ ಆವಂತ್ಯಖಂಡೇ ತೃತೀಯೇ ರೇವಾಖಂಡೇ
"ಸಿದ್ಧೇಶ್ವರತೀರ್ಥಮಾಹಾತ್ಮ್ಯವರ್ಣನಂ"ನಾಮ
ಪಂಚತ್ರಿಂಶದಧಿಕಶತತಮೋಽಧ್ಯಾಯಃ

---

೫. ಧರ್ಮರಾಜನೆ! ವೇದವೇದಾಂಗಗಳಲ್ಲಿ ಪಾರಂಗತನಾಗಿ ಜನರಿಂದ ಮನ್ನಣೆಯನ್ನು ಕೊಳ್ಳುತ್ತ, ದುಃಖರೋಗಗಳನ್ನನುಭವಿಸದೆ ನೂರು ವರ್ಷಗಳು ಬದುಕಿರುವನು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ
ಶ್ರೀ ಸ್ಕಾಂದಮಹಾಪುರಾಣದ ಐದನೆಯ ಆವಂತ್ಯಖಂಡದ ಮೂರನೆಯ ರೇವಾಖಂಡದಲ್ಲಿ
"ಸಿದ್ಧೇಶ್ವರತೀರ್ಥಮಾಹಾತ್ಮ್ಯವರ್ಣನ"ವೆಂಬ
ನೂರಮೂವತ್ತೈದನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

## ಅಥ ಷಟ್ತ್ರಿಂಶದಧಿಕಶತತಮೋಽಧ್ಯಾಯಃ

### ಅಹಲ್ಯಾತೀರ್ಥಮಾಹಾತ್ಮ್ಯವರ್ಣನಂ

ಶ್ರೀ ಮಾರ್ಕಂಡೇಯ ಉವಾಚ :—

ತತೋ ಗಚ್ಛೇನ್ಮಹೀಪಾಲ ಚಾಽಹಲ್ಯೇಶ್ವರಮುತ್ತಮಂ ।
ಯತ್ರ ಸಿದ್ಧಾ ಮಹಾಭಾಗಾ ತ್ವಹಲ್ಯಾ ತಾಪಸೀ ಪುರಾ ॥ ೧ ॥
ಗೌತಮೋ ಬ್ರಾಹ್ಮಣಸ್ತ್ವಾಸೀತ್ಸಾಕ್ಷಾದ್ಬ್ರಹ್ಮೇವ ಚಾಽಪರಃ ।
ಸತ್ಯಧರ್ಮಸಮಾಯುಕ್ತೋ ವಾನಪ್ರಸ್ಥಾಶ್ರಮೇ ರತಃ ॥ ೨ ॥
ತಸ್ಯ ಪತ್ನೀ ಮಹಾಭಾಗಾ ಹ್ಯಹಲ್ಯಾ ನಾಮ ವಿಶ್ರುತಾ ।
ರೂಪಯೌವನಸಂಪನ್ನಾ ತ್ರಿಷು ಲೋಕೇಷು ವಿಶ್ರುತಾ ॥ ೩ ॥
ಅಸ್ಯಾ ಅಪ್ಯತಿರೂಪೇಣ ದೇವರಾಜಃ ಶತಕ್ರತುಃ ।
ಮೋಹಿತೋ ಲೋಭಯಾಮಾಸ ಹ್ಯಹಲ್ಯಾಂ ಬಲಸೂದನಃ ॥ ೪ ॥

---

### ಕನ್ನಡದ ಅನುವಾದ

#### ಅಹಲ್ಯಾತೀರ್ಥಮಾಹಾತ್ಮ್ಯವರ್ಣನ

೧. ಮಾರ್ಕಂಡೇಯನು ಹೇಳುತ್ತಾನೆ:— ಮಹಾರಾಜನೆ! ಬಳಿಕ ಉತ್ತಮವಾದ ಅಹಲ್ಯಾತೀರ್ಥವನ್ನು ಸೇರಬೇಕು. ಅಲ್ಲಿಯೇ ಮಹಾ ಭಾಗ್ಯವಂತಳಾದ ಅಹಲ್ಯೆಯು ಹಿಂದೆ ತಪಸ್ಸನ್ನಾಚರಿಸಿ ಸಿದ್ಧಿಯನ್ನು ಪಡೆದಳು.

೨. ಎರಡನೆಯ ಬ್ರಹ್ಮನೊ ಎಂಬಂತೆ ತೋರುತ್ತಿದ್ದ ಗೌತಮನೆಂಬ ಮಹಾ ಬ್ರಾಹ್ಮಣನೊಬ್ಬನಿದ್ದನು. ಆತನು ಸತ್ಯಧರ್ಮಪರಾಯಣನೂ ವಾನಪ್ರಸ್ಥಾಶ್ರಮಧರ್ಮನಿರತನೂ ಆಗಿದ್ದನು.

೩. ಆತನಿಗೆ ಮಹಾ ಪತಿವ್ರತೆಯಾದ ಅಹಲ್ಯೆಯೆಂಬ ಪತ್ನಿಯಿದ್ದಳು. ಆಕೆಯು ಸೌಂದರ್ಯ ಯೌವನಗಳಿಂದ ಕೂಡಿ ಮೂರು ಲೋಕಗಳಲ್ಲಿಯೂ ಪ್ರಖ್ಯಾತಳಾಗಿದ್ದಳು.

೪. ಶತಕ್ರತುವೂ, ಬಲವೈರಿಯೂ ಆದ ಇಂದ್ರನು ಈಕೆಯ ಅತ್ಯಂತ ಸೌಂದರ್ಯದಿಂದ ಮೋಹಿತನಾಗಿ ದೇವರಾಜನಾಗಿದ್ದರೂ ಮಹೇಂದ್ರನು ಆಕೆಯನ್ನು ಕಾಮಿಸಿದನು.

ಮಾಂ ಭಜಸ್ವ ವರಾರೋಹೇ ದೇವರಾಜಮನಿಂದಿತೇ ।
ಕ್ರೀಡಯಸ್ವ ಮಯಾ ಸಾರ್ಧಂ ತ್ರಿಷುಲೋಕೇಷು ಪೂಜಿತಾ ॥ ೫ ॥
ಕಿಂ ಕರಿಷ್ಯಸಿ ವಿಪ್ರೇಣ ಶೌಚಾಚಾರಕೃಶೇನ ತು ।
ತಪಃಸ್ವಾಧ್ಯಾಯಶೀಲೇನ ಕ್ಲಿಶ್ಯಂತೀವ ಸುಲೋಚನೇ ॥ ೬ ॥
ಏವಮುಕ್ತಾ ವರಾರೋಹಾ ಸ್ತ್ರೀಸ್ವಭಾವಾತ್ಸುಚಂಚಲಾ ।
ಮನಸ್ಯಾಧಾಯ ಶಕ್ರಂ ಸಾ ಕಾಮೇನ ಕಲುಷೀಕೃತಾ ॥ ೭ ॥
ತಸ್ಯಾ ವಿದಿತ್ವಾ ತಂ ಭಾವಂ ಸ ದೇವಃ ಪಾಕಶಾಸನಃ ।
ಗೌತಮಂ ವಂಚಯಾಮಾಸ ದುಷ್ಟಭಾವೇನ ಭಾವಿತಃ ॥ ೮ ॥
ವಿದಿತ್ವಾ ಚಾಂತರಂ ತಸ್ಯ ಗೃಹೀತ್ವಾ ವೇಷಮುತ್ತಮಂ ।
ಅಹಲ್ಯಾಂ ರಮಯಾಮಾಸ ವಿಶ್ವಸ್ತಾಂ ಮಂದಿರಾಂತಿಕೇ ॥ ೯ ॥
ಕ್ಷಣಮಾತ್ರಾಂತರೇ ತತ್ರ ದೇವರಾಜಸ್ಯ ಭಾರತ ।
ಆಜಗಾಮ ಮುನಿಶ್ರೇಷ್ಠೋ ಮಂದಿರಂ ತ್ವರಯಾನ್ವಿತಃ ॥ ೧೦ ॥
ಆಗತಂ ಗೌತಮಂ ದೃಷ್ಟ್ವಾ ಭೀತಭೀತಃ ಪುರಂದರಃ ।
ನಿರ್ಗತಃ ಸ ತತೋ ದೃಷ್ಟ್ವಾ ಶಕ್ರೋಽಯಮಿತಿ ಚಿಂತಯನ್ ॥ ೧೧ ॥

---

೫. "ಕುಂದಿಲ್ಲದ ಓ ಸುಂದರಿಯೆ! ದೇವರಾಜನಾದ ನನ್ನನ್ನು ಸೇವಿಸು. ಮೂರು ಲೋಕಗಳಲ್ಲಿಯೂ ಮರ್ಯಾದೆಯನ್ನು ಪಡೆಯುತ್ತ ನನ್ನೊಡನೆ ಕ್ರೀಡಿಸುತ್ತಿರು.

೬. ಚಾರುನೇತ್ರೆಯೆ! ಶೌಚಾಚಾರಗಳಿಂದ ಕೃಶನೂ, ತಪಸ್ಸು ವೇದಾಧ್ಯಯನಗಳಲ್ಲಿ ನಿರತನೂ ಆದ ಈ ಬ್ರಾಹ್ಮಣನಿಂದ ನಿನಗೆ ಸುಖವೇನು? ಬಹಳ ಕಷ್ಟಪಡುತ್ತಿರುವೆಯಲ್ಲ!"

೭. ಇಂತೆಂದು ಹೇಳಲು ಅಹಲ್ಯೆಯು ಪತಿವ್ರತೆಯಾದರೂ ಸ್ತ್ರೀಯರಿಗೆ ಸಹಜವಾದ ಚಾಂಚಲ್ಯದಿಂದಲೂ, ಕಾಮೋದ್ರೇಕದಿಂದಲೂ ಕಲ್ಮಷಗೊಂಡು ಮನಸ್ಸಿನಲ್ಲಿ ಆತನನ್ನು ಕುರಿತೇ ಚಿಂತಿಸುತ್ತಿದ್ದಳು.

೮-೯. ಆಕೆಯ ಮನಸ್ಸಿನ ಭಾವವನ್ನು ತಿಳಿದು ಮಹೇಂದ್ರನೂ ಅಕಾರ್ಯಕ್ಕೆ ಮನಸ್ಸುಮಾಡಿ ಗೌತಮನನ್ನು ಮೋಸಗೊಳಿಸಿದನು. ತಕ್ಕ ಸಮಯವನ್ನು ತಿಳಿದು ಗೌತಮನ ವೇಷವನ್ನು ತಾಳಿ ಅವನು, ಆ ಮುನಿಯ ಮನೆಯನ್ನು ಪ್ರವೇಶಿಸಿ ಪತಿಯೆಂದೇ ತಿಳಿದಿದ್ದ ಆಕೆಯೊಡನೆ ರಮಿಸಿದನು.

೧೦. ದೇವರಾಜನು ಅಲ್ಲಿಂದ ಹೊರಡುವುದಕ್ಕೆ ಒಂದು ಕ್ಷಣ ಮೊದಲಾಗಿ ಮುನಿವರ್ಯನಾದ ಗೌತಮನು ಸಂಭ್ರಮದಿಂದ ಮನೆಯನ್ನು ಹೊಕ್ಕನು.

೧೧. ಗೌತಮನು ಬಂದುದನ್ನು ಕಂಡು ಮಹೇಂದ್ರನು ಭಯಸಂತ್ರಸ್ತನಾಗಿ ಹೊರಟನು. ಗೌತಮನೂ ಅವನನ್ನು ಕಂಡು ಮಹೇಂದ್ರನೆಂಬುದನ್ನು ತಿಳಿದನು.

ತತಃ ಶಶಾಪ ದೇವೇಂದ್ರಂ ಗೌತಮಃ ಕ್ರೋಧಮೂರ್ಛಿತಃ ।
ಅಜಿತೇಂದ್ರಿಯೋಽಸಿ ಯಸ್ಮಾತ್ತ್ವಂ ತಸ್ಮಾದ್ಬಹುಭಗೋ ಭವ ॥ ೧೨ ॥
ಏವಮುಕ್ತಸ್ತು ದೇವೇಂದ್ರಸ್ತತ್ಕ್ಷಣಾದೇವ ಭಾರತ ।
ಭಗಾನಾಂ ತು ಸಹಸ್ರೇಣ ತತ್ಕ್ಷಣಾದೇವ ವೇಷ್ಟಿತಃ ॥ ೧೩ ॥
ತ್ಯಕ್ತ್ವಾ ರಾಜ್ಯಂ ಸುರೈಃ ಸಾರ್ಧಂ ಗತಶ್ರೀಕೋ ಜಗಾಮಹ ।
ತಪಶ್ಚಚಾರ ವಿಪುಲಂ ಗೌತಮೇನ ಮಹೀತಲೇ ॥ ೧೪ ॥
ಅಹಲ್ಯಾಽಪಿ ತತಃ ಶಪ್ತಾ ಯಸ್ಮಾತ್ತ್ವಂ ದುಷ್ಟಚಾರಿಣೀ ।
ಪ್ರೇಕ್ಷ್ಯ ಮಾಂ ರಮಸೇ ಶಕ್ರಂ ತಸ್ಮಾದಶ್ಮಮಯೀ ಭವ ॥ ೧೫ ॥
ಗತೇ ವರ್ಷಸಹಸ್ರಾಂತೇ ರಾಮಂ ದೃಷ್ಟ್ವಾ ಯಶಸ್ವಿನಂ ।
ತೀರ್ಥಯಾತ್ರಾಪ್ರಸಂಗೇನ ಧೌತಪಾಪಾ ಭವಿಷ್ಯಸಿ ॥ ೧೬ ॥
ಏವಂ ಗತೇ ತತಃ ಕಾಲೇ ದೃಷ್ಟ್ವಾ ರಾಮೇಣ ಧೀಮತಾ ।
ವಿಶ್ವಾಮಿತ್ರಸಹಾಯೆನ ತ್ಯಕ್ತ್ವಾ ಸಾಽಶ್ಮಮಯೀಂ ತನುಂ ।
ಪೂಜಯಿತ್ವಾ ಯಥಾನ್ಯಾಯಂ ಗತಪಾಪಾ ವಿಮತ್ಸರಾ ॥ ೧೭ ॥

---

೧೨. ಮತ್ತು ಕೋಪದಿಂದ ಮೈಮರೆತು ಇಂದ್ರನಿಗೆ, "ನೀನು ಅಜಿತೇಂದ್ರಿಯನಾಗಿ ಪರಸ್ತ್ರೀಗೆಳಸಿದುದರಿಂದ ನಿನ್ನ ಮೈಯೆಲ್ಲವೂ ಭಗಮಯವಾಗಲಿ" ಎಂದು ಶಪಿಸಿದನು.

೧೩. ಧರ್ಮರಾಜನೆ! ಇಂತೆಂದು ಗೌತಮನು ಶಾಪವನ್ನು ಕೊಟ್ಟ ನಿಮಿಷದಲ್ಲಿಯೇ ದೇವೇಂದ್ರನ ಶರೀರವೆಲ್ಲವೂ ಸಾವಿರಾರು ಭಾಗಗಳಿಂದಾವೃತವಾಯಿತು.

೧೪. ಹೀಗೆ ಇಂದ್ರನು ಗೌತಮನ ಕಾರಣದಿಂದ ರಾಜ್ಯವನ್ನು ಕಳೆದುಕೊಂಡು ಭಾಗ್ಯಹೀನನಾಗಿ ದೇವತೆಗಳೊಡನೆ ಭೂಮಿಗಿಳಿದು ಅಪಾರವಾದ ತಪಸ್ಸನ್ನಾಚರಿಸುತ್ತಿದ್ದನು.

೧೫. ಬಳಿಕ ಗೌತಮನು ಅಹಲ್ಯೆಗೂ ಶಾಪವನ್ನಿತ್ತನು. "ನೀನು ದುರಾಚಾರವಂತಳಾದೆ. ನನ್ನನ್ನು ತಿಳಿದೂ ಸಹ ಇಂದ್ರನಲ್ಲಿ ರಮಿಸಿದೆಯಾದಕಾರಣದಿಂದ ಕಲ್ಲಾಗಿ ಬಿದ್ದಿರು.

೧೬. ಒಂದುಸಾವಿರ ವರ್ಷಗಳು ಕಳೆಯಲು ಮಹಾ ಕೀರ್ತಿಸಂಪನ್ನನಾದ ಶ್ರೀರಾಮಚಂದ್ರನು ತೀರ್ಥಯಾತ್ರೆಯ ವ್ಯಾಜದಿಂದ ಇಲ್ಲಿಗೆ ಬರುವನು. ಆತನನ್ನು ಕಂಡು ಆ ಬಳಿಕ ನೀನು ನಿಷ್ಪಾಪಳಾಗು."

೧೭. ಹಾಗೆಯೇ ಕಾಲವು ಕಳೆಯಲು ಮಹಾತ್ಮನಾದ ಶ್ರೀರಾಮನು ವಿಶ್ವಾಮಿತ್ರರೊಡನೆ ಬರಲು ಆತನನ್ನು ಕಂಡು ಅಹಲ್ಯೆಯು ತನ್ನ ಕಲ್ಲಿನ ರೂಪ

ಆಗತಾ ನರ್ಮದಾತೀರೇ ತೀರ್ಥೇ ಸ್ನಾತ್ವಾ ಯಥಾವಿಧಿ ।
ಕೃತಂ ಚಾಂದ್ರಾಯಣಂ ಮಾಸಂ ಕೃಚ್ಛ್ರಂ ಚಾನ್ಯಂ ತತಃ ಪರಂ ॥ ೧೮ ॥
ತತಸ್ತುಷ್ಟೋ ಮಹಾದೇವೋ ದತ್ವಾ ವರಮನುತ್ತಮಂ ।
ಜಗಾಮಾದರ್ಶನಂ ಭೂಯೋ ರೇಮೇ ಚೋಮಾಪತಿಶ್ಚಿರಂ ॥ ೧೯ ॥
ಅಹಲ್ಯಾ ತು ಗತೇ ದೇವೇ ಸ್ಥಾಪಯಿತ್ವಾ ಜಗದ್ಗುರುಂ ।
ಅಹಲ್ಯೇಶ್ವರನಾಮಾನಂ ಸ್ವಗೃಹೇ ಚಾಗಮತ್ಪುನಃ ॥ ೨೦ ॥
ತತ್ರ ತೀರ್ಥೇ ತು ಯಃ ಸ್ನಾತ್ವಾ ಪೂಜಯೇತ್ಪರಮೇಶ್ವರಂ ।
ಸ ಮೃತಃ ಸ್ವರ್ಗಮಾಪ್ನೋತಿ ಯತ್ರ ದೇವೋ ಮಹೇಶ್ವರಃ ॥ ೨೧ ॥
ಕ್ರೀಡಯಿತ್ವಾ ಯಥಾಕಾಮಂ ತತ್ರ ಲೋಕೇ ಮಹಾತಪಾಃ ।
ಗತೇ ವರ್ಷಸಹಸ್ರಾಂತೇ ಮಾನುಷ್ಯಂ ಲಭತೇ ಪುನಃ ॥ ೨೨ ॥

---

ವನ್ನು ತ್ಯಜಿಸಿ ಆತನಿಗೆ ಯಥಾವಿಧಿಯಾಗಿ ಪೂಜೆಯನ್ನು ಮಾಡಿ ಪಾಪರಹಿತಳಾಗಿ ಮಾತ್ಸರ್ಯವನ್ನೂ ದೂರಮಾಡಿದಳು.

೧೮. ಬಳಿಕ ಆಕೆಯು ನರ್ಮದಾತೀರಕ್ಕೆ ಬಂದು ನಿತ್ಯವೂ ಯಥಾವಿಧಿಯಾಗಿ ಸ್ನಾನವನ್ನುಮಾಡಿ ಚಾಂದ್ರಾಯಣವನ್ನೂ, ಬಳಿಕ ಒಂದು ಮಾಸದವರೆಗೆ ಕೃಚ್ಛ್ರವನ್ನೂ, ಬಳಿಕ ಉಳಿದ ಇತರ ಪ್ರಾಯಶ್ಚಿತ್ತಕರ್ಮಗಳನ್ನೂ ಆಚರಿಸಿದಳು.

೧೯. ಅದರಿಂದ ಸಂತುಷ್ಟನಾದ ಪರಮೇಶ್ವರನು ಆಕೆಗೆ ಉತ್ತಮವಾದ ವರವನ್ನಿತ್ತು ಅದೃಶ್ಯನಾಗಿ ಉಮಾದೇವಿಯೊಡನೆ ಆ ಪ್ರದೇಶದಲ್ಲಿಯೇ ವಿಹರಿಸುತ್ತಿದ್ದನು.

೨೦. ಮಹಾದೇವನು ಅದೃಶ್ಯನಾಗಲು ಅಹಲ್ಯಾದೇವಿಯು ಅಲ್ಲಿ ಅಹಲ್ಯೇಶ್ವರನೆಂಬ ಹೆಸರಿನ ಮಾಹೇಶ್ವರಲಿಂಗವನ್ನು ಪ್ರತಿಷ್ಠಿಸಿ ಮತ್ತೆ ಮನೆಗೆ ಹೊರಟುಹೋದಳು.

೨೧. ಆ ತೀರ್ಥದಲ್ಲಿ ಯಾವನು ಸ್ನಾನವನ್ನುಮಾಡಿ ಪರಮೇಶ್ವರನನ್ನು ಪೂಜಿಸುವನೊ, ಅವನು ಸಾಯಲು ಮಹೇಶ್ವರನ ಸ್ವರ್ಗಕೈಲಾಸವನ್ನು ಸೇರುವನು.

೨೨. ಮಹಾತಪಸ್ಸಂಪನ್ನನಾಗಿ ಅಲ್ಲಿ ಒಂದು ಸಾವಿರವರ್ಷಗಳವರೆಗೂ ಕ್ರೀಡಿಸುತ್ತಿದ್ದು ಪುನಃ ಮರ್ತ್ಯಲೋಕದಲ್ಲಿ ಮಾನುಷ ಜನ್ಮವನ್ನು ಪಡೆಯುವನು.

೨೩. ಉತ್ತಮಕುಲದಲ್ಲಿ ಜನಿಸಿ ಧನಧಾನ್ಯಸಮೃದ್ಧಿಯುಳ್ಳವನಾಗಿ, ಪುತ್ರಪೌತ್ರಾದಿಸಂತಾನದ ಸುಖವನ್ನನುಭವಿಸುತ್ತ, ವೇದವಿದ್ಯೆಗೆ ನೆಲೆವನೆಯಾಗಿರುವನು.

ಧನಧಾನ್ಯಚಯೋಪೇತಃ ಪುತ್ರಪೌತ್ರಸಮನ್ವಿತಃ ।
ವೇದವಿದ್ಯಾಶ್ರಯೋ ಧೀಮಾನ್ ಜಾಯತೇ ವಿಮಲೇ ಕುಲೇ ॥ ೨೩ ॥
ರೂಪಸೌಭಾಗ್ಯಸಂಪನ್ನಃ ಸರ್ವವ್ಯಾಧಿವಿವರ್ಜಿತಃ ।
ಜೀವೇದ್ವರ್ಷಶತಂ ಸಾಗ್ರಮಹಲ್ಯಾತೀರ್ಥಸೇವನಾತ್ ॥ ೨೪ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ
ಪಂಚಮೇ ಆಂವತ್ಯಖಂಡೇ ತೃತೀಯೇ ರೇವಾಖಂಡೇ
"ಅಹಲ್ಯಾತೀರ್ಥಮಾಹಾತ್ಮ್ಯವರ್ಣನಂ"ನಾಮ
ಷಟ್ತ್ರಿಂಶದಧಿಕಶತತಮೋಽಧ್ಯಾಯಃ

---

೨೪. ಈ ಅಹಲ್ಯಾತೀರ್ಥವನ್ನು ಸೇವಿಸಿದ ಫಲವಾಗಿ ಆತನು ಸೌಂದರ್ಯ ಸೌಭಾಗ್ಯಗಳುಳ್ಳವನಾಗಿ, ಸಕಲವ್ಯಾಧಿಗಳೂ ಕಳೆದು ವಜ್ರಕಾಯನಾಗಿ ನೂರು ವರ್ಷದ ಪೂರ್ಣಾಯುಷ್ಯವನ್ನನುಭವಿಸುವನು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ
ಶ್ರೀ ಸ್ಕಾಂದಮಹಾಪುರಾಣದ ಐದನೆಯ ಆವಂತ್ಯಖಂಡದ ಮೂರನೆಯ ರೇವಾಖಂಡದಲ್ಲಿ
"ಅಹಲ್ಯಾತೀರ್ಥಮಾಹಾತ್ಮ್ಯವರ್ಣನ" ವೆಂಬ
ನೂರಮೂವತ್ತಾರನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

# ಅಥ ಸಪ್ತತ್ರಿಂಶದಧಿಕಶತತಮೋಽಧ್ಯಾಯಃ

## ಕರ್ಕಟೇಶ್ವರತೀರ್ಥಮಾಹಾತ್ಮ್ಯವರ್ಣನಂ

ಮಾರ್ಕಂಡೇಯ ಉವಾಚ:—

ಧರ್ಮಪುತ್ರ ತತೋ ಗಚ್ಛೇತ್ಕರ್ಕಟೇಶ್ವರಮುತ್ತಮಂ ।
ಉತ್ತರೇ ನರ್ಮದಾಕೂಲೇ ಸರ್ವಪಾಪಕ್ಷಯಂಕರಂ ॥ ೧ ॥
ತತ್ರ ಸ್ನಾತ್ವಾ ವಿಧಾನೇನ ಯಸ್ತು ಪೂಜಯತೇ ಶಿವಂ ।
ಅನಿವರ್ತಿಕಾ ಗತಿಸ್ತಸ್ಯ ರುದ್ರಲೋಕಾದಸಂಶಯಂ ॥ ೨ ॥
ತಸ್ಯ ತೀರ್ಥಸ್ಯ ಮಾಹಾತ್ಮ್ಯಂ ಪುರಾಣೇ ಯಚ್ಛ್ರುತಂ ಮಯಾ ।
ನ ತದ್ವರ್ಣಯಿತುಂ ಶಕ್ಯಂ ಸಂಕ್ಷೇಪೇಣ ವದಾಮ್ಯತಃ ॥ ೩ ॥
ತತ್ರ ತೀರ್ಥೇ ತು ಯಃ ಕುರ್ಯಾತ್ಕಿಂಚಿತ್ಕರ್ಮ ಶುಭಾಽಶುಭಂ ।
ಹರ್ಷಾನ್ಮದಾನ್ಮಹಾರಾಜ ತತ್ಸರ್ವಂ ಜಾಯತೇಽಕ್ಷಯಂ ॥ ೪ ॥
ತತ್ರ ತೀರ್ಥೇ ತಪಸ್ತಪ್ತ್ವಾ ವಾಲಖಿಲ್ಯಾ ಮರೀಚಯಃ ।
ರಮಂತೇಽದ್ಯಾಪಿ ಲೋಕೇಷು ಸ್ವೇಚ್ಛಯಾ ಕುರುನಂದನ ॥ ೫ ॥

---

## ಕನ್ನಡದ ಅನುವಾದ

### ಕರ್ಕಟೇಶ್ವರತೀರ್ಥಮಾಹಾತ್ಮ್ಯವರ್ಣನ

೧. ಮಾರ್ಕಂಡೇಯನು ಹೇಳುತ್ತಾನೆ:—ಎಲೈ ಧರ್ಮಪುತ್ರನೆ! ಬಳಿಕ ನರ್ಮದಾನದಿಯ ಉತ್ತರತೀರದಲ್ಲಿರುವ ಕರ್ಕಟೇಶ್ವರವೆಂಬ ಸಕಲಪಾಪಗಳನ್ನೂ ನಾಶಗೊಳಿಸುವ ಪುಣ್ಯತೀರ್ಥಕ್ಕೆ ಹೋಗಬೇಕು.

೨. ಅಲ್ಲಿ ಸ್ನಾತನಾಗಿ ಯಾವನು ಯಥಾವಿಧಿಯಾಗಿ ಶಿವಪೂಜೆಯನ್ನು ಮಾಡುವನೊ, ಅವನು ರುದ್ರಲೋಕಕ್ಕೆ ಹೋಗುವನು. ಅಲ್ಲಿಂದ ಆತನಿಗೆ ಪುನರಾವೃತ್ತಿಯಿಲ್ಲವೆಂಬುದು ನಿಶ್ಚಯವು.

೩. ಆ ತೀರ್ಥದ ಮಾಹಾತ್ಮ್ಯವನ್ನು ಪುರಾಣದಲ್ಲಿ ಕೇಳಿರುವಂತೆ ಸಾಗ್ರವಾಗಿ ವರ್ಣಿಸಲು ನನಗೆ ಅಶಕ್ಯವಾದುದರಿಂದ ಸಂಕ್ಷೇಪವಾಗಿ ವಿವರಿಸುತ್ತೇನೆ.

೪. ಮಹಾರಾಜನೆ! ಆ ತೀರ್ಥದಲ್ಲಿ ಸಂತೋಷದಿಂದ ಸತ್ಕಾರ್ಯವನ್ನೂ, ಗರ್ವದಿಂದ ದುಷ್ಕಾರ್ಯವನ್ನೂ ಸ್ವಲ್ಪವಾಗಿ ಮಾಡಿದರೂ ಅದು ಅನಂತವಾಗಿ ಬೆಳೆಯುವುದು.

೫. ಕುರುನಂದನನೆ! ಆ ತೀರ್ಥದಲ್ಲಿ ತಪಸ್ಸನ್ನಾಚರಿಸಿದ ಪುಣ್ಯದಿಂದ ವಾಲಖಿಲ್ಯರೂ ಮರೀಚಿಗಳೂ ಇಂದಿಗೂ ತಮ್ಮ ಲೋಕಗಳಲ್ಲಿ ಯಥೇಚ್ಛಗಳಾದ ಸುಖಗಳನ್ನನುಭವಿಸುತ್ತಿರುವರು.

ತತ್ರಸ್ಥಾಸ್ತನ್ನ ಜಾನಂತಿ ನರಾ ಜ್ಞಾನಬಹಿಷ್ಕೃತಾಃ ।
ಶರೀರಸ್ಥಮಿವಾತ್ಮಾನಮಕ್ಷಯಂ ಜ್ಯೋತಿರವ್ಯಯಂ ॥ ೬ ॥
ತತ್ರ ತೀರ್ಥೇ ನೃಪಶ್ರೇಷ್ಠ ದೇವೀ ನಾರಾಯಣೀ ಪುರಾ ।
ಅದ್ಯಾಽಪಿ ತಪತೇ ಘೋರಂ ತಪೋ ಯಾವತ್ಕಿಲಾಽರ್ಬುದಂ ॥ ೭ ॥
ತತ್ರ ತೀರ್ಥೇ ತು ಯಃ ಸ್ನಾತ್ವಾ ತರ್ಪಯೇತ್ಪಿತೃದೇವತಾಃ ।
ತಸ್ಯ ತೇ ದ್ವಾದಶಾಬ್ದಾನಿ ತೃಪ್ತಿಂ ಯಾಂತಿ ಪಿತಾಮಹಾಃ ॥ ೮ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ
ಪಂಚಮೇ ಆವಂತ್ಯಖಂಡೇ ತೃತೀಯೇ ರೇವಾಖಂಡೇ
"ಕರ್ಕಟೇಶ್ವರತೀರ್ಥಮಾಹಾತ್ಮ್ಯವರ್ಣನಂ"ನಾಮ
ಸಪ್ತತ್ರಿಂಶದಧಿಕಶತತಮೋಽಧ್ಯಾಯಃ

---

೬. ಆದರೆ ಜರಾಮರಣಗಳಿಲ್ಲದೆ ಸ್ವಯಂಜ್ಯೋತಿಯಾಗಿ ಶರೀರದಲ್ಲಿರುವ ಆತ್ಮನನ್ನು ತಿಳಿಯಲಾರದ ನರರಂತೆ ಅಲ್ಲಿರುವವರೂ ಜ್ಞಾನಹೀನರಾಗಿ ಈ ತೀರ್ಥದ ಮಹಿಮೆಯನ್ನರಿಯರು.

೭. ರಾಜೇಂದ್ರನೆ! ಈ ತೀರ್ಥದಲ್ಲಿಯೇ ಪಾರ್ವತೀದೇವಿಯು ಹಿಂದೆ ಬಂದು ನಿಂತು ಅರ್ಬುದಕಾಲವು ಕಳೆಯುವವರೆಗೂ ತಪಸ್ಸನ್ನುಮಾಡುತ್ತ ಇಂದಿಗೂ ನಿಂತಿರುವಳು.

೮. ಆ ತೀರ್ಥದಲ್ಲಿ ಸ್ನಾನವನ್ನುಮಾಡಿ ಪಿತೃದೇವತೆಗಳಿಗೆ ತರ್ಪಣಗಳನ್ನಿತ್ತವನ ಪಿತಾಮಹರು ಹನ್ನೆರಡು ವರ್ಷಗಳವರೆಗೂ ಸಂತುಷ್ಟರಾಗಿರುವರು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ
ಶ್ರೀ ಸ್ಕಾಂದಮಹಾಪುರಾಣದ ಐದನೆಯ ಆವಂತ್ಯಖಂಡದ ಮೂರನೆಯ ರೇವಾಖಂಡದಲ್ಲಿ
"ಕರ್ಕಟೇಶ್ವರತೀರ್ಥಮಾಹಾತ್ಮ್ಯವರ್ಣನ" ವೆಂಬ
ನೂರಮೂವತ್ತೇಳನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

## ಅಥಾಷ್ಟತ್ರಿಂಶದಧಿಕಶತತಮೋಽಧ್ಯಾಯಃ

### ಶಕ್ರತೀರ್ಥಮಾಹಾತ್ಮ್ಯವರ್ಣನಂ

ಶ್ರೀ ಮಾರ್ಕಂಡೇಯ ಉವಾಚ :—

ತತೋ ಗಚ್ಛೇತ್ಪಾಂಡುಪುತ್ರ ಶಕ್ರತೀರ್ಥಮನುತ್ತಮಂ ।
ಯತ್ರ ಸಿದ್ಧೋ ಮಹಾಭಾಗೋ ದೇವರಾಜಃ ಶತಕ್ರತುಃ ॥ ೧ ॥
ಗೌತಮೇನ ಪುರಾ ಶಪ್ತಂ ಜ್ಞಾತ್ವಾ ದೇವಾಃ ಸುರೇಶ್ವರಂ ।
ಬ್ರಹ್ಮಾದ್ಯಾ ದೇವತಾಃ ಸರ್ವ ಋಷಯಶ್ಚ ತಪೋಧನಾಃ ॥ ೨ ॥
ಗೌತಮಂ ಪ್ರಾರ್ಥಯಾಮಾಸುರ್ವಾಕ್ಯೈಃ ಸಾನುನಯೈಃ ಶುಭೈಃ ।
ಗತರಾಜ್ಯಂ ಗತಶ್ರೀಕಂ ಶಕ್ರಂ ಪ್ರತಿ ಮುನೀಶ್ವರ ॥ ೩ ॥
ಇಂದ್ರೇಣ ರಹಿತಂ ರಾಜ್ಯಂ ನ ಕಶ್ಚಿತ್ಕಾಮಯೇದ್ದ್ವಿಜ ।
ದೇವೋ ವಾ ಮಾನವೋ ವಾಽಪಿ ಏತತ್ತೇ ವಿದಿತಂ ಪ್ರಭೋ ॥ ೪ ॥
ತಸ್ಯ ತ್ವಂ ಭಗಯುಕ್ತಸ್ಯ ದಯಾಂ ಕುರು ದ್ವಿಜೋತ್ತಮ ।
ಗತಶ್ಚಾಽದರ್ಶನಂ ಶಕ್ರೋ ದೂಷಿತಃ ಸ್ವೇನ ಪಾಪ್ಮನಾ ॥ ೫ ॥

---

### ಕನ್ನಡದ ಅನುವಾದ

#### ಶಕ್ರತೀರ್ಥಮಾಹಾತ್ಮ್ಯವರ್ಣನ

೧. ಮಾರ್ಕಂಡೇಯನು ಹೇಳುತ್ತಾನೆ:—ಪಾಂಡುನಂದನನೆ! ಬಳಿಕ ಸರ್ವೋತ್ತಮವಾದ ಶಕ್ರತೀರ್ಥವನ್ನು ಸೇವಿಸಬೇಕು. ದೇವತೆಗಳಿಗೊಡೆಯನಾದ ಮಹೇಂದ್ರನು ಅಲ್ಲಿ ತಪಸ್ಸಿದ್ಧಿಯನ್ನು ಪಡೆದನು.

೨. ಗೌತಮ ಮಹರ್ಷಿಯು ಇಂದ್ರನಿಗೆ ಶಾಪವನ್ನಿತ್ತುದನ್ನು ಬ್ರಹ್ಮಾದಿ ಸಮಸ್ತದೇವತೆಗಳೂ, ತಪೋನಿರತರಾದ ಋಷಿಗಳೂ ತಿಳಿದುಕೊಳ್ಳುವವರಾದರು.

೩. ರಾಜ್ಯವನ್ನೂ, ಐಶ್ವರ್ಯವನ್ನೂ ಕಳೆದುಕೊಂಡ ಮಹೇಂದ್ರನಿಗಾಗಿ ಸಮಾಧಾನಗೊಳಿಸುವ ಮೃದುಮಧುರವಾಕ್ಯಗಳಿಂದ ಆ ದೇವತೆಗಳು ಗೌತಮ ಮುನಿಯನ್ನು ಪ್ರಾರ್ಥಿಸಿಕೊಂಡರು.

೪. "ಬ್ರಾಹ್ಮಣೋತ್ತಮನೆ! ಇಂದ್ರನಿಲ್ಲದ ಈ ರಾಜ್ಯವನ್ನು ದೇವತೆಗಳಲ್ಲಿಯೂ, ಮನುಷ್ಯರಲ್ಲಿಯೂ ಯಾವನೂ ಅಪೇಕ್ಷಿಸುವುದಿಲ್ಲವೆಂಬುದು ನಿನಗೆ ತಿಳಿದೇ ಇದೆಯಷ್ಟೆ.

೫. ವಿಪ್ರೋತ್ತಮನೆ! ಭಗಯುಕ್ತನಾದ ಆತನಲ್ಲಿ ನೀನು ದಯೆಯನ್ನು ಮಾಡುವವನಾಗು. ಆತನು ತನ್ನ ಪಾಪದಿಂದ ಕಳಂಕಿತನಾಗಿ ಮರೆಮಾಚಿಕೊಂಡಿರುವನು."

ದೇವಾನಾಂ ವಚನಂ ಶ್ರುತ್ವಾ ಗೌತಮೋ ವೇದವಿತ್ತಮಃ ।
ತಥೇತಿ ಕೃತ್ವಾ ಶಕ್ರಸ್ಯ ವರಂ ದಾತುಂ ಪ್ರಚಕ್ರಮೇ ॥ ೬ ॥
ಏತದ್ಭಗಸಹಸ್ರಂ ತು ಪುರಾ ಜಾತಂ ಶತಕ್ರತೋ ।
ತಲ್ಲೋಚನಸಹಸ್ರಂ ತು ಮತ್ಪ್ರಸಾದಾದ್ಭವಿಷ್ಯತಿ ॥ ೭ ॥
ಏವಮುಕ್ತಃ ಸಹಸ್ರಾಕ್ಷಃ ಪ್ರಣಮ್ಯ ಮುನಿಸತ್ತಮಂ ।
ಬ್ರಾಹ್ಮಣಾಂಸ್ತಾನ್ಮಹಾಭಾಗಾನ್ನರ್ಮದಾಂ ಪ್ರತ್ಯಗಾತ್ತತಃ ॥ ೮ ॥
ಸ್ನಾತ್ವಾ ಸ ವಿಮಲೇ ತೋಯೇ ಸಂಸ್ಥಾಪ್ಯ ತ್ರಿಪುರಾಂತಕಂ ।
ಜಗಾಮ ತ್ರಿದಶಾವಾಸಂ ಪೂಜ್ಯಮಾನೋಽಪ್ಸರೋ ಗಣೈಃ ॥ ೯ ॥
ತತ್ರ ತೀರ್ಥೇ ತು ಯಃ ಸ್ನಾತ್ವಾ ಪೂಜಯೇತ್ಪರಮೇಶ್ವರಂ ।
ಪರದಾರಾಽಭಿಗಮನಾನ್ಮುಚ್ಯತೇ ಪಾತಕಾನ್ನರಃ ॥ ೧೦ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ
ಪಂಚಮೇ ಆವಂತ್ಯಖಂಡೇ ತೃತೀಯೇ ರೇವಾಖಂಡೇ
"ಶಕ್ರತೀರ್ಥಮಾಹಾತ್ಮ್ಯವರ್ಣನಂ"
ನಾಮಾಷ್ಟತ್ರಿಂಶದಧಿಕಶತತಮೋಽಧ್ಯಾಯಃ

---

೬. ವೇದಪಾರಂಗತನಾದ ಗೌತಮನು ದೇವತೆಗಳ ಪ್ರಾರ್ಥನೆಯನ್ನು ಕೇಳಿ ಹಾಗೆಯೇ ಆಗಲೆಂದು ಇಂದ್ರನಿಗೆ ವರವನ್ನು ಕೊಡಲುದ್ಯುಕ್ತನಾದನು.

೭. "ಶತಕ್ರತುವೆ! ಹಿಂದೆ ನಿನ್ನ ಮೈಯಲ್ಲಿ ಉಂಟಾದ ಸಾವಿರಾರುಭಗಗಳೆಲ್ಲವೂ ನನ್ನ ಅನುಗ್ರಹದಿಂದ ಅಷ್ಟೇ ನೇತ್ರಗಳಾಗಿ ಪರಿಣಮಿಸಲಿ."

೮. ಈ ಮಾತನ್ನು ಕೇಳಿ ಸಹಸ್ರಾಕ್ಷನಾದ ಇಂದ್ರನು ಆ ಮುನಿವರ್ಯನಿಗೂ ಅಲ್ಲಿ ನೆರೆದಿದ್ದ ಮಹಾಭಾಗರಾದ ಇತರ ಬ್ರಾಹ್ಮಣರಿಗೂ ನಮಸ್ಕರಿಸಿ ನರ್ಮದಾತೀರಕ್ಕೆ ಬಂದನು.

೯. ಅದರ ನಿರ್ಮಲವಾದ ಜಲದಲ್ಲಿ ಮಿಂದು ಮಹೇಶ್ವರನನ್ನುಸ್ಥಾಪಿಸಿ ಅಪ್ಸರೋಗಣಗಳಿಂದ ಸಂಪೂಜಿತನಾಗಿ ತನ್ನ ನಿವಾಸವಾದ ಸ್ವರ್ಗಲೋಕಕ್ಕೆ ಹೊರಟುಹೋದನು.

೧೦. ಆ ತೀರ್ಥದಲ್ಲಿ ಸ್ನಾನವನ್ನುಮಾಡಿ ಅಲ್ಲಿರುವ ಮಹಾದೇವನಿಗೆ ಪೂಜೆಯನ್ನು ನೆರವೇರಿಸಿದ ಮಾನವನು ಪರಸ್ತ್ರೀಗಮನದ ದೋಷದಿಂದ ಮುಕ್ತನಾಗುವನು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ
ಶ್ರೀ ಸ್ಕಾಂದಮಹಾಪುರಾಣದ ಐದನೆಯ ಆವಂತ್ಯಖಂಡದ ಮೂರನೆಯ ರೇವಾಖಂಡದಲ್ಲಿ
"ಶಕ್ರತೀರ್ಥಮಾಹಾತ್ಮ್ಯವರ್ಣನ"ವೆಂಬ
ನೂರಮೂವತ್ತೆಂಟನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

## ಅಥೈಕೋನಚತ್ವಾರಿಂಶದಧಿಕಶತತಮೋಽಧ್ಯಾಯಃ

### ಸೋಮತೀರ್ಥಮಾಹಾತ್ಮ್ಯವರ್ಣನಂ

ಶ್ರೀ ಮಾರ್ಕಂಡೇಯ ಉವಾಚ :—

ತತೋ ಗಚ್ಛೇನ್ಮಹಾರಾಜ ಸೋಮತೀರ್ಥಮನುತ್ತಮಂ ।
ಯತ್ರ ಸೋಮಸ್ತಪಸ್ತಪ್ತ್ವಾ ನಕ್ಷತ್ರಪಥಮಾಸ್ಥಿತಃ ॥ ೧ ॥
ತತ್ರ ತೀರ್ಥೇ ತು ಯಃ ಸ್ನಾಯಾದಾಚಮ್ಯ ವಿಧಿಪೂರ್ವಕಂ ।
ಕೃತಜಾಪ್ಯೋ ರವಿಂ ಧ್ಯಾಯೇತ್ತಸ್ಯ ಪುಣ್ಯಫಲಂ ಶೃಣು ॥ ೨ ॥
ಋಗ್ವೇದಯಜುರ್ವೇದಾಭ್ಯಾಂ ಸಾಮವೇದೇನ ಭಾರತ ।
ಜಪತೋ ಯತ್ಫಲಂ ಪ್ರೋಕ್ತಂ ಗಾಯತ್ರ್ಯಾ ಚಾತ್ರ ತತ್ಫಲಂ ॥ ೩ ॥
ತತ್ರ ತೀರ್ಥೇ ತು ಯೋ ಭಕ್ತ್ಯಾ ಬ್ರಾಹ್ಮಣಾನ್ಭೋಜಯೇಚ್ಛುಚಿಃ ।
ತೇನ ಸಮ್ಯಗ್ವಿಧಾನೇನ ಕೋಟಿರ್ಭವತಿ ಭೋಜಿತಾ ॥ ೪ ॥
ಪಾದುಕೋಪಾನಹೌ ಛತ್ರಂ ವಸ್ತ್ರಕಂಬಲವಾಜಿನಃ ।
ಯೋ ದತ್ತೇ ವಿಪ್ರಮುಖ್ಯಾಯ ತಸ್ಯ ತತ್ಕೋಟಿಸಂಮಿತಂ ॥ ೫ ॥

---

## ಕನ್ನಡದ ಅನುವಾದ

### ಸೋಮತೀರ್ಥಮಾಹಾತ್ಮ್ಯವರ್ಣನ

೧. ಮಾರ್ಕಂಡೇಯನು ಹೇಳುತ್ತಾನೆ:—ಮಹಾರಾಜನೆ! ಬಳಿಕ ಉತ್ತಮವಾದ ಸೋಮತೀರ್ಥಕ್ಕೆ ಹೋಗಬೇಕು. ಇಲ್ಲಿ ತಪಸ್ಸನ್ನು ಮಾಡಿದುದರಿಂದಲೇ ಚಂದ್ರನು ನಕ್ಷತ್ರಮಾರ್ಗದಲ್ಲಿ ಸಂಚರಿಸುವವನಾದನು.

೨–೩. ಆ ತೀರ್ಥದಲ್ಲಿ ವಿಧಿಯನ್ನನುಸರಿಸಿ ಆಚಮನವನ್ನು ಮಾಡಿ, ಸ್ನಾನವಂಗೈದು ಜಪಪುರಶ್ಚರಣೆಯೊಡನೆ ಸೂರ್ಯನನ್ನು ಧ್ಯಾನಿಸುವ ಮನುಜನ ಪುಣ್ಯಫಲವನ್ನು ಕೇಳು. ಋಗ್ವೇದ, ಯಜುರ್ವೇದ, ಸಾಮವೇದಗಳನ್ನು ಸಾಂಗವಾಗಿ ಪಠಿಸಿದವರಿಗೆ ಯಾವ ಪುಣ್ಯವುಂಟೊ, ಅದೇ ಈ ತೀರ್ಥದಲ್ಲಿ ಕೇವಲ ಗಾಯತ್ರಿಯ ಜಪಮಾತ್ರದಿಂದ ಲಭಿಸುವುದು.

೪. ಆ ತೀರ್ಥದಲ್ಲಿ ಯಾವನು ಶುದ್ಧನಾಗಿ ಭಕ್ತಿಯಿಂದ ಬ್ರಾಹ್ಮಣರಿಗೆ ಭೋಜನವನ್ನು ಮಾಡಿಸುವನೊ, ಅವನು ಮಾಡಿಸಿದ ಒಬ್ಬೊಬ್ಬ ಬ್ರಾಹ್ಮಣನ ಭೋಜನದಿಂದಲೂ ಒಂದುಕೋಟಿ ಬ್ರಾಹ್ಮಣರ ಸಂತರ್ಪಣೆಯು ಯಥಾವಿಧಿಯಾಗಿ ನಡೆದಂತಾಗುವುದು.

೫. ಹಾಗೆಯೇ ಒಬ್ಬ ಬ್ರಾಹ್ಮಣನಿಗೆ ಪಾದುಕೆಗಳು, ಪಾದರಕ್ಷೆಗಳು, ಛತ್ರಿ, ವಸ್ತ್ರ, ಕಂಬಳಿ, ಕುದುರೆ ಮುಂತಾದ ಯಾವುದನ್ನೇ ಕೊಟ್ಟರೂ ಕೋಟಿಗುಣಿತವಾಗುವುದು.

**ಸಹಸ್ರಂ ತು ಸಹಸ್ರಾಣಾಮನೂಚಾಂ ಯಸ್ತು ಭೋಜಯೇತ್ ।**
**ಏಕಸ್ಯ ಮಂತ್ರಯುಕ್ತಸ್ಯ ಕಲಾಂ ನಾರ್ಹತಿ ಷೋಡಶೀಂ ॥ ೬ ॥**
**ಏವಂ ತು ಭೋಜಯೇತ್ತತ್ರ ಬಹ್ವೃಚಂ ವೇದಪಾರಗಂ ।**
**ಶಾಖಾಂತಗಮಥಾಧ್ವರ್ಯುಂ ಛಂದೋಗಂ ವಾ ಸಮಾಪ್ತಿಗಂ ॥ ೭ ॥**
**ಅಗ್ನಿಹೋತ್ರಸಹಸ್ರಸ್ಯ ಯತ್ಫಲಂ ಪ್ರಾಪ್ಯತೇ ಬುಧೈಃ ।**
**ಸಮಂ ತದ್ವೇದವಿದುಷಾ ತೀರ್ಥೇ ಸೋಮಸ್ಯ ತತ್ಫಲಂ ॥ ೮ ॥**
**ಭೋಜಯೇದ್ಯಃ ಶತಂ ತೇಷಾಂ ಸಹಸ್ರಂ ಲಭತೇ ನರಃ ।**
**ಏಕಸ್ಯ ಯೋಗಯುಕ್ತಸ್ಯ ತತ್ಫಲಂ ಕವಯೋ ವಿದುಃ ॥ ೯ ॥**
**ಸನ್ನಿರುಧ್ಯೇಂದ್ರಿಯಗ್ರಾಮಂ ಯತ್ರ ಯತ್ರ ವಸೇನ್ಮುನಿಃ ।**
**ತತ್ರ ತತ್ರ ಕುರುಕ್ಷೇತ್ರಂ ನೈಮಿಷಂ ಪುಷ್ಕರಾಣಿ ಚ ॥ ೧೦ ॥**
**ತಸ್ಮಾತ್ಸರ್ವಪ್ರಯತ್ನೇನ ಗ್ರಹಣೇ ಚಂದ್ರಸೂರ್ಯಯೋಃ ।**
**ಸಂಕ್ರಾಂತೌ ಚ ವ್ಯತೀಪಾತೇ ಯೋಗೀ ಭೋಜ್ಯೋ ವಿಶೇಷತಃ ॥ ೧೧ ॥**

---

೬. ವೇದಜ್ಞರಲ್ಲದ ಹತ್ತು ಲಕ್ಷ ಜನರಿಗೆ ಒಬ್ಬಾತನು ಭೋಜನವನ್ನು ಮಾಡಿಸಿದರೂ, ಮಂತ್ರಯುಕ್ತನಾದ ಒಬ್ಬ ಬ್ರಾಹ್ಮಣನಿಗೆ ಮಾಡಿಸಿದ ಭೋಜನದ ಹದಿನಾರನೆಯ ಭಾಗಕ್ಕೂ ಸಮಾನವೆನಿಸುವುದಿಲ್ಲ.

೭. ಆದುದರಿಂದ ವಿಶೇಷವಾಗಿ ಆ ತೀರ್ಥದಲ್ಲಿ ವೇದಪಾರಂಗತನಾದ ಋಕ್ಶಾಖೆಯಾತನನ್ನೋ, ತನ್ನ ಶಾಖೆಯ ಪಾಠವನ್ನಾದರೂ ಕಲಿತಿರುವ ಯಜುರ್ವೇದಿಯನ್ನೋ, ಸಾಂಗಾಧ್ಯಯನವನ್ನು ಮಾಡಿದ ಸಾಮವೇದಿಯನ್ನೊ ಭೋಜನದಿಂದ ತೃಪ್ತಿಗೊಳಿಸಬೇಕು.

೮. ಒಂದು ಸಾವಿರ ಅಗ್ನಿಹೋತ್ರಗಳನ್ನು ಮಾಡಲು ಯಾವ ಫಲವನ್ನು ಪ್ರಾಜ್ಞರು ಹೊಂದುವರೊ, ಅದಕ್ಕೆ ಸಮಾನವಾದ ಫಲವನ್ನೇ ಸೋಮತೀರ್ಥದಲ್ಲಿ ವೇದವೇತ್ತನಾದ ಬ್ರಾಹ್ಮಣನ ಭೋಜನದಿಂದ ಪಡೆಯಬಹುದು.

೯. ಯಾವ ನರನು ಅಲ್ಲಿ ನೂರು ಜನರಿಗೆ ಭೋಜನವನ್ನಿಡುವನೊ, ಅವನಿಗೆ ಸಾವಿರ ಜನರ ಸಂತರ್ಪಣೆಯ ಫಲವು ಲಭಿಸುವುದು. ಆದರೆ ಅದೇ ಫಲವನ್ನೇ ಯೋಗಯುಕ್ತನಾದ ಒಬ್ಬನ ಭೋಜನದಿಂದ ಪಡೆಯಬಹುದೆಂದು ಬಲ್ಲವರು ಹೇಳುವರು.

೧೦–೧೧. ಇಂದ್ರಿಯಸಮೂಹವನ್ನು ನಿಗ್ರಹಿಸಿದ ಮಹಾಮುನಿಯು ಎಲ್ಲಿ ವಾಸಮಾಡುವನೊ, ಅಲ್ಲಿಯೇ ಕುರುಕ್ಷೇತ್ರ, ನೈಮಿಷ, ಪುಷ್ಕರಗಳೆಂಬ ಕ್ಷೇತ್ರಗಳಿರುವುವು. ಆದುದರಿಂದ ಸರ್ವಪ್ರಕಾರದಿಂದಲೂ, ಚಂದ್ರಸೂರ್ಯರ ಗ್ರಹಣಗಳಲ್ಲಿಯೂ, ಸಂಕ್ರಮಣಗಳಲ್ಲಿಯೂ, ವ್ಯತೀಪಾತ ದಿನಗಳಲ್ಲಿಯೂ ಯೋಗಿಗಳಿಗೆ ವಿಶೇಷವಾಗಿ ಭೋಜನಗಳನ್ನು ಮಾಡಿಸಬೇಕು.

ಸನ್ಯಾಸಂ ಕುರುತೇ ಯಸ್ತು ತತ್ರ ತೀರ್ಥೇ ಯುಧಿಷ್ಠಿರ ।
ವಿಮಾನೇನ ಮಹಾಭಾಗಃ ಸ ಯಾತಿ ತ್ರಿದಿವಂ ನರಃ ॥ ೧೨ ॥
ಸೋಮಸ್ಯಾನುಚರೋ ಭೂತ್ವಾ ತೇನೈವ ಸಹ ಮೋದತೇ ॥ ೧೩ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ
ಪಂಚಮೇ ಆವಂತ್ಯಖಂಡೇ ತೃತೀಯೇ ರೇವಾಖಂಡೇ
"ಸೋಮತೀರ್ಥಮಾಹಾತ್ಮ್ಯವರ್ಣನಂ"
ನಾಮೈಕೋನಚತ್ವಾರಿಂಶದಧಿಕಶತತಮೋಽಧ್ಯಾಯಃ

---

೧೨. ಯುಧಿಷ್ಠಿರನೆ! ಆ ತೀರ್ಥದಲ್ಲಿ ಯಾವನು ವಿಧಿಯಿಂದ ಸನ್ಯಾಸಾಶ್ರಮವನ್ನು ಸ್ವೀಕರಿಸುವನೊ, ಆ ಮಹಾಭಾಗ್ಯಶಾಲಿಯಾದ ಮಾನವನು ದಿವ್ಯ ವಿಮಾನದಲ್ಲಿ ಕುಳಿತು ಸ್ವರ್ಗಲೋಕವನ್ನು ಸೇರುವನು.

೧೩. ಮತ್ತು ಚಂದ್ರನ ಅನುಚರನಾಗಿ ಆತನೊಡನೆಯೇ ಭೋಗಗಳನ್ನನುಭವಿಸುತ್ತಿರುವನು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ
ಶ್ರೀ ಸ್ಕಾಂದಮಹಾಪುರಾಣದ ಐದನೆಯ ಆವಂತ್ಯಖಂಡದ ಮೂರನೆಯ ರೇವಾಖಂಡದಲ್ಲಿ
"ಸೋಮತೀರ್ಥಮಾಹಾತ್ಮ್ಯವರ್ಣನ"ವೆಂಬ
ನೂರಮೂವತ್ತೊಂಬತ್ತನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

## ಅಥ ಚತ್ವಾರಿಂಶದಧಿಕಶತತಮೋಽಧ್ಯಾಯಃ

### ನಂದಾಹ್ರದತೀರ್ಥಮಾಹಾತ್ಮ್ಯವರ್ಣನಂ

**ಶ್ರೀ ಮಾರ್ಕಂಡೇಯ ಉವಾಚ :—**

**ತತೋ ಗಚ್ಛೇನ್ಮಹಾರಾಜ ನಂದಾಹ್ರದಮನುತ್ತಮಂ ।**
**ಯತ್ರ ಸಿದ್ಧಾ ಮಹಾಭಾಗಾ ನಂದಾದೇವೀ ವರಪ್ರದಾ ॥ ೧ ॥**
**ಮಹಿಷಾಸುರೇ ಮಹಾಕಾಯೇ ಪುರಾ ದೇವಭಯಂಕರೇ ।**
**ಶೂಲಿನ್ಯಾ ಶೂಲಭಿನ್ನಾಂಗೇ ಕೃತೇದಾನವಸತ್ತಮೇ ॥ ೨ ॥**
**ಯೇನೈಕಾದಶರುದ್ರಾಶ್ಚ ಹ್ಯಾದಿತ್ಯಾಃ ಸಮರುದ್ಗಣಾಃ ।**
**ವಸವೋ ವಾಯುನಾ ಸಾರ್ಧಂ ಚಂದ್ರಾದಿತ್ಯೌ ಸುರೇಶ್ವರ ॥ ೩ ॥**
**ಬಲಿನಾ ನಿರ್ಜಿತಾ ಯೇನ ಬ್ರಹ್ಮವಿಷ್ಣುಮಹೇಶ್ವರಾಃ ।**
**ಸಂಗ್ರಾಮೇ ಸುಮಹಾಘೋರೇ ಕೃತೇ ದೇವಭಯಂಕರೇ ॥ ೪ ॥**
**ಕೃತ್ವಾ ತತ್ಕದನಂ ಘೋರಂ ನಂದಾದೇವೀ ಸುರೇಶ್ವರೀ ।**
**ಯಸ್ಮಾತ್ ಸ್ನಾತಾ ವಿಶಾಲಾಕ್ಷೀ ತೇನ ನಂದಾಹ್ರದಃ ಸ್ಮೃತಃ ॥ ೫ ॥**

---

### ಕನ್ನಡದ ಅನುವಾದ

#### ನಂದಾಹ್ರದತೀರ್ಥಮಾಹಾತ್ಮ್ಯವರ್ಣನ

೧. ಮಾರ್ಕಂಡೇಯನು ಹೇಳುತ್ತಾನೆ:—ಧರ್ಮರಾಜನೆ! ಬಳಿಕ ನಂದಾಹ್ರದವೆಂಬ ತೀರ್ಥವನ್ನು ಸೇವಿಸಬೇಕು. ಅಲ್ಲಿ ಮಹಾಭಾಗ್ಯವತಿಯೂ ವರಪ್ರದಳೂ ಆದ ನಂದಾದೇವಿಯು ಸಿದ್ಧಿಯನ್ನು ಪಡೆದಳು.

೨. ಹಿಂದೆ ದೊಡ್ಡ ದೇಹದವನೂ, ದೇವತೆಗಳಿಗೆ ಭಯಕಾರಕನೂ, ದಾನವೋತ್ತಮನೂ ಆದ ಮಹಿಷಾಸುರನನ್ನು ಶೂಲಪಾಣಿಯಾದ ದೇವಿಯು ತನ್ನ ತ್ರಿಶೂಲದಿಂದ ಕತ್ತರಿಸಿದಳು.

೩–೪. ಆ ರಾಕ್ಷಸನು ಏಕಾದಶರುದ್ರರನ್ನೂ, ದ್ವಾದಶಾದಿತ್ಯರನ್ನೂ, ಸಪ್ತಮರುತ್ತುಗಳನ್ನೂ, ಅಷ್ಟವಸುಗಳನ್ನೂ, ವಾಯುವನ್ನೂ, ಸೂರ್ಯಚಂದ್ರರನ್ನೂ, ಮಹೇಂದ್ರನನ್ನೂ, ಬ್ರಹ್ಮವಿಷ್ಣುಮಹೇಶ್ವರರನ್ನೂ ತನ್ನ ಪರಾಕ್ರಮದಿಂದ ಜಯಿಸಿದ್ದನು. ದೇವತೆಗಳಿಗೆ ಭಯಂಕರನಾದ ಅವನೊಡನೆ ದೇವಿಯು ಮಹಾಘೋರವಾದ ಯುದ್ಧವನ್ನು ಮಾಡಿದಳು.

೫. ದೇವೇಶ್ವರಿಯೂ ವಿಶಾಲನೇತ್ರೆಯೂ ಆದ ನಂದಾದೇವಿಯು ಆ ಮಹಾಕದನವನ್ನು ಮುಗಿಸಿ ಇಲ್ಲಿ ಸ್ನಾನವನ್ನು ಮಾಡಿದುದರಿಂದ ಈ ತೀರ್ಥಕ್ಕೆ ನಂದಾಹ್ರದವೆಂದು ಹೆಸರಾಯಿತು.

ತತ್ರ ತೀರ್ಥೇ ತು ಯಃ ಸ್ನಾತ್ವಾ ನಂದಾಮುದ್ದಿಶ್ಯ ಭಾರತ ।
ದದಾತಿ ದಾನಂ ವಿಪ್ರೇಭ್ಯಃ ಸೋಽಶ್ವಮೇಧಫಲಂ ಲಭೇತ್ ॥ ೬ ॥
ಭೈರವಂ ಚೈವ ಕೇದಾರಂ ತಥಾ ರುದ್ರಂ ಮಹಾಲಯಂ ।
ನಂದಾಹ್ರದಶ್ಚತುರ್ಥಃ ಸ್ಯಾತ್ಪಂಚಮಂ ಭುವಿ ದುರ್ಲಭಂ ॥ ೭ ॥
ಬಹವಸ್ತಂ ನ ಜಾನಂತಿ ಕಾಮರಾಗಸಮನ್ವಿತಾಃ ।
ನರ್ಮದಾಯಾಂ ಹ್ರದಂ ಪುಣ್ಯಂ ಸರ್ವಪಾತಕನಾಶನಂ ॥ ೮ ॥
ತತ್ರ ತೀರ್ಥೇ ತು ಯಃ ಸ್ನಾತ್ವಾ ನಂದಾಂ ದೇವೀಂ ಪ್ರಪೂಜಯೇತ್ ।
ಕಿಂ ತಸ್ಯ ಹಿಮವನ್ಮಧ್ಯಗಮನೇನ ಪ್ರಯೋಜನಂ ॥ ೯ ॥
ಪರಮಾರ್ಥಮವಿಜ್ಞಾಯ ಪರ್ಯಟಂತಿ ತಮೋವೃತಾಃ ।
ತೇಷಾಂ ಸಮಾಗಮೋ ಪಾರ್ಥ ಶ್ರಮ ಏವ ಹಿ ಕೇವಲಂ ॥ ೧೦ ॥
ಪೃಥಿವ್ಯಾಂ ಸಾಗರಾಂತಾಯಾಂ ಸ್ನಾನದಾನೇನ ಯತ್ಫಲಂ ।
ತತ್ಫಲಂ ಸಮವಾಪ್ನೋತಿ ಸ್ನಾತ್ವಾ ನಂದಾಹ್ರದೇ ನೃಪ ॥ ೧೧ ॥

**ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಽಶೀತಿಸಾಹಸ್ರ್ಯಾಂ ಸಂಹಿತಾಯಾಂ ಪಂಚಮೇ ಆವಂತ್ಯಖಂಡೇ ತೃತೀಯೇ ರೇವಾಖಂಡೇ "ನಂದಾಹ್ರದತೀರ್ಥಮಾಹಾತ್ಮ್ಯವರ್ಣನಂ" ನಾಮ ಚತ್ವಾರಿಂಶದಧಿಕಶತತಮೋಽಧ್ಯಾಯಃ**

---

೬-೮. ಅಯ್ಯಾ ಯುಧಿಷ್ಠಿರನೆ! ಆ ತೀರ್ಥದಲ್ಲಿ ಸ್ನಾನವನ್ನು ಮಾಡಿ ನಂದಾ ದೇವಿಯ ಹೆಸರಿನಲ್ಲಿ ಬ್ರಾಹ್ಮಣರಿಗೆ ದಾನವನ್ನು ಕೊಡಲು ಅಶ್ವಮೇಧಯಜ್ಞದ ಫಲವು ಲಭಿಸುವುದು. ಭೈರವಕ್ಷೇತ್ರ, ಕೇದಾರ, ಮಹಾಲಯ ರುದ್ರಕ್ಷೇತ್ರ, ನಾಲ್ಕನೆಯ ಈ ನಂದಾಹ್ರದ-ಇವುಗಳಿಗೆ ಸಮಾನವೆನಿಸಿದ ಐದನೆಯ ತೀರ್ಥವು ಭೂಲೋಕ ದಲ್ಲಿಲ್ಲ. ಕಾಮರಾಗಗಳಲ್ಲಿ ಆಸಕ್ತರಾಗಿರುವ ಅನೇಕರು ನರ್ಮದೆಯಲ್ಲಿರುವ ಪುಣ್ಯಪ್ರದವೂ, ಸಕಲ ಪಾಪನಾಶಕವೂ ಆದ ಈ ಹ್ರದವನ್ನು ತಿಳಿಯಲಾರರು.

೯-೧೦. ಈ ತೀರ್ಥದಲ್ಲಿ ಮಿಂದು ಯಾವನು ನಂದಾದೇವಿಯನ್ನು ಪೂಜಿಸುವನೊ, ಅವನಿಗೆ ಹಿಮವತ್ಪರ್ವತದ ಮಧ್ಯದ ಕೇದಾರ ಬದರೀಕ್ಷೇತ್ರ ಗಳ ಸೇವೆಯಿಂದಾಗಬೇಕಾದುದೇನು? ಪರಮ ತತ್ತ್ವವನ್ನು ತಿಳಿಯದೆ ಜನರು ತಮೋಗುಣಕ್ಕೆ ಸಿಕ್ಕಿ ತಿರುಗುತ್ತಿರುವರು. ಧರ್ಮರಾಜನೆ! ಅಂತಹವರನ್ನು ನೋಡಲು ಹೋಗುವುದು ಕೇವಲ ಶ್ರಮವಲ್ಲದೆ ಬೇರೆಯಲ್ಲ.

೧೧. ಸಮುದ್ರವೇಷ್ಟಿತವಾದ ಈ ಭೂಮಂಡಲದ ಸಕಲ ತೀರ್ಥಗಳಲ್ಲಿಯೂ ಸ್ನಾನದಾನಗಳನ್ನು ಮಾಡುವುದರಿಂದ ಯಾವ ಫಲವುಂಟೊ, ಅದೆಲ್ಲವನ್ನೂ ಈ ನಂದಾಹ್ರದವೊಂದರಲ್ಲಿ ಸ್ನಾನಮಾಡುವುದರಿಂದಲೇ ಪಡೆಯಬಹುದು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ ಶ್ರೀ ಸ್ಕಾಂದಮಹಾಪುರಾಣದ ಐದನೆಯ ಆವಂತ್ಯಖಂಡದ ಮೂರನೆಯ ರೇವಾಖಂಡದಲ್ಲಿ "ನಂದಾಹ್ರದತೀರ್ಥವರ್ಣನ"ವೆಂಬ ನೂರನಲವತ್ತನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

# ಅಷ್ಟೈಕಚತ್ವಾರಿಂಶದಧಿಕಶತತಮೋಽಧ್ಯಾಯಃ

## ತಾಪೇಶ್ವರತೀರ್ಥಮಾಹಾತ್ಮ್ಯವರ್ಣನಂ

ಶ್ರೀ ಮಾರ್ಕಂಡೇಯ ಉವಾಚ :—

ತತೋ ಗಚ್ಛೇನ್ಮಹೀಪಾಲ ತಾಪೇಶ್ವರಮನುತ್ತಮಂ ।
ಯತ್ರ ಸಾ ಹರಿಣೀ ಸಿದ್ಧಾ ವ್ಯಾಧಭೀತಾ ನರೇಶ್ವರ ॥ ೧ ॥
ಜಲೇ ಪ್ರಕ್ಷಿಪ್ಯ ಗಾತ್ರಾಣಿ ಹ್ಯಂತರಿಕ್ಷಂ ಗತಾ ತು ಸಾ ।
ವ್ಯಾಧೋ ವಿಸ್ಮಿತಚಿತ್ತಸ್ತು ತಾಂ ಮೃಗೀಮವಲೋಕ್ಯ ಚ ॥ ೨ ॥
ವಿಮುಚ್ಯ ಸಶರಂ ಚಾಪಂ ಪ್ರಾರೇಭೇ ತಪ ಉತ್ತಮಂ ।
ದಿವ್ಯಂ ವರ್ಷಸಹಸ್ರಂ ತು ವ್ಯಾಧೇನಾಚರಿತಂ ತಪಃ ॥ ೩ ॥
ಅತೀತೇ ತು ತತಃ ಕಾಲೇ ಪರಿತುಷ್ಟೋ ಮಹೇಶ್ವರಃ ।
ವರಂ ಬ್ರೂಹಿ ಮಹಾವ್ಯಾಧ ಯತ್ತೇ ಮನಸಿ ರೋಚತೇ ॥ ೪ ॥

---

## ಕನ್ನಡದ ಅನುವಾದ

### ತಾಪೇಶ್ವರತೀರ್ಥಮಾಹಾತ್ಮ್ಯವರ್ಣನ

೧. ಮಾರ್ಕಂಡೇಯನು ಹೇಳುತ್ತಾನೆ :—ಮಹೀನಾಥನೆ ! ಬಳಿಕ ತಾಪೇಶ್ವರವೆಂಬ ಮಹಾತೀರ್ಥವನ್ನು ಸೇರಬೇಕು. ಅಲ್ಲಿ ಬೇಡರವನ ಭಯದಿಂದ ಕೂಡಿದ ಹೆಣ್ಣು ಜಿಂಕೆಯೊಂದು ಸಿದ್ಧಿಯನ್ನು ಪಡೆಯಿತು.

೨. ಆ ಜಿಂಕೆಯು ಜಲದಲ್ಲಿ ದೇಹವನ್ನು ತ್ಯಜಿಸಿ ಅಂತರಿಕ್ಷಮಾರ್ಗದಲ್ಲಿ ಹೋದುದನ್ನು ಕಂಡು ಆ ವ್ಯಾಧನು ಅತ್ಯಂತ ಕುತೂಹಲಿತಮಾನಸನಾದನು.

೩. ಒಡನೆಯೆ ಅವನು ಬಿಲ್ಲುಬಾಣಗಳನ್ನು ಬಿಸುಟು ಅಲ್ಲಿಯೇ ಉತ್ತಮವಾದ ತಪಸ್ಸನ್ನು ಮಾಡಲಾರಂಭಿಸಿದನು. ಹೀಗೆ ವ್ಯಾಧನು ಒಂದು ಸಾವಿರ ದಿವ್ಯವರ್ಷಗಳವರೆಗೂ ತಪಸ್ಸನ್ನು ಮಾಡಿದನು.

೪. ಆ ಕಾಲವು ಕಳೆಯಲು ಮಹಾದೇವನು ಸಂತುಷ್ಟನಾಗಿ "ಮಹಾವ್ಯಾಧನೆ! ನಿನ್ನ ಮನಸ್ಸಿನಲ್ಲಿರುವ ಅಭಿಲಾಷೆಯನ್ನು ಹೇಳು" ಎಂದನು.

ವ್ಯಾಧ ಉವಾಚ :—

ಯದಿ ತುಷ್ಟೋಽಸಿ ದೇವೇಶ ಯದಿ ದೇಯೋ ವರೋ ಮಮ ।
ತವ ಪಾರ್ಶ್ವೇ ಮಹಾದೇವ ವಾಸೋ ಮೇ ಪ್ರತಿದೀಯತಾಂ ॥ ೫ ॥

ಈಶ್ವರ ಉವಾಚ :—

ಏವಂ ಭವತು ತೇ ವ್ಯಾಧ ಯಸ್ತ್ವಯಾ ಕಾಂಕ್ಷಿತೋ ವರಃ ।
ದೇವದೇವೋ ಮಹಾದೇವ ಇತ್ಯುಕ್ತ್ವಾಂತರಧೀಯತ ॥ ೬ ॥
ಗತೇ ಚಾದರ್ಶನಂ ದೇವೇ ಸ್ಥಾಪಯಿತ್ವಾ ಮಹೇಶ್ವರಂ ।
ಪೂಜಯಿತ್ವಾ ವಿಧಾನೇನ ಗತೋ ವ್ಯಾಧಸ್ತತೋ ದಿವಂ ॥ ೭ ॥
ತದಾ ಪ್ರಭೃತಿ ತತ್ತೀರ್ಥಂ ತ್ರಿಷು ಲೋಕೇಷು ವಿಶ್ರುತಂ ।
ವ್ಯಾಧಾಽನುತಾಪಸಂಜಾತಂ ತಾಪೇಶ್ವರಮಿತಿಶ್ರುತಂ ॥ ೮ ॥
ತತ್ರ ತೀರ್ಥೇ ತು ಯಃ ಸ್ನಾತ್ವಾ ಸಂಪೂಜಯತಿ ಶಂಕರಂ ।
ಶಿವಲೋಕಮವಾಪ್ನೋತಿ ಮಾಮುವಾಚ ಮಹೇಶ್ವರಃ ॥ ೯ ॥
ಯೇ ಸ್ನಾತಾ ನರ್ಮದಾತೋಯೇ ತೀರ್ಥೇ ತಾಪೇಶ್ವರೇ ನರಾಃ ।
ತಾಪತ್ರಯವಿಮುಕ್ತಾಸ್ತೇ ನಾಽತ್ರ ಕಾರ್ಯಾ ವಿಚಾರಣಾ ॥ ೧೦ ॥

---

೫. ವ್ಯಾಧನು ಹೇಳುತ್ತಾನೆ:—ದೇವನಾಯಕನಾದ ಪರಮೇಶ್ವರನೆ! ನೀನು ಸಂತುಷ್ಟನಾಗಿ ವರವನ್ನೀಯುವೆಯಾದರೆ ಕೇಳುವೆನು. ನಾನು ಯಾವಾಗಲೂ ನಿನ್ನ ಪಾರ್ಶ್ವದಲ್ಲಿಯೇ ಇರುವಂತೆ ಅನುಗ್ರಹಿಸು.

೬. ಈಶ್ವರನು ಹೇಳುತ್ತಾನೆ:—ವ್ಯಾಧನೆ! ನೀನು ಕೇಳಿದ ವರವೇ ನಿನಗೆ ಲಭಿಸಲಿ. ಇಂತೆಂದು ನುಡಿದು ಮಹಾದೇವನು ಅದೃಶ್ಯನಾದನು.

೭. ಮಹೇಶ್ವರನು ಹೊರಟುಹೋಗಲು ಆ ವ್ಯಾಧನು ಅಲ್ಲಿ ಒಂದು ಲಿಂಗವನ್ನು ಪ್ರತಿಷ್ಠಿಸಿ ಯಥಾವಿಧಿಯಾದ ಪೂಜೆಯನ್ನು ಮಾಡಿ ಸ್ವರ್ಗವಾಸಿ ಯಾದನು.

೮. ಅಂದಿನಿಂದ ಆ ತೀರ್ಥವು ಮೂರು ಲೋಕಗಳಲ್ಲಿಯೂ ಪ್ರಖ್ಯಾತ ವಾಗಿರುವುದು. ವ್ಯಾಧನ ಸಂತಾಪದಿಂದುಂಟಾದುದರಿಂದ ಆ ತೀರ್ಥವನ್ನು ತಾಪೇಶ್ವರವೆಂದು ಕರೆಯುವರು.

೯. ಆ ತೀರ್ಥದಲ್ಲಿ ಸ್ನಾನವನ್ನು ಮಾಡಿ ಯಾವನು ಶಿವಪೂಜೆಯನ್ನು ನೆರವೇರಿಸುವನೊ, ಅವನು ಶಿವಲೋಕಕ್ಕೆ ಹೋಗುವನೆಂದು ಮಹಾದೇವನೇ ನನಗೆ ಹೇಳಿರುವನು.

೧೦. ತಾಪೇಶ್ವರತೀರ್ಥಕ್ಕೆ ಬಂದು ಯಾರು ನರ್ಮದಾನದಿಯ ನೀರಿನಲ್ಲಿ ಸ್ನಾನವನ್ನು ಮಾಡುವರೊ, ಅವರಿಗೆ ಆಧ್ಯಾತ್ಮಿಕ, ಆಧಿಭೌತಿಕ, ಆಧಿದೈವಿಕ ಗಳಾದ ತಾಪಗಳು ಕಳೆಯುವುವೆಂಬುದರಲ್ಲಿ ಸಂದೇಹವಿಲ್ಲ.

ಅಷ್ಟಮ್ಯಾಂ ಚ ಚತುರ್ದಶ್ಯಾಂ ತೃತೀಯಾಯಾಂ ವಿಶೇಷತಃ ।
ಸ್ನಾನಂ ಸಮಾಚರೇನ್ನಿತ್ಯಂ ಸರ್ವಪಾತಕಶಾಂತಯೇ ॥ ೧೧ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ
ಪಂಚಮೇ ಆವಂತ್ಯಖಂಡೇ ತೃತೀಯೇ ರೇವಾಖಂಡೇ
"ತಾಪೇಶ್ವರತೀರ್ಥಮಾಹಾತ್ಮ್ಯವರ್ಣನಂ"
ನಾಮ್ನೈಕಚತ್ವಾರಿಂಶದಧಿಕಶತತಮೋಽಧ್ಯಾಯಃ

---

೧೧. ಪ್ರತಿಪಕ್ಷದ ಅಷ್ಟಮಿ, ಚತುರ್ದಶಿ ಮತ್ತು ತೃತೀಯಾ ತಿಥಿಗಳಲ್ಲಿ ವಿಶೇಷವಾಗಿ ಯಾವಜ್ಜೀವವೂ ಸಮಸ್ತ ಪಾಪಗಳ ನಿವೃತ್ತಿಗಾಗಿ ಈ ತೀರ್ಥದಲ್ಲಿ ಸ್ನಾನವನ್ನು ಮಾಡುತ್ತಿರಬೇಕು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ
ಶ್ರೀ ಸ್ಕಾಂದಮಹಾಪುರಾಣದ ಐದನೆಯ ಆವಂತ್ಯಖಂಡದ ಮೂರನೆಯ ರೇವಾಖಂಡದಲ್ಲಿ
"ತಾಪೇಶ್ವರತೀರ್ಥಮಾಹಾತ್ಮ್ಯವರ್ಣನ"ವೆಂಬ
ನೂರನಲವತ್ತೊಂದನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

# ಅಥ ದ್ವಿಚತ್ವಾರಿಂಶದಧಿಕಶತತಮೋಽಧ್ಯಾಯಃ

## ರುಕ್ಮಿಣೀತೀರ್ಥಮಾಹಾತ್ಮ್ಯವರ್ಣನಂ

ಶ್ರೀ ಮಾರ್ಕಂಡೇಯ ಉವಾಚ :—

ತತೋ ಗಚ್ಛೇನ್ಮಹಾರಾಜ ರುಕ್ಮಿಣೀತೀರ್ಥಮುತ್ತಮಂ ।
ಯತ್ರೈವ ಸ್ನಾನಮಾತ್ರೇಣ ರೂಪವಾನ್ ಸುಭಗೋ ಭವೇತ್ ॥ ೧ ॥
ಅಷ್ಟಮ್ಯಾಂ ಚ ಚತುರ್ದಶ್ಯಾಂ ತೃತೀಯಾಯಾಂ ವಿಶೇಷತಃ ।
ಸ್ನಾನಂ ಸಮಾಚರೇತ್ತತ್ರ ನಚೇಹ ಜಾಯತೇ ಪುನಃ ॥ ೨ ॥
ಯಃ ಸ್ನಾತ್ವಾ ರುಕ್ಮಿಣೀತೀರ್ಥೇ ದಾನಂ ದದ್ಯಾತ್ತು ಕಾಂಚನಂ ।
ತತ್ತೀರ್ಥಸ್ಯ ಪ್ರಭಾವೇನ ಶೋಕಂ ನಾಪ್ನೋತಿ ಮಾನವಃ ॥ ೩ ॥

ಯುಧಿಷ್ಠಿರ ಉವಾಚ :—

ತೀರ್ಥಸ್ಯಾಽಸ್ಯ ಕಥಂ ಜಾತೋ ಮಹಿಮೋದ್ಯ ಮುನೀಶ್ವರ ।
ರೂಪಸೌಭಾಗ್ಯದಂ ಯೇನ ತೀರ್ಥಮೇತದ್ಬ್ರವೀಹಿ ಮೇ ॥ ೪ ॥

ಮಾರ್ಕಂಡೇಯ ಉವಾಚ :—

ಕಥಯಾಮಿ ಯಥಾವೃತ್ತಮಿತಿಹಾಸಂ ಪುರಾತನಂ ।
ಕಥಿತಂ ಪೂರ್ವತೋ ವೃದ್ಧೈಃ ಪಾರಂಪರ್ಯೇಣ ಭಾರತ ॥ ೫ ॥

---

## ಕನ್ನಡದ ಅನುವಾದ

### ರುಕ್ಮಿಣೀತೀರ್ಥಮಾಹಾತ್ಮ್ಯವರ್ಣನ

೧. ಮಾರ್ಕಂಡೇಯನು ಹೇಳುತ್ತಾನೆ:—ಮಹಾರಾಜನೆ! ಬಳಿಕ ರುಕ್ಮಿಣೀ ತೀರ್ಥವೆಂಬ ಉತ್ತಮ ತೀರ್ಥವನ್ನು ಸೇವಿಸಬೇಕು. ಅಲ್ಲಿ ಸ್ನಾನವನ್ನು ಮಾಡಿದ ಮಾತ್ರದಿಂದಲೇ ಮಾನವನು ಸುಂದರನೂ, ಸೌಭಾಗ್ಯವಂತನೂ ಆಗುವನು.

೨. ವಿಶೇಷವಾಗಿ ಅಲ್ಲಿ ತೃತೀಯೆ, ಅಷ್ಟಮಿ ಮತ್ತು ಚತುರ್ದಶಿಗಳ ತಿಥಿಗಳಲ್ಲಿ ಸ್ನಾನವನ್ನು ಮಾಡಿದವನಿಗೆ ಪುನರ್ಜನ್ಮವಿಲ್ಲ.

೩. ಯಾವ ಮಾನವನು ರುಕ್ಮಿಣೀತೀರ್ಥದಲ್ಲಿ ಮಿಂದು ಸ್ವಲ್ಪವಾದರೂ ಹಿರಣ್ಯವನ್ನು ದಾನಮಾಡುವನೊ, ಅವನೆಂದಿಗೂ ದುಃಖಭಾಗಿಯಾಗುವುದಿಲ್ಲ.

೪. ಯುಧಿಷ್ಠಿರನು ಹೇಳುತ್ತಾನೆ:—ಮುನೀಶ್ವರನೆ! ಈ ತೀರ್ಥಕ್ಕೆ ಸುರೂಪ ಸೌಭಾಗ್ಯಗಳನ್ನು ಕೊಡುವ ಮಹಾಮಹಿಮೆಯು ಹೇಗೆ ಉಂಟಾಯಿತೆಂಬುದನ್ನು ನನಗೆ ತಿಳಿಸು.

೫. ಮಾರ್ಕಂಡೇಯನು ಹೇಳುತ್ತಾನೆ:—ಬಹಳ ಹಿಂದೆ ನಡೆದ ಒಂದು ವಿಷಯವನ್ನು ಯಥಾರ್ಥವಾಗಿ ವಿವರಿಸುವೆನು. ಇದನ್ನು ವೃದ್ಧರು ಪರಂಪರೆಯಿಂದ ಹೇಳುತ್ತ ಬಂದಿರುವರು.

ತಂ ತೇಽಹಂ ಸಂಪ್ರವಕ್ಷ್ಯಾಮಿ ಶೃಣುಷ್ವೈಕಾಗ್ರಮಾನಸಃ ।
ನಗರಂ ಕುಂಡಿನಂ ನಾಮ ಭೀಷ್ಮಕೋ ಪರಿಪಾತಿ ಹಿ ॥ ೬ ॥
ಹಸ್ತ್ಯಶ್ವರಥಸಂಪನ್ನೋ ಧನಾಢ್ಯೋಽತಿಪ್ರತಾಪವಾನ್ ।
ಸ್ತ್ರೀಸಹಸ್ರಸ್ಯ ಮಧ್ಯಸ್ಥಃ ಕುರುತೇ ರಾಜ್ಯಮುತ್ತಮಂ ॥ ೭ ॥
ತಸ್ಯ ಭಾರ್ಯಾ ಮಹಾದೇವೀ ಪ್ರಾಣೇಭ್ಯೋಽಪಿ ಗರೀಯಸೀ ।
ತಸ್ಯಾಮುತ್ಪಾದಯಾಮಾಸ ಪುತ್ರಮೇಕಂ ಚ ರುಕ್ಮಕಂ ॥ ೮ ॥
ದ್ವಿತೀಯಾ ತನಯಾ ಜಜ್ಞೇ ರುಕ್ಮಿಣೀ ನಾಮ ನಾಮತಃ ।
ತದಾಽಶರೀರಿಣೀ ವಾಚಾ ರಾಜಾನಂ ತಮುವಾಚ ಹ ॥ ೯ ॥
ಚತುರ್ಭುಜಾಯ ದಾತವ್ಯಾ ಕನ್ಯೇಯಂ ಭುವಿ ಭೀಷ್ಮಕ ।
ಏವಂ ತದ್ವಚನಂ ಶ್ರುತ್ವಾ ಜಹರ್ಷ ಪ್ರಿಯಯಾ ಸಹ ॥ ೧೦ ॥
ಬ್ರಾಹ್ಮಣೈಃ ಸಹ ವಿದ್ವದ್ಭಿಃ ಪ್ರವಿಷ್ಟಃ ಸೂತಿಕಾಗೃಹಂ ।
ಸ್ವಸ್ತಿಕಂ ವಾಚಯಿತ್ವಾಽಸ್ಯಾಶ್ಚಕ್ರೇ ನಾಮೇತಿ ರುಕ್ಮಿಣೀ ॥ ೧೧ ॥
ಯತಃ ಸುವರ್ಣತಿಲಕೋ ಜನ್ಮನಾ ಸಹ ಭಾರತ ।
ತತಃ ಸಾ ರುಕ್ಮಿಣೀ ನಾಮ ಬ್ರಾಹ್ಮಣೈಃ ಕೀರ್ತಿತಾ ತದಾ ॥ ೧೨ ॥

---

೬. ನಾನು ಹೇಳುವ ಕಥೆಯನ್ನು ಏಕಾಗ್ರಚಿತ್ತದಿಂದ ಕೇಳು. ಕುಂಡಿನವೆಂಬ ರಾಜಧಾನಿಯನ್ನು ಭೀಷ್ಮಕಮಹಾರಾಜನು ಪರಿಪಾಲಿಸುತ್ತಿದ್ದನು.

೭–೮. ಆನೆ, ಕುದುರೆ, ರಥಗಳ ಬಲವುಳ್ಳವನೂ, ಮಹಾಧನಿಕನೂ, ಅತ್ಯಂತ ಬಲಶಾಲಿಯೂ, ಆಗಿ ಆತನು ಸಾವಿರಾರು ಅಂತಃಪುರದ ಸ್ತ್ರೀಯರಿಂದ ಕೂಡಿ ರಾಜ್ಯವನ್ನು ಚೆನ್ನಾಗಿ ಪಾಲಿಸುತ್ತಿದ್ದನು. ಆತನಿಗೆ ಪ್ರಾಣಗಳಿಗಿಂತಲೂ ಪ್ರಿಯಳಾದ ಮಹಾದೇವಿಯೆಂಬ ಪಟ್ಟಮಹಿಷಿಯಿದ್ದಳು. ಆಕೆಯಲ್ಲಿ ಆತನು ರುಕ್ಮನೆಂಬ ಒಬ್ಬ ಮಗನನ್ನು ಪಡೆದನು.

೯. ಬಳಿಕ ಎರಡನೆಯ ರುಕ್ಮಿಣಿಯೆಂಬ ಹೆಸರಿನ ಹೆಣ್ಣುಮಗಳು ಜನಿಸಿದಳು. ಆಗ ಒಂದು ಅಶರೀರವಾಣಿಯು ಆ ರಾಜನಿಗೆ ಇಂತೆಂದು ಹೇಳಿತು.

೧೦. "ಎಲೈ ಭೀಷ್ಮಕನೆ! ಈ ಕನ್ಯೆಯನ್ನು ನೀನು ಚತುರ್ಭುಜನಾದ ವಿಷ್ಣುವಿಗೆ ಕೊಡಬೇಕು" ಎಂದು ಹೇಳಿದ ಮಾತನ್ನು ಕೇಳಿ ಭೀಷ್ಮಕನೂ ಆತನ ಮಹಿಷಿಯೂ ಹರ್ಷಗೊಂಡರು.

೧೧. ಬಳಿಕ ರಾಜನು ವೇದಜ್ಞರಾದ ಬ್ರಾಹ್ಮಣರೊಡನೆ ಸೂತಿಕಾಗೃಹವನ್ನು ಪ್ರವೇಶಿಸಿ ಸ್ವಸ್ತಿವಾಚನಾದಿಗಳನ್ನು ಹೇಳಿಸಿ ಮಗುವಿಗೆ ರುಕ್ಮಿಣಿಯೆಂದು ಹೆಸರನ್ನಿಟ್ಟನು.

೧೨. ಯುಧಿಷ್ಠಿರನೆ! ಹುಟ್ಟಿದಂದಿನಿಂದಲೇ ಆಕೆಯ ಹಣೆಯಲ್ಲಿ ಚಿನ್ನದ ತಿಲಕವಿದ್ದುದರಿಂದ ಬ್ರಾಹ್ಮಣರೆಲ್ಲರೂ ಆಕೆಗೆ ರುಕ್ಮಿಣಿಯೆಂಬ ಹೆಸರನ್ನು ಕೊಟ್ಟರು.

ತತಃ ಸಾ ಕಾಲಪರ್ಯಾಯಾದಷ್ಟವರ್ಷಾ ವ್ಯಜಾಯತ ।
ಪೂರ್ವೋಕ್ತಂ ಚೈವ ತದ್ವಾಕ್ಯಮಶರೀರಿಣ್ಯುದೀರಿತಂ ॥ ೧೩ ॥
ಸ್ಮೃತ್ವಾ ಸ್ಮೃತ್ವಾಽಥ ನೃಪತಿಶ್ಚಿಂತಯಾಮಾಸ ಭೂಪತಿಃ ।
ಕಸ್ಮೈ ದೇಯಾ ಮಯಾ ಬಾಲಾ ಭವಿತಾ ಕಶ್ಚತುರ್ಭುಜಃ ॥ ೧೪ ॥
ಏತಸ್ಮಿನ್ನಂತರೇ ತಾವದ್ರೈವತಾತ್ಪರ್ವತೋತ್ತಮಾತ್ ।
ಮುಖ್ಯಶ್ಚೇದಿಪತಿಸ್ತತ್ರ ದಮಘೋಷಃ ಸಮಾಗತಃ ॥ ೧೫ ॥
ಪ್ರವಿಷ್ಟೋ ರಾಜಸದನಂ ಯತ್ರ ರಾಜಾ ಸ ಭೀಷ್ಮಕಃ ।
ತಂ ದೃಷ್ಟ್ವಾ ಚಾಗತಂ ಗೇಹೇ ಪೂಜಯಾಮಾಸ ಭೂಪತಿಃ ॥ ೧೬ ॥
ಆಸನಂ ವಿಪುಲಂ ದತ್ವಾ ಸಭಾಂ ಗತ್ವಾ ನಿವೇಶಿತಃ ।
ಕುಶಲಂ ತವ ರಾಜೇಂದ್ರ ದಮಘೋಷ ಶ್ರಿಯಾಯುತ ॥ ೧೭ ॥
ಪುಣ್ಯಮದ್ಯ ಹಿ ಸಂಜಾತಮಹಂ ತ್ವದ್ದರ್ಶನೋತ್ಸುಕಃ ।
ಕನ್ಯಾ ಮದೀಯಾ ರಾಜೇಂದ್ರ ಹ್ಯಷ್ಟವರ್ಷಾ ವ್ಯಜಾಯತ ॥ ೧೮ ॥
ಚತುರ್ಭುಜಾಯ ದಾತವ್ಯಾ ವಾಗುವಾಚಾಽಶರೀರಿಣೀ ।
ಭೀಷ್ಮಕಸ್ಯ ವಚಃ ಶ್ರುತ್ವಾ ದಮಘೋಷೋಽಬ್ರವೀದಿದಂ ॥ ೧೯ ॥

---

೧೩–೧೪. ಬಳಿಕ ಕಾಲಕ್ರಮದಲ್ಲಿ ಆ ಕನ್ಯೆಯು ಎಂಟು ವರ್ಷದ ವಯಸ್ಸಿನವಳಾದಳು. ಅಶರೀರವಾಣಿಯು ಇವಳ ಜನನ ಕಾಲದಲ್ಲಿ ಹೇಳಿದ ವಾಕ್ಯವನ್ನು ಜ್ಞಾಪಿಸಿಕೊಂಡು, "ಈ ಕನ್ಯೆಯನ್ನು ನಾನು ಯಾರಿಗೆ ಕೊಡಲಿ? ಚತುರ್ಭುಜನಾಗಿರುವ ಪುರುಷನು ಯಾರು?" ಎಂಬುದಾಗಿ ಚಿಂತಿಸುತ್ತಲಿದ್ದನು.

೧೫. ಆ ಸಮಯಕ್ಕೆ ಸರಿಯಾಗಿ ರೈವತವೆಂಬ ಮಹಾಪರ್ವತಪ್ರದೇಶವಾದ ಚೇದಿರಾಜ್ಯಕ್ಕೆ ಒಡೆಯನಾದ ದಮಘೋಷ ಮಹಾರಾಜನು ಅಲ್ಲಿಗೆ ಬಂದನು.

೧೬. ಅರಮನೆಯನ್ನು ಪ್ರವೇಶಿಸಿ ಭೀಷ್ಮಕರಾಜನು ಇದ್ದಲ್ಲಿಗೆ ಬರಲು ಆತನನ್ನು ಕಂಡು ಭೀಷ್ಮಕನು ಯಥೋಕ್ತವಾಗಿ ಅವನಿಗೆ ಅತಿಥಿ ಪೂಜೆಯನ್ನು ಮಾಡಿದನು.

೧೭. ಸಭಾಮಂದಿರಕ್ಕೆ ಕರೆದುಕೊಂಡು ಹೋಗಿ ಸುಖಾಸನವನ್ನು ಕೊಟ್ಟು ಇಂತೆಂದನು. "ಐಶ್ವರ್ಯಸಂಪನ್ನನಾದ ದಮಘೋಷನೆ! ನಿನಗೆ ಕುಶಲವಷ್ಟೆ.

೧೮. ಇಂದೇ ನನಗೆ ಮಹಾ ಸುದಿನವು. ನಾನೂ ನಿನ್ನನ್ನೇ ನೋಡಬೇಕೆಂಬ ಕುತೂಹಲದಿಂದಿದ್ದೆನು. ರಾಜೇಂದ್ರನೆ! ನನ್ನ ಮಗಳು ಎಂಟು ವರ್ಷದ ವಿವಾಹ ವಯಸ್ಸಿನವಳಾಗಿರುವಳು.

೧೯. ಆಕೆಯು ಹುಟ್ಟಿದಾಗ ಅಶರೀರವಾಣಿಯು "ಈಕೆಯನ್ನು ಚತುರ್ಭುಜನಿಗೆ ಕೊಡಬೇಕು" ಎಂದು ಹೇಳಿತು. ಭೀಷ್ಮಕನ ಈ ಮಾತನ್ನು ಕೇಳಿ ದಮಘೋಷನು ಹೇಳಿದನು.

ಚತುರ್ಭುಜೋ ಮಮ ಸುತಸ್ತ್ರಿಷು ಲೋಕೇಷು ವಿಶ್ರುತಃ ।
ತಸ್ಯೇಯಂ ದೀಯತಾಂ ಕನ್ಯಾ ಶಿಶುಪಾಲಸ್ಯ ಭೀಷ್ಮಕ ॥ ೨೦ ॥
ತಸ್ಯ ತದ್ವಚನಂ ಶ್ರುತ್ವಾ ದಮಘೋಷಸ್ಯ ಭೂಮಿಪ ।
ಭೀಷ್ಮಕೇನ ತತೋ ದತ್ತಾ ಶಿಶುಪಾಲಾಯ ರುಕ್ಮಿಣೀ ॥ ೨೧ ॥
ಪ್ರಾರಬ್ಧಂ ಮಂಗಲಂ ತತ್ರ ಭೀಷ್ಮಕೇಣ ಯುಧಿಷ್ಠಿರ ।
ದಿಕ್ಷು ದೇಶಾಂತರೇಷ್ವೇವ ಯೇ ವಸಂತಿ ಸ್ವಗೋತ್ರಜಾಃ ॥ ೨೨ ॥
ನಿಮಂತ್ರಿತಾಸ್ತು ತೇ ಸರ್ವೇ ಸಮಾಜಗ್ಮುರ್ಯಥಾಕ್ರಮಂ ।
ತತೋ ಯಾದವವಂಶಸ್ಯ ತಿಲಕೌ ಬಲಕೇಶವೌ ॥ ೨೩ ॥
ನಿಮಂತ್ರಿತೌ ಸಮಾಯಾತೌ ಕುಂಡಿನಂ ಭೀಷ್ಮಕಸ್ಯ ತು ।
ಭೀಷ್ಮಕೇಣ ಯಥಾನ್ಯಾಯಂ ಪೂಜಿತೌ ತೌ ಯದೂತ್ತಮೌ ॥ ೨೪ ॥
ತತಃ ಪ್ರದೋಷಸಮಯೇ ರುಕ್ಮಿಣೀ ಕಾಮಮೋಹಿನೀ ।
ಸಖೀಭಿಃ ಸಹಿತಾ ಯಾತಾ ಪೂರ್ಬಹಿಶ್ಚಾಽಂಬಿಕಾರ್ಚನೇ ॥ ೨೫ ॥
ಸಾಽಪಶ್ಯತ್ತತ್ರ ದೇವೇಶಂ ಗೋಪವೇಷಧರಂ ಹರಿಂ ।
ತಂ ದೃಷ್ಟ್ವಾ ಮೋಹಮಾಪನ್ನಾ ಕಾಮೇನ ಕಲುಷೀಕೃತಾ ॥ ೨೬ ॥

---

೨೦. "ನನ್ನ ಮಗನು ನಾಲ್ಕು ಭುಜಗಳಿಂದ ಹುಟ್ಟಿ ಮೂರು ಲೋಕಗಳಲ್ಲಿಯೂ ಪ್ರಖ್ಯಾತನಾಗಿರುವನು. ಭೀಷ್ಮಕನೆ! ಆ ಶಿಶುಪಾಲನಿಗೆ ಈ ಕನ್ಯೆಯನ್ನು ಕೊಡುವವನಾಗು."

೨೧. ಧರ್ಮಪುತ್ರನೆ! ದಮಘೋಷಮಹಾರಾಜನ ಈ ಮಾತನ್ನು ಕೇಳಿ ಭೀಷ್ಮಕನು ಆತನ ಮಗನಾದ ಶಿಶುಪಾಲನಿಗೆ ರುಕ್ಮಿಣಿಯನ್ನು ವಾಗ್ದಾನ ಮಾಡಿದನು.

೨೨-೨೪. ಯುಧಿಷ್ಠಿರನೆ! ಬಳಿಕ ಭೀಷ್ಮಕನು ವಿವಾಹಕ್ಕೆ ಸಂಬಂಧಿಸಿದ ಮಂಗಳ ಕಾರ್ಯಗಳನ್ನು ಮಾಡತೊಡಗಿದನು. ಹತ್ತು ದಿಕ್ಕುಗಳಲ್ಲಿಯೂ ಅನೇಕ ದೇಶಗಳಲ್ಲಿಯೂ ವಾಸಮಾಡುತ್ತಿದ್ದ ಬಂಧುಬಳಗದವರೆಲ್ಲರನ್ನೂ ಕರೆದನು. ಅವರೂ ಕ್ರಮವಾಗಿ ಬಂದು ಸೇರಿದರು. ಬಳಿಕ ಯದುವಂಶದ ತಿಲಕಪ್ರಾಯರಾದ ಕೃಷ್ಣಬಲರಾಮರು ಸಹ ಆಮಂತ್ರಿತರಾಗಿ ಭೀಷ್ಮರಾಜನ ಕುಂಡಿನ ರಾಜಧಾನಿಗೆ ಬಂದರು. ಯಾದವ ಶ್ರೇಷ್ಠರಾದ ಅವರಿಗೂ ಭೀಷ್ಮಕನು ಯಥಾವಿಧಿಯಾದ ಪೂಜೆಯನ್ನು ಮಾಡಿದನು.

೨೫. ಮದುವೆಯ ದಿನದ ಪ್ರದೋಷಕಾಲದಲ್ಲಿ ಮನ್ಮಥನಿಗೂ ಮೋಹವನ್ನುಂಟುಮಾಡುವ ಸುಂದರಿಯಾದ ರುಕ್ಮಿಣಿಯು ತನ್ನ ಸಖಿಯರೊಡನೆ ಗೌರಿಯ ಪೂಜೆಗಾಗಿ ಊರಿನ ಹೊರಗಿನ ದೇವಾಲಯಕ್ಕೆ ಬಂದಳು.

೨೬. ಅಲ್ಲಿ ಗೋಪಾಲಕವೇಷಧಾರಿಯೂ, ದೇವಾಧಿದೇವನೂ ಆದ

ಕೇಶವೋಽಪಿ ಚ ತಾಂ ದೃಷ್ಟ್ವಾ ಸಂಕರ್ಷಣಮುವಾಚ ಹ ।
ಸ್ತ್ರೀರತ್ನಪ್ರವರಂ ತಾತ ಹರ್ತವ್ಯಮಿತಿ ಮೇ ಮತಿಃ ॥ ೨೭ ॥
ಕೇಶವಸ್ಯ ವಚಃ ಶ್ರುತ್ವಾ ಸಂಕರ್ಷಣ ಉವಾಚ ಹ ।
ಗಚ್ಛ ಕೃಷ್ಣ ಮಹಾಬಾಹೋ ಸ್ತ್ರೀರತ್ನಂ ಚಾಽಽಶು ಗೃಹ್ಯತಾಂ ॥ ೨೮ ॥
ಅಹಂ ಚ ತವ ಮಾರ್ಗೇಣ ಹ್ಯಾಗಮಿಷ್ಯಾಮಿ ಪೃಷ್ಠತಃ ।
ದಾನವಾನಾಂ ಚ ಸರ್ವೇಷಾಂ ಕುರ್ವಂಶ್ಚ ಕದನಂ ಮಹತ್ ॥ ೨೯ ॥
ಸಂಕರ್ಷಣಮತಂ ಪ್ರಾಪ್ಯ ಕೇಶವಃ ಕೇಶಿಸೂದನಃ ।
ಯಯೌ ಕನ್ಯಾಂ ಗೃಹೀತ್ವಾ ತು ರಥಮಾರೋಪ್ಯ ಸತ್ವರಂ ॥ ೩೦ ॥
ನಿರ್ಗತಃ ಸಹಸಾ ರಾಜನ್ವೇಗೇನೈವಾಽಽನಿಲೋ ಯಥಾ ।
ಹಾಹಾಕಾರಸ್ತದಾ ಜಾತೋ ಭೀಷ್ಮಕಸ್ಯ ಪುರೇ ಮಹಾನ್ ॥ ೩೧ ॥
ನಿರ್ಗತಾ ದಾನವಾಃ ಕ್ರುದ್ಧಾ ವೇಲಾ ಇವ ಮಹೋದಧೇಃ ।
ಗರ್ಜಂತಃ ಸಾಯುಧಾಃ ಸರ್ವೇ ಧಾವಂತೋ ರಥವರ್ತ್ಮನಿ ॥ ೩೨ ॥

---

ನಾರಾಯಣನನ್ನು ಕಂಡು ಕಾಮೋದ್ರೇಕದಿಂದ ಕುಲಷಿತಳಾಗಿ ಮೂರ್ಛೆಯನ್ನು ಹೊಂದಿದಳು.

೨೭. ಕೇಶವನೂ ಸಹ ಆಕೆಯನ್ನು ಕಂಡೊಡನೆ ಬಲರಾಮನಿಗೆ "ಅಣ್ಣಾ! ಈ ಸ್ತ್ರೀರತ್ನವನ್ನು ನಾನೇ ಅಪಹರಿಸಬೇಕೆಂಬ ಇಚ್ಛೆಯುಂಟಾಗಿದೆ" ಎಂದನು.

೨೮. ಕೇಶವನ ಮಾತನ್ನು ಕೇಳಿ ಸಂಕರ್ಷಣನೂ ಇಂತೆಂದನು. "ಮಹಾಪರಾಕ್ರಮಿಯಾದ ಕೃಷ್ಣನೆ! ಹೊರಡು. ಶೀಘ್ರವಾಗಿ ಈ ಸ್ತ್ರೀರತ್ನವನ್ನು ಪರಿಗ್ರಹಿಸು.

೨೯. ನಾನೂ ನೀನು ಹೋಗುವ ಮಾರ್ಗದಲ್ಲಿಯೇ ನಿನ್ನ ಹಿಂದೆ ಬರುತ್ತಿರುವೆನು. ಮತ್ತು ಮೇಲೆ ಬರುವ ಸಕಲ ದಾನವರೊಡನೆಯೂ ಮಹಾಯುದ್ಧವನ್ನು ಮಾಡುವೆನು."

೩೦. ಬಲರಾಮನ ಅನುಮೋದನೆಯನ್ನು ಪಡೆದು ಶ್ರೀ ಕೃಷ್ಣನು ನಿಮಿಷದಲ್ಲಿ ಆ ಕನ್ಯೆಯನ್ನು ಬಲಾತ್ಕಾರವಾಗಿ ಸೆಳೆದು ತನ್ನ ರಥದಲ್ಲಿ ಕುಳ್ಳಿರಿಸಿಕೊಂಡು ಹೊರಟನು.

೩೧. ಯುಧಿಷ್ಠಿರನೆ! ವಾಯುವಿನಂತೆ ಮಹಾ ವೇಗದಿಂದ ಹೊರಟು ಹೋಗುತ್ತಿರಲು ಭೀಷ್ಮಕರಾಜನ ನಗರದಲ್ಲಿ ದೊಡ್ಡದಾದ ಹಾಹಾಕಾರವುಂಟಾಯಿತು.

೩೨. ದಾನವರೆಲ್ಲರೂ ಕೋಪಗೊಂಡು ಗರ್ಜಿಸುತ್ತ ಆಯುಧಗಳನ್ನು ಹಿಡಿದು ಸಮುದ್ರದ ಅಲೆಗಳಂತೆ ಪಟ್ಟಣದಿಂದ ಹೊರಬಿದ್ದು ರಥವನ್ನು ಹಿಂಬಾಲಿಸಿ ಓಡಿದರು.

ಬಲದೇವಂ ತತಃ ಪ್ರಾಪ್ತಾ ರಥಮಾರ್ಗಾನುಗಾಮಿನಂ ।
ತೇಷಾಂ ಯುದ್ಧಂ ಬಲಸ್ಯಾಸೀತ್ಸರ್ವಲೋಕಕ್ಷಯಂಕರಮ್ ॥ ೩೩ ॥
ಯಥಾ ತಾರಾಮಯೇ ಪೂರ್ವಂ ಸಂಗ್ರಾಮೇ ಲೋಕವಿಶ್ರುತೇ ।
ಗದಾಹಸ್ತೋ ಮಹಾಬಾಹುಸ್ತ್ರೈಲೋಕ್ಯೇಽಪ್ರತಿಮೋ ಬಲಃ ॥ ೩೪ ॥
ಹಲೇನಾಕೃಷ್ಯ ಸಹಸಾ ಗದಾಪಾತೈರಪಾತಯತ್ ।
ಅಶಕ್ಯೋ ದಾನವೈರ್ಹಂತುಂ ಬಲಭದ್ರೋ ಮಹಾಬಲಃ ॥ ೩೫ ॥
ಬಭಂಜ ದಾನವಾನ್ ಸರ್ವಾಂಸ್ತಸ್ಥೌ ಗಿರಿರಿವಾಽಚಲಃ ।
ತಂ ದೃಷ್ಟ್ವಾ ಚ ಬಲಂ ಕ್ರುದ್ಧಂ ದುರ್ಧರ್ಷಂ ತ್ರಿದಶೈರಪಿ ॥ ೩೬ ॥
ಭೀಷ್ಮಪುತ್ರೋ ಮಹಾತೇಜಾ ರುಕ್ಮೀನಾಮ ಮಹಾಯಶಾಃ ।
ನರಾಣಾಮತಿಶೂರಾಣಾಮಕ್ಷೌಹಿಣ್ಯಾ ಸಮನ್ವಿತಃ ॥ ೩೭ ॥
ಬಲಭದ್ರಮತಿಕ್ರಮ್ಯ ತತೋ ಯುದ್ಧೇ ನಿರಾಕರೋತ್ ।
ತದ್ಯುದ್ಧಂ ವಂಚಯಿತ್ವಾ ತು ರಥಮಾರ್ಗೇಣ ಸತ್ವರಮ್ ॥ ೩೮ ॥
ಕೇಶವೋಽಪಿ ತದಾ ದೇವೋ ರುಕ್ಮಿಣ್ಯಾ ಸಹಿತೋ ಯಯೌ ।
ವಿಂಧ್ಯಂತು ಲಂಘಯಿತ್ವಾಽಗ್ರೇ ತ್ರೈಲೋಕ್ಯಗುರುರವ್ಯಯಃ ॥ ೩೯ ॥

---

೩೩–೩೪. ಬಳಿಕ ರಥದ ಮಾರ್ಗದಲ್ಲಿಯೇ ಹಿಂದೆ ಹೋಗುತ್ತಿದ್ದ ಬಲದೇವನ ಸಮೀಪಕ್ಕೆ ಬರಲು ಅವರಲ್ಲಿ ಸಕಲಜನರಿಗೆ ಮೃತ್ಯುಕಾರಕವಾದ ಕಾಳೆಗವು ನಡೆಯಿತು. ಹಿಂದೆ ಲೋಕಪ್ರಸಿದ್ಧವಾದ ತಾರಕಾಸುರನ ಯುದ್ಧವನ್ನು ಹೋಲುವ ಆ ಕಾಳೆಗದಲ್ಲಿ ಮೂರು ಲೋಕಗಳಲ್ಲಿಯೂ ಸಮಾನವಿಲ್ಲದ ಮಹಾಪರಾಕ್ರಮಿಯಾದ ಬಲದೇವನು ಗದಾಪಾಣಿಯಾಗಿ ಮೆರೆದನು.

೩೫. ತನ್ನ ಹಲಾಯುಧದಿಂದ ಸೈನ್ಯಗಳನ್ನು ಸೆಳೆದುಕೊಂಡು ಗದೆಯ ಹೊಡೆತದಿಂದ ಪುಡಿಮಾಡಿ ಕೆಡವುತ್ತಿದ್ದ ಮಹಾಬಲನಾದ ಆ ಬಲಭದ್ರನನ್ನು ಜಯಿಸಲು ದಾನವರಿಗೆ ಅಸಾಧ್ಯವಾಯಿತು.

೩೬–೩೭. ಆತನು ದಾನವರ ಸೈನ್ಯವೆಲ್ಲವನ್ನೂ ಛಿನ್ನಭಿನ್ನವನ್ನಾಗಿ ಮಾಡಿ ಚಲಿಸದ ಮಹಾ ಪರ್ವತದಂತೆ ನಿಂತಿದ್ದನು. ಕೋಪಗೊಂಡು ದೇವತೆಗಳಿಗೂ ಅಜೇಯನಾಗಿ ನಿಂತಿದ್ದ ಆತನನ್ನು ಕಂಡು ಭೀಷ್ಮಕನ ಮಗನಾದ ತೇಜೋವಂತನೂ, ಕೀರ್ತಿಸಂಪನ್ನನೂ ಎನಿಸಿದ ರುಕ್ಮಿಯು ಅತ್ಯಂತ ಶೂರರೆನಿಸಿದ ಜನರ ಒಂದು ಅಕ್ಷೌಹಿಣಿಯ ಸೇನೆಯನ್ನು ತೆಗೆದುಕೊಂಡು ಹೊರಟನು.

೩೮–೩೯. ಅವನು, ಯುದ್ಧದಲ್ಲಿ ನಿರತನಾಗಿದ್ದ ಬಲರಾಮನನ್ನತಿಕ್ರಮಿಸಿ ಆ ಯುದ್ಧ ರಂಗವನ್ನೇ ಒಂದು ಪಕ್ಕಕ್ಕೆ ಬಿಟ್ಟು ವೇಗದಿಂದ ರಥದ ಮಾರ್ಗವನ್ನೇ ಹಿಡಿದನು. ತ್ರಿಲೋಕಗುರುವೂ, ನಾಶರಹಿತನೂ ಆದ ಕೇಶವನು ಸಹ ರುಕ್ಮಿಣೀಸಮೇತನಾಗಿ ಅಷ್ಟು ಹೊತ್ತಿಗೆ ವಿಂಧ್ಯಪರ್ವತವನ್ನು ದಾಟಿ ಬಂದಿದ್ದನು.

ನರ್ಮದಾತಟಮಾಸೇದೇ ಯತ್ರ ಸಿದ್ಧಃ ಪುರಾ ಪುನಃ ।
ಅಜೇಯೋ ಯೇನ ಸಂಜಾತಸ್ತೀರ್ಥಸ್ಯಾಽಸ್ಯ ಪ್ರಭಾವತಃ ॥ ೪೦ ॥
ಏತಸ್ಮಾತ್ಕಾರಣಾತ್ತಾತ ಯೋಧನೀ ಪುರಮುಚ್ಯತೇ ।
ರುಕ್ಮೋಽಪಿ ದಾನವೇಂದ್ರೋಽಸೌ ಪ್ರಾಪ್ತಃ ಸ್ಥಾನಮುತ್ತಮಂ ॥ ೪೧ ॥
ಪ್ರತ್ಯುವಾಚಾಽಚ್ಯುತಂ ಕ್ರುದ್ಧಸ್ತಿಷ್ಠ ತಿಷ್ಠೇತಿ ಮಾವ್ರಜ ।
ಅದ್ಯ ತ್ವಾಂ ನಿಶಿತೈರ್ಬಾಣೈರ್ನೇಷ್ಯಾಮಿ ಯಮಸಾದನಂ ॥ ೪೨ ॥
ಏವಂ ಪರಸ್ಪರಂ ವೀರೌ ಜಗರ್ಜತುರುಭಾವತಿ ।
ತಯೋರ್ಯುದ್ಧಮಭೂದ್ಘೋರಂ ತಾರಕಾಗ್ನಿಜಸನ್ನಿಭಂ ॥ ೪೩ ॥
ಚಿಕ್ಷೇಪ ಶರಜಾಲಾನಿ ಕೇಶವಂ ಪ್ರತಿ ದಾನವಃ ।
ನಾಽನುಚಿಂತ್ಯ ಶರಾಂಸ್ತಸ್ಯ ಕೇಶವಃ ಕೇಶಿಸೂದನಃ ॥ ೪೪ ॥
ತತೋ ರುಕ್ಮೋಽಥ ಸಂಕ್ರುದ್ಧೋ ಗೃಹೀತ್ವಾಧನುರುತ್ತಮಂ ।
ಸಾಯಕೇನ ಸುತೀಕ್ಷ್ಣೇನ ತಂ ಬಿಭೇದ ತದೋರಸಿ ॥ ೪೫ ॥
ತತೋ ವಿಷ್ಣುಃ ಸ್ವಯಂ ಕ್ರುದ್ಧಶ್ಚಕ್ರಂ ಗೃಹ್ಯ ಸುದರ್ಶನಂ ।
ಸಂಪ್ರಹರತ್ಯಮುಂ ಯಾವದ್ರುಕ್ಮಿಣ್ಯಾಽತ್ರ ನಿವಾರಿತಃ ॥ ೪೬ ॥

---

೪೦–೪೧. ಹಿಂದೆ ತಾನೇ ತಪಸ್ಸನ್ನಾಚರಿಸಿ ತೀರ್ಥದ ಮಹಿಮೆಯಿಂದ ಅಜೇಯತ್ವವನ್ನು ಪಡೆದಿದ್ದ ಪ್ರದೇಶವಾದ ನರ್ಮದಾತೀರವನ್ನು ಬಂದು ಸೇರಿದನು. ಧರ್ಮನಂದನನೆ! ಈ ಕಾರಣದಿಂದಲೇ ಆ ಯುದ್ಧವು ನಡೆದ ಸ್ಥಳವನ್ನು ಯೋಧಿನೀಪುರವೆಂದು ಕರೆಯುವರು. ದಾನವೇಂದ್ರನಾದ ರುಕ್ಮಿಯೂ ಕೃಷ್ಣನಿದ್ದ ಉತ್ತಮ ಕ್ಷೇತ್ರವನ್ನು ಸೇರಿದನು.

೪೨–೪೩. ಮತ್ತು ಮಹಾ ಕೋಪದಿಂದ ಕೃಷ್ಣನನ್ನು ಕುರಿತು "ನಿಲ್ಲು, ನಿಲ್ಲು; ಓಡಬೇಡ; ಇಂದು ತೀಕ್ಷ್ಣಬಾಣಗಳಿಂದ ನಿನ್ನನ್ನು ಯಮಲೋಕಕ್ಕೆ ಕಳುಹಿಸುವೆನು" ಎಂದನು. ಇಂತು ಇಬ್ಬರು ಮಹಾ ವೀರರೂ ಗರ್ಜಿಸುತ್ತಿರಲು, ಅವರಿಗೆ ಹಿಂದೆ ತಾರಕಾಸುರನಿಗೂ, ಷಣ್ಮುಖಸ್ವಾಮಿಗೂ ನಡೆದ ಕದನವನ್ನು ಹೋಲುವ ಕಾಳಗವು ನಡೆಯಿತು.

೪೪. ಕೇಶಿಮಥನನಾದ ಶ್ರೀಕೃಷ್ಣನ ಮೇಲೆ ರುಕ್ಮಿಯು ಅನೇಕ ಬಾಣಗಳ ಮಳೆಗಳನ್ನು ಕರೆದರೂ ಆತನು ಅವನ್ನು ಲೆಕ್ಕಿಸಲೇ ಇಲ್ಲ.

೪೫. ಆಗ ರುಕ್ಮಿಯು ಮಹಾ ಕ್ರೋಧದಿಂದ ಉತ್ತಮ ಧನುಸ್ಸನ್ನು ತೆಗೆದುಕೊಂಡು ನಿಶಿತವಾದ ಬಾಣದಿಂದ ಕೃಷ್ಣನ ಹೃದಯಪ್ರದೇಶವನ್ನು ಸೀಳಿದನು.

೪೬. ಕೃಷ್ಣನಿಗೂ ಕೋಪವುಂಟಾಗಿ ತನ್ನ ಸುದರ್ಶನಚಕ್ರವನ್ನು ಹಿಡಿದು ರುಕ್ಮಿಯನ್ನು ಸಂಹರಿಸುವ ಪ್ರಯತ್ನದಲ್ಲಿರುವುದನ್ನು ಕಂಡು ರುಕ್ಮಿಣಿಯು ಅವನನ್ನು ತಡೆದಳು.

ತ್ವಾಂ ನ ಜಾನಾತಿ ದೇವೇಶಂ ಚತುರ್ಬಾಹುಂ ಜನಾರ್ದನಂ ।
ದರ್ಶಯಸ್ವ ಸ್ವಕಂ ರೂಪಂ ದಯಾಂ ಕೃತ್ವಾ ಮಮೋಪರಿ ॥ ೪೭ ॥
ಏವಮುಕ್ತಸ್ತು ರುಕ್ಮಿಣ್ಯಾ ದರ್ಶಯಾಮಾಸ ಭಾರತ ।
ದೇವಾ ದೃಷ್ಟ್ವಾಽಪಿ ತದ್ರೂಪಂ ಸ್ತುವಂತ್ಯಾಕಾಶಸಂಸ್ಥಿತಾಃ ।
ದಿವ್ಯಂ ಚಕ್ಷುಸ್ತದಾ ದೇವೋ ದದೌ ರುಕ್ಮಸ್ಯ ಭಾರತ ॥ ೪೮ ॥

ರುಕ್ಮ ಉವಾಚ:—

ಯನ್ಮಯಾ ಪಾಪನಿಷ್ಠೇನ ಮಂದಭಾಗ್ಯೇನ ಕೇಶವ ।
ಸಾಯಕೈರಾಹತಂ ವಕ್ಷಸ್ತತ್ಸರ್ವಂ ಕ್ಷಂತುಮರ್ಹಸಿ ॥ ೪೯ ॥
ಪೂರ್ವಂ ದತ್ವಾ ಸ್ವಯಂ ದೇವ ಜಾನಕೀ ಜನಕೇನ ವೈ ।
ಮಯಾ ಪ್ರದತ್ತಾ ದೇವೇಶ ರುಕ್ಮಿಣೀ ತವ ಕೇಶವ ॥ ೫೦ ॥
ಉದ್ವಾಹಯ ಯಥಾ ನ್ಯಾಯಂ ವಿಧಿದೃಷ್ಟೇನ ಕರ್ಮಣಾ ।
ರುಕ್ಮಸ್ಯ ವಚನಂ ಶ್ರುತ್ವಾ ತತಸ್ತುಷ್ಟೋ ಜಗದ್ಗುರುಃ ॥ ೫೧ ॥
ಬಭಾಷೇ ದೇವದೇವೇಶೋ ರುಕ್ಮಕಂ ಭೀಷ್ಮಕಾತ್ಮಜಂ ।
ಗಚ್ಛ ಸ್ವಕಂ ಪುರಂ ಮಾ ಭೈಃ ಕುರು ರಾಜ್ಯಮಕಂಟಕಂ ॥ ೫೨ ॥

---

೪೭. "ನೀನು ದೇವಾಧಿದೇವನೂ ಚತುರ್ಭುಜನೂ ಆದ ನಾರಾಯಣ ನೆಂಬುದನ್ನು ಆತನರಿಯನು. ನನ್ನಲ್ಲಿ ದಯೆಯಿಟ್ಟು ನಿನ್ನ ನಿಜರೂಪವನ್ನು ಆತನಿಗೆ ತೋರಿಸು."

೪೮. ಇಂತೆಂದು ರುಕ್ಮಿಣಿಯು ಪ್ರಾರ್ಥಿಸಲು ಕೃಷ್ಣನು ತನ್ನ ರೂಪವನ್ನು ತೋರಿಸಿದನು. ಆಕಾಶದಲ್ಲಿ ನೆರೆದಿದ್ದ ದೇವತೆಗಳೆಲ್ಲರೂ ಆ ದಿವ್ಯರೂಪವನ್ನು ಕಂಡು ಸ್ತೋತ್ರಮಾಡುತ್ತಿದ್ದರು. ಕೃಷ್ಣನು ರುಕ್ಮಿಗೆ ತನ್ನ ರೂಪವನ್ನು ನೋಡಲು ಸಾಧನವಾದ ದಿವ್ಯ ನೇತ್ರವನ್ನು ಕರುಣಿಸಿದನು.

೪೯–೫೦. ರುಕ್ಮಿಯು ಹೇಳುತ್ತಾನೆ:—"ಕೇಶವನೆ! ಪರಮ ಪಾಪಿಯೂ ಮಂದಭಾಗ್ಯನೂ ಆದ ನಾನು ನಿನ್ನ ಎದೆಯನ್ನು ಬಾಣದಿಂದ ಹೊಡೆದ ಅಪರಾಧ ವನ್ನು ಮನ್ನಿಸು. ಹಿಂದೆ ಜನಕರಾಜನು ಜಾನಕಿಯನ್ನು ಶ್ರೀರಾಮನಿಗೆ ಅರ್ಪಿಸಿ ದಂತೆ ನಾನೂ ನಿನಗೆ ರುಕ್ಮಿಣಿಯನ್ನು ದಾನಮಾಡುವೆನು.

೫೧. ಶಾಸ್ತ್ರವಿಹಿತವಾದ ಕ್ರಮದಿಂದ ಯಥಾನ್ಯಾಯವಾಗಿ ಆಕೆಯನ್ನು ಮದುವೆಯಾಗು." ಇಂತೆಂದ ರುಕ್ಮಿಯ ವಚನವನ್ನು ಕೇಳಿ ಲೋಕಗುರುವು ಪರಮಸಂತುಷ್ಟನಾದನು.

೫೨. ಮತ್ತು ಭೀಷ್ಮಕರಾಜನ ಪುತ್ರನಾದ ಆತನಿಗೆ ದೇವಾಧಿದೇವ ನಿಂತೆಂದನು. "ನಿನ್ನ ರಾಜಧಾನಿಗೆ ಹಿಂತಿರುಗು; ಭಯಪಡಬೇಡ. ನಿನ್ನ ರಾಜ್ಯ ವನ್ನು ಕಂಟಕರಹಿತವನ್ನಾಗಿ ಮಾಡಿಕೊ.

ಕೇಶವಸ್ಯ ವಚಃ ಶ್ರುತ್ವಾ ರುಕ್ಮೀ ದಾನವಪುಂಗವಃ ।
ತಂ ಪ್ರಣಮ್ಯ ಜಗನ್ನಾಥಂ ಜಗಾಮ ಭವನಂ ಪಿತುಃ ॥ ೫೩ ॥
ಗತೇ ರುಕ್ಮೀ ತದಾ ಕೃಷ್ಣಃ ಸಮಾಮಂತ್ರ್ಯ ದ್ವಿಜೋತ್ತಮಾನ್ ।
ಮರೀಚಿಮತ್ರ್ಯಂಗಿರಸಂ ಪುಲಸ್ತ್ಯಂ ಪುಲಹಂ ಕ್ರತುಂ ॥ ೫೪ ॥
ವಸಿಷ್ಠಂ ಚ ಮಹಾಭಾಗಮಿತ್ಯೇತೇ ಸಪ್ತ ಮಾನಸಾಃ ।
ಇತ್ಯೇತೇ ಬ್ರಾಹ್ಮಣಾಃ ಸಪ್ತ ಪುರಾಣೇ ನಿಶ್ಚಯಂ ಗತಾಃ ॥ ೫೫ ॥
ಕ್ಷಮಾವಂತಃ ಪ್ರಜಾವಂತೋ ಮಹರ್ಷಿಭಿರಲಂಕೃತಾಃ ।
ಇತ್ಯೇವಂ ಬ್ರಹ್ಮಪುತ್ರಾಶ್ಚ ಸತ್ಯವಂತೋ ಮಹಾಮತೇ ॥ ೫೬ ॥
ನರ್ಮದಾತಟಮಾಶ್ರಿತ್ಯ ನಿವಸಂತಿ ಜಿತೇಂದ್ರಿಯಾಃ ।
ತಪಃ ಸ್ವಾಧ್ಯಾಯನಿರತಾ ಜಪಹೋಮಪರಾಯಣಾಃ ॥ ೫೭ ॥
ನಿಮಂತ್ರಿತಾಸ್ತು ರಾಜೇಂದ್ರ ಕೇಶವೇನ ಮಹಾತ್ಮನಾ ।
ಶ್ರಾದ್ಧಂ ಕೃತ್ವಾ ಯಥಾನ್ಯಾಯಂ ಬ್ರಹ್ಮೋಕ್ತವಿಧಿನಾ ತತಃ ॥ ೫೮ ॥
ಹರಿಸ್ತಾನ್ಪೂಜಯಾಮಾಸ ಸಪ್ತ ಬ್ರಹ್ಮರ್ಷಿಪುಂಗವಾನ್ ।
ಪ್ರದದೌ ದ್ವಾದಶಗ್ರಾಮಾಂಸ್ತೇಭ್ಯಸ್ತತ್ರ ಜನಾರ್ದನಃ ॥ ೫೯ ॥

---

೫೩. ಶ್ರೀಕೃಷ್ಣನ ಈ ಮಾತುಗಳನ್ನು ಕೇಳಿ ದಾನವಶ್ರೇಷ್ಠನಾದ ರುಕ್ಮಿಯು ಆ ಜಗನ್ನಾಥನಿಗೆ ನಮಸ್ಕಾರವನ್ನು ಮಾಡಿ ತನ್ನ ತಂದೆಯ ಮನೆಗೆ ಹಿಂದಿರುಗಿದನು.

೫೪–೫೫. ರುಕ್ಮಿಯು ಹೊರಟುಹೋಗಲು ಶ್ರೀಕೃಷ್ಣನು ಬ್ರಾಹ್ಮಣೋತ್ತಮರಿಗೆ ಹೇಳಿ ಕಳುಹಿಸಿದನು. ಮರೀಚಿ, ಅತ್ರಿ, ಅಂಗಿರಸ, ಪುಲಸ್ತ್ಯ, ಪುಲಹ, ಕ್ರತು, ವಸಿಷ್ಠನೆಂಬ ಮಹಾ ಭಾಗ್ಯಶಾಲಿ ಇವರೇ ಬ್ರಾಹ್ಮಣರೆಂದೂ ಮಾನಸರೆಂದೂ ಪುರಾಣಗಳಲ್ಲಿ ನಿಶ್ಚಯಿಸಲ್ಪಟ್ಟಿರುವರು.

೫೬. ಧರ್ಮನಂದನನೆ! ಕ್ಷಮಾಗುಣಶೀಲರೂ, ಪ್ರಜಾಪತಿಗಳೂ, ಮಹರ್ಷಿ ಪದವಿಯಿಂದಲಂಕೃತರೂ, ಸತ್ಯವಂತರೂ ಆದ ಇವರು ಬ್ರಹ್ಮನ ಮಾನಸಪುತ್ರರಾಗಿರುವರು.

೫೭. ಎಲ್ಲರೂ ನರ್ಮದಾತೀರವನ್ನಾಶ್ರಯಿಸಿ ತಪಸ್ಸು, ವೇದಾಧ್ಯಯನಗಳನ್ನು ಮಾಡುತ್ತ, ಜಪ, ಹೋಮಗಳಲ್ಲಿ ನಿರತರಾಗಿರುತ್ತಿದ್ದರು.

೫೮. ರಾಜೇಂದ್ರನೆ! ಮಹಾತ್ಮನಾದ ಕೇಶವನು ವೇದವಿಹಿತವಾದ ರೀತಿಯಿಂದ ಯಥಾನ್ಯಾಯವಾಗಿ ಸಂತೋಷಪಡಿಸಿದನು.

೫೯. ಬ್ರಹ್ಮರ್ಷಿಶ್ರೇಷ್ಠರಾದ ಆ ಏಳು ಜನರಿಗೂ ಪೂಜೆಯನ್ನು ಮಾಡಿ ಶ್ರೀ ಹರಿಯು ಅವರಗೆ ಅಲ್ಲಿಯೇ ಹನ್ನೆರಡು ಗ್ರಾಮಗಳು ದಾನವನ್ನಿತ್ತನು.

ಯಾವಚ್ಚಂದ್ರಶ್ಚ ಸೂರ್ಯಶ್ಚ ಯಾವತ್ತಿಷ್ಠತಿ ಮೇದಿನೀ ।
ತಾವದ್ದಾನಂ ಮಯಾ ದತ್ತಂ ಪರಿಪಂಥೀ ನ ಕಶ್ಚನ ॥ ೬೦ ॥
ಮದ್ದತ್ತಂ ಪಾಲಯಿಷ್ಯಂತೇ ಯೇ ನೃಪಾ ಗತಕಲ್ಮಷಾಃ ।
ತೇಭ್ಯಃ ಸ್ವಸ್ತಿ ಕರಿಷ್ಯಾಮಿ ದಾಸ್ಯಾಮಿ ಪರಮಾಂ ಗತಿಂ ॥ ೬೧ ॥
ಯಾವದ್ಧಿ ಯಾಂತಿ ಲೋಕೇಷು ಮಹಾಭೂತಾನಿ ಪಂಚ ಚ ।
ತಾವತ್ತೇ ದಿವಿ ಮೋದಂತೇ ಮದ್ದತ್ತಪರಿಪಾಲಕಾಃ ॥ ೬೨ ॥
ಯಸ್ತು ಲೋಪಯತೇ ಮೂಢೋ ದತ್ತಂ ವಃ ಪೃಥಿವೀತಲೇ ।
ನರಕೇ ತಸ್ಯ ವಾಸಃ ಸ್ಯಾದ್ಯಾವದಾಭೂತಸಂಪ್ಲವಂ ॥ ೬೩ ॥
ಸ್ವದತ್ತಾ ಪರದತ್ತಾ ವಾ ಪಾಲನೀಯಾ ವಸುಂಧರಾ ।
ಯಸ್ಯ ಯಸ್ಯ ಯದಾ ಭೂಮಿಸ್ತಸ್ಯ ತಸ್ಯ ತದಾಫಲಂ ॥ ೬೪ ॥
ಸ್ವದತ್ತಾಂ ಪರದತ್ತಾಂ ವಾ ಯೋ ಹರೇತ ವಸುಂಧರಾಂ ।
ಸ ವಿಷ್ಠಾಯಾಂ ಕೃಮಿರ್ಭೂತ್ವಾ ಪಿತೃಭಿಃ ಸಹ ಮಜ್ಜತಿ ॥ ೬೫ ॥
ಅನ್ಯಾಯೇನ ಹೃತಾ ಭೂಮಿರನ್ಯಾಯೇನ ಚ ಹಾರಿತಾ ।
ಹರ್ತಾ ಹಾರಯಿತಾ ಚೈವ ವಿಷ್ಠಾಯಾಂ ಜಾಯತೇ ಕೃಮಿಃ ॥ ೬೬ ॥

---

೬೦. ಸೂರ್ಯಚಂದ್ರರಿರುವವರೆಗೂ ಭೂಮಿಯು ನಿಂತಿರುವವರೆಗೂ ನನ್ನ ಈ ದಾನವು ನಡೆಯುತ್ತಿರಬೇಕು. ಇದಕ್ಕೆ ಯಾರೂ ಅಡ್ಡಿ ಮಾಡಬಾರದು.

೬೧–೬೨. ನಿಷ್ಕಲ್ಮಷರಾದ ಯಾವ ರಾಜರು ಈ ದಾನವನ್ನು ನಡಸಿಕೊಂಡು ಬರುವರೊ, ಅವರಿಗೆ ಇಹದಲ್ಲಿ ಸೌಖ್ಯವನ್ನು ಕೊಟ್ಟು ಮುಂದೆ ಸದ್ಗತಿಯನ್ನು ತೋರುವೆನು. ಬ್ರಹ್ಮಾಂಡದಲ್ಲಿ ಪಂಚಭೂತಗಳು ಇರುವವರೆಗೂ ನನ್ನ ದಾನವನ್ನು ಪರಿಪಾಲಿಸುವವರು ಸ್ವರ್ಗಲೋಕದಲ್ಲಿ ಆನಂದದಿಂದಿರುವರು.

೬೩–೬೪. ಯಾವ ಮೂರ್ಖನು ನಿಮಗೆ ಕೊಟ್ಟುದನ್ನು ಅಪಹರಿಸುವನೊ, ಅವನು ಮಹಾ ಭೂತಗಳು ಲಯವಾಗುವ ಪ್ರಳಯದವರೆಗೂ ನರಕದಲ್ಲಿರುವನು. ತಾನು ಕೊಟ್ಟ ಭೂಮಿಯನ್ನೂ, ಇತರರು ಕೊಟ್ಟದ್ದನ್ನೂ ರಾಜನು ಪಾಲಿಸಬೇಕು. ಯಾವಾಗ ಆ ಭೂಮಿಯು ಯಾವನ ಆಳ್ವಿಕೆಗೆ ಒಳಪಡುವುದೊ, ಆಗ ಅದರ ಪಾಲನೆಯ ಫಲವು ಅವನಿಗೆ ಸಲ್ಲುವುದು.

೬೫. ತಾನು ಅಥವಾ ಇತರರು ಕೊಟ್ಟ ಭೂಮಿಯನ್ನು ಯಾವನು ಅಪಹರಿಸುವನೊ, ಅವನು ಅಮೇಧ್ಯದಲ್ಲಿ ಕ್ರಿಮಿಯಾಗಿ ಜನಿಸಿ ತನ್ನ ಪಿತೃಗಳೊಡನೆ ನಾಶವಾಗುವನು.

೬೬. ಅನ್ಯಾಯದಿಂದ ಅಪಹರಿಸಲ್ಪಟ್ಟ ಭೂಮಿಯೂ, ಅನ್ಯಾಯಕ್ಕೆ ಕಾರಣನಾದವನೂ ಇರಲು, ಅಪಹಾರವನ್ನು ಮಾಡಿದವನೂ, ಮಾಡಿಸಿದವನೂ ಅಮೇಧ್ಯದ ಕ್ರಿಮಿಗಳಾಗುವರು.



ಷಷ್ಟಿವರ್ಷಸಹಸ್ರಾಣಿ ಸ್ವರ್ಗೇ ತಿಷ್ಠತಿ ಭೂಮಿದಃ ।
ಆಚ್ಛೇತ್ತಾ ಚಾನುಮಂತಾ ಚ ತಾನ್ಯೇವ ನರಕೇ ವಸೇತ್ ॥ ೬೭ ॥
ಯಾನೀಹ ದತ್ತಾನಿ ಪುರಾ ನರೇಂದ್ರೈ
ರ್ದಾನಾನಿ ಧರ್ಮಾರ್ಥಯಶಸ್ಕರಾಣಿ ।
ನಿರ್ಮಾಲ್ಯರೂಪಪ್ರತಿಮಾನಿ ತಾನಿ
ಕೋ ನಾಮ ಸಾಧುಃ ಪುನರಾದದಾತಿ ॥ ೬೮ ॥
ಏವಂ ತಾನ್ಪೂಜಯಿತ್ವಾ ತು ಸಮ್ಯಙ್ನ್ಯಾಯೇನ ಪಾಂಡವ ।
ರುಕ್ಮಿಣ್ಯಾ ವಿಧಿವತ್ಪಾಣಿಂ ಜಗ್ರಾಹ ಮಧುಸೂದನಃ ॥ ೬೯ ॥
ಮುಸಲೀ ಚ ತತಃ ಸರ್ವಾನ್ ಜಿತ್ವಾ ದಾನವಪುಂಗವಾನ್ ।
ಸ್ವಸ್ಥಾನಮಗಮತ್ತತ್ರ ಕೃತ್ವಾ ಕಾರ್ಯಂ ಸುಶೋಭನಂ ॥ ೭೦ ॥
ಪ್ರಯಾತೌ ದ್ವಾರವತ್ಯಾಂ ತೌ ಕೃಷ್ಣಸಂಕರ್ಷಣಾವುಭೌ ।
ಗಚ್ಛಮಾನಂ ತು ತಂ ದೃಷ್ಟ್ವಾ ಕೇಶವಂ ಕ್ಲೇಶನಾಶನಂ ॥ ೭೧ ॥
ಬ್ರಾಹ್ಮಣಾಃ ಸತ್ಯವಂತಶ್ಚ ನಿರ್ಗತಾಃ ಶಂಸಿತವ್ರತಾಃ ।
ಆಗಚ್ಛಮಾನಾಂಸ್ತೌ ವೀಕ್ಷ್ಯ ರಥಮಾರ್ಗೇಣ ಬ್ರಾಹ್ಮಣಾನ್ ॥ ೭೨ ॥

---

೬೭. ಭೂಮಿದಾನವನ್ನು ಮಾಡಿದವನು ಅರುವತ್ತುಸಾವಿರ ವರ್ಷಗಳವರೆಗೂ ಸ್ವರ್ಗದಲ್ಲಿರುವನು. ಅದನ್ನು ಕೊನೆಗಾಣಿಸುವವನೂ, ಅವನನ್ನು ಅನುಮೋದಿಸುವವನೂ ಅಷ್ಟೇ ಕಾಲದವರೆಗೂ ನರಕದಲ್ಲಿರುವರು.

೬೮. ಹಿಂದಿನ ಚಕ್ರವರ್ತಿಗಳು ಧರ್ಮಾರ್ಥವಾಗಿಯೂ, ಯಶಸ್ಸಿಗಾಗಿಯೂ ಮಾಡಲ್ಪಟ್ಟ ದಾನಗಳೆಲ್ಲವೂ ನಿರ್ಮಾಲ್ಯರೂಪಗಳೆಂದು ನಮಗೆ ತಿಳಿದು ಬಂದಿರುವುವು. ಅವುಗಳನ್ನು ಯಾವ ಸಾಧುವು ತಾನೆ ಕಿತ್ತುಕೊಳ್ಳಲೆಳಸುವನು ?

೬೯. ಧರ್ಮರಾಜನೆ! ಇಂತು ನ್ಯಾಯವಾದ ರೀತಿಯಿಂದ ಬ್ರಾಹ್ಮಣರ ಪೂಜೆಯನ್ನು ಮಾಡಿ ಮಧುಸೂದನನು ವಿಧಿವಿಹಿತವಾದ ಕಾರ್ಯಕಲಾಪದಿಂದ ರುಕ್ಮಿಣಿಯ ಪಾಣಿಗ್ರಹಣವನ್ನು ಮಾಡಿಕೊಂಡನು.

೭೦. ಬಲರಾಮನು ಸಹ ಸಕಲ ದಾನವರನ್ನೂ ಜಯಿಸಿ ಶ್ರೀಕೃಷ್ಣನಿಗೆ ಪ್ರಿಯವಾದ ಕಾರ್ಯವನ್ನು ಮಾಡಿ ತನ್ನ ಮನೆಗೆ ಹಿಂದಿರುಗಿದನು.

೭೧. ಕೃಷ್ಣಬಲರಾಮರಿಬ್ಬರೂ ದ್ವಾರಕಾವತಿಗೆ ಪ್ರಯಾಣವನ್ನು ಬೆಳಸಿದರು. ಸಂಸಾರಕ್ಲೇಶನಾಶಕನಾದ ಕೇಶವನು ಹೊರಟುಹೋಗುತ್ತಿದ್ದುದನ್ನು ಬ್ರಾಹ್ಮಣರು ಕಂಡರು.

೭೨. ಸತ್ಯವಂತರೂ ಮಹಾವ್ರತಧಾರಿಗಳೂ ಆದ ಅವರೂ ಅವರ ಹಿಂದೆಯೇ ಹೊರಟರು. ರಥದ ಮಾರ್ಗದಲ್ಲಿಯೇ ಬರುತ್ತಿದ್ದ ಬ್ರಾಹ್ಮಣರನ್ನು ಅವರಿಬ್ಬರೂ ನೋಡಿದರು.



ಮುಹೂರ್ತಂ ತತ್ರ ವಿಶ್ರಮ್ಯ ಕೇಶವೋ ವಾಕ್ಯಮಬ್ರವೀತ್ ।
ಕಿಮಾಗಮನಕಾರ್ಯಂ ವೋ ಬ್ರೂತ ಸರ್ವಂ ದ್ವಿಜೋತ್ತಮಾಃ ॥ ೭೩ ॥
ಕುರ್ವಾಣಾಃ ಸ್ವೀಯಕರ್ಮಾಣಿ ಮಮ ಕೃತ್ಯಂ ತು ತಿಷ್ಠತೇ ।
ದೇವಸ್ಯ ವಚನಂ ಶ್ರುತ್ವಾ ಮುನಯೋ ವಾಕ್ಯಮಬ್ರುವನ್ ॥ ೭೪ ॥
ಕಲ್ಪಕೋಟಿಸಹಸ್ರೇಣ ಸತ್ಯಭಾವಾತ್ತು ವಂದಿತಃ ।
ದುಷ್ಪ್ರಾಪ್ಯೋಽಸಿ ಮನುಷ್ಯಾಣಾಂ ಪ್ರಾಪ್ತಃ ಕಿಂ ತ್ಯಜಸೇ ಹಿ ನಃ ॥ ೭೫ ॥
ಬ್ರಾಹ್ಮಣಾನಾಂ ವಚಃ ಶ್ರುತ್ವಾ ಭಗವಾನಿದಮಬ್ರವೀತ್ ।
ಮಥುರಾಯಾಂ ದ್ವಾರವತ್ಯಾಂ ಯೋಧನೀಪುರ ಏವ ಚ ॥ ೭೬ ॥
ತ್ರಿಕಾಲಮಾಗಮಿಷ್ಯಾಮಿ ಸತ್ಯಂ ಸತ್ಯಂ ಪುನಃ ಪುನಃ ।
ಏವಂ ತೇ ಬ್ರಾಹ್ಮಣಾಃ ಶ್ರುತ್ವಾ ಯೋಧನೀಪುರಮಾಗತಾಃ ॥ ೭೭ ॥
ಅವತೀರ್ಣಸ್ತ್ರಿಭಾಗೇನ ಪ್ರಾದುರ್ಭಾವೇ ತು ಮಾಥುರೇ ।
ಏತತ್ತೇ ಕಥಿತಂ ಸರ್ವಂ ತೀರ್ಥಸ್ಯೋತ್ಪತ್ತಿಕಾರಣಂ ॥ ೭೮ ॥

---

೭೩. ಒಂದು ಕ್ಷಣ ರಥವನ್ನು ನಿಲ್ಲಿಸಿ ಕೇಶವನು ಅವರಿಗೆ ಇಂತೆಂದನು. "ದ್ವಿಜೋತ್ತಮರಿರಾ! ನೀವು ಹಿಂಬಾಲಿಸಿ ಬರುತ್ತಿರುವುದಕ್ಕೆ ಕಾರಣವಾದರೂ ಏನು? ಎಲ್ಲವನ್ನೂ ಹೇಳಿರಿ.

೭೪. ತಮ್ಮತಮ್ಮ ವರ್ಣಾಶ್ರಮೋಚಿತಗಳಾದ ಕಾರ್ಯಗಳನ್ನು ಮಾಡುತ್ತಿರುವವರೇ ನನ್ನ ಕಟ್ಟಳೆಯಲ್ಲಿ ನಿಂತವರು." ಇಂತೆಂದ ದೇವದೇವನ ಮಾತನ್ನು ಕೇಳಿ ಮುನಿಗಳು ಹೇಳಿದರು.

೭೫. "ಯಥಾರ್ಥವಾದ ಭಕ್ತಿಭಾವದಿಂದ ಸಾವಿರ ಕೋಟಿ ಕಲ್ಪಗಳು ಸೇವಿಸಿದರೂ ನೀನು ಅಲಭ್ಯನಾದವನು. ಈಗ ಸಿಕ್ಕಿದ್ದರೂ ನಮ್ಮನ್ನು ಬಿಟ್ಟು ಹೋಗುವೆಯಾ?"

೭೬. ಬ್ರಾಹ್ಮಣರ ಮಾತನ್ನು ಕೇಳಿ ಭಗವಂತನು ಹೇಳಿದನು. ಮಥುರೆ, ದ್ವಾರಕಾವತಿ ಮತ್ತು ಯೋಧನೀಪುರ — ಈ ಮೂರೂ ನನ್ನ ಸ್ಥಾನಗಳು.

೭೭. ಇವುಗಳಲ್ಲಿ ನಾನು ನಿರಂತರವೂ ವಾಸಮಾಡುತ್ತಿರುವೆನು. ಇದನ್ನು ಮತ್ತೆ ಮತ್ತೆ ಶಪಥಪೂರ್ವಕವಾಗಿ ಹೇಳುವೆನು. ಈ ಮಾತನ್ನು ಕೇಳಿ ಬ್ರಾಹ್ಮಣರು ಯೋಧನೀಪುರಕ್ಕೆ ಹಿಂದಿರುಗಿದರು.

೭೮. ಇಂತು ಮೂರು ಅಂಶಗಳಿಂದ ಭಗವಂತನವತರಿಸಿದನು. ಮಥುರೆಯಲ್ಲಿ ಮಾತ್ರ ಶ್ರೀಕೃಷ್ಣನ ಪೂರ್ಣಪ್ರಾದುರ್ಭಾವವಾಯಿತು. ಇಂತು ಈ ತೀರ್ಥದ ಉತ್ಪತ್ತಿಗೆ ಕಾರಣವಾದ ಚರಿತ್ರೆಯೆಲ್ಲವನ್ನೂ ನಿನಗೆ ಹೇಳಿದೆನು.

**ಭೂತಂ ಭವ್ಯಂ ಭವಿಷ್ಯಚ್ಚ ವರ್ತಮಾನಂ ತಥಾ ಪರಂ ।**
**ಯಂ ಶ್ರುತ್ವಾ ಸರ್ವಪಾಪೇಭ್ಯೋ ಮುಚ್ಯತೇ ನಾಽತ್ರ ಸಂಶಯಃ ॥ ೭೯ ॥**
**ತತ್ರ ತೀರ್ಥೇ ತು ಯಃ ಸ್ನಾತ್ವಾ ಪೂಜಯೇದ್ಬಲಕೇಶವೌ ।**
**ತೇನ ದೇವೋ ಜಗದ್ಧಾತಾ ಪೂಜಿತಸ್ತ್ರಿಗುಣಾತ್ಮವಾನ್ ॥ ೮೦ ॥**
**ಉಪವಾಸೀ ನರೋ ಭೂತ್ವಾ ಯಸ್ತು ಕುರ್ಯಾತ್ಪ್ರದಕ್ಷಿಣಂ ।**
**ಮುಚ್ಯತೇ ಸರ್ವಪಾಪೇಭ್ಯೋ ನಾಽತ್ರ ಕಾರ್ಯಾ ವಿಚಾರಣಾ ॥ ೮೧ ॥**
**ತತ್ರ ತೀರ್ಥೇ ತು ಯೇ ವೃಕ್ಷಾಸ್ತಾನ್ಪಶ್ಯಂತಿ ಚ ಯೇ ನರಾಃ ।**
**ತೇಽಪಿ ಪಾಪೈಃ ಪ್ರಮುಚ್ಯಂತೇ ಭ್ರೂಣಹತ್ಯಾಸಮೈರಪಿ ॥ ೮೨ ॥**
**ಪ್ರಾತರುತ್ಥಾಯ ಯೇ ಕೇಚಿತ್ಪಶ್ಯಂತಿ ಬಲಕೇಶವೌ ।**
**ತೇನ ತೇ ಸದೃಶಾಃ ಸ್ಯುರ್ವೈ ದೇವದೇವೇನ ಚಕ್ರಿಣಾ ॥ ೮೩ ॥**
**ತೇ ಪೂಜ್ಯಾಸ್ತೇ ನಮಸ್ಕಾರ್ಯಾಸ್ತೇಷಾಂ ಜನ್ಮ ಸುಜೀವಿತಂ ।**
**ಯೇ ನಮಂತಿ ಜಗನ್ನಾಥಂ ದೇವಂ ನಾರಾಯಣಂ ಹರಿಂ ॥ ೮೪ ॥**

---

೭೯. ಭೂತಭವಿಷ್ಯದ್ವರ್ತಮಾನ ಕಾಲಗಳನ್ನೊಳಗೊಂಡ ಈ ಚರಿತ್ರೆಯನ್ನು ಕೇಳುವ ಮಾನವನು ಸಕಲ ಪಾತಕಗಳಿಂದಲೂ ಮುಕ್ತನಾಗುವುದರಲ್ಲಿ ಸಂದೇಹವಿಲ್ಲ.

೮೦. ಆ ತೀರ್ಥದಲ್ಲಿ ಯಾವನು ಸ್ನಾನವನ್ನು ಮಾಡಿ ಕೃಷ್ಣಬಲರಾಮರನ್ನು ಪೂಜಿಸುವನೊ, ಅವನಿಂದ ತ್ರಿಗುಣಮಯನೂ, ಲೋಕನಾಥನೂ ಆದ ಪರಮಾತ್ಮನೇ ಪೂಜಿತನಾಗುವನು.

೮೧. ಯಾವ ನರನು ಉಪವಾಸದಿಂದ ಇವರ ದೇವಾಲಯದ ಪ್ರದಕ್ಷಿಣೆಯನ್ನು ಮಾಡುವನೊ, ಅವನು ಸಮಸ್ತ ಪಾತಕಗಳನ್ನೂ ಕಳೆದುಕೊಳ್ಳುವುದರಲ್ಲಿ ಸಂಶಯವಿಲ್ಲ.

೮೨. ಆ ತೀರ್ಥದಲ್ಲಿ ಬೆಳೆದಿರುವ ವೃಕ್ಷಗಳನ್ನು ನೋಡಿದ ಮಾನವರು ಕೂಡ ಭ್ರೂಣಹತ್ಯೆಗೆ ಸಮನಾದ ಮಹಾಪಾತಕಗಳಿಂದಲೂ ಮುಕ್ತರಾಗುವರು.

೮೩. ಪ್ರಾತಃಕಾಲದಲ್ಲಿ ಎದ್ದು ಯಾರು ಬಲರಾಮ ಕೇಶವರ ದರ್ಶನವನ್ನು ತೆಗೆದುಕೊಳ್ಳುವರೊ, ಅವರು ದೇವದೇವನಾದ ಚಕ್ರಪಾಣಿಗೆ ಸಮಾನರಾಗುವರೆಂಬುದು ನಿಜವು.

೮೪. ಲೋಕೇಶ್ವರನಾದ ಶ್ರೀಮನ್ನಾರಾಯಣನನ್ನು ಯಾರು ನೋಡುವರೊ, ಅವರೇ ಪೂಜ್ಯರು. ಅವರೇ ನಮಸ್ಕಾರಾರ್ಹರು. ಅವರ ಜನ್ಮವೇ ಸಾರ್ಥಕವೆನಿಸುವುದು.

ತತ್ರ ತೀರ್ಥೇ ತು ಯದ್ದಾನಂ ಸ್ನಾನಂ ದೇವಾರ್ಚನಂ ನೃಪ ।
ತತ್ಸರ್ವಮಕ್ಷಯಂ ತಸ್ಯ ಇತ್ಯೇವಂ ಶಂಕರೋಽಬ್ರವೀತ್ ॥ ೮೫ ॥
ಪ್ರವಿಶ್ಯಾಗ್ನೌ ಮೃತಾನಾಂ ಚ ಯತ್ಫಲಂ ಸಮುದಾಹೃತಂ ।
ತಚ್ಛೃಣುಷ್ವ ನೃಪಶ್ರೇಷ್ಠ ಪ್ರೋಚ್ಯಮಾನಮಶೇಷತಃ ॥ ೮೬ ॥
ವಿಮಾನೇನಾರ್ಕವರ್ಣೇನ ಕಿಂಕಿಣೀಜಾಲಮಾಲಿನಾ ।
ಆಗ್ನೇಯೇ ಭವತೇ ತತ್ರ ಮೋದತೇ ಕಾಲಮೀಪ್ಸಿತಂ ॥ ೮೭ ॥
ಜಲೇ ಚೈವ ಮೃತಾನಾಂ ತು ಯೋಧನೀಪುರಮಧ್ಯತಃ ।
ವಸಂತಿ ವಾರುಣೇ ಲೋಕೇ ಯಾವದಾಭೂತಸಂಪ್ಲವಂ ॥ ೮೮ ॥
ಅನಾಶಕೇ ಮೃತಾನಾಂ ತು ತತ್ರ ತೀರ್ಥೇ ನರಾಧಿಪ ।
ಅನಿವರ್ತಿಕಾ ಗತಿರ್ನೄಣಾಂ ನಾಽತ್ರ ಕಾರ್ಯಾ ವಿಚಾರಣಾ ॥ ೮೯ ॥
ತತ್ರ ತೀರ್ಥೇ ತು ಯೋ ದದ್ಯಾತ್ಕಪಿಲಾದಾನಮುತ್ತಮಂ ।
ವಿಧಾನೇನ ತು ಸಂಯುಕ್ತಂ ಶೃಣು ತಸ್ಯಾಽಪಿ ಯತ್ಫಲಂ ॥ ೯೦ ॥
ಯಾವಂತಿ ತಸ್ಯಾ ರೋಮಾಣಿ ತತ್ಪ್ರಸೂತೇಶ್ಚ ಭಾರತ ।
ತಾವಂತಿ ದಿವಿ ಮೋದಂತೇ ಸರ್ವಕಾಮೈಃ ಸುಪೂಜಿತಾಃ ॥ ೯೧ ॥

---

೮೫. "ಎಲೈ ಮಹಾರಾಜನೆ! ಆ ತೀರ್ಥದಲ್ಲಿ ಮಾಡಿದ ದಾನವೂ, ಸ್ನಾನವೂ, ದೇವತಾಪೂಜೆಯೂ ಅಕ್ಷಯಫಲಪ್ರದವೆಂದು ಪರಮೇಶ್ವರನೇ ಹೇಳಿರುವನು.

೮೬. ರಾಜೇಂದ್ರನೆ! ಆ ತೀರ್ಥದಲ್ಲಿ ಅಗ್ನಿಪ್ರವೇಶದಿಂದ ದೇಹವನ್ನು ತ್ಯಜಿಸುವವರಿಗೆ ಯಾವ ಫಲವನ್ನು ಹೇಳಿರುವರೆಂಬುದನ್ನು ಹೇಳುವೆನು, ಕೇಳು.

೮೭. ಆತನು ಸೂರ್ಯವರ್ಣದ ಕಿರುಗಂಟೆಗಳ ಸಾಲುಗಳಿಂದೊಪ್ಪುವ ದಿವ್ಯ ವಿಮಾನದಲ್ಲಿ ಕುಳಿತು, ಅಗ್ನಿಲೋಕಕ್ಕೆ ಹೋಗಿ ಅಲ್ಲಿ ಯಥೇಚ್ಛಕಾಲದವರೆಗೂ ಇರುವನು.

೮೮. ಯೋಧನೀಪುರಕ್ಷೇತ್ರದಲ್ಲಿ ಜಲದಲ್ಲಿ ಪ್ರಾಣತ್ಯಾಗವನ್ನು ಮಾಡುವವರೂ ಮಹಾ ಪ್ರಳಯದವರೆಗೂ ವರುಣಲೋಕದಲ್ಲಿ ವಾಸಮಾಡುತ್ತಿರುವರು.

೮೯. ಮಹಾರಾಜನೆ! ಆ ತೀರ್ಥದಲ್ಲಿ ಉಪವಾಸದಿಂದ ಮೃತರಾದವರಿಗೆ ಆವೃತ್ತಿರಹಿತವಾದ ಬ್ರಹ್ಮಲೋಕವು ಸಿಕ್ಕುವುದು. ಇದರಲ್ಲಿ ಸಂಶಯವಿಲ್ಲ.

೯೦. ಶಾಸ್ತ್ರೋಕ್ತವಿಧಿಯಿಂದ ಕೂಡಿ ಆ ತೀರ್ಥದಲ್ಲಿ ಕಪಿಲೆಯ ಗೋವನ್ನು ದಾನಮಾಡುವವನಿಗೆ ಲಭಿಸುವ ಪುಣ್ಯವನ್ನು ಕೇಳು.

೯೧. ಆ ಆಕಳಿನ ಮತ್ತು ಕರುವಿನ ದೇಹಗಳಲ್ಲಿ ಎಷ್ಟು ಕೂದಲಿರುವುವೋ, ಆ ಸಂಖ್ಯೆಯ ವರ್ಷಗಳವರೆಗೂ ದಾನಮಾಡಿದವರು ಸ್ವರ್ಗಲೋಕದಲ್ಲಿ ಸಕಲ ಭೋಗಗಳಿಂದಲೂ ಸೇವೆಗೊಳ್ಳುತ್ತಿರುವರು.

ಯಾವಂತಿ ರೋಮಾಣಿ ಭವಂತಿ ಧೇನ್ವಾ
ಸ್ತಾವಂತಿ ವರ್ಷಾಣಿ ಮಹೀಯತೇ ಸಃ ।
ಸ್ವರ್ಗಾಚ್ಚ್ಯುತಶ್ಚಾಽಪಿ ತತಸ್ತ್ರಿಲೋಕ್ಯಾಂ
ಕುಲೇ ಸಮುತ್ಪತ್ಸ್ಯತಿ ಗೋಮತಾಂ ಸಃ ॥ ೯೨ ॥
ತತ್ರ ತೀರ್ಥೇ ತು ಯೋ ದದ್ಯಾದ್ರೂಪ್ಯಂ ಕಾಂಚನಮೇವ ವಾ ।
ಕಾಂಚನೇನ ವಿಮಾನೇನ ವಿಷ್ಣುಲೋಕೇ ಮಹೀಯತೇ ॥ ೯೩ ॥
ತಸ್ಮಿಂಸ್ತೀರ್ಥೇ ತು ಯೋ ದದ್ಯಾತ್ಪಾದುಕೇ ವಸ್ತ್ರಮೇವ ಚ ।
ದಾನಸ್ಯಾಸ್ಯ ಪ್ರಭಾವೇಣ ಲಭತೇ ಸ್ವರ್ಗಮೀಪ್ಸಿತಂ ॥ ೯೪ ॥
ಋಗ್ಯಜುಃಸಾಮವೇದಾನಾಂ ಪಠನಾದ್ಯತ್ಫಲಂ ಭವೇತ್ ।
ತತ್ರ ತೀರ್ಥೇ ತು ರಾಜೇಂದ್ರ ಗಾಯತ್ರ್ಯಾ ತತ್ಫಲಂ ಲಭೇತ್ ॥ ೯೫ ॥
ಪ್ರಯಾಗೇ ಯದ್ಭವೇತ್ಪುಣ್ಯಂ ಗಯಾಯಾಂ ಚ ತ್ರಿಪುಷ್ಕರೇ ।
ಕುರುಕ್ಷೇತ್ರೇ ತು ರಾಜೇಂದ್ರ ರಾಹುಗ್ರಸ್ತೇ ದಿವಾಕರೇ ॥ ೯೬ ॥
ಸೋಮೇಶ್ವರೇ ಚ ಯತ್ಪುಣ್ಯಂ ಸೋಮಸ್ಯ ಗ್ರಹಣೇ ತಥಾ ।
ತತ್ಫಲಂ ಲಭತೇ ತತ್ರ ಸ್ನಾನಮಾತ್ರಾನ್ನ ಸಂಶಯಃ ॥ ೯೭ ॥

---

೯೨. ಗೋವಿನ ದೇಹದ ಕೂದಲಿನ ಸಂಖ್ಯೆಯ ವರ್ಷಗಳವರೆಗೂ ಸ್ವರ್ಗದಲ್ಲಿ ಮರ್ಯಾದೆಯನ್ನು ಕೈಗೊಂಡು ಅಲ್ಲಿಂದ ಚ್ಯುತನಾದ ಮೇಲೆಯೂ ಭೂಮಂಡಲದಲ್ಲಿ ಮಹಾಗೋಧನವುಳ್ಳ ಉತ್ತಮ ಕುಲದಲ್ಲಿಯೇ ಅಂತಹವನು ಹುಟ್ಟುವನು.

೯೩. ಆ ತೀರ್ಥದಲ್ಲಿ ಯಾವನು ಯಥಾಶಕ್ತಿಯಾಗಿ ಬೆಳ್ಳಿಯನ್ನೊ, ಚಿನ್ನವನ್ನೊ ದಾನಮಾಡುವನೊ, ಅವನು ಚಿನ್ನದ ವಿಮಾನದಲ್ಲಿ ಕುಳಿತು ವಿಷ್ಣುಲೋಕದಲ್ಲಿ ಪೂಜೆಗೊಳ್ಳುವನು.

೯೪. ಆ ತೀರ್ಥದಲ್ಲಿ ಯಾವನು ಪಾದರಕ್ಷೆಗಳನ್ನಾಗಲಿ, ವಸ್ತ್ರಗಳನ್ನಾಗಲಿ ಕೊಡುವನೊ, ಅವನು ದಾನದ ಫಲವಾಗಿ ಅಭಿಲಷಿತವಾದ ಸ್ವರ್ಗವನ್ನು ಹೊಂದುವನು.

೯೫. ರಾಜೇಂದ್ರನೆ! ಋಗ್ಯಜುಸ್ಸಾಮಗಳೆಂಬ ಮೂರು ವೇದಗಳನ್ನೂ ಅಧ್ಯಯನಮಾಡಿರುವುದರಿಂದ ಯಾವ ಫಲವುಂಟೊ, ಅದನ್ನು ಈ ತೀರ್ಥದಲ್ಲಿ ಮಾಡಿದ ಒಂದು ಗಾಯತ್ರೀಮಂತ್ರದ ಜಪದಿಂದಲೇ ಪಡೆಯಬಹುದು.

೯೬-೯೭. ಧರ್ಮಪುತ್ರನೆ! ಸೂರ್ಯಗ್ರಹಣಕಾಲದಲ್ಲಿ ಪ್ರಯಾಗ, ಗಯೆ, ಪುಷ್ಕರತ್ರಯಗಳು ಮತ್ತು ಕುರುಕ್ಷೇತ್ರಗಳನ್ನು ಸೇವಿಸುವುದರಿಂದ ಯಾವ ಫಲವೊ, ಚಂದ್ರಗ್ರಹಣದಲ್ಲಿ ಸೋಮೇಶ್ವರತೀರ್ಥದ ಸೇವೆಯಿಂದ ಯಾವ ಪುಣ್ಯವೊ, ಅದೆಲ್ಲವನ್ನೂ ಈ ತೀರ್ಥದಲ್ಲಿ ಮಾಡಿದ ಒಂದು ಸ್ನಾನದಿಂದಲೇ ಸಂಪಾದಿಸಬಹುದೆಂಬುದರಲ್ಲಿ ಸಂದೇಹವಿಲ್ಲ.

ದ್ವಾದಶ್ಯಾಂ ತು ನರಃ ಸ್ನಾತ್ವಾ ನಮಸ್ಕೃತ್ಯ ಜನಾರ್ದನಂ ।
ಉದ್ಧೃತಾಃ ಪಿತರಸ್ತೇನ ಅವಾಪ್ತಂ ಜನ್ಮನಃ ಫಲಂ ॥ ೯೮ ॥
ಸಂಕ್ರಾಂತೌ ಚ ವ್ಯತೀಪಾತೇ ದ್ವಾದಶ್ಯಾಂ ಚ ವಿಶೇಷತಃ ।
ಬ್ರಾಹ್ಮಣಂ ಭೋಜಯೇದೇಕಂ ಕೋಟಿರ್ಭವತಿ ಭೋಜಿತಾ ॥ ೯೯ ॥
ಪೃಥಿವ್ಯಾಂ ಯಾನಿ ತೀರ್ಥಾನಿ ಹ್ಯಾಸಮುದ್ರಾಣಿ ಪಾಂಡವ ।
ತಾನಿ ಸರ್ವಾಣಿ ತತ್ರೈವ ದ್ವಾದಶ್ಯಾಂ ಪಾಂಡುನಂದನ ॥ ೧೦೦ ॥
ಕ್ಷಯಂ ಯಾಂತಿ ಚ ದಾನಾನಿ ಯಜ್ಞಹೋಮಬಲಿಕ್ರಿಯಾಃ ।
ನ ಕ್ಷೀಯತೇ ಮಹಾರಾಜ ತತ್ರ ತೀರ್ಥೇ ತು ಯತ್ಕೃತಂ ॥ ೧೦೧ ॥
ಯದ್ಭೂತಂ ಯದ್ಭವಿಷ್ಯಚ್ಚ ತೀರ್ಥಮಾಹಾತ್ಮ್ಯಮುತ್ತಮಂ ।
ಕಥಿತಂ ತೇ ಮಯಾ ಸರ್ವಂ ಪೃಥಗ್ಭಾವೇನ ಭಾರತ ॥ ೧೦೨ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ
ಪಂಚಮೇ ಆವಂತ್ಯಖಂಡೇ ತೃತೀಯೇ ರೇವಾಖಂಡೇ
"ರುಕ್ಮಿಣೀತೀರ್ಥಮಾಹಾತ್ಮ್ಯವರ್ಣನಂ" ನಾಮ
ದ್ವಿಚತ್ವಾರಿಂಶದಧಿಕಶತತಮೋಽಧ್ಯಾಯಃ

---

೯೮–೯೯. ದ್ವಾದಶಿಯ ದಿನದಲ್ಲಿ ಸ್ನಾನವನ್ನು ಮಾಡಿ ಜನಾರ್ದನನಿಗೆ ನಮಸ್ಕಾರವನ್ನು ಮಾಡಲು ಮನುಷ್ಯನು ತನ್ನ ಪಿತೃಗಳನ್ನುದ್ಧರಿಸಿ ಜನ್ಮಸಾರ್ಥಕ್ಯವನ್ನೂ ಪಡೆಯುವನು. ಸಂಕ್ರಮಣದ ದಿನಗಳಲ್ಲಿಯೂ, ವ್ಯತೀಪಾತದ ದಿವಸಗಳಲ್ಲಿಯೂ, ವಿಶೇಷವಾಗಿ ದ್ವಾದಶಿಯ ತಿಥಿಗಳಲ್ಲಿಯೂ ಅಲ್ಲಿ ಮಾಡಿಸಿದ ಒಬ್ಬೊಬ್ಬ ಬ್ರಾಹ್ಮಣನ ಭೋಜನದಿಂದಲೂ ಒಂದು ಕೋಟಿ ಬ್ರಾಹ್ಮಣರ ಸಂತರ್ಪಣೆಯಾಯಿತೆಂದು ತಿಳಿಯಬೇಕು.

೧೦೦. ಪಾಂಡುನಂದನನೆ! ಭೂಮಂಡಲದಲ್ಲಿ ಸಮುದ್ರಗಳೇ ಕೊನೆಯಾದ ಎಷ್ಟು ತೀರ್ಥಗಳಿರುವುವೊ, ಅವುಗಳೆಲ್ಲವೂ ದ್ವಾದಶಿಯ ದಿನದಲ್ಲಿ ಆ ತೀರ್ಥದಲ್ಲಿ ಸನ್ನಿಹಿತಗಳಾಗಿರುವುವು.

೧೦೧–೧೦೨. ಮಹಾರಾಜನೆ! ಮನುಷ್ಯನು ಮಾಡಿದ ದಾನಗಳಿಗೂ, ಯಜ್ಞಗಳಿಗೂ, ಹೋಮಗಳಿಗೂ, ಬಲಿಕರ್ಮಗಳಿಗೂ ಫಲವು ಕಾಲಕ್ರಮದಲ್ಲಿ ಕೊನೆಗಾಣುವುದು. ಆದರೆ ಆ ತೀರ್ಥದಲ್ಲಿ ಮಾಡಿದ ಅತ್ಯಲ್ಪವಾದ ಧರ್ಮವೂ ಅಕ್ಷಯವಾಗಿ ನಿಲ್ಲುವುದು. ಧರ್ಮರಾಜನೆ! ಭೂತಭವಿಷ್ಯತ್ಕಾಲಗಳಿಗೆಲ್ಲ ಸಂಬಂಧಿಸಿರುವ ಈ ತೀರ್ಥದ ಉತ್ತಮ ಮಾಹಾತ್ಮ್ಯವನ್ನು ಆಮೂಲಾಗ್ರವಾಗಿ ನಿನಗೆ ವಿವರಿಸಿ ಹೇಳಿರುವೆನು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ
ಶ್ರೀ ಸ್ಕಾಂದಮಹಾಪುರಾಣದ ಐದನೆಯ ಆವಂತ್ಯಖಂಡದ ಮೂರನೆಯ ರೇವಾಖಂಡದಲ್ಲಿ
"ರುಕ್ಮಿಣೀತೀರ್ಥಮಾಹಾತ್ಮ್ಯವರ್ಣನ"ವೆಂಬ
ನೂರನಲವತ್ತೆರಡನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

## ಅಥ ತ್ರಿಚತ್ವಾರಿಂಶದಧಿಕಶತತಮೋಽಧ್ಯಾಯಃ

### ಯೋಜನೇಶ್ವರತೀರ್ಥಮಾಹಾತ್ಮ್ಯವರ್ಣನಂ

ಶ್ರೀ ಮಾರ್ಕಂಡೇಯ ಉವಾಚ:—

**ತತೋ ಗಚ್ಛೇನ್ಮಹಾರಾಜ ಯೋಜನೇಶ್ವರಮುತ್ತಮಂ ।**
**ಯತ್ರ ಸಿದ್ಧೌ ಪುರಾಕಲ್ಪೇ ನರನಾರಾಯಣಾವೃಷೀ ॥ ೧ ॥**
**ತತ್ರ ತೀರ್ಥೇ ತಪಸ್ತಪ್ತ್ವಾ ಸಂಗ್ರಾಮೇ ದೇವದಾನವೈಃ ।**
**ಜಯಂ ಪ್ರಾಪ್ತೌ ಮಹಾತ್ಮಾನೌ ನರನಾರಾಯಣಾವುಭೌ ॥ ೨ ॥**
**ಪುನಸ್ತ್ರೇತಾಯುಗೇ ಪ್ರಾಪ್ತೇ ತೌ ದೇವೌ ರಾಮಲಕ್ಷ್ಮಣೌ ।**
**ತತ್ರ ತೀರ್ಥೇ ಪುನಃ ಸ್ನಾತ್ವಾ ರಾವಣೋ ದುರ್ಜಯೋ ಹತಃ ॥ ೩ ॥**
**ಪುನಃ ಪಾರ್ಥ ಕಲೌ ಪ್ರಾಪ್ತೇ ತೌ ದೇವೌ ಬಲಕೇಶವೌ ।**
**ವಸುದೇವಕುಲೇ ಜಾತೌ ದುಷ್ಕರಂ ಕರ್ಮ ಚಕ್ರತುಃ ॥ ೪ ॥**

---

### ಕನ್ನಡದ ಅನುವಾದ

#### ಯೋಜನೇಶ್ವರತೀರ್ಥಮಾಹಾತ್ಮ್ಯವರ್ಣನ

೧. ಮಾರ್ಕಂಡೇಯನು ಹೇಳುತ್ತಾನೆ:—ಮಹಾರಾಜನೆ! ಬಳಿಕ ಯೋಜನೇಶ್ವರವೆಂಬ ಉತ್ತಮತೀರ್ಥವನ್ನು ಸೇರಬೇಕು. ಅಲ್ಲಿಯೇ ಹಿಂದಿನ ಕಲ್ಪದಲ್ಲಿ ಮಹರ್ಷಿಗಳಾದ ನರನಾರಾಯಣರು ತಪಸ್ಸಿದ್ಧಿಯನ್ನು ಪಡೆದರು.

೨. ಆ ತೀರ್ಥದಲ್ಲಿಯೇ ಉಗ್ರತಪಸ್ಸನ್ನಾಚರಿಸಿ ಮಹಾತ್ಮರಾದ ನರನಾರಾಯಣರಿಬ್ಬರೂ ದೇವದಾನವರ ಯುದ್ಧದಲ್ಲಿ ಜಯವನ್ನು ಸಂಪಾದಿಸಿದರು.

೩. ಪುನಃ ತ್ರೇತಾಯುಗದಲ್ಲಿ ಆ ದೇವತೆಗಳೇ ರಾಮಲಕ್ಷ್ಮಣರಾಗಿ ಅವತರಿಸಿ ಆ ತೀರ್ಥದಲ್ಲಿಯೇ ತಪಸ್ಸನ್ನುಮಾಡಲು ಅಜೇಯನೆನಿಸಿದ್ದ ರಾವಣಾಸುರನು ಹತನಾದನು.

೪. ಪೃಥಾಪುತ್ರನೆ! ಮತ್ತೆ ಕಲಿಯುಗದ ಆದಿಯಲ್ಲಿ ಅವರೇ ಬಲರಾಮ ಶ್ರೀ ಕೃಷ್ಣರಾಗಿ ವಸುದೇವನ ಕುಲದಲ್ಲಿ ಜನಿಸಿ ಅಸಾಧ್ಯಗಳಾದ ಕೆಲಸಗಳನ್ನು ಮಾಡಿದರು.

ನರಕಂ ಕಾಲನೇಮಿಂ ಚ ಕಂಸಂ ಚಾಣೂರಮುಷ್ಟಿಕೌ ।
ಶಿಶುಪಾಲಂ ಜರಾಸಂಧಂ ಜಘ್ನತುರ್ಬಲಕೇಶವೌ ॥ ೫ ॥
ತತಸ್ತತ್ರ ರಿಪೂನ್ ಸಂಖ್ಯೇ ಭೀಷ್ಮದ್ರೋಣಪುರಃಸರಾನ್ ।
ಕರ್ಣದುರ್ಯೋಧನಾದೀಂಶ್ಚ ನಿಹನಿಷ್ಯತಿ ಸ ಪ್ರಭುಃ ॥ ೬ ॥
ಧರ್ಮಕ್ಷೇತ್ರೇ ಕುರುಕ್ಷೇತ್ರೇ ತತ್ರ ಯುಧ್ಯಂತಿ ತೇ ಕ್ಷಣಂ ।
ಭೀಮಾರ್ಜುನನಿಮಿತ್ತೇನ ಶಿಷ್ಯೌ ಕೃತ್ವಾ ಪರಸ್ಪರಂ ॥ ೭ ॥
ತತ್ರ ತೀರ್ಥೇ ಪುನರ್ಗತ್ವಾ ತಪಃ ಕೃತ್ವಾ ಸುದುಷ್ಕರಂ ।
ಪೂಜಯಿತ್ವಾ ದ್ವಿಜಾನ್ ಭಕ್ತ್ಯಾ ಯಾಸ್ಯೇತೇ ದ್ವಾರಕಾಂ ಪುನಃ ॥ ೮ ॥
ತತ್ರ ತೀರ್ಥೇ ತು ಯಃ ಸ್ನಾತ್ವಾ ಪೂಜಯೇದ್ಬಲಕೇಶವೌ ।
ತೇನ ದೇವೋ ಜಗದ್ಧಾತಾ ಪೂಜಿತಸ್ತ್ರಿಗುಣಾತ್ಮವಾನ್ ॥ ೯ ॥
ಉಪವಾಸೀ ನರೋ ಭೂತ್ವಾ ಯಸ್ತು ಕುರ್ಯಾತ್ರಜಾಗರಂ ।
ಮುಚ್ಯತೇ ಸರ್ವಪಾಪೇಭ್ಯೋ ಗಾಯಂಸ್ತಸ್ಯ ಶುಭಾಂ ಕಥಾಂ ॥ ೧೦ ॥

---

೫. ಕೃಷ್ಣಬಲರಾಮರು ನರಕ, ಕಾಲನೇಮಿ, ಕಂಸ, ಚಾಣೂರ, ಮುಷ್ಟಿಕ, ಶಿಶುಪಾಲ, ಜರಾಸಂಧರೆಂಬ ರಾಕ್ಷಸರನ್ನು ಕೊಂದರು.

೬. ಮುಂದೆ ನಡೆಯುವ ಮಹಾಭಾರತ ಯುದ್ಧದಲ್ಲಿಯೂ ಭೀಷ್ಮದ್ರೋಣರೇ ಮೊದಲಾದವರನ್ನೂ ಕರ್ಣದುರ್ಯೋಧನಾದಿಗಳನ್ನೂ ಲೋಕಪ್ರಭುವಾದ ಶ್ರೀ ಕೃಷ್ಣನು ನಿಗ್ರಹಿಸುವನು.

೭. ಭೀಮನನ್ನು ಬಲರಾಮನೂ, ಅರ್ಜುನನನ್ನು ಶ್ರೀ ಕೃಷ್ಣನೂ ನಿಮಿತ್ತ ಮಾತ್ರಕ್ಕಾಗಿ ಶಿಷ್ಯರನ್ನು ಮಾಡಿಕೊಂಡು ಮುಂದೆ ಧರ್ಮಕ್ಷೇತ್ರವೆನಿಸಿದ ಕುರುಕ್ಷೇತ್ರದಲ್ಲಿ ಸ್ವಲ್ಪಕಾಲ ಯುದ್ಧವನ್ನು ಮಾಡುವರು.

೮. ಬಳಿಕ ಆ ತೀರ್ಥವನ್ನು ಸೇರಿ ಅಲ್ಲಿ ದುಸ್ಸಾಧ್ಯವಾದ ತಪಸ್ಸನ್ನಾಚರಿಸಿ ಭಕ್ತಿಯಿಂದ ಬ್ರಾಹ್ಮಣರಿಗೆ ಪೂಜೆಯನ್ನು ಮಾಡಿ ಮತ್ತೆ ದ್ವಾರಕೆಗೆ ಹಿಂದಿರುಗುವರು.

೯. ಆ ತೀರ್ಥದಲ್ಲಿ ಮಿಂದು ಯಾವನು ಬಲರಾಮಕೇಶವರನ್ನು ನೋಡುವನೊ, ಅವನು ತ್ರಿಗುಣಾತ್ಮಕನಾದ ದೇವದೇವೋತ್ತಮನನ್ನು ಪೂಜಿಸಿದವನಾಗುವನು.

೧೦. ಯಾವ ನರನು ಉಪವಾಸದಿಂದ ಕ್ಷೇತ್ರದ ಪವಿತ್ರ ಚರಿತ್ರೆಯನ್ನು ಪಠಿಸುತ್ತ ರಾತ್ರಿಯಲ್ಲಿ ಜಾಗರಣೆಯನ್ನು ಮಾಡುವನೊ, ಅವನು ಸಕಲ ಪಾತಕಗಳನ್ನೂ ನೀಗುವನು.

ಯಾವತಸ್ತತ್ರ ತೀರ್ಥೇ ತು ವೃಕ್ಷಾನ್ ಪಶ್ಯಂತಿ ಮಾನವಾಃ ।
ಬ್ರಹ್ಮಹತ್ಯಾದಿಕಂ ಪಾಪಂ ತಾವದೇಷಾಂ ಪ್ರಣಶ್ಯತಿ ॥ ೧೧ ॥
ಪ್ರಾತರುತ್ಥಾಯ ಯೇ ಕೇಚಿತ್ಪಶ್ಯಂತಿ ಬಲಕೇಶವೌ ।
ತೇನೈವ ಸದೃಶಾಃ ಸರ್ವೇ ದೇವದೇವೇನ ಚಕ್ರಿಣಾ ॥ ೧೨ ॥
ತೇ ಪೂಜ್ಯಾಸ್ತೇ ನಮಸ್ಕಾರ್ಯಾಸ್ತೇಷಾಂ ಜನ್ಮ ಸುಜೀವಿತಂ ।
ಯೇ ನಮಂತಿ ಜಗತ್ಪೂಜ್ಯಂ ದೇವಂ ನಾರಾಯಣಂ ಹರಿಂ ॥ ೧೩ ॥
ತತ್ರ ತೀರ್ಥೇ ತು ಯದ್ದಾನಂ ಸ್ನಾನಂ ದೇವಾರ್ಚನಂ ನೃಪ ।
ಕ್ರಿಯತೇ ತತ್ಫಲಂ ಸರ್ವಮಕ್ಷಯಾಯೋಪಕಲ್ಪತೇ ॥ ೧೪ ॥

ಅಗ್ನೇರಪತ್ಯಂ ಪ್ರಥಮಂ ಸುವರ್ಣಂ
ಭೂರ್ವೈಷ್ಣವೀ ಸೂರ್ಯಸುತಾಶ್ಚ ಗಾವಃ ।
ಲೋಕಾಸ್ತ್ರಯಸ್ತೇನ ಭವಂತಿ ದತ್ತಾ
ಯಃ ಕಾಂಚನಂ ಗಾಂ ಚ ಭುವಂ ಚ ದದ್ಯಾತ್ ॥ ೧೫ ॥

ಏತತ್ತೇ ಕಥಿತಂ ಸರ್ವಂ ತೀರ್ಥಮಾಹಾತ್ಮ್ಯಮುತ್ತಮಂ ।
ಅತೀತಂ ಚ ಭವಿಷ್ಯಚ್ಚ ವರ್ತಮಾನಂ ಮಹಾಬಲಂ ॥ ೧೬ ॥

---

೧೧. ಮಾನವರು ಆ ತೀರ್ಥಕ್ಕೆ ಬಂದು ಅಲ್ಲಿರುವ ವೃಕ್ಷಗಳನ್ನು ನೋಡುವ ಮಾತ್ರದಿಂದಲೇ ಅವರ ಬ್ರಹ್ಮಹತ್ಯಾದಿ ಮಹಾಪಾತಕಗಳೂ ನಾಶವಾಗುವುವು.

೧೨. ಯಾರು ಬೆಳಿಗ್ಗೆ ಏಳುತ್ತಲೆ ಕೃಷ್ಣ ಬಲರಾಮರ ದರ್ಶನವನ್ನು ತೆಗೆದುಕೊಳ್ಳುವರೊ, ಅವರೆಲ್ಲರೂ ಚಕ್ರಪಾಣಿಯಾದ ಮಹಾವಿಷ್ಣುವಿಗೇ ಸಮಾನರೆನಿಸುವರು.

೧೩. ಲೋಕಪೂಜ್ಯನೂ, ಸದ್ಗತಿಪ್ರದನೂ ಆದ ಶ್ರೀಹರಿಯನ್ನು ಯಾರು ನಮಸ್ಕರಿಸುವರೊ, ಅವರೇ ಪೂಜ್ಯರು, ನಮಸ್ಕಾರಾರ್ಹರು. ಅವರ ಜನ್ಮವೇ ಸಫಲವು.

೧೪. ರಾಜೇಂದ್ರನೆ! ಅಲ್ಲಿ ಮಾಡಿದ ಸ್ನಾನ, ದಾನ, ದೇವತಾರ್ಚನ ಮುಂತಾದ ಪ್ರತಿಯೊಂದು ಕಾರ್ಯವೂ ಅಕ್ಷಯಫಲಪ್ರದವಾಗುವುದು.

೧೫. ಅಗ್ನಿಯ ಪ್ರಥಮೋತ್ಪಾದಿತವೇ ಸುವರ್ಣವು. ಭೂಮಿಯು ಮಹಾ ವಿಷ್ಣುವಿನ ಕ್ರಿಯೆಯು. ಗೋವುಗಳು ಸೂರ್ಯನಿಂದಾದುವುಗಳು. ಆದುದ ರಿಂದ ಚಿನ್ನ, ಗೋವು, ಭೂಮಿಗಳನ್ನು ದಾನಮಾಡಲು ಮೂರು ಲೋಕಗಳನ್ನೂ ದಾನಮಾಡಿದಂತಾಗುವುದು.

೧೬. ಇಂತು ನಿನಗೆ ಈ ತೀರ್ಥದ ಮಹಾಮಾಹಾತ್ಮ್ಯವನ್ನು ಅಮೂಲಾಗ್ರ ವಾಗಿ ತಿಳಿಸಿರುವೆನು. ಅನಿವಾರ್ಯವಾಗಿ ಹಿಂದೆ ನಡೆದುದನ್ನೂ, ಮುಂದೆ ನಡೆಯುವುದನ್ನೂ, ಈಗ ನಡೆಯುತ್ತಿರುವುದನ್ನೂ ವರ್ಣಿಸಿದೆನು.

**ಶ್ರುತ್ವಾ ವಾಽಪಿ ಪಠಿತ್ವೇದಂ ಶ್ರಾವಯಿತ್ವಾಽಥ ಧಾರ್ಮಿಕಾನ್ ।**
**ಮುಚ್ಯತೇ ಸರ್ವಪಾಪೇಭ್ಯೋ ನಾಽತ್ರ ಕಾರ್ಯಾ ವಿಚಾರಣಾ ॥ ೧೭ ॥**

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ
ಪಂಚಮೇ ಆವಂತ್ಯಖಂಡೇ ತೃತೀಯೇ ರೇವಾಖಂಡೇ
"ಯೋಜನೇಶ್ವರತೀರ್ಥಮಾಹಾತ್ಮ್ಯವರ್ಣನಂ"ನಾಮ
ತ್ರಿಚತ್ವಾರಿಂಶದಧಿಕಶತತಮೋಽಧ್ಯಾಯಃ

---

೧೭. ಈ ಕಥೆಯನ್ನು ಕೇಳುವುದರಿಂದಲೂ, ಅಧ್ಯಯನ ಮಾಡುವುದರಿಂದಲೂ, ಧರ್ಮಭೀರುಗಳಾದ ಇತರರಿಗೆ ಶ್ರವಣಮಾಡಿಸುವುದರಿಂದಲೂ ಮನುಷ್ಯನು ಸರ್ವಪಾತಕಗಳಿಂದಲೂ ಮುಕ್ತನಾಗುವುದರಲ್ಲಿ ಸಂದೇಹವಿಲ್ಲ.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ
ಶ್ರೀ ಸ್ಕಾಂದಮಹಾಪುರಾಣದ ಐದನೆಯ ಆವಂತ್ಯಖಂಡದ ಮೂರನೆಯ ರೇವಾಖಂಡದಲ್ಲಿ
"ಯೋಜನೇಶ್ವರತೀರ್ಥಮಾಹಾತ್ಮ್ಯವರ್ಣನ"ವೆಂಬ
ನೂರನಲವತ್ತಮೂರನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

# ಅಥ ಚತುಶ್ಚತ್ವಾರಿಂಶದಧಿಕಶತತಮೋಽಧ್ಯಾಯಃ

## ದ್ವಾದಶೀತೀರ್ಥಮಾಹಾತ್ಮ್ಯವರ್ಣನಂ

ಶ್ರೀ ಮಾರ್ಕಂಡೇಯ ಉವಾಚ :—

ತತೋ ಗಚ್ಛೇನ್ಮಹಾರಾಜ ದ್ವಾದಶೀತೀರ್ಥಮುತ್ತಮಂ ।
ಕ್ಷರಂತಿ ಸರ್ವದಾನಾನಿ ಜಪಹೋಮಬಲಿಕ್ರಿಯಾಃ ॥ ೧ ॥
ನ ಕ್ಷೀಯತೇ ತು ರಾಜೇಂದ್ರ ಚಕ್ರತೀರ್ಥೇ ತು ಯತ್ಕೃತಂ ।
ಯದ್ಭೂತಂ ಯದ್ಭವಿಷ್ಯಚ್ಚ ತೀರ್ಥಮಾಹಾತ್ಮ್ಯಮುತ್ತಮಂ ॥ ೨ ॥
ಕಥಿತಂ ತನ್ಮಯಾ ಸರ್ವಂ ಪೃಥಗ್ಭಾವೇನ ಭಾರತ ॥ ೩ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ
ಪಂಚಮೇ ಆವಂತ್ಯಖಂಡೇ ತೃತೀಯೇ ರೇವಾಖಂಡೇ
“ ದ್ವಾದಶೀತೀರ್ಥಮಾಹಾತ್ಮ್ಯವರ್ಣನಂ ” ನಾಮ
ಚತುಶ್ಚತ್ವಾರಿಂಶದಧಿಕಶತತಮೋಽಧ್ಯಾಯಃ

---

## ಕನ್ನಡದ ಅನುವಾದ

### ದ್ವಾದಶೀತೀರ್ಥಮಾಹಾತ್ಮ್ಯವರ್ಣನ

೧. ಮಾರ್ಕಂಡೇಯನು ಹೇಳುತ್ತಾನೆ :—ಮಹಾರಾಜನೆ ! ಬಳಿಕ ದ್ವಾದಶೀತೀರ್ಥವೆಂಬ ಉತ್ತಮ ತೀರ್ಥವನ್ನು ಸೇವಿಸಬೇಕು. ಅಲ್ಲಿ ಸಮಸ್ತದಾನಗಳ, ಜಪಗಳ, ಹೋಮಗಳ, ಯಜ್ಞಗಳ ಕರ್ಮಫಲಗಳೂ ಕೊನೆಗಾಣುವುವು.

೨–೩. ರಾಜೇಂದ್ರನೆ ! ಆದರೆ ಚಕ್ರತೀರ್ಥದಲ್ಲಿ ಮಾಡಿದ ಯಾವ ಕರ್ಮವೂ ಕ್ಷಯವನ್ನು ಹೊಂದುವುದಿಲ್ಲ. ಇಂತು ಈ ತೀರ್ಥದ ಮಾಹಾತ್ಮ್ಯದಲ್ಲಿ ಹಿಂದೆ ನಡೆದುದನ್ನೂ ಮುಂದೆ ನಡೆಯುವುದನ್ನೂ ನಿನಗೆ ಯಥಾರ್ಥವಾಗಿ ಸಂಪೂರ್ಣವಾಗಿ ತಿಳಿಸಿರುವೆನು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ
ಶ್ರೀ ಸ್ಕಾಂದಮಹಾಪುರಾಣದ ಐದನೆಯ ಆವಂತ್ಯಖಂಡದ ಮೂರನೆಯ ರೇವಾಖಂಡದಲ್ಲಿ
“ ದ್ವಾದಶೀತೀರ್ಥಮಾಹಾತ್ಮ್ಯವರ್ಣನ ” ವೆಂಬ
ನೂರನಲವತ್ತನಾಲ್ಕನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

# ಅಥ ಪಂಚಚತ್ವಾರಿಂಶದಧಿಕಶತತಮೋಽಧ್ಯಾಯಃ

### ಶಿವತೀರ್ಥಮಾಹಾತ್ಮ್ಯವರ್ಣನಂ

ಶ್ರೀ ಮಾರ್ಕಂಡೇಯ ಉವಾಚ :—

ತತೋ ಗಚ್ಛೇದ್ಧರಾಪಾಲ ಶಿವತೀರ್ಥಮನುತ್ತಮಂ ।
ದರ್ಶನಾದ್ಯಸ್ಯ ದೇವಸ್ಯ ಮುಚ್ಯತೇ ಸರ್ವಕಿಲ್ಬಿಷೈಃ ॥ ೧ ॥
ಶಿವತೀರ್ಥೇ ತು ಯಃ ಸ್ನಾತ್ವಾ ಜಿತಕ್ರೋಧೋ ಜಿತೇಂದ್ರಿಯಃ ।
ಪೂಜಯೇತ ಮಹಾದೇವಂ ಸೋಽಗ್ನಿಷ್ಟೋಮಫಲಂ ಲಭೇತ್ ॥ ೨ ॥
ತತ್ರ ತೀರ್ಥೇ ತು ಯೋ ಭಕ್ತ್ಯಾ ಸೋಪವಾಸೋಽರ್ಚಯೇಚ್ಛಿವಂ ।
ಅನಿವರ್ತಿಕಾ ಗತಿಸ್ತಸ್ಯ ರುದ್ರಲೋಕಾದಸಂಶಯಂ ॥ ೩ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ
ಪಂಚಮೇ ಆವಂತ್ಯಖಂಡೇ ತೃತೀಯೇ ರೇವಾಖಂಡೇ
"ಶಿವತೀರ್ಥಮಾಹಾತ್ಮ್ಯವರ್ಣನಂ"
ನಾಮ ಪಂಚಚತ್ವಾರಿಂಶದಧಿಕಶತತಮೋಽಧ್ಯಾಯಃ

---

## ಕನ್ನಡದ ಅನುವಾದ

### ಶಿವತೀರ್ಥಮಾಹಾತ್ಮ್ಯವರ್ಣನ

೧. ಮಾರ್ಕಂಡೇಯನು ಹೇಳುತ್ತಾನೆ:—ಮಹೀಪಾಲಕನೆ! ಬಳಿಕ ಸರ್ವೋತ್ತಮವಾದ ಶಿವತೀರ್ಥಕ್ಕೆ ಹೋಗಬೇಕು. ಅಲ್ಲಿರುವ ಶಿವನ ದರ್ಶನದಿಂದಲೇ ಮಾನವನು ಸಮಸ್ತಪಾತಕಗಳಿಂದಲೂ ಮುಕ್ತನಾಗುವನು.

೨. ಯಾವನು ಶಿವತೀರ್ಥದಲ್ಲಿ ಮಿಂದು, ಕ್ರೋಧವನ್ನೂ ಇಂದ್ರಿಯವನ್ನೂ ಜಯಿಸಿ ಮಹಾದೇವನನ್ನು ಪೂಜಿಸುವನೊ, ಅವನು ಅಗ್ನಿಷ್ಟೋಮದ ಫಲವನ್ನು ಪಡೆಯುವನು.

೩. ಅಲ್ಲಿ ಭಕ್ತಿಯಿಂದ ಉಪವಾಸವನ್ನುಮಾಡಿ ಶಿವಪೂಜೆಯನ್ನೆಸಗಿದವನಿಗೆ ಶಿವಲೋಕದಿಂದ ಪುನರಾವೃತ್ತಿಯಿಲ್ಲವೆಂಬುದು ನಿಸ್ಸಂಶಯವು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ
ಶ್ರೀ ಸ್ಕಾಂದಮಹಾಪುರಾಣದ ಐದನೆಯ ಆವಂತ್ಯಖಂಡದ ಮೂರನೆಯ ರೇವಾಖಂಡದಲ್ಲಿ
"ಶಿವತೀರ್ಥಮಾಹಾತ್ಮ್ಯವರ್ಣನ"ವೆಂಬ
ನೂರನಲವತ್ತೈದನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

## ಅಥ ಷಟ್‌ಚತ್ವಾರಿಂಶದಧಿಕಶತತಮೋಽಧ್ಯಾಯಃ

### ಅಸ್ಮಾಹಕತೀರ್ಥಫಲಮಾಹಾತ್ಮ್ಯವರ್ಣನಂ

ಶ್ರೀ ಮಾರ್ಕಂಡೇಯ ಉವಾಚ :—

ಅಸ್ಮಾಹಕಂ ತತೋ ಗಚ್ಛೇತ್ಪಿತೃತೀರ್ಥಮನುತ್ತಮಂ ।
ಪ್ರೇತತ್ವಾದ್ಯತ್ರ ಮುಚ್ಯಂತೇ ಪಿಂಡೇನೈಕೇನ ಪೂರ್ವಜಾಃ ॥ ೧ ॥

ಯುಧಿಷ್ಠಿರ ಉವಾಚ :—

ಅಸ್ಮಾಹಕಸ್ಯ ಮಾಹಾತ್ಮ್ಯಂ ಕಥಯಸ್ವ ಮಮಾಽನಘ ।
ಸ್ನಾನದಾನೇನ ಯತ್ಪುಣ್ಯಂ ತಥಾ ಪಿಂಡೋದಕೇನ ಚ ॥ ೨ ॥

ಶ್ರೀ ಮಾರ್ಕಂಡೇಯ ಉವಾಚ :—

ಪುರಾ ಕಲ್ಪೇ ನೃಪಶ್ರೇಷ್ಠ ಋಷಿದೇವಸಮಾಗಮೇ ।
ಪ್ರಶ್ನಃ ಪೃಷ್ಟೋ ಮಯಾ ತಾತ ಯಥಾ ತ್ವಮನುಪೃಚ್ಛಸಿ ॥ ೩ ॥
ಏಕತ್ರ ಸಾಗರಾಃ ಸಪ್ತ ಸಪ್ರಯಾಗಾಃ ಸಪುಷ್ಕರಾಃ ।
ನಾಽಸ್ಯ ಸಾಮ್ಯಂ ಲಭಂತೇ ತೇ ನಾಽತ್ರ ಕಾರ್ಯಾ ವಿಚಾರಣಾ ॥ ೪ ॥

---

## ಕನ್ನಡದ ಅನುವಾದ

### ಅಸ್ಮಾಹಕತೀರ್ಥಮಾಹಾತ್ಮ್ಯವರ್ಣನ

೧. ಮಾರ್ಕಂಡೇಯನು ಹೇಳುತ್ತಾನೆ :—ಬಳಿಕ ಪಿತೃತೀರ್ಥವೆನಿಸಿದ ಉತ್ತಮೋತ್ತಮವಾದ ಅಸ್ಮಾಹಕತೀರ್ಥವನ್ನು ಸೇರಬೇಕು. ಅಲ್ಲಿ ಒಂದು ಪಿಂಡದಾನವನ್ನು ಮಾಡಿದವನ ಪಿತೃಗಳೂ ತಮ್ಮ ಪ್ರೇತಭಾವದಿಂದ ಮುಕ್ತರಾಗುವರು.

೨. ಯುಧಿಷ್ಠಿರನು ಹೇಳುತ್ತಾನೆ :—ಅನಘನೆ! ಈ ಅಸ್ಮಾಹಕತೀರ್ಥದ ಮಾಹಾತ್ಮ್ಯವನ್ನೂ, ಅಲ್ಲಿ ಸ್ನಾನದಾನಗಳಿಂದಲೂ ಪಿಂಡೋದಕಗಳಿಂದಲೂ ಲಭಿಸುವ ಪುಣ್ಯವನ್ನೂ ನನಗೆ ವಿಸ್ತಾರವಾಗಿ ತಿಳಿಸು.

೩. ಮಾರ್ಕಂಡೇಯನು ಹೇಳುತ್ತಾನೆ :—ನೃಪಶ್ರೇಷ್ಠನೆ! ಹಿಂದಿನ ಕಲ್ಪದಲ್ಲೊಮ್ಮೆ ಮಹರ್ಷಿಗಳೂ ದೇವತೆಗಳೂ ಸಭೆಯಲ್ಲಿ ಸೇರಿರಲು ನೀನು ಈಗ ಕೇಳಿರುವ ಪ್ರಶ್ನೆಯನ್ನೇ ನಾನೂ ಕೇಳಿದೆನು.

೪. ಪ್ರಯಾಗಪುಷ್ಕರಗಳೊಡನೆ ಸಪ್ತಸಮುದ್ರಗಳೂ ಒಡಗೂಡಿದರೂ ಈ ತೀರ್ಥದ ಸಮಾನಪ್ರಭಾವವನ್ನು ತಾಳಲಾರವು. ಈ ವಿಷಯದಲ್ಲಿ ಸಂಶಯವಿಲ್ಲ.

ಸೋಮನಾಥಂ ತು ವಿಖ್ಯಾತಂ ಯತ್ಸೋಮೇನ ಪ್ರತಿಷ್ಠಿತಂ ।
ತತ್ರ ಸೋಮಗ್ರಹೇ ಪುಣ್ಯಂ ತತ್ಪುಣ್ಯಂ ಲಭತೇ ನರಃ ॥ ೫ ॥
ಮಾಸಾಂತೇ ಪಿತರೋ ನೄಣಾಂ ವೀಕ್ಷಂತೇ ಸಂತತಿಂ ಸ್ವಕಾಂ ।
ಕಶ್ಚಿದಸ್ಮತ್ಕುಲೇಽಸ್ಮಾಕಂ ಪಿಂಡಮತ್ರ ಪ್ರದಾಸ್ಯತಿ ॥ ೬ ॥
ಪ್ರಪಿತಾಮಹಾಸ್ತಥಾದಿತ್ಯಾಃ ಶ್ರುತಿರೇಷಾ ಸನಾತನೀ ।
ಏವಂ ಬ್ರುವಂತಿ ದೇವಾಶ್ಚ ಋಷಯಃ ಸ ತಪೋಧನಾಃ ॥ ೭ ॥
ಸಕೃತ್ಪಿಂಡೋದಕೇನೈವ ಶೃಣು ಪಾರ್ಥಿವ ಯತ್ಫಲಂ ॥ ೮ ॥
ದ್ವಾದಶಾಬ್ದಾನಿ ರಾಜೇಂದ್ರ ಯೋಗಂ ಭುಕ್ತ್ವಾ ಸುಶೋಭನಂ ।
ಯುಗೇ ಯುಗೇ ಮಹಾರಾಜ ಅಸ್ಮಾಹಕೇ ಪಿತಾಮಹಾಃ ॥ ೯ ॥
ಸರ್ವದಾ ಹ್ಯವಲೋಕಂತ ಆಗಚ್ಛಂತಂ ಸ್ವಗೋತ್ರಜಂ ।
ಭವಿಷ್ಯತಿ ಕಿಮಸ್ಮಾಕಮಮಾವಾಸ್ಯಾಽಸ್ಯಮಾಹಕೇ ॥ ೧೦ ॥
ಸ್ನಾನಂ ದಾನಂ ಚ ಯೇ ಕುರ್ಯುಃ ಪಿತೄಣಾಂ ತಿಲತರ್ಪಣಂ ।
ತೇ ಸರ್ವಪಾಪನಿರ್ಮುಕ್ತಾಃ ಸರ್ವಾನ್ಕಾಮಾಂಲ್ಲಭಂತಿ ವೈ ॥ ೧೧ ॥

---

೫. ಚಂದ್ರನು ಪ್ರತಿಷ್ಠಿಸಿದ ಸೋಮನಾಥಕ್ಷೇತ್ರವಿರುವುದು. ಅಲ್ಲಿ ಚಂದ್ರ ಗ್ರಹಣದ ಕಾಲದಲ್ಲಿ ಸೇವೆಯನ್ನುಮಾಡಿದ ಪುಣ್ಯವೇ ಈ ತೀರ್ಥದ ಸೇವೆ ಯಿಂದಲೂ ಲಭಿಸುವುದು.

೬. ಪ್ರತಿ ಅಮಾವಾಸ್ಯೆಯ ದಿನದಲ್ಲಿಯೂ ಮನುಷ್ಯರ ಪಿತೃಗಳು, ''ನಮ್ಮ ಕುಲದಲ್ಲಿ ಯಾವನಾದರೂ ನಮಗೆ ಇಲ್ಲಿ ಪಿಂಡಗಳನ್ನೀಯುವನೇ'' ಎಂದು ತನ್ನ ಸಂತತಿಯನ್ನು ಎದುರು ನೋಡುತ್ತಿರುವರು.

೭. ಪ್ರಪಿತಾಮಹರೂ, ಆದಿತ್ಯರೂ, ದೇವತೆಗಳೂ, ಮಹರ್ಷಿಗಳೂ, ಇತರ ತಪೋನಿರತರೂ ಹೀಗೆಯೇ ಹೇಳುತ್ತಿರುವರೆಂದು ಅನಾದಿಯಾದ ಶ್ರುತ್ಯುಕ್ತಿ ಯಿರುವುದು.

೮. ರಾಜನೆ! ಇಲ್ಲಿ ಒಮ್ಮೆ ಪಿಂಡಪ್ರದಾನವನ್ನು ಮಾಡುವುದರಿಂದ ಲಭಿಸುವ ಪುಣ್ಯವನ್ನು ಕೇಳು.

೯. ಮಹಾರಾಜನೆ! ಪ್ರತಿಯುಗದಲ್ಲಿಯೂ ಪಿತಾಮಹರು ಅಸ್ಮಾಹಕ ಕ್ಷೇತ್ರದಲ್ಲಿ ಜನಿಸಿ ಹನ್ನೆರಡು ವರ್ಷಗಳವರೆಗೂ ಮಹತ್ತರವಾದ ಐಶ್ವರ್ಯದಿಂದ ಕೂಡಿದವರಾಗಿರುವರು.

೧೦. ಮತ್ತು ''ಅಮಾವಾಸ್ಯೆಯ ದಿನದಲ್ಲಿ ತನ್ನ ಗೋತ್ರದಲ್ಲಿ ಹುಟ್ಟಿದ ಯಾವನಾದರೂ ಅಸ್ಮಾಹಕತೀರ್ಥದಲ್ಲಿ ನಮ್ಮನ್ನು ತೃಪ್ತಿಪಡಿಸುವನೊ'' ಎಂದು ನಿತ್ಯವೂ ಅವನ ಬರವನ್ನೇ ನಿರೀಕ್ಷಿಸುತ್ತಿರುವರು.

೧೧. ಅಲ್ಲಿ ಸ್ನಾನವನ್ನೂ, ದಾನಗಳನ್ನೂ, ಪಿತೃಗಳಿಗೆ ತಿಲತರ್ಪಣ

ಜಲಮಧ್ಯೇಽತ್ರ ಭೂಪಾಲ ಅಗ್ನಿತೀರ್ಥಂ ಚ ತಿಷ್ಠತಿ ।
ದರ್ಶನಾತ್ತಸ್ಯ ತೀರ್ಥಸ್ಯ ಪಾಪರಾಶಿರ್ವಿಲೀಯತೇ ॥ ೧೨ ॥
ಸ್ನಾನಮಾತ್ರೇಣ ರಾಜೇಂದ್ರ ಬ್ರಹ್ಮಹತ್ಯಾಂ ವ್ಯಪೋಹತಿ ।
ಶುಕ್ಲಾಂಬರಧರೋ ನಿತ್ಯಂ ನಿಯತಃ ಸ ಜಿತೇಂದ್ರಿಯಃ ॥ ೧೩ ॥
ಏಕಕಾಲಂ ತು ಭುಂಜಾನೋ ಮಾಸಂ ತೀರ್ಥಸ್ಯ ಸನ್ನಿಧೌ ।
ಸುವರ್ಣಾಲಂಕೃತಾನಾಂ ತು ಕನ್ಯಾನಾಂ ಶತದಾನಜಂ ।
ಫಲಮಾಪ್ನೋತಿ ಸಂಪೂರ್ಣಂ ಪಿತೃಲೋಕೇ ಮಹೀಯತೇ ॥ ೧೪ ॥
ಪೃಥಿವ್ಯಾಮಾಸಮುದ್ರಾಯಾಂ ಮಹಾಭೋಗಪತಿರ್ಭವೇತ್ ।
ಧನಧಾನ್ಯಸಮಾಯುಕ್ತೋ ದಾತಾ ಭವತಿ ಧಾರ್ಮಿಕಃ ॥ ೧೫ ॥
ಉಪವಾಸೀ ಶುಚಿರ್ಭೂತ್ವಾ ಬ್ರಹ್ಮಲೋಕಮವಾಪ್ನುಯಾತ್ ।
ಅಸ್ಮಾಹಕಂ ಸಮಾಸಾದ್ಯ ಯಸ್ತು ಪ್ರಾಣಾನ್ಪರಿತ್ಯಜೇತ್ ॥ ೧೬ ॥
ಕೋಟಿವರ್ಷಸಹಸ್ರಾಣಿ ರುದ್ರಲೋಕೇ ಮಹೀಯತೇ ।
ತತಃ ಸ್ವರ್ಗಾತ್ಪರಿಭ್ರಷ್ಟಃ ಕ್ಷೀಣಕರ್ಮಾ ದಿವಶ್ಚ್ಯುತಃ ॥ ೧೭ ॥

---

ಗಳನ್ನೂ ಮಾಡಿದವರೆಲ್ಲರೂ ತಮ್ಮ ಸಮಸ್ತಪಾಪಗಳನ್ನು ಕಳೆದುಕೊಂಡು ಸರ್ವಾಭೀಷ್ಟಗಳನ್ನೂ ಪಡೆಯುವರು.

೧೨. ಭೂಪಾಲಕನೆ! ಆ ಜಲದ ಮಧ್ಯದಲ್ಲಿ ಅಗ್ನಿತೀರ್ಥವು ನೆಲಸಿರುವುದು. ಅದನ್ನು ನೋಡುವುದರಿಂದ ಪಾಪರಾಶಿಯೂ ನಾಶವಾಗುವುದು.

೧೩. ಅಲ್ಲಿ ನಿತ್ಯವೂ ಶುಭ್ರವಸ್ತ್ರವನ್ನು ಧರಿಸಿ ನಿಯಮಸ್ಥನೂ, ಜಿತೇಂದ್ರಿಯನೂ ಆಗಿ ಸ್ನಾನವನ್ನು ಮಾಡುವವನ ಬ್ರಹ್ಮಹತ್ಯೆಯ ಪಾತಕವೂ ಕಳೆದು ಹೋಗುವುದು.

೧೪. ಒಂದು ತಿಂಗಳ ಕಾಲ ಆ ತೀರ್ಥದಲ್ಲಿ ಏಕಭುಕ್ತವ್ರತವನ್ನಾಚರಿಸಿದವನು ಸರ್ವಾಭರಣಾಲಂಕೃತೆಯರಾದ ಒಂದು ನೂರು ಕನ್ಯೆಯರನ್ನು ದಾನ ಮಾಡಿದ ಸಂಪೂರ್ಣಫಲವನ್ನು ಹೊಂದಿ ಪಿತೃಲೋಕದಲ್ಲಿ ಸಂಪೂಜಿತನಾಗುವನು.

೧೫. ಸಮುದ್ರಮುದ್ರಿತವಾದ ಭೂಮಂಡಲದಲ್ಲೆಲ್ಲ ಮಹಾ ವಿಭವವಂತನಾಗಿ, ಧನಧಾನ್ಯಸಮೃದ್ಧಿಯಿಂದ ದಾನಶೀಲನೂ ಧಾರ್ಮಿಕನೂ ಆಗಿರುವನು.

೧೬–೧೭. ಶುಚಿಯಾಗಿ ಅಲ್ಲಿ ಉಪವಾಸವನ್ನುಮಾಡುವವನು ಬ್ರಹ್ಮಲೋಕವನ್ನು ಹೊಂದುವನು. ಯಾವನು ಅಸ್ಮಾಹಕತೀರ್ಥವನ್ನು ಸೇರಿ ತನ್ನ ಪ್ರಾಣಗಳನ್ನು ತ್ಯಜಿಸುವನೊ, ಅವನು ಒಂದು ಸಾವಿರ ಕೋಟಿ ವರ್ಷಗಳವರೆಗೂ ರುದ್ರಲೋಕದಲ್ಲಿ ಮಹಿಮೆಗೊಳ್ಳುವನು. ಬಳಿಕ ಕರ್ಮ ಫಲವು ಕೊನೆಗಾಣಲು ಸ್ವರ್ಗದಿಂದ ಭ್ರಷ್ಟನಾಗಿ ಭೂಲೋಕಕ್ಕೆ ಬರುವನು.

ಸುವರ್ಣಮಣಿಮುಕ್ತಾಢ್ಯೇ ಕುಲೇ ಜಾಯೇತ ರೂಪವಾನ್ ।
ಕೃತ್ವಾಽಭಿಷೇಕವಿಧಿನಾ ಹಯಮೇಧಫಲಂ ಲಭೇತ್ ॥ ೧೮ ॥
ಧನಾಢ್ಯೋ ರೂಪವಾನ್ ದಕ್ಷೋ ದಾತಾ ಭವತಿ ಧಾರ್ಮಿಕಃ ।
ಚತುರ್ವೇದೇಷು ಯತ್ಪುಣ್ಯಂ ಸತ್ಯವಾದಿಷು ಯತ್ಫಲಂ ॥ ೧೯ ॥
ತತ್ಫಲಂ ಲಭತೇ ನೂನಂ ತತ್ರ ತೀರ್ಥೇಽಭಿಷೇಚನಾತ್ ।
ತೀರ್ಥಾನಾಂ ಪರಮಂ ತೀರ್ಥಂ ನಿರ್ಮಿತಂ ಶಂಭುನಾ ಪುರಾ ॥ ೨೦ ॥
ಹೃದಯೇಶಃ ಸ್ವಯಂ ವಿಷ್ಣುರ್ಜಪೇದ್ದೇವಂ ಮಹೇಶ್ವರಂ ।
ಗಂಧರ್ವಾಪ್ಸರಸಶ್ಚೈವ ಮರುತೋ ಮಾರುತಾಸ್ತಥಾ ॥ ೨೧ ॥
ವಿಶ್ವೇದೇವಾಶ್ಚ ಪಿತರಃ ಸಚಂದ್ರಾಃ ಸದಿವಾಕರಾಃ ।
ಮರೀಚಿರತ್ರ್ಯಂಗಿರಸೌ ಪುಲಸ್ತ್ಯಃ ಪುಲಹಃ ಕ್ರತುಃ ॥ ೨೨ ॥
ಪ್ರಚೇತಾಶ್ಚ ವಸಿಷ್ಠಶ್ಚ ಭೃಗುರ್ನಾರದ ಏವ ಚ ।
ಚ್ಯವನೋ ಗಾಲವಶ್ಚೈವ ವಾಮದೇವೋ ಮಹಾಮುನಿಃ ॥ ೨೩ ॥
ವಾಲಖಿಲ್ಯಾಶ್ಚ ಗಾಂಧಾರಾಸ್ತೃಣಬಿಂದುಶ್ಚ ಜಾಜಲಿಃ ।
ಉದ್ದಾಲಕಶ್ಚರ್ಷ್ಯಶೃಂಗೋ ವಸಿಷ್ಠಶ್ಚ ಸನಂದನಃ ॥ ೨೪ ॥

---

೧೮. ಸರ್ವಾಂಗಸುಂದರನಾಗಿ ಚಿನ್ನ, ನವರತ್ನಗಳು, ಮುತ್ತುಗಳು ಮುಂತಾದುವುಗಳಿಂದ ಸಮೃದ್ಧವಾದ ಕುಲದಲ್ಲಿ ಹುಟ್ಟುವನು. ಅಲ್ಲಿ ವಿಧ್ಯುಕ್ತವಾದ ರುದ್ರಾಭಿಷೇಕವನ್ನುಮಾಡಿದ ಮಾನವನು ಅಶ್ವಮೇಧಯಜ್ಞವನ್ನು ಹೊಂದುವನು.

೧೯–೨೦. ಮತ್ತು ಧನವಂತನೂ, ಸುಂದರನೂ, ಕಾರ್ಯದಕ್ಷನೂ, ದಾನಶೌಂಡನೂ, ಧಾರ್ಮಿಕನೂ ಆಗುವನು. ನಾಲ್ಕು ವೇದಗಳ ಅಧ್ಯಯನದಿಂದ ಯಾವ ಪುಣ್ಯವುಂಟೊ, ಸತ್ಯವಾಕ್ಯವನ್ನು ನುಡಿಯುವವರಿಗೆ ಯಾವ ಪುಣ್ಯವುಂಟೊ, ಅದನ್ನೇ ಈ ತೀರ್ಥದ ಸ್ನಾನದಿಂದಲೂ ಪಡೆಯಬಹುದು. ಹಿಂದೆ ಪರಮೇಶ್ವರನೇ ಈ ತೀರ್ಥವನ್ನು ಸರ್ವೋತ್ತಮತೀರ್ಥವನ್ನಾಗಿ ನಿರ್ಮಿಸಿರುವನು.

೨೧–೨೭. ಸಕಲರ ಹೃದಯದಲ್ಲಿರುವ ವಿಷ್ಣುವು ತಾನೇ ಮಹಾದೇವನನ್ನು ಭಜಿಸುತ್ತಿರುವನು. ಗಂಧರ್ವರು, ಅಪ್ಸರೆಯರು, ಮರುತ್ತುಗಳು, ಮಾರುತರು, ವಿಶ್ವೇದೇವತೆಗಳು, ಪಿತೃಗಳು, ಚಂದ್ರ, ಸೂರ್ಯ, ಮರೀಚಿ, ಅತ್ರಿ, ಅಂಗಿರಸ, ಪುಲಸ್ತ್ಯ, ಪುಲಹ, ಕ್ರತು, ಪ್ರಚೇತ, ವಸಿಷ್ಠ, ಭೃಗುಮುನಿ, ನಾರದ, ಚ್ಯವನ, ಗಾಲವ, ಮಹಾಮುನಿಯಾದ ವಾಮದೇವ, ವಾಲಖಿಲ್ಯರು, ಗಾಂಧಾರರು, ತೃಣಬಿಂದು, ಜಾಜಲಿ, ಉದ್ದಾಲಕ, ಋಷ್ಯಶೃಂಗ, ವಸಿಷ್ಠ,

ಶುಕ್ರಶ್ಚೈವ ಭರದ್ವಾಜೋ ವಾತ್ಸ್ಯೋ ವಾತ್ಸ್ಯಾಯನಸ್ತಥಾ ।
ಅಗಸ್ತಿರ್ಮಿತ್ರಾವರುಣೌ ವಿಶ್ವಾಮಿತ್ರೋ ಮುನೀಶ್ವರಃ ॥ ೨೫ ॥
ಗೌತಮಶ್ಚ ಪುಲಸ್ತ್ಯಶ್ಚ ಪೌಲಸ್ತ್ಯಃ ಪುಲಹಃ ಕ್ರತುಃ ।
ಸನಾತನಸ್ತು ಕಪಿಲೋ ವಾಹ್ನಿಃ ಪಂಚಶಿಖಸ್ತಥಾ ॥ ೨೬ ॥
ಅನ್ಯೇಽಪಿ ಬಹವಸ್ತತ್ರ ಮುನಯಃ ಶಂಸಿತವ್ರತಾಃ ।
ಕ್ರೀಡಂತಿ ದೇವತಾಃ ಸರ್ವೆ ಋಷಯಃ ಸ ತಪೋಧನಾಃ ॥ ೨೭ ॥
ಮನುಷ್ಯಾಶ್ಚೈವ ಯೋಗೀಂದ್ರಾಃ ಪಿತರಃ ಸ ಪಿತಾಮಹಾಃ ।
ಅಸ್ಮಾಹಕೇಽತ್ರ ತಿಷ್ಠಂತಿ ಸರ್ವೆ ಏವ ನ ಸಂಶಯಃ ॥ ೨೮ ॥
ಪಿತರಃ ಪಿತಾಮಹಾಶ್ಚೈವ ತಥೈವ ಪ್ರಪಿತಾಮಹಾಃ ।
ಯೇಷಾಂ ದತ್ತಮುಪಸ್ಥಾಯಿ ಸುಕೃತಂ ವಾಽಪಿ ದುಷ್ಕೃತಂ ॥ ೨೯ ॥
ಅಕ್ಷಯಂ ತತ್ರ ತತ್ಸರ್ವಂ ಯತ್ಕೃತಂ ಯೋಧನೀಪುರೇ ।
ಮಾತರಂ ಪಿತರಂ ತ್ಯಕ್ತ್ವಾ ಸರ್ವಬಂಧುಸುಹೃಜ್ಜನಾನ್ ॥ ೩೦ ॥
ಧನಂ ಧಾನ್ಯಂ ಪ್ರಿಯಾನ್ಪುತ್ರಾಂಸ್ತಥಾ ದೇಹಂ ನೃಪೋತ್ತಮ ।
ಗಚ್ಛತೇ ವಾಯುಭೂತಸ್ತು ಶುಭಾಽಶುಭಸಮನ್ವಿತಃ ॥ ೩೧ ॥

---

ಸನಂದನ, ಶುಕ್ಲ, ಭರದ್ವಾಜ, ವಾತ್ಸ್ಯ, ವಾತ್ಸ್ಯಾಯನ, ಅಗಸ್ತ್ಯ, ಮಿತ್ರಾವರುಣರು, ಮುನೀಶ್ವರನಾದ ವಿಶ್ವಾಮಿತ್ರ, ಗೌತಮ, ಪುಲಸ್ತ್ಯ, ಪೌಲಸ್ತ್ಯ, ಪುಲಹ, ಕ್ರತು, ಸನಾತನ, ಕಪಿಲ, ವಹ್ನಿ, ಪಂಚಶಿಖ ಮುಂತಾದ ಮಹಾವ್ರತಧಾರಿಗಳಾದ ಅನೇಕ ಮುನಿಗಳೂ, ಸಕಲದೇವತೆಗಳೂ, ಮಹರ್ಷಿಗಳೂ, ಇತರ ತಪೋಧನರೂ ಅಲ್ಲಿ ಕ್ರೀಡಿಸುತ್ತಿರುವರು.

೨೮. ಮನುಷ್ಯರೂ, ಯೋಗಿವರ್ಯರೂ, ಪಿತೃಗಳೂ, ಪಿತಾಮಹರೂ, ಎಲ್ಲರೂ ಈ ಅಸ್ಮಾಹಕಕ್ಷೇತ್ರದಲ್ಲಿ ವಾಸಮಾಡುತ್ತಿರುವರೆಂಬುದರಲ್ಲಿ ಸಂದೇಹವಿಲ್ಲ.

೨೯. ಹಾಗೆಯೇ ಪಿತೃಗಳೂ, ಪಿತಾಮಹರೂ, ಪ್ರಪಿತಾಮಹರೂ ಅಲ್ಲಿರುವರು. ಅವರಿಗಿತ್ತ ದಾನಗಳೂ, ಅಲ್ಲಿ ಮಾಡಿದ ಸತ್ಕರ್ಮದುಷ್ಕರ್ಮಗಳೂ ಬಹುಕಾಲದವರೆಗೆ ನಿಲ್ಲುವುವು.

೩೦–೩೧. ಈ ಯೋಧಿನೀಪುರದಲ್ಲಿ ಮಾಡಿದ ಸಮಸ್ತವೂ ಅಕ್ಷಯ ಫಲದಾಯಕವಾಗುವುದು. ಮಹಾರಾಜನೆ! ತಾಯಿ, ತಂದೆ, ಬಂಧುಗಳು, ಸ್ನೇಹಿತರು, ಧನ, ಧಾನ್ಯ, ಪ್ರಿಯರಾದ ಪುತ್ರರು, ಸ್ವದೇಹ—ಎಲ್ಲವನ್ನೂ ಕಡೆಯಲ್ಲಿ ತ್ಯಜಿಸಿ ಜೀವನು ಕೇವಲ ಪುಣ್ಯಪಾಪಗಳಿಂದ ಮಾತ್ರ ಕೂಡಿಕೊಂಡು ವಾಯುರೂಪದಿಂದ ಹೊರಟು ಹೋಗುವನು.

ಅದೃಶ್ಯಃ ಸರ್ವಭೂತಾನಾಂ ಪರಮಾತ್ಮಾ ಮಹತ್ತರಃ ।
ಶುಭಾಽಶುಭಗತಿಂ ಪ್ರಾಪ್ತಃ ಕರ್ಮಣಾ ಸ್ವೇನ ಪಾರ್ಥಿವ ॥ ೩೨ ॥

ಯುಧಿಷ್ಠಿರ ಉವಾಚ :—

ಶುಭಾಽಶುಭಂ ನ ಬಂಧೂನಾಂ ಜಾಯತೇ ಕೇನ ಹೇತುನಾ ।
ಏಕಃ ಪ್ರಸೂಯತೇ ಜಂತುರೇಕ ಏವ ಪ್ರಲೀಯತೇ ॥ ೩೩ ॥
ಏಕೋ ಹಿ ಭುಂಕ್ತೇ ಸುಕೃತಮೇಕ ಏವ ಹಿ ದುಷ್ಕೃತಂ ॥ ೩೪ ॥

ಮಾರ್ಕಂಡೇಯ ಉವಾಚ :—

ಏಷ ತ್ವಯೋಕ್ತೋ ನೃಪತೇ ಮಹಾಪ್ರಶ್ನಃ ಸ್ಮೃತೋ ಮಯಾ ॥ ೩೫ ॥
ಪಿತಾಮಹಮುಖೋದ್ಗೀತಂ ಶ್ರುತಂ ತೇ ಕಥಯಾಮ್ಯಹಂ ।
ಯನ್ಮೇ ಪಿತಾಮಹಾತ್ಪೂರ್ವಂ ವಿಜ್ಞಾತಮೃಷಿಸಂಸದಿ ॥ ೩೬ ॥
ನ ಮಾತಾ ನ ಪಿತಾ ಬಂಧುಃ ಕಸ್ಯಚಿನ್ನ ಸುಹೃತ್ಕ್ವಚಿತ್ ।
ಕಸ್ಯ ನ ಜ್ಞಾಯತೇ ರೂಪಂ ವಾಯುಭೂತಸ್ಯ ದೇಹಿನಃ ॥ ೩೭ ॥
ಯದ್ಯೇವಂ ನ ಭವೇತ್ತಾತ ಲೋಕಸ್ಯ ತು ನರೇಶ್ವರ ।
ಅಮರ್ಯಾದಂ ಭವೇನ್ನೂನಂ ವಿನಶ್ಯತಿ ಚರಾಚರಂ ॥ ೩೮ ॥

---

೩೨. ಮಹಾಮಹಿಮನಾದ ಪರಮೇಶ್ವರನು ಸಕಲಪ್ರಾಣಿಗಳಿಗೂ ಅದೃಶ್ಯನಾಗಿರುವನು. ಪಾರ್ಥಿವನೆ! ಜೀವನು ತನ್ನ ಕರ್ಮಕ್ಕನುಸಾರವಾಗಿಯೇ ಶುಭಾಶುಭಲೋಕಗಳಿಗೆ ಹೋಗುವನು.

೩೩–೩೪. ಯುಧಿಷ್ಠಿರನು ಹೇಳುತ್ತಾನೆ:—ಈ ಶುಭಾಶುಭಗಳು ಬಂಧುಗಳಿಗೂ ಸಂಬಂಧಿಸದಿರಲು ಕಾರಣವೇನು? ಪ್ರಾಣಿಯೊಬ್ಬನೇ ಹುಟ್ಟುವನು. ಒಬ್ಬನೇ ಸಾಯುವನು. ಏಕಾಕಿಯಾಗಿಯೇ ತನ್ನ ಪುಣ್ಯಪಾಪಗಳ ಫಲಗಳನ್ನನುಭವಿಸುವನು.

೩೫–೩೬. ಮಾರ್ಕಂಡೇಯನು ಹೇಳುತ್ತಾನೆ:—ನರಪತಿಯೆ! ನೀನು ಈ ಮಹಾಪ್ರಶ್ನೆಯನ್ನು ಕೇಳಲು ನನ್ನ ಜ್ಞಾಪಕಕ್ಕೆ ಬಂದಿತು. ಹಿಂದೆ ಬ್ರಹ್ಮದೇವನು ಮಹರ್ಷಿಗಳ ಮಧ್ಯದಲ್ಲಿ ಇದೇ ವಿಷಯವನ್ನು ಹೇಳಲು ಕೇಳಿ ನಾನು ತಿಳಿದುಕೊಂಡ ಈ ವಿಷಯವನ್ನು ನಿನಗೆ ಹೇಳುವೆನು, ಕೇಳು.

೩೭. ಯಾರಿಗೆ ಯಾರೂ ತಾಯಿಯೂ, ತಂದೆಯೂ, ಬಂಧುವೂ, ಸ್ನೇಹಿತನೂ ಅಲ್ಲ. ದೇಹದಲ್ಲಿ ವಾಯುರೂಪನಾಗಿರುವ ಆತ್ಮನ ರೂಪವನ್ನು ಯಾವನೂ ತಿಳಿಯಲಾರನು.

೩೮. ನರೇಶ್ವರನೆ! ಅಜ್ಞಾತವಾದ ಇಂತಹ ತತ್ತ್ವವೊಂದಿಲ್ಲದಿದ್ದರೆ ಲೋಕದಲ್ಲಿ ನಿಯಮಗಳಿಲ್ಲದೆ ಚರಾಚರಪ್ರಾಣಿಗಳೆಲ್ಲವೂ ನಾಶವನ್ನು ಹೊಂದುತ್ತಿದ್ದುವು.

ಏವಂ ಜ್ಞಾತ್ವಾ ಪುರಾ ರಾಜನ್ ಸಮಸ್ತೈರ್ಲೋಕಕರ್ತೃಭಿಃ ।
ಮರ್ಯಾದಾ ಸ್ಥಾಪಿತಾ ಲೋಕೇ ಯಥಾ ಧರ್ಮೋ ನ ನಶ್ಯತಿ ॥ ೩೯ ॥
ಧರ್ಮೇ ನಷ್ಟೇ ಮನುಷ್ಯಾಣಾಮಧರ್ಮೋಽಭಿಭವೇತ್ಪುನಃ ।
ತತಃ ಸ್ವಧರ್ಮಚಲನಾನ್ನರಕೇ ಗಮನಂ ಧ್ರುವಂ ॥ ೪೦ ॥
ಲೋಕೋ ನಿರಂಕುಶಃ ಸರ್ವೋ ಮರ್ಯಾದಾಲಂಘನೇ ರತಃ ।
ಮರ್ಯಾದಾ ಸ್ಥಾಪಿತಾ ತೇನ ಶಾಸ್ತ್ರಂ ವೀಕ್ಷ್ಯ ಮಹರ್ಷಿಭಿಃ ॥ ೪೧ ॥
ಸ್ನಾನಂ ದಾನಂ ಜಪೋ ಹೋಮಃ ಸ್ವಾಧ್ಯಾಯೋ ದೇವತಾರ್ಚನಂ ।
ಪಿಂಡೋದಕಪ್ರದಾನಂ ಚ ತಥೈವಾತಿಥಿಪೂಜನಂ ॥ ೪೨ ॥
ಪಿತರಃ ಪಿತಾಮಹಾಶ್ಚೈವ ತಥೈವ ಪ್ರಪಿತಾಮಹಾಃ ।
ತ್ರಯೋ ದೇವಾಃ ಸ್ಮೃತಾಸ್ತಾತ ಬ್ರಹ್ಮವಿಷ್ಣುಮಹೇಶ್ವರಾಃ ॥ ೪೩ ॥
ಪೂಜಿತೈಃ ಪೂಜಿತಾಃ ಸರ್ವೇ ತಥಾ ಮಾತಾಮಹಾಸ್ತ್ರಯಃ ॥ ೪೪ ॥
ತಸ್ಮಾತ್ಸರ್ವಪ್ರಯತ್ನೇನ ಶ್ರುತಿಸ್ಮೃತ್ಯರ್ಥನೋದಿತಾನ್ ।
ಧರ್ಮಂ ಸಮಾಚರನ್ನಿತ್ಯಂ ಪಾಪಾಂಶೇನ ನ ಲಿಪ್ಯತೇ ॥ ೪೫ ॥

---

೩೯–೪೦. ಇದನ್ನು ತಿಳಿದೇ ಹಿಂದೆ ಸಮಸ್ತಲೋಕಪಾಲಕರೂ ಸೇರಿ ಧರ್ಮವೆಂದಿಗೂ ನಾಶವನ್ನು ಹೊಂದದಂತೆ ಲೋಕದಲ್ಲಿ ಮರ್ಯಾದೆಯನ್ನು ನಿಲ್ಲಿಸಿದರು. ಧರ್ಮವು ನಷ್ಟವಾಗಲು ಮನುಷ್ಯರಲ್ಲಿ ಅಧರ್ಮವು ತಲೆಯೆತ್ತುವುದು. ಜನರು ತಮ್ಮ ಧರ್ಮಗಳನ್ನು ತ್ಯಜಿಸುವುದರಿಂದ ನರಕಕ್ಕೆ ಹೋಗುವುದು ನಿಶ್ಚಯವು.

೪೧. ಲೋಕವೆಲ್ಲವೂ ನಿರಂಕುಶವಾಗಿ ಮರ್ಯಾದೆಗಳನ್ನು ಮೀರುವುದರಲ್ಲಿಯೇ ನಿರತವಾಗಿರುವುದು. ಆದುದರಿಂದಲೇ ಮಹರ್ಷಿಗಳು ಶಾಸ್ತ್ರವನ್ನವಲೋಕಿಸಿ ಮರ್ಯಾದೆಯನ್ನು ನೆಲೆಗೊಳಿಸಿರುವರು.

೪೨. ಸ್ನಾನ, ದಾನ, ಜಪ, ಹೋಮ, ವೇದಾಧ್ಯಯನ, ದೇವತಾರ್ಚನೆ, ಪಿತೃಗಳಿಗೆ ಪಿಂಡತರ್ಪಣಗಳನ್ನು ಕೊಡುವುದು, ಅತಿಥಿಪೂಜೆ ಇವೇ ಕರ್ತವ್ಯಗಳು.

೪೩. ಪಿತೃ, ಪಿತಾಮಹ, ಪ್ರಪಿತಾಮಹರೇ ಬ್ರಹ್ಮ ವಿಷ್ಣು ಮಹೇಶ್ವರರೆಂಬ ತ್ರಿಮೂರ್ತಿಗಳಾದ ದೇವತೆಗಳೆಂದು ಸ್ಮೃತಿಗಳು ಹೇಳುತ್ತಿರುವುವು.

೪೪. ಹಾಗೆಯೇ ಮೂವರು ಮಾತಾಮಹರೂ ದೇವತಾತ್ರಯಗಳೇ. ಅವರನ್ನು ಪೂಜಿಸಲು ಸಮಸ್ತ ದೇವತೆಗಳನ್ನೂ ಪೂಜಿಸಿದಂತೆಯೇ ಆಗುವುದು.

೪೫. ಆದುದರಿಂದ ಸರ್ವಪ್ರಕಾರದಿಂದಲೂ ಶ್ರುತಿಸ್ಮೃತಿಗಳಲ್ಲಿ ವಿಧಿಸಿರುವ ನಿಯಮಗಳಿಂದ ಧರ್ಮವನ್ನು ನಿತ್ಯವೂ ಆಚರಿಸುತ್ತಿರಲು ಮನುಷ್ಯನಿಗೆ ಪಾಪದ ಲೇಶವೂ ಅಂಟುವುದಿಲ್ಲ.

ಶ್ರುತಿಸ್ಮೃತ್ಯುದಿತಂ ಧರ್ಮಂ ಮನಸಾಽಪಿ ನ ಲಂಘಯೇತ್ ।
ಇಹ ಲೋಕೇ ಪರೇ ಚೈವ ಯದೀಚ್ಛೇಚ್ಛ್ರೇಯ ಆತ್ಮನಃ ॥ ೪೬ ॥
ಪಿತಾಪುತ್ರೌ ಸದಾಪ್ಯೇಕೌ ಬಿಂಬಾದ್ಬಿಂಬಮಿವೋದ್ಧೃತೌ ।
ವಿಭಕ್ತೌ ವಾಽವಿಭಕ್ತೌ ವಾ ಶ್ರುತಿಸ್ಮೃತ್ಯರ್ಥತಸ್ತಥಾ ॥ ೪೭ ॥
ಉದ್ಧರೇದಾತ್ಮನಾತ್ಮಾನಮಾತ್ಮಾನಮವಸಾದಯೇತ್ ।
ಪಿಂಡೋದಕಪ್ರದಾನಾಭ್ಯಾಮೃತೇ ಪಾರ್ಥ ನ ಸಂಶಯಃ ॥ ೪೮ ॥
ಏವಂ ಜ್ಞಾತ್ವಾ ಪ್ರಯತ್ನೇನ ಪಿಂಡೋದಕಪ್ರದೋ ಭವೇತ್ ।
ಆಯುರ್ಧರ್ಮೋ ಯಶಸ್ತೇಜಃ ಸಂತತಿಶ್ಚೈವ ವರ್ಧತೇ ॥ ೪೯ ॥
ಪೃಥಿವ್ಯಾಂ ಸಾಗರಾಂತಾಯಾಂ ಪಿತೃಕ್ಷೇತ್ರಾಣಿ ಯಾನಿ ಚ ।
ತಾನಿ ತೇ ಸಂಪ್ರವಕ್ಷ್ಯಾಮಿ ಯೇಷು ದತ್ತಂ ಮಹಾಫಲಂ ॥ ೫೦ ॥
ಗಯಾಯಾಂ ಪುಷ್ಕರೇ ಜ್ಯೇಷ್ಠೇ ಪ್ರಯಾಗೇ ನೈಮಿಷೇ ತಥಾ ।
ಸನ್ನಿಹತ್ಯಾಂ ಕುರುಕ್ಷೇತ್ರೇ ಪ್ರಭಾಸೇ ಕುರುನಂದನ ॥ ೫೧ ॥

---

೪೬. ಈ ಲೋಕದಲ್ಲಿಯೂ ಪರಲೋಕದಲ್ಲಿಯೂ ತನ್ನ ಶ್ರೇಯಸ್ಸನ್ನು ಬಯಸುವವನು ಶ್ರುತಿಸ್ಮೃತಿಗಳಿಂದ ನಿರ್ದಿಷ್ಟವಾದ ಧರ್ಮವನ್ನು ಮನಸ್ಸಿನಲ್ಲಿಯೂ ಅತಿಕ್ರಮಿಸಲಾಗದು.

೪೭. ವಿಭಕ್ತರಾಗಲಿ, ಅವಿಭಕ್ತಕುಟುಂಬದಲ್ಲಿರಲಿ, ತಂದೆ ಮಕ್ಕಳು ಯಾವಾಗಲೂ ಬಿಂಬದಿಂದ ಬಿಂಬಾಂತರವನ್ನು ತೆಗೆದಂತಿರುವ ಏಕಸತ್ತ್ವರೇ! ಶ್ರುತಿಸ್ಮೃತಿಗಳ ತಾತ್ಪರ್ಯವೂ ಇದೇ ಆಗಿರುವುದು.

೪೮. ತನ್ನಿಂದಲೇ ತನ್ನ ಉದ್ಧಾರವನ್ನು ಮಾಡಿಕೊಳ್ಳಬೇಕು. ಪಿಂಡ ತರ್ಪಣಗಳ ಪ್ರದಾನವಿಲ್ಲದಿದ್ದರೆ ಆತ್ಮಹಾನಿಯಾಗುವುದು. ರಾಜನೆ! ಇದರಲ್ಲಿ ಸಂದೇಹವಿಲ್ಲ.

೪೯. ಇದನ್ನು ತಿಳಿದು ಪ್ರಯತ್ನದಿಂದ ಪಿತೃಗಳಿಗೆ ಪಿಂಡೋದಕಗಳನ್ನು ಕೊಡಬೇಕು. ಇದರಿಂದ ಆಯುಷ್ಯವೂ, ಧರ್ಮವೂ, ಕೀರ್ತಿಯೂ, ತೇಜಸ್ಸೂ, ಸಂತತಿಯೂ ವೃದ್ಧಿಯನ್ನೈದುವುವು.

೫೦. ಇನ್ನು ಸಾಗರವೇಷ್ಟಿತವಾದ ಭೂಮಿಯಲ್ಲಿ ಯಾವ ಕ್ಷೇತ್ರಗಳಿರುವುವೊ, ಅವುಗಳನ್ನು ನಿನಗೆ ತಿಳಿಸುವೆನು. ಅಲ್ಲಿ ಪಿಂಡಪ್ರದಾನವು ಮಹಾಫಲದಾಯಕವು.

೫೧. ಕೌರವಶ್ರೇಷ್ಠನೆ! ಗಯೆ, ಶ್ರೇಷ್ಠವಾದ ಪುಷ್ಕರ, ಪ್ರಯಾಗ, ನೈಮಿಷ, ಕುರುಕ್ಷೇತ್ರ, ಪ್ರಭಾಸ—ಇವುಗಳೇ ಪಿತೃಕ್ಷೇತ್ರಗಳೆನಿಸುವುವು.

ಪಿಂಡೋದಕಪ್ರದಾನೇನ ಯತ್ಫಲಂ ಕಥಿತಂ ಬುಧೈಃ ।
ಅಸ್ಮಾಹಕೇ ತದಾಪ್ನೋತಿ ನರ್ಮದಾಯಾಂ ನ ಸಂಶಯಃ ॥ ೫೨ ॥
ತತ್ರ ಬ್ರಹ್ಮಾ ಮುರಾರಿಶ್ಚ ರುದ್ರಶ್ಚ ಉಮಯಾ ಸಹ ।
ಇಂದ್ರಾದ್ಯಾ ದೇವತಾಃ ಸರ್ವೇ ಪಿತರೋ ಮುನಯಸ್ತಥಾ ॥ ೫೩ ॥
ಸಾಗರಾಃ ಸರಿತಶ್ಚೈವ ಪರ್ವತಾಶ್ಚ ಬಲಾಹಕಾಃ ।
ತಿಷ್ಠಂತಿ ಪಿತರಃ ಸರ್ವೇ ಸರ್ವತೀರ್ಥಾಧಿಕಂ ತತಃ ॥ ೫೪ ॥
ಸ್ಥಿತಾ ಬ್ರಹ್ಮಶಿಲಾ ತತ್ರ ಗಜಕುಂಭನಿಭಾ ನೃಪ ।
ಕಲೌ ನ ದೃಶ್ಯಾ ಭವತಿ ಪ್ರಧಾನಂ ಯದ್ಗಯಾಶಿರಃ ॥ ೫೫ ॥
ವೈಶಾಖೇ ಮಾಸಿ ಸಂಪ್ರಾಪ್ತೇಽಮಾವಾಸ್ಯಾಂ ನೃಪೋತ್ತಮ ।
ವ್ಯಾಪ್ಯ ಸಾ ತಿಷ್ಠತೇ ತೀರ್ಥಂ ಗಜಕುಂಭನಿಭಾ ಶಿಲಾ ॥ ೫೬ ॥
ತಚ್ಚ ಗವ್ಯೂತಿಮಾತ್ರಂ ಹಿ ತೀರ್ಥಂ ತತಃ ಪ್ರಚಕ್ಷತೇ ।
ತಸ್ಮಿನ್ದಿನೇ ತತ್ರ ಗತ್ವಾ ಯಸ್ತು ಶ್ರಾದ್ಧಪ್ರದೋ ಭವೇತ್ ॥ ೫೭ ॥

---

೫೨. ಇವುಗಳೆಲ್ಲವುಗಳಲ್ಲಿಯೂ ಪಿಂಡೋದಕಗಳನ್ನು ಕೊಡುವುದರಿಂದ ಯಾವ ಫಲವನ್ನು ಶಾಸ್ತ್ರಜ್ಞರು ನಿರ್ಧರಿಸಿರುವರೊ, ಅದನ್ನೇ ನರ್ಮದಾತೀರದಲ್ಲಿರುವ ಅಸ್ಮಾಹಕತೀರ್ಥದಲ್ಲಿ ಕೊಡುವುದರಿಂದಲೂ ಪಡೆಯಬಹುದು.

೫೩. ಅಲ್ಲಿ ಬ್ರಹ್ಮನೂ, ಮಹಾವಿಷ್ಣುವೂ, ಪಾರ್ವತೀಸಮೇತನಾದ ಪರಮೇಶ್ವರನೂ, ಇಂದ್ರಾದಿ ಸಮಸ್ತ ದೇವತೆಗಳೂ, ಪಿತೃಗಳೂ, ಮಹಾಮುನಿಗಳೂ ಇರುವರು.

೫೪. ಸಮುದ್ರಗಳು, ನದಿಗಳು, ಪರ್ವತಗಳು, ಮೇಘಗಳು, ಸಕಲ ಪಿತೃಗಳೂ ಅಲ್ಲಿ ನೆಲಸಿರುವುದರಿಂದ ಅದು ಸಮಸ್ತ ತೀರ್ಥಗಳಲ್ಲಿಯೂ ಉತ್ತಮವೆನಿಸಿರುವುದು.

೫೫. ಮಹಾರಾಜನೆ! ಅಲ್ಲಿ ಆನೆಯ ಕುಂಭಸ್ಥಳದ ಆಕಾರವುಳ್ಳ ಬ್ರಹ್ಮಶಿಲೆಯೊಂದಿರುವುದು. ಅದರಲ್ಲಿ ಮುಖ್ಯವಾದ ಗಯಾಶಿರವೆಂಬುದು ಕಲಿಯುಗದಲ್ಲಿ ಕಾಣುವುದಿಲ್ಲ.

೫೬. ನೃಪೋತ್ತಮನೆ! ವೈಶಾಖಮಾಸದ ಕಡೆಯ ಅಮಾವಾಸ್ಯೆಯು ಬರಲು ಆ ಗಜಕುಂಭಾಕಾರವಾದ ಶಿಲೆಯು ತೀರ್ಥವೆಲ್ಲವನ್ನೂ ವ್ಯಾಪಿಸಿಕೊಂಡಿರುವುದು.

೫೭. ಅದರಿಂದ ಆ ತೀರ್ಥವು ಒಂದು ಗವ್ಯೂತಿಯ (ಎರಡು ಕ್ರೋಶಗಳ) ವಿಸ್ತಾರವುಳ್ಳದ್ದೆಂದು ಹೇಳುವರು. ಆ ದಿನದಲ್ಲಿ ಅಲ್ಲಿ ಶ್ರಾದ್ಧಕರ್ಮವನ್ನು ಮಾಡಬೇಕು.

ಪಿತೄಣಾಮಕ್ಷಯಾ ತೃಪ್ತಿರ್ಜಾಯತೇ ಶತವಾರ್ಷಿಕೀ ।
ಅನ್ಯಸ್ಯಾಮಪ್ಯಮಾವಾಸ್ಯಾಂ ಯಃ ಸ್ನಾತ್ವಾ ವಿಜಿತೇಂದ್ರಿಯಃ ॥ ೫೮ ॥
ಕರೋತಿ ಮನುಜಃ ಶ್ರಾದ್ಧಂ ವಿಧಿವನ್ಮಂತ್ರಸಂಯುತಂ ।
ತಸ್ಯ ಪುಣ್ಯಫಲಂ ಯತ್ಸ್ಯಾತ್ತಚ್ಛೃಣುಷ್ವ ನರಾಧಿಪ ॥ ೫೯ ॥
ಅಗ್ನಿಷ್ಟೋಮಾಶ್ವಮೇಧಾಭ್ಯಾಂ ವಾಜಪೇಯಸ್ಯ ಯತ್ಫಲಂ ।
ತತ್ಫಲಂ ಸಮವಾಪ್ನೋತಿ ಯಥಾ ಮೇ ಶಂಕರೋಽಬ್ರವೀತ್ ॥ ೬೦ ॥
ರೌರವಾದಿಷು ಸರ್ವೇಷು ನರಕೇಷು ವ್ಯವಸ್ಥಿತಾಃ ।
ಪಿತಾ ಪಿತಾಮಹಾದ್ಯಾಶ್ಚ ಪಿತೃಕೇ ಮಾತೃಕೇ ತಥಾ ॥ ೬೧ ॥
ಪಿಂಡೋದಕೇನ ಚೈಕೇನ ತರ್ಪಣೇನ ವಿಶೇಷತಃ ।
ಕ್ರೀಡಂತಿ ಪಿತೃಲೋಕಸ್ಥಾ ಯಾವದಾಭೂತಸಂಪ್ಲವಂ ॥ ೬೨ ॥
ಯೇ ಕರ್ಮಸ್ಥಾ ವಿಕರ್ಮಸ್ಥಾ ಯೇ ಜಾತಾಃ ಪ್ರೇತಕಲ್ಮಷಾಃ ।
ಪಿಂಡೇನೈಕೇನ ಮುಚ್ಯಂತೇ ತೇಽಪಿ ತತ್ರ ನ ಸಂಶಯಃ ॥ ೬೩ ॥
ಅಸ್ಮಾಹಕೇ ಶಿಲಾ ದಿವ್ಯಾ ತಿಷ್ಠತೇ ಗಜಸನ್ನಿಭಾ ।
ಬ್ರಹ್ಮಣಾ ನಿರ್ಮಿತಾ ಪೂರ್ವಂ ಸರ್ವಪಾಪಕ್ಷಯಂಕರೀ ॥ ೬೪ ॥

---

೫೮. ಆದರಿಂದ ಪಿತೃಗಳಿಗೆ ನೂರು ವರ್ಷಗಳವರೆಗೂ ಅಕ್ಷಯತೃಪ್ತಿಯಾಗುವುದು. ಇತರ ಅಮಾವಾಸ್ಯೆಗಳಲ್ಲಿಯೂ ಮಾನವನು ಜಿತೇಂದ್ರಿಯನಾಗಿ ಆ ತೀರ್ಥದಲ್ಲಿ ಸ್ನಾನವನ್ನು ಮಾಡಬೇಕು.

೫೯–೬೦. ಬಳಿಕ ವಿಧಿಯಿಂದಲೂ ಮಂತ್ರಸಹಿತವಾಗಿಯೂ ಶ್ರಾದ್ಧವನ್ನು ಮಾಡಿದ ಮನುಜನಿಗೆ ಲಭಿಸುವ ಪುಣ್ಯಫಲವನ್ನು ಹೇಳುವೆನು, ಕೇಳು. ಅಗ್ನಿಷ್ಟೋಮ, ಅಶ್ವಮೇಧ ಮತ್ತು ವಾಜಪೇಯಗಳನ್ನು ಮಾಡಿದವನಿಗೆ ಲಭಿಸುವ ಫಲವೇ ಇವನಿಗೂ ಪ್ರಾಪ್ತವಾಗುವುದೆಂದು ಶಂಕರನೇ ನನಗೆ ಹೇಳಿರುವನು.

೬೧–೬೨. ರೌರವಾದಿ ಸಮಸ್ತ ನರಕಗಳಲ್ಲಿ ವಾಸಮಾಡುತ್ತಿರುವ ಪಿತೃಪಿತಾಮಹಾದಿಗಳೂ, ತಂದೆ ತಾಯಿಗಳ ವಂಶಗಳ ಇತರರೂ, ಇಲ್ಲಿ ಒಮ್ಮೆ ಪಿಂಡೋದಕಕ್ರಿಯೆಯನ್ನು ಮಾಡುವುದರಿಂದಲೂ ವಿಶೇಷವಾಗಿ ತರ್ಪಣಗಳನ್ನೀಯುವುದರಿಂದಲೂ ಪಿತೃಲೋಕಗಳಿಗೆ ಹೋಗಿ ಅಲ್ಲಿ ಮಹಾಪ್ರಳಯವಾಗುವವರೆಗೂ ಕ್ರೀಡಿಸುತ್ತಿರುವರು.

೬೩–೬೪. ಕರ್ಮನಿರತರೂ, ವಿಪರೀತಕರ್ಮಗಳನ್ನು ಮಾಡಿದವರೂ, ಪ್ರೇತಗಳೇ ಮೊದಲಾದ ನೀಚಯೋನಿಗಳಲ್ಲಿ ಜನಿಸಿರುವವರೂ, ಇಲ್ಲಿ ಒಮ್ಮೆ ಪಿಂಡಪ್ರದಾನವನ್ನು ಮಾಡುವುದರಿಂದಲೇ ಮುಕ್ತರಾಗುವರೆಂಬುದರಲ್ಲಿ ಸಂದೇಹವಿಲ್ಲ. ಅಸ್ಮಾಹಕತೀರ್ಥದಲ್ಲಿ ಗಜಾಕಾರದ ದಿವ್ಯಶಿಲೆಯೊಂದು ನೆಲಸಿರುವುದು. ಸಕಲ ಪಾಪಗಳನ್ನೂ ಕಳೆಯುವ ಈ ಶಿಲೆಯನ್ನು ಬ್ರಹ್ಮನೇ ಹಿಂದೆ ನಿರ್ಮಿಸಿರುವನು.

ಉಪರ್ಯಸ್ಯಾ ಯಥಾನ್ಯಾಯಂ ಪಿತ್ರೂನುದ್ದಿಶ್ಯ ಭಾರತ ।
ದಕ್ಷಿಣಾಗ್ರೇಷು ದರ್ಭೇಷು ದದ್ಯಾತ್ಪಿಂಡಾನ್ವಿಚಕ್ಷಣಃ ॥ ೬೫ ॥
ಭೂಮೌ ಚಾಽನ್ನೇನ ಸಿದ್ಧೇನ ಶ್ರಾದ್ಧಂ ಕೃತ್ವಾ ಯಥಾವಿಧಿ ।
ಶ್ರಾದ್ಧಿಭ್ಯೋ ವಸ್ತ್ರಯುಗ್ಮಾನಿ ಛತ್ರೋಪಾನತ್ಕಮಂಡಲು ।
ದಕ್ಷಿಣಾ ವಿವಿಧಾ ದೇಯಾ ಪಿತ್ರೂನುದ್ದಿಶ್ಯ ಭಾರತ ॥ ೬೬ ॥
ಯೋ ದದಾತಿ ದ್ವಿಜಶ್ರೇಷ್ಠ ತಸ್ಯ ಪುಣ್ಯಫಲಂ ಶೃಣು ।
ತಸ್ಯ ತೇ ದ್ವಾದಶಾಬ್ದಾನಿ ತೃಪ್ತಿಂ ಯಾಂತಿ ನ ಸಂಶಯಃ ॥ ೬೭ ॥
ಅಸ್ಮಾಹಕೇ ಮಹಾರಾಜ ಪಿತರಶ್ಚ ಪಿತಾಮಹಾಃ ।
ವಾಯುಭೂತಾ ನಿರೀಕ್ಷಂತೇ ಆಗಚ್ಛಂತಂ ಸ್ವಗೋತ್ರಜಂ ॥ ೬೮ ॥
ಅತ್ರ ತೀರ್ಥೇ ಸುತೋಽಭ್ಯೇತ್ಯ ಸ್ನಾತ್ವಾ ತೋಯಂ ಪ್ರದಾಸ್ಯತಿ ।
ಶ್ರಾದ್ಧಂ ವಾ ಪಿಂಡದಾನಂ ವಾ ತೇನ ಯಾಸ್ಯಾಮ ಸದ್ಗತಿಂ ॥ ೬೯ ॥
ಸ್ನಾನೇ ಕೃತೇ ತು ಯೇ ಕೇಚಿಜ್ಜಾಯಂತೇ ವಸ್ತ್ರವಿಪ್ರುಷಃ ।
ಪ್ರೀಣಯೇನ್ನರಕಸ್ಥಾಂಸ್ತು ತೈಃ ಪಿತ್ರೂನ್ನಾಽತ್ರ ಸಂಶಯಃ ॥ ೭೦ ॥

---

೬೫. ಧರ್ಮರಾಜನೆ! ಯಥಾವಿಧಿಯಾಗಿ ಈ ಶಿಲೆಯಮೇಲೆ ದಕ್ಷಿಣಾಗ್ರಗಳಾದ ದರ್ಭೆಗಳನ್ನು ಹರಡಿ ಕಾರ್ಯಕುಶಲನಾದವನು ಅವುಗಳ ಮೇಲೆ ಪಿತೃಗಳಿಗಾಗಿ ಪಿಂಡಗಳನ್ನು ಕೊಡಬೇಕು.

೬೬. ಭೂಮಿಯಲ್ಲಿ ಸಿದ್ಧಮಾಡಿದ ಅನ್ನದಿಂದ ಯಥಾವಿಧಿಯಾಗಿ ಶ್ರಾದ್ಧವನ್ನು ನೆರವೇರಿಸಿ ಬ್ರಾಹ್ಮಣರಿಗೆ ವಸ್ತ್ರದ್ವಯಗಳನ್ನೂ, ಛತ್ರಿಯನ್ನೂ, ಪಾದರಕ್ಷೆಗಳನ್ನೂ, ಜಲಪಾತ್ರೆಗಳನ್ನೂ ಕೊಡಬೇಕು. ಬಳಿಕ ಪಿತೃಗಳ ತೃಪ್ತ್ಯರ್ಥವಾಗಿ ವಿವಿಧ ದಕ್ಷಿಣೆಗಳನ್ನು ಕೊಡಬೇಕು.

೬೭. ಮಾರ್ಕಂಡೇಯನೆ! ಇಂತು ದಾನವನ್ನು ಮಾಡಿದವನ ಪುಣ್ಯದ ಫಲವನ್ನು ಕೇಳು. ಅದರಿಂದ ಪಿತೃಗಳು ಹನ್ನೆರಡು ವರ್ಷಗಳವರೆಗೂ ಸಂತೃಪ್ತರಾಗುವುದರಲ್ಲಿ ಸಂಶಯವಿಲ್ಲ.

೬೮. ಮಹಾರಾಜನೆ! ಸಕಲ ಪಿತೃಗಳೂ ಪಿತಾಮಹರೂ ಈ ಅಸ್ಮಾಹಕ ಕ್ಷೇತ್ರಕ್ಕೆ ಬಂದು ವಾಯುಭೂತರಾಗಿ ನಿಂತು ತಮ್ಮ ವಂಶದವರು ಯಾರಾದರೂ ಬರುವರೇ ಎಂದು ನಿರೀಕ್ಷಿಸುತ್ತಿರುವರು.

೬೯–೭೦. ಈ ತೀರ್ಥಕ್ಕೆ ವಂಶಜಾತನು ಯಾವನಾದರೂ ಬಂದು ನಮಗೆ ಜಲತರ್ಪಣವನ್ನೋ, ಶ್ರಾದ್ಧವನ್ನೊ, ಪಿಂಡಪ್ರದಾನವನ್ನೊ ಕೊಟ್ಟರೆ ನಾವು ಅದರಿಂದ ಸದ್ಗತಿಯನ್ನು ಪಡೆಯುವೆವು. ಯಾರು ಸ್ನಾನವನ್ನು ಮಾಡಿ ಒದ್ದೆ ಬಟ್ಟೆಗಳಿಂದ ನೀರ್ವನಿಗಳನ್ನು ಚೆಲ್ಲುತ್ತ ಮೇಲಕ್ಕೆ ಬರುವರೊ, ಅವರು ನರಕದಲ್ಲಿರುವ ಪಿತೃಗಳನ್ನು ಸಂತೋಷಗೊಳಿಸುವುದರಲ್ಲಿ ಸಂಶಯವಿಲ್ಲ.

ಕೇಶೋದಬಿಂದವಸ್ತಸ್ಯ ಯೇ ಚಾಽನ್ಯೇ ಲೇಪಭಾಜಿನಃ ।
ತೃಪ್ಯಂತ್ಯನಗ್ನಿಸಂಸ್ಕಾರಾ ಯೇ ಮೃತಾಃ ಸ್ಯುಃ ಸ್ವಗೋತ್ರಜಾಃ ॥ ೭೧ ॥
ತತ್ರ ತೀರ್ಥೇ ತು ಯೇ ಕೇಚಿಚ್ಛ್ರಾದ್ಧಂ ಕೃತ್ವಾ ವಿಧಾನತಃ ।
ನರಕಾದುದ್ಧರಂತ್ಯಾಶು ಜಪಂತಃ ಪಿತೃಸಂಹಿತಾಂ ॥ ೭೨ ॥
ವನಸ್ಪತಿಗತೇ ಸೋಮೇ ಯದಾ ಸೋಮದಿನಂ ಭವೇತ್ ।
ಅಕ್ಷಯಾಂಲ್ಲಭತೇ ಲೋಕಾನ್ಪಿಂಡೇನೈಕೇನ ಮಾನವಃ ॥ ೭೩ ॥
ಅಕ್ಷಯಂ ತತ್ರ ವೈ ಸರ್ವಂ ಜಾಯತೇ ನಾಽತ್ರ ಸಂಶಯಃ ।
ನರಕಾದುದ್ಧರಂತ್ಯಾಶು ಜಪಂತೇ ಪಿತೃಸಂಹಿತಾಂ ॥ ೭೪ ॥
ತಸ್ಮಿಂಸ್ತೀರ್ಥೇ ತ್ವಮಾವಾಸ್ಯಾಂ ಪಿತೄನುದ್ದಿಶ್ಯ ಭಾರತ ।
ನೀಲಂ ಸರ್ವಾಂಗಸಂಪೂರ್ಣಂ ಯೋಽಭಿಷಿಚ್ಯ ಸಮುತ್ಸೃಜೇತ್ ।
ತಸ್ಯ ಪುಣ್ಯಫಲಂ ವಕ್ತುಂ ನ ತು ವಾಚಸ್ಪತಿಃ ಕ್ಷಮಃ ॥ ೭೫ ॥
ಅಸ್ಮಾಹಕೇ ವೃಷೋತ್ಸರ್ಗಾದ್ಯತ್ಪುಣ್ಯಂ ಸಮವಾಪ್ಯತೇ ।
ತವ ಶುಶ್ರೂಷಣಾತ್ಸರ್ವಂ ತತ್ಪ್ರವಕ್ಷ್ಯಾಮಿ ಭಾರತ ॥ ೭೬ ॥

---

೭೧. ಆತನ ಕೂದಲುಗಳಿಂದಲೂ ಮೈಯ ಮೇಲಿಂದಲೂ ಬೀಳುವ ಜಲ ಕಣಗಳೇ ವಂಶದಲ್ಲಿ ಅಗ್ನಿಸಂಸ್ಕಾರವಿಲ್ಲದೆ ಸತ್ತ ಸಮಸ್ತರನ್ನೂ ತೃಪ್ತರನ್ನಾಗಿ ಮಾಡುವುದು.

೭೨. ಆ ತೀರ್ಥದಲ್ಲಿ ಯಾರೇ ಆದರೂ ವಿಧಾನದಿಂದ ಶ್ರಾದ್ಧವನ್ನು ನೆರವೇರಿಸಿ ಪಿತೃಮೇಧದ ಮಂತ್ರಗಳನ್ನು ಜಪಿಸಲು ಪಿತೃಗಳು ನರಕದಿಂದ ಉದ್ಧೃತರಾಗುವರು.

೭೩–೭೪. ಸೋಮವಾರದ ದಿನ ಅಮಾವಾಸ್ಯೆಯು ಬರಲು ಅಲ್ಲಿ ಒಮ್ಮೆ ಪಿಂಡಪ್ರದಾನವನ್ನು ಮಾಡುವುದರಿಂದ ಮನುಷ್ಯನು ಅಕ್ಷಯಲೋಕಗಳನ್ನು ಪಡೆಯುವನು. ಅಲ್ಲಿ ಮಾಡಿದ ಸಮಸ್ತ ಕ್ರಿಯೆಯೂ ಅಕ್ಷಯವಾಗುವುದರಲ್ಲಿ ಸಂದೇಹವಿಲ್ಲ. ಪಿತೃಸಂಹಿತೆಯನ್ನು ಜಪಿಸಿದವರು ಪಿತೃಗಳನ್ನು ನರಕದಿಂದುದ್ಧರಿಸುವರು.

೭೫. ಮಹಾರಾಜನೆ! ಅಮಾವಾಸ್ಯೆಯ ದಿನದಲ್ಲಿ ಆ ತೀರ್ಥವನ್ನು ಸೇರಿ ಪಿತೃಗಳ ತೃಪ್ತಿಗಾಗಿ ನೀಲವೆಂಬ ಜಾತಿಯ ಸರ್ವಾಂಗಸಂಪೂರ್ಣವಾದ ವೃಷಭಕ್ಕೆ ಸ್ನಾನಮಾಡಿಸಿ ಬಿಡುವವನ ಪುಣ್ಯದ ಫಲವನ್ನು ಹೇಳಲು ಬೃಹಸ್ಪತಿಯೂ ಶಕ್ತನಾಗಲಾರನು.

೭೬. ಭರತಕುಲೋತ್ಪನ್ನನೆ! ಕೇಳಲು ಕುತೂಹಲಿಯಾಗಿರುವುದರಿಂದ ನಿನಗೆ ಅಸ್ಮಾಹಕ ತೀರ್ಥದಲ್ಲಿ ವೃಷೋತ್ಸರ್ಗವನ್ನು ಮಾಡುವುದರಿಂದುಂಟಾಗುವ ಪುಣ್ಯವನ್ನು ನಿರೂಪಿಸುವೆನು.

ರೌರವಾದಿಷು ಯೇ ಕಿಂಚಿತ್ಪಚ್ಯಂತೇ ತಸ್ಯ ಪೂರ್ವಜಾಃ ।
ವೃಷೋತ್ಸರ್ಗೇಣ ತಾನ್ ಸರ್ವಾಂಸ್ತಾರಯೇದೇಕವಿಂಶತಿಂ ॥ ೭೭ ॥
ಲೋಹಿತೋ ಯಸ್ತು ವರ್ಣೇನ ಮುಖೇ ಪುಚ್ಛೇ ಚ ಪಾಂಡುರಃ ।
ಪಿಂಗಃ ಖುರವಿಷಾಣಾಭ್ಯಾಂ ಸ ನೀಲೋ ವೃಷ ಉಚ್ಯತೇ ॥ ೭೮ ॥
ಯಸ್ತು ಸರ್ವಾಂಗಪಿಂಗಶ್ಚ ಶ್ವೇತಃ ಪುಚ್ಛಖುರೇಷು ಚ ।
ಸ ಪಿಂಗೋ ವೃಷ ಇತ್ಯಾಹುಃ ಪಿತೄಣಾಂ ಪ್ರೀತಿವರ್ಧನಃ ॥ ೭೯ ॥
ಪಾರಾವತಸವರ್ಣಶ್ಚ ಲಲಾಟೇ ತಿಲಕೋ ಭವೇತ್ ।
ತಂ ವೃಷಂ ಬಭ್ರುಮಿತ್ಯಾಹುಃ ಪೂರ್ಣಂ ಸರ್ವಾಂಗಶೋಭನಂ ॥ ೮೦ ॥
ಸರ್ವಾಂಗೇಷ್ವೇಕವರ್ಣೋ ಯಃ ಪಿಂಗಃ ಪುಚ್ಛಖುರೇಷು ಚ ।
ಖುರಪಿಂಗಂ ತಮಿತ್ಯಾಹುಃ ಪಿತೄಣಾಂ ಸದ್ಗತಿಪ್ರದಂ ॥ ೮೧ ॥
ನೀಲಂ ಸರ್ವಶರೀರೇಣ ಸ್ವಾರಕ್ತನಯನಂ ದೃಢಂ ।
ತಮೇವ ನೀಲಮಿತ್ಯಾಹುರ್ನೀಲಃ ಪಂಚವಿಧಃ ಸ್ಮೃತಃ ॥ ೮೨ ॥

---

೭೭. ಅದನ್ನು ಮಾಡಿದವನು ತನ್ನ ಹಿಂದಿನ ಇಪ್ಪತ್ತೊಂದು ಕುಲಗಳಲ್ಲಿ ಯಾವ ಜೀವರು ರೌರವಾದಿ ನರಕಗಳಲ್ಲಿ ನರಳುತ್ತಿರುವರೊ, ಅವರನ್ನೆಲ್ಲ ಈ ವೃಷೋತ್ಸರ್ಗದಿಂದ ಕಡೆಹಾಯಿಸುವನು.

೭೮. ಮೈಯೆಲ್ಲ ಕೆಂಪು ಬಣ್ಣದ್ದಾಗಿ, ಮುಖವೂ, ಬಾಲವೂ ಬೆಳ್ಳಗಿರಲು ಗೊರಸುಗಳೂ ಕೊಂಬುಗಳೂ ಹಳದಿಯ ಬಣ್ಣವುಳ್ಳ ವೃಷಭವು ನೀಲವೆಂಬ ಜಾತಿಯದೆಂದು ಹೇಳುವರು.

೭೯. ಸರ್ವಾಂಗಗಳೂ ಪಿಂಗಳವರ್ಣವಾಗಿರಲು ಬಾಲವೂ ಗೊರಸುಗಳೂ ಬೆಳ್ಳಗಿರುವ ವೃಷಭಕ್ಕೆ ಪಿಂಗವೆಂದು ಹೆಸರು. ಇದು ಪಿತೃಗಳ ಪ್ರೀತಿಯನ್ನು ಹೆಚ್ಚಿಸುವುದು.

೮೦. ಹೃಷ್ಟಪುಷ್ಟವೂ, ಸಲ್ಲಕ್ಷಣಗಳಾದ ಸರ್ವಾಂಗಗಳುಳ್ಳದುದೂ ಆಗಿ ಪಾರಿವಾಳದ ಬಣ್ಣದಿಂದೊಡಗೂಡಿ ಹಣೆಯಲ್ಲಿ ತಿಲಕವಿರುವ ವೃಷಭವನ್ನು ಬಭ್ರುವೆಂದು ಕರೆಯುವರು.

೮೧. ಸರ್ವಾಂಗಗಳಲ್ಲಿಯೂ ಒಂದೇ ಬಣ್ಣವುಳ್ಳದ್ದಾಗಿ, ಬಾಲವೂ, ಗೊರಸುಗಳೂ ಮಾತ್ರ ಪಿಂಗಳವರ್ಣವಾಗಿರುವ ವೃಷಭವನ್ನು ಖುರಪಿಂಗವೆಂದು ಕರೆಯುವರು. ಇದರಿಂದ ಪಿತೃಗಳಿಗೆ ಸದ್ಗತಿಯು ಲಭಿಸುವುದು.

೮೨. ಶರೀರವೆಲ್ಲವೂ ನೀಲವಾಗಿ ಕೆಂಪಾದ ಕಣ್ಣುಗಳೂ, ದೃಢವಾದ ಮೈಕಟ್ಟುಳ್ಳದ್ದಾಗಿರುವುದನ್ನು ನೀಲವೆನ್ನುವರು. ಈ ನೀಲ ವೃಷಭವೂ ಐದು ಬಗೆಯಾದದ್ದೆಂದು ಹೇಳುವರು.

ಯಸ್ತು ವೈಶ್ಯಗೃಹೇ ಜಾತಃ ಸ ವೈ ನೀಲೋ ವಿಶಿಷ್ಯತೇ ॥ ೮೩ ॥
ನವಾಹಯೇದ್ಗೃಹೇ ಜಾತಂ ವತ್ಸಕಂ ತು ಕದಾಚನ ।
ತೇನೈವ ಚ ವೃಷೋತ್ಸರ್ಗೇ ಪಿತೄಣಾಮನೃಣೋ ಭವೇತ್ ॥ ೮೪ ॥
ಜಾತಂ ತು ಸ್ವಗೃಹೇ ವತ್ಸಂ ದ್ವಿಜನ್ಮಾ ಯಸ್ತು ವಾಹಯೇತ್ ।
ಪತಂತಿ ಪಿತರಸ್ತಸ್ಯ ಬ್ರಹ್ಮಲೋಕಗತಾ ಅಪಿ ॥ ೮೫ ॥
ಯಥಾ ಯಥಾ ಹಿ ಪಿಬತಿ ಪೀತ್ವಾ ಧೂನಾತಿ ಮಸ್ತಕಂ ।
ಪಿಬನ್ಪಿತೄನ್ಪ್ರೀಣಯತಿ ನರಕಾದುದ್ಧರೇದ್ಧುನನ್ ॥ ೮೬ ॥
ಯಥಾ ಪುಚ್ಛಾಭಿಘಾತೇನ ಸ್ಕಂಧಂ ಗಚ್ಛಂತಿ ಬಿಂದವಃ ।
ನರಕಾದುದ್ಧರಂತ್ಯಾಶು ಪತಿತಾನ್ಗೋತ್ರಿಣಸ್ತಥಾ ॥ ೮೭ ॥
ಗರ್ಜನ್ಪ್ರಾವೃಷಿ ಕಾಲೇತು ವಿಷಾಣಾಭ್ಯಾಂ ಭುವಂ ಲಿಖನ್ ।
ಖುರೇಭ್ಯೋ ಯಾ ಮೃದುದ್ಭೂತಾ ತಯಾ ಸಂಪ್ರೀಣಯೇದೃಷೀನ್॥೮೮॥
ಪಿಬನ್ಪಿತೄನ್ಪ್ರೀಣಯತೇ ಖಾದನೋಲ್ಲೇಖನೇ ಸುರಾನ್ ।
ಗರ್ಜನ್ಮೃಷಿಮನುಷ್ಯಾಂಶ್ಚ ಧರ್ಮರೂಪೋ ಹಿ ಧರ್ಮಜ ॥ ೮೯ ॥

---

೮೩. ವೈಶ್ಯರ ಮನೆಯಲ್ಲಿ ಹುಟ್ಟಿರುವ ನೀಲವೃಷಭವೇ ಸರ್ವೋತ್ತಮ ವೆನಿಸುವುದು.

೮೪. ಮನೆಯಲ್ಲಿ ಹುಟ್ಟಿದ ಹೋರಿಗರುವನ್ನೆಂದಿಗೂ ನೊಗಕ್ಕೆ ಹೂಡ ಬಾರದು. ಅದರಿಂದಲೇ ವೃಷೋತ್ಸರ್ಗವನ್ನು ಮಾಡಲು ಪಿತೃಗಳ ಋಣವು ಕಳೆಯುವುದು.

೮೫. ಯಾವ ದ್ವಿಜನು ಮನೆಯಲ್ಲಿ ಹುಟ್ಟಿದ ಕರುವನ್ನು ನೊಗಕ್ಕೆ ಹೂಡು ವನೊ, ಅವನ ಪಿತೃಗಳು ಬ್ರಹ್ಮಲೋಕದಲ್ಲಿದ್ದರೂ ಪದಚ್ಯುತರಾಗುವರು.

೮೬. ಆ ಕರುವು ನೀರನ್ನು ಕುಡಿಯುತ್ತ ತಲೆಯನ್ನಲ್ಲಾಡಿಸುವಾಗಲೆಲ್ಲ ಪಾನದಿಂದ ಪಿತೃಗಳನ್ನು ಸಂತೋಷಗೊಳಿಸಿ ತಲೆಯ ವಿಧೂನನದಿಂದ ನರಕದಲ್ಲಿ ಇರುವವರನ್ನು ಉದ್ಧರಿಸುವುದು ;

೮೭. ಬಾಲವನ್ನು ಬೀಸುವುದರಿಂದ ಕತ್ತಿನ ಪ್ರದೇಶದಲ್ಲಿ ಎಷ್ಟು ಜಲ ಬಿಂದುಗಳನ್ನು ಚೆಲ್ಲುವುದೊ, ಅಷ್ಟು ಜನ ನರಕದಲ್ಲಿರುವ ಗೋತ್ರಜರನ್ನುದ್ಧರಿ ಸುವುದು ;

೮೮. ವರ್ಷರ್ತುವಿನಲ್ಲಿ ಗರ್ಜಿಸುತ್ತ ಕೊಂಬುಗಳಿಂದ ಭೂಮಿಯನ್ನು ಸೀಳಿ ಗೊರಸುಗಳಿಂದ ಧೂಳಿಯನ್ನೆಬ್ಬಿಸುವುದರಿಂದ ವೃಷಭವು ಋಷಿಗಳನ್ನು ಸಂತೋಷಗೊಳಿಸುವುದು.

೮೯. ಧರ್ಮನಂದನನೆ! ಜಲಪಾನದಿಂದ ಪಿತೃಗಳನ್ನೂ, ಹುಲ್ಲು ಮೇಯುವುದರಿಂದಲೂ, ನೆಗೆಯುವುದರಿಂದಲೂ ದೇವತೆಗಳನ್ನೂ, ಗರ್ಜನೆಗಳಿಂದ

ಭೂತೈರ್ವಾಽಪಿ ಪಿಶಾಚೈರ್ವಾ ಚಾತುರ್ಥಿಕಜ್ವರೇಣ ವಾ ।
ಗೃಹೀತೋಽಸ್ಮಾಹಕಂ ಗಚ್ಛೇತ್ಸರ್ವೇಷಾಮಾಧಿನಾಶನಂ ॥ ೯೦ ॥
ಸ್ನಾತ್ವಾ ತು ವಿಮಲೇ ತೋಯೇ ದರ್ಭಗ್ರಂಥಿಂ ನಿಬಂಧಯೇತ್ ।
ಮಸ್ತಕೇ ಬಾಹುಮೂಲೇ ವಾ ನಾಭ್ಯಾಂ ವಾ ಗಲಕೇಽಪಿ ವಾ ॥ ೯೧ ॥
ಗತ್ವಾ ದೇವಸಮೀಪಂ ಚ ಪ್ರಾದಕ್ಷಿಣ್ಯೇನ ಕೇಶವಂ ।
ತತಃ ಸಮುಚ್ಚರನ್ಮಂತ್ರಂ ಗಾಯತ್ರ್ಯಾ ವಾಽಥ ವೈಷ್ಣವಂ ॥ ೯೨ ॥
ನಾರಾಯಣಂ ಶರಣ್ಯೇಶಂ ಸರ್ವದೇವನಮಸ್ಕೃತಂ ।
ನಮೋ ಯಜ್ಞಾಂಗಸಂಭೂತ ಸರ್ವವ್ಯಾಪಿನ್ನಮೋಽಸ್ತು ತೇ ॥ ೯೩ ॥
ನಮೋ ನಮಸ್ತೇ ದೇವೇಶ ಪದ್ಮಗರ್ಭ ಸನಾತನ ।
ದಾಮೋದರ ಜಯಾನಂತ ರಕ್ಷ ಮಾಂ ಶರಣಾಗತಂ ॥ ೯೪ ॥
ತ್ವಂ ಕರ್ತಾ ತ್ವಂ ಚ ಹರ್ತಾ ಚ ಜಗತ್ಯಸ್ಮಿಂಶ್ಚರಾಚರೇ ।
ತ್ವಂ ಪಾಲಯಸಿ ಭೂತಾನಿ ಭುವನಂ ತ್ವಂ ಬಿಭರ್ಷಿ ಚ ॥ ೯೫ ॥

---

ಋಷಿಗಳನ್ನೂ ಮನುಷ್ಯರನ್ನೂ ಆನಂದಗೊಳಿಸುವುದರಿಂದ ವೃಷಭವು ಧರ್ಮ ಸ್ವರೂಪವೇ ಆಗಿರುವುದು.

೯೦. ಭೂತಗಳಿಂದಾಗಲಿ, ಪಿಶಾಚಗಳಿಂದಾಗಲಿ, ನಾಲ್ಕನೆಯ ಜ್ವರ ದಿಂದಾಗಲಿ ಪೀಡಿತನಾದವನು ಸಕಲರ ಪಾಪಗಳನ್ನೂ ಪರಿಹರಿಸುವ ಅಸ್ಮಾಹಕ ತೀರ್ಥವನ್ನು ಸೇರಬೇಕು.

೯೧. ನಿರ್ಮಲವಾದ ಅದರ ನೀರಿನಲ್ಲಿ ಮಿಂದು ತಲೆಯಲ್ಲಾಗಲಿ, ಬಾಹು ಮೂಲದಲ್ಲಿಯಾಗಲಿ, ನಾಭಿಯಲ್ಲಾಗಲಿ, ಕತ್ತಿನಲ್ಲಾಗಲಿ ದರ್ಭೆಗಳ ಗ್ರಂಥಿ ಯನ್ನು ಧರಿಸಬೇಕು.

೯೨-೯೩. ಬಳಿಕ ಕೇಶವನ ಸಮೀಪಕ್ಕೆ ಹೋಗಿ ಗಾಯತ್ರಿಯನ್ನೋ, ವೈಷ್ಣವಮಂತ್ರವನ್ನೋ ಜಪಿಸುತ್ತ ಪ್ರದಕ್ಷಿಣೆಯನ್ನು ಮಾಡಿ ಶರಣಾಗತ ರಕ್ಷಕನೂ, ಸಕಲ ದೇವತೆಗಳಿಂದ ನಮಸ್ಕರಿಸಲ್ಪಡತಕ್ಕವನೂ ಆದ ನಾರಾಯಣ ನನ್ನು ಸ್ತುತಿಸಬೇಕು. "ಯಜ್ಞಾಂಗದಿಂದ ಸಂಭವಿಸಿ ಸರ್ವವ್ಯಾಪಕನಾಗಿರುವ ನಿನಗೆ ನಮಸ್ಕಾರವು.

೯೪. ದೇವಾಧಿದೇವನೆ! ಪದ್ಮನಾಭನೆ! ಅನಾದಿ ನಿಧನನೆ! ದಾಮೋದರನೆ! ವಿಜಯಿಯೆ! ಅನಂತನೆ! ನಿನಗೆ ನಮಸ್ಕಾರವು. ಶರಣಾಗತನಾಗಿ ಬಂದಿರುವ ನನ್ನನ್ನು ಕಾಪಾಡು.

೯೫. ಚರಾಚರಾತ್ಮಕವಾದ ಈ ಜಗತ್ತಿಗೆ ನೀನೇ ಕರ್ತನು, ಸಂಹಾರಕನು. ನೀನೇ ಪ್ರಾಣಿಗಳನ್ನು ಕಾಪಾಡುತ್ತ ಭೂಮಂಡಲವನ್ನು ಪಾಲಿಸುತ್ತಿರುವೆ.

ಪ್ರಸೀದ ದೇವದೇವೇಶ ಸುಪ್ತಮಂಗಂ ಪ್ರಬೋಧಯ ।
ತ್ವದ್ಧ್ಯಾನನಿರತೋ ನಿತ್ಯಂ ತ್ವದ್ಭಕ್ತಿಪರಮೋ ಹರೇ ॥ ೯೬ ॥
ಇತಿ ಸ್ತುತೋ ಮಯಾ ದೇವ ಪ್ರಸಾದಂ ಕುರು ಮೇಽಚ್ಯುತ ।
ಮಾಂ ರಕ್ಷರಕ್ಷ ಪಾಪೇಭ್ಯಸ್ತ್ರಾಯಸ್ವ ಶರಣಾಗತಂ ॥ ೯೭ ॥
ಏವಂ ಸ್ತುತ್ವಾ ಚ ದೇವೇಶಂ ದಾನವಾಂತಕರಂ ಹರಿಂ ।
ಪುನರುಕ್ತೇನ ವೈ ಸ್ನಾತ್ವಾ ತತೋ ವಿಪ್ರಾಂಸ್ತು ಭೋಜಯೇತ್ ॥ ೯೮ ॥
ವೇದೋಕ್ತೇನ ವಿಧಾನೇನ ಸ್ನಾನಂ ಕೃತ್ವಾ ಯಥಾವಿಧಿ ।
ಪಿಂಡನಿರ್ವಪಣಂ ಕೃತ್ವಾ ವಾಚಯೇತ್ಸ್ವಸ್ತಿಕಂ ತತಃ ॥ ೯೯ ॥
ಏವಂ ಸ್ತುತ್ವಾ ಚ ದೇವೇಶಂ ದಾನವಾಂತಕರಂ ಹರಿಂ ।
ಪುನರುಕ್ತೇನ ವೈ ಸ್ನಾತ್ವಾ ತತೋ ವಿಪ್ರಾಂಸ್ತು ಭೋಜಯೇತ್ ॥ ೧೦೦ ॥
ವೇದೋಕ್ತೇನ ವಿಧಾನೇನ ಸ್ನಾನಂ ಕೃತ್ವಾ ಯಥಾವಿಧಿ ।
ಏವಂ ತಾನ್ವಾಚಯಿತ್ವಾ ತು ತತೋ ವಿಪ್ರಾನ್ವಿಸರ್ಜಯೇತ್ ॥ ೧೦೧ ॥
ಯತ್ತತ್ರೋಚ್ಚರಿತಂ ಕಿಂಚಿತ್ತದ್ವಿಪ್ರೇಭ್ಯೋ ನಿವೇದಯೇತ್ ।
ತತ್ರ ತೀರ್ಥೇ ನರಃ ಸ್ನಾತ್ವಾ ನಾರೀ ವಾ ಭಕ್ತಿತತ್ಪರಾ ।
ಶಕ್ತಿತೋ ದಕ್ಷಿಣಾಂ ದದ್ಯಾತ್ಕೃತ್ವಾ ಶ್ರಾದ್ಧಂ ಯಥಾವಿಧಿ ॥ ೧೦೨ ॥

---

೯೬. ದೇವದೇವನೆ! ನನ್ನಲ್ಲಿ ಪ್ರಸನ್ನನಾಗಿ, ಜಡವಾಗಿರುವ ನನ್ನ ಅಂತರಾತ್ಮನನ್ನು ಎಚ್ಚರಗೊಳಿಸು. ಶ್ರೀ ಹರಿಯೆ! ನಾನು ನಿತ್ಯವೂ ನಿನ್ನ ಧ್ಯಾನದಲ್ಲಿಯೇ ನಿರತನಾಗಿ ನಿನ್ನಲ್ಲಿಯೇ ಭಕ್ತಿಯನ್ನು ಮಾಡುತ್ತಿರುವೆನು.

೯೭. ದೇವಾಧಿದೇವನೆ! ಇಂತು ಸ್ತುತಿಸುತ್ತಿರುವ ನನ್ನಲ್ಲಿ ಪ್ರಸನ್ನನಾಗು. ಶರಣಾಗತನಾಗಿ ಬಂದಿರುವ ನನ್ನನ್ನು ರಕ್ಷಿಸಿ ಪಾಪಗಳನ್ನು ದೂರಮಾಡು."

೯೮. ಇಂತೆಂದು ದೇವೇಶ್ವರನೂ, ದಾನವಕುಲಾಂತಕನೂ ಆದ ಶ್ರೀ ಹರಿಯನ್ನು ಸ್ತುತಿಸಿ ಮತ್ತೆ ಸ್ನಾನವನ್ನು ಮಾಡಿ ಬ್ರಾಹ್ಮಣರಿಗೆ ಭೋಜನವನ್ನು ಮಾಡಿಸಬೇಕು.

೯೯. ವೇದೋಕ್ತಗಳಾದ ವಿಧಿಯಿಂದ ಸಾಂಗವಾಗಿ ಸ್ನಾನವನ್ನು ಮಾಡಿ ಪಿತೃಗಳಿಗೆ ಪಿಂಡಗಳನ್ನಿತ್ತು ಸ್ವಸ್ತಿಮಂತ್ರಗಳನ್ನು ಬ್ರಾಹ್ಮಣರಿಂದ ಹೇಳಿಸಬೇಕು.

೧೦೦–೧೦೧. ಬಳಿಕ ಮತ್ತೊಂದುಸಲ ದೇವದೇವನಾದ ಮಹಾವಿಷ್ಣುವಿನ ಸ್ತೋತ್ರವನ್ನು ಮಾಡಿ ಪುನಃ ಸುಸ್ನಾತನಾಗಿ ಬ್ರಾಹ್ಮಣಭೋಜನವನ್ನು ಮಾಡಿಸಬೇಕು. ವೇದೋಕ್ತವಿಧಾನದಿಂದ ಸ್ನಾನವನ್ನು ಮಾಡಿ ಸ್ವಸ್ತಿಮಂತ್ರಗಳನ್ನು ಹೇಳಿಸಿ ಬಳಿಕ ಬ್ರಾಹ್ಮಣರನ್ನು ಬೀಳ್ಕೊಡಬೇಕು.

೧೦೨. ವಾಗ್ದಾನವನ್ನು ಮಾಡಿದಂತೆ ಅತ್ಯಲ್ಪವನ್ನಾದರೂ ಬ್ರಾಹ್ಮಣರಿಗೆ ಸಮರ್ಪಿಸಬೇಕು. ಆ ತೀರ್ಥದಲ್ಲಿ ನರನಾಗಲಿ, ಭಕ್ತಿಭರಿತಳಾದ ನಾರಿ

ತತ್ರ ತೀರ್ಥೇ ನರೋ ಯಾವತ್ಸ್ನಾಪಯೇದ್ವಿಧಿಪೂರ್ವಕಂ ।
ಕ್ಷೀರೇಣ ಮಧುನಾ ವಾಽಪಿ ದಧ್ನಾ ವಾ ಶೀತವಾರಿಣಾ ॥ ೧೦೩ ॥
ತಾವತ್ಪುಷ್ಕರಪಾತ್ರೇಷು ಪಿಬಂತಿ ಪಿತರೋ ಜಲಂ ।
ಅಯನೇ ವಿಷುವೇ ಚೈವ ಯುಗಾದೌ ಸೂರ್ಯಸಂಕ್ರಮೇ ॥ ೧೦೪ ॥
ಪುಷ್ಪೈಃ ಸಂಪೂಜ್ಯ ದೇವೇಶಂ ನೈವೇದ್ಯಂ ಯಃ ಪ್ರದಾಪಯೇತ್ ।
ಸೋಽಶ್ವಮೇಧಸ್ಯ ಯಜ್ಞಸ್ಯ ಫಲಂ ಪ್ರಾಪ್ನೋತಿ ಪುಷ್ಕಲಂ ॥ ೧೦೫ ॥
ತತ್ರ ತೀರ್ಥೇ ತು ಯೋ ರಾಜನ್ ಸೂರ್ಯಗ್ರಹಣಮಾಚರೇತ್ ।
ಸೂರ್ಯತೇಜೋನಿಭೈರ್ಯಾನೈರ್ವಿಷ್ಣುಲೋಕೇ ಮಹೀಯತೇ॥ ೧೦೬ ॥
ತತ್ರ ತೀರ್ಥೇ ತು ಯಃ ಶ್ರಾದ್ಧಂ ಪಿತೃಭ್ಯಃ ಸಂಪ್ರಯಚ್ಛತಿ ।
ಸತ್ಪುತ್ರೇಣ ಚ ತೇನೈವ ಸಂಪ್ರಾಪ್ತಂ ಜನ್ಮನಃ ಫಲಂ ॥ ೧೦೭ ॥
ಇತಿ ಶ್ರುತ್ವಾ ತತೋ ದೇವಾಃ ಸರ್ವೇ ಶಕ್ರಪುರೋಗಮಾಃ ।
ಬ್ರಹ್ಮವಿಷ್ಣುಮಹೇಶಾಶ್ಚ ಸ್ಥಾಪಯಾಂಚಕ್ರುರೀಶ್ವರಂ ॥ ೧೦೮ ॥

---

ಯಾಗಲಿ ಸ್ನಾನವನ್ನು ಮಾಡಿ ಯಥಾವಿಧಿಯಾಗಿ ಶ್ರಾದ್ಧವನ್ನು ನೆರವೇರಿಸಿ ಶಕ್ತ್ಯನುಸಾರವಾಗಿ ದಕ್ಷಿಣೆಯನ್ನು ಕೊಡಬೇಕು.

೧೦೩–೧೦೫. ಆ ತೀರ್ಥದಲ್ಲಿರುವ ಮಹಾವಿಷ್ಣುವಿಗೆ ವಿಧಿಪೂರ್ವಕವಾಗಿ ಹಾಲಿನಿಂದಲೂ, ಜೇನುತುಪ್ಪದಿಂದಲೂ, ಮೊಸರಿನಿಂದಲೂ, ಶೀತೋದಕದಿಂದಲೂ ಅಭಿಷೇಕವನ್ನು ಮಾಡಲು ಪಿತೃಗಳು ಅದನ್ನು ಪುಷ್ಕರಪಾತ್ರೆಗಳಲ್ಲಿ ಪಾನಮಾಡುತ್ತಿರುವರು. ಉತ್ತರಾಯಣ ದಕ್ಷಿಣಾಯನಗಳಲ್ಲಿಯೂ, ವಿಷುವತ್ಕಾಲಗಳಲ್ಲಿಯೂ, ಯುಗಾದಿಗಳಲ್ಲಿಯೂ, ಸೂರ್ಯಸಂಕ್ರಮಣಗಳಲ್ಲಿಯೂ, ದೇವೇಶ್ವರನಿಗೆ ಪುಷ್ಪಗಳ ಪೂಜೆಯನ್ನು ಮಾಡಿ ನೈವೇದ್ಯವನ್ನು ಸಮರ್ಪಿಸಿದವನು ಅಶ್ವಮೇಧಮಹಾಯಜ್ಞವನ್ನು ಮಾಡಿದ ಮಹಾಫಲವನ್ನು ಪಡೆಯುವನು.

೧೦೬. ರಾಜೇಂದ್ರನೆ! ಆ ತೀರ್ಥದ ಬಳಿಯಲ್ಲಿ ಸೂರ್ಯಗ್ರಹಣದ ವಿಧಿಯನ್ನು ಯಾವನು ಆಚರಿಸುವನೊ, ಅವನು ಸೂರ್ಯಪ್ರಕಾಶಸಹಿತಗಳಾದ ವಿಮಾನಗಳಿಂದ ವಿಷ್ಣುಲೋಕಕ್ಕೆ ಹೋಗಿ ಪೂಜೆಗೊಳ್ಳುವನು.

೧೦೭. ಆ ತೀರ್ಥದಲ್ಲಿ ಪಿತೃಗಳಿಗೆ ಶ್ರಾದ್ಧವನ್ನು ಮಾಡುವವನೇ ಸತ್ಪುತ್ರನು. ಅವನೇ ಜನ್ಮಸಾಫಲ್ಯವನ್ನು ಪಡೆಯುವವನು.

೧೦೮. ಇದನ್ನು ಕೇಳಿ ಮಹೇಂದ್ರನೇ ಮೊದಲಾದ ಸಮಸ್ತ ದೇವತೆಗಳೂ, ಬ್ರಹ್ಮ ವಿಷ್ಣು ಮಹೇಶ್ವರರೂ ಅಲ್ಲಿ ಒಂದು ಮಹಾಲಿಂಗದ ಸ್ಥಾಪನೆಯನ್ನು ಮಾಡಿದರು.

ಸರ್ವರೋಗೋಪಶಮನಂ ಸರ್ವಪಾತಕನಾಶನಂ ।
ಯಸ್ತು ಸಂವತ್ಸರಂ ಪೂರ್ಣಮಮಾವಾಸ್ಯಾಂ ತು ಭಾವಿತಃ ॥ ೧೦೯ ॥
ಪಿತೃಭ್ಯಃ ಪಿಂಡದಾನಂ ಚ ಕುರ್ಯಾದಸ್ಮಾಹಕೇ ನೃಪ ।
ತ್ರಿಪುಷ್ಕರೇ ಗಯಾಯಾಂ ಚ ಪ್ರಭಾಸೇ ನೈಮಿಷೇ ತಥಾ ॥ ೧೧೦ ॥
ಯತ್ಪುಣ್ಯಂ ಶ್ರಾದ್ಧಕರ್ತೄಣಾಂ ತದಿಹೈವ ಭವೇದ್ಧ್ರುವಂ ।
ತಿಲೋದಕಂ ಕುಶೈರ್ಮಿಶ್ರಂ ಯೋ ದದ್ಯಾದ್ದಕ್ಷಿಣಾಮುಖಃ ॥ ೧೧೧ ॥
ಮನ್ವಾದೌ ಚ ಯುಗಾದೌ ಚ ವ್ಯತೀಪಾತೇ ದಿನಕ್ಷಯೇ ।
ಯೋ ದದ್ಯಾತ್ಪಿತೃಮಾತೃಭ್ಯಃ ಸೋಽಶ್ವಮೇಧಫಲಂ ಲಭೇತ್ ॥ ೧೧೨ ॥
ಅಸ್ಮಾಹಕೇ ನರೋ ಯಸ್ತು ಸ್ನಾತ್ವಾ ಸಂಪೂಜಯೇದ್ಧರಿಂ ।
ಬ್ರಹ್ಮಾಣಂ ಶಂಕರಂ ಭಕ್ತ್ಯಾ ಕುರ್ಯಾಜ್ಜಾಗರಣಕ್ರಿಯಾಂ ॥ ೧೧೩ ॥
ಸರ್ವಪಾಪವಿನಿರ್ಮುಕ್ತಃ ಶಕ್ರಾತಿಥ್ಯಮವಾಪ್ನುಯಾತ್ ।
ತತ್ರ ತೀರ್ಥೇ ನರಃ ಸ್ನಾತ್ವಾ ಯಃ ಪಶ್ಯತಿ ಜನಾರ್ದನಂ ॥ ೧೧೪ ॥
ವಿಶೇಷವಿಧಿನಾಽಭ್ಯರ್ಚ್ಯ ಪ್ರಣಮ್ಯ ಚ ಪುನಃ ಪುನಃ ।
ಸಪುತ್ರೇಣ ಚ ತೇನೈವ ಪಿತೄಣಾಂ ವಿಹಿತಾ ಗತಿಃ ॥ ೧೧೫ ॥

---

೧೦೯–೧೧೨. ಆ ಲಿಂಗವು ಸಕಲ ರೋಗಗಳನ್ನು ಕಳೆಯುವುದೂ, ಸಮಸ್ತ ಪಾತಕಗಳನ್ನು ನಾಶಗೊಳಿಸುವುದೂ ಆಗಿರುವುದು. ಧರ್ಮರಾಜನೆ! ಈ ಅಸ್ಮಾಹಕತೀರ್ಥದಲ್ಲಿ ಯಾವನು ಒಂದು ವರ್ಷದವರೆಗೂ ಅಮಾವಾಸ್ಯೆಯ ದಿನಗಳಲ್ಲಿ ಭಕ್ತಿಯಿಂದ ಪಿತೃಶ್ರಾದ್ಧಗಳನ್ನು ಮಾಡುವನೊ, ಅವನು ಮೂರು ಬಾರಿ ಪುಷ್ಕರದಲ್ಲಿಯೂ, ಗಯೆಯಲ್ಲಿಯೂ, ನೈಮಿಷದಲ್ಲಿಯೂ ಶ್ರಾದ್ಧವನ್ನು ಮಾಡಿದವರಿಗೆ ಲಭಿಸುವ ಪುಣ್ಯಕ್ಕೆ ಭಾಗಿಯಾಗುವುದು ನಿಶ್ಚಯವು. ಮನ್ವಾದಿ ದಿನಗಳಲ್ಲಿಯೂ, ಯುಗಾದಿಗಳಲ್ಲಿಯೂ, ವ್ಯತೀಪಾತಗಳಲ್ಲಿಯೂ, ಸಾಯಂಕಾಲ ಗಳಲ್ಲಿಯೂ ತಂದೆತಾಯಿಗಳಿಗೆ ಕುಶಚ್ಛಿದ್ರಗಳಿಂದ ತಿಲೋದಕಗಳನ್ನು ದಕ್ಷಿಣಾ ಮುಖನಾಗಿ ಕುಳಿತು ಕೊಡುವವನು ಅಶ್ವಮೇಧದ ಫಲವನ್ನು ಪಡೆಯುವನು.

೧೧೩. ಅಸ್ಮಾಹಕಕ್ಷೇತ್ರದಲ್ಲಿ ಸ್ನಾನವನ್ನು ಮಾಡಿ ಮಾನವನು ಶ್ರೀಹರಿ ಯನ್ನೂ, ಚತುರ್ಮುಖನನ್ನೂ, ಮಹೇಶ್ವರನನ್ನೂ ಭಕ್ತಿಯಿಂದ ಪೂಜಿಸಿ ರಾತ್ರಿ ಯಲ್ಲಿ ಜಾಗರಣೆಯನ್ನಾಚರಿಸಬೇಕು.

೧೧೪–೧೧೫. ಅವನು ಸಮಸ್ತ ಪಾತಕಗಳಿಂದಲೂ ಮುಕ್ತನಾಗಿ ಇಂದ್ರನ ಆತಿಥ್ಯವನ್ನು ಸ್ವೀಕರಿಸುವನು. ಆ ತೀರ್ಥದಲ್ಲಿ ಮಿಂದು ಯಾವ ಮಾನವನು ಮಹಾವಿಷ್ಣುವನ್ನು ಕಂಡು ವಿಶೇಷ ಪೂಜೆಯನ್ನು ಮಾಡಿ ಮತ್ತೆ ಮತ್ತೆ ನಮಸ್ಕರಿಸುವನೊ, ಅವನೇ ಸತ್ಪುತ್ರನು. ಅವನಿಂದ ಪಿತೃಗಳು ಸದ್ಗತಿಯನ್ನು ಕಾಣುವರು.

ಏಕಮೂರ್ತಿಸ್ತ್ರಯೋ ದೇವಾ ಬ್ರಹ್ಮವಿಷ್ಣುಮಹೇಶ್ವರಾಃ ।
ಸತ್ಕಾರ್ಯಕಾರಣೋಪೇತಾಃ ಸುಸೂಕ್ಷ್ಮಾಃ ಸುಮಹಾಫಲಾಃ ॥ ೧೧೬ ॥
ಏತತ್ತೇ ಕಥಿತಂ ರಾಜನ್ಮಹಾಪಾತಕನಾಶನಂ ।
ಅಸ್ಮಾಹಕಸ್ಯ ಮಾಹಾತ್ಮ್ಯಂ ಕಿಮನ್ಯತ್ಪರಿಪೃಚ್ಛಸಿ ॥ ೧೧೭ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ
ಪಂಚಮೇ ಆವಂತ್ಯಖಂಡೇ ತೃತೀಯೇ ರೇವಾಖಂಡೇ
"ಅಸ್ಮಾಹಕತೀರ್ಥಮಾಹಾತ್ಮ್ಯವರ್ಣನಂ"ನಾಮ
ಷಟ್‌ಚತ್ವಾರಿಂಶದಧಿಕಶತತಮೋಽಧ್ಯಾಯಃ

---

೧೧೬. ಒಬ್ಬ ಮೂರ್ತಿಯೇ ಬ್ರಹ್ಮ ವಿಷ್ಣು ಮಹೇಶ್ವರರೆಂಬ ಮೂರು ದೇವತೆಗಳಾಗಿರುವನು. ಇವರೇ ಕಾರ್ಯ ಕಾರಣಗಳಿಂದ ಕೂಡಿ ಸೂಕ್ಷ್ಮರೂ ಮಹಾ ಫಲದಾಯಕರೂ ಆಗಿರುವರು.

೧೧೭. ರಾಜೇಂದ್ರನೆ! ಇಂತು ನಿನಗೆ ಅಸ್ಮಾಹಕತೀರ್ಥದ ಮಾಹಾತ್ಮ್ಯವನ್ನೊಳಕೊಂಡು, ಮಹಾ ಪಾತಕಗಳನ್ನೂ ಕಳೆಯುವ ಕಥೆಯನ್ನು ಹೇಳಿದೆನು. ಮತ್ತೇನನ್ನು ಕೇಳಬಯಸುವೆ!

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ
ಶ್ರೀ ಸ್ಕಾಂದಮಹಾಪುರಾಣದ ಐದನೆಯ ಅವಂತ್ಯಖಂಡದ ಮೂರನೆಯ ರೇವಾಖಂಡದಲ್ಲಿ
"ಅಸ್ಮಾಹಕತೀರ್ಥಮಾಹಾತ್ಮ್ಯವರ್ಣನೆ"ಎಂಬ
ನೂರನಲವತ್ತಾರನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

## ಅಥ ಸಪ್ತಚತ್ವಾರಿಂಶದಧಿಕಶತತಮೋಽಧ್ಯಾಯಃ

### ಸಿದ್ಧೇಶ್ವರತೀರ್ಥಮಾಹಾತ್ಮ್ಯವರ್ಣನಂ

**ಶ್ರೀ ಮಾರ್ಕಂಡೇಯ ಉವಾಚ :—**

**ತತೋ ಗಚ್ಛೇನ್ಮಹೀಪಾಲ ಸಿದ್ಧೇಶ್ವರಮನುತ್ತಮಂ ।**
**ನರ್ಮದಾದಕ್ಷಿಣೇ ಕೂಲೇ ತೀರ್ಥಂ ಪರಮಶೋಭನಂ ॥ ೧ ॥**
**ತತ್ರ ತೀರ್ಥೇ ತು ಯಃ ಸ್ನಾತ್ವಾ ಪೂಜಯೇದ್ವೃಷಭಧ್ವಜಂ ।**
**ಸರ್ವಪಾಪವಿನಿರ್ಮುಕ್ತೋ ಗತಿಂ ಯಾತ್ಯಶ್ವಮೇಧಿನಾಂ ॥ ೨ ॥**
**ತತ್ರ ತೀರ್ಥೇ ತು ಯಃ ಸ್ನಾತ್ವಾ ಶ್ರಾದ್ಧಂ ಕುರ್ಯಾತ್ಪ್ರಯತ್ನತಃ ।**
**ಪಿತೄಣಾಂ ಪ್ರೀಣನಾರ್ಥಾಯ ಸರ್ವಂ ತೇನ ಕೃತಂ ಭವೇತ್ ॥ ೩ ॥**
**ತತ್ರ ತೀರ್ಥೇ ಮೃತಾನಾಂ ತು ಜಂತೂನಾಂ ನೃಪಸತ್ತಮ ।**
**ಗರ್ಭವಾಸೇ ಮತಿಸ್ತೇಷಾಂ ನ ಜಾಯೇತ ಕದಾಚನ ॥ ೪ ॥**

---

### ಕನ್ನಡದ ಅನುವಾದ

#### ಸಿದ್ಧೇಶ್ವರತೀರ್ಥಮಾಹಾತ್ಮ್ಯವರ್ಣನ

೧. ಮಾರ್ಕಂಡೇಯನು ಹೇಳುತ್ತಾನೆ:—ಮಹೀಪಾಲಕನೆ! ಬಳಿಕ ನರ್ಮದೆಯ ದಕ್ಷಿಣ ತೀರದಲ್ಲಿರುವ ಪರಮಶೋಭನವೂ, ಉತ್ತಮವೂ ಆದ ಸಿದ್ಧೇಶ್ವರತೀರ್ಥಕ್ಕೆ ಹೋಗಬೇಕು.

೨. ಆ ತೀರ್ಥದಲ್ಲಿ ಸ್ನಾನವನ್ನು ಮಾಡಿ ಪರಮೇಶ್ವರನನ್ನು ಪೂಜಿಸಿದವನು ಸಕಲಪಾಪಗಳನ್ನೂ ಕಳೆದುಕೊಂಡು ಅಶ್ವಮೇಧಗಳನ್ನು ಮಾಡಿದವರ ಗತಿಗೆ ಹೋಗುವನು.

೩. ಆ ತೀರ್ಥದಲ್ಲಿ ಯಾವನು ಸ್ನಾನವನ್ನು ಮಾಡಿ ಪ್ರಯತ್ನದಿಂದ ಪಿತೃಗಳ ಸಂತೃಪ್ತಿಗಾಗಿ ಶ್ರಾದ್ಧವನ್ನಾಚರಿಸುವನೊ, ಅವನು ಸಕಲವನ್ನೂ ಮಾಡಿದಂತೆ ಆಯಿತು.

೪. ರಾಜಸತ್ತಮನೆ! ಆ ತೀರ್ಥದಲ್ಲಿ ಪ್ರಾಣಗಳನ್ನು ತ್ಯಜಿಸಿದ ಜಂತುಗಳಿಗೆ ಪುನಃ ಗರ್ಭವಾಸವನ್ನು ಮಾಡಬೇಕೆಂಬ ಬುದ್ಧಿಯೇ ಉಂಟಾಗುವುದಿಲ್ಲ.

**ಗರ್ಭವಾಸೋ ಹಿ ದುಃಖಾಯ ನ ಸುಖಾಯ ಕದಾಚನ ।**
**ತತ್ತೀರ್ಥವಾರಿಣಾ ಸ್ನಾತುರ್ನ ಪುನರ್ಭವಸಂಭವಃ ॥ ೫ ॥**

**ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ**
**ಪಂಚಮೇ ಆವಂತ್ಯಖಂಡೇ ತೃತೀಯೇ ರೇವಾಖಂಡೇ**
**"ಸಿದ್ಧೇಶ್ವರತೀರ್ಥಮಾಹಾತ್ಮ್ಯವರ್ಣನಂ" ನಾಮ**
**ಸಪ್ತಚತ್ವಾರಿಂಶದಧಿಕಶತತಮೋಽಧ್ಯಾಯಃ**

---

೫. ಗರ್ಭವಾಸವೆಂದಿಗಾದರೂ ದುಃಖಾನುಭವಕ್ಕಾಗಿಯೇ ಹೊರತು ಸುಖಕ್ಕಾಗಿಯಲ್ಲ. ಆ ತೀರ್ಥದ ನೀರಿನಲ್ಲಿ ಮಿಂದವನಿಗೆ ಮತ್ತೆ ಗರ್ಭವಾಸದ ಸಂಭವವಿಲ್ಲ.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ
ಶ್ರೀ ಸ್ಕಾಂದಮಹಾಪುರಾಣದ ಐದನೆಯ ಆವಂತ್ಯಖಂಡದ ಮೂರನೆಯ ರೇವಾಖಂಡದಲ್ಲಿ
"ಸಿದ್ಧೇಶ್ವರತೀರ್ಥಮಾಹಾತ್ಮ್ಯವರ್ಣನ"ವೆಂಬ
ನೂರನಲವತ್ತೇಳನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

# ಅಥಾಷ್ಟಚತ್ವಾರಿಂಶದಧಿಕಶತತಮೋಽಧ್ಯಾಯಃ

## ಮಂಗಲೇಶ್ವರತೀರ್ಥಮಾಹಾತ್ಮ್ಯವರ್ಣನಂ

**ಶ್ರೀ ಮಾರ್ಕಂಡೇಯ ಉವಾಚ :—**

**ತತೋ ಗಚ್ಛೇನ್ಮಹೀಪಾಲ ತೀರ್ಥಮಂಗಾರಕಂ ಶಿವಂ ।**
**ಉತ್ತರೇ ನರ್ಮದಾಕೂಲೇ ಸರ್ವಪಾಪಕ್ಷಯಂಕರಂ ॥ ೧ ॥**
**ಚತುರ್ಥ್ಯಂಗಾರಕದಿನೇ ಸಂಕಲ್ಪ್ಯ ಕೃತನಿಶ್ಚಯಃ ।**
**ಸ್ನಾಯಾದಸ್ತಂಗತೇ ಸೂರ್ಯೇ ಸಂಧ್ಯೋಪಾಸನತತ್ಪರಃ ॥ ೨ ॥**
**ಪೂಜಯೇಲ್ಲೋಹಿತಂ ಭಕ್ತ್ಯಾ ಗಂಧಮಾಲ್ಯವಿಭೂಷಣೈಃ ।**
**ಸಂಸ್ಥಾಪ್ಯ ಸ್ಥಂಡಿಲೇ ದೇವಂ ರಕ್ತಚಂದನಚರ್ಚಿತಂ ॥ ೩ ॥**
**ಅಂಗಾರಕಾಯೇತಿ ನಮಃ ಕರ್ಣಿಕಾಯಾಂ ಪ್ರಪೂಜಯೇತ್ ।**
**ಕುಜಾಯ ಭೂಮಿಪುತ್ರಾಯ ರಕ್ತಾಂಗಾಯ ಸುವಾಸಸೇ ॥ ೪ ॥**
**ಹರಕೋಪೋದ್ಭವಾಯೇತಿ ಸ್ವೇದಜಾಯಾಽತಿಬಾಹವೇ ।**
**ಸರ್ವಕಾಮಪ್ರದಾಯೇತಿ ಪೂರ್ವಾದಿಷು ದಲೇಷು ಚ ॥ ೫ ॥**

---

### ಕನ್ನಡದ ಅನುವಾದ

#### ಮಂಗಲೇಶ್ವರತೀರ್ಥಮಾಹಾತ್ಮ್ಯವರ್ಣನ

೧. ಮಾರ್ಕಂಡೇಯನು ಹೇಳುತ್ತಾನೆ:—ಮಹಾರಾಜನೆ! ಅಲ್ಲಿಂದ ಸುಖಪ್ರದವಾದ ಅಂಗಾರಕತೀರ್ಥಕ್ಕೆ ಹೋಗಬೇಕು. ಸರ್ವ ಪಾಪಗಳನ್ನೂ ನಾಶಗೊಳಿಸುವ ಈ ತೀರ್ಥವು ನರ್ಮದಾನದಿಯ ಉತ್ತರ ತೀರದಲ್ಲಿರುವುದು.

೨. ಮಂಗಳವಾರದ ದಿನ ಚತುರ್ಥೀತಿಥಿಯು ಬರಲು ದೃಢನಿಶ್ಚಯದಿಂದ ಸಂಕಲ್ಪವನ್ನು ಮಾಡಿ ಸೂರ್ಯನು ಮುಳುಗುವ ಕಾಲದಲ್ಲಿ ಸ್ನಾನವನ್ನು ಮಾಡಿ ಸಂಧ್ಯೋಪಾಸನೆಯನ್ನು ನೆರವೇರಿಸಬೇಕು.

೩. ಬಳಿಕ ಸ್ಥಂಡಿಲೋಲ್ಲೇಖನವನ್ನು ಮಾಡಿ ಅದರಲ್ಲಿ ಕೆಂಪು ಚಂದನ ಲೇಪಿತವಾದ ಅಂಗಾರಕವಿಗ್ರಹವನ್ನು ಸ್ಥಾಪಿಸಿ ಅದನ್ನು ಭಕ್ತಿಯಿಂದ ಗಂಧ ಪುಷ್ಪಾಭರಣಗಳಿಂದ ಪೂಜಿಸಬೇಕು.

೪–೫. 'ಓಂಕಾರಾಯ ನಮಃ' ಎಂದು ಮಧ್ಯದ ಕರ್ಣಿಕೆಯಲ್ಲಿ ಪೂಜಿಸಬೇಕು. ಬಳಿಕ 'ಕುಜ, ಭೂಮಿಪುತ್ರ, ರಕ್ತಾಂಗ, ಸುವಾಸ, ಹರಕೋಪೋದ್ಭವ, ಸ್ವೇದಜ, ಅತಿಬಾಹು, ಸರ್ವಕಾಮಪ್ರದ'ವೆಂಬ ಹೆಸರುಗಳಿಂದ ಪೂರ್ವವೇ ಮೊದಲಾಗಿ ಪ್ರದಕ್ಷಿಣಾಕಾರದಿಂದ ಎಂಟು ದಿಕ್ಕುಗಳಲ್ಲಿಯೂ ಪೂಜಿಸಬೇಕು.

ಏವಂ ಸಂಪೂಜ್ಯ ವಿಧಿವದ್ದದ್ಯಾದರ್ಘ್ಯಂ ವಿಧಾನತಃ ।
ಭೂಮಿಪುತ್ರ ಮಹಾವೀರ್ಯ ಸ್ವೇದೋದ್ಭವ ಪಿನಾಕಿನಃ ॥ ೬ ॥
ಅಂಗಾರಕ ಮಹಾತೇಜಾ ಲೋಹಿತಾಂಗ ನಮೋಽಸ್ತುತೇ ।
ಕರಕಂ ವಾರಿಸಂಯುಕ್ತಂ ಶಾಲಿತಂದುಲಪೂರಿತಂ ॥ ೭ ॥
ಸಹಿರಣ್ಯಂ ಸವಸ್ತ್ರಂ ಚ ಮೋದಕೋಪರಿಸಂಸ್ಥಿತಂ ।
ಬ್ರಾಹ್ಮಣಾಯ ನಿವೇದ್ಯಂ ತತ್ಕುಜೋ ಮೇ ಪ್ರೀಯತಾಮಿತಿ ॥ ೮ ॥
ಅರ್ಘ್ಯಂ ದತ್ವಾ ವಿಧಾನೇನ ರಕ್ತಚಂದನವಾರಿಣಾ ।
ರಕ್ತಪುಷ್ಪಸಮಾಕೀರ್ಣಂ ತಿಲತಂದುಲಮಿಶ್ರಿತಂ ॥ ೯ ॥
ಕೃತ್ವಾ ತಾಮ್ರಮಯೇ ಪಾತ್ರೇ ಮಂಡಲೇ ವರ್ತುಲೇ ಶುಭೇ ।
ಕೃತ್ವಾ ಶಿರಸಿ ತತ್ಪಾತ್ರಂ ಜಾನುಭ್ಯಾಂ ಧರಣೀಂ ಗತಃ ॥ ೧೦ ॥
ಮಂತ್ರಪೂತಂ ಮಹಾಭಾಗ ದದ್ಯಾದರ್ಘ್ಯಂ ವಿಚಕ್ಷಣಃ ।
ತತೋ ಭುಂಜೀತ ಮೌನೇನ ಕ್ಷಾರತಿಲಾಮ್ಲವರ್ಜಿತಂ ॥ ೧೧ ॥
ಸ್ನಿಗ್ಧಂ ಮೃದುಸಮಧುರಮಾತ್ಮನಃ ಶ್ರೇಯ ಇಚ್ಛತಾ ।
ಏವಂ ಚತುರ್ಥೇ ಸಂಪ್ರಾಪ್ತೇ ಚತುರ್ಥ್ಯಂಗಾರಕೇ ನೃಪ ॥ ೧೨ ॥

---

೬–೮. ಇಂತು ವಿಧಿವಿಹಿತವಾದ ಪೂಜೆಯನ್ನು ಮಾಡಿ ಮುಂದಿನ ಮಂತ್ರದಿಂದ ಅರ್ಘ್ಯವನ್ನು ಕೊಡಬೇಕು. "ಭೂಮಿ ಪುತ್ರನೆ! ಮಹಾ ಪರಾಕ್ರಮಿಯೆ! ಪರಮಶಿವನ ಸ್ವೇದದಿಂದುದ್ಭವಿಸಿದವನೆ! ಅಂಗಾರಕನೆ! ಮಹಾ ತೇಜಸ್ವಿಯೆ! ರಕ್ತಾಂಗನೆ! ನಿನಗೆ ನಮಸ್ಕರಿಸುವೆನು." ಬಳಿಕ ಜಲಭರಿತವಾದ ಕಳಶವನ್ನು ಭತ್ತ, ಅಕ್ಕಿಗಳಿಂದ ತುಂಬಿ ಹಿರಣ್ಯವಸ್ತ್ರಾದಿಗಳೊಡನೆ ಮೋದಕಗಳ ಮೇಲಿಟ್ಟು "ಕುಜನು ನನ್ನಲ್ಲಿ ಪ್ರೀತನಾಗಲಿ" ಎಂದು ಎಲ್ಲವನ್ನೂ ಬ್ರಾಹ್ಮಣೋತ್ತಮನಿಗೆ ದಾನಮಾಡಬೇಕು.

೯. ಕೆಂಪು ಹೂವುಗಳಿಂದಲೂ ತಿಲತಂಡುಲಗಳಿಂದಲೂ ಕೂಡಿದ ರಕ್ತ ಚಂದನೋದಕದಿಂದ ಯಥಾವಿಧಿಯಾಗಿ ಅರ್ಘ್ಯವನ್ನು ಕೊಡಬೇಕು.

೧೦. ಬಳಿಕ ಒಂದು ತಾಮ್ರದ ಪಾತ್ರೆಯಲ್ಲಿ ಗುಂಡಾಗಿ ಪವಿತ್ರಗಳಾದ ಎರಡು ಮಂಡಲಗಳನ್ನು ಬರೆದು, ಅದನ್ನು ತಲೆಯಮೇಲಿಟ್ಟುಕೊಂಡು ಮೊಣಕಾಲನ್ನು ನೆಲದಮೇಲಿಟ್ಟು ಕುಳಿತುಕೊಳ್ಳಬೇಕು.

೧೧. ಮಹಾರಾಜನೆ! ವಿಚಕ್ಷಣನಾದವನು ಮಂತ್ರಸಹಿತವಾಗಿಯೇ ಅರ್ಘ್ಯವನ್ನು ಕೊಡಬೇಕು. ಬಳಿಕ ಮೌನವನ್ನು ಧರಿಸಿ ಉಪ್ಪು ಹುಳಿಗಳಿಲ್ಲದ ತಿಲರಹಿತವಾದ ಭೋಜನವನ್ನು ಮಾಡಬೇಕು.

೧೨–೧೩. ಶ್ರೇಯಸ್ಸನ್ನು ಅಪೇಕ್ಷಿಸುವವನು ಸ್ನೇಹಯುಕ್ತವೂ ಮೃದು ಮಧುರವೂ ಆದ ಭೋಜನವನ್ನು ಮಾಡಬೇಕು. ಮಹಾರಾಜನೆ! ಹೇಗೆ

ಸೌವರ್ಣಂ ಕಾರಯೇದ್ದೇವಂ ಯಥಾಶಕ್ತಿ ಸುರೂಪಿಣಂ ।
ಸ್ಥಾಪಯೇತ್ತಾಮ್ರಕೇ ಪಾತ್ರೇ ಗುಡಪೀಠಸಮನ್ವಿತೇ ॥ ೧೩ ॥
ಗಂಧಪುಷ್ಪಾದಿಭಿರ್ದೇವಂ ಪೂಜಯೇದ್ಗುಡಸಂಸ್ಥಿತಂ ।
ಈಶಾನ್ಯಾಂ ಸ್ಥಾಪಯೇದ್ದೇವಂ ಗುಡತೋಯಸಮನ್ವಿತಂ ॥ ೧೪ ॥
ಕಾಸಾರೇಣ ತಥಾಗ್ನೇಯ್ಯಾಂ ಸ್ಥಾಪಯೇತ್ಕರಕಂ ಪರಂ ।
ರಕ್ತತಂದುಲಸಂಮಿಶ್ರಂ ನೈರ್ಋತ್ಯಾಂ ವಾಯುಗೋಚರೇ ॥ ೧೫ ॥
ಸ್ಥಾಪಯೇನ್ಮೋದಕೈಃ ಸಾರ್ಧಂ ಚತುರ್ಥಂ ಕರಕಂ ಬುಧಃ ।
ಸೂತ್ರೇಣ ವೇಷ್ಟಿತಗ್ರೀವಂ ಗಂಧಮಾಲ್ಯೈರಲಂಕೃತಂ ॥ ೧೬ ॥
ಶಂಖತೂರ್ಯನಿನಾದೇನ ಜಯಶಬ್ದಾದಿಮಂಗಲೈಃ ।
ರಕ್ತಾಂಬರಧರಂ ವಿಪ್ರಂ ರಕ್ತಮಾಲ್ಯಾನುಲೇಪನಂ ॥ ೧೭ ॥
ವೇದಿಮಧ್ಯಗತಂ ವಾಽಪಿ ಮಹದಾಸನಸಂಸ್ಥಿತಂ ।
ಸುರೂಪಂ ಸುಭಗಂ ಶಾಂತಂ ಸರ್ವಭೂತಹಿತೇ ರತಂ ॥ ೧೮ ॥
ವೇದವಿದ್ಯಾವ್ರತಸ್ನಾತಂ ಸರ್ವಶಾಸ್ತ್ರವಿಶಾರದಂ ।
ಪೂಜಯಿತ್ವಾ ಯಥಾನ್ಯಾಯಂ ವಾಚಯೇತ್ಪಾಂಡುನಂದನ ॥ ೧೯ ॥

---

ನಾಲ್ಕನೆಯ ಚತುರ್ಥ್ಯಂಗಾರಕದಿವಸವು ಪ್ರಾಪ್ತವಾಗಲು ಯಥಾಶಕ್ತಿ ಚಿನ್ನದಿಂದ ಸುಂದರವಾದ ಅಂಗಾರಕ ವಿಗ್ರಹವನ್ನು ಮಾಡಿಸಬೇಕು. ಅದನ್ನು ಗುಡಪೀಠದ ಮೇಲೆ ಒಂದು ತಾಮ್ರದ ಪಾತ್ರೆಯಲ್ಲಿ ಸ್ಥಾಪಿಸಬೇಕು.

೧೪. ಗುಡಾಸನಾಸೀನನಾದ ಆ ದೇವವನನ್ನು ಗಂಧ ಪುಷ್ಪಾದಿಗಳಿಂದ ಪೂಜಿಸಬೇಕು. ಬಳಿಕ ಈಶಾನ್ಯದ ಮೂಲೆಯಲ್ಲಿ ಗುಡೋದಕಭರಿತವಾದ ಮತ್ತೊಂದು ಕಳಶವನ್ನಿಡಬೇಕು.

೧೫-೧೬. ಆಗ್ನೇಯ ಕೋಣದಲ್ಲಿ ಶುದ್ಧೋದಕದಿಂದ ತುಂಬಿದ ಕಳಶವನ್ನು ಸ್ಥಾಪಿಸಬೇಕು. ನೈರ್ಋತ್ಯದಲ್ಲಿ ರಕ್ತಾಕ್ಷತೆಗಳಿಂದ ಕೂಡಿದ ಕಳಶವನ್ನೂ, ವಾಯವ್ಯದಲ್ಲಿ ಮೋದಕಭರಿತವಾದ ನಾಲ್ಕನೆಯ ಕಳಶವನ್ನೂ ಸ್ಥಾಪಿಸಬೇಕು. ಇವುಗಳ ಕಂಠಗಳಿಗೆ ಸೂತ್ರವನ್ನು ಸುತ್ತಿ ಗಂಧಮಾಲ್ಯಾದಿಗಳಿಂದಲಂಕರಿಸಬೇಕು.

೧೭-೧೯. ಎಲೈ ಪಾಂಡವಶ್ರೇಷ್ಠನೆ! ಶಂಖತೂರ್ಯಗಳು ಭೋರ್ಗರೆಯುತ್ತಿರಲು ಜಯಶಬ್ದಗಳಿಂದಲೂ ಮಂಗಳವಾದ್ಯಗಳಿಂದಲೂ ಕೂಡಿ ಕೆಂಪುವಸ್ತ್ರವನ್ನುಟ್ಟವನೂ, ಕೆಂಪು ಹೂಮಾಲೆಗಳನ್ನೂ, ಅನುಲೇಪನಗಳನ್ನೂ ತಾಳಿದವನೂ, ವೇದಿಯ ಮಧ್ಯದಲ್ಲಿ ಉನ್ನತಾಸನದಲ್ಲಿ ಕುಳಿತಿರುವವನೂ, ಸುಂದರನೂ, ಸೌಭಾಗ್ಯಶಾಲಿಯೂ, ಶಾಂತನೂ, ಸರ್ವಭೂತಹಿತಂಕರನೂ, ವೇದವಿದ್ಯೆಯನ್ನು ಮುಗಿಸಿ ಸ್ನಾತನಾದವನೂ, ಸಕಲಶಾಸ್ತ್ರಗಳಲ್ಲಿ ನಿಷ್ಣಾತನೂ ಆದ

**ರಕ್ತಾಂ ಗಾಂ ಚ ತತೋ ದದ್ಯಾದ್ರಕ್ತೇನಾನಡುಹಾ ಸಹ ।**
**ಪ್ರೀಯತಾಂ ಭೂಮಿಜೋ ದೇವಃ ಸರ್ವದೈವತಪೂಜಿತಃ ॥ ೨೦ ॥**
**ವಿಪ್ರಂ ಪ್ರದಕ್ಷಿಣೀಕೃತ್ಯ ಪತ್ನೀಪುತ್ರಸಮನ್ವಿತಃ ।**
**ಪಿತೃಮಾತೃಸುಹೃತ್ಸಾರ್ಧಂ ಕ್ಷಮಾಪ್ಯ ಚ ವಿಸರ್ಜಯೇತ್ ॥ ೨೧ ॥**
**ಏವಂ ಕೃತಸ್ಯ ತಸ್ಯಾಽಥ ತಸ್ಮಿಂಸ್ತೀರ್ಥೇ ವಿಶೇಷತಃ ।**
**ಯತ್ಪುಣ್ಯಫಲಮುದ್ದಿಷ್ಟಂ ತತ್ತೇ ಸರ್ವಂ ವದಾಮ್ಯಹಂ ॥ ೨೨ ॥**
**ಸಪ್ತ ಜನ್ಮಾನಿ ರಾಜೇಂದ್ರ ಸುರೂಪಃ ಸುಭಗೋ ಭವೇತ್ ।**
**ತೀರ್ಥಸ್ಯಾಽಸ್ಯ ಪ್ರಭಾವೇಣ ನಾಽತ್ರ ಕಾರ್ಯಾ ವಿಚಾರಣಾ ॥ ೨೩ ॥**
**ಅಕಾಮೋ ವಾ ಸಕಾಮೋ ವಾ ತತ್ರ ತೀರ್ಥೇ ಮೃತೋ ನರಃ ।**
**ಅಂಗಾರಕಪುರಂ ಯಾತಿ ದೇವಗಂಧರ್ವಪೂಜಿತಃ ॥ ೨೪ ॥**
**ಉಪಭುಜ್ಯ ಯಥಾ ನ್ಯಾಯಂ ದಿವ್ಯಾನ್ಭೋಗಾನನುತ್ತಮಾನ್ ।**
**ಇಹ ಮಾನುಷ್ಯಲೋಕೇ ವೈ ರಾಜಾ ಭವತಿ ಧಾರ್ಮಿಕಃ ॥ ೨೫ ॥**

---

ಬ್ರಾಹ್ಮಣೋತ್ತಮನನ್ನು ಯಥಾನ್ಯಾಯವಾಗಿ ಪೂಜಿಸಿ ಆತನಿಂದ ಸ್ವಸ್ತಿವಾಕ್ಯಗಳನ್ನು ಹೇಳಿಸಬೇಕು.

೨೦. ಬಳಿಕ "ಭೂಮಿಜಾತನೂ, ಸಕಲದೇವತೆಗಳಿಂದ ನಮಸ್ಕೃತನೂ ಆದ ದೇವನು ಸುಪ್ರೀತನಾಗಲಿ" ಎಂದು ಧ್ಯಾನಿಸಿ ಕೆಂಪು ಬಣ್ಣದ ಆಕಳನ್ನೂ ಎತ್ತನ್ನೂ ದಾನಮಾಡಬೇಕು.

೨೧. ಪತ್ನೀಪುತ್ರರೊಡನೆ ಆ ಬ್ರಾಹ್ಮಣನಿಗೆ ಪ್ರದಕ್ಷಿಣೆಯನ್ನು ಮಾಡಿ ತಂದೆ ತಾಯಿ ಸ್ನೇಹಿತರೊಡನೆ ಅವನನ್ನು ನಮಸ್ಕರಿಸಿ ಕ್ಷಮೆಯನ್ನು ಕೇಳಿಕೊಂಡು ಬೀಳ್ಕೊಡಬೇಕು.

೨೨. ಇಂತು ಮಾಡಿದ, ವಿಶೇಷವಾಗಿ ಆ ತೀರ್ಥದಲ್ಲಿ ನೆರವೇರಿಸಿದ ಕರ್ಮಕ್ಕೆ ಯಾವ ಫಲವು ಲಭಿಸುವುದೆಂಬುದನ್ನು ನಿನಗೆ ಹೇಳುವೆನು.

೨೩. ರಾಜೇಂದ್ರನೆ! ಈ ತೀರ್ಥದ ಸೇವನೆಯ ಪ್ರಭಾವದಿಂದ ನರನು ಏಳು ಜನ್ಮಗಳವರೆಗೂ ಸುರೂಪನೂ ಐಶ್ವರ್ಯವಂತನೂ ಆಗಿ ಬಾಳುತ್ತಿರುವನು. ಇದರಲ್ಲಿ ಸಂದೇಹವಿಲ್ಲ.

೨೪. ಬುದ್ಧಿಪೂರ್ವಕವಾಗಿಯಾಗಲಿ, ಅಕಸ್ಮಾತ್ತಾಗಿಯಾಗಲಿ ಈ ತೀರ್ಥದಲ್ಲಿ ಮೃತನಾದ ನರನು ದೇವಗಂಧರ್ವರಿಂದ ಪೂಜೆಯನ್ನು ಕೈಕೊಂಡು ಕುಜಲೋಕಕ್ಕೆ ಹೋಗುವನು.

೨೫. ತಮ್ಮ ಕರ್ಮಕ್ಕೆ ಉಚಿತಗಳಾದ ಸರ್ವೋತ್ಕೃಷ್ಟಗಳಾದ ದಿವ್ಯಭೋಗಗಳನ್ನನುಭವಿಸಿ ಈ ಮನುಷ್ಯಲೋಕದಲ್ಲಿ ಧರ್ಮತತ್ಪರನಾದ ಮಹಾರಾಜನಾಗಿ ಜನಿಸುವನು.

**ಸುರೂಪಃ ಸುಭಗಶ್ಚೈವ ಸರ್ವವ್ಯಾಧಿವಿವರ್ಜಿತಃ ।**
**ಜೀವೇದ್ವರ್ಷಶತಂ ಸಾಗ್ರಂ ಸರ್ವಲೋಕನಮಸ್ಕೃತಃ ॥ ೨೬ ॥**

**ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ**
**ಪಂಚಮೇ ಆವಂತ್ಯಖಂಡೇ ತೃತೀಯೇ ರೇವಾಖಂಡೇ**
**"ಮಂಗಲೇಶ್ವರತೀರ್ಥಮಾಹಾತ್ಮ್ಯವರ್ಣನಂ"**
**ನಾಮಾಷ್ಟಚತ್ವಾರಿಂಶದಧಿಕಶತತಮೋಽಧ್ಯಾಯಃ**

---

೨೬. ಸುಂದರರೂಪನೂ, ಸೌಭಾಗ್ಯವಂತನೂ, ಸಕಲವ್ಯಾಧಿರಹಿತನೂ ಆಗಿ ಸಕಲಮಾನವರಿಂದ ಪೂಜೆಯನ್ನು ಮಾಡಿಸಿಕೊಳ್ಳುತ್ತ ನೂರು ವರ್ಷಗಳ ಪುಣ್ಯಾಯುಷ್ಯವಂತನಾಗಿರುವನು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ
ಶ್ರೀ ಸ್ಕಾಂದಮಹಾಪುರಾಣದ ಐದನೆಯ ಆವಂತ್ಯಖಂಡದ ಮೂರನೆಯ ರೇವಾಖಂಡದಲ್ಲಿ
"ಮಂಗಲೇಶ್ವರತೀರ್ಥಮಾಹಾತ್ಮ್ಯವರ್ಣನ"ವೆಂಬ
ನೂರನಲವತ್ತೆಂಟನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

## ಅಥೈಕೋನಪಂಚಾಶದಧಿಕಶತತಮೋಽಧ್ಯಾಯಃ

### ಲಿಂಗವಾರಾಹತೀರ್ಥಮಾಹಾತ್ಮ್ಯವರ್ಣನಂ

ಶ್ರೀ ಮಾರ್ಕಂಡೇಯ ಉವಾಚ :—

ತಸ್ಯೈವಾನಂತರಂ ತೀರ್ಥಂ ಲಿಂಗೇಶ್ವರಮಿತಿಶ್ರುತಂ ।
ದರ್ಶನಾದ್ದೇವದೇವಸ್ಯ ಯತ್ರಪಾಪಂ ಪ್ರಣಶ್ಯತಿ ॥ ೧ ॥
ಕೃತ್ವಾ ತು ಕದನಂ ಘೋರಂ ದಾನವಾನಾಂ ಯುಧಿಷ್ಠಿರ ।
ವಾರಾಹಂ ರೂಪಮಾಸ್ಥಾಯ ನರ್ಮದಾಯಾಂ ವ್ಯವಸ್ಥಿತಃ ॥ ೨ ॥
ತತ್ರ ತೀರ್ಥೇ ತು ಯಃ ಸ್ನಾನಂ ಕೃತ್ವಾ ದೇವಂ ನಮಸ್ಯತಿ ।
ಸ ಮುಚ್ಯತೇ ನೃಪಶ್ರೇಷ್ಠ ಮಹಾಪಾಪೈಃ ಪುರಾಕೃತೈಃ ॥ ೩ ॥
ದ್ವಾದಶ್ಯಾಂ ಕೃಷ್ಣಪಕ್ಷಸ್ಯ ಶುಕ್ಲೇ ಚ ಸಮುಪೋಷಿತಃ ।
ಗಂಧಮಾಲ್ಯೈರ್ಜಗನ್ನಾಥಂ ಪೂಜಯೇತ್ಪಾಂಡುನಂದನ ॥ ೪ ॥

---

### ಕನ್ನಡದ ಅನುವಾದ

#### ಲಿಂಗವಾರಾಹತೀರ್ಥಮಾಹಾತ್ಮ್ಯವರ್ಣನ

೧. ಮಾರ್ಕಂಡೇಯನು ಹೇಳುತ್ತಾನೆ:—ಆ ಬಳಿಕ ಲಿಂಗೇಶ್ವರವೆಂದು ಪ್ರಖ್ಯಾತವಾದ ತೀರ್ಥವಿರುವುದು. ಅಲ್ಲಿರುವ ಮಹಾದೇವನನ್ನು ನೋಡಲು ಪಾಪಪರಿಹಾಗುವುದು.

೨. ಯುಧಿಷ್ಠಿರನೆ! ಹಿಂದೆ ಮಹಾವಿಷ್ಣುವು ದಾನವರೊಡನೆ ವರಾಹ ರೂಪವನ್ನು ತಾಳಿ ಭಯಂಕರವಾದ ಯುದ್ಧವನ್ನು ಮಾಡಿ ನರ್ಮದಾತೀರದಲ್ಲಿ ನೆಲಸಿದನು.

೩. ನೃಪಶ್ರೇಷ್ಠನೆ! ಆ ತೀರ್ಥದಲ್ಲಿ ಸ್ನಾನವನ್ನು ಮಾಡಿ ದೇವದೇವನಿಗೆ ನಮಸ್ಕರಿಸಿದವನು ಹಿಂದೆ ಮಾಡಿದ ಮಹಾಪಾತಕಗಳಿಂದಲು ಸಹ ಮುಕ್ತನಾಗುವನು.

೪. ಪಾಂಡವಶ್ರೇಷ್ಠನೆ! ಪ್ರತಿಮಾಸದ ಶುಕ್ಲ ಕೃಷ್ಣಪಕ್ಷಗಳ ದ್ವಾದಶಿಯ ದಿನಗಳಲ್ಲಿ ಉಪವಾಸವನ್ನು ಮಾಡಿ ಗಂಧಮಾಲ್ಯಾದಿಗಳಿಂದ ಲೋಕೇಶ್ವರನನ್ನು ಪೂಜಿಸಬೇಕು.

ಬ್ರಾಹ್ಮಣಾಂಶ್ಚ ಮಹಾಭಾಗ ದಾನಸಂಮಾನಭೋಜನೈಃ ।
ಪೂಜಯೇತ್ಪರಯಾ ಭಕ್ತ್ಯಾ ತಸ್ಯ ಪುಣ್ಯಫಲಂ ಶೃಣು ॥ ೫ ॥
ಸತ್ರಯಾಜಿಫಲಂ ಜಂತುರ್ಲಭತೇ ದ್ವಾದಶಾಬ್ದಕೈಃ ।
ಬ್ರಾಹ್ಮಣಾನ್ಭೋಜಯಂಸ್ತತ್ರ ತದೇವ ಲಭತೇ ಫಲಂ ॥ ೬ ॥
ತರ್ಪಯಿತ್ವಾ ಪಿತೄನ್ದೇವಾನ್ ಸ್ನಾತ್ವಾ ತದ್ಗತಮಾನಸಃ ।
ಜಪೇದ್ದ್ವಾದಶನಾಮಾನಿ ದೇವಸ್ಯ ಪುರತಃ ಸ್ಥಿತಃ ॥ ೭ ॥
ಮಾಸಿ ಮಾಸಿ ನಿರಾಹಾರೋ ದ್ವಾದಶ್ಯಾಂ ಕುರುನಂದನ ।
ಕೇಶವಂ ಪೂಜಯೇನ್ನಿತ್ಯಂ ಮಾಸಿ ಮಾರ್ಗಶಿರೇ ಬುಧಃ ॥ ೮ ॥
ಪೌಷೇ ನಾರಾಯಣಂ ದೇವಂ ಮಾಘಮಾಸೇ ತು ಮಾಧವಂ ।
ಗೋವಿಂದಂ ಫಾಲ್ಗುನೇ ಮಾಸಿ ವಿಷ್ಣುಂ ಚೈತ್ರೇ ಸಮರ್ಚಯೇತ್ ॥ ೯ ॥
ವೈಶಾಖೇ ಮಧುಹಂತಾರಂ ಜ್ಯೇಷ್ಠೇ ದೇವಂ ತ್ರಿವಿಕ್ರಮಂ ।
ವಾಮನಂ ತು ತಥಾಷಾಢೇ ಶ್ರಾವಣೇ ಶ್ರೀಧರಂ ಸ್ಮರೇತ್ ॥ ೧೦ ॥
ಹೃಷೀಕೇಶಂ ಭಾದ್ರಪದೇ ಪದ್ಮನಾಭಂ ತಥಾಶ್ವಿನೇ ।
ದಾಮೋದರಂ ಕಾರ್ತಿಕೇ ತು ಕೀರ್ತಯನ್ನಾವಸೀದತಿ ॥ ೧೧ ॥

---

೫. ಬಳಿಕ ಪರಮ ಭಕ್ತಿಯಿಂದ ಬ್ರಾಹ್ಮಣರನ್ನು ಸತ್ಕರಿಸಿ ದಾನಗಳಿಂದಲೂ, ಮರ್ಯಾದೆಗಳಿಂದಲೂ, ಭೋಜನಗಳಿಂದಲೂ ಅವರನ್ನು ತೃಪ್ತಿಪಡಿಸುವವನ ಪುಣ್ಯಫಲವನ್ನು ಕೇಳು.

೬–೭. ಹನ್ನೆರಡು ವರ್ಷಗಳ ದೀರ್ಘಸತ್ರವನ್ನು ಮಾಡಿದವರಿಗೆ ಯಾವ ಫಲವುಂಟೊ, ಅದನ್ನೇ ಇಲ್ಲಿ ಒಮ್ಮೆ ಬ್ರಾಹ್ಮಣಭೋಜನದಿಂದ ಪಡೆಯುವನು. ತದೇಕಚಿತ್ತದಿಂದ ಸ್ನಾನವನ್ನಾಚರಿಸಿ ಪಿತೃಗಳಿಗೂ ದೇವತೆಗಳಿಗೂ ತರ್ಪಣಗಳನ್ನಿತ್ತು ನಾರಾಯಣನ ಮುಂದೆ ನಿಂತು ದ್ವಾದಶನಾಮಗಳನ್ನು ಜಪಿಸಬೇಕು.

೮. ಕೌರವಶ್ರೇಷ್ಠನೆ! ಹೀಗೆ ಪ್ರತಿಯೊಂದು ತಿಂಗಳಿನಲ್ಲಿಯೂ ದ್ವಾದಶಿಯ ಉಪವಾಸವನ್ನು ಮಾಡಬೇಕು. ಪಂಡಿತನಾದವನು ಮಾರ್ಗಶಿರಮಾಸದಲ್ಲಿ ನಿತ್ಯವೂ ಕೇಶವನನ್ನರ್ಚಿಸಬೇಕು.

೯. ಪುಷ್ಯಮಾಸದಲ್ಲಿ ನಾರಾಯಣನನ್ನೂ, ಮಾಘದಲ್ಲಿ ಮಾಧವನನ್ನೂ, ಫಾಲ್ಗುನದಲ್ಲಿ ಗೋವಿಂದನನ್ನೂ, ಚೈತ್ರಮಾಸದಲ್ಲಿ ಮಹಾವಿಷ್ಣುವನ್ನೂ ಪೂಜಿಸಬೇಕು.

೧೦. ವೈಶಾಖದಲ್ಲಿ ಮಧುಸೂದನನನ್ನೂ, ಜ್ಯೇಷ್ಠಮಾಸದಲ್ಲಿ ತ್ರಿವಿಕ್ರಮನನ್ನೂ, ಆಷಾಢದಲ್ಲಿ ವಾಮನನನ್ನೂ, ಶ್ರಾವಣದಲ್ಲಿ ಶ್ರೀಧರನನ್ನೂ ಸ್ಮರಿಸಬೇಕು.

೧೧. ಭಾದ್ರಪದದಲ್ಲಿ ಹೃಷೀಕೇಶನನ್ನೂ, ಆಶ್ವಯುಜದಲ್ಲಿ ಪದ್ಮನಾಭನನ್ನೂ, ಕಾರ್ತಿಕದಲ್ಲಿ ದಾಮೋದರನನ್ನೂ ಸ್ಮರಿಸುವವನು ಕಷ್ಟಪಡುವುದಿಲ್ಲ.

ವಾಚಿಕಂ ಮಾನಸಂ ಪಾಪಂ ಕರ್ಮಜಂ ಯತ್ಪುರಾ ಕೃತಂ ।
ತನ್ನಶ್ಯತಿ ನ ಸಂದೇಹೋ ಮಾಸನಾಮಾನುಕೀರ್ತನಾತ್ ॥ ೧೨ ॥
ಸ್ವಯಂ ವಿಶುದ್ಧಃ ಸತತಮುನ್ಮಿಷನ್ನಿಮಿಷಂಸ್ತಥಾ ।
ಶೀಘ್ರಂ ಪ್ರಪಶ್ಯ ಭುಂಜಾನೋ ಮಂತ್ರಹೀನಂ ಸಮುದ್ಗಿರೇತ್ ॥ ೧೩ ॥
ಪರಮಾಪದ್ಗತಸ್ಯಾಽಪಿ ಜಂತೋರೇಷಾ ಪ್ರತಿಕ್ರಿಯಾ ।
ಯನ್ಮಾಸಾಧಿಪತೇರ್ವಿಷ್ಣೋರ್ಮಾಸನಾಮಾನುಕೀರ್ತನಂ ॥ ೧೪ ॥
ತಾ ನಿಶಾಸ್ತೇ ಚ ದಿವಸಾಸ್ತೇ ಮಾಸಾಸ್ತೇ ಚ ವತ್ಸರಾಃ ।
ನರಾಣಾಂ ಸಫಲಾ ಯೇಷು ಚಿಂತಿತೋ ಭಗವಾನ್ ಹರಿಃ ॥ ೧೫ ॥
ಪರಮಾಪದ್ಗತಸ್ಯಾಽಪಿ ಯಸ್ಯ ದೇವೋ ಜನಾರ್ದನಃ ।
ನಾಽಪಸರ್ಪತಿ ಹೃತ್ಪದ್ಮಾತ್ಸ ಯೋಗೀ ನಾಽತ್ರ ಸಂಶಯಃ ॥ ೧೬ ॥
ತೇ ಭಾಗ್ಯಹೀನಾ ಮನುಜಾಃ ಸುಶೋಚ್ಯಾ
ಸ್ತೇ ಭೂಮಿಭಾರಾಯ ಕೃತಾಽವತಾರಾಃ ।
ಅಚೇತನಾಸ್ತೇ ಪಶುಭಿಃ ಸಮಾನಾ
ಯೇ ಭಕ್ತಿಹೀನಾ ಭಗವತ್ಯನಂತೇ ॥ ೧೭ ॥

---

೧೨. ಮಹಾವಿಷ್ಣುವಿನ ಈ ಮಾಸನಾಮಗಳನ್ನು ಜಪಿಸುವುದರಿಂದಲೇ ಹಿಂದೆ ವಾಙ್ಮನಃಕಾಯಗಳಿಂದ ಮಾಡಿದ ಸಮಸ್ತ ಪಾಪಗಳೂ ನಾಶವಾಗುವುದರಲ್ಲಿ ಸಂದೇಹವಿಲ್ಲ.

೧೩. ಕಣ್ಣುಗಳನ್ನು ಮುಚ್ಚಿ ತೆಗೆಯುವಾಗಲೂ ಸ್ವತಃ ಪ್ರೇರಣೆಯಿಂದಲೇ ವಿಷ್ಣುನಾಮವನ್ನು ಜಪಿಸಬೇಕು. ಮಂತ್ರಹೀನವಾಗಿ ತಿಂದ ಅನ್ನವನ್ನು ಬೇಗ ವಮನಮಾಡಿಕೊಳ್ಳುವುದನ್ನು ನೋಡು.

೧೪. ಪರಮಾಪತ್ತಿನಲ್ಲಿರುವವನಿಗೂ ಮಾಸಾಧಿಪತಿಯಾದ ಮಹಾವಿಷ್ಣುವಿನ ಆ ಮಾಸದ ನಾಮದ ಜಪವೇ ಪರಮೋಪಾಯವಾಗಿರುವುದು.

೧೫. ಯಾವ ರಾತ್ರಿಗಳಲ್ಲಿಯೂ, ಹಗಲುಗಳಲ್ಲಿಯೂ, ತಿಂಗಳುಗಳಲ್ಲಿಯೂ, ಸಂವತ್ಸರಗಳಲ್ಲಿಯೂ ಭಗವಂತನಾದ ಶ್ರೀಹರಿಯನ್ನು ನರರು ಸ್ಮರಿಸುವರೊ, ಅವುಗಳೇ ಸಫಲಗಳು.

೧೬. ಪರಮಸಂಕಟದಲ್ಲಿದ್ದರೂ ಯಾವನ ಹೃದಯದಿಂದ ದೇವದೇವನು ಮರೆಯಾಗುವುದಿಲ್ಲವೊ, ಅವನೇ ಯೋಗಿಯು. ಇದರಲ್ಲಿ ಸಂಶಯವಿಲ್ಲ.

೧೭. ಭಗವಂತನಾದ ಅನಂತನಲ್ಲಿ ಯಾರಿಗೆ ಭಕ್ತಿಯಿಲ್ಲವೊ, ಅವರೇ ಭಾಗ್ಯಹೀನರು. ಶೋಚ್ಯರು. ಭೂಮಿಗೆ ಭಾರವಾಗಿ ಹುಟ್ಟಿರುವವರು. ಅಚೇತನರು. ಪಶುಗಳಿಗೆ ಸಮಾನರು.

ತೇ ಪೂರ್ಣಕಾಯಾ ಪುರುಷಾಃ ಪೃಥಿವ್ಯಾಂ
ತೇ ಸ್ವಾಂಗಪಾತಾದ್ಭುವನಂ ಪುನಂತಿ ।
ವಿಚಕ್ಷಣಾ ವಿಶ್ವವಿಭೂಷಣಾಸ್ತೇ
ಯೇ ಭಕ್ತಿಯುಕ್ತಾ ಭಗವತ್ಯನಂತೇ ॥ ೧೮ ॥
ಸ ಏವ ಸುಕೃತೀ ತೇನ ಲಬ್ಧಂ ಜನ್ಮತರೋಃ ಫಲಂ ।
ಚಿತ್ತೇ ವಚಸಿ ಕಾಯೇ ಚ ಯಸ್ಯ ದೇವೋ ಜನಾರ್ದನಃ ॥ ೧೯ ॥
ಏತತ್ತೀರ್ಥವರಂ ಪುಣ್ಯಂ ಲಿಂಗೋ ಯತ್ರ ಜನಾರ್ದನಃ ।
ವಂಚಯಿತ್ವಾ ರಿಪೂನ್ ಸಂಖ್ಯೇ ಕ್ರೋಡೋ ಭೂತ್ವಾ ಸನಾತನಃ ॥ ೨೦ ॥
ಉಪಪ್ಲವೇ ಚಂದ್ರಮಸೋ ರವೇಶ್ಚ
ಯೋ ಹ್ಯಷ್ಟಕಾನಾಮಯನದ್ವಯೇ ಚ ।
ಪಾನೀಯಮಪ್ಯತ್ರ ತಿಲೈರ್ವಿಮಿಶ್ರಂ
ದದ್ಯಾತ್ಪಿತೃಭ್ಯಃ ಪ್ರಯತೋ ಮನುಷ್ಯಃ ॥ ೨೧ ॥
ಘೋಣೋನ್ಮೀಲಿತ ಮೇರುರಂಧ್ರನಿವಹೋ ದುಃಖಾಬ್ಧಿಮಜ್ಜತ್ಪ್ಲವಃ
ಪ್ರಾದುರ್ಭೂತರಸಾತಲೋದರಬೃಹತ್ಪಂಕಾರ್ಧಮಗ್ನಕ್ಷುರಃ ।

---

೧೮. ಯಾರು ಷಡ್ಗುಣೈಶ್ವರ್ಯಭರಿತನಾದ ಆ ಪರಮಾತ್ಮನಲ್ಲಿ ಭಕ್ತಿಯನ್ನು ಮಾಡುವರೊ, ಆ ಪುರುಷರೇ ಪುಣ್ಯವಂತರು. ಅವರು ತಮ್ಮ ಅವತಾರದಿಂದ ಭೂಮಿಯನ್ನು ಪವಿತ್ರಗೊಳಿಸುವವರು. ಅವರೇ ಬುದ್ಧಿಶಾಲಿಗಳು. ಲೋಕಕ್ಕೆ ಅಲಂಕಾರಪ್ರಾಯರು.

೧೯. ಯಾವನ ಮನಸ್ಸಿನಲ್ಲಿಯೂ, ಮಾತಿನಲ್ಲಿಯೂ, ದೇಹದಲ್ಲಿಯೂ ಜನಾರ್ದನನೇ ವರ್ತಿಸುತ್ತಿರುವನೊ, ಅವನೇ ಸುಕೃತಿಯು. ಅವನಿಗೆ ಜನ್ಮವೃಕ್ಷದ ಫಲವು ಲಭಿಸಿರುವುದು.

೨೦. ಜನಾರ್ದನನೇ ಚಿಹ್ನವಾಗುಳ್ಳ ಈ ತೀರ್ಥೋತ್ತಮವು ಪುಣ್ಯಪ್ರದವು. ಯುದ್ಧದಲ್ಲಿ ಶತ್ರುಗಳನ್ನು ಮೋಸಗೊಳಿಸಿ ಅನಾದಿಯಾದ ದೇವನು ಕಾಡುಹಂದಿಯಾದನು.

೨೧. ಚಂದ್ರಸೂರ್ಯರ ಗ್ರಹಣಕಾಲಗಳಲ್ಲಿಯೂ, ಅಷ್ಟಕಗಳಲ್ಲಿಯೂ, ಉತ್ತರಾಯಣ ದಕ್ಷಿಣಾಯನ ಪುಣ್ಯಕಾಲಗಳಲ್ಲಿಯೂ ಇಲ್ಲಿ ತಿಲಮಿಶ್ರಿತವಾದ ಜಲದಿಂದ ಮಾನವನು ಪ್ರಯತ್ನಪೂರ್ವಕವಾಗಿ ತರ್ಪಣಗಳನ್ನು ಕೊಡಬೇಕು.

೨೨. ಮುಸುಡಿಯಿಂದ ಮೇರುವಿನಲ್ಲಿ ರಂಧ್ರಗಳನ್ನು ಮಾಡಿದುದೂ, ದುಃಖಸಾಗರದಲ್ಲಿ ಮುಳುಗಿರುವವರಿಗೆ ನಾವೆಯಂತಿರುವುದೂ, ಹೊಸದಾಗಿ ಸೃಷ್ಟಿಯಾದ ರಸಾತಲಲೋಕದ ಮಧ್ಯದ ಮಹಾಪಂಕದಲ್ಲಿ ಅರ್ಧ ಮುಳುಗಿದ

ಫೂತ್ಕಾರೋತ್ಕರನುನ್ನವಾತವಿದಲದ್ದಿಗ್ದಂತಿನಾದಶ್ರುತಿನ್ಯಸ್ತ
ಸ್ತಬ್ಧವಪುಃ ಶ್ರುತಿರ್ಭವತು ವಃ ಕ್ರೋಡೋ ಹರಿಃ ಶಾಂತಯೇ ॥ ೨೨ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ
ಪಂಚಮೇ ಆವಂತ್ಯಖಂಡೇ ತೃತೀಯೇ ರೇವಾಖಂಡೇ
"ಲಿಂಗವಾರಾಹತೀರ್ಥಮಾಹಾತ್ಮ್ಯವರ್ಣನಂ"
ನಾಮೈಕೋನಪಂಚಾಶದಧಿಕಶತತಮೋಽಧ್ಯಾಯಃ

---

ಗೊರಸುಗಳುಳ್ಳದುದೂ, ಫೂತ್ಕಾರದಿಂದ ಎಬ್ಬಿಸಲ್ಪಟ್ಟ ಬಿರುಗಾಳಿಯಿಂದ ಚೆದರಿದ ದಿಗ್ಗಜಗಳ ಘೀಂಕಾರಗಳನ್ನು ಕೇಳಲು ಕಿವಿಗಳನ್ನು ನಿಮಿರಿಸಿ ನಿಶ್ಚಲವಾಗಿ ನಿಂತಿರುವುದೂ ಆದ ಕ್ರೋಡದ ರೂಪವನ್ನು ತಾಳಿದ ಶ್ರೀಹರಿಯು ನಿಮಗೆ ಶಾಂತಿಯನ್ನುಂಟುಮಾಡಲಿ.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ
ಶ್ರೀ ಸ್ಕಾಂದಮಹಾಪುರಾಣದ ಐದನೆಯ ಆವಂತ್ಯಖಂಡದ ಮೂರನೆಯ ರೇವಾಖಂಡದಲ್ಲಿ
"ಲಿಂಗವಾರಾಹತೀರ್ಥಮಾಹಾತ್ಮ್ಯವರ್ಣನ"ವೆಂಬ
ನೂರನಲವತ್ತೊಂಬತ್ತನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

# ಅಥ ಪಂಚಾಶದಧಿಕಶತತಮೋಽಧ್ಯಾಯಃ

## ಕುಸುಮೇಶ್ವರತೀರ್ಥಮಾಹಾತ್ಮ್ಯವರ್ಣನಂ

ಶ್ರೀ ಮಾರ್ಕಂಡೇಯ ಉವಾಚ :—

ತತೋ ಗಚ್ಛೇನ್ಮಹಾರಾಜ ಕುಸುಮೇಶ್ವರಮುತ್ತಮಂ ।
ದಕ್ಷಿಣೇ ನರ್ಮದಾಕೂಲೇ ಉಪಪಾತಕನಾಶನಂ ॥ ೧ ॥

ಕಾಮೇನ ಸ್ಥಾಪಿತೋ ದೇವಃ ಕುಸುಮೇಶ್ವರಸಂಜ್ಞಿತಃ ।
ಖ್ಯಾತಃ ಸರ್ವೇಷು ಲೋಕೇಷು ದೇವದೇವಃ ಸನಾತನಃ ॥ ೨ ॥

ಕಾಮೋ ಮನೋಭವೋ ವಿಶ್ವಃ ಕುಸುಮಾಯುಧಚಾಪಭೃತ್ ।
ಸ ಕಾಮಾನ್ದದಾತಿ ಸರ್ವಾನ್ಪೂಜಿತೋ ಮೀನಕೇತನಃ ॥ ೩ ॥

ತೇನ ನಿರ್ದಗ್ಧಕಾಯೇನ ಚಾರಾಧ್ಯ ಪರಮೇಶ್ವರಂ ।
ಅನಂಗೇನ ತಥಾ ಪ್ರಾಪ್ತಮಂಗಿತ್ವಂ ನರ್ಮದಾತಟೇ ॥ ೪ ॥

ಯುಧಿಷ್ಠಿರ ಉವಾಚ :—

ಅಂಗಿಭೂತಸ್ಯ ನಾಶತ್ವಮನಂಗಸ್ಯ ತು ಮೇ ವದ ।
ನ ಶ್ರುತಂ ನ ಚ ಮೇ ದೃಷ್ಟಂ ಭೂತಪೂರ್ವಂ ಕದಾಚನ ॥ ೫ ॥

---

## ಕನ್ನಡದ ಅನುವಾದ

### ಕುಸುಮೇಶ್ವರತೀರ್ಥಮಾಹಾತ್ಮ್ಯವರ್ಣನ

೧. ಮಾರ್ಕಂಡೇಯನು ಹೇಳುತ್ತಾನೆ :—ಮಹಾರಾಜನೆ! ಬಳಿಕ ನರ್ಮದೆಯ ದಕ್ಷಿಣತೀರದಲ್ಲಿ ನೆಲಸಿ ಉಪಪಾತಕಗಳನ್ನು ನಾಶಮಾಡುವ ಉತ್ತಮವಾದ ಕುಸುಮೇಶ್ವರತೀರ್ಥವನ್ನು ಸೇವಿಸಬೇಕು.

೨. ಸನಾತನನಾದ ಕುಸುಮೇಶ್ವರನೆಂಬ ಈ ಮಹಾದೇವನು ಮನ್ಮಥನಿಂದ ಪ್ರತಿಷ್ಠಿತನಾಗಿ ಸಕಲಲೋಕಗಳಲ್ಲಿಯೂ ಪ್ರಖ್ಯಾತನಾಗಿರುವನು.

೩. ವಿಷ್ಣುವಿನ ಮನಸ್ಸಿನಿಂದ ಹುಟ್ಟಿದವನೂ, ಸರ್ವ ವ್ಯಾಪಿಯೂ, ಪುಷ್ಪಬಾಣಗಳನ್ನೂ ಧನುಸ್ಸನ್ನೂ ಹಿಡಿದವನೂ, ಮೀನಧ್ವಜಲಾಂಛಿತನೂ ಆದ ಕಾಮನು ಪೂಜಿತನಾದರೆ ಸಕಲಾಭೀಷ್ಟಗಳನ್ನೂ ಕೊಡುವನು.

೪. ಅಂತಹ ಕಾಮನು ತನ್ನ ದೇಹವು ಭಸ್ಮೀಭೂತವಾಗಲು ನರ್ಮದಾತೀರದಲ್ಲಿ ಪರಮೇಶ್ವರನನ್ನು ಪೂಜಿಸಿ ಅನಂಗನಾಗಿದ್ದವನು ಪುನಃ ಸ್ಥೂಲರೂಪವನ್ನು ತಾಳಿದನು.

೫. ಯುಧಿಷ್ಠಿರನು ಹೇಳುತ್ತಾನೆ :—ದೇಹಧಾರಿಯಾದ ಮನ್ಮಥನು ನಾಶವಾದುದನ್ನು ನನಗೆ ಹೇಳು. ಇಂತಹ ವೃತ್ತಾಂತವನ್ನು ನಾನು ಹಿಂದೆಲ್ಲಿಯೂ ನೋಡಿಯೂ ಇಲ್ಲ, ಕೇಳಿಯೂ ಇಲ್ಲ.

ಏತತ್ಸರ್ವಂ ಯಥಾವೃತ್ತಮಾಚಕ್ಷ್ವ ದ್ವಿಜಸತ್ತಮ ।
ಶ್ರೋತುಮಿಚ್ಛಾಮಿ ವಿಪ್ರೇಂದ್ರ ಭೀಮಾರ್ಜುನಯಮೈಃ ಸಹ ॥ ೬ ॥

ಶ್ರೀ ಮಾರ್ಕಂಡೇಯ ಉವಾಚ:—

ಆದೌ ಕೃತಯುಗೇ ತಾತ ದೇವದೇವೋ ಮಹೇಶ್ವರಃ ।
ತಪಶ್ಚಚಾರ ವಿಪುಲಂ ಗಂಗಾಸಾಗರಸಂಸ್ಥಿತಃ ॥ ೭ ॥
ತೇನ ಸಂಪಾದಿತಾ ಲೋಕಾಸ್ತಪಸಾ ಸಸುರಾಸುರಾಃ ।
ಜಗ್ಮುಸ್ತೇ ಶರಣಂ ಸರ್ವೇ ದೇವದೇವಂ ಶಚೀಪತಿಂ ॥ ೮ ॥
ವ್ಯಾಪಕಃ ಸರ್ವಭೂತಾನಾಂ ದೇವದೇವೋ ಮಹೇಶ್ವರಃ ।
ಸಂತಾಪಯತಿ ಲೋಕಾಂಸ್ತ್ರೀಂಸ್ತನ್ನಿವಾರಯ ಗೋಪತೇ ॥ ೯ ॥
ಶ್ರುತ್ವಾ ತದ್ವಚನಂ ತೇಷಾಂ ದೇವಾನಾಂ ಬಲವೃತ್ರಹಾ ।
ಚಿಂತಯಾಮಾಸ ಮನಸಾ ತಪೋವಿಘ್ನಾಯ ಚಾದಿಶತ್ ॥ ೧೦ ॥
ಅಪ್ಸರಾಂ ಮೇನಕಾಂ ರಂಭಾಂ ಘೃತಾಚೀಂ ಚ ತಿಲೋತ್ತಮಾಂ ।
ವಸಂತಂ ಕೋಕಿಲಂ ಕಾಮಂ ದಕ್ಷಿಣಾನಿಲಮುತ್ತಮಂ ॥ ೧೧ ॥
ಗತ್ವಾ ತತ್ರ ಮಹಾದೇವಂ ತಪಶ್ಚರಣತತ್ಪರಂ ।
ಕ್ಷೋಭಯಧ್ವಂ ಯಥಾನ್ಯಾಯಂ ಗಂಗಾಸಾಗರವಾಸಿನಂ ॥ ೧೨ ॥

---

೬. ಬ್ರಾಹ್ಮಣೋತ್ತಮನೆ! ಇದೆಲ್ಲವನ್ನೂ ನಡೆದಂತೆಯೇ ಹೇಳುವವನಾಗು; ಈ ಭೀಮ ಅರ್ಜುನ ನಕುಲ ಸಹದೇವರೊಡನೆ ಕೇಳಲಿಚ್ಛಿಸುವೆನು.

೭. ಮಾರ್ಕಂಡೇಯನು ಹೇಳುತ್ತಾನೆ:—ರಾಜನೆ! ಮೊದಲು ಕೃತಯುಗದಲ್ಲಿ ದೇವದೇವನಾದ ಪರಮೇಶ್ವರನು ಗಂಗಾಸಾಗರಕ್ಷೇತ್ರದಲ್ಲಿ ನಿಂತು ದುಸ್ಸಾಧ್ಯವಾದ ತಪಸ್ಸನ್ನಾಚರಿಸಿದನು.

೮. ಆತನು ತಪಸ್ಸಿನಿಂದ ಸಕಲಲೋಕಗಳಲ್ಲಿಯೂ ವ್ಯಾಪಿಸಲು ದೇವದಾನವರೆಲ್ಲರೂ ದೇವೋತ್ತಮನಾದ ಇಂದ್ರನನ್ನು ಶರಣುಹೊಂದಿದರು.

೯. "ದೇವದೇವನಾದ ಮಹೇಶ್ವರನು ಸಕಲಭೂತಗಳಲ್ಲಿಯೂ ವ್ಯಾಪಿಸಿ ಮೂರು ಲೋಕಗಳನ್ನೂ ಪರಿತಪಿಸುತ್ತಿರುವನು. ಇಂದ್ರನೆ! ಅದನ್ನು ನಿವಾರಿಸು."

೧೦. ಎಂದು ನುಡಿದ ದೇವತೆಗಳ ಮಾತನ್ನು ಕೇಳಿ ಬಲವೃತ್ರಘಾತಕನಾದ ಮಹೇಂದ್ರನು ಮನಸ್ಸಿನಲ್ಲಿಯೇ ಯೋಚಿಸಿ ಆತನ ತಪಸ್ಸಿಗೆ ವಿಘ್ನವನ್ನುಂಟುಮಾಡುವಂತೆ ಅಪ್ಪಣೆಯನ್ನು ಮಾಡಿದನು.

೧೧. ಮೇನಕೆಯೆಂಬ ಅಪ್ಸರೆಯನ್ನೂ, ರಂಭೆ, ಘೃತಾಚಿ, ತಿಲೋತ್ತಮೆಯರನ್ನೂ, ವಸಂತನನ್ನೂ, ಕೋಗಿಲೆಯನ್ನೂ, ದಕ್ಷಿಣದಿಕ್ಕಿನ ಮಂದಮಾರುತನನ್ನೂ ಕಾಮಸಹಿತರನ್ನಾಗಿ ಕಳುಹಿಸಿ ಇಂತೆಂದನು.

೧೨. "ನೀವು ಗಂಗಾಸಾಗರಕ್ಕೆ ಹೋಗಿ ಅಲ್ಲಿ ವಾಸಮಾಡುತ್ತ ತಪಶ್ಚರಣ

ಏವಮುಕ್ತಾಸ್ತು ತೇ ಸರ್ವೇ ದೇವರಾಜೇನ ಭಾರತ ।
ದೇವಾಪ್ಸರಃಸಮೋಪೇತಾ ಜಗ್ಮುಸ್ತೇ ಹರಸನ್ನಿಧೌ ॥ ೧೩ ॥
ವಸಂತಮಾಸೇ ಕುಸುಮಾಕರಾಕುಲೇ
ಮಯೂರದಾತ್ಯೂಹ ಸುಕೋಕಿಲಾಕುಲೇ ।
ಪ್ರನೃತ್ಯ ದೇವಾಪ್ಸರಗೀತಸಂಕುಲೇ
ಪ್ರವಾತಿ ವಾತೇ ಯಮನೈರ್ಋತಾಕುಲೇ ॥ ೧೪ ॥
ತೇನ ಸಂಮೂರ್ಛಿತಾಃ ಸರ್ವೇ ಸಂಸರ್ಗಾಚ್ಚ ಖಗೋತ್ತಮಾಃ ।
ಮಧುಮಾಧವಗಂಧೇನ ಸಕಿನ್ನರಮಹೋರಗಾಃ ॥ ೧೫ ॥
ಯಾವದಾಲೋಕತೇ ತಾವತ್ತದ್ವನಂ ವ್ಯಾಕುಲೀಕೃತಂ ।
ವೀಕ್ಷತೇ ಮದನಾವಿಷ್ಟಂ ದಶಾವಸ್ಥಾಗತಂ ಜನಂ ॥ ೧೬ ॥
ದೇವದೇವೋಽಪಿ ದೇವಾನಾಮವಸ್ಥಾತ್ರಿತಯಂ ಗತಃ ।
ಸಾತ್ವಿಕೀಂ ರಾಜಸೀಂ ರಾಜಂಸ್ತಾಮಸೀಂ ತಾಂ ಶೃಣುಷ್ವ ಮೇ ॥ ೧೭ ॥

---

ದಲ್ಲಿ ನಿರತನಾಗಿರುವ ಪರಮಶಿವನ ಮನಸ್ಸನ್ನು ಕಾಲಾನುಗುಣವಾಗಿ ಕ್ಷೋಭೆಗೊಳಿಸಿರಿ."

೧೩. ಧರ್ಮನಂದನನೆ! ಇಂತೆಂದ ದೇವರಾಜನ ಅಪ್ಪಣೆಯಂತೆ ಅವರೆಲ್ಲರೂ ದೇವತೆಗಳು ಮತ್ತು ಅಪ್ಸರೆಯರೊಡರೆ ಮಹೇಶ್ವರನಿದ್ದಲ್ಲಿಗೆ ಹೊರಟರು.

೧೪. ಮರಗಳಲ್ಲಿ ಪುಷ್ಪಗಳು ತುಂಬಿರಲು, ನವಿಲುಗಳೂ, ಭರತಪಕ್ಷಿಗಳೂ, ಕೋಗಿಲೆಗಳೂ ನಲಿದಾಡುತ್ತಿರಲು, ದೇವತೆಗಳ ಮತ್ತು ಅಪ್ಸರೆಯರ ನೃತ್ಯಗೀತಗಳು ನಡೆಯುತ್ತಿರಲು, ದಕ್ಷಿಣದಿಂದಲೂ ನೈಋತ್ಯದಿಂದಲೂ ಮಂದಮಾರುತವು ಬೀಸುತ್ತಿರಲು ವಸಂತಕಾಲವು ಪ್ರಾಪ್ತವಾಯಿತು.

೧೫. ಚೈತ್ರ ವೈಶಾಖ ಮಾಸಗಳ ಪುಷ್ಪಗಂಧಗಳಿಂದಲೂ, ಮಲಯಾನಿಲದಿಂದಲೂ ದೇವತೆಗಳೂ, ಕಿನ್ನರರೂ, ಮಹಾನಾಗರೂ ಎಲ್ಲರೂ ಮೂರ್ಛಾವಸ್ಥೆಯನ್ನು ಹೊಂದಿದರು.

೧೬. ನೋಡುತ್ತಿದ್ದಂತೆಯೇ ಅರಣ್ಯವೆಲ್ಲವೂ ವ್ಯಾಕುಲಗೊಂಡು ಜನರೆಲ್ಲರೂ ಸ್ವೇದಕಂಪಾದಿ ಕಾಮಜನಿತಗಳಾದ ಮದನಾವಸ್ಥೆಗಳಿಗೊಳಗಾದರು.

೧೭. ರಾಜನೆ! ಮಹಾದೇವನು ಸಹ ಸಾತ್ವಿಕ, ರಾಜಸ, ತಾಮಸಗಳೆಂಬ ಮೂರು ಅವಸ್ಥೆಗಳನ್ನೂ ತಾಳಿದನು. ಅವುಗಳನ್ನು ಹೇಳುವೆನು. ಕೇಳು.

ಏಕಂ ಯೋಗಸಮಾಧಿನಾ ಮುಕುಲಿತಂ ಚಕ್ಷುರ್ದ್ವಿತೀಯಂ ಪುನಃ
ಪಾರ್ವತ್ಯಾ ಜಘನಸ್ಥಲಸ್ತನತಟೇ ಶೃಂಗಾರಭಾರಾಲಸಂ ।
ಅನ್ಯದ್ದೂರ ನಿರಸ್ತಚಾಪಮದನಕ್ರೋಧಾನಲೋದ್ದೀಪಿತಂ
ಶಂಭೋರ್ಭಿನ್ನರಸಂ ಸಮಾಧಿಸಮಯೇ ನೇತ್ರತ್ರಯಂ ಪಾತುವಃ॥೧೮॥
ಏವಂ ದೃಷ್ಟಃ ಸ ದೇವೇನ ಸಶರಃ ಸಶರಾಸನಃ ।
ಭಸ್ಮೀಭೂತೋ ಗತಃ ಕಾಮೋ ವಿನಾಶಃ ಸರ್ವದೇಹಿನಾಂ ॥ ೧೯ ॥
ಕಾಮಂ ದೃಷ್ಟ್ವಾ ಕ್ಷಯಂ ಯಾತಂ ತತ್ರ ದೇವಾಪ್ಸರೋಗಣಾಃ ।
ಭೀತಾ ಯಥಾಗತಂ ಸರ್ವೇ ಜಗ್ಮುಶ್ಚೈವ ದಿಶೋ ದಶ ॥ ೨೦ ॥
ಕಾಮೇನ ರಹಿತಾ ಲೋಕಾಃ ಸಸುರಾಸುರಮಾನವಾಃ ।
ಬ್ರಹ್ಮಾಣಂ ಶರಣಂ ಜಗ್ಮುರ್ದೇವಾ ಇಂದ್ರಪುರೋಗಮಾಃ ॥ ೨೧ ॥
ಸೀದಮಾನಂ ಜಗದ್ದೃಷ್ಟ್ವಾ ತಮೂಚುಃ ಪರಮೇಷ್ಠಿನಂ ।
ಜಾನಾಸಿ ತ್ವಂ ಜಗಚ್ಛೇಷಂ ಪ್ರಭೋ ಮೈಥುನಸಂಭವಾತ್ ॥ ೨೨ ॥

---

೧೮. ಒಂದು ಕಣ್ಣು ಯೋಗಸಮಾಧಿಯ ದೆಸೆಯಿಂದ ಮುಚ್ಚಿಕೊಂಡಿದ್ದಿತು. ಎರಡನೆಯದಾದರೊ ಪಾರ್ವತಿಯ ಶೃಂಗಾರಾಧಿಕ್ಯದ ಮಹಿಮೆಯಿಂದ ಆಕೆಯ ಜಘನಗಳಲ್ಲಿಯೂ ಸ್ತನಪ್ರದೇಶದಲ್ಲಿಯೂ ನಟ್ಟಿದ್ದಿತು. ಮೂರನೆಯ ಕಣ್ಣು ದೂರದಿಂದಲೇ ಮನ್ಮಥನ ಬಿಲ್ಲಿನ ವ್ಯಾಪಾರವನ್ನು ಕೊನೆಗಾಣಿಸಿ ಕೋಪವೆಂಬ ಬೆಂಕಿಯಿಂದ ಉರಿಯುತ್ತಿದ್ದಿತು. ಹೀಗೆ ಸಮಾಧಿ ಸಮಯದಲ್ಲಿಯೂ ಭಿನ್ನವ್ಯಾಪಾರಗಳನ್ನು ಮಾಡುತ್ತಿದ್ದ ಪರಮೇಶ್ವರನ ತ್ರಿಣೇತ್ರಗಳು ನಿಮ್ಮನ್ನು ಕಾಪಾಡಲಿ.

೧೯. ಇಂತು ಮಹಾದೇವನು ಕ್ರೋಧದಿಂದ ನೋಡಲು ಸಕಲ ಜೀವರನ್ನೂ ಕ್ಷೋಭೆಗೊಳಿಸಲು ಮನ್ಮಥನು ತಾನೇ ಬಿಲ್ಲುಬಾಣಗಳೊಡನೆ ಸುಟ್ಟು ಬೂದಿಯಾದನು.

೨೦. ಕಾಮನು ನಾಶವಾದುದನ್ನು ಕಂಡು ಸಮಸ್ತ ದೇವತೆಗಳೂ ಅಪ್ಸರೋಗಣಗಳೂ ಭಯಗೊಂಡು ಹತ್ತು ದಿಕ್ಕುಗಳಿಗೂ ಚೆದರಿ ಓಡಿಹೋದರು.

೨೧. ಕಾಮಹೀನಗಳಾದ ಲೋಕಗಳಲ್ಲಿ ದೇವತೆಗಳೂ, ರಾಕ್ಷಸರೂ, ಮಾನವರೂ ಇಂದ್ರನನ್ನು ಮುಂದುಮಾಡಿಕೊಂಡು ಬ್ರಹ್ಮದೇವನಲ್ಲಿ ಶರಣಾಗತರಾದರು.

೨೨. ಲೋಕವೆಲ್ಲವೂ ಪರಿತಪಿಸುತ್ತಿರುವುದನ್ನು ಕಂಡು ಅವರು ಪರಮೇಷ್ಠಿಗೆ ಇಂತೆಂದರು: "ಪ್ರಭುವೆ! ಮೈಥುನದಿಂದಲೇ ಲೋಕವು ನಡೆದುಕೊಂಡು ಬರುತ್ತಿರುವುದೆಂಬುದನ್ನು ನೀನು ಬಲ್ಲೆಯಷ್ಟೆ!

ಪ್ರಜಾಃ ಸರ್ವಾ ವಿಶುಷ್ಯಂತಿ ಕಾಮೇನ ರಹಿತಾ ವಿಭೋ ॥ ೨೩ ॥
ಏತಚ್ಛ್ರುತ್ವಾ ವಚಸ್ತೇಷಾಂ ದೇವಾನಾಂ ಪ್ರಪಿತಾಮಹಃ ।
ಜಗಾಮ ಸಹಿತಸ್ತತ್ರ ಯತ್ರ ದೇವೋ ಮಹೇಶ್ವರಃ ॥ ೨೪ ॥
ಅಥೋಪಸ್ಥಾಯ ಜಗನ್ನಾಥಂ ಸರ್ವಭೂತಮಹೇಶ್ವರಂ ।
ಸ್ತುತಿಭಿರ್ದಂಡಕೈಃ ಸ್ತೋತ್ರೈರ್ವೇದವೇದಾಂಗಸಂಭವೈಃ ॥ ೨೫ ॥
ತತಸ್ತುಷ್ಟೋ ಮಹಾದೇವೋ ದೇವಾನಾಂ ಪರಮೇಶ್ವರಃ ।
ಉವಾಚ ಮಧುರಾಂ ವಾಣೀಂ ದೇವಾನ್ ಬ್ರಹ್ಮಪುರೋಗಮಾನ್ ॥ ೨೬ ॥
ಕಿಂ ಕಾರ್ಯಂ ಕಶ್ಚ ಸಂತಾಪಃ ಕಿಂ ವಾಽಽಗಮನಕಾರಣಂ ।
ದೇವತಾನಾಮೃಷೀಣಾಂ ಚ ಕಥ್ಯತಾಂ ಮಮ ಮಾ ಚಿರಂ ॥ ೨೭ ॥

ದೇವಾ ಊಚುಃ:—

ಕಾಮನಾಶಾಜ್ಜಗನ್ನಾಥೋ ಭವಿತಾಽಯಂ ಚರಾಚರೇ ।
ತ್ರೈಲೋಕ್ಯಂ ತ್ವಂ ಪುನಃ ಶಂಭೋ ಉತ್ಪಾದಯಿತುಮರ್ಹಸಿ ॥ ೨೮ ॥
ಏತಚ್ಛ್ರುತ್ವಾ ವಚಸ್ತೇಷಾಂ ವಿಮೃಶ್ಯ ಪರಮೇಶ್ವರಃ ।
ಚಿಂತಯಾಮಾಸ ಕಾಮಸ್ಯ ವಿಗ್ರಹಂ ಭುವಿ ದುರ್ಲಭಂ ॥ ೨೯ ॥

---

೨೩–೨೪. ಕಾಮರಹಿತಗಳಾಗಿ ಪ್ರಾಣಿಗಳೆಲ್ಲವೂ ನಾಶವನ್ನು ಹೊಂದು ತ್ತಿರುವುವು.'' ದೇವತೆಗಳ ಈ ಮಾತನ್ನು ಕೇಳಿ ಪಿತಾಮಹನು ಅವರನ್ನು ಕೂಡಿ ಕೊಂಡು ಮಹೇಶ್ವರನಿದ್ದಲ್ಲಿಗೆ ಬಂದನು.

೨೫. ಮತ್ತು ಲೋಕೇಶ್ವರನೂ, ಸಕಲ ಭೂತಗಳ ನಿಯಾಮಕನೂ ಆದ ಆತನನ್ನು ಸ್ತೋತ್ರಗಳಿಂದಲೂ, ದಂಡಕಗಳಿಂದಲೂ, ವೇದಗಳೊಳಗಿನ ಮಂತ್ರ ಗಳಿಂದಲೂ ಸಂತೋಷಗೊಳಿಸಿದನು.

೨೬. ಅದರಿಂದ ಸಂತುಷ್ಟನಾಗಿ ದೇವಾಧಿದೇವನಾದ ಪರಮೇಶ್ವರನು ಬ್ರಹ್ಮನೇ ಮೊದಲಾದ ದೇವತೆಗಳಿಗೆ ಮಧುರವಾದ ಮಾತುಗಳನ್ನು ಹೇಳಿದನು.

೨೭. ''ದೇವತೆಗಳಿಗೂ, ಮಹರ್ಷಿಗಳಿಗೂ ಈಗ ನನ್ನಿಂದ ಆಗಬೇಕಾದ ಕೆಲಸವೇನು? ನಿಮಗೆ ಬಂದಿರುವ ಸಂಕಟವೇನು? ಇಲ್ಲಿಗೆ ಬಂದುದಕ್ಕೆ ಕಾರಣ ವೇನು? ತಡೆಮಾಡದೆ ನನ್ನಲ್ಲಿ ಹೇಳಿರಿ.''

೨೮. ದೇವತೆಗಳು ಹೇಳುತ್ತಾರೆ:—ಪರಮೇಶ್ವರನೆ! ಕಾಮನ ನಾಶದಿಂದ ಚರಾಚರಾತ್ಮಕವಾದ ಸಕಲ ಬ್ರಹ್ಮಾಂಡವೂ ನಾಶವಾಗುತ್ತಿರುವುದು. ಆದುದ ರಿಂದ ನೀನು ಮತ್ತೆ ಮೂರು ಲೋಕಗಳನ್ನೂ ಸೃಷ್ಟಿಮಾಡಬೇಕು.

೨೯. ದೇವತೆಗಳ ಮಾತನ್ನು ಕೇಳಿ ಮಹಾದೇವನು ಮನಸ್ಸಿನಲ್ಲಿಯೇ ಚಿಂತಿಸಿ ಕಾಮನಿಗೆ ಭೂಲೋಕದಲ್ಲಿ ದುರ್ಲಭವಾದ ರೂಪವು ಬರುವಂತೆ ಅನು ಗ್ರಹಿಸಿದನು.

ಆಜಗಾಮ ತತಃ ಶೀಘ್ರಮನಂಗೋಽಹ್ಯಂಗತಾಂ ಗತಃ ।
ಪ್ರಾಣದಃ ಸರ್ವಭೂತಾನಾಂ ಪಶ್ಯತಾಂ ನೃಪಸತ್ತಮ ॥ ೩೦ ॥
ತತಃ ಶಂಖನಿನಾದೇನ ಭೇರೀಣಾಂ ನಿಃಸ್ವನೇನ ಚ ।
ಅಭ್ಯನಂದಂಸ್ತತೋ ದೇವಂ ಸುರಾಃಸುರಮಹೋರಗಾಃ ॥ ೩೧ ॥
ನಮಸ್ತೇ ದೇವದೇವೇಶ ಕೃತಾರ್ಥಾಃ ಸುರಸತ್ತಮಾಃ ।
ವಿಸರ್ಜಿತಾಃ ಪುನರ್ಜಗ್ಮುರ್ಯಥಾಗತಮರಿಂದಮ ॥ ೩೨ ॥
ಗತೇಷು ಸರ್ವದೇವೇಷು ಕಾಮದೇವೋಽಪಿ ಭಾರತ ।
ತಪಶ್ಚಚಾರ ವಿಪುಲಂ ನರ್ಮದಾತಟಮಾಶ್ರಿತಃ ॥ ೩೩ ॥
ತಪೋಜಪಕೃಶೀಭೂತೋ ದಿವ್ಯಂ ವರ್ಷಶತಂ ಕಿಲ ।
ಮಹಾಭೂತೈರ್ವಿಘ್ನಕರೈಃ ಪೀಡ್ಯಮಾನಃ ಸಮಂತತಃ ॥ ೩೪ ॥
ಆತ್ಮವಿಘ್ನವಿನಾಶಾರ್ಥಂ ಸಂಸ್ಮೃತಃ ಕುಂಡಲೇಶ್ವರಃ ।
ಚಕಾರ ರಕ್ಷಾಂ ಸರ್ವತ್ರ ಶರಪಾತೇ ನೃಪೋತ್ತಮ ॥ ೩೫ ॥
ತತಸ್ತುಷ್ಟೋ ಮಹಾದೇವೋ ದೃಢಭಕ್ತ್ಯಾ ವರಪ್ರದಃ ।
ವರೇಣ ಚ್ಛಂದಯಾಮಾಸ ಕಾಮಂ ಕಾಮವಿನಾಶನಃ ॥ ೩೬ ॥

---

೩೦. ಮಹಾರಾಜನೆ! ನಿಮಿಷಮಾತ್ರದಲ್ಲಿ ಎಲ್ಲರೂ ನೋಡುತ್ತಿದ್ದಂತೆಯೇ ಸಕಲ ಜೀವರಿಗೆ ಪ್ರಾಣಪ್ರದನಾದ ಮನ್ಮಥನು ದೇಹವನ್ನು ಧರಿಸಿ ಬಂದನು.

೩೧. ಆಗ ದೇವತೆಗಳೂ, ಅಸುರರೂ, ನಾಗರೂ ಶಂಖಧ್ವನಿಗಳಿಂದಲೂ, ಭೇರಿಗಳ ನಾದಗಳಿಂದಲೂ ಮಹೇಶ್ವರನನ್ನು ಅಭಿನಂದಿಸಿದರು.

೩೨. ದೇವದೇವೇಶ್ವರನಿಗೆ ನಮಸ್ಕರಿಸಿ ಕೃತಕೃತ್ಯರಾದ ದೇವತೆಗಳು ಆತನಿಂದ ಬೀಳ್ಕೊಂಡು ತಮ್ಮತಮ್ಮ ಸ್ಥಾನಗಳಿಗೆ ಹೊರಟುಹೋದರು.

೩೩. ಭರತಕುಲತಿಲಕನೆ! ಸಮಸ್ತ ದೇವತೆಗಳೂ ಹೊರಟುಹೋಗಲು ಮನ್ಮಥನೂ ನರ್ಮದಾನದಿಯ ತೀರವನ್ನು ಸೇರಿ ಬಹಳಕಾಲ ತಪಸ್ಸನ್ನಾಚರಿಸಿದನು.

೩೪. ಒಂದು ನೂರು ದಿವ್ಯ ವರ್ಷಗಳ ತಪಸ್ಸಿನಿಂದಲೂ ಜಪದಿಂದಲೂ ಆತನ ದೇಹವು ಕೃಶವಾಯಿತು. ವಿಘ್ನಗಳನ್ನುಂಟುಮಾಡಲು ಮಹಾ ಭೂತಗಳು ನಿರಂತರವಾಗಿ ಯತ್ನಿಸುತ್ತಿದ್ದುವು.

೩೫. ಮಹಾರಾಜನೆ! ಆತನು ತನ್ನ ವಿಘ್ನಗಳನ್ನು ಕಳೆಯಲು ಕುಂಡಲೇಶ್ವರನನ್ನು ಸ್ಮರಿಸಿಕೊಂಡು ಬಾಣಗಳ ಸಮೂಹದಿಂದ ಸುತ್ತಲೂ ರಕ್ಷಣೆಯನ್ನು ಮಾಡಿಕೊಂಡನು.

೩೬. ಮನ್ಮಥವೈರಿಯಾದ ಮಹಾದೇವನು ಆತನ ದೃಢಭಕ್ತಿಗೆ ಮೆಚ್ಚಿದವನಾಗಿ ಆತನಿಗೆ ವರಗಳನ್ನು ಕೊಡಲು ಪ್ರಸನ್ನತೆಯಿಂದ ಪ್ರಲೋಭಗೊಳಿಸಿದನು.

ಜ್ಞಾತ್ವಾ ತುಷ್ಟಂ ಮಹಾದೇವಮುವಾಚ ಝಷಕೇತನಃ ।
ಪ್ರಣತಃ ಪ್ರಾಂಜಲಿರ್ಭೂತ್ವಾ ದೇವದೇವಂ ತ್ರಿಲೋಚನಂ ॥ ೩೭ ॥
ಯದಿ ತುಷ್ಟೋಽಸಿ ದೇವೇಶ ಯದಿ ದೇಯೋ ವರೋ ಮಮ ।
ಅತ್ರ ತೀರ್ಥೇ ಜಗನ್ನಾಥ ಸದಾ ಸನ್ನಿಹಿತೋ ಭವ ॥ ೩೮ ॥
ತಥೇತಿ ಚೋಕ್ತ್ವಾ ವಚನಂ ದೇವದೇವೋ ಮಹೇಶ್ವರಃ ।
ಜಗಾಮಾಕಾಶಮಾವಿಶ್ಯ ಸ್ತೂಯಮಾನೋಽಪ್ಸರೋಗಣೈಃ ॥ ೩೯ ॥
ಗತೇ ಚಾದರ್ಶನಂ ದೇವೇ ಕಾಮದೇವೋ ಜಗದ್ಗುರುಂ ।
ಸ್ಥಾಪಯಾಮಾಸ ರಾಜೇಂದ್ರ ಕುಸುಮೇಶ್ವರಸಂಜ್ಞಿತಂ ॥ ೪೦ ॥
ತತ್ರ ತೀರ್ಥೇ ತು ಯಃ ಸ್ನಾತ್ವಾ ಹ್ಯುಪವಾಸಪರಾಯಣಃ ।
ಚೈತ್ರಮಾಸೇ ಚತುರ್ದಶ್ಯಾಂ ಮದನಸ್ಯ ದಿನೇಽಥವಾ ॥ ೪೧ ॥
ಪ್ರಭಾತೇ ವಿಮಲೇ ಪ್ರಾಪ್ತೇ ಸ್ನಾತ್ವಾ ಪೂಜ್ಯ ದಿವಾಕರಂ ।
ತಿಲಮಿಶ್ರೇಣ ತೋಯೇನ ತರ್ಪಯೇತ್ಪಿತೃದೇವತಾಃ ॥ ೪೨ ॥
ಕೃತ್ವಾ ಸ್ನಾನಂ ವಿಧಾನೇನ ಪೂಜಯಿತ್ವಾ ಚ ತಂ ನೃಪ ।
ಪಿಂಡನಿರ್ವಪಣಂ ಕುರ್ಯಾತ್ತಸ್ಯ ಪುಣ್ಯಫಲಂ ಶೃಣು ॥ ೪೩ ॥

---

೩೭. ದೇವದೇವನೂ, ತ್ರಿಣೇತ್ರನೂ ಆದ ಮಹೇಶ್ವರನು ಸಂತುಷ್ಟನಾಗಿರುವುದನ್ನು ತಿಳಿದು ಮೀನಕೇತನನಾದ ಮನ್ಮಥನು ಸಾಷ್ಟಾಂಗ ಪ್ರಣಾಮವನ್ನು ಮಾಡಿ ಕೈಮುಗಿದು ಇಂತೆಂದನು.

೩೮. "ಲೋಕನಾಥನೆ! ಮಹೇಶ್ವರನೆ! ನೀನು ಸಂತುಷ್ಟನಾಗಿ ವರವನ್ನು ಕೊಡುವೆಯಾದರೆ ಸರ್ವಕಾಲದಲ್ಲಿಯೂ ಇಲ್ಲಿ ನಿನ್ನ ಸಾನ್ನಿಧ್ಯವುಂಟಾಗಿರಲಿ."

೩೯. ಹಾಗೆಯೇ ಆಗಲೆಂದು ಮಹೇಶ್ವರನು ಅಭಯವನ್ನಿತ್ತು ಅಪ್ಸರೋಗಣಗಳು ಹೊಗಳುತ್ತಿರಲು ಆಕಾಶಮಾರ್ಗದಿಂದ ಹೊರಟುಹೋದನು.

೪೦. ರಾಜೇಂದ್ರನೆ! ಮಹಾದೇವನು ಅದೃಶ್ಯನಾಗಲು ಕಾಮದೇವನು ಅಲ್ಲಿಯೇ ಕುಸುಮೇಶ್ವರನೆಂಬ ಹೆಸರಿನಿಂದ ಜಗದ್ಗುರುವನ್ನು ಪ್ರತಿಷ್ಠಿಸಿದನು.

೪೧. ಚೈತ್ರಮಾಸದ ಶುಕ್ಲಪಕ್ಷದ ಚತುರ್ದಶಿಯಲ್ಲಾಗಲಿ ತ್ರಯೋದಶಿಯ ದಿನದಲ್ಲಾಗಲಿ ಆ ತೀರ್ಥದಲ್ಲಿ ಮಿಂದು ಉಪವಾಸವನ್ನು ಆಚರಿಸಬೇಕು.

೪೨. ಮಾರನೆಯ ಪ್ರಾತಃಕಾಲದಲ್ಲಿ ಪುನಃ ಸ್ನಾನವನ್ನು ಮಾಡಿ ಸೂರ್ಯನನ್ನು ಪೂಜಿಸಿ ತಿಲೋದಕದಿಂದ ಪಿತೃದೇವತೆಗಳಿಗೆ ತರ್ಪಣಗಳನ್ನು ಕೊಡಬೇಕು.

೪೩. ಪುನಃ ಸ್ನಾನವನ್ನು ಮಾಡಿ ಆದಿತ್ಯನ ಪೂಜೆಯಾದ ಮೇಲೆ ಪಿತೃಗಳ ತೃಪ್ತಿಗಾಗಿ ಪಿಂಡಪ್ರದಾನಗಳನ್ನು ಮಾಡಿದವನಿಗೆ ಲಭಿಸುವ ಪುಣ್ಯಫಲವನ್ನು ಕೇಳು.

ಸತ್ರಯಾಜಿಫಲಂ ಯಚ್ಚ ಲಭತೇ ದ್ವಾದಶಾಬ್ದಿಕಂ ।
ಪಿಂಡದಾನಾತ್ಫಲಂ ತಚ್ಚ ಲಭತೇ ನಾಽತ್ರ ಸಂಶಯಃ ॥ ೪೪ ॥
ಅಂಕೋಲಮೂಲೇ ಯಃ ಪಿಂಡಂ ಪಿತೄನುದ್ದಿಶ್ಯ ದಾಪಯೇತ್ ।
ತಸ್ಯ ತೇ ದ್ವಾದಶಾಬ್ದಾನಿ ತೃಪ್ತಿಂ ಯಾಂತಿ ಪಿತಾಮಹಾಃ ॥ ೪೫ ॥
ಕೃಮಿಕೀಟಪತಂಗಾ ಯೇ ತತ್ರ ತೀರ್ಥೇ ಯುಧಿಷ್ಠಿರ ।
ಪ್ರಾಪ್ನುವಂತಿ ಮೃತಾಃ ಸ್ವರ್ಗಂ ಕಿಂ ಪುನರ್ಯೇ ನರಾ ಮೃತಾಃ ॥ ೪೬ ॥
ಸನ್ಯಾಸಂ ಕುರುತೇ ಯೋಽತ್ರ ಜಿತಕ್ರೋಧೋ ಜಿತೇಂದ್ರಿಯಃ ।
ಕುಸುಮೇಶೇ ನರೋ ಭಕ್ತ್ಯಾ ಸ ಗಚ್ಛೇಚ್ಛಿವಮಂದಿರಂ ॥ ೪೭ ॥
ತತ್ರ ದಿವ್ಯಾಪ್ಸರೋಭಿಶ್ಚ ದೇವಗಂಧರ್ವಗಾಯನೈಃ ।
ಕ್ರೀಡತೇ ಸೇವ್ಯಮಾನಸ್ತು ಕಲ್ಪಕೋಟಿಶತಂ ನೃಪ ॥ ೪೮ ॥
ಪೂರ್ಣೇ ಚೈವ ತತಃ ಕಾಲ ಇಹ ಮಾನುಷ್ಯತಾಂ ಗತಃ ।
ಜಾಯತೇ ರಾಜರಾಜೇಂದ್ರೈಃ ಪೂಜ್ಯಮಾನೋ ನೃಪೋ ಮಹಾನ್ ॥ ೪೯ ॥

---

೪೪. ಹನ್ನೆರಡು ವರ್ಷಗಳ ಮಹಾಸತ್ರವನ್ನು ಮಾಡಿದವರಿಗೆ ಯಾವ ಪುಣ್ಯವುಂಟೊ, ಅದೇ ಇಲ್ಲಿ ಪಿಂಡದಾನ ಮಂತ್ರದಿಂದ ಲಭಿಸುವುದರಲ್ಲಿ ಸಂದೇಹವಿಲ್ಲ.

೪೫. ಅಲ್ಲಿರುವ ಅಂಕೋಲೆಯ ಮೂಲದಲ್ಲಿ ಪಿತೃಗಳನ್ನುದ್ದೇಶಿಸಿ ಪಿಂಡಪ್ರದಾನವನ್ನು ಮಾಡಿದವನ ಪಿತೃಗಳೂ ಪಿತಾಮಹರೂ ಹನ್ನೆರಡು ವರ್ಷಗಳ ವರೆಗೂ ಸಂತೃಪ್ತರಾಗಿರುವರು.

೪೬. ಯುಧಿಷ್ಠಿರನೆ! ಆ ತೀರ್ಥದಲ್ಲಿ ದೇಹವನ್ನು ಬಿಟ್ಟ ಕ್ರಿಮಿಕೀಟ ಪತಂಗಗಳೂ ಸ್ವರ್ಗಲೋಕವನ್ನು ಸೇರುವುವೆಂದಮೇಲೆ ಮನುಷ್ಯರ ಮಾತನ್ನು ಹೇಳಲೇಕೆ?

೪೭. ಕ್ರೋಧವನ್ನೂ ಇಂದ್ರಿಯಗಳನ್ನೂ ಜಯಿಸಿದ ಯಾವ ಪುಣ್ಯಾತ್ಮನು ಕುಸುಮೇಶ್ವರನ ಸನ್ನಿಧಿಯಲ್ಲಿ ಸನ್ನ್ಯಾಸವನ್ನು ಸ್ವೀಕರಿಸುವನೊ, ಅವನು ಕೈಲಾಸವನ್ನು ಸೇರುವನು.

೪೮. ಚಕ್ರವರ್ತಿಯೆ! ಅಂಥವನು ಅಲ್ಲಿ ನೂರು ಕೋಟಿ ಕಲ್ಪಗಳವರೆಗೂ ದೇವಲೋಕದ ಅಪ್ಸರೆಯರಿಂದಲೂ ಗಂಧರ್ವರ ಗಾನಗಳಿಂದಲೂ ಸೇವಿತನಾಗಿ ಕ್ರೀಡಿಸುತ್ತಿರುವನು.

೪೯. ಆ ಕಾಲವು ಸಂಪೂರ್ಣವಾಗಿ ಕಳೆಯಲು ಮನುಷ್ಯಲೋಕಕ್ಕೆ ಬಂದರೆ ರಾಜಮಹಾರಾಜರಿಂದಲೂ ಪೂಜೆಯನ್ನು ಕೊಳ್ಳುವ ಚಕ್ರವರ್ತಿಯಾಗಿ ಜನಿಸುವನು.

ಸುರೂಪಃ ಸುಭಗೋ ವಾಗ್ಮೀ ವಿಕ್ರಾಂತೋ ಮತಿಮಾಂಛುಚಿಃ ।
ಜೀವೇದ್ವರ್ಷಶತಂ ಸಾಗ್ರಂ ಸರ್ವವ್ಯಾಧಿವಿವರ್ಜಿತಃ ॥ ೫೦ ॥
ಏತತ್ಪುಣ್ಯಂ ಪಾಪಹರಂ ತೀರ್ಥಕೋಟಿಶತಾಧಿಕಂ ।
ಕುಸುಮೇಶೇತಿ ವಿಖ್ಯಾತಂ ಸರ್ವದೇವನಮಸ್ಕೃತಂ ॥ ೫೧ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ
ಪಂಚಮೇ ಆವಂತ್ಯಖಂಡೇ ತೃತೀಯೇ ರೇವಾಖಂಡೇ
"ಕುಸುಮೇಶ್ವರತೀರ್ಥಮಾಹಾತ್ಮ್ಯವರ್ಣನಂ"ನಾಮ
ಪಂಚಾಶದಧಿಕಶತತಮೋಽಧ್ಯಾಯಃ

---

೫೦. ಸುಂದರನೂ, ಸೌಭಾಗ್ಯಶಾಲಿಯೂ, ವಾಗ್ಮಿಯೂ, ಪರಾಕ್ರಮಿಯೂ, ಮಹಾಬುದ್ಧಿಶಾಲಿಯೂ, ಶುಚಿಯೂ, ಸಕಲ ರೋಗರಹಿತನೂ ಆಗಿ ನೂರು ವರ್ಷಗಳು ಬದುಕುವನು.

೫೧. ಕುಸುಮೇಶ್ವರವೆಂಬ ಈ ತೀರ್ಥವು ಪುಣ್ಯಪ್ರದವೂ, ಪಾಪನಾಶಕವೂ, ನೂರು ಕೋಟಿ ತೀರ್ಥಗಳಿಗೆ ಮಿಗಿಲಾದುದೂ, ಸಮಸ್ತ ದೇವತೆಗಳಿಂದ ನಮಸ್ಕೃತವೂ ಆಗಿರುವುದು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ
ಶ್ರೀ ಸ್ಕಾಂದಮಹಾಪುರಾಣದ ಐದನೆಯ ಆವಂತ್ಯಖಂಡದ ಮೂರನೆಯ ರೇವಾಖಂಡದಲ್ಲಿ
"ಕುಸುಮೇಶ್ವರತೀರ್ಥಮಾಹಾತ್ಮ್ಯವರ್ಣನ"ವೆಂಬ
ನೂರೈವತ್ತನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

## ಅಥೈಕಪಂಚಾಶದಧಿಕಶತತಮೋಽಧ್ಯಾಯಃ

### ಶ್ವೇತವಾರಾಹತೀರ್ಥಮಾಹಾತ್ಮ್ಯವರ್ಣನಂ

ಶ್ರೀ ಮಾರ್ಕಂಡೇಯ ಉವಾಚ :—

ಉತ್ತರೇ ನರ್ಮದಾಕೂಲೇ ತೀರ್ಥಂ ಪರಮಶೋಭನಂ ।
ಜಯವಾರಾಹಮಾಹಾತ್ಮ್ಯಂ ಸರ್ವಪಾಪಪ್ರಣಾಶನಂ ॥ ೧ ॥
ಉದ್ಧೃತಾ ಜಗತೀ ಯೇನ ಸರ್ವದೇವನಮಸ್ಕೃತಾ ।
ಲೋಕಾನುಗ್ರಹಬುದ್ಧ್ಯಾ ಚ ಸಂಸ್ಥಿತೋ ನರ್ಮದಾ ತಟೇ ॥ ೨ ॥
ತತ್ರ ತೀರ್ಥೇ ತು ಯಃ ಸ್ನಾತ್ವಾ ವೀಕ್ಷತೇ ಮಧುಸೂದನಂ ।
ಮುಚ್ಯತೇ ಸರ್ವಪಾಪೇಭ್ಯೋ ದಶಜನ್ಮಾನುಕೀರ್ತನಾತ್ ॥ ೩ ॥
ಮತ್ಸ್ಯಃ ಕೂರ್ಮೋ ವರಾಹಶ್ಚ ನರಸಿಂಹೋಽಥ ವಾಮನಃ ।
ರಾಮೋ ರಾಮಶ್ಚ ಕೃಷ್ಣಶ್ಚ ಬುದ್ಧಃ ಕಲ್ಕಿಶ್ಚ ತೇ ದಶ ॥ ೪ ॥

ಯುಧಿಷ್ಠಿರ ಉವಾಚ :—

ಮತ್ಸ್ಯೇನ ಕಿಂ ಕೃತಂ ತಾತ ಕೂರ್ಮೇಣ ಮುನಿಸತ್ತಮ ।
ವರಾಹೇಣ ಚ ಕಿಂ ಕರ್ಮ ನರಸಿಂಹೇನ ಕಿಂ ಕೃತಂ ॥ ೫ ॥

---

## ಕನ್ನಡದ ಅನುವಾದ

### ಶ್ವೇತವಾರಾಹತೀರ್ಥಮಾಹಾತ್ಮ್ಯವರ್ಣನ

೧. ಮಾರ್ಕಂಡೇಯನು ಹೇಳುತ್ತಾನೆ :—ನರ್ಮದಾನದಿಯ ಉತ್ತರದಲ್ಲಿ ಪರಮಪವಿತ್ರವೂ ಸರ್ವಪಾಪಪ್ರಣಾಶಕವೂ ಆದ ಜಯವಾರಾಹನೆಂಬ ಮಾಹಾತ್ಮ್ಯಯುಕ್ತವಾದ ತೀರ್ಥವೊಂದಿರುವುದು.

೨. ಶ್ರೀ ಮಹಾವಿಷ್ಣುವು ಸಕಲ ದೇವ ನಮಸ್ಕೃತೆಯಾದ ಭೂಮಿಯನ್ನು ವರಾಹರೂಪದಿಂದ ಉದ್ಧರಿಸಿ ಲೋಕಾನುಗ್ರಹವನ್ನು ಮಾಡಲು ನರ್ಮದಾ ತೀರದಲ್ಲಿ ನೆಲಸಿದನು.

೩–೪. ಆ ತೀರ್ಥದಲ್ಲಿ ಮಿಂದು ಮಧುಸೂದನನ ದರ್ಶನವನ್ನು ಮಾಡಿ ಮಹಾವಿಷ್ಣುವಿನ ದಶಾವತಾರಗಳ ಹೆಸರುಗಳನ್ನು ಹೇಳುವುದರಿಂದ ಸಕಲಪಾತಕಗಳನ್ನೂ ಕಳೆದುಕೊಳ್ಳಬಹುದು. ಮತ್ಸ್ಯ, ಕೂರ್ಮ, ವರಾಹ, ನರಸಿಂಹ, ವಾಮನ, ಪರಶುರಾಮ, ಶ್ರೀರಾಮ, ಕೃಷ್ಣ, ಬುದ್ಧ, ಕಲ್ಕಿಯೆಂಬುವುಗಳೇ ಈ ದಶಾವತಾರಗಳ ನಾಮಗಳು.

೫. ಯುಧಿಷ್ಠಿರನು ಹೇಳುತ್ತಾನೆ:—ಮುನಿಸತ್ತಮನೆ! ಮತ್ಸ್ಯವು ಏನನ್ನು ಮಾಡಿತು? ಕೂರ್ಮವೂ ವರಾಹವೂ ಯಾವ ಕೆಲಸಗಳನ್ನು ಮಾಡಿದುವು? ನರಸಿಂಹನಿಂದ ನಡೆದ ಕಾರ್ಯವೇನು?

ವಾಮನೇನ ಚ ರಾಮೇಣ ರಾಘವೇಣ ಚ ಕಿಂ ಕೃತಂ ।
ಬುದ್ಧರೂಪೇಣ ಕಿಂ ವಾಽಪಿ ಕಲ್ಕಿನಾ ಕಿಂ ಕೃತಂ ವದ ॥ ೬ ॥
ಏವಮುಕ್ತಸ್ತು ವಿಪ್ರೇಂದ್ರೋ ಧರ್ಮಪುತ್ರೇಣ ಧೀಮತಾ ।
ಉವಾಚ ಮಧುರಾಂ ವಾಣೀಂ ತದಾ ಧರ್ಮಸುತಂ ಪ್ರತಿ ॥ ೭ ॥

ಶ್ರೀಮಾರ್ಕಂಡೇಯ ಉವಾಚ:—

ಮೀನೋ ಭೂತ್ವಾ ಪುರಾಕಲ್ಪೇ ಪ್ರೀತ್ಯರ್ಥಂ ಬ್ರಹ್ಮಣೋ ವಿಭುಃ ।
ಸಮರ್ಪಯತ್ಸಮುದ್ಧೃತ್ಯ ವೇದಾನ್ಮಗ್ನಾನ್ಮಹಾರ್ಣವೇ ॥ ೮ ॥
ಅಮೃತೋತ್ಪಾದನೇ ರಾಜನ್ಕೂರ್ಮೋ ಭೂತ್ವಾ ಜಗದ್ಗುರುಃ ।
ಮಂದರಂ ಧಾರಯಾಮಾಸ ತಥಾ ದೇವೀಂ ವಸುಂಧರಾಂ ॥ ೯ ॥
ಉಜ್ಜಹಾರ ಧರಾಂ ಮಗ್ನಾಂ ಪಾತಾಲತಲವಾಸಿನೀಂ ।
ವಾರಾಹಂ ರೂಪಮಾಸ್ಥಾಯ ದೇವದೇವೋ ಜನಾರ್ದನಃ ॥ ೧೦ ॥
ನರಸ್ಯಾರ್ಧತನುಂ ಕೃತ್ವಾ ಸಿಂಹಸ್ಯಾರ್ಧತನುಂ ತಥಾ ।
ಹಿರಣ್ಯಕಶಿಪೋರ್ವಕ್ಷೋ ವಿದದಾರ ನಖಾಂಕುಶೈಃ ॥ ೧೧ ॥

---

೬. ವಾಮನನೂ, ಪರಶುರಾಮನೂ, ರಘುರಾಮನೂ ಯಾವ ಕಾರ್ಯಗಳನ್ನು ಮಾಡಿದರು? ಬುದ್ಧ ಕಲ್ಕಿಗಳ ರೂಪಗಳಿಂದ ಮಹಾವಿಷ್ಣುವು ಏನು ಮಾಡಿದನೆಂಬುದನ್ನು ಹೇಳು.

೭. ಇಂತೆಂದು ಕುಶಲನಾದ ಧರ್ಮಪುತ್ರನು ಪ್ರಶ್ನೆಯನ್ನು ಮಾಡಲು ಆ ಬ್ರಾಹ್ಮಣಶ್ರೇಷ್ಠನು ಮಧುರವಾದ ಧ್ವನಿಯಿಂದ ಆತನಿಗಿಂತೆಂದನು.

೮. ಮಾರ್ಕಂಡೇಯನು ಹೇಳುತ್ತಾನೆ:—ಹಿಂದಿನ ಕಲ್ಪದಲ್ಲಿ ಬ್ರಹ್ಮನಿಗೆ ಸಂತೋಷವನ್ನುಂಟುಮಾಡಲು ನಾರಾಯಣನು ಮೀನಿನ ರೂಪವನ್ನು ತಾಳಿ ಮಹಾಸಮುದ್ರದಲ್ಲಿ ಮುಳುಗಿಹೋಗಿದ್ದ ವೇದಗಳನ್ನೆತ್ತಿಕೊಟ್ಟನು.

೯. ರಾಜನೆ! ಕೂರ್ಮನಾಗಿ ಅಮೃತಮಂಥನಕಾಲದಲ್ಲಿ ಮಂದರಪರ್ವತವನ್ನು ಬೆನ್ನಿನಮೇಲೆ ಧರಿಸಿದನು. ಈಗಲೂ ಆತನೇ ಭೂಮಿಯನ್ನು ಹೊತ್ತಿರುವನು.

೧೦. ದೇವೋತ್ತಮನಾದ ಜನಾರ್ದನನು ನೀರಿನಲ್ಲಿ ಮುಳುಗಿ ಪಾತಾಳದಲ್ಲಿ ಹುದುಗಿಕೊಂಡಿದ್ದ ಭೂಮಿಯನ್ನು ವರಾಹರೂಪದಿಂದ ಉದ್ಧರಿಸಿದನು.

೧೧. ಅರ್ಧಶರೀರವು ಮನುಷ್ಯನಾಗಿಯೂ, ಮುಖವು ಸಿಂಹದ್ದಾಗಿಯೂ ಇರಲು ತನ್ನ ನಖಗಳೆಂಬ ಅಂಕುಶಗಳಿಂದ ಹಿರಣ್ಯಕಶಿಪುವೆಂಬ ರಾಕ್ಷಸನ ವಕ್ಷಸ್ಥಳವನ್ನು ಸೀಳಿದನು.

ಜಟೀ ವಾಮನರೂಪೇಣ ಸ್ತೂಯಮಾನೋ ದ್ವಿಜೋತ್ತಮೈಃ ।
ತದ್ದಿವ್ಯಂ ರೂಪಮಾಸ್ಥಾಯ ಕ್ರಮಿತ್ವಾ ಮೇದಿನೀಂ ಕ್ರಮೈಃ ॥ ೧೨ ॥
ಕೃತವಾಂಶ್ಚ ಬಲಿಂ ಪಶ್ಚಾತ್ಪಾತಾಲತಲವಾಸಿನಂ ।
ಸ್ಥಾಪಯಿತ್ವಾ ಸುರಾನ್ ಸರ್ವಾನ್ಗತೋ ವಿಷ್ಣುಃ ಸ್ವಕಂ ಪುರಂ ॥ ೧೩ ॥
ಜಮದಗ್ನಿಸುತೋ ರಾಮೋ ಭೂತ್ವಾ ಶಸ್ತ್ರಭೃತಾಂ ವರಃ ।
ಕ್ಷತ್ರಿಯಾನ್ಪೃಥಿವೀಪಾಲಾನವಧೀದ್ಧೈಹಯಾದಿಕಾನ್ ॥ ೧೪ ॥
ಕಶ್ಯಪಾಯ ಮಹೀಂ ದತ್ವಾ ಸಪರ್ವತವನಾಕರಾಂ ।
ತಪಸ್ತಪತಿ ದೇವೇಶೋ ಮಹೇಂದ್ರೇಽದ್ಯಾಪಿ ಭಾರತ ॥ ೧೫ ॥
ತತೋ ದಾಶರಥೀ ರಾಮೋ ರಾವಣಂ ದೇವಕಂಟಕಂ ।
ಸಗಣಂ ಸಮರೇ ಹತ್ವಾ ರಾಜ್ಯಂ ದತ್ವಾ ವಿಭೀಷಣೇ ॥ ೧೬ ॥
ಪಾಲಯಿತ್ವಾ ನಯೇದ್ಭೂಮಿಂ ಮಖೈಃ ಸಂತರ್ಪ್ಯ ದೇವತಾಃ ।
ಸ್ವರ್ಗಂ ಗತೋ ಮಹಾತೇಜಾ ರಾಮೋ ರಾಜೀವಲೋಚನಃ ॥ ೧೭ ॥

---

೧೨. ಜಟಾಧಾರಿಯಾಗಿ ದೇವತೆಗಳೆಲ್ಲರೂ ಸ್ತುತಿಸುತ್ತಿರಲು ದಿವ್ಯವಾದ ವಾಮನ ಬ್ರಹ್ಮಚಾರಿಯ ರೂಪವನ್ನು ತಾಳಿ ಭೂಮಿಯನ್ನು ಪಾದಗಳಿಂದ ಅಳೆದನು.

೧೩. ಬಳಿಕ ಬಲಿಚಕ್ರವರ್ತಿಯನ್ನು ಪಾತಾಳಲೋಕದಲ್ಲಿ ವಾಸಿಸುವಂತೆ ಮಾಡಿ ಸಮಸ್ತದೇವತೆಗಳನ್ನೂ ತಮ್ಮತಮ್ಮ ಸ್ಥಾನಗಳಲ್ಲಿ ನಿಲ್ಲಿಸಿ ವೈಕುಂಠ ವನ್ನು ಸೇರಿದನು.

೧೪. ಜಮದಗ್ನಿಮಹರ್ಷಿಗೆ ಪರಶುರಾಮನೆಂಬ ಹೆಸರಿನಿಂದ ಅವತರಿಸಿ, ಶಸ್ತ್ರಧಾರಿಗಳಲ್ಲಿ ಅಗ್ರಗಣ್ಯನೆಂದೆನಿಸಿ ಹೈಹಯನೇ ಮೊದಲಾದ ಕ್ಷತ್ರಿಯರಾಜರ ನ್ನೆಲ್ಲ ನಾಶಮಾಡಿದನು.

೧೫. ಧರ್ಮರಾಜನೆ! ಪರ್ವತಗಳು, ಅರಣ್ಯಗಳು, ಸರೋವರಗಳಿಂದ ಕೂಡಿದ ಸಕಲ ಭೂಮಿಯನ್ನೂ ಕಶ್ಯಪನಿಗೆ ದಾನವಾಗಿ ಕೊಟ್ಟು ಇಂದಿಗೂ ಮಹೇಂದ್ರ ಪರ್ವತದಲ್ಲಿ ಆ ದೇವಾಧಿದೇವನು ತಪಸ್ಸನ್ನಾಚರಿಸುತ್ತಿರುವನು.

೧೬. ಬಳಿಕ ದಶರಥಪುತ್ರನಾದ ರಾಮನಾಗಿ ಬಂದು ದೇವತೆಗಳಿಗೆ ಕಂಟಕಪ್ರಾಯನಾದ ರಾವಣನನ್ನೂ ಅವನ ಪರಿವಾರವನ್ನೂ ಯುದ್ಧದಲ್ಲಿ ಕೊಂದು ಲಂಕಾರಾಜ್ಯವನ್ನು ವಿಭೀಷಣನಿಗಿತ್ತನು.

೧೭. ಧರ್ಮದಿಂದ ರಾಜ್ಯಪರಿಪಾಲನೆಯನ್ನು ಮಾಡುತ್ತ ದೇವತೆಗಳನ್ನು ಯಜ್ಞಗಳಿಂದ ತೃಪ್ತಿಗೊಳಿಸಿ ಮಹಾತೇಜಸ್ವಿಯೂ, ಕಮಲನೇತ್ರನೂ ಆದ ರಾಮನು ಸ್ವರ್ಗಕ್ಕೆ ಹೋದನು.

ವಸುದೇವಗೃಹೇ ಭೂಯಃ ಸಂಕರ್ಷಣಸಹಾಯವಾನ್ ।
ಅವತೀರ್ಣೋ ಜಗನ್ನಾಥೋ ವಾಸುದೇವೋ ಯುಧಿಷ್ಠಿರ ॥ ೧೮ ॥
ಸೋऽವಧೀತ್ತ್ವವ ಸಾಮರ್ಥ್ಯಾದ್ವಧಾರ್ಥಂ ದುಷ್ಟಭೂಭೃತಾಂ ।
ಚಾಣೂರಕಂಸಕೇಶೀನಾಂ ಜರಾಸಂಧಸ್ಯ ಭಾರತ ॥ ೧೯ ॥
ತೇನ ತ್ವಂ ಸುಸಹಾಯೇನ ಹತ್ವಾ ಶತ್ರೂನ್ನರೇಶ್ವರ ।
ಭೋಕ್ಷ್ಯಸೇ ಪೃಥಿವೀಂ ಸರ್ವಾಂ ಭ್ರಾತೃಭಿಃ ಸಹ ಸಂಭೃತಾಂ ॥ ೨೦ ॥
ತಥಾ ಬುದ್ಧತ್ವಮಪರಂ ನವಮಂ ಪ್ರಾಪ್ಸ್ಯತೇऽಚ್ಯುತಃ ।
ಶಾಂತಿಮಾನ್ದೇವದೇವೇಶೋ ಮಧುಹಂತಾ ಮಧುಪ್ರಿಯಃ ॥ ೨೧ ॥
ತೇನ ಬುದ್ಧಸ್ವರೂಪೇಣ ದೇವೇನ ಪರಮೇಷ್ಠಿನಾ ।
ಭವಿಷ್ಯತಿ ಜಗತ್ಸರ್ವಂ ಮೋಹಿತಂ ಸ ಚರಾಚರಂ ॥ ೨೨ ॥
ನ ಶ್ರೋಷ್ಯಂತಿ ಪಿತುಃ ಪುತ್ರಾಸ್ತದಾಪ್ರಭೃತಿ ಭಾರತ ।
ನ ಗುರೋರ್ಬಾಂಧವಾಃ ಶಿಷ್ಯಾ ಭವಿಷ್ಯತ್ಯಧರೋತ್ತರಂ ॥ ೨೩ ॥

---

೧೮. ಯುಧಿಷ್ಠಿರನೆ! ಬಳಿಕ ಜಗನ್ನಾಥನು ವಸುದೇವನ ಮನೆಯಲ್ಲಿ ಸಂಕರ್ಷಣನೆಂಬ ಬಲರಾಮನ ಸಹಾಯವುಳ್ಳವನಾಗಿ ವಾಸುದೇವನೆಂಬ ಹೆಸರಿನಿಂದ ಅವತರಿಸಿದನು.

೧೯. ಭರತಕುಲತಿಲಕನೆ! ಚಾಣೂರ, ಕಂಸ, ಕೇಶಿ, ಜರಾಸಂಧರೇ ಮೊದಲಾದ ದುಷ್ಟರನ್ನು ನಿಗ್ರಹಿಸುವುದಕ್ಕಾಗಿಯೇ ಬಂದು ನಿನ್ನ ಸಹಾಯದಿಂದ ಅದನ್ನೂ ಮಾಡಿದನು.

೨೦. ಚಕ್ರವರ್ತಿಯೆ! ಆತನ ಅಪಾರವಾದ ಸಹಾಯದಿಂದಲೇ ನೀನೂ ನಿನ್ನ ಶತ್ರುಗಳನ್ನು ನಿಗ್ರಹಿಸಿ, ಸರ್ವಸಮೃದ್ಧವಾದ ಭೂಮಿಯನ್ನು ತಮ್ಮಂದಿರೊಡನೆ ಅನುಭವಿಸುವೆ.

೨೧. ಶಾಂತಗುಣಭರಿತನೂ, ದೇವಾಧಿದೇವನೂ, ಮಧುನಿಗ್ರಹಿಯೂ, ಮಧುಪ್ರಿಯನೂ, ನಾಶರಹಿತನೂ ಆದ ನಾರಾಯಣನು ಮುಂದೆ ಒಂಬತ್ತನೆಯ ಬುದ್ಧನ ಜನ್ಮವನ್ನು ತಾಳುವನು.

೨೨. ದೇವದೇವನೂ, ಲೋಕನಿಯಾಮಕನೂ ಆದ ಆತನ ಬುದ್ಧ ಸ್ವರೂಪದಿಂದ ಚರಾಚರಾತ್ಮಕವಾದ ಸಕಲ ಭೂಮಂಡಲವೂ ಭ್ರಾಂತಿಗೊಳ್ಳುವುದು.

೨೩. ಧರ್ಮನಂದನನೆ! ಅಂದಿನಿಂದ ತಂದೆಯ ಮಾತನ್ನು ಮಕ್ಕಳು ಕೇಳುವುದಿಲ್ಲ. ಗುರುಗಳಿಗೆ ಶಿಷ್ಯರು ಬಂಧುಗಳಾಗುವುದಿಲ್ಲ. ಉಚ್ಚನೀಚಗಳು ತಲೆಕೆಳಗಾಗುವುವು.

ಜಿತೋ ಧರ್ಮೋ ಹ್ಯಧರ್ಮೇಣ ಚಾಽಸತ್ಯೇನ ಋತಂ ಜಿತಂ ।
ಜಿತಾಶ್ಚೌರೈಶ್ಚ ರಾಜಾನಃ ಸ್ತ್ರೀಭಿಶ್ಚ ಪುರುಷಾ ಜಿತಾಃ ॥ ೨೪ ॥
ಸೀದಂತಿ ಚಾಽಗ್ನಿಹೋತ್ರಾಣಿ ಗುರೌ ಪೂಜಾ ಪ್ರಣಶ್ಯತಿ ।
ಸೀದಂತಿ ಮಾನವಾ ಧರ್ಮಾಃ ಕಲೌ ಪ್ರಾಪ್ತೇ ಯುಧಿಷ್ಠಿರ ॥ ೨೫ ॥
ದ್ವಾದಶೇ ದಶಮೇ ವರ್ಷೇ ನಾರೀ ಗರ್ಭವತೀ ಭವೇತ್ ।
ಕನ್ಯಾಸ್ತತ್ರ ಪ್ರಸೂಯಂತೇ ಬ್ರಾಹ್ಮಣಾ ಹರಿಪಿಂಗಲಾಃ ॥ ೨೬ ॥
ಭವಿಷ್ಯತಿ ತತಃ ಕಲ್ಕಿರ್ದಶಮೋ ಜನ್ಮನಿ ಪ್ರಭುಃ ॥ ೨೭ ॥
ಏತತ್ತೇ ಕಥಿತಂ ರಾಜನ್ದೇವಸ್ಯ ಪರಮೇಷ್ಠಿನಃ ।
ಕಾರಣಂ ದಶಜನ್ಮಾನಾಂ ಸರ್ವಪಾಪಕ್ಷಯಂಕರಂ ॥ ೨೮ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಽಶೀತಿಸಾಹಸ್ರ್ಯಾಂ ಸಂಹಿತಾಯಾಂ
ಪಂಚಮೇ ಆವಂತ್ಯಖಂಡೇ ತೃತೀಯೇ ರೇವಾಖಂಡೇ
"ಶ್ವೇತವಾರಾಹತೀರ್ಥಮಾಹಾತ್ಮ್ಯವರ್ಣನಂ"
ನಾಮೈಕಪಂಚಾಶದಧಿಶತತಮೋಽಧ್ಯಾಯಃ

---

೨೪. ಧರ್ಮಕ್ಕೆ ಅಧರ್ಮದಿಂದ ಸೋಲುಂಟಾಗುವುದು. ಅಸತ್ಯವು ಸತ್ಯವನ್ನು ಜಯಿಸುವುದು. ಚೋರರಿಂದ ರಾಜರು ಪರಾಜಿತರಾಗುವರು. ಪುರುಷರು ಸ್ತ್ರೀಯರ ವಶವರ್ತಿಗಳಾಗುವರು.

೨೫. ಅಗ್ನಿಹೋತ್ರಗಳು ನಷ್ಟವಾಗುವುವು. ಗುರುಗಳಿಗೆ ಮರ್ಯಾದೆಯು ತಪ್ಪಿಹೋಗುವುದು. ಯುಧಿಷ್ಠಿರನೆ! ಕಲಿಯುಗವು ಪ್ರಾಪ್ತವಾಗಲು ಮಾನವ ಧರ್ಮಗಳೆಲ್ಲವೂ ನಶಿಸಿಹೋಗುವುವು.

೨೬. ಹನ್ನೆರಡು ಹತ್ತು ವರ್ಷಗಳ ಹುಡುಗಿಯರು ಗರ್ಭವತಿಯರಾಗುವರು. ಕನ್ಯೆಯರೇ ಮಕ್ಕಳನ್ನು ಹೆರುವರು. ಬ್ರಾಹ್ಮಣರು ಹರಿಪಿಂಗಳರಾಗುವರು.

೨೭. ಕಡೆಗೆ ಲೋಕೇಶ್ವರನು ಹತ್ತನೆಯ ಜನ್ಮದಲ್ಲಿ ಕಲ್ಕಿಯಾಗಿ ಅವತರಿಸುವನು.

೨೮. ರಾಜೇಂದ್ರನೆ! ಇಂತು ದೇವೇಶ್ವರನೂ, ಲೋಕನಿಯಾಮಕನೂ ಆದ ಶ್ರೀಮನ್ನಾರಾಯಣನ ದಶಾವತಾರಗಳಿಗೆ ಕಾರಣಗಳನ್ನೊಳಗೊಂಡ ಸಕಲ ಪಾಪನಾಶಕವಾದ ಕಥೆಯನ್ನು ಹೇಳಿದೆನು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ
ಶ್ರೀ ಸ್ಕಾಂದಮಹಾಪುರಾಣದ ಐದನೆಯ ಆವಂತ್ಯಖಂಡದ ಮೂರನೆಯ ರೇವಾಖಂಡದಲ್ಲಿ
"ಶ್ವೇತವಾರಾಹತೀರ್ಥಮಾಹಾತ್ಮ್ಯವರ್ಣನ"ವೆಂಬ
ನೂರೈವತ್ತೊಂದನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

# ಅಥ ದ್ವಿಪಂಚಾಶದಧಿಕಶತತಮೋಽಧ್ಯಾಯಃ

## ಭಾರ್ಗಲೇಶ್ವರತೀರ್ಥಮಾಹಾತ್ಮ್ಯವರ್ಣನಂ

ಶ್ರೀ ಮಾರ್ಕಂಡೇಯ ಉವಾಚ:—

ತತೋ ಗಚ್ಛೇದ್ಧರಾಪಾಲ ಭಾರ್ಗಲೇಶ್ವರಮುತ್ತಮಂ ।
ಶಂಕರಂ ಜಗತಃ ಪ್ರಾಣಂ ಸ್ಮೃತಮಾತ್ರಾಘನಾಶನಂ ॥ ೧ ॥
ತತ್ರ ತೀರ್ಥೇ ತು ಯಃ ಸ್ನಾತ್ವಾ ಪೂಜಯೇತ್ಪರಮೇಶ್ವರಂ ।
ಅಶ್ವಮೇಧಸ್ಯ ಯಜ್ಞಸ್ಯ ಫಲಂ ಪ್ರಾಪ್ನೋತಿ ಮಾನವಃ ॥ ೨ ॥
ತತ್ರ ತೀರ್ಥೇ ತು ಯಃ ಕಶ್ಚಿತ್ಪ್ರಾಣತ್ಯಾಗಂ ಕರಿಷ್ಯತಿ ।
ಅನಿವರ್ತಿಕಾ ಗತಿಸ್ತಸ್ಯ ರುದ್ರಲೋಕಾದಸಂಶಯಂ ॥ ೩ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ
ಪಂಚಮೇ ಆವಂತ್ಯಖಂಡೇ ತೃತೀಯೇ ರೇವಾಖಂಡೇ
"ಭಾರ್ಗಲೇಶ್ವರತೀರ್ಥಮಾಹಾತ್ಮ್ಯವರ್ಣನಂ" ನಾಮ
ದ್ವಿಪಂಚಾಶದಧಿಕಶತತಮೋಽಧ್ಯಾಯಃ

---

## ಕನ್ನಡದ ಅನುವಾದ

### ಭಾರ್ಗಲೇಶ್ವರತೀರ್ಥಮಾಹಾತ್ಮ್ಯವರ್ಣನ

೧. ಮಾರ್ಕಂಡೇಯನು ಹೇಳುತ್ತಾನೆ:—ಮಹೀಪಾಲಕನೆ! ಬಳಿಕ ಉತ್ತಮವಾದ ಭಾರ್ಗಲೇಶ್ವರತೀರ್ಥಕ್ಕೆ ಹೋಗಬೇಕು. ಅಲ್ಲಿ ಜಗತ್ತಿಗೆ ಪ್ರಾಣಸಮಾನನೂ, ಸ್ಮರಣಮಾತ್ರದಿಂದಲೇ ಪಾಪಗಳನ್ನು ಕಳೆಯುವವನೂ ಆದ ಶಂಕರನು ನೆಲಸಿರುವನು.

೨. ಯಾವ ಮಾನವನು ಆ ತೀರ್ಥದಲ್ಲಿ ಮಿಂದು ಪರಮೇಶ್ವರನ ಪೂಜೆಯನ್ನು ಮಾಡುವನೊ, ಅವನು ಅಶ್ವಮೇಧಯಜ್ಞದ ಮಹಾಫಲವನ್ನು ಪಡೆಯುವನು.

೩. ಆ ತೀರ್ಥದಲ್ಲಿ ಯಾವ ಪ್ರಾಣಿಯಾದರೂ ಪ್ರಾಣವನ್ನು ತ್ಯಜಿಸಿದರೆ ಅದು ರುದ್ರಲೋಕಕ್ಕೆ ಹೋಗಿ ಮತ್ತೆ ಭೂಮಿಗೆ ಬರುವುದಿಲ್ಲವೆಂಬುದು ನಿಶ್ಚಯವು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ
ಶ್ರೀ ಸ್ಕಾಂದಮಹಾಪುರಾಣದ ಐದನೆಯ ಆವಂತ್ಯಖಂಡದ ಮೂರನೆಯ ರೇವಾಖಂಡದಲ್ಲಿ
"ಭಾರ್ಗಲೇಶ್ವರತೀರ್ಥಮಾಹಾತ್ಮ್ಯವರ್ಣನ"ವೆಂಬ
ನೂರೈವತ್ತೆರಡನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

## ಅಥ ತ್ರಿಪಂಚಾಶದಧಿಕಶತತಮೋಽಧ್ಯಾಯಃ

### ಆದಿತ್ಯೇಶ್ವರತೀರ್ಥಮಾಹಾತ್ಮ್ಯವರ್ಣನಂ

ಶ್ರೀ ಮಾರ್ಕಂಡೇಯ ಉವಾಚ :—

ತಸ್ಯೈವಾಽನಂತರಂ ಚಾಽನ್ಯದ್ರವಿತೀರ್ಥಮನುತ್ತಮಂ ।
ಯಸ್ಯ ಸಂದರ್ಶನಾದೇವ ಮುಚ್ಯಂತೇ ಪಾತಕೈರ್ನರಾಃ ॥ ೧ ॥
ರವಿತೀರ್ಥೇ ತು ಯಃ ಸ್ನಾತ್ವಾ ನರಃ ಪಶ್ಯತಿ ಭಾಸ್ಕರಂ ।
ತಸ್ಯ ಯತ್ಫಲಮುದ್ದಿಷ್ಟಂ ಸ್ವಯಂ ದೇವೇನ ತಚ್ಛೃಣು ॥ ೨ ॥
ನಾಽಂಧೋ ನ ಮೂಕೋ ಬಧಿರಃ ಕುಲೇ ಭವತಿ ಕಶ್ಚನ ।
ಕುರೂಪಃ ಕುನಖೀ ವಾಽಪಿ ತಸ್ಯ ಜನ್ಮಾನಿ ಷೋಡಶ ॥ ೩ ॥
ದದ್ರುಚಿತ್ರಕಕುಷ್ಠಾನಿ ಮಂಡಲಾನಿ ವಿಚರ್ಚಿಕಾ ।
ನಶ್ಯಂತಿ ದೇವಭಕ್ತಸ್ಯ ಷಣ್ಮಾಸಾನ್ನಾಽತ್ರ ಸಂಶಯಃ ॥ ೪ ॥
ಚರಿತಂ ತಸ್ಯ ದೇವಸ್ಯ ಪುರಾಣೇ ಯಚ್ಛ್ರುತಂ ಮಯಾ ।
ನ ತತ್ಕಥಯಿತುಂ ಶಕ್ಯಂ ಸಂಕ್ಷೇಪೇಣ ನೃಪೋತ್ತಮ ॥ ೫ ॥

---

### ಕನ್ನಡದ ಅನುವಾದ

### ಆದಿತ್ಯೇಶ್ವರತೀರ್ಥಮಾಹಾತ್ಮ್ಯವರ್ಣನ

೧. ಮಾರ್ಕಂಡೇಯನು ಹೇಳುತ್ತಾನೆ :—ಇದಾದ ಬಳಿಕ ರವಿತೀರ್ಥವೆಂಬ ಸರ್ವೋತ್ತಮವಾದೊಂದು ತೀರ್ಥವಿರುವುದು. ಅದನ್ನು ನೋಡಿದ ಮಾತ್ರದಿಂದಲೇ ಮನುಜರು ತಮ್ಮ ಪಾತಕಗಳಿಂದ ಬಿಡುಗಡೆಯನ್ನು ಹೊಂದುವರು.

೨. ರವಿತೀರ್ಥದಲ್ಲಿ ಸ್ನಾನವನ್ನುಮಾಡಿ ಅಲ್ಲಿರುವ ಸೂರ್ಯದೇವನನ್ನು ಯಾವನು ನೋಡುವನೊ, ಅವನಿಗೆ ಯಾವ ಫಲವು ಲಭಿಸುವುದೆಂಬುದನ್ನು ಮಹಾದೇವನೇ ನಿರ್ಣಯಿಸಿರುವನು, ಕೇಳು.

೩. ಆತನಿಗೆ ಹದಿನಾರು ಜನ್ಮಗಳಲ್ಲಿಯೂ ಆತನ ವಂಶದಲ್ಲಿ ಕುರುಡನಾಗಲಿ, ಮೂಗನಾಗಲಿ, ಕಿವುಡನಾಗಲಿ, ಕುರೂಪಿಯಾಗಲಿ, ಕುನಖಿಯಾಗಲಿ ಹುಟ್ಟುವುದಿಲ್ಲ.

೪. ಈ ದೇವನನ್ನು ಆರು ತಿಂಗಳು ಅನನ್ಯಭಕ್ತಿಯಿಂದ ಸೇವಿಸಿದವನ ಕುಷ್ಠ, ತೊನ್ನು, ಕಜ್ಜಿಗಳೇ ಮುಂತಾದ ಸಕಲರೋಗಗಳೂ ನಾಶವಾಗುವುದರಲ್ಲಿ ಸಂದೇಹವಿಲ್ಲ.

೫. ಚಕ್ರವರ್ತಿಯೆ! ಪುರಾಣಗಳಲ್ಲಿ ಆ ದೇವದೇವನ ಚರಿತ್ರೆಯನ್ನು ನಾನು ಕೇಳಿರುವಷ್ಟು ಹೇಳಲು ಸ್ವಲ್ಪಕಾಲದಲ್ಲಿ ಶಕ್ಯವಾಗುವುದಿಲ್ಲ.

ತತ್ರ ತೀರ್ಥೇ ತು ಯದ್ದಾನಂ ರವಿಮುದ್ದಿಶ್ಯ ದೀಯತೇ ।
ವಿಧಿನಾ ಪಾತ್ರನಿಪ್ರಾಯ ತಸ್ಯಾಂತೋ ನಾಽಸ್ತಿ ಕರ್ಹಿಚಿತ್ ॥ ೬ ॥
ಅಯನೇ ವಿಷುವೇ ಚೈವ ಚಂದ್ರಸೂರ್ಯಗ್ರಹೇ ತಥಾ ।
ರವಿತೀರ್ಥೇ ಪ್ರದತ್ತಾನಾಂ ದಾನಾನಾಂ ಫಲಮುತ್ತಮಂ ॥ ೭ ॥
ಸಂಕ್ರಾಂತೌ ಯಾನಿ ದಾನಾನಿ ಹವ್ಯಕವ್ಯಾನಿ ಭಾರತ ।
ಅಪಾಮಿವ ಸಮುದ್ರಸ್ಯ ತೇಷಾಮಂತೋ ನ ಲಭ್ಯತೇ ॥ ೮ ॥
ಯೇನ ಯೇನ ಯದಾ ದತ್ತಂ ಯೇನ ಯೇನ ಯದಾ ಹುತಂ ।
ತಸ್ಯ ತಸ್ಯ ತದಾ ಕಾಲೇ ಸವಿತಾ ಪ್ರತಿದಾಯಕಃ ॥ ೯ ॥
ಸಪ್ತ ಜನ್ಮಾನಿ ತಾನ್ಯೇವ ದದಾತ್ಯರ್ಕಃ ಪುನಃ ಪುನಃ ।
ಶತಮಿಂದುಕ್ಷಯೇ ದಾನಂ ಸಹಸ್ರಂ ತು ದಿನಕ್ಷಯೇ ॥ ೧೦ ॥
ಸಂಕ್ರಾಂತೌ ಶತಸಾಹಸ್ರಂ ವ್ಯತೀಪಾತೇ ತ್ವನಂತಕಂ ॥ ೧೧ ॥

ಯುಧಿಷ್ಠಿರ ಉವಾಚ:—

ರವಿತೀರ್ಥಂ ಕಥಂ ತಾತ ಪುಣ್ಯಾತ್ಪುಣ್ಯತರಂ ಸ್ಮೃತಂ ।
ವಿಸ್ತರೇಣ ಮಮಾಖ್ಯಾಹಿ ಶ್ರವಣೌ ಮಮ ಲಂಪಟೌ ॥ ೧೨ ॥

---

೬. ಆ ತೀರ್ಥದಲ್ಲಿ ವಿಧಿವಿಹಿತರೀತಿಯಿಂದ ಸತ್ಪಾತ್ರನಾದ ಬ್ರಾಹ್ಮಣನಿಗೆ ಸೂರ್ಯಪ್ರೀತಿಯಾಗಿ ಕೊಟ್ಟ ದಾನದ ಫಲಕ್ಕೆ ಅಂತವೇ ಇರುವುದಿಲ್ಲ.

೭. ಅಯನ ಪುಣ್ಯಕಾಲಗಳಲ್ಲಿಯೂ, ವಿಷುವತ್ಕಾಲಗಳಲ್ಲಿಯೂ, ಚಂದ್ರ ಸೂರ್ಯರ ಗ್ರಹಣಕಾಲಗಳಲ್ಲಿಯೂ ಸೂರ್ಯತೀರ್ಥದಲ್ಲಿ ಮಾಡಿದ ದಾನಗಳಿಗೆ ಉತ್ತಮ ಫಲವುಂಟು.

೮–೯. ಧರ್ಮರಾಜನೆ! ಸಂಕ್ರಮಣದ ದಿನಗಳಲ್ಲಿ ಯಾವ ದಾನಗಳನ್ನೂ ಹವ್ಯಕವ್ಯಗಳನ್ನೂ ಮಾಡುವರೊ, ಅವುಗಳ ಫಲವು ಸಮುದ್ರೋದಕದಂತೆ ಅನಂತವಾಗಿರುವುದು. ಯಾವ ಯಾವ ಕಾಲಗಳಲ್ಲಿ ಯಾರು ಯಾರು ದಾನ ಗಳನ್ನೂ ಹೋಮಗಳನ್ನೂ ಮಾಡುವರೊ, ಆಗಲೆಲ್ಲ ಅವರಿಗೆ ಸೂರ್ಯನು ತಾನೇ ಸಾಕ್ಷಾತ್ತಾಗಿ ಪ್ರತಿಫಲಗಳನ್ನು ಕೊಡುವವನಾಗಿರುವನು.

೧೦–೧೧. ಆ ದೇವನು ಏಳು ಜನ್ಮಗಳಲ್ಲಿಯೂ ಮತ್ತೆ ಮತ್ತೆ ಅದೇ ಫಲಗಳನ್ನೇ ಕೊಡುತ್ತಿರುವನು. ಪ್ರಭಾತದಲ್ಲಿ ಮಾಡಿದ ದಾನವು ನೂರರಷ್ಟು, ಸಾಯಂಕಾಲದ ದಾನವು ಸಾವಿರದಷ್ಟು, ಸಂಕ್ರಮಣಕಾಲದ ದಾನವು ಲಕ್ಷ ದಷ್ಟು, ವ್ಯತೀಪಾತದಿನದ ದಾನವು ಅನಂತವೂ ಆದ ಫಲಗಳನ್ನು ಕೊಡುವುವು.

೧೨. ಯುಧಿಷ್ಠಿರನು ಹೇಳುತ್ತಾನೆ:—ಮಹರ್ಷಿಯೆ! ಈ ರವಿತೀರ್ಥವು ಪುಣ್ಯತೀರ್ಥಗಳಲ್ಲಿ ಹೇಗೆ ಪುಣ್ಯತಮವಾಯಿತು? ಇದನ್ನು ನನಗೆ ವಿಸ್ತಾರವಾಗಿ ಹೇಳು. ಕೇಳಲು ನನ್ನ ಕಿವಿಗಳು ಆಶೆಗೊಂಡಿರುವುವು.

ಶ್ರೀ ಮಾರ್ಕಂಡೇಯ ಉವಾಚ:—

ಶೃಣುಷ್ವಾವಹಿತೋ ಭೂತ್ವಾ ಹ್ಯಾದಿತ್ಯೇಶ್ವರಮುತ್ತಮಂ ।
ಉತ್ತರೇ ನರ್ಮದಾಕೂಲೇ ಸರ್ವವ್ಯಾಧಿವಿನಾಶನಂ ॥ ೧೩ ॥
ಪುರಾ ಕೃತಯುಗಸ್ಯಾದೌ ಜಾಬಾಲಿರ್ಬ್ರಾಹ್ಮಣೋಽಭವತ್ ।
ವಸಿಷ್ಠಾನ್ವಯಸಂಭೂತೋ ವೇದಶಾಸ್ತ್ರಾರ್ಥಪಾರಗಃ ॥ ೧೪ ॥
ಪತಿವ್ರತಾ ಸಾಧುಶೀಲಾ ತಸ್ಯ ಭಾರ್ಯಾ ಮನಸ್ವಿನೀ ।
ಋತುಕಾಲೇ ತು ಸಾ ಗತ್ವಾ ಭರ್ತಾರಮಿದಮಬ್ರವೀತ್ ॥ ೧೫ ॥
ವರ್ತತೇ ಋತುಕಾಲೋ ಮೇ ಭರ್ತಾರಂ ತ್ವಾಮುಪಸ್ಥಿತಾ ।
ಭಜ ಮಾಂ ಪ್ರೀತಿಸಂಯುಕ್ತಃ ಪುತ್ರಕಾಮಾಂ ತು ಕಾಮಿನೀಂ ॥ ೧೬ ॥
ಏವಮುಕ್ತೋ ದ್ವಿಜಃ ಪ್ರಾಹ ಪ್ರಿಯೇಽದ್ಯಾಽಹಂ ವ್ರತಾನ್ವಿತಃ ।
ಗಚ್ಛೇದಾನೀಂ ವರಾರೋಹೇ ದಾಸ್ಯ ಋತ್ವಂತರೇ ಪುನಃ ॥ ೧೭ ॥
ಪುನರ್ದ್ವಿತೀಯೇ ಸಂಪ್ರಾಪ್ತೇ ಋತುಕಾಲೇಽಪ್ಯುಪಸ್ಥಿತಾ ।
ಪುನಃ ಸಾ ಛಂದಿತಾ ತೇನ ವ್ರತಸ್ಥೋಽದ್ಯೇತಿ ಭಾರತ ॥ ೧೮ ॥

---

೧೩. ಮಾರ್ಕಂಡೇಯನು ಹೇಳುತ್ತಾನೆ:—ನರ್ಮದೆಯ ಉತ್ತರ ತೀರದಲ್ಲಿ ಸಕಲರೋಗನಿವಾರಕವಾಗಿ ನೆಲಸಿರುವ ಆದಿತ್ಯೇಶ್ವರವೆಂಬ ತೀರ್ಥದ ಚರಿತ್ರೆಯನ್ನು ಸಾವಧಾನದಿಂದ ಕೇಳು.

೧೪. ಹಿಂದೆ ಕೃತಯುಗದ ಆದಿಯಲ್ಲಿ ವಸಿಷ್ಠಗೋತ್ರದಲ್ಲಿ ಹುಟ್ಟಿದವನೂ, ವೇದಶಾಸ್ತ್ರಗಳ ತಾತ್ಪರ್ಯವನ್ನರಿತವನೂ ಆದ ಜಾಬಾಲಿಯೆಂಬ ಬ್ರಾಹ್ಮಣನೊಬ್ಬನಿದ್ದನು.

೧೫. ಆತನ ಪತ್ನಿಯು ಪತಿವ್ರತೆಯೂ, ಸಾಧುಚಾರಿತ್ರವುಳ್ಳವಳೂ, ಪತಿಯ ಇಚ್ಛೆಯಂತೆ ನಡೆಯುವವಳೂ ಆಗಿದ್ದಳು.

೧೬. ಒಮ್ಮೆ ಋತುಕಾಲದ ಸ್ನಾನವನ್ನು ಮಾಡಿಕೊಂಡು ಆಕೆಯು ಪತಿಯ ಬಳಿಗೈದಿ ಇಂತೆಂದಳು. "ಋತುಕಾಲದಲ್ಲಿರುವ ನಾನು ಪತಿಯಾದ ನಿನ್ನ ಬಳಿಗೆ ಬಂದಿರುವೆನು.

೧೭. ಪುತ್ರಲಾಲಸೆಯುಳ್ಳವಳೂ, ಕಾಮಾತುರಳೂ ಆದ ನನ್ನೊಡನೆ ಸೇರು." ಇಂತೆಂದ ಪತ್ನಿಗೆ ಆ ಬ್ರಾಹ್ಮಣನೆಂದನು. "ಪ್ರಿಯಳೆ! ಇಂದು ನಾನು ವ್ರತವೊಂದನ್ನು ಕೈಗೊಂಡಿರುವೆನು.

೧೮. ಸುಂದರಿಯೆ! ಈಗ ಹೊರಡು. ಮತ್ತೊಂದು ಋತುಕಾಲದಲ್ಲಿ ನಿನ್ನ ಅಭಿಲಾಷೆಯನ್ನು ಪೂರ್ತಿಗೊಳಿಸುವೆನು." ಎರಡನೆಯ ಋತುಕಾಲದಲ್ಲಿಯೂ ಆಕೆಯು ಆತನ ಬಳಿಗೆ ಬಂದಳು.

ಇತ್ಥಂ ವಾ ಬಹುಶಸ್ತೇನ ಭಂದಿತಾ ಚ ಪುನಃ ಪುನಃ ।
ನಿರಾಶಾ ಚಾಽಭವತ್ತತ್ರ ಭರ್ತಾರಂ ಪ್ರತಿ ಭಾಮಿನೀ ॥ ೧೯ ॥
ದುಃಖೇನ ಮಹತಾವಿಷ್ಟಾ ವಿಧಾಯಾಽನಶನಂ ಮೃತಾ ।
ತೇನ ಭ್ರೂಣಹತೇನೈವ ಪಾಪೇನ ಸಹಸಾ ದ್ವಿಜಃ ॥ ೨೦ ॥
ಶೀರ್ಣಘ್ರಾಣಾಂಘ್ರಿರಭವತ್ತಪಃ ಸರ್ವಂ ನನಾಶ ಚ ।
ದೃಷ್ಟ್ವಾತ್ಮಾನಂ ಸ ಕುಷ್ಠೇನ ವ್ಯಾಪ್ತಂ ಬ್ರಾಹ್ಮಣಸತ್ತಮಃ ॥ ೨೧ ॥
ವಿಷಾದಂ ಪರಮಂ ಗತ್ವಾ ನರ್ಮದಾತಟಮಾಶ್ರಿತಃ ।
ಅಪೃಚ್ಛದ್ಭಾಸ್ಕರಂ ತೀರ್ಥಂ ದ್ವಿಜೇಭ್ಯೋ ದ್ವಿಜಸತ್ತಮಃ ॥ ೨೨ ॥
ಆರೋಗ್ಯಂ ಭಾಸ್ಕರಾದಿಚ್ಛೇದಿತಿ ಸಂಚಿಂತ್ಯ ಚೇತಸಿ ।
ಕುತಸ್ತದ್ಭಾಸ್ಕರಂ ತೀರ್ಥಂ ಭೋ ದ್ವಿಜಾಃ ಕಥ್ಯತಾಂ ಮಮ ॥ ೨೩ ॥
ತಪಸ್ತಪ್ಸ್ಯಾಮ್ಯಹಂ ಗತ್ವಾ ತಸ್ಮಿಂಸ್ತೀರ್ಥೇ ಸುಭಾವಿತಃ ॥ ೨೪ ॥

ದ್ವಿಜಾ ಊಚುಃ:—

ರೇವಾಯಾ ಉತ್ತರೇ ಕೂಲೇ ಆದಿತ್ಯೇಶ್ವರ ನಾಮತಃ ।
ವಿದ್ಯತೇ ಭಾಸ್ಕರಂ ತೀರ್ಥಂ ಸರ್ವವ್ಯಾಧಿವಿನಾಶನಂ ॥ ೨೫ ॥

೧೯. ಧರ್ಮನಂದನನೆ! ಆಗಲೂ ತಾನು ವ್ರತಸ್ಥನಾಗಿರುವೆನೆಂದು ಹೇಳಿ ಆಕೆಯನ್ನು ನಿರಾಕರಿಸಿದನು. ಹೀಗೆ ಅನೇಕವೇಳೆ ಆಕೆಯು ನಿರಾಕರಿಸಲ್ಪಟ್ಟಳು.

೨೦. ಆ ಪತಿವ್ರತೆಯು ಪತಿಯ ಸಂಗಮದ ವಿಷಯದಲ್ಲಿ ನಿರಾಶಳಾಗಿ ಮಹತ್ತರವಾದ ದುಃಖದಿಂದ ತಾನೂ ಉಪವಾಸವ್ರತವನ್ನು ಕೈಗೊಂಡು ದೇಹ ತ್ಯಾಗವನ್ನು ಮಾಡಿದಳು.

೨೧. ಈ ಭ್ರೂಣಹತ್ಯೆಯ ಪಾತಕದಿಂದ ಆತನ ಮೂಗೂ, ಪಾದಗಳೂ ಕುಷ್ಠದಿಂದ ಕಳೆದುಹೋಗಿ ತಪಸ್ಸೆಲ್ಲವೂ ನಾಶವಾಯಿತು.

೨೨—೨೩. ಆ ಬ್ರಾಹ್ಮಣೋತ್ತಮನು ಕುಷ್ಠರೋಗದಿಂದ ವ್ಯಾಪ್ತವಾದ ತನ್ನ ದೇಹವನ್ನು ನೋಡಿಕೊಂಡು ಅತ್ಯಂತ ದುಃಖಾಕ್ರಾಂತನಾಗಿ ನರ್ಮದಾತೀರ ವನ್ನು ಸೇರಿದನು. ಭಾಸ್ಕರನಿಂದ ಆರೋಗ್ಯವನ್ನು ಬಯಸಬೇಕೆಂಬ ವೃದ್ಧವಾಕ್ಯ ವನ್ನು ಮನಸ್ಸಿನಲ್ಲಿ ತಂದುಕೊಂಡು ಅಲ್ಲಿದ್ದ ಬ್ರಾಹ್ಮಣರಲ್ಲಿ ಭಾಸ್ಕರತೀರ್ಥ ವೆಲ್ಲಿರುವುದೆಂದು ಪ್ರಶ್ನೆಮಾಡಿದನು.

೨೪. "ಎಲೈ ಬ್ರಾಹ್ಮಣರಿರಾ! ಆ ಭಾಸ್ಕರತೀರ್ಥವೆಲ್ಲಿರುವುದೆಂಬುದನ್ನು ನನಗೆ ಹೇಳಿರಿ. ಅಲ್ಲಿಗೆ ಹೋಗಿ ನಾನು ಚಿತ್ತೈಕಾಗ್ರತೆಯಿಂದ ತಪಸ್ಸನ್ನಾಚರಿ ಸುವೆನು."

೨೫. ದ್ವಿಜರು ಹೇಳುತ್ತಾರೆ:—"ರೇವಾನದಿಯ ಉತ್ತರ ತೀರದಲ್ಲಿ ಆದಿತ್ಯೇ ಶ್ವರನಿರುವನು. ಅಲ್ಲಿಯೇ ಸರ್ವವ್ಯಾಧಿಪರಿಹಾರಕವಾದ ಭಾಸ್ಕರತೀರ್ಥವೂ ಇರುವುದು.

ತತ್ರ ಯಾಹ್ಯವಿಚಾರೇಣ ಗಂತುಂ ಚೇಚ್ಛಕ್ಯತೇ ತ್ವಯಾ ।
ಏವಮುಕ್ತೋ ದ್ವಿಜೈರ್ವಿಪ್ರೋ ಗಂತುಂ ತತ್ರ ಪ್ರಚಕ್ರಮೇ ॥ ೨೬ ॥
ವ್ಯಾಧಿನಾ ಪರಿಭೂತಸ್ತು ಘೋರೇಣ ಪ್ರಾಣಹಾರಿಣಾ ।
ಯದಾ ಗಂತುಂ ನ ಶಕ್ನೋತಿ ತದಾ ತೇನ ವಿಚಿಂತಿತಂ ॥ ೨೭ ॥
ಸಾಮರ್ಥ್ಯಂ ಬ್ರಾಹ್ಮಣಾನಾಂ ಹಿ ವಿದ್ಯತೇ ಭುವನತ್ರಯೇ ।
ಲಿಂಗಪಾತಃ ಕೃತೋ ವಿಪ್ರೈರ್ದೇವದೇವಸ್ಯ ಶೂಲಿನಃ ॥ ೨೮ ॥
ಸಮುದ್ರಃ ಶೋಷಿತೋ ವಿಪ್ರೈರ್ವಿಂಧ್ಯಶ್ಚಾಽಪಿ ನಿವಾರಿತಃ ।
ಅಹಮಪ್ಯತ್ರ ಸಂಸ್ಥಸ್ತು ಹ್ಯಾನಯಿಷ್ಯಾಮಿ ಭಾಸ್ಕರಂ ॥ ೨೯ ॥
ತಪೋಬಲೇನ ಮಹತಾ ಹ್ಯಾದಿತ್ಯೇಶ್ವರಸಂಜ್ಞಿತಂ ।
ಇತಿ ನಿಶ್ಚಿತ್ಯ ಮನಸಾ ಹ್ಯುಗ್ರೇ ತಪಸಿ ಸಂಸ್ಥಿತಃ ॥ ೩೦ ॥
ವಾಯುಭಕ್ಷೋ ನಿರಾಹಾರೋ ಗ್ರೀಷ್ಮೇ ಪಂಚಾಗ್ನಿಮಧ್ಯಗಃ ।
ಶಿಶಿರೇ ತೋಯಮಧ್ಯಸ್ಥೋ ವರ್ಷಾಸ್ವಪ್ರಾವೃತಾಕೃತಿಃ ॥ ೩೧ ॥

---

೨೬. ನಿನಗೆ ಹೋಗಲು ಶಕ್ತಿಯಿದ್ದರೆ ನಿಶ್ಚಿಂತೆಯಾಗಿ ಅಲ್ಲಿಗೆ ಹೋಗು.'' ಇಂತೆಂದು ಬ್ರಾಹ್ಮಣರು ಹೇಳಲು ಆ ಜಾಬಾಲಿಯು ಅಲ್ಲಿಗೆ ಹೋಗಲನುವಾದನು.

೨೭. ಆದರೆ ಭಯಂಕರವೂ, ಪ್ರಾಣಾಪಹಾರಕವೂ ಆದ ರೋಗದಿಂದ ಅಭಿಭೂತನಾದ ಆತನು ಹೋಗಲು ಶಕ್ತಿಯಿಲ್ಲದಿರಲು ಇಂತೆಂದು ಯೋಚಿಸಿದನು.

೨೮. ''ಮೂರುಲೋಕಗಳಲ್ಲಿಯೂ ಬ್ರಾಹ್ಮಣರ ಸಾಮರ್ಥ್ಯವೇ ಮಿಗಿಲಾಗಿ ಕಾಣುತ್ತಿರುವುದಲ್ಲವೆ. ವಿಪ್ರರು ಮಹಾದೇವನಾದ ತ್ರಿಶೂಲಿಗೂ ಲಿಂಗಪಾತವನ್ನುಂಟುಮಾಡಿದರು.

೨೯. ಅವರಿಂದಲೇ ಸಮುದ್ರವು ಬತ್ತಿಹೋಯಿತು. ವಿಂಧ್ಯಪರ್ವತವು ತಡೆಗಟ್ಟಲ್ಪಟ್ಟಿತು. ನಾನೂ ಇಲ್ಲಿಯೇ ಕುಳಿತುಕೊಂಡು ಸೂರ್ಯನನ್ನು ಬರಮಾಡಿಕೊಳ್ಳುವೆನು.

೩೦. ಮಹತ್ತರವಾದ ತಪಸ್ಸಿನ ಬಲದಿಂದ ಆದಿತ್ಯೇಶ್ವರನೆಂಬ ದೇವನನ್ನು ತರುವೆನೆಂದು ಮನಸ್ಸಿನಲ್ಲಿ ನಿಶ್ಚಯವನ್ನುಮಾಡಿ ಉಗ್ರವಾದ ತಪಸ್ಸಿನಲ್ಲಿ ನಿಂತನು.

೩೧. ವಾಯುವನ್ನೇ ಸೇವಿಸುತ್ತ ಆಹಾರಾದಿಗಳನ್ನು ತ್ಯಜಿಸಿ ಗ್ರೀಷ್ಮಕಾಲದಲ್ಲಿ ಪಂಚಾಗ್ನಿಗಳ ಮಧ್ಯದಲ್ಲಿಯೂ, ಚಳಿಗಾಲದಲ್ಲ ಕಂಠದಘ್ನವಾದ ಜಲದಲ್ಲಿಯೂ, ವರ್ಷರ್ತುವಿನಲ್ಲಿ ಬರಿಯ ಮೈಯಲ್ಲಿಯೂ ತಪಸ್ಸನ್ನುಮಾಡುತ್ತಿದ್ದನು.

**ಸಾಗ್ರೇ ವರ್ಷಶತೇ ಪೂರ್ಣೇ ರವಿಸ್ತುಷ್ಟೋಽಬ್ರವೀದಿದಂ ॥ ೩೨ ॥**

**ಸೂರ್ಯ ಉವಾಚ :—**

**ವರಂ ವರಯ ಭದ್ರಂ ತೇ ಕಿಂ ತೇ ಮನಸಿ ವಾಂಛಿತಂ ।**
**ಅದೇಯಮಪಿ ದಾಸ್ಯಾಮಿ ಬ್ರೂಹಿ ಮಾಂ ತ್ವಂ ಚಿರಂ ಕೃಥಾಃ ॥ ೩೩ ॥**
**ಕಿಮಸಾಧ್ಯಂ ಹಿ ತೇ ವಿಪ್ರ ಇದಾನೀಂ ತಪಸಿ ಸ್ಥಿತಃ ॥ ೩೪ ॥**

**ಜಾಬಾಲಿರುವಾಚ :—**

**ಯದಿ ತುಷ್ಟೋಽಸಿ ದೇವೇಶ ಯದಿ ದೇಯೋ ವರೋ ಮಮ ।**
**ಮಮ ಪ್ರತಿಜ್ಞಾ ದೇವೇಶ ಹ್ಯಾದಿತ್ಯೇಶ್ವರದರ್ಶನೇ ॥ ೩೫ ॥**
**ಕೃತಾ ತಾಂ ಪಾರಿತುಂ ದೇವ ನ ಶಕ್ತೋ ವ್ಯಾಧಿನಾ ವೃತಃ ।**
**ಶುಕ್ಲತೀರ್ಥೇಽತ್ರ ತಿಷ್ಠ ತ್ವಮಾದಿತ್ಯೇಶ್ವರಮೂರ್ತಿಧೃಕ್ ॥ ೩೬ ॥**
**ಏವಮುಕ್ತೇ ತು ದೇವೇಶೋ ಬಹುರೂಪೋ ದಿವಾಕರಃ ।**
**ಉತ್ತರೇ ನರ್ಮದಾಕೂಲೇ ಕ್ಷಣಾದೇವ ವ್ಯದೃಶ್ಯತ ॥ ೩೭ ॥**
**ತದಾ ಪ್ರಭೃತಿ ಭೂಪಾಲ ತದ್ಧಿ ತೀರ್ಥಂ ಪ್ರಚಕ್ಷತೇ ।**
**ಸರ್ವಪಾಪಹರಂ ಪ್ರೋಕ್ತಂ ಸರ್ವದುಃಖವಿನಾಶನಂ ॥ ೩೮ ॥**

---

೩೨. ಇಂತು ಒಂದುನೂರು ವರ್ಷಗಳು ಪೂರ್ತಿಯಾಗಿ ಕಳೆಯಲು ಸಂತುಷ್ಟನಾದ ಸೂರ್ಯನು ಆತನಿಗೆ ಹೇಳಿದನು.

೩೩. ಸೂರ್ಯನು ಹೇಳುತ್ತಾನೆ:—ಅಯ್ಯಾ ವಿಪ್ರನೇ! ವರವನ್ನು ಕೇಳಿಕೊ. ನಿನಗೆ ಶುಭವಾಗಲಿ. ನಿನ್ನ ಮನಸ್ಸಿನ ಅಭಿಲಾಷೆಯೇನು? ಕೊಡಬಾರದ್ದನ್ನಾದರೂ ನಿನಗೆ ಕೊಡುವೆನು, ಹೇಳು. ನೀನು ಬಹಳಕಾಲ ತಪಸ್ಸನ್ನು ಮಾಡಿರುವೆ.

೩೪. ಬ್ರಾಹ್ಮಣನೆ! ನಿನಗೆ ಅಸಾಧ್ಯವಾದುದು ಯಾವುದು? ಈಗ ಏಕೆ ತಪಸ್ಸಿನಲ್ಲಿ ನಿಂತಿರುವೆ?

೩೫–೩೬. ಜಾಬಾಲಿಯು ಹೇಳುತ್ತಾನೆ:— ದೇವದೇವನೆ! ನೀನು ಸಂತುಷ್ಟನಾಗಿ ನನಗೆ ವರವನ್ನು ಕೊಡುವೆಯಾದರೆ ಹೇಳುವೆನು. ಆದಿತ್ಯೇಶ್ವರನನ್ನು ನೋಡಬೇಕೆಂದು ನನ್ನ ಅಭಿಲಾಷೆಯಿರುವುದು. ವ್ಯಾಧಿಯಿಂದ ಪೀಡಿತನಾದ ನಾನು ಅದನ್ನು ಪೂರ್ತಿಗೊಳಿಸಲು ಅಶಕ್ತನಾಗಿರುವೆನು. ನೀನು ಆದಿತ್ಯೇಶ್ವರನ ರೂಪವನ್ನು ತಾಳಿ ಈ ಶುಕ್ಲತೀರ್ಥದಲ್ಲಿ ನೆಲಸು.

೩೭–೩೮. ಬ್ರಾಹ್ಮಣನಿಂತೆನ್ನಲು ಅನೇಕ ರೂಪಗಳನ್ನು ಧರಿಸಬಲ್ಲ ದೇವನಾದ ಸೂರ್ಯನು ನಿಮಿಷದಲ್ಲಿಯೇ ನರ್ಮದೆಯ ಉತ್ತರ ತೀರದಲ್ಲಿ ಕಾಣಿಸಿಕೊಂಡನು. ಭೂಪಾಲಕನೆ! ಅಂದಿನಿಂದ ಅದನ್ನು ತೀರ್ಥವೆಂದು ಕರೆಯುವರು. ಅದು ಸಮಸ್ತಪಾತಕಗಳನ್ನು ಪರಿಹರಿಸುವುದೂ ಸಕಲದುಃಖಗಳನ್ನು ನಿವಾರಿಸುವುದೂ ಆಗಿರುವುದು.

ಯಸ್ತು ಸಂವತ್ಸರಂ ಪೂರ್ಣಂ ನಿತ್ಯಮಾದಿತ್ಯವಾಸರೇ ।
ಸ್ನಾತ್ವಾ ಪ್ರದಕ್ಷಿಣಾಃ ಸಪ್ತ ದತ್ವಾ ಪಶ್ಯತಿ ಭಾಸ್ಕರಂ ॥ ೩೯ ॥
ಯತ್ಫಲಂ ಲಭತೇ ತೇನ ತಚ್ಛೃಣುಷ್ವ ಮಯೋದಿತಂ ।
ಪ್ರಸುಪ್ತಂ ಮಂಡಲಾನೀಹ ದದ್ರುಕುಷ್ಟವಿಚರ್ಚಿಕಾಃ ॥ ೪೦ ॥
ನಶ್ಯಂತಿ ಸತ್ವರಂ ರಾಜಂಸ್ತೂಲರಾಶಿರಿವಾಽನಲೇ ।
ಧನಪುತ್ರಕಲತ್ರಾಣಾಂ ಪೂರಯೇದ್ವತ್ಸರತ್ರಯಾತ್ ॥ ೪೧ ॥
ಯಸ್ತು ಶ್ರಾದ್ಧಪ್ರದಸ್ತತ್ರ ಪಿತೄನುದ್ದಿಶ್ಯ ಸಂಕ್ರಮೇ ।
ತೃಪ್ಯಂತಿ ಪಿತರಸ್ತಸ್ಯ ಪಿತೃದೇವೋ ಹಿ ಭಾಸ್ಕರಃ ॥ ೪೨ ॥
ಇತಿ ತೇ ಕಥಿತಂ ಸರ್ವಮಾದಿತ್ಯೇಶ್ವರಮುತ್ತಮಂ ।
ಸರ್ವಪಾಪಹರಂ ದಿವ್ಯಂ ಸರ್ವರೋಗವಿನಾಶನಂ ॥ ೪೩ ॥

**ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ ಪಂಚಮೇ ಆವಂತ್ಯಖಂಡೇ ತೃತೀಯೇ ರೇವಾಖಂಡೇ "ಆದಿತ್ಯೇಶ್ವರತೀರ್ಥಮಾಹಾತ್ಮ್ಯವರ್ಣನಂ" ನಾಮ ತ್ರಿಪಂಚಾಶದಧಿಕಶತತಮೋಽಧ್ಯಾಯಃ**

---

೩೯-೪೧. ಒಂದು ಸಂವತ್ಸರವು ಪೂರ್ತಿಯಾಗಿ ಪ್ರತಿ ಭಾನುವಾರದಲ್ಲಿಯೂ ಆ ತೀರ್ಥದಲ್ಲಿ ಸ್ನಾನವನ್ನುಮಾಡಿ ಭಾಸ್ಕರನನ್ನು ಕಂಡು ಏಳು ಪ್ರದಕ್ಷಿಣೆಗಳನ್ನು ಮಾಡುವವನು ಪಡೆಯುವ ಸತ್ಫಲವನ್ನು ನಾನು ಹೇಳುವೆನು, ಕೇಳು. ರಾಜೇಂದ್ರನೆ! ಅವನ ಪ್ರಸುಪ್ತಮಂಡಲ, ದದ್ರು, ಕುಷ್ಠ, ಕಜ್ಜಿ ಮುಂತಾದ ರೋಗಗಳೆಲ್ಲವೂ ಬೆಂಕಿಯಂಟಿದ ಹತ್ತಿಯ ರಾಶಿಯಂತೆ ಬೇಗ ನಾಶವಾಗುವುವು. ಮೂರು ವರ್ಷಗಳೊಳಗಾಗಿ ಆತನು ಐಶ್ವರ್ಯ, ಪುತ್ರ, ಪತ್ನಿಯರ ಭಾಗ್ಯವನ್ನು ಪಡೆಯುವನು.

೪೨. ಸಂಕ್ರಮಣ ಕಾಲಗಳಲ್ಲಿ ಪಿತೃಗಳನ್ನುದ್ದೇಶಿಸಿ ಅಲ್ಲಿ ಶ್ರಾದ್ಧಗಳನ್ನು ಮಾಡಲು ಪಿತೃಗಳು ಸಂತೃಪ್ತರಾಗುವರು. ಸೂರ್ಯನು ಪಿತೃದೇವನಲ್ಲವೆ!

೪೩. ಇಂತು ನಿನಗೆ ಸರ್ವೋತ್ತಮವೂ, ಸರ್ವಪಾಪಪರಿಹಾರಕವೂ, ದಿವ್ಯವೂ, ಸಕಲರೋಗವಿನಾಶಕವೂ ಆದ ಆದಿತ್ಯೇಶ್ವರತೀರ್ಥದ ಚರಿತ್ರೆಯನ್ನು ಸಂಪೂರ್ಣವಾಗಿ ಹೇಳಿರುವೆನು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ ಶ್ರೀ ಸ್ಕಾಂದಮಹಾಪುರಾಣದ ಐದನೆಯ ಆವಂತ್ಯಖಂಡದ ಮೂರನೆಯ ರೇವಾಖಂಡದಲ್ಲಿ "ಆದಿತ್ಯೇಶ್ವರತೀರ್ಥಮಾಹಾತ್ಮ್ಯವರ್ಣನ"ವೆಂಬ ನೂರೈವತ್ತಮೂರನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

## ಅಥ ಚತುಃಪಂಚಾಶದಧಿಕಶತತಮೋಽಧ್ಯಾಯಃ

### ಕಲಕಲೇಶ್ವರತೀರ್ಥಮಾಹಾತ್ಮ್ಯವರ್ಣನಂ

ಶ್ರೀ ಮಾರ್ಕಂಡೇಯ ಉವಾಚ:—

**ನರ್ಮದಾದಕ್ಷಿಣೇ ಕೂಲೇ ತೀರ್ಥಂ ಕಲಕಲೇಶ್ವರಂ ।**
**ವಿಖ್ಯಾತಂ ಸರ್ವಲೋಕೇಷು ಸ್ವಯಂ ದೇವೇನ ನಿರ್ಮಿತಂ ॥ ೧ ॥**
**ಅಂಧಕಂ ಸಮರೇ ಹತ್ವಾ ದೇವದೇವೋ ಮಹೇಶ್ವರಃ ।**
**ಸಹಿತೋ ದೇವಗಂಧರ್ವೈಃ ಕಿನ್ನರೈಶ್ಚ ಮಹೋರಗೈಃ ॥ ೨ ॥**
**ಶಂಖತೂರ್ಯನಿನಾದೈಶ್ಚ ಮೃದಂಗಪಣವಾದಿಭಿಃ ।**
**ವೀಣಾವೇಣುರವೈಶ್ಚಾಽನ್ಯೈಃ ಸ್ತುತಿಭಿಃ ಪುಷ್ಕಲಾದಿಭಿಃ ॥ ೩ ॥**
**ಗಾಯಂತಿ ಸಾಮಾನಿ ಯಜೂಂಷಿ ಚಾನ್ಯೇ**
**ಛಂದಾಂಸಿ ಚಾಽನ್ಯೇ ಋಚಮುದ್ಗಿರಂತಿ ।**
**ಸ್ತೋತ್ರೈರನೇಕೈರಪರೇ ಗೃಣಂತಿ**
**ಮಹೇಶ್ವರಂ ತತ್ರ ಮಹಾನುಭಾವಾಃ ॥ ೪ ॥**

---

### ಕನ್ನಡದ ಅನುವಾದ

### ಕಲಕಲೇಶ್ವರತೀರ್ಥಮಾಹಾತ್ಮ್ಯವರ್ಣನ

೧. ಮಾರ್ಕಂಡೇಯನು ಹೇಳುತ್ತಾನೆ:—ನರ್ಮದೆಯ ದಕ್ಷಿಣತೀರದಲ್ಲಿ ಕಲಕಲೇಶ್ವರವೆಂಬ ತೀರ್ಥವೊಂದಿರುವುದು. ಮಹಾದೇವನಿಂದಲೇ ನಿರ್ಮಿತವಾದ ಈ ತೀರ್ಥವು ಸಕಲಲೋಕಗಳಲ್ಲಿಯೂ ಪ್ರಖ್ಯಾತಿಯನ್ನು ಪಡೆದಿರುವುದು.

೨. ಅಂಧಕಾಸುರನನ್ನು ಮಹಾಯುದ್ಧದಲ್ಲಿ ಸಂಹರಿಸಿ ದೇವದೇವನಾದ ಮಹೇಶ್ವರನು ದೇವತೆಗಳಿಂದಲೂ, ಗಂಧರ್ವರಿಂದಲೂ, ಕಿನ್ನರರಿಂದಲೂ, ಮಹಾನಾಗರಿಂದಲೂ ಪರಿವಾರಿತನಾಗಿದ್ದನು.

೩. ಶಂಖಗಳೂ, ತೂರ್ಯವಾದ್ಯಗಳೂ, ಮೃದಂಗ ಪಣವಗಳೂ, ವೇಣುವೀಣಾದಿವಾದ್ಯಗಳೂ, ಅಸಂಖ್ಯಾತಗಳಾದ ಸ್ತೋತ್ರಗಳೂ ಕೋಲಾಹಲವನ್ನುಂಟುಮಾಡುತ್ತಿದ್ದುವು.

೪. ಕೆಲವರು ಸಾಮವೇದವನ್ನೂ, ಹಲವರು ಯಜುರ್ವೇದವನ್ನೂ, ಇತರರು ಋಗ್ವೇದದ ಮಂತ್ರಗಳನ್ನೂ ಗಟ್ಟಿಯಾಗಿ ಉಚ್ಚರಿಸುತ್ತಿದ್ದರು. ಇತರ ಮಹಾಭಾಗ್ಯಶಾಲಿಗಳು ಬಹುವಿಧಗಳಾದ ಸೋತ್ರಗಳಿಂದ ಮಹಾದೇವನನ್ನು ಹೊಗಳುತ್ತಿದ್ದರು.

ಪ್ರಮಥಾನಾಂ ನಿನಾದೇನ ಕಲ್ಕಲೇನ ಚ ಬಂದಿನಾಂ ।
ಯಸ್ಮಾತ್ಪ್ರತಿಷ್ಠಿತಂ ಲಿಂಗಂ ತಸ್ಮಾಜ್ಜ್ಞಾತಂ ತದಾಖ್ಯಯಾ ॥ ೫ ॥
ತತ್ರ ತೀರ್ಥೇ ತು ಯಃ ಸ್ನಾತ್ವಾ ವೀಕ್ಷೇತ್ಕಲಕಲೇಶ್ವರಂ ।
ವಾಜಪೇಯಾತ್ಪರಂ ಪುಣ್ಯಂ ಸಲಭೇನ್ಮಾನವೋ ಭುವಿ ॥ ೬ ॥
ತೇನ ಪುಣ್ಯೇನ ಪೂತಾತ್ಮಾ ಪ್ರಾಣತ್ಯಾಗಾದ್ದಿವಂ ವ್ರಜೇತ್ ।
ಆರೂಢಃ ಪರಮಂ ಯಾನಂ ಗೀಯಮಾನೋಽಪ್ಸರೋಗಣೈಃ ॥ ೭ ॥
ಉಪಭುಜ್ಯ ಮಹಾಭೋಗಾನ್ಕಾಲೇನ ಮಹತಾ ತತಃ ।
ಮರ್ತ್ಯಲೋಕೇ ಮಹಾತ್ಮಾಽಸೌ ಜಾಯತೇ ವಿಮಲೇ ಕುಲೇ ॥ ೮ ॥
ಬ್ರಾಹ್ಮಣಃ ಸುಭಗೋ ಲೋಕೇ ವೇದವೇದಾಂಗಪಾರಗಃ ।
ವ್ಯಾಧಿಶೋಕವಿನಿರ್ಮುಕ್ತೋ ಜೀವೇಚ್ಚ ಶರದಾಂ ಶತಂ ॥ ೯ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ
ಪಂಚಮೇ ಆವಂತ್ಯಖಂಡೇ ತೃತೀಯೇ ರೇವಾಖಂಡೇ
"ಕಲಕಲೇಶ್ವರತೀರ್ಥಮಾಹಾತ್ಮ್ಯವರ್ಣನಂ"ನಾಮ
ಚತುಃಪಂಚಾಶದಧಿಕಶತತಮೋಽಧ್ಯಾಯಃ

---

೫. ಪ್ರಮಥರ ಕೂಗಾಟದಿಂದಲೂ, ಸ್ತುತಿಸುವ ವಂದಿಮಾಗಧರ ಧ್ವನಿಯಿಂದಲೂ ಕೂಡಿ ಪ್ರತಿಷ್ಠಿತವಾದ ಈ ಲಿಂಗವು ಕಲಕಲೇಶ್ವರವೆಂದೇ ಕರೆಯಲ್ಪಟ್ಟಿತು.

೬. ಆ ತೀರ್ಥದಲ್ಲಿ ಸ್ನಾನವನ್ನು ಮಾಡಿ ಯಾವ ಮಾನವನು ಕಲಕಲೇಶ್ವರನನ್ನು ನೋಡುವನೊ, ಅವನು ವಾಜಪೇಯದ ಪುಣ್ಯಕ್ಕಿಂತಲೂ ಹೆಚ್ಚಿನ ಪುಣ್ಯವನ್ನು ಪಡೆಯುವನು.

೭. ಆ ಪುಣ್ಯದಿಂದ ಪರಿಶುದ್ಧನಾಗಿ ಪ್ರಾಣವನ್ನು ತ್ಯಜಿಸಲು ದಿವ್ಯವಾದ ವಿಮಾನವನ್ನೇರಿ ಅಪ್ಸರೆಯರು ಸ್ತೋತ್ರವನ್ನು ಮಾಡುತ್ತಿರಲು ಸ್ವರ್ಗಕ್ಕೆ ಹೋಗುವನು.

೮. ಆ ಮಹಾತ್ಮನು ಬಹಳಕಾಲದವರೆಗೂ ಅಲ್ಲಿ ಮಹಾಭೋಗಗಳನ್ನನುಭವಿಸುತ್ತಿದ್ದು ಆತರುವಾಯ ಭೂಲೋಕದಲ್ಲಿ ಉತ್ತಮಕುಲದಲ್ಲಿ ಜನಿಸುವನು.

೯. ಬ್ರಾಹ್ಮಣನೂ, ಸೌಭಾಗ್ಯಶಾಲಿಯೂ, ವೇದವೇದಾಂಗಗಳಲ್ಲಿ ನಿಷ್ಣಾತನೂ, ರೋಗಶೋಕಗಳಿಲ್ಲದವನೂ, ಆಗಿ ನೂರು ವರ್ಷಗಳ ಆಯುಷ್ಯವುಳ್ಳವನಾಗುವನು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ
ಶ್ರೀ ಸ್ಕಾಂದಮಹಾಪುರಾಣದ ಐದನೆಯ ಆವಂತ್ಯಖಂಡದ ಮೂರನೆಯ ರೇವಾಖಂಡದಲ್ಲಿ
"ಕಲಕಲೇಶ್ವರತೀರ್ಥಮಾಹಾತ್ಮ್ಯವರ್ಣನ"ವೆಂಬ
ನೂರೈವತ್ತನಾಲ್ಕನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

## ಅಥ ಪಂಚಪಂಚಾಶದಧಿಕಶತತಮೋಽಧ್ಯಾಯಃ

### ಚಾಣಕ್ಯಸಿದ್ಧಿಪ್ರಾಪ್ತಿವರ್ಣನಂ

ಶ್ರೀ ಮಾರ್ಕಂಡೇಯ ಉವಾಚ:-

ಅತಃ ಪರಂ ಪ್ರವಕ್ಷ್ಯಾಮಿ ಸರ್ವತೀರ್ಥಾದನುತ್ತಮಂ ।
ಉತ್ತರೇ ನರ್ಮದಾಕೂಲೇ ಶುಕ್ಲತೀರ್ಥಂ ಯುಧಿಷ್ಠಿರ ॥ ೧ ॥
ತಸ್ಯ ತೀರ್ಥಸ್ಯ ಚಾಽನ್ಯಾನಿ ಪುಣ್ಯತ್ವಾಚ್ಛುಭದರ್ಶನಾತ್ ।
ಪೃಥಿವ್ಯಾಂ ಸರ್ವತೀರ್ಥಾನಿ ಕಲಾಂ ನಾರ್ಹಂತಿ ಷೋಡಶೀಂ ॥ ೨ ॥

ಯುಧಿಷ್ಠಿರ ಉವಾಚ:-

ತಸ್ಯ ತೀರ್ಥಸ್ಯ ಮಾಹಾತ್ಮ್ಯಂ ಶ್ರೋತುಮಿಚ್ಛಾಮಿ ತತ್ವತಃ ।
ಭ್ರಾತೃಭಿಃ ಸಹಿತಃ ಸರ್ವೈಸ್ತಥಾಽನ್ಯೈರ್ದ್ವಿಜಸತ್ತಮೈಃ ॥ ೩ ॥

ಶ್ರೀ ಮಾರ್ಕಂಡೇಯ ಉವಾಚ:-

ಶುಕ್ಲತೀರ್ಥಸ್ಯ ಮಾಹಾತ್ಮ್ಯಮಾಕರ್ಣಯ ನರೇಶ್ವರ ।
ಯಸ್ಯ ಸಂದರ್ಶನಾದೇವ ಬ್ರಹ್ಮಹತ್ಯಾ ಪ್ರಲೀಯತೇ ॥ ೪ ॥

---

### ಕನ್ನಡದ ಅನುವಾದ

#### ಚಾಣಕ್ಯಸಿದ್ಧಿಪ್ರಾಪ್ತಿವರ್ಣನ

೧. ಮಾರ್ಕಂಡೇಯನು ಹೇಳುತ್ತಾನೆ:—ಯುಧಿಷ್ಠಿರನೇ! ಬಳಿಕ ನರ್ಮದಾನದಿಯ ಉತ್ತರಕೂಲದಲ್ಲಿ ನೆಲಸಿ ಸಕಲತೀರ್ಥಗಳಲ್ಲಿಯೂ ಶ್ರೇಷ್ಠವೆನಿಸಿದ ಶುಕ್ಲತೀರ್ಥವನ್ನು ವಿವರಿಸುವೆನು.

೨. ಪುಣ್ಯವನ್ನು ಕೊಡುವುದರಲ್ಲಾಗಲಿ ಶುಭದರ್ಶನದಲ್ಲಾಗಲಿ ಭೂಮಂಡಲದ ಸಮಸ್ತ ತೀರ್ಥಗಳೂ ಈ ತೀರ್ಥದ ಹದಿನಾರನೆಯ ಒಂದು ಭಾಗಕ್ಕೂ ಸರಿದೂಗಲಾರವು.

೩. ಯುಧಿಷ್ಠಿರನು ಹೇಳುತ್ತಾನೆ:—ತಮ್ಮಂದಿರಿಂದಲೂ, ಬ್ರಾಹ್ಮಣೋತ್ತಮರಿಂದಲೂ ಪರಿವಾರಿತನಾದ ನಾನು ಆ ತೀರ್ಥದ ಮಾಹಾತ್ಮ್ಯವನ್ನು ಯಥಾರ್ಥವಾಗಿ ತಿಳಿಯಲಿಚ್ಛಿಸುತ್ತಿರುವೆನು.

೪. ಮಾರ್ಕಂಡೇಯನು ಹೇಳುತ್ತಾನೆ:—ರಾಜೇಂದ್ರನೆ! ಶುಕ್ಲತೀರ್ಥವುಂಟಾದ ಕ್ರಮವನ್ನು ಕೇಳು. ಅದನ್ನು ನೋಡುವುದರಿಂದಲೇ ಬ್ರಹ್ಮಹತ್ಯೆಯ ಪಾತಕವೂ ನಾಶವಾಗುವುದು.

ನರ್ಮದಾ ಸರಿತಾಂ ಶ್ರೇಷ್ಠಾ ಸರ್ವಪಾಪಪ್ರಣಾಶಿನೀ ।
ಯಚ್ಚ ಬಾಲ್ಯೇ ಕೃತಂ ಪಾಪಂ ದರ್ಶನಾದೇವ ನಶ್ಯತಿ ॥ ೫ ॥
ಮೋಕ್ಷದಾನಿ ನ ಸರ್ವತ್ರ ಶುಕ್ಲತೀರ್ಥಮೃತೇ ನೃಪ ।
ಶುಕ್ಲತೀರ್ಥಸ್ಯ ಮಾಹಾತ್ಮ್ಯಂ ಪುರಾಣೇ ಯಚ್ಛ್ರುತಂ ಮಯಾ ॥ ೬ ॥
ಸಮಾಗಮೇ ಮುನೀನಾಂ ತು ದೇವಾನಾಂ ಹಿ ತಥೈವ ಚ ।
ಕಥಿತಂ ದೇವದೇವೇನ ಶಿತಿಕಂಠೇನ ಭಾರತ ।
ಕೈಲಾಸೇ ಪರ್ವತಶ್ರೇಷ್ಠೇ ತತ್ತೇ ಸಂಕಥಯಾಮ್ಯಹಂ ॥ ೭ ॥
ಪುರಾ ಕೃತಯುಗಸ್ಯಾದೌ ತೋಷಿತುಂ ಗಿರಿಜಾಪತಿಂ ।
ತಪಶ್ಚಚಾರ ವಿಪುಲಂ ವಿಷ್ಣುರ್ವರ್ಷಸಹಸ್ರಕಂ ।
ವಾಯುಭಕ್ಷೋ ನಿರಾಹಾರಃ ಶುಕ್ಲತೀರ್ಥೇ ವ್ಯವಸ್ಥಿತಃ ॥ ೮ ॥
ತತಃ ಪ್ರತ್ಯಕ್ಷತಾಮಾಗಾದ್ದೇವದೇವೋ ಮಹೇಶ್ವರಃ ।
ಪ್ರಾದುರ್ಭೂತಸ್ತು ಸಹಸಾ ತತ್ರ ತೀರ್ಥೇ ನರಾಧಿಪ ॥ ೯ ॥
ಕ್ರೋಶದ್ವಯಮಿದಂ ಚಕ್ರೇ ಭುಕ್ತಿಮುಕ್ತಿಪ್ರದಾಯಕಂ ।
ತಸ್ಮಿಂಸ್ತೀರ್ಥೇ ನರಃ ಸ್ನಾತ್ವಾ ಮುಚ್ಯತೇ ಸರ್ವಕಿಲ್ಬಿಷೈಃ ॥ ೧೦ ॥

---

೫. ನದಿಗಳಲ್ಲಿ ಉತ್ತಮವೂ, ಸಕಲಪಾತಕಗಳನ್ನು ಕಳೆಯುವುದೂ ಆದ ನರ್ಮದೆಯು ದರ್ಶನಮಾತ್ರದಿಂದಲೇ ಬಾಲ್ಯದಲ್ಲಿ ಮಾಡಿದ ಪಾತಕಗಳನ್ನು ಕಳೆಯುವುದು.

೬. ಮಹಾರಾಜನೆ! ಶುಕ್ಲತೀರ್ಥವನ್ನುಳಿದ ಸಕಲ ತೀರ್ಥಗಳೂ ಮೋಕ್ಷಪ್ರದಗಳಲ್ಲ. ಇದರ ಮಾಹಾತ್ಮ್ಯವನ್ನು ನಾನು ಪುರಾಣದಲ್ಲಿ ಕೇಳಿರುವೆನು.

೭. ಪರ್ವತೋತ್ತಮವಾದ ಕೈಲಾಸದಲ್ಲಿ ದೇವದೇವನಾದ ಶ್ರೀಕಂಠನು ದೇವತೆಗಳೂ ಮಹಾಮುನಿಗಳೂ ಸೇರಿದ್ದಕಾಲದಲ್ಲಿ ಹೇಳಿದುದನ್ನು ನಿನಗೆ ತಿಳಿಸುವೆನು.

೮. ಹಿಂದೆ ಕೃತಯುಗದ ಆದಿಯಲ್ಲಿ ಮಹೇಶ್ವರನನ್ನು ಸಂತೋಷಗೊಳಿಸಲು ಮಹಾವಿಷ್ಣುವು ಶುಕ್ಲತೀರ್ಥದಲ್ಲಿ ನೆಲಸಿ ವಾಯುಭಕ್ಷಕನೂ, ಉಪವಾಸಪರನೂ ಆಗಿ ಒಂದು ಸಾವಿರ ವರ್ಷಗಳ ಅಪಾರವಾದ ತಪಸ್ಸನ್ನು ಮಾಡಿದನು.

೯. ಮಹಾರಾಜನೆ! ಆಗ ಮಹಾದೇವನು ಆತನಿಗೆ ಪ್ರತ್ಯಕ್ಷನಾಗಿ ದರ್ಶನವನ್ನು ಕೊಟ್ಟು ಆ ತೀರ್ಥದಲ್ಲಿಯೇ ಬಂದು ನೆಲಸಿದನು.

೧೦. ಎರಡು ಕ್ರೋಶಗಳವರೆಗಿನ ಪ್ರದೇಶವನ್ನು ಭೋಗಮೋಕ್ಷಪ್ರದವಾದ ಕ್ಷೇತ್ರವನ್ನಾಗಿ ಮಾಡಿದನು. ಆ ತೀರ್ಥದಲ್ಲಿ ಸ್ನಾನವನ್ನು ಮಾಡಿದ ಮಾನವನು ಸಮಸ್ತಪಾತಕಗಳಿಂದಲೂ ಮುಕ್ತನಾಗುವನು.

ಗಂಗಾ ಕನಖಲೇ ಪುಣ್ಯಾ ಕುರುಕ್ಷೇತ್ರೇ ಸರಸ್ವತೀ ।
ಗ್ರಾಮೇ ವಾ ಯದಿ ವಾಽರಣ್ಯೇ ಪುಣ್ಯಾ ಸರ್ವತ್ರ ನರ್ಮದಾ ॥ ೧೧ ॥
ಸರ್ವೌಷಧೀನಾಮಶನಂ ಪ್ರಧಾನಂ
ಸರ್ವೇಷು ಪೇಯೇಷು ಜಲಂ ಪ್ರಧಾನಂ ।
ನಿದ್ರಾ ಸುಖಾನಾಂ ಪ್ರಮದಾ ರತೀನಾಂ
ಸರ್ವೇಷು ಗಾತ್ರೇಷು ಶಿರಃ ಪ್ರಧಾನಂ ॥ ೧೨ ॥
ಸ್ನಾತಸ್ಯಾಽಪಿ ಯಥಾ ಪುಣ್ಯಂ ಲಲಾಟಂ ನೃಪಸತ್ತಮ ।
ಶುಕ್ಲತೀರ್ಥಂ ತಥಾ ಪುಣ್ಯಂ ನರ್ಮದಾಯಾಂ ಯುಧಿಷ್ಠಿರ ॥ ೧೩ ॥
ಸರಿತಾಂ ಚ ಯಥಾ ಗಂಗಾ ದೇವತಾನಾಂ ಜನಾರ್ದನಃ ।
ಶುಕ್ಲತೀರ್ಥಂ ತಥಾ ಪುಣ್ಯಂ ನರ್ಮದಾಯಾಂ ವ್ಯವಸ್ಥಿತಂ ॥ ೧೪ ॥
ಚತುಷ್ಪದಾನಾಂ ಸುರಭಿರ್ವರ್ಣಾನಾಂ ಬ್ರಾಹ್ಮಣೋ ಯಥಾ ।
ಪ್ರಧಾನಂ ಸರ್ವತೀರ್ಥಾನಾಂ ಶುಕ್ಲತೀರ್ಥಂ ತಥಾ ನೃಪ ॥ ೧೫ ॥
ಗ್ರಹಾಣಾಂ ತು ಯಥಾದಿತ್ಯೋ ನಕ್ಷತ್ರಾಣಾಂ ಯಥಾ ಶಶೀ ।
ಶಿರೋ ವಾ ಸರ್ವಗಾತ್ರಾಣಾಂ ಧರ್ಮಾಣಾಂ ಸತ್ಯಮಿಷ್ಯತೇ ॥ ೧೬ ॥

---

೧೧. ಕನಖಲಕ್ಷೇತ್ರದಲ್ಲಿ ಗಂಗೆಯೂ, ಕುರುಕ್ಷೇತ್ರದಲ್ಲಿ ಸರಸ್ವತಿಯೂ ಪುಣ್ಯಪ್ರದಗಳು. ನರ್ಮದೆಯಾದರೊ ಗ್ರಾಮಾರಣ್ಯಪ್ರದೇಶಗಳೆನ್ನದೆ ಸರ್ವ ಪ್ರದೇಶಗಳಲ್ಲಿಯೂ ಶುಭಪ್ರದವು.

೧೨. ಸಕಲೌಷಧಿಗಳಲ್ಲಿ ಆಹಾರವೇ ಮುಖ್ಯವು. ಪಾನೀಯಗಳಲ್ಲಿ ಜಲವೇ ಮುಖ್ಯವು. ಸುಖಗಳಲ್ಲಿ ನಿದ್ರೆಯ ಸುಖವೂ, ರತಿಗಳಲ್ಲಿ ಸ್ತ್ರೀಸಂಗವೂ; ಅವಯವಗಳಲ್ಲಿ ತಲೆಯೂ ಪ್ರಧಾನಗಳು.

೧೩. ಯುಧಿಷ್ಠಿರನೆ! ಸರ್ವಾಂಗಸ್ನಾನವನ್ನು ಮಾಡಿದವನಲ್ಲಿಯೂ ಲಲಾಟವು ಹೇಗೆ ವಿಶೇಷಪವಿತ್ರವೊ, ಹಾಗೆಯೇ ನರ್ಮದೆಯ ಆದ್ಯಂತದಲ್ಲಿ ಶುಕ್ಲತೀರ್ಥವು ಸರ್ವೋತ್ತಮವು.

೧೪. ನದಿಗಳಲ್ಲಿ ಗಂಗೆಯೂ, ದೇವತೆಗಳಲ್ಲಿ ಮಹಾವಿಷ್ಣುವೂ ಹೇಗೆ ಪ್ರಮುಖರೊ, ಹಾಗೆಯೇ ನರ್ಮದಾನದಿಯಲ್ಲಿರುವ ಶುಕ್ಲತೀರ್ಥವು ಎಲ್ಲದರಲ್ಲಿಯೂ ಶ್ರೇಷ್ಠವು.

೧೫. ರಾಜೇಂದ್ರನೆ! ಚತುಷ್ಪಾದಿಗಳಲ್ಲಿ ಕಾಮಧೇನುವೂ, ವರ್ಣಗಳಲ್ಲಿ ಬ್ರಾಹ್ಮಣನೂ ಹೇಗೆ ಪ್ರಧಾನರೊ, ಹಾಗೆಯೇ ಸಕಲತೀರ್ಥಗಳಲ್ಲಿ ಶುಕ್ಲತೀರ್ಥವೂ ಪ್ರಧಾನವು.

೧೬-೧೭. ಗ್ರಹಗಳಲ್ಲಿ ಸೂರ್ಯನೂ, ನಕ್ಷತ್ರಗಳಲ್ಲಿ ಚಂದ್ರನೂ, ದೇಹ

**ತಥೈವ ಸಾರ್ಥ ತೀರ್ಥಾನಾಂ ಶುಕ್ಲತೀರ್ಥಮನುತ್ತಮಂ ।**
**ದುರ್ವಿಜ್ಞೇಯೋ ಯಥಾ ಲೋಕೇ ಪರಮಾತ್ಮಾ ಸನಾತನಃ ॥ ೧೭ ॥**
**ಸುಸೂಕ್ಷ್ಮತ್ವಾದನಿರ್ದೇಶ್ಯಃ ಶುಕ್ಲತೀರ್ಥಂ ತಥಾ ನೃಪ ।**
**ಮಂದಪ್ರಜ್ಞತ್ವಮಾಪನ್ನೋ ಮಹಾಮೋಹಸಮನ್ವಿತಃ ॥ ೧೮ ॥**
**ಶುಕ್ಲತೀರ್ಥಂ ನ ಜಾನಾತಿ ನರ್ಮದಾತಟಸಂಸ್ಥಿತಂ ।**
**ಬಹುನಾಽತ್ರ ಕಿಮುಕ್ತೇನ ಧರ್ಮಪುತ್ರ ಪುನಃ ಪುನಃ ॥ ೧೯ ॥**
**ಶುಕ್ಲತೀರ್ಥಂ ಮಹಾಪುಣ್ಯಂ ಸಂಪ್ರಾಪ್ತಂ ಕಲ್ಮಷಕ್ಷಯಾತ್ ॥ ೨೦ ॥**
**ಯೋಽತ್ರ ದತ್ತೇ ಶುಚಿರ್ಭೂತ್ವಾ ಏಕಂ ರೇವಾಜಲಾಂಜಲಿಂ ।**
**ಕಲ್ಪಕೋಟಿಸಹಸ್ರಾಣಿ ಪಿತರಸ್ತೇನ ತರ್ಪಿತಾಃ ॥ ೨೧ ॥**
**ಏಕಃ ಪುತ್ರೋ ಧರಾಪೃಷ್ಠೇ ಪಿತೄಣಾಮಾರ್ತಿನಾಶನಃ ।**
**ಚಾಣಕ್ಯೋ ನಾಮ ರಾಜಾಽಭೂಚ್ಛುಕ್ಲತೀರ್ಥಂ ಚ ವೇದ ಸಃ ॥ ೨೨ ॥**

**ಯುಧಿಷ್ಠಿರ ಉವಾಚ :–**

**ಕೋಽಸೌ ದ್ವಿಜವರಶ್ರೇಷ್ಠ ಚಾಣಕ್ಯೋ ನಾಮ ನಾಮತಃ ।**
**ಶುಕ್ಲತೀರ್ಥಸ್ಯ ಯೋ ವೇತ್ತಾ ನಾಽನ್ಯೋ ವೇತ್ತಾ ಹಿ ಕಶ್ಚನ ॥ ೨೩ ॥**

---

ದಲ್ಲಿ ತಲೆಯೂ, ಧರ್ಮಗಳಲ್ಲಿ ಸತ್ಯವೂ ಅನುತ್ತಮಗಳೆನಿಸಿರುವಂತೆ ಸಮಸ್ತ ತೀರ್ಥಗಳಲ್ಲಿಯೂ ಶುಕ್ಲತೀರ್ಥವೇ ಉತ್ತಮೋತ್ತಮವೆನಿಸಿರುವುದು.

೧೮–೧೯. ಧರ್ಮರಾಜನೆ! ಅನಾದಿಯಾದ ಪರಮಾತ್ಮನು ತಿಳಿಯಲಾರದವನಾಗಿ ಸೂಕ್ಷ್ಮನಾಗಿರುವುದರಿಂದ ಅನಿರ್ದೇಶ್ಯನಾಗಿರುವಂತೆಯೇ ಈ ತೀರ್ಥವೂ ತಿಳಿಯಲಸದಳವಾಗಿರುವುದು. ಮಂದಬುದ್ಧಿಯುಳ್ಳವನೂ, ಸಂಸಾರದ ಮಹಾಮೋಹಕ್ಕೆ ಸಿಲುಕಿದವನೂ ಆದ ಮಾನವನು ನರ್ಮದಾತೀರದಲ್ಲಿರುವ ಈ ಶುಕ್ಲತೀರ್ಥವನ್ನು ತಿಳಿಯಲಾರರು.

೨೦. ಧರ್ಮಪುತ್ರನೆ! ಮತ್ತೆ ಮತ್ತೆ ಬಹುವಾಗಿ ಹೇಳುವುದರಿಂದೇನು? ಜನರ ಕಲ್ಮಷಗಳನ್ನು ಕಳೆಯುವುದಕ್ಕಾಗಿಯೇ ಮಹಾಪುಣ್ಯಪ್ರದವಾದ ಶುಕ್ಲತೀರ್ಥವು ಸಂಪ್ರಾಪ್ತವಾಗಿರುವುದು.

೨೧–೨೨. ಯಾವನು ಪರಿಶುದ್ಧನಾಗಿ ಈ ತೀರ್ಥದಲ್ಲಿ ರೇವಾಜಲದಿಂದ ಒಂದು (ಜಲಾಂಜಲಿಯು) ತರ್ಪಣವನ್ನು ಕೊಡುವನೊ, ಅವನ ಪಿತೃಗಳು ಸಾವಿರಕೋಟಿ ಕಲ್ಪಗಳವರೆಗೂ ತೃಪ್ತರಾಗಿರುವರು. ಭೂಲೋಕದಲ್ಲೆಲ್ಲ ಪಿತೃಗಳ ಕಷ್ಟವನ್ನು ಕಳೆಯತಕ್ಕ ಒಬ್ಬನೇ ಮಗನಿದ್ದನು. ಚಾಣಕ್ಯನೆಂಬ ಆ ಮಹಾರಾಜನು ಶುಕ್ಲತೀರ್ಥದ ಮಹಿಮೆಯನ್ನು ಬಲ್ಲವನು.

೨೩. ಯುಧಿಷ್ಠಿರನು ಹೇಳುತ್ತಾನೆ:—ಬ್ರಾಹ್ಮಣೋತ್ತಮನೆ! ಬೇರೆ ಯಾರಿಗೂ ತಿಳಿಯದ ಶುಕ್ಲತೀರ್ಥವನ್ನು ಬಲ್ಲ ಆ ಚಾಣಕ್ಯನೆಂಬ ಮಹಾತ್ಮನಾರು?

ಕೇನೋಪಾಯೇನ ತತ್ತೀರ್ಥಂ ತೇನ ಜ್ಞಾತಂ ಧರಾತಲೇ ।
ತದಹಂ ಶ್ರೋತುಮಿಚ್ಛಾಮಿ ಪರಂ ಕೌತೂಹಲಂ ಹಿ ಮೇ ॥ ೨೪ ॥

ಶ್ರೀ ಮಾರ್ಕಂಡೇಯ ಉವಾಚ :—

ಇಕ್ಷ್ವಾಕುಪ್ರಭವೋ ರಾಜಾ ನಪ್ತಾ ಶುದ್ಧೋದನಸ್ಯ ಚ ।
ಚಾಣಕ್ಯೋ ನಾಮ ರಾಜರ್ಷಿರ್ಬುಭುಜೇ ಪೃಥಿವೀಮಿಮಾಂ ॥ ೨೫ ॥
ವಿಕ್ರಾಂತೋ ಮತಿಮಾಂಛೂರಃ ಸರ್ವಲೋಕೈರವಂಚಿತಃ ।
ವಂಚಿತಃ ಸಹಸಾ ಧೂರ್ತವಾಯಸಾಭ್ಯಾಂ ನೃಪೋತ್ತಮಃ ॥ ೨೬ ॥

ಯುಧಿಷ್ಠಿರ ಉವಾಚ :—

ಕಥಂ ಸ ವಂಚಿತೋ ರಾಜಾ ವಾಯಸಾಭ್ಯಾಂ ಕುತೋಽಥವಾ ।
ಪುರಾ ಯೇನ ಪ್ರತಿಜ್ಞಾತಂ ಧೀಗರ್ಭೇಣ ಮಹಾತ್ಮನಾ ॥ ೨೭ ॥
ನ ಜೀವೇ ವಂಚಿತೋಽನ್ಯೇನ ಪ್ರಾಣಾಂಸ್ತ್ಯಕ್ಷ್ಯೇ ನ ಸಂಶಯಃ ।
ಏತನ್ಮೇ ವದ ವಿಪ್ರೇಂದ್ರ ಪರಂ ಕೌತೂಹಲಂ ಮಮ ॥ ೨೮ ॥

ಶ್ರೀ ಮಾರ್ಕಂಡೇಯ ಉವಾಚ :—

ಆತ್ಮಾನಂ ವಂಚಿತಂ ಜ್ಞಾತ್ವಾ ತದಾ ಸಂಗೃಹ್ಯ ವಾಯಸೌ ।
ಪ್ರೇಷಯಾಮಾಸ ತೀವ್ರೇಣ ದಂಡೇನ ಯಮಸಾದನಂ ॥ ೨೯ ॥

---

೨೪. ಯಾವ ಉಪಾಯದಿಂದ ಅವನು ಭೂಮಂಡಲದಲ್ಲಿ ಈ ತೀರ್ಥವು ಸರ್ವೋತ್ತಮವೆಂಬುದನ್ನರಿತನು? ಅದನ್ನು ಕೇಳಬೇಕೆಂದಿರುವೆನು. ನನಗೆ ಅತ್ಯಂತ ಕುತೂಹಲವುಂಟಾಗಿರುವುದು.

೨೫—೨೬. ಮಾರ್ಕಂಡೇಯನು ಹೇಳುತ್ತಾನೆ:— ಇಕ್ಷ್ವಾಕುವಂಶದಲ್ಲಿ ಜನಿಸಿದ ಶುದ್ಧೋದನನ ಮೊಮ್ಮಗನಾದ ಚಾಣಕ್ಯನೆಂಬ ಮಹಾರಾಜನು ರಾಜರ್ಷಿಯೆನಿಸಿ ಈ ಭೂಮಂಡಲವನ್ನಾಳುತ್ತಿದ್ದನು. ವಿಕ್ರಮಶೀಲನೂ, ಬುದ್ಧಿ ಶಾಲಿಯೂ, ಶೂರನೂ, ಯಾರಿಂದಲೂ ವಂಚನೆಗೊಳಗಾಗದವನೂ ಆದ ಆತ ನೊಮ್ಮೆ ಹಠಾತ್ತಾಗಿ ಧೂರ್ತಗಳಾದ ಎರಡು ಕಾಗೆಗಳಿಂದ ವಂಚಿತನಾದನು.

೨೭. ಯುಧಿಷ್ಠಿರನು ಹೇಳುತ್ತಾನೆ:—ಹಿಂದೆ ನೀನು ಮಹಾತ್ಮನಾದ ಆ ರಾಜನು ಮಹಾಬುದ್ಧಿಶಾಲಿಯೆಂದು ಹೇಳಿದೆಯಷ್ಟೆ. ಅಂತಹವನು ವಾಯಸ ಗಳಿಂದ ಹೇಗೆ ಯಾವ ಕಾರಣದಿಂದ ವಂಚಿತನಾದನು?

೨೮. "ಅನ್ಯನಿಂದ ವಂಚಿತನಾದರೆ ಜೀವಿಸುವುದಿಲ್ಲ; ಖಂಡಿತವಾಗಿಯೂ ಪ್ರಾಣಗಳನ್ನು ಬಿಡುವೆನು" ಎಂದು ಅವನು ಪ್ರತಿಜ್ಞೆಯನ್ನು ಮಾಡಿದ್ದನಲ್ಲವೆ. ಅದನ್ನು ನನಗೆ ಹೇಳು. ಕೇಳಲು ಬಹಳ ಕುತೂಹಲವಾಗಿರುವುದು.

೨೯. ಮಾರ್ಕಂಡೇಯನು ಹೇಳುತ್ತಾನೆ:—ತಾನು ವಂಚಿತನಾದುದನ್ನು ತಿಳಿದು ರಾಜನು ಆ ವಾಯಸಗಳನ್ನು ಹಿಡಿದು ತೀವ್ರವಾದ ದಂಡವನ್ನು ವಿಧಿಸಿ ಯಮನಗರಿಗೆ ಕಳುಹಿಸಿದನು.

ವಾಯಸಾವೂಚತುಃ:—

ಸುಂದೋಪಸುಂದಯೋಃ ಪುತ್ರಾವಾವಾಂ ಕಾಕತ್ವಮಾಗತೌ ।
ಮಾವಧೀಸ್ತ್ವಂ ಮಹಾಭಾಗ ಕಸ್ಮಿಂಶ್ಚಿತ್ಕಾರಣಾಂತರೇ ॥ ೩೦ ॥
ತಾವಾವಾಂ ಕೃತಸಂಕಲ್ಪೌ ತ್ವಯಾ ಕೋಪೇನ ಮಾನದ ।
ನಿರಸ್ತಾವನಿರಸ್ತೌ ವಾ ಯಾಸ್ಯಾವಃ ಪರಮಾಂ ಗತಿಂ ॥ ೩೧ ॥
ತದಾದೇಶಸ್ಯ ರಾಜೇಂದ್ರ ಕೃತ್ವಾ ವಾ ತವ ಮಹತ್ಪ್ರಿಯಂ ।
ಮುಕ್ತಶಾಪೌ ಭವಿಷ್ಯಾವೋ ಬ್ರಹ್ಮಣೋ ವಚಸಂ ತಥಾ ॥ ೩೨ ॥
ತಚ್ಛ್ರುತ್ವಾ ಕಾಕವಚನಂ ಚಾಣಕ್ಯೋ ನೃಪಸತ್ತಮಃ ।
ನಾಹಂ ಜೀವೇ ವಿದಿತ್ವೈವಂ ವಂಚಿತಃ ಕೇನ ಕರ್ಹಿಚಿತ್ ॥ ೩೩ ॥
ತಸ್ಮಾತ್ತೀರ್ಥಂ ವಿಜಾನೀತಂ ಯಮಸ್ಯ ಸದನೇ ದ್ವಿಜೌ ।
ಪ್ರೇಷಯಾಮಿ ಯಥಾನ್ಯಾಯಂ ಶ್ರುತ್ವಾ ತತ್ಕಥಯಿಷ್ಯಥಃ ॥ ೩೪ ॥
ತೇನೈವ ಮುಕ್ತೌ ತೌ ಕಾಕೌ ಸ್ರಕ್ಚಂದನವಿಭೂಷಿತೌ ।
ಶೀಘ್ರಗೌ ಪ್ರೇಷಯಾಮಾಸ ಯಮಸ್ಯ ಸದನಂ ಪ್ರತಿ ॥ ೩೫ ॥

---

೩೦. ಕಾಗೆಗಳು ಹೇಳುತ್ತವೆ:—ಮಹಾತ್ಮನೆ! ನಾವು ಸುಂದೋಪಸುಂದರ ಪುತ್ರರು. ಕಾರಣಾಂತರದಿಂದ ಕಾಗೆಯ ಜನ್ಮವನ್ನು ತಾಳಿರುವೆವು. ನಮ್ಮನ್ನು ಕೊಲ್ಲಬೇಡ.

೩೧. ನಾವು ಸಂಕಲ್ಪವನ್ನು ಮಾಡಿಕೊಂಡಿರುವುದರಿಂದ ನೀನು ನಮ್ಮನ್ನು ತಿರಸ್ಕರಿಸಿದರೂ, ತಿರಸ್ಕರಿಸದಿದ್ದರೂ ಪರಮಗತಿಯನ್ನು ಪಡೆಯುವೆವು.

೩೨. ರಾಜೇಂದ್ರನೆ! ಆದುದರಿಂದ ನಮಗೆ ಅಪ್ಪಣೆಯನ್ನು ಕೊಡು. ನಿನಗೆ ಅತ್ಯಂತ ಪ್ರಿಯವಾದ ಕಾರ್ಯವೊಂದನ್ನು ಮಾಡಿ ನಮ್ಮ ಶಾಪಗಳನ್ನು ಕಳೆದುಕೊಳ್ಳುವೆವು. ಬ್ರಹ್ಮನ ವಚನವಂತಿರುವುದು.

೩೩. ಕಾಗೆಗಳ ಮಾತನ್ನು ಕೇಳಿ ಚಾಣಕ್ಯ ಮಹಾರಾಜನು ಹೇಳಿದನು. "ಯಾವನಿಂದಲೂ ಹೇಗೂ ವಂಚನೆಗೊಳಗಾದ ಮೇಲೆ ನಾನು ಜೀವಿಸುವುದಿಲ್ಲ.

೩೪. ಕಾಗೆಗಳಿರಾ! ಆದುದರಿಂದ ನೀವು ಯಮಲೋಕಕ್ಕೆ ಹೋಗಿ ಭೂಲೋಕದಲ್ಲಿ ಉತ್ತಮವಾದ ತೀರ್ಥವನ್ನು ತಿಳಿದು ಬನ್ನಿರಿ. ಅದನ್ನು ಹೇಳಲು ಕಳುಹಿಸುವೆನು. ಚೆನ್ನಾಗಿ ತಿಳಿದು ಬಂದು ನನಗೆ ಹೇಳಿರಿ."

೩೫. ಇಂತೆಂದು ಆತನು ವೇಗಶಾಲಿಗಳಾದ ಆ ಕಾಗೆಗಳನ್ನು ಬಿಡುಗಡೆ ಮಾಡಿ ಪುಷ್ಪಗಂಧಾದಿಗಳಿಂದಲಂಕರಿಸಿ ಯಮಪಟ್ಟಣಕ್ಕೆ ಕಳುಹಿಸಿಕೊಟ್ಟನು.

ರಾಜೋವಾಚ :—

ತತ್ರ ಧರ್ಮಪುರಂ ಗತ್ವಾ ವಿಚರಂತಾವಿತಸ್ತತಃ ।
ಯದಿ ಪೃಚ್ಛತಿ ಧರ್ಮಾತ್ಮಾ ಯಮಃ ಸಂಯಮನೋ ಮಹಾನ್ ॥ ೩೬ ॥
ಕುತೋ ವಾಮಾಗತಂ ಬ್ರೂತಂ ಕೇನ ವಾ ಭೂಷಿತಾವುಭೌ ।
ಮದೀಯಾ ಭಾರತೀ ತಸ್ಯ ಕಥನೀಯಾ ಹ್ಯಶಂಕಿತಂ ॥ ೩೭ ॥
ಇಕ್ಷ್ವಾಕುಸಂಭವೋ ರಾಜಾ ಚಾಣಕ್ಯೋ ನಾಮ ಧಾರ್ಮಿಕಃ ।
ದ್ವಾದಶಾಹೇ ಮೃತಸ್ಯಾಸ್ಯ ತರ್ಪಿತಾವಶನಾದಿನಾ ॥ ೩೮ ॥
ತಚ್ಛ್ರುತ್ವಾ ವಚನಂ ರಾಜ್ಞೋ ಗತೌ ತೌ ಯಮಸಾದನಂ ।
ಕ್ರೀಡಿತೌ ಪ್ರಾಂಗಣೇ ತಸ್ಯ ಸ್ರಕ್ಚಂದನವಿಭೂಷಿತೌ ।
ಧರ್ಮರಾಜೇನ ತೌ ದೃಷ್ಟ್ವಾ ಪೃಷ್ಟ್ವಾ ಧೃಷ್ಟ್ವಾ ಚ ವಾಯಸೌ ॥ ೩೯ ॥

ಯಮ ಉವಾಚ :—

ಕುತಃ ಸ್ಥಾನಾತ್ಸಮಾಯಾತೌ ಕೇನ ವಾ ಭೂಷಿತಾವುಭೌ ।
ವೃತ್ತಂ ವೈ ಕಥ್ಯತಾಮೇತದ್ವಾಯಸಾವವಿಶಂಕಯಾ ॥ ೪೦ ॥

---

೩೬. ರಾಜನು ಹೇಳುತ್ತಾನೆ:—ನೀವು ಯಮಪುರಕ್ಕೆ ಹೋಗಿ ಅಲ್ಲಲ್ಲಿ ಸಂಚರಿಸುತ್ತಿರಿ. ಧರ್ಮತತ್ಪರನೂ, ನಿಯಾಮಕನೂ ಆದ ಯಮನು ನಿಮ್ಮನ್ನು ಕೇಳುವನು.

೩೭. "ನೀವಿಬ್ಬರೂ ಇಲ್ಲಿಗೇಕೆ ಬಂದಿರಿ? ಹೇಳಿರಿ. ಯಾರು ನಿಮನ್ನು ಅಲಂಕರಿಸಿದರು?" ಇಂತೆನ್ನುವ ಆತನಿಗೆ ನಿಸ್ಸಂಕೋಚವಾಗಿ ನಾನು ಹೇಳುವ ಮಾತುಗಳನ್ನು ಹೇಳಿರಿ.

೩೮. "ಇಕ್ಷ್ವಾಕುವಂಶದಲ್ಲಿ ಚಾಣಕ್ಯನೆಂಬ ಮಹಾಧರ್ಮಶೀಲನಾದ ರಾಜನೊಬ್ಬನಿದ್ದನು. ಆತನು ಸತ್ತ ಹನ್ನೆರಡನೆಯ ದಿನದ ಅನ್ನಾದಿಗಳಿಂದ ನಾವು ಸಂತೃಪ್ತರಾಗಿರುವೆವು."

೩೯. ಇಂತೆಂದ ರಾಜನ ಮಾತನ್ನಂಗೀಕರಿಸಿ ಆ ಕಾಗೆಗಳು ಸಂಯಮನೀ ಪುರಕ್ಕೆ ಹೋಗಿ ಸ್ರಕ್ಚಂದನಾದಿಗಳಿಂದ ಶೋಭಿಸುತ್ತ ಆತನ ಪ್ರಾಂಗಣದಲ್ಲಿ ಓಡಾಡುತ್ತಿದ್ದುವು. ಯಮಧರ್ಮರಾಜನೂ ಧೈರ್ಯಶಾಲಿಗಳಾದ ಆ ವಾಯಸಗಳನ್ನು ಕಂಡು ಪ್ರಶ್ನೆಮಾಡಿದನು.

೪೦. ಯಮನು ಹೇಳುತ್ತಾನೆ:—ನೀವು ಯಾವ ಲೋಕದಿಂದ ಬಂದಿರಿ? ಯಾರು ನಿಮಗಿಂತು ಅಲಂಕಾರವನ್ನು ಮಾಡಿದರು? ಎಲೈ ಕಾಗೆಗಳಿರಾ! ನಿಮ್ಮ ಚರಿತ್ರೆಯನ್ನೆಲ್ಲ ಸಂಕೋಚವಿಲ್ಲದೆ ಹೇಳಿರಿ.

ಕಾಕಾವೂಚತುಃ :—

ಇಕ್ಷ್ವಾಕುಸಂಭವೋ ರಾಜಾ ಚಾಣಕ್ಯೋ ನಾಮ ಧಾರ್ಮಿಕಃ ।
ದ್ವಾದಶಾಹೇ ಮೃತಸ್ಯಾಸ್ಯ ತರ್ಪಿತಾವಶನಾದಿಭಿಃ ॥ ೪೧ ॥
ತಯೋಸ್ತದ್ವಚನಂ ಶ್ರುತ್ವಾ ತದಾ ವೈವಸ್ವತೋ ಯಮಃ ।
ಚಿತ್ರಗುಪ್ತಂ ಕಲಿಂ ಕಾಲಂ ವೀಕ್ಷ್ಯ ತಾವಿದಮಬ್ರವೀತ್ ॥ ೪೨ ॥
ಅಂಡಜಸ್ವೇದಜಾತೀನಾಂ ಭೂತಾನಾಂ ಸಚರಾಚರೇ ।
ವಿಹಿತಂ ಲೋಕಕರ್ತ್ರ್ಯಣಾಂ ಸಾನ್ನಿಧ್ಯಂ ಬ್ರಹ್ಮಣಾ ಮಮ ॥ ೪೩ ॥
ಗತಃ ಕುತ್ರ ದುರಾಚಾರಶ್ಚಾಣಕ್ಯೋ ನಾಮತಸ್ತ್ವಿಹ ।
ಅನ್ವಿಷ್ಯತಾಂ ಪುರಾಣೇಷು ತ್ವಿತಿಹಾಸೇಷು ಯಾ ಗತಿಃ ॥ ೪೪ ॥
ತತಸ್ತೈರ್ಧರ್ಮಪಾಲೈಸ್ತು ಧರ್ಮರಾಜಪ್ರಚೋದಿತೈಃ ।
ನಿರೀಕ್ಷಿತಾ ಪುರಾಣೋಕ್ತಾ ಕರ್ಮಜಾ ಗತಿರಾಗತಿಃ ॥ ೪೫ ॥
ತತಃ ಪ್ರೋವಾಚ ವಚನಂ ಧರ್ಮೋ ಧರ್ಮಭೃತಾಂ ವರಃ ।
ಶೃಣ್ವತಾಂ ಧರ್ಮಪಾಲಾನಾಂ ಮೇಘಗಂಭೀರಯಾ ಗಿರಾ ॥ ೪೬ ॥

---

೪೧. ಕಾಗೆಗಳು ಹೇಳುತ್ತವೆ:—ಇಕ್ಷ್ವಾಕುವಿನ ಕುಲದಲ್ಲಿ ಚಾಣಕ್ಯನೆಂಬ ಧಾರ್ಮಿಕನಾದ ರಾಜನೊಬ್ಬನಿದ್ದನು. ಆತನು ಮೃತನಾದ ಹನ್ನೆರಡನೆಯ ದಿನ ನಾವು ಅನ್ನಾದಿಗಳಿಂದ ಸಂತುಷ್ಟರಾದೆವು.

೪೨. ಅವುಗಳ ಮಾತನ್ನು ಕೇಳಿ ಯಮನು ಚಿತ್ರಗುಪ್ತನನ್ನೂ, ಕಲಿಯನ್ನೂ, ಕಾಲನನ್ನೂ ಕರೆದು ಈ ವಿಷಯವನ್ನು ವಿಮರ್ಶೆಮಾಡುವಂತೆ ಹೇಳಿದನು.

೪೩. "ಚರಾಚರಾತ್ಮಕವಾದ ಬ್ರಹ್ಮಾಂಡದಲ್ಲೆಲ್ಲ ಸಮಸ್ತ ಅಂಡಜ ಸ್ವೇದಜಾದಿ ಪ್ರಾಣಿಗಳು ನನ್ನ ಬಳಿಗೆ ಬರಬೇಕೆಂದು ಲೋಕಪಾಲಕರಲ್ಲಿ ನನಗೆ ಬ್ರಹ್ಮನು ಅಧಿಕಾರವನ್ನು ಕೊಟ್ಟಿರುವನು.

೪೪. ಚಾಣಕ್ಯನೆಂಬ ಹೆಸರಿನ ಆ ದುರಾಚಾರಿಯು ಎಲ್ಲಿಗೆ ಹೋದನು? ಪುರಾಣಗಳಲ್ಲಿಯೂ ಇತಿಹಾಸಗಳಲ್ಲಿಯೂ ಅವನಿಗೆ ಯಾವ ಗತಿಯೆಂಬುದನ್ನು ಹುಡುಕಿ ಹೇಳಿರಿ.

೪೫. ಬಳಿಕ ಧರ್ಮಪಾಲಕರು ಯಮನಿಂದ ಚೋದಿತರಾಗಿ ಪುರಾಣಗಳಲ್ಲಿ ಹುಡುಕಿ ಯಾವ ಯಾವ ಕರ್ಮಗಳಿಗೆ ಯಾವ ಯಾವ ಗತಿಗಳು ಲಭಿಸುವುವೆಂಬುದನ್ನು ಹುಡುಕಿದರು.

೪೬. ಅದರಂತೆ ಚಾಣಕ್ಯನು ಯಾವ ನರಕದಲ್ಲಿಯೂ ಕಾಣದಿರಲು ಧರ್ಮಪಾಲಕರೆಲ್ಲರೂ ಕೇಳುತ್ತಿರಲು ಧರ್ಮಸಂಸ್ಥಾಪಕರಲ್ಲಿ ಅಗ್ರಗಣ್ಯನಾದ ಯಮಧರ್ಮನು ಮೇಘಗರ್ಜಿತದಂತೆ ಗಂಭೀರವಾದ ಧ್ವನಿಯಿಂದ ಇಂತೆಂದನು.

ಶುಕ್ಲತೀರ್ಥೇ ಮೃತಾನಾಂ ತು ನರ್ಮದಾವಿಮಲೇ ಜಲೇ ।
ಅಂಡಜಸ್ವೇದಜಾತೀನಾಂ ನ ಗತಿರ್ಮಮ ಸನ್ನಿಧೌ ॥ ೪೭ ॥
ತತ್ತೀರ್ಥಂ ಧಾರ್ಮಿಕಂ ಲೋಕೇ ಬ್ರಹ್ಮವಿಷ್ಣುಮಹೇಶ್ವರೈಃ ।
ನಿರ್ಮಿತಂ ಪರಯಾ ಭಕ್ತ್ಯಾ ಲೋಕಾನಾಂ ಹಿತಕಾಮ್ಯಯಾ ॥ ೪೮ ॥
ಪಾಪೋಪಪಾತಕೈರ್ಯುಕ್ತಾ ಯೇ ನರಾ ನರ್ಮದಾಜಲೇ ।
ಶುಕ್ಲತೀರ್ಥೇ ಮೃತಾಃ ಶುದ್ಧಾ ನ ತೇ ಮದ್ವಿಷಯಾಃ ಕ್ವಚಿತ್ ॥ ೪೯ ॥
ಏತಚ್ಛ್ರುತ್ವಾ ತು ವಚನಂ ತೌ ಕಾಕೌ ಯಮಭಾಷಿತಂ ।
ಆಗತೌ ಶೀಘ್ರಗೌ ಪಾರ್ಥ ದೃಷ್ಟ್ವಾ ಯಮಪುರಂ ಮಹತ್ ॥ ೫೦ ॥
ಪೃಷ್ಟೌ ತೌ ಪ್ರಣತೌ ರಾಜ್ಞಾ ಯಥಾವೃತ್ತಂ ಯಥಾಶ್ರುತಂ ।
ಕಥಯಾಮಾಸತುಃ ಪಾರ್ಥ ದಾನವೌ ಕಾಕತಾಂ ಗತೌ ॥ ೫೧ ॥
ಅಸ್ಮಾತ್ಸ್ಥಾನಾದ್ಗತಾವಾವಾಂ ಯಮಸ್ಯ ಪುರಮುತ್ತಮಂ ।
ಪೃಥಿವ್ಯಾ ದಕ್ಷಿಣೇ ಭಾಗೇ ಹ್ಯತೀತ್ಯ ಬಹುಯೋಜನಂ ॥ ೫೨ ॥

---

೪೭. "ನರ್ಮದೆಯ ಶುಭ್ರವಾದ ಜಲದಿಂದ ಕೂಡಿದ ಶುಕ್ಲತೀರ್ಥದಲ್ಲಿ ಮೃತಿಯನ್ನು ಹೊಂದಿದ ಅಂಡಜಸ್ವೇದಜಗಳೆಂಬ ಕ್ರಿಮಿಕೀಟಗಳೂ ಕೂಡ ನನ್ನ ಸನ್ನಿಧಿಗೆ ಬರಲಾರವು.

೪೮. ಸಕಲ ಲೋಕದ ಜನರಿಗೂ ಹಿತವನ್ನು ಮಾಡಬೇಕೆಂಬ ಅಪೇಕ್ಷೆಯಿಂದ ಬ್ರಹ್ಮವಿಷ್ಣು ಮಹೇಶ್ವರರು ಪರಮಭಕ್ತಿಯುಕ್ತರಾಗಿ ಧರ್ಮಭೂಯಿಷ್ಠವಾದ ಈ ಕ್ಷೇತ್ರವನ್ನು ನಿರ್ಮಿಸಿರುವರು.

೪೯. ಮಹಾಪಾತಕ ಮತ್ತು ಉಪಪಾತಕಗಳಿಂದ ಕೂಡಿದ್ದರೂ ಯಾವ ಮಾನವರು ಶುಕ್ಲತೀರ್ಥದ ನರ್ಮದಾಜಲದಲ್ಲಿ ದೇಹತ್ಯಾಗವನ್ನು ಮಾಡುವರೊ, ಅವರು ಪರಿಶುದ್ಧರು. ಅವರೆಂದಿಗೂ ನನ್ನ ದಂಡಕ್ಕೆ ಅಧೀನರಾಗಲಾರರು."

೫೦. ಧರ್ಮರಾಜನೆ! ಇಂತೆಂದ ಯಮನ ಮಾತುಗಳನ್ನು ಕೇಳಿ ವೇಗಶಾಲಿಗಳಾದ ಆ ಕಾಗೆಗಳು ಯಮನಗರವನ್ನೆಲ್ಲ ನೋಡಿಕೊಂಡು ಹಿಂದಿರುಗಿದುವು.

೫೧. ಯುಧಿಷ್ಠಿರನೆ! ರಾಜನನ್ನು ನಮಸ್ಕರಿಸಿ ಕಾಗೆಗಳ ರೂಪವನ್ನು ಧರಿಸಿದ್ದ ಆ ರಾಕ್ಷಸರು ಯಮಲೋಕದಲ್ಲಿ ತಾವು ನೋಡಿದುದನ್ನೂ ಕೇಳಿದುದನ್ನೂ ಸತ್ಯವಾಗಿ ಹೇಳಿದರು.

೫೨. "ಮಹಾರಾಜ! ನಾವು ಇಲ್ಲಿಂದ ಹೊರಟು ಭೂಮಂಡಲದ ದಕ್ಷಿಣ ದಿಕ್ಕಿನಲ್ಲಿ ಅನೇಕ ಯೋಜನಗಳ ದೂರದಲ್ಲಿರುವ ಯಮನ ಸರ್ವಶ್ರೇಷ್ಠವಾದ ರಾಜಧಾನಿಯನ್ನು ಸೇರಿದೆವು.

ತತ್ಪುರಂ ಕಾಮಗಂ ದಿವ್ಯಂ ಸ್ವರ್ಣಪ್ರಾಕಾರತೋರಣಂ ।
ಅನೇಕಗೃಹಸಂಬಾಧಂ ಮಣಿಕಾಂಚನಭೂಷಿತಂ ॥ ೫೩ ॥
ಚತುಷ್ಪಥೈಶ್ಚತ್ವರೈಶ್ಚ ಘಂಟಾಮಾರ್ಗೋಪಶೋಭಿತಂ ।
ಉದ್ಯಾನವನಸಂಛನ್ನಂ ಪದ್ಮಿನೀಖಂಡಮಂಡಿತಂ ॥ ೫೪ ॥
ಹಂಸಸಾರಸಸಂಘುಷ್ಟಂ ಕೋಕಿಲಾಕುಲಸಂಕುಲಂ ।
ಸಿಂಹವ್ಯಾಘ್ರ ಗಜಾಕೀರ್ಣನ್ಯೃಕ್ಷವಾನರಸೇವಿತಂ ॥ ೫೫ ॥
ನರನಾರೀಸಮಾಕೀರ್ಣಂ ನಿತ್ಯೋತ್ಸವವಿಭೂಷಿತಂ ।
ಶಂಖದುಂದುಭಿನಿರ್ಘೋಷೈರ್ವೀಣಾವೇಣುನಿನಾದಿತಂ ।
ಯಮಮಾರ್ಗೇಽಪಿ ವಿಹಿತಂ ಸ್ವರ್ಗಲೋಕಮಿವಾಽಪರಂ ॥ ೫೬ ॥
ಗತೌ ತತ್ರ ಪುನಶ್ಚಾಽನ್ಯೈರ್ಯಮದೂತೈರ್ಯಮಾಜ್ಞಯಾ ।
ವಿದಿತೌ ಪ್ರೇಷಿತೌ ತತ್ರ ಯತ್ರ ದೇವೋ ಜಗತ್ಪ್ರಭುಃ ॥ ೫೭ ॥
ಪ್ರಾಣಸ್ಯ ಭೀತ್ಯಾ ದೃಷ್ಟೋಽಸೌ ಸಿಂಹಾಸನಗತಃ ಪ್ರಭುಃ ।
ಮಹಾಕಾಯೋ ಮಹಾಜಂಘೋ ಮಹಾಸ್ಕಂಧೋ ಮಹೋದರಃ ॥೫೮॥

---

೫೩. ಆ ಪುರವು ಸ್ವೇಚ್ಛಾಗಾಮಿಯೂ, ದಿವ್ಯವೂ, ಚಿನ್ನದ ಉಪ್ಪರಿಗೆ ಬಾಗಿಲ್ವಾಡಗಳುಳ್ಳದುದೂ, ಅನೇಕ ಗೃಹಗಳಿಂದ ನಿಬಿಡವೂ, ಚಿನ್ನ ನವರತ್ನ ಗಳಿಂದಲಂಕೃತವೂ ಆಗಿರುವುದು.

೫೪. ಬೀದಿಗಳಿಂದಲೂ, ಚೌಕಗಳಿಂದಲೂ, ರಾಜಮಾರ್ಗಗಳಿಂದಲೂ ಶೋಭಿಸುತ್ತ ಉದ್ಯಾನವನಗಳಿಂದ ಪರಿವೃತವಾಗಿ ಕಮಲಸಮೂಹಗಳಿಂದ ರಂಜಿಸುತ್ತಿದ್ದಿತು.

೫೫. ಹಂಸ ಸಾರಸಪಕ್ಷಿಗಳ ಗುಂಪುಗಳಿಂದಲೂ, ಕೋಗಿಲೆಗಳ ಇಂಚರ ಗಳಿಂದಲೂ, ಅರಣ್ಯದಲ್ಲಿ ಸಿಂಹ, ಹುಲಿ, ಆನೆಗಳಿಂದಲೂ, ಕರಡಿ, ಕಪಿ ಗಳಿಂದಲೂ ಆ ದೇಶವು ಮನೋಹರವಾಗಿದ್ದಿತು.

೫೬. ಪುರುಷರೂ ಸ್ತ್ರೀಯರೂ ತುಂಬಿದ್ದ ಆ ನಗರದಲ್ಲಿ ನಿತ್ಯವೂ ಉತ್ಸವ ಗಳು ನಡೆಯುತ್ತಿದ್ದುವು. ಶಂಖಗಳು, ಭೇರಿಗಳು, ವೀಣೆ, ವೇಣು ಮುಂತಾದ ವಾದ್ಯಗಳು ಧ್ವನಿಗೈಯುತ್ತಿದ್ದುವು. ಯಮಲೋಕದ ಮಾರ್ಗದಲ್ಲಿಯೂ ನಿರ್ಮಿತ ವಾದ ಮತ್ತೊಂದು ಸ್ವರ್ಗಲೋಕವೆಂಬಂತೆ ಆ ನಗರವು ಶೋಭಿಸುತ್ತಿದ್ದಿತು.

೫೭. ಅಲ್ಲಿಗೆ ನಾವು ಹೋಗಲು ಯಮನ ಅಪ್ಪಣೆಯಿಂದ ಸಂಚರಿಸುತ್ತಿದ್ದ ಯಮದೂತರು ನಮ್ಮನ್ನು ಕಂಡು ಲೋಕಪ್ರಭುವಾದ ಆತನಿದ್ದಲ್ಲಿಗೆ ಕಳುಹಿಸಿ ಕೊಟ್ಟರು.

೫೮. ಭಯದಿಂದ ನಾವು ಆತನನ್ನು ನಮಸ್ಕರಿಸಿ ಸಿಂಹಾಸನದಲ್ಲಿ ಕುಳಿತಿದ್ದ ಆ ಲೋಕಪಾಲಕನನ್ನು ಕಂಡೆವು. ಆತನು ದೀರ್ಘದೇಹನೂ, ದೊಡ್ಡ ತೊಡೆ

ಮಹಾವಕ್ಷಾ ಮಹಾಬಾಹುರ್ಮಹಾವಕ್ತ್ರೇಕ್ಷಣೋ ಮಹಾನ್ ।
ಮಹಾಮಹಿಷಮಾರೂಢೋ ಮಹಾಮುಕುಟಭೂಷಿತಃ ॥ ೫೯ ॥
ತತ್ರಾಽನ್ಯಶ್ಚ ಕಲಿಃ ಕಾಲಶ್ಚಿತ್ರಗುಪ್ತೋ ಮಹಾಮತಿಃ ।
ಸಮಾಗತೌ ತದಾ ದೃಷ್ಟೌ ಮಧ್ಯೇ ಜ್ವಲಿತಪಾವಕೌ ॥ ೬೦ ॥
ಪುಣ್ಯಪಾಪಾನಿ ಜಂತೂನಾಂ ಶ್ರುತಿಸ್ಮೃತ್ಯರ್ಥಪಾರಗೌ ।
ವಿಚಾರಯಂತೌ ಸತತಂ ತಿಷ್ಠಾತೇ ತೌ ದಿವಾನಿಶಂ ॥ ೬೧ ॥
ತತೋ ಹ್ಯಾವಾಂ ಪ್ರಣಾಮಾಂತೇ ಯಮೇನ ಯಮಮೂರ್ತಿನಾ ।
ಪೃಷ್ಟಾವಾಗಮನೇ ಹೇತುಂ ತಮಬ್ರುವ ಶೃಣುಷ್ವ ತತ್ ॥ ೬೨ ॥
ಉಜ್ಜಯಿನ್ಯಾಂ ಮಹೀಪಾಲಶ್ಚಾಣಕ್ಯೋಽಭೂತ್ಪ್ರತಾಪವಾನ್ ।
ದ್ವಾದಶಾಽಹೇ ಮೃತಸ್ಯಾಽಸ್ಯ ಭುಕ್ತ್ವಾ ಪ್ರಾಪ್ತೌ ಯಮಾಲಯಂ ॥ ೬೩ ॥
ತತೋಽಸ್ಮಾಕಂ ವಚಃ ಶ್ರುತ್ವಾ ಕಂಪಯಿತ್ವಾ ಶಿರೋ ಯಮಃ ।
ಉವಾಚ ವಚನಂ ಸತ್ಯಂ ಸಭಾಮಧ್ಯೇ ಹಸನ್ನಿವ ॥ ೬೪ ॥

---

ಗಳುಳ್ಳವನೂ, ಅಗಲವಾದ ಭುಜಪ್ರದೇಶದವನೂ, ದೊಡ್ಡ ಹೊಟ್ಟೆಯವನೂ ಆಗಿದ್ದನು.

೫೯. ವಿಶಾಲವಾದ ಎದೆಯುಳ್ಳವನೂ, ನಿಡುದೋಳಿನವನೂ, ದೊಡ್ಡ ಮುಖ, ನೇತ್ರಗಳುಳ್ಳವನೂ, ಪರಾಕ್ರಮಿಯೂ, ದೊಡ್ಡ ಕೋಣವನ್ನೇರಿದವನೂ, ಉನ್ನತವಾದ ಕಿರೀಟವನ್ನು ಧರಿಸಿದವನೂ ಆಗಿದ್ದನು.

೬೦. ಅಲ್ಲಿ ಮತ್ತೊಬ್ಬ ಕಲಿಯೂ, ಕಾಲನೂ, ಬಹುಮತಿಗಳಾದ ಚಿತ್ರಗುಪ್ತರೂ ಇದ್ದರು. ನಾವು ಹೋಗಿ ಸಭಾಮಧ್ಯದಲ್ಲಿ ಉರಿಯುತ್ತಿರುವ ಬೆಂಕಿಯಂತೆ ತೇಜಸ್ವಿಗಳಾದ ಆ ಚಿತ್ರಗುಪ್ತರನ್ನು ಕಂಡೆವು.

೬೧. ಶ್ರುತಿಸ್ಮೃತಿಗಳ ತಾತ್ಪರ್ಯಗಳಲ್ಲಿ ಪಾರಂಗತರಾಗಿದ್ದ ಅವರು ಸಕಲ ಜೀವರ ಪುಣ್ಯಪಾಪಗಳನ್ನು ವಿಚಾರಿಸುತ್ತ ಅಹೋರಾತ್ರಗಳಲ್ಲಿಯೂ ಕುಳಿತಿರುತ್ತಿದ್ದರು.

೬೨. ಪ್ರಳಯಸ್ವರೂಪಿಯಾದ ಯಮನಿಗೆ ನಾವು ನಮಸ್ಕರಿಸಲು ಆತನು ನಾವು ಬಂದುದಕ್ಕೆ ಕಾರಣವನ್ನು ಕೇಳಿದನು. ಆತನಿಗೆ ನಾವು ಕೊಟ್ಟ ಉತ್ತರವನ್ನು ಕೇಳು.

೬೩. "ಉಜ್ಜಯಿನೀನಗರದಲ್ಲಿ ಮಹಾಪ್ರತಾಪಶಾಲಿಯಾದ ಚಾಣಕ್ಯನೆಂಬ ಮಹಾರಾಜನಿದ್ದನು. ಆತನು ಸತ್ತ ಹನ್ನೆರಡನೆಯ ದಿನದ ಶ್ರಾದ್ಧಾನ್ನವನ್ನು ತಿಂದು ನಾವು ಯಮಲೋಕಕ್ಕೆ ಪ್ರಾಪ್ತರಾದೆವು.

೬೪. ನಮ್ಮ ಮಾತನ್ನು ಕೇಳಿ ಯಮನು ತನ್ನ ತಲೆಯನ್ನಲ್ಲಾಡಿಸುತ್ತ ಸಭಾಮಧ್ಯದಲ್ಲಿ ಮುಗುಳ್ನಗೆಯಿಂದ ಸತ್ಯವಾದ ಈ ಮಾತನ್ನಾಡಿದನು.

**ಅಸ್ತಿ ತತ್ಕಾರಣಂ ಯೇನ ಚಾಣಕ್ಯಃ ಪಾಪಪೂರುಷಃ ।**
**ನಾಯಾತೋ ಮಮ ಲೋಕೇ ತು ಸರ್ವಪಾಪಭಯಂಕರೇ ॥ ೬೫ ॥**
**ಶುಕ್ಲತೀರ್ಥೇ ಮೃತಾನಾಂ ತು ನರ್ಮದಾಯಾಂ ಪರಂ ಪದಂ ।**
**ಜಾಯತೇ ಸರ್ವಜಂತೂನಾಂ ನಾಽತ್ರ ಕಾಚಿದ್ವಿಚಾರಣಾ ॥ ೬೬ ॥**
**ಅವಶಃ ಸ್ವವಶೋವಾಽಪಿ ಜಂತುಸ್ತತ್ಕ್ಷೇತ್ರಮಂಡಲೇ ।**
**ಮೃತಃ ಸ ವೈ ನ ಸಂದೇಹೋ ರುದ್ರಸ್ಯಾಽನುಚರೋ ಭವೇತ್ ॥ ೬೭ ॥**
**ತದ್ಧರ್ಮವಚನಂ ಶ್ರುತ್ವಾ ನಿರ್ಗತ್ಯ ನಗರಾದ್ಬಹಿಃ ।**
**ಪಶ್ಯಂತೌ ವಿವಿಧಾಂ ಘೋರಾಂ ನರಕೇ ಲೋಕಯಾತನಾಂ ॥ ೬೮ ॥**
**ತ್ರಿಂಶತ್ಕೋಟ್ಯೋ ಹಿ ಘೋರಾಣಾಂ ನರಕಾಣಾಂ ನೃಪೋತ್ತಮ ।**
**ದೃಷ್ಟ್ವಾ ಭೀತೌ ಪರಾನಾರ್ತಿಂ ಗತೌ ತತ್ರ ಮಹಾಪಥಿ ॥ ೬೯ ॥**
**ನರಕೋ ರೌರವಸ್ತತ್ರ ಮಹಾರೌರವ ಏವ ಚ ।**
**ಪೇಷಣಃ ಶೋಷಣಶ್ಚೈವ ಕಾಲಸೂತ್ರೋಽಸ್ಥಿಭಂಜನಃ ॥ ೭೦ ॥**
**ತಾಮಿಸ್ರಶ್ಚಾಂಧತಾಮಿಸ್ರಃ ಕೃಮಿಪೂತಿವಹಸ್ತಥಾ ।**
**ದೃಷ್ಟಶ್ಚಾಽನ್ಯೋ ಮಹಾಜ್ವಾಲಸ್ತತ್ರೈವ ವಿಷಭೋಜನಃ ॥ ೭೧ ॥**

---

೬೫. ಮಹಾಪಾತಕಿಯಾದ ಆ ಚಾಣಕ್ಯನು ಸಕಲ ಪಾಪಿಗಳಿಗೂ ಭಯಂಕರವಾಗಿರುವ ನನ್ನ ಲೋಕಕ್ಕೆ ಬರದಿರುವುದಕ್ಕೆ ಒಂದು ಕಾರಣವುಂಟು.

೬೬. ನರ್ಮದೆಯ ಶುಕ್ಲತೀರ್ಥದಲ್ಲಿ ದೇಹತ್ಯಾಗವನ್ನು ಮಾಡಿದ ಸಮಸ್ತ ಜೀವರಿಗೂ ಪರಮಪದವು ಲಭಿಸುವುದು. ಇದರಲ್ಲಿ ಸಂದೇಹವಿಲ್ಲ.

೬೭. ಅಕಸ್ಮಾತ್ತಾಗಿಯಾಗಲಿ, ಪ್ರಯತ್ನಪೂರ್ವಕವಾಗಿಯಾಗಲಿ ಆ ಕ್ಷೇತ್ರದ ಪ್ರದೇಶದಲ್ಲಿ ಮೃತಿಯನ್ನು ಹೊಂದುವ ಜೀವನು ನಿಸ್ಸಂಶಯವಾಗಿಯೂ ರುದ್ರನ ಅನುಚರನಾಗುವನು.

೬೮. ಧರ್ಮರಾಜನ ಈ ಮಾತುಗಳನ್ನು ಕೇಳಿ ನಾವು ಪಟ್ಟಣದಿಂದ ಹೊರಬಿದ್ದು ನರಕಲೋಕಗಳಲ್ಲಿ ಪಾಪಿಗಳು ಅನುಭವಿಸುವ ಅನೇಕ ವಿಧಗಳಾದ ಭಯಂಕರ ಯಾತನೆಗಳನ್ನು ನೋಡುತ್ತ ಬಂದೆವು.

೬೯. ರಾಜೇಂದ್ರನೆ! ಇಂತಹ ಘೋರನರಕಗಳು ಮೂವತ್ತು ಕೋಟಿಗಳಿರುವುವು. ಅವುಗಳನ್ನು ಕಂಡು ಭಯದಿಂದ ಕಳವಳಗೊಂಡು ರಾಜಮಾರ್ಗವನ್ನು ಹಿಡಿದೆವು.

೭೦–೭೯. ಅಲ್ಲಿ ರೌರವ, ಮಹಾರೌರವ, ಪೇಷಣ, ಶೋಷಣ, ಕಾಲಸೂತ್ರ, ಅಸ್ಥಿಭಂಜನ, ತಾಮಿಸ್ರ, ಅಂಧತಾಮಿಸ್ರ, ಕೃಮಿವಹ, ಪೂತಿವಹ, ಮಹಾಜ್ವಾಲ, ವಿಷಭೋಜನ, ದಂಶ, ಮಶಕ, ಯಮಳಪರ್ವತಗಳು

ನರಕೌ ದಂಶಮಶಕೌ ತಥಾ ಯಮಲಪರ್ವತೌ ।
ನದೀ ವೈತರಣೀ ದೃಷ್ಟಾ ಸರ್ವಪಾಪಪ್ರಣಾಶಿನೀ ॥ ೭೨ ॥
ಶೀತಲಂ ಸಲಿಲಂ ಯತ್ರ ಪಿಬಂತಿ ಹ್ಯಮೃತೋಪಮಂ ।
ತದೇವ ನೀರಂ ಪಾಪಾನಾಂ ಶೋಣಿತಂ ಪರಿವರ್ತತೇ ॥ ೭೩ ॥
ಅಸಿಪತ್ರವನಂ ಚಾಽನ್ಯದ್ದೃಷ್ಟಾಽನ್ಯಾ ಮಹತೀ ಶಿಲಾ ।
ಅಗ್ನಿಪುಂಜನಿಭಾಕಾರಾ ವಿಶಾಲಾ ಶಾಲ್ಮಲೀ ಪರಾ ॥ ೭೪ ॥
ಇತ್ಯಾದಯಸ್ತಥೈವಾಽನ್ಯೇ ಶತಸಾಹಸ್ರಸಂಜ್ಞಿತಾಃ ।
ಘೋರಘೋರತರಾ ದೃಷ್ಟಾಃ ಕ್ಲಿಶ್ಯಂತೇ ಯತ್ರ ಮಾನವಾಃ ॥ ೭೫ ॥
ವಾಚಿಕೈರ್ಮಾನಸೈಃ ಪಾಪೈ ಕರ್ಮಜೈಶ್ಚ ಪೃಥಗ್ವಿಧೈಃ ।
ಅಹಂಕಾರಕೃತೈರ್ದೋಷೈರ್ಮಾಯಾವಚನಪೂರ್ವಕೈಃ ॥ ೭೬ ॥
ಪಿತಾ ಮಾತಾ ಗುರುರ್ಭ್ರಾತಾ ಅನಾಥಾ ವಿಕಲೇಂದ್ರಿಯಾಃ ।
ಭ್ರಮಂತಿ ನೋದ್ಧೃತಾ ಯೇಷಾಂ ಗತಿಸ್ತೇಷಾಂ ಹಿ ರೌರವೇ ॥ ೭೭ ॥
ತತ್ರ ತೇ ದ್ವಾದಶಾಬ್ದಾನಿ ಕ್ಷಪಿತ್ವಾ ರೌರವೇಽಧಮಾಃ ।
ಇಹ ಮಾನುಷ್ಯಕೇ ಲೋಕೇ ದೀನಾಂಧಾಶ್ಚ ಭವಂತಿ ತೇ ॥ ೭೮ ॥

---

ಮುಂತಾದುವನ್ನು ಕಂಡೆವು. ಸಕಲ ಪಾತಕಗಳನ್ನೂ ಕಳೆಯುವ ವೈತರಣಿ ಯೆಂಬ ನದಿಯನ್ನೂ ಕಂಡೆವು.

೭೩. ಪುಣ್ಯವಂತರು ಅದರ ಶೀತಲಜಲವನ್ನು ಕುಡಿಯಲು ಅಮೃತಕ್ಕೆ ಸಮಾನವಾಗಿರುವುದು. ಅದನ್ನೇ ಪಾಪಿಗಳು ಕುಡಿದರೆ ರಕ್ತವಾಗಿ ಪರಿಣಮಿ ಸುವುದು.

೭೪–೭೫. ಅಸಿಪತ್ರವನವನ್ನು ಕಂಡೆವು. ಅಗ್ನಿಯ ರಾಶಿಯನ್ನು ಹೋಲುವ ವಿಶಾಲವಾದ ಶಿಲೆಯನ್ನೂ, ಮಹಾ ವಿಸ್ತಾರವಾದ ಶಾಲ್ಮಲೀವೃಕ್ಷವನ್ನೂ ನೋಡಿದೆವು. ಇವುಗಳನ್ನೂ, ಇನ್ನೂ ಲಕ್ಷಗಟ್ಟಲೆ ನರಕಗಳನ್ನೂ ನೋಡಿದೆವು. ಒಂದಕ್ಕಿಂತಲೂ ಒಂದು ಭಯಂಕರಗಳಾಗಿರುವ ಆ ನರಕಗಳಲ್ಲಿ ಜನರು ಪರಿತಪಿಸುತ್ತಿರುವರು.

೭೬. ಮಾತುಗಳಿಂದಲೂ, ಮನಸ್ಸಿನಿಂದಲೂ ಕಾರ್ಯವಲ್ಲಿಯೂ ಬಹು ವಿಧಗಳಾದ ಪಾಪಗಳನ್ನು ಅಹಂಕಾರದ ದೋಷದಿಂದಲೂ, ಸುಳ್ಳುಗಳನ್ನಾಡು ವುದರಿಂದಲೂ ಮಾಡುವರು.

೭೭. ಯಾರಿಂದ ತಂದೆ, ತಾಯಿ, ಗುರು, ಸಹೋದರರು, ಅನಾಥರು, ಇಂದ್ರಿಯವಿಕಲರು ಮೊದಲಾದವರು ಪೋಷಿತರಾಗದೆ ತಿರುಗುತ್ತಿರುವರೊ, ಅವರು ರೌರವನರಕದಲ್ಲಿ ಬೀಳುವರು.

೭೮. ಆ ನೀಚರು ರೌರವದಲ್ಲಿ ಹನ್ನೆರಡು ವರ್ಷಗಳು ದುಃಖಗಳನ್ನನು ಭವಿಸಿ ಪುನಃ ಮನುಷ್ಯಲೋಕದಲ್ಲಿ ದೀನರೂ ಅಂಧರೂ ಆಗಿ ಜನಿಸುವರು.

**ದೇವಬ್ರಹ್ಮಸ್ವಹರ್ತ್ರೂಣಾಂ ನರಾಣಾಂ ಪಾಪಕರ್ಮಣಾಂ ।**
**ಮಹಾರೌರವಮಾಶ್ರಿತ್ಯ ಧ್ರುವಂ ವಾಸೋ ಯಮಾಲಯೇ ॥ ೭೯ ॥**
**ತತಃ ಕಾಲೇನ ಮಹತಾ ಪಾಪಾಃ ಪಾಪೇನ ವೇಷ್ಟಿತಾಃ ।**
**ಜಾಯಂತೇ ಕಂಟಕೈರ್ಭಿನ್ನಾಃ ಕೋಶೇ ವಾ ಕೋಷಕಾರಕಾಃ ॥ ೮೦ ॥**
**ಮೃಗಪಕ್ಷಿವಿಹಂಗಾನಾಂ ಘಾತಕಾ ಮಾಂಸಭಕ್ಷಕಾಃ ।**
**ಪೇಷಣಂ ನರಕಂ ಯಾಂತಿ ಶೋಷಣಂ ಜೀವಬಂಧನಾತ್ ॥ ೮೧ ॥**
**ತತ್ರತ್ಯಾಂ ಯಾತನಾಂ ಘೋರಾಂ ಸಹಿತ್ವಾ ಶಾಸ್ತ್ರಚೋದಿತಾಂ ।**
**ಇಹ ಮಾನುಷ್ಯತಾಂ ಪ್ರಾಪ್ಯ ಪಂಗ್ವಂಧಬಧಿರಾ ನರಾಃ ॥ ೮೨ ॥**
**ಗವಾರ್ಥೇ ಬ್ರಾಹ್ಮಣಾರ್ಥೇ ಚ ಹ್ಯನೃತಂ ವದತಾಮಿಹ ।**
**ಪತನಂ ಜಾಯತೇ ಪುಂಸಾಂ ನರಕೇ ಕಾಲಸೂತ್ರಕೇ ॥ ೮೩ ॥**
**ತತ್ರತ್ಯಾ ಯಾತನಾ ಘೋರಾ ವಿಹಿತಾ ಶಾಸ್ತ್ರಕರ್ತೃಭಿಃ ।**
**ಭುಕ್ತ್ವಾ ಸಮಾಗತಾ ಹ್ಯತ್ರ ತೇ ಯಾಸ್ಯಂತ್ಯಂತ್ಯಜಾಂ ಗತಿಂ ॥ ೮೪ ॥**
**ಬಂಧಯಂತಿ ಚ ಯೇ ಜೀವಾಂಸ್ತ್ಯಕ್ತ್ವಾತ್ಮಕುಲಸಂತತಿಂ ।**
**ಪತಂತಿ ನಾಽತ್ರ ಸಂದೇಹೋ ನರಕೇ ತೇಽಸ್ಥಿಭಂಜನೇ ॥ ೮೫ ॥**

---

೭೯. ದೇವಬ್ರಾಹ್ಮಣರ ಸ್ವತ್ತನ್ನು ಅಪಹಾರಮಾಡಿದ ಪಾಪಕರ್ಮಿಗಳಾದ ನರರಿಗೆ ಯಮಲೋಕದಲ್ಲಿ ಮಹಾರೌರವವೆಂಬ ನರಕವೇ ಶಾಶ್ವತವಾದ ವಾಸಸ್ಥಳವಾಗಿರುವುದು.

೮೦. ಇಂತು ಮಹತ್ತರವಾದ ಪಾಪದಿಂದ ಲೇಪಿತರಾದ ಅವರು ಬಹು ಕಾಲದ ಮೇಲೆ ಕಂಟಕಗಳಿಂದ ಭಿನ್ನವಾದ ದೇಹದವರೊ, ಅಥವ ಕೋಶಕಾರಕಗಳಾದ ಹುಳುಗಳಾಗಿಯೋ ಹುಟ್ಟುವರು.

೮೧. ಮೃಗಗಳನ್ನೂ, ಪಕ್ಷಿಗಳನ್ನೂ, ವಿಹಂಗಗಳನ್ನೂ ಕೊಂದು ಅವುಗಳ ಮಾಂಸವನ್ನು ತಿನ್ನುವ ಘಾತಕರು ಜೀವಹಿಂಸೆಯ ಫಲವಾಗಿ ಪೇಷಣವೆಂಬ ನರಕವನ್ನೂ, ಪ್ರಾಣಿಗಳನ್ನು ಹಿಡಿಯುವವರು ಶೋಷಣವನ್ನೂ ಸೇರುವರು.

೮೨. ಅಲ್ಲಿ ಅವರು ಶಾಸ್ತ್ರವಿಹಿತವಾದ ಘೋರಯಾತನೆಯನ್ನನುಭವಿಸಿ ಇಲ್ಲಿ ಮನುಷ್ಯ ಜನ್ಮವನ್ನು ತಾಳಿದರೆ ಕುಂಟರೊ, ಕುರುಡರೊ, ಕಿವುಡರೊ ಆಗಿರುವರು.

೮೩. ಗೋವುಗಳಿಗೂ ಬ್ರಾಹ್ಮಣರಿಗೂ ಹಿಂಸೆಯಾಗುವಂತೆ ಅನೃತವನ್ನು ಹೇಳುವ ಮನುಷ್ಯರಿಗೆ ಕಾಲಸೂತ್ರವೆಂಬ ನರಕದಲ್ಲಿ ಪತನವು ಸಂಭವಿಸುವುದು.

೮೪. ಶಾಸ್ತ್ರಕರ್ತೃಗಳಿಂದ ವಿಹಿತಗಳಾದ ಮಹಾ ಯಾತನೆಗಳನ್ನು ಅಲ್ಲಿ ಅನುಭವಿಸಿದ ಮೇಲೆ ಇಲ್ಲಿ ಬಂದು ಚಂಡಾಲರಾಗಿ ಜನಿಸುವರು.

೮೫. ಜೀವಿಗಳನ್ನು ಬಂಧನದಲ್ಲಿಡುವವರು ತಮ್ಮ ಕುಲವನ್ನೂ ಸಂತಾನ

ತತ್ರ ವರ್ಷಶತಸ್ಯಾಂತ ಇಹ ಮಾನುಷ್ಯತಾಂ ಗತಾಃ ।
ಕುಬ್ಜಾ ವಾಮನಕಾಃ ಪಾಪಾ ಜಾಯಂತೇ ದುಃಖಭಾಗಿನಃ ॥ ೮೬ ॥
ಯೇ ತ್ಯಜಂತಿ ಸ್ವಕಾಂ ಭಾರ್ಯಾಂ ಮೂಢಾಃ ಪಂಡಿತಮಾನಿನಃ ।
ತೇ ಯಾಂತಿ ನರಕಂ ಘೋರಂ ತಾಮಿಸ್ರಂ ನಾಽತ್ರ ಸಂಶಯಃ ॥ ೮೭ ॥
ತತ್ರ ವರ್ಷಶತಸ್ಯಾಂತೇ ಇಹಮಾನುಷ್ಯತಾಂ ಗತಾಃ ।
ದುಶ್ಚರ್ಮಾಣೋ ದುರ್ಭಗಾಶ್ಚ ಜಾಯಂತೇ ಮಾನವಾ ಹಿ ತೇ ॥ ೮೮ ॥
ಮಾನಕೂಟಂ ತುಲಾಕೂಟಂ ಕೂಟಕಂ ತು ವದಂತಿ ಯೇ ।
ನರಕೇ ತೇಽಂಧತಾಮಿಸ್ರೇ ಪ್ರಪಚ್ಯಂತೇ ನರಾಧಮಾಃ ॥ ೮೯ ॥
ಶತಸಾಹಸ್ರಿಕಂ ಕಾಲಮುಷಿತ್ವಾ ತತ್ರ ತೇ ನರಾಃ ।
ಇಹ ಶತ್ರುಗೃಹೇ ತ್ವಂಧಾ ಭ್ರಮಂತೇ ದೀನಮೂರ್ತಯಃ ॥ ೯೦ ॥
ಪಿತೃದೇವ ದ್ವಿಜೇಭ್ಯೋಽನ್ನಮದತ್ವಾ ಯೇಽತ್ರ ಭುಂಜತೇ ।
ನರಕೇ ಕೃಮಿಭಕ್ಷ್ಯೇ ತೇ ಪತಂತಿ ಸ್ವಾತ್ಮಪೋಷಕಾಃ ॥ ೯೧ ॥

---

ವನ್ನೂ ಕಳೆದುಕೊಂಡು ಅಸ್ಥಿಭಂಜನವೆಂಬ ನರಕದಲ್ಲಿ ಬೀಳುವುದರಲ್ಲಿ ಸಂಶಯವಿಲ್ಲ.

೮೬. ಅಲ್ಲಿ ಒಂದುನೂರು ವರ್ಷಗಳು ಕಳೆದಮೇಲೆ ಮನುಷ್ಯಲೋಕದಲ್ಲಿ ಜನಿಸಿ ಗೂನುಬೆನ್ನಿನವರೂ, ಕುಳ್ಳರೂ, ಪಾಪಿಗಳೂ, ದುಃಖಭಾಗಿಗಳೂ ಆಗಿರುವರು.

೮೭. ಯಾರು ಮೂಢರಾದರೂ ಪಂಡಿತರೆಂಬ ಹೆಮ್ಮೆಯಿಂದ ತಮ್ಮ ಪತ್ನಿಯರನ್ನು ತ್ಯಾಗಮಾಡುವರೊ, ಅವರು ತಾಮಿಸ್ರವೆಂಬ ಭಯಂಕರ ನರಕಕ್ಕೆ ಹೋಗುವುದರಲ್ಲಿ ಸಂದೇಹವಿಲ್ಲ.

೮೮. ಅಲ್ಲಿ ಒಂದುನೂರು ವರ್ಷಗಳ ಯಾತನೆಗಳನ್ನನುಭವಿಸಿ ಆ ಮನುಜರು ಚರ್ಮರೋಗದವರೂ, ದೌರ್ಭಾಗ್ಯವಂತರೂ ಆಗಿ ಜನಿಸುವರು.

೮೯. ಅಳತೆಯಲ್ಲಿಯೂ ತೂಕದಲ್ಲಿಯೂ ಮೋಸಗೊಳಿಸುವ ವರ್ತಕರೂ, ಸುಳ್ಳುಸಾಕ್ಷ್ಯವನ್ನು ಹೇಳುವವರೂ ಆದ ನೀಚ ಮಾನವರು ಅಂಧತಾಮಿಸ್ರವೆಂಬ ನರಕದಲ್ಲಿ ಸಂಕಟಪಡುವರು.

೯೦. ಆ ಜನರು ಅಲ್ಲಿ ಒಂದುಲಕ್ಷ ವರ್ಷಗಳಕಾಲ ವಾಸಮಾಡಿ ಶತ್ರುಗಳ ಮನೆಯಲ್ಲಿ ಕುರುಡರಾಗಿ ಹುಟ್ಟಿ ದೀನರೂಪದಿಂದ ಸಂಚರಿಸುತ್ತಿರುವರು.

೯೧. ಪಿತೃಗಳಿಗೂ, ದೇವತೆಗಳಿಗೂ, ಬ್ರಾಹ್ಮಣರಿಗೂ ಅನ್ನವನ್ನಿಡದೆ ತಮ್ಮ ಪೋಷಣೆಗಾಗಿಯೇ ಯಾರು ಇಲ್ಲಿ ಭೋಜನವನ್ನು ಮಾಡುವರೊ, ಅವರು ಕೃಮಿಭಕ್ಷ್ಯನರಕದಲ್ಲಿ ಬೀಳುವರು.

ತತಃ ಪ್ರಸೂತಿಕಾಲೇ ಹಿ ಕ್ರಿಮಿಭುಕ್ತಶ್ಚ ಸವ್ರಣಃ ।
ಜಾಯತೇಽಶುಚಿಗಂಧೋಽತ್ರ ಪರಭಾಗ್ಯೋಪಜೀವಕಃ ॥ ೧೨ ॥
ಸ್ವಕರ್ಮವಿಚ್ಯುತಾಃ ಪಾಪಾ ವರ್ಣಾಶ್ರಮವಿವರ್ಜಿತಾಃ ।
ನರಕೇ ಪೂಯಸಂಪೂರ್ಣೇ ಕ್ಲಿಶ್ಯಂತೇ ಹ್ಯಯುತಂ ಸಮಾಃ ॥ ೧೩ ॥
ಪೂರ್ಣೇ ತತ್ರ ತತಃ ಕಾಲೇ ಪ್ರಾಪ್ಯ ಮಾನುಷ್ಯಕಂ ಭವಂ ।
ಉದ್ವೇಜನೀಯಾ ಭೂತಾನಾಂ ಜಾಯಂತೇ ವ್ಯಾಧಿಭಿರ್ವೃತಾಃ ॥ ೧೪ ॥
ಅಗ್ನಿದೋ ಗರದಶ್ಚೈವ ಲೋಭಮೋಹಾನ್ವಿತೋ ನರಃ ।
ನರಕೇ ವಿಷಸಂಪೂರ್ಣೇ ನಿಮಜ್ಜತಿ ದುರಾತ್ಮವಾನ್ ॥ ೧೫ ॥
ತತ್ರ ವರ್ಷಶತಾತ್ಕಾಲಾದುನ್ಮಜ್ಜನಮವಸ್ಥಿತಃ ।
ಭುವಿ ಮಾನುಷತಾಂ ಪ್ರಾಪ್ಯ ಕೃಪಣೋ ಜಾಯತೇ ಪುನಃ ॥ ೧೬ ॥
ಪಾದುಕೋಪಾನಹೌ ಛತ್ರಂ ಶಯ್ಯಾಂ ಪ್ರಾವರಣಾನಿ ಚ ।
ಅದತ್ವಾ ದಂಶಮಶಕೈರ್ಭಕ್ಷ್ಯಂತೇ ಜನ್ಮಸಪ್ತತಿಂ ॥ ೧೭ ॥
ಪಿತುರ್ದ್ರವ್ಯಾಽಪಹರ್ತಾರಸ್ತಾಡನಕ್ರೋಶನೇ ರತಾಃ ।
ಪೀಡನಂ ಕ್ರಿಯತೇ ತೇಷಾಂ ಯತ್ರ ತೌ ಯುಗ್ಮಪರ್ವತೌ ॥ ೧೮ ॥

---

೧೨. ಬಳಿಕ ಜನನಕಾಲದಲ್ಲಿ ಕ್ರಿಮಿಗಳಿಂದ ಭಕ್ಷಿತರಾಗಿ ಶರೀರದ ವ್ರಣಗಳಿಂದ ದುರ್ಗಂಧವು ಹೊರಡುತ್ತಿರಲು ಪರದ್ರವ್ಯವನ್ನೇ ಆಶ್ರಯಿಸಿಕೊಂಡಿರುವರು.

೧೩. ತಮ್ಮ ಕರ್ಮದಿಂದ ಭ್ರಷ್ಟರಾದವರೂ, ವರ್ಣಾಶ್ರಮಗಳನ್ನು ತ್ಯಜಿಸಿದವರೂ ಅಮೇಧ್ಯಪೂರಿತವಾದ ನರಕದಲ್ಲಿ ಹತ್ತುಸಾವಿರ ವರ್ಷಗಳು ಬಿದ್ದಿರುವರು.

೧೪. ಆ ಕಾಲವು ಕಳೆಯಲು ಮನುಷ್ಯರಾಗಿ ಹುಟ್ಟಿ ನಾನಾವ್ಯಾಧಿಗಳಿಂದ ಪೀಡಿತರಾಗಿ ಸಕಲರಿಗೂ ಉದ್ವೇಗವನ್ನುಂಟುಮಾಡುತ್ತಿರುವರು.

೧೫. ಲೋಭದಿಂದಲೂ, ಮೋಹದಿಂದಲೂ ಅಗ್ನಿಯನ್ನೂ ವಿಷವನ್ನೂ ಪ್ರಯೋಗಿಸಿದ ದುರಾತ್ಮನು ವಿಷಭರಿತವಾದ ನರಕದಲ್ಲಿ ಮುಳುಗಿರುವನು.

೧೬. ಅಲ್ಲಿ ನೂರು ವರ್ಷಗಳು ಕಳೆದ ಮೇಲೆ ಮೇಲಕ್ಕೆ ಬಂದು ಮನುಷ್ಯಜನ್ಮವನ್ನು ಪಡೆದು ಪುನಃ ದೀನನಾಗಿ ಬದುಕುವನು.

೧೭. ಹಾವುಗೆಗಳನ್ನೂ, ಪಾದರಕ್ಷೆಗಳನ್ನೂ, ಛತ್ರಿಯನ್ನೂ ಹಾಸಿಗೆ ಹೊದಿಕೆಗಳನ್ನೂ ದಾನಮಾಡದಿರುವ ಮನುಷ್ಯರು ಏಳು ಜನ್ಮಗಳವರೆಗೂ ಕ್ರಿಮಿಕೀಟಗಳಿಂದ ಸಂಕಟಪಡುವನು.

೧೮. ತಂದೆಯ ದ್ರವ್ಯವನ್ನು ತೆಗೆದುಕೊಂಡು ಅವರನ್ನು ಹೊಡೆದು ಬಯ್ಯುವ ಮಕ್ಕಳು ಯಮಳ ಪರ್ವತಗಳ ಮಧ್ಯದಲ್ಲಿ ಬಿದ್ದು ಅವುಗಳ ಘರ್ಷಣೆಯಲ್ಲಿ ನೊಂದಿರುವರು.

ಯಾ ಸಾ ವೈತರಣೀ ಘೋರಾ ನದೀ ರಕ್ತಪ್ರವಾಹಿನೀ ।
ಪಿಬಂತಿ ರುಧಿರಂ ತತ್ರ ಯೇಽಭಿಯಾಂತಿ ರಜಸ್ವಲಾಂ ॥ ೯೯ ॥
ಅಸಿಪತ್ರವನೇ ಘೋರೇ ಪೀಡ್ಯಂತೇ ಪಾಪಕಾರಿಣಃ ।
ಪರಪೀಡಾಕರಾ ನಿತ್ಯಂ ಯೇ ನರೋಽಂತ್ಯಜಗಾಮಿನಃ ॥ ೧೦೦ ॥
ಗುರುದಾರರತಾನಾಂ ತು ಮಹಾಪಾತಕಿನಾಮಪಿ ।
ಶಿಲಾಽವಗೂಹನಂ ತೇಷಾಂ ಜಾಯತೇ ಜನ್ಮ ಸಪ್ತತಿಂ ॥ ೧೦೧ ॥
ಜ್ವಲಂತೀಮಾಯಸೀಂ ಘೋರಾಂ ಬಹುಕಂಟಕ ಸಂವೃತಾಂ ।
ಶಾಲ್ಮಲೀಂ ತೇಽವಗೂಹಂತಿ ಪರದಾರರತಾ ಹಿ ಯೇ ॥ ೧೦೨ ॥
ಪರಸ್ಯ ಯೋಷಿತಂ ಹೃತ್ವಾ ಬ್ರಹ್ಮಸ್ವಮಪಹೃತ್ಯ ಚ ।
ಅರಣ್ಯೇ ನಿರ್ಜಲೇ ದೇಶೇ ಸ ಭವೇತ್ಕ್ರೂರರಾಕ್ಷಸಃ ॥ ೧೦೩ ॥
ದೇವಸ್ವಂ ಬ್ರಾಹ್ಮಣಸ್ವಂ ಚ ಲೋಭೇ ನೈವಾಽಹರೇಚ್ಚ ಯಃ ।
ಸ ಪಾಪಾತ್ಮಾ ಪರೇ ಲೋಕೇ ಗೃಧ್ರೋಚ್ಛಿಷ್ಟೇನ ಜೀವತಿ ॥ ೧೦೪ ॥

೯೯. ಯಾರು ರಜಸ್ವಲೆಯ ಸಹವಾಸವನ್ನು ಮಾಡುವರೊ, ಅವರು ಭಯಂಕರವಾದ ರಕ್ತದ ಪ್ರವಾಹವೆನಿಸುವ ವೈತರಣಿಯಲ್ಲಿ ಬಿದ್ದು ಆ ರಕ್ತವನ್ನು ಕುಡಿಯುವರು.

೧೦೦. ಪಾಪಕರ್ಮನಿರತರೂ, ಪರಹಿಂಸಾಪರರೂ, ಚಂಡಾಲರೊಡಗೂಡುವವರೂ ಆದ ನರರು ಯಾವಾಗಲೂ ಘೋರವಾದ ಅಸಿಪತ್ರವನವೆಂಬ ನರಕದಲ್ಲಿ ನರಳುವರು.

೧೦೧. ಗುರುಸ್ತ್ರೀಗಮನವನ್ನು ಮಾಡಿದರೂ, ಮಹಾ ಪಾತಕಿಗಳು ಸಹ ಏಳು ಜನ್ಮಗಳವರೆಗೂ ತಪ್ತಶಿಲಾವಿಗ್ರಹವನ್ನು ಆಲಿಂಗನಮಾಡಿಕೊಳ್ಳಬೇಕಾಗುವುದು.

೧೦೨. ಪರಸ್ತ್ರೀಯರಲ್ಲಿ ಲಂಪಟರಾದವರು ಉರಿಯುತ್ತಿರುವುದೂ, ಭಯಂಕರವೂ, ಮುಳ್ಳುಗಳಿಂದ ತುಂಬಿರುವುದೂ ಆದ ಕಬ್ಬಿಣದ ಪ್ರತಿಮೆಯನ್ನು ತಬ್ಬಿಕೊಳ್ಳುವರು.

೧೦೩. ಪರಸ್ತ್ರೀಯನ್ನೂ, ಬ್ರಾಹ್ಮಣನ ಧನವನ್ನೂ ಅಪಹರಿಸಿದವನು ನೀರಿಲ್ಲದ ಬೆಂಗಾಡಿನ ಪ್ರದೇಶದಲ್ಲಿ ಕ್ರೂರರಾಕ್ಷಸನಾಗಿ ಸಂಕಟಗೊಳ್ಳುವನು.

೧೦೪. ಯಾವ ಪಾಪಿಯು ಲೋಭದಿಂದ ದೇವಸ್ವವನ್ನೂ ಬ್ರಾಹ್ಮಣರ ಸ್ವತ್ತನ್ನೂ ಅಪಹರಿಸುವನೊ, ಅವನು ಪರಲೋಕದಲ್ಲಿ ಹದ್ದುಗಳ ಉಚ್ಛಿಷ್ಟವನ್ನು ತಿಂದು ಬದುಕಬೇಕು.

ಏವಮಾದೀನಿ ಪಾಪಾನಿ ಭುಂಜಂತೇ ಯಮಶಾಸನಾತ್ ।
ಯೇಷಾಂ ತು ದರ್ಶನಾದೇವ ಶ್ರವಣಾಜ್ಜಾಯತೇ ಭಯಂ ॥ ೧೦೫ ॥
ತಥಾ ದಾನಫಲಂ ಚಾನ್ಯೇ ಭುಂಜಾನಾ ಯಮಮಂದಿರೇ ।
ದೃಷ್ಟಾಃ ಶ್ರುತಂ ಕಥಯತಾಂ ದೂತಾನಾಂ ಚ ಯಮಾಜ್ಞಯಾ॥ ೧೦೬ ॥
ರಥೈರನ್ಯೇ ಗಜೈರನ್ಯೇ ಕೇಚಿದ್ವಾಜಿಭಿರಾವೃತಾಃ ।
ದೃಷ್ಟಾಸ್ತತ್ರ ಮಹಾಭಾಗ ತಪಃ ಸಂಚಯಸಂಸ್ಥಿತಾಃ ॥ ೧೦೭ ॥
ಗೋದಾತಾ ಸ್ವರ್ಣದಾತಾ ಚ ಭೂಮಿರತ್ನಪ್ರದಾನರಾಃ ।
ಶಯ್ಯಾಃಶನಗೃಹಾದೀನಾಂ ಸ ಲೋಕಃ ಕಾಮದೋ ನೃಣಾಂ ॥ ೧೦೮ ॥
ಅನ್ನಂ ಪಾನೀಯಸಹಿತಂ ದದತೇ ಯೇಽತ್ರ ಮಾನವಾಃ ।
ತತ್ರ ತೃಪ್ತಾಃ ಸುಸಂತುಷ್ಟಾಃ ಕ್ರೀಡಂತೇ ಯಮಸಾದನೇ ॥ ೧೦೯ ॥
ಅತ್ರ ಯದ್ದೀಯತೇ ದಾನಮಪಿ ವಾಲಾಗ್ರಮಾತ್ರಕಂ ।
ತದಕ್ಷಯಫಲಂ ಸರ್ವಂ ಶುಕ್ಲತೀರ್ಥೇ ನೃಪೋತ್ತಮ ॥ ೧೧೦ ॥

---

೧೦೫. ಇವೇ ಮೊದಲಾದ ಅನೇಕ ಯಾತನೆಗಳನ್ನು ಪಾಪಿಗಳು ಯಮನ ಶಾಸನದಿಂದ ಅನುಭವಿಸುವರು. ಅವುಗಳನ್ನು ನೋಡುವುದರಿಂದಲೂ, ಕೇಳುವುದರಿಂದಲೂ ಮಹಾ ಭಯವುಂಟಾಗುವುದು.

೧೦೬. ಹಾಗೆಯೇ ಯಮನ ಆಜ್ಞೆಯಿಂದ ದೂತರು ಜೀವರೆಸಗಿದ ದಾನಗಳ ಫಲಗಳನ್ನು ಕೇಳಿ ಹೇಳುತ್ತಿರಲು ಅಲ್ಲಿ ಸೌಖ್ಯಗಳನ್ನನುಭವಿಸುತ್ತಿರುವವರನ್ನೂ ಕಂಡೆವು.

೧೦೭. ಮಹಾರಾಜನೆ! ಕೆಲವರು ರಥಗಳಿಂದಲೂ, ಕೆಲವರು ಗಜಗಳಿಂದಲೂ, ಹಲವರು ಕುದುರೆಗಳಿಂದಲೂ ಪರಿವೃತರಾಗಿ ತಪಸ್ಸಿನ ಆರ್ಜನೆಯಲ್ಲಿ ತೊಡಗಿರುವುದನ್ನೂ ಕಂಡೆವು.

೧೦೮. ಗೋವುಗಳನ್ನೂ, ಚಿನ್ನವನ್ನೂ, ಭೂಮಿಯನ್ನೂ, ನವರತ್ನಗಳನ್ನೂ, ಹಾಸಿಗೆಯನ್ನೂ, ಅನ್ನವನ್ನೂ, ಮನೆಯನ್ನೂ ಕೊಟ್ಟ ಮಾನವರಿಗೆ ಆ ಲೋಕವು ಬೇಡಿದ ಭೋಗಗಳನ್ನೀಯುವುದು.

೧೦೯. ಯಾವ ಮಾನವರು ಅನ್ನೋದಕಗಳನ್ನು ಇಲ್ಲಿ ದಾನಮಾಡುವರೊ, ಅವರು ಯಮಲೋಕದಲ್ಲಿ ಸಂತೃಪ್ತರೂ, ಸಂತೋಷಭರಿತರೂ ಆಗಿ ಕ್ರೀಡಿಸುತ್ತಿರುವರು.

೧೧೦. ಮಹಾರಾಜನೆ! ಶುಕ್ಲತೀರ್ಥದಲ್ಲಿ ಬಾಲದ ಕೂದಲಿನ ನೂರನೆಯ ಭಾಗದಷ್ಟು ದಾನವನ್ನು ಮಾಡಿದರೂ ಅದೆಲ್ಲವೂ ಅಕ್ಷಯಫಲಪ್ರದವಾಗುವುದು.

ಏತತ್ತೇ ಕಥಿತಂ ಸರ್ವಂ ಯದ್ದೃಷ್ಟಂ ಯಚ್ಚ ವೈ ಶ್ರುತಂ ।
ಕುರುಷ್ವ ಯದಭಿಪ್ರೇತಂ ಯದಿ ಶಕ್ನೋಷಿ ಮುಚ್ಯತಾಂ ॥ ೧೧೧ ॥
ತಯೋಸ್ತದ್ವಚನಂ ಶ್ರುತ್ವಾ ಚಾಣಕ್ಯೋ ಹೃಷ್ಟಮಾನಸಃ ।
ವಿಸರ್ಜಯಾಮಾಸ ಖಗಾವಭಿನಂದ್ಯ ಪುನಃ ಪುನಃ ॥ ೧೧೨ ॥
ತಾಭ್ಯಾಂ ಗತಾಭ್ಯಾಂ ಸರ್ವಸ್ವಂ ದತ್ವಾ ವಿಪ್ರೇಷು ಭಾರತ ।
ಕಾಮಕ್ರೋಧೌ ಪರಿತ್ಯಜ್ಯ ಜಗಾಮಾಽಮರಪರ್ವತಂ ॥ ೧೧೩ ॥
ತತ್ರ ಬಧ್ವೋಡುಪಂ ಗಾಢಂ ಕೃಷ್ಣರಜ್ವಾಽವಲಂಬಿತಂ ।
ಪ್ಲವಮಾನೋ ಜಗಾಮಾಶು ಧ್ಯಾಯನ್ದೇವಂ ಜನಾರ್ದನಂ ॥ ೧೧೪ ॥
ಆರೋಗ್ಯಂ ಭಾಸ್ಕರಾದಿಚ್ಛೇದ್ಧನಂ ವೈ ಜಾತವೇದಸಃ ।
ಪ್ರಾಪ್ನೋತಿ ಜ್ಞಾನಮೀಶಾನಾನ್ಮೋಕ್ಷಂ ಪ್ರಾಪ್ನೋತಿ ಕೇಶವಾತ್ ॥೧೧೫॥
ನೀಲಂ ರಕ್ತಂ ತದಭವನ್ಮೇಚಕಂ ಯದ್ಧಿ ಸೂತ್ರಕಂ ।
ಶುದ್ಧಸ್ಫಟಿಕಸಂಕಾಶಂ ದೃಷ್ಟ್ವಾ ರಜ್ಜುಂ ಮಹಾಮತಿಃ ।
ಆಪ್ಲುತ್ಯ ವಿಮಲೇ ತೋಯೇ ಗತೋಽಸೌ ವೈಷ್ಣವಂ ಪದಂ ॥ ೧೧೬ ॥

---

೧೧೧. ಇಂತು ನಾವು ನೋಡಿದುದನ್ನೂ, ಕೇಳಿದುದನ್ನೂ ಎಲ್ಲವನ್ನೂ ನಿನಗೆ ತಿಳಿಸಿರುವೆವು. ನಿನ್ನ ಮನವಿದ್ದಂತೆ ನಡೆ. ಸಾಧ್ಯವಿದ್ದರೆ ಮೋಕ್ಷವನ್ನು ಸಂಪಾದಿಸು.

೧೧೨. ಆ ಕಾಗೆಗಳ ಮಾತುಗಳನ್ನು ಕೇಳಿ ಸಂತುಷ್ಟಮಾನಸನಾದ ಚಾಣಕ್ಯನು ಅವುಗಳನ್ನು ಮತ್ತೆ ಮತ್ತೆ ಪ್ರಶಂಸಿಸಿ ಬೀಳುಗೊಟ್ಟನು.

೧೧೩. ಧರ್ಮನಂದನನೆ! ಅವು ಹೊರಟುಹೋಗಲು ಚಾಣಕ್ಯನು ತನ್ನ ಸರ್ವಸ್ವವನ್ನೂ ಬ್ರಾಹ್ಮಣರಿಗೆ ದಾನಮಾಡಿ, ಕಾಮಕ್ರೋಧಗಳನ್ನು ತ್ಯಜಿಸಿ ಅಮರಪರ್ವತವನ್ನು ಸೇರಿದನು.

೧೧೪. ಅಲ್ಲಿ ಕಪ್ಪುಬಣ್ಣದ ಹಗ್ಗದಿಂದ ದೃಢವಾದ ದೋಣಿಯೊಂದನ್ನು ಕಟ್ಟಿ ಕುಳಿತುಕೊಂಡು ಮಹಾವಿಷ್ಣುವನ್ನು ಧ್ಯಾನಿಸುತ್ತ ತೇಲಿಕೊಂಡು ಹೊರಟನು.

೧೧೫. ಸೂರ್ಯನಿಂದ ಆರೋಗ್ಯವನ್ನೂ, ಅಗ್ನಿಯಿಂದ ಐಶ್ವರ್ಯವನ್ನೂ ಬೇಡಬೇಕು. ಮಹೇಶ್ವರನಿಂದ ಜ್ಞಾನವನ್ನೂ, ಕೇಶವನಿಂದ ಮೋಕ್ಷವನ್ನೂ ಮನುಜನು ಪಡೆಯುವನು.

೧೧೬. ಕ್ರಮವಾಗಿ ದೋಣಿಗೆ ಕಟ್ಟಿದ್ದ ಕಟಸೂತ್ರವು ನೀಲಿಯ ಬಣ್ಣವೂ, ಕೆಂಪುಬಣ್ಣವೂ ಆಗಿ ಕಡೆಗೆ ಶುದ್ಧವಾದ ಸ್ಫಟಿಕವನ್ನು ಹೋಲುತ್ತಿರುವುದನ್ನು ಆ ಪ್ರಾಜ್ಞನು ಕಂಡನು. ಅಲ್ಲಿ ಶುದ್ಧವಾದ ನೀರಿನಲ್ಲಿ ಮುಳುಗಿ ವಿಷ್ಣುಲೋಕವನ್ನು ಸೇರಿದನು.

ಗಾಯಂತಿ ಯದ್ವೇದವಿದಃ ಪುರಾಣಂ
ನಾರಾಯಣಂ ಶಾಶ್ವತಮಚ್ಯುತಾಹ್ವಯಂ ।
ಪ್ರಾಪ್ತಃ ಸ ತಂ ರಾಜಸುತೋ ಮಹಾತ್ಮಾ
ನಿಕ್ಷಿಪ್ಯ ದೇಹಂ ಶುಭಶುಕ್ಲತೀರ್ಥೇ ॥ ೧೧೭ ॥
ಏಷಾ ತೇ ಕಥಿತಾ ರಾಜನ್ ಸಿದ್ಧಿಶ್ಚಾಣಕ್ಯಭೂಭೃತಃ ।
ತಥಾಽನ್ಯತ್ತವ ವಕ್ಷ್ಯಾಮಿ ಶೃಣುಷ್ವೈಕಾಗ್ರಮಾನಸಃ ॥ ೧೧೮ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ
ಪಂಚಮೇ ಆವಂತ್ಯಖಂಡೇ ತೃತೀಯೇ ರೇವಾಖಂಡೇ
"ಚಾಣಕ್ಯಸಿದ್ಧಿಪ್ರಾಪ್ತಿವರ್ಣನಂ"
ನಾಮ ಪಂಚಪಂಚಾಶದಧಿಕಶತತಮೋಽಧ್ಯಾಯಃ

---

೧೧೭. ವೇದಜ್ಞರು ಯಾವ ನಾರಾಯಣನನ್ನು ಅನಾದಿಯೆಂದೂ, ಅನಂತನೆಂದೂ, ನಾಶರಹಿತನೆಂದೂ ಸ್ತೋತ್ರಮಾಡುತ್ತಿರುವರೊ, ಆತನನ್ನು ಮಹಾತ್ಮನಾದ ಚಾಣಕ್ಯನು ಶುಕ್ಲತೀರ್ಥದಲ್ಲಿ ದೇಹತ್ಯಾಗವನ್ನು ಮಾಡಿದ ಮಾತ್ರದಿಂದಲೇ ಪಡೆದನು.

೧೧೮. ಧರ್ಮರಾಜನೆ! ಇಂತು ಚಾಣಕ್ಯನೆಂಬ ಮಹಾರಾಜನು ಸಿದ್ಧಿಯನ್ನು ಪಡೆದುದನ್ನು ಹೇಳಿದೆನು. ಮುಂದೆ ಮತ್ತೊಂದು ಚರಿತ್ರೆಯನ್ನು ಹೇಳುವೆನು. ಏಕಾಗ್ರಚಿತ್ತದಿಂದ ಕೇಳು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ
ಶ್ರೀ ಸ್ಕಾಂದಮಹಾಪುರಾಣದ ಐದನೆಯ ಆವಂತ್ಯಖಂಡದ ಮೂರನೆಯ ರೇವಾಖಂಡದಲ್ಲಿ
"ಚಾಣಕ್ಯಸಿದ್ಧಿಪ್ರಾಪ್ತಿವರ್ಣನ"ವೆಂಬ
ನೂರೈವತ್ತೈದನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

# ಅಥ ಷಟ್‌ಪಂಚಾಶದಧಿಕಶತತಮೋಽಧ್ಯಾಯಃ

## ಶುಕ್ಲತೀರ್ಥಮಾಹಾತ್ಮ್ಯವರ್ಣನಂ

ಶ್ರೀ ಮಾರ್ಕಂಡೇಯ ಉವಾಚ :—

ನಾಽಸ್ತಿ ಲೋಕೇಷು ತತ್ತೀರ್ಥಂ ಪೃಥಿವ್ಯಾಂ ಯನ್ನರೇಶ್ವರ ।
ಶುಕ್ಲತೀರ್ಥೇನ ಸದೃಶಮುಪಮಾನೇನ ಗೀಯತೇ ॥ ೧ ॥
ಶುಕ್ಲತೀರ್ಥಂ ಮಹಾತೀರ್ಥಂ ನರ್ಮದಾಯಾಂ ವ್ಯವಸ್ಥಿತಂ ।
ಪ್ರಾಗುದಕ್ಪ್ರವಹೇ ದೇಶೇ ಮುನಿಸಂಘನಿಷೇವಿತಂ ॥ ೨ ॥
ವೈಶಾಖೇ ಚ ತಥಾ ಮಾಸಿ ಕೃಷ್ಣಪಕ್ಷೇ ಚತುರ್ದಶೀ ।
ಕೈಲಾಸಾದುಮಯಾಸಾರ್ಥಂ ಸ್ವಯಮಾಯಾತಿ ಶಂಕರಃ ॥ ೩ ॥
ಮಧ್ಯಾಹ್ನಸಮಯೇ ಸ್ನಾತ್ವಾ ಪಶ್ಯತ್ಯಾತ್ಮಾನಮಾತ್ಮನಾ ।
ಬ್ರಹ್ಮವಿಷ್ಣ್ವಿಂದ್ರಸಹಿತಃ ಶುಕ್ಲತೀರ್ಥೇ ಸಮಾಹಿತಃ ॥ ೪ ॥
ಕಾರ್ತಿಕ್ಯಾಂ ತು ವಿಶೇಷೇಣ ವೈಶಾಖ್ಯಾಂ ಚ ನರೋತ್ತಮ ।
ಬ್ರಹ್ಮವಿಷ್ಣುಮಹಾದೇವಾನ್ ಸ್ನಾತ್ವಾ ಪಶ್ಯತಿ ತದ್ದಿನೇ ॥ ೫ ॥

---

## ಕನ್ನಡದ ಅನುವಾದ

### ಶುಕ್ಲತೀರ್ಥಮಾಹಾತ್ಮ್ಯವರ್ಣನ

೧. ಮಾರ್ಕಂಡೇಯನು ಹೇಳುತ್ತಾನೆ :—ಮನುಜೇಂದ್ರನೆ! ಭೂಮಂಡಲದಲ್ಲೆಲ್ಲಿಯೂ ಶುಕ್ಲತೀರ್ಥಕ್ಕೆ ಸಮನಾದುದಾಗಲಿ, ಅದರ ಉಪಮಾನದಿಂದ ಸ್ತುತ್ಯವಾದುದಾಗಲಿ ಎನಿಸಿದ ತೀರ್ಥವು ಬೇರೊಂದಿಲ್ಲ.

೨. ನರ್ಮದಾನದಿಯು ಪೂರ್ವೋತ್ತರಕ್ಕೆ ಪ್ರವಹಿಸುವ ಪ್ರದೇಶದಲ್ಲಿ ನೆಲಸಿರುವ ಈ ಶುಕ್ಲತೀರ್ಥವೆಂಬ ಮಹಾತೀರ್ಥವು ಮುನಿ ಸಮೂಹಗಳಿಂದ ಸೇವಿತವಾಗಿರುವುದು.

೩. ವೈಶಾಖಮಾಸದ ಕೃಷ್ಣಪಕ್ಷದ ಚತುರ್ದಶಿಯ ದಿನದಲ್ಲಿ ಪಾರ್ವತೀ ಸಮೇತನಾಗಿ ಮಹಾದೇವನು ಕೈಲಾಸವನ್ನು ಬಿಟ್ಟು ಇಲ್ಲಿಗೆ ಬರುವನು.

೪. ಬ್ರಹ್ಮ, ವಿಷ್ಣು, ಮಹೇಂದ್ರರೊಡಗೂಡಿ ಮಧ್ಯಾಹ್ನ ಸಮಯಕ್ಕೆ ಸರಿಯಾಗಿ ಶುಕ್ಲತೀರ್ಥದಲ್ಲಿ ಸ್ನಾನವನ್ನು ಮಾಡಿಕೊಂಡು ಸಮಾಹಿತಚಿತ್ತದಿಂದ ತನ್ನಲ್ಲಿಯೇ ತನ್ನ ನಿಜಸ್ವರೂಪವನ್ನು ಧ್ಯಾನಿಸುತ್ತಿರುವನು.

೫. ಚಕ್ರವರ್ತಿಯೆ! ಕಾರ್ತಿಕ, ವೈಶಾಖ ಮಾಸಗಳ ಹುಣ್ಣಿಮೆಗಳ ದಿನಗಳಲ್ಲಿ ಅಲ್ಲಿ ಸ್ನಾನವನ್ನು ಮಾಡಿದವನು ತ್ರಿಮೂರ್ತಿಗಳನ್ನೂ ನೋಡುವನು.

ದೇವರಾಜಃ ಸುರೈಃ ಸಾರ್ಧಂ ವಾಯುಮಾರ್ಗವ್ಯವಸ್ಥಿತಃ ।
ಕೃಷ್ಣಪಕ್ಷೇ ಚತುರ್ದಶ್ಯಾಂ ಸ್ನಾತ್ವಾ ಪಶ್ಯತಿ ಶಂಕರಂ ॥ ೬ ॥
ಗಂಧರ್ವಾಪ್ಸರಸೋ ಯಕ್ಷಾಃ ಸಿದ್ಧವಿದ್ಯಾಧರೋರಗಾಃ ।
ತದ್ದಿನೇ ತೇಽಪಿ ದೇವೇಶಂ ದೃಷ್ಟ್ವಾ ಮುಂಚಂತಿ ಕಿಲ್ಬಿಷಂ ॥ ೭ ॥
ಅರ್ಧಯೋಜನವಿಸ್ತಾರಂ ತದರ್ಧೇನೈವ ಚಾಯತಂ ।
ಶುಕ್ಲತೀರ್ಥಂ ಮಹಾಪುಣ್ಯಂ ಮಹಾಪಾತಕನಾಶನಂ ॥ ೮ ॥
ಯತ್ರ ಸ್ಥಿತೈಃ ಪ್ರದೃಶ್ಯಂತೇ ವೃಕ್ಷಾಗ್ರಾಣಿ ನರೋತ್ತಮೈಃ ।
ತತ್ರ ಸ್ಥಿತಾ ಮಹಾಪಾಪೈರ್ಮುಚ್ಯಂತೇ ಪೂರ್ವಸಂಚಿತೈಃ ॥ ೯ ॥
ಪಾಪೋಪಪಾತಕೈರ್ಯುಕ್ತೋ ನರಃ ಸ್ನಾತ್ವಾ ಪ್ರಮುಚ್ಯತೇ ।
ಉಪಾರ್ಜಿತಾ ವಿನಶ್ಯೇತ ಭ್ರೂಣಹತ್ಯಾಽಪಿ ದುಸ್ತ್ಯಜಾ ॥ ೧೦ ॥
ಯಸ್ಮಾತ್ತತ್ರೈವ ದೇವೇಶ ಉಮಯಾ ಸಹ ತಿಷ್ಠತಿ ।
ವೈಶಾಖ್ಯಾಂ ಚ ವಿಶೇಷೇಣ ಕೈಲಾಸಾದೇತಿ ಶಂಕರಃ ॥ ೧೧ ॥

---

೬. ಆ ಮಾಸಗಳ ಬಹುಳ ಚತುರ್ದಶಿಗಳಲ್ಲಿ ದೇವತೆಗಳೊಡನೆ ಇಂದ್ರನು ಅಲ್ಲಿ ಸ್ನಾನವನ್ನುಮಾಡಿ ಆಕಾಶದಲ್ಲಿ ನಿಂತು ಮಹೇಶ್ವರನ ದರ್ಶನವನ್ನು ಮಾಡುವನು.

೭. ಗಂಧರ್ವರೂ, ಅಪ್ಸರರೂ, ಯಕ್ಷರೂ, ಸಿದ್ಧರೂ, ವಿದ್ಯಾಧರರೂ, ನಾಗರೂ ಆ ದಿನಗಳಲ್ಲಿ ಮಹಾದೇವನ ದರ್ಶನದಿಂದ ತಮ್ಮ ಪಾತಕಗಳನ್ನು ಕಳೆದುಕೊಳ್ಳುವರು.

೮. ಅರ್ಧಯೋಜನದ ಉದ್ದವೂ, ಅದರ ಅರ್ಧದಷ್ಟು ಅಗಲವೂ ಇರುವ ಈ ಶುಕ್ಲತೀರ್ಥ ಪ್ರದೇಶವು ಮಹಾಪುಣ್ಯಪ್ರದವೂ ಮಹಾಪಾತಕನಾಶಕವೂ ಆಗಿರುವುದು.

೯. ಅಲ್ಲಿ ವಾಸಿಸುವ ಮಾನವ ಶ್ರೇಷ್ಠರು ಎಲ್ಲಿಯವರೆಗಿನ ವೃಕ್ಷಾಗ್ರಗಳನ್ನು ನೋಡುವರೊ, ಆ ಪ್ರದೇಶಗಳಲ್ಲಿರುವವರೂ ಸಹ ತಮ್ಮ ಪೂರ್ವಸಂಚಿತಗಳಾದ ಮಹಾಪಾತಕಗಳನ್ನೂ ಕಳೆದುಕೊಳ್ಳುವರು.

೧೦. ಪಾಪ, ಉಪಪಾತಕಗಳಿಂದ ಕೂಡಿದ ನರನು ಇಲ್ಲಿಯ ಸ್ನಾನದಿಂದ ಪರಿಶುದ್ಧನಾಗುವನು. ಅತ್ಯಂತ ದುಸ್ತ್ಯಜವೆನಿಸಿದ ಬ್ರಹ್ಮಹತ್ಯೆಯೂ ಇಲ್ಲಿ ನಾಶವಾಗುವುದು.

೧೧. ಆದುದರಿಂದಲೇ ಅಲ್ಲಿ ಪರಮೇಶ್ವರನು ಪಾರ್ವತಿಯೊಡನೆ ನೆಲಸಿರುವನು. ವಿಶೇಷವಾಗಿ ವೈಶಾಖಮಾಸದ ಹುಣ್ಣಿಮೆಯಲ್ಲಿ ಕೈಲಾಸದಿಂದ ಅಲ್ಲಿಗೆ ಬರುವನು.

ತೇನ ತೀರ್ಥಂ ಮಹಾಪುಣ್ಯಂ ಸರ್ವಪಾತಕನಾಶನಂ ।
ಕಥಿತಂ ಬ್ರಹ್ಮಣಾ ಪೂರ್ವಂ ಮಯಾ ತವ ತಥಾ ನೃಪ ॥ ೧೨ ॥
ರಜಕೇನ ಯಥಾ ಧೌತಂ ವಸ್ತ್ರಂ ಭವತಿ ನಿರ್ಮಲಂ ।
ತಥಾ ತತ್ರ ವಪುಃ ಸ್ನಾನಂ ಪುರುಷಸ್ಯ ಭವೇಚ್ಛುಚಿ ॥ ೧೩ ॥
ಪೂರ್ವೇ ವಯಸಿ ಪಾಪಾನಿ ಕೃತ್ವಾ ಪುಷ್ಕಾನಿ ಮಾನವಃ ।
ಅಹೋರಾತ್ರೋಷಿತೋ ಭೂತ್ವಾ ಶುಕ್ಲತೀರ್ಥೇ ವ್ಯಪೋಹತಿ ॥ ೧೪ ॥
ಶುಕ್ಲತೀರ್ಥೇ ಮಹಾರಾಜ ರಾಕಾಂ ರೇವಾಜಲಾಂಜಲಿಂ ।
ಕಲ್ಪಕೋಟಿಸಹಸ್ರಾಣಿ ದತ್ವಾ ಸ್ಯುಃ ಪಿತರಃ ಶಿವಾಃ ॥ ೧೫ ॥
ನ ಮಾತಾ ನ ಪಿತಾ ಬಂಧುಃ ಪತನಂ ನರಕಾರ್ಣವೇ ।
ಉದ್ಧರಂತಿ ಯಥಾಪುಣ್ಯಂ ಶುಕ್ಲತೀರ್ಥೇ ನರೇಶ್ವರ ॥ ೧೬ ॥
ತಪಸಾ ಬ್ರಹ್ಮಚರ್ಯೇಣ ನ ತಾಂ ಗಚ್ಛಂತಿ ಸದ್ಗತಿಂ ।
ಶುಕ್ಲತೀರ್ಥೇ ಮೃತೋ ಜಂತುರ್ದೇಹತ್ಯಾಗೇನ ಯಾ ಲಭೇತ್ ॥ ೧೭ ॥
ಕಾರ್ತಿಕಸ್ಯ ತು ಮಾಸಸ್ಯ ಕೃಷ್ಣಪಕ್ಷೇ ಚತುರ್ದಶೀಂ ।
ಘೃತೇನ ಸ್ನಾಪಯೇದ್ದೇವಮುಪೋಷ್ಯ ಪ್ರಯತೋ ನರಃ ॥ ೧೮ ॥

---

೧೨. ಅದರಿಂದ ಆ ತೀರ್ಥವು ಮಹಾಪುಣ್ಯಪ್ರದವೂ, ಪಾಪನಾಶಕವೂ ಆಗಿರುವುದೆಂದು ಬ್ರಹ್ಮದೇವನೇ ಹಿಂದೆ ಹೇಳಿರುವನು. ಅದನ್ನೇ ನಾನೂ ತಿಳಿಸಿರುವೆನು.

೧೩. ಅಗಸನು ಒಗೆದ ಬಟ್ಟೆಯು ಹೇಗೆ ನಿರ್ಮಲವಾಗುವುದೊ, ಅಲ್ಲಿ ಸ್ನಾನವನ್ನು ಮಾಡಿದ ಮನುಷ್ಯನ ಶರೀರವು ಹಾಗೆಯೆ ಶುಚಿಯಾಗುವುದು.

೧೪. ಪೂರ್ವವಯಸ್ಸಿನಲ್ಲಿ ಬಹು ವಿಧಗಳಾದ ಪಾತಕಗಳನ್ನುಮಾಡಿದ್ದರೂ, ಶುಕ್ಲತೀರ್ಥದಲ್ಲಿ ಒಂದು ಹಗಲು ರಾತ್ರಿ ವಾಸಮಾಡುವುದರಿಂದ ಅವನ್ನು ಕಳೆದುಕೊಳ್ಳಬಹುದು.

೧೫. ಮಹಾರಾಜನೆ! ಶುಕ್ಲತೀರ್ಥದಲ್ಲಿ ರೇವಾಜಲದಿಂದ ಅತ್ಯಲ್ಪವಾದ ಜಲಾಂಜಲಿಯನ್ನಿತ್ತರೂ ಪಿತೃಗಳು ಸಾವಿರ ಕೋಟಿವರ್ಷಗಳವರೆಗೂ ಆನಂದಿಸುತ್ತಿರುವರು.

೧೬. ನರೇಂದ್ರನೆ! ನರಕದಲ್ಲಿ ಬೀಳುತ್ತಿರುವವನನ್ನು ಶುಕ್ಲತೀರ್ಥದಲ್ಲಿ ಮಾಡಿದ ಪುಣ್ಯವು ಉದ್ಧರಿಸುವಂತೆ ತಂದೆಯಾಗಲಿ, ತಾಯಿಯಾಗಲಿ, ಬಂಧುವಾಗಲಿ ಉದ್ಧರಿಸಲಾರರು.

೧೭. ಶುಕ್ಲತೀರ್ಥದಲ್ಲಿ ದೇಹವನ್ನು ತ್ಯಾಗಮಾಡಿದ ಪ್ರಾಣಿಗೆ ಲಭಿಸುವ ಸದ್ಗತಿಯು ತಪಸ್ಸಿನಿಂದಲೂ ಬ್ರಹ್ಮಚರ್ಯದಿಂದಲೂ ಕೂಡ ಲಭಿಸುವುದಿಲ್ಲ.

೧೮. ಕಾರ್ತಿಕಮಾಸದ ಕೃಷ್ಣ ಚತುರ್ದಶಿಯ ದಿನದಲ್ಲಿ ಉಪವಾಸವನ್ನು

ಸ್ನಾತ್ವಾ ಪ್ರಭಾತೇ ರೇವಾಯಾಂ ದದ್ಯಾತ್ಸಘೃತಕಂಬಲಂ ।
ಸಹಿರಣ್ಯಂ ಯಥಾಶಕ್ತಿ ದೇವಮುದ್ದಿಶ್ಯ ಶಂಕರಂ ॥ ೧೯ ॥
ದೇವಸ್ಯ ಪೂರಣಾಂ ಕುರ್ಯಾದ್ಘೃತೇನ ಘೃತಕಂಬಲಂ ।
ಸ ಗಚ್ಛತಿ ಮಹಾತೇಜಾಃ ಶಿವಲೋಕಂ ಮೃತೋ ನರಃ ॥ ೨೦ ॥
ಏಕವಿಂಶಕುಲೋಪೇತೋ ಯಾವದಾಭೂತಸಂಪ್ಲವಂ ।
ಶುಕ್ಲತೀರ್ಥೇ ನರಃ ಸ್ನಾತ್ವಾ ಹ್ಯುಮಾಂ ರುದ್ರಂ ಚ ಯೋಽರ್ಚಯೇತ್ ॥
ಗಂಧಪುಷ್ಪಾದಿಧೂಪೈಶ್ಚ ಸೋಽಶ್ವಮೇಧಫಲಂ ಲಭೇತ್ ।
ಮಾಸೋಪವಾಸಂ ಯಃ ಕುರ್ಯಾತ್ತತ್ರ ತೀರ್ಥೇ ನರೇಶ್ವರ ॥ ೨೨ ॥
ಮುಚ್ಯತೇ ಸುಮಹತ್ಪಾಪೈಃ ಸಪ್ತಜನ್ಮಸು ಸಂಚಿತೈಃ ।
ಉಷ್ಟ್ರೀಕ್ಷೀರಮವಿಕ್ಷೀರಂ ನವಶ್ರಾದ್ಧೇ ಚ ಭೋಜನಂ ॥ ೨೩ ॥
ವೃಷಲೀಗಮನಂ ಚೈವ ತಥಾಽಭಕ್ಷ್ಯಸ್ಯ ಭಕ್ಷಣಂ ।
ಅವಿಕ್ರಯೇಽನೃತೇ ಪಾಪಂ ಮಾಹಿಷೇಽಯಾಜ್ಯಯಾಜಕೇ ॥ ೨೪ ॥
ವಾರ್ಧುಷ್ಯೇ ಪಂಕ್ತಿಗರದೇ ದೇವಬ್ರಾಹ್ಮಣ ದೂಷಕೇ ।
ಏವಮಾದೀನಿ ಪಾಪಾನಿ ತಥಾಽನ್ಯಾನ್ಯಪಿ ಭಾರತ ॥ ೨೫ ॥

---

ಮಾಡಿದ ನರನು ಪ್ರಯತ್ನದಿಂದ ಮಹಾದೇವನಿಗೆ ಘೃತದಿಂದ ಅಭಿಷೇಕವನ್ನು ಮಾಡಬೇಕು.

೧೯–೨೦. ಉಷಃಕಾಲದಲ್ಲಿ ರೇವಾನದಿಯಲ್ಲಿ ಮಿಂದು ಮಹಾದೇವನ ಪ್ರೀತ್ಯರ್ಥವಾಗಿ ಶಕ್ತಿಯನ್ನನುಸರಿಸಿ ಹಿರಣ್ಯವನ್ನೂ ಘೃತಕಂಬಳವೆಂಬ ಭಕ್ಷ್ಯಗಳನ್ನೂ ದಾನಮಾಡಬೇಕು. ಮಹೇಶ್ವರನಿಗೆ ತುಪ್ಪದ ಕಡುಬುಗಳನ್ನೂ, ನೈವೇದ್ಯಮಾಡಬೇಕು.

೨೧. ಆ ನರನು ಇಪ್ಪತ್ತೊಂದು ಕುಲದವರೊಡನೆ ಮಹಾ ತೇಜಸ್ವಿಯಾಗಿ ಪಂಚಭೂತಗಳ ಲಯವಾಗುವವರೆಗೂ ಶಿವಲೋಕದಲ್ಲಿ ನೆಲಸಿರುವನು.

೨೨. ಶುಕ್ಲತೀರ್ಥದಲ್ಲಿ ಸ್ನಾನವನ್ನು ಮಾಡಿ ಯಾವ ನರನು ಪಾರ್ವತಿಯನ್ನೂ ಪರಮೇಶ್ವರನನ್ನೂ ಗಂಧಪುಷ್ಪಧೂಪಗಳಿಂದ ಪೂಜಿಸುವನೊ, ಅವನಿಗೆ ಅಶ್ವಮೇಧದ ಫಲವು ಲಭಿಸುವುದು.

೨೩. ನರೇಶ್ವರನೆ! ಆ ತೀರ್ಥದಲ್ಲಿ ಮಾಸೋಪವಾಸವ್ರತವನ್ನು ಆಚರಿಸಿದವನು ಏಳು ಜನ್ಮಗಳಲ್ಲಿ ಮಾಡಿರಬಹುದಾದ ಮಹಾ ಪಾತಕಗಳನ್ನೂ ಕಳೆದುಕೊಳ್ಳುವನು.

೨೪–೨೬. ಒಂಟೆ ಮತ್ತು ಕುರಿಗಳ ಹಾಲನ್ನು ಕುಡಿಯುವುದು, ನವಶ್ರಾದ್ಧದ ಭೋಜನ, ಚಂಡಾಲಸ್ತ್ರೀಸಂಗಮ, ಅಭಕ್ಷ್ಯಗಳ ಭಕ್ಷಣ, ಮಾರಬಾರದುದನ್ನು ಮಾರುವುದು, ಸುಳ್ಳನ್ನು ಹೇಳುವುದು, ಸ್ತ್ರೀವಿತ್ತದಿಂದ ಜೀವನ,

ಚಾಂದ್ರಾಯಣೇನ ನಶ್ಯಂತಿ ಶುಕ್ಲತೀರ್ಥೇ ನ ಸಂಶಯಃ ।
ಶುಕ್ಲತೀರ್ಥೇ ತು ಯಃ ಸ್ನಾತ್ವಾ ತರ್ಪಯೇತ್ಪಿತೃದೇವತಾಃ ॥ ೨೬ ॥
ತಸ್ಯ ತೇ ದ್ವಾದಶಾಬ್ದಾನಿ ತೃಪ್ತಿಂ ಯಾಂತಿ ಸುತರ್ಪಿತಾಃ ।
ಪಾದುಕೋಪಾನಹೌ ಛತ್ರಂ ಶಯ್ಯಾಮಾಸನಮೇವ ಚ ॥ ೨೭ ॥
ಸುವರ್ಣಂ ಧನಧಾನ್ಯಂ ಚ ಶ್ರಾದ್ಧಂ ಯುಕ್ತಹಲಂ ತಥಾ ।
ಅನ್ನಂ ಪಾನೀಯಸಹಿತಂ ತಸ್ಮಿಂಸ್ತೀರ್ಥೇ ದದಂತಿ ಯೇ ॥ ೨೮ ॥
ಹೃಷ್ಟಾಃ ಪುಷ್ಟಾ ಮೃತಾ ಯಾಂತಿ ಶಿವಲೋಕಂ ನ ಸಂಶಯಃ ।
ತತ್ರ ತೀರ್ಥೇ ತು ಯೋ ಭಕ್ತ್ಯಾ ಶಿವಮುದ್ದಿಶ್ಯ ಭಾರತ ॥ ೨೯ ॥
ಭಿಕ್ಷಾಮಾತ್ರಂ ತಥಾಽನ್ನಂ ಯೇ ತೇಽಪಿ ಸ್ವರ್ಯಾಂತಿ ವೈ ನರಾಃ ।
ಯಜ್ವಿನಾಂ ವ್ರತಿನಾಂ ಚೈವ ತತ್ರ ತೀರ್ಥನಿವಾಸಿನಾಂ ॥ ೩೦ ॥
ಅಪಿ ವಾಲಾಗ್ರಮಾತ್ರಂ ಹಿ ದತ್ತಂ ಭವತಿ ಚಾಽಕ್ಷಯಂ ।
ಅಗ್ನಿಪ್ರವೇಶಂ ಯಃ ಕುರ್ಯಾಚ್ಛುಕ್ಲತೀರ್ಥೇ ಸಮಾಹಿತಃ ॥ ೩೧ ॥

---

ಯಜ್ಞಾನರ್ಹರಿಂದ ಯಜ್ಞಗಳನ್ನು ಮಾಡಿಸುವುದು, ಅಮಿತವಾದ ಬಡ್ಡಿಯಿಂದ ಜೀವಿಸುವುದು, ಪಜ್ತ್ತಿಯಲ್ಲೊಬ್ಬನಿಗೆ ವಿಷವನ್ನಿಡುವುದು, ದೇವತಾಬ್ರಾಹ್ಮಣರ ನಿಂದನೆ, ಇವೇ ಮೊದಲಾದ ಅನೇಕಾನೇಕ ಪಾತಕಗಳೂ ಶುಕ್ಲತೀರ್ಥ ದಲ್ಲಿ ಒಂದು ಚಾಂದ್ರಾಯಣಪ್ರಾಯಶ್ಚಿತ್ತವನ್ನಾಚರಿಸುವುದರಿಂದ ನಾಶ ವಾಗುವುವು.

೨೭. ಶುಕ್ಲತೀರ್ಥದಲ್ಲಿ ಯಾವನು ಸ್ನಾತನಾಗಿ ಪಿತೃದೇವತೆಗಳಿಗೆ ತರ್ಪಣ ಗಳನ್ನು ಕೊಡುವನೊ, ಅವನ ಕರ್ಮದಿಂದ ಪಿತೃಗಳು ಹನ್ನೆರಡು ವರ್ಷಗಳ ವರೆಗೂ ಸಂತುಷ್ಟರಾಗಿರುವರು.

೨೮–೨೯. ಚಿನ್ನ, ಧನ, ಧಾನ್ಯ, ಪಿತೃಶ್ರಾದ್ಧ, ಎತ್ತುಗಳನ್ನು ಹೂಡಿದ ನೇಗಿಲು, ಅನ್ನೋದಕಗಳು, ಮುಂತಾದುವುಗಳನ್ನು ಯಾರು ಈ ತೀರ್ಥ ದಲ್ಲಿ ದಾನಮಾಡುವರೊ, ಅವರು ಇಹಲೋಕದಲ್ಲಿ ಆನಂದಭರಿತರೂ, ಐಶ್ವರ್ಯವಂತರೂ ಆಗಿದ್ದು ಮೃತರಾಗಲು ಶಿವಲೋಕವನ್ನು ಸೇರುವುದರಲ್ಲಿ ಸಂದೇಹವಿಲ್ಲ.

೩೦. ಧರ್ಮರಾಜನೆ! ಆ ತೀರ್ಥದಲ್ಲಿ ಯಾವನು ಭಕ್ತಿಯಿಂದ ಪರಮ ಶಿವನ ಪ್ರೀತಿಗಾಗಿ ಕೇವಲ ಭಿಕ್ಷೆಯನ್ನೊ, ಭೋಜನವನ್ನೊ ಕೊಡುವನೊ, ಅವನೂ ಸ್ವರ್ಗಲೋಕಕ್ಕೆ ಹೋಗುವನು.

೩೧. ಆ ತೀರ್ಥದಲ್ಲಿ ವಾಸಮಾಡುವ ಯಜ್ಞದೀಕ್ಷಿತರಿಗೂ ವ್ರತತತ್ಪರ ರಿಗೂ ಮಾಡುವ ಅತ್ಯಲ್ಪವಾದ ದಾನವೂ ಅನಂತಫಲದಾಯಕವಾಗುವುದು.

ರಾಗದ್ವೇಷವಿನಿರ್ಮುಕ್ತೋ ಹೃದಿ ಧ್ಯಾತ್ವಾ ಜನಾರ್ದನಂ ।
ಸರ್ವಕಾಮಸುಸಂಪೂರ್ಣಃ ಸಗಚ್ಛೇದ್ವಾರುಣಂ ಪುರಂ ॥ ೩೨ ॥
ನ ರೋಗೋ ನ ಜರಾ ತತ್ರ ಯತ್ರ ದೇವೋಽಂಭಸಾಂ ಪತಿಃ ॥ ೩೩ ॥
ಅನಾಶಕಂ ತು ಯಃ ಕುರ್ಯಾತ್ತಸ್ಮಿಂಸ್ತೀರ್ಥೇ ಯುಧಿಷ್ಠಿರ ।
ಅನಿವರ್ತಿಕಾ ಗತಿಸ್ತಸ್ಯ ರುದ್ರಲೋಕಾದಸಂಶಯಂ ॥ ೩೪ ॥
ಅವಶಃ ಸ್ವವಶೋ ವಾಽಪಿ ಜಂತುಸ್ತತ್ಕ್ಷೇತ್ರಮಂಡಲೇ ।
ಮೃತಃ ಸ ತು ನ ಸಂದೇಹೋ ರುದ್ರಸ್ಯಾಽನುಚರೋ ಭವೇತ್ ॥ ೩೫ ॥
ಶುಕ್ಲತೀರ್ಥೇ ತು ಯಃ ಕನ್ಯಾಂ ಶಕ್ತ್ಯಾ ದದ್ಯಾದಲಂಕೃತಾಂ ।
ವಿಧಿನಾ ಯೋ ನೃಪಶ್ರೇಷ್ಠ ಕುರುತೇ ವೃಷಮೋಕ್ಷಣಂ ॥ ೩೬ ॥
ತಸ್ಯ ಯತ್ಫಲಮುದ್ದಿಷ್ಟಂ ಪುರಾಣೇ ರುದ್ರಭಾಷಿತಂ ।
ತದಹಂ ಸಂಪ್ರವಕ್ಷ್ಯಾಮಿ ಶೃಣುಷ್ವೈಕಮನಾ ನೃಪ ॥ ೩೭ ॥

---

೩೨. ಯಾವನು ಇಲ್ಲಿ ಸಮಾಹಿತಮಾನಸನೂ, ರಾಗದ್ವೇಷರಹಿತನೂ ಆಗಿ ತನ್ನಲ್ಲಿಯೇ ಮಹಾವಿಷ್ಣುವನ್ನು ಧ್ಯಾನಿಸುತ್ತ ಅಗ್ನಿಪ್ರವೇಶದಿಂದ ದೇಹವನ್ನು ತ್ಯಜಿಸುವನೊ, ಅವನು ಸಕಲಾಭೀಷ್ಟಗಳನ್ನೂ ಪಡೆದವನಾಗಿ ವರುಣಲೋಕಕ್ಕೆ ಹೋಗುವನು.

೩೩. ಜಲಗಳಿಗೆ ಅಧಿಪತಿಯಾದ ಆತನಿರುವಲ್ಲಿ ರೋಗವಾಗಲಿ ಮುಪ್ಪಾಗಲಿ ಇರುವುದಿಲ್ಲ.

೩೪. ಯುಧಿಷ್ಠಿರನೆ! ಆ ತೀರ್ಥದಲ್ಲಿ ಉಪವಾಸದಿಂದ ಪ್ರಾಣತ್ಯಾಗವನ್ನು ಯಾವನು ಮಾಡುವನೊ, ಅವನಿಗೆ ನಿಸ್ಸಂಶಯವಾಗಿಯೂ ರುದ್ರಲೋಕದಿಂದ ಮತ್ತೆ ಭೂಲೋಕಕ್ಕೆ ಚ್ಯುತಿಯಿಲ್ಲ.

೩೫. ಅವಶವಾಗಿಯೊ, ಬುದ್ಧಿಪೂರ್ವಕವಾಗಿಯೊ ಆ ಕ್ಷೇತ್ರದ ಪ್ರದೇಶದಲ್ಲಿ ಮೃತನಾದ ಜೀವನು ಮಹಾದೇವನ ಅನುಚರನಾಗುವುದರಲ್ಲಿ ಸಂದೇಹವಿಲ್ಲ.

೩೬–೩೭. ನರೋತ್ತಮನೆ! ಶುಕ್ಲತೀರ್ಥದಲ್ಲಿ ಯಾವನು ವಿಧ್ಯುಕ್ತರೀತಿಯಿಂದ ಸರ್ವಾಲಂಕಾರಭರಿತೆಯಾದ ಕನ್ಯೆಯನ್ನು ದಾನಮಾಡುವನೊ, ಮತ್ತು ಪಿತೃಗಳ ತೃಪ್ತಿಗಾಗಿ ವೃಷೋತ್ಸರ್ಗವನ್ನು ಮಾಡುವನೊ, ಅವನಿಗೆ ಲಭಿಸುವ ಫಲವನ್ನು ಪುರಾಣದಲ್ಲಿ ಪರಮೇಶ್ವರನೆ ನಿರೂಪಿಸಿರುವನು. ಅದನ್ನು ಹೇಳುವೆನು, ಏಕಾಗ್ರಮನಸ್ಸಿನಿಂದ ಕೇಳು.

ಯಾವಂತೋ ರೋಮಕೂಪಾಃ ಸ್ಯುಃ ಸರ್ವಾಂಗೇಷು ಪೃಥಕ್ ಪೃಥಕ್ ।
ತಾವದ್ವರ್ಷಸಹಸ್ರಾಣಿ ರುದ್ರಲೋಕೇ ಮಹೀಯತೇ ॥ ೩೮ ॥
ಶುಕ್ಲತೀರ್ಥೇ ತು ಯದ್ದತ್ತಂ ಗ್ರಹಣೇ ಚಂದ್ರಸೂರ್ಯಯೋಃ ।
ವರ್ಧತೇ ತದ್ಗುಣಂ ತಾವದ್ದಿನಾನಿ ದಶಪಂಚ ಚ ॥ ೩೯ ॥
ಶುಕ್ಲತೀರ್ಥಂ ಶುಚಿರ್ಭೂತ್ವಾ ಯಃ ಕರೋತಿ ಪ್ರದಕ್ಷಿಣಂ ।
ಪೃಥ್ವೀ ಪ್ರದಕ್ಷಿಣಾ ತೇನ ಕೃತಾ ಯತ್ತಸ್ಯ ತತ್ಫಲಂ ॥ ೪೦ ॥
ಶೋಭನಂ ಮಿಥುನಂ ಯಸ್ತು ರುದ್ರಮುದ್ದಿಶ್ಯ ಪೂಜಯೇತ್ ।
ಸಪ್ತ ಜನ್ಮಾನಿ ತಸ್ಯೈವ ವಿಯೋಗೋ ನ ಚ ವೈ ಕ್ವಚಿತ್ ॥ ೪೧ ॥
ಏತತ್ತೇ ಕಥಿತಂ ರಾಜನ್ ಸಂಕ್ಷೇಪೇಣ ಫಲಂ ಮಹತ್ ।
ಶುಕ್ಲತೀರ್ಥಸ್ಯ ಯತ್ಪುಣ್ಯಂ ತಥಾ ದೇವಾಚ್ಛ್ರುತಂ ಮಯಾ ॥ ೪೨ ॥
ಯ ಇದಂ ಶೃಣುಯಾದ್ಭಕ್ತ್ಯಾ ಪುರಾಣೇ ವಿಹಿತಂ ಫಲಂ ।
ಸ ಲಭೇನ್ನಾಽತ್ರ ಸಂದೇಹಃ ಸತ್ಯಂ ಸತ್ಯಂ ಪುನಃ ಪುನಃ ॥ ೪೩ ॥

---

೩೮. ಆ ಕನ್ಯೆಯ ಅಥವ ಆ ವೃಷಭದ ಆದ್ಯಂತದೇಹದಲ್ಲಿ ಎಷ್ಟು ರೋಮಕೂಪಗಳಿರುವುವೊ, ಅಷ್ಟು ಸಾವಿರ ವರ್ಷಗಳವರೆಗೂ ಆತನು ರುದ್ರ ಲೋಕದಲ್ಲಿ ಪೂಜೆಗೊಳ್ಳುವನು.

೩೯. ಶುಕ್ಲತೀರ್ಥದಲ್ಲಿ ಚಂದ್ರಸೂರ್ಯರ ಗ್ರಹಣಗಳು ಸಂಭವಿಸಿದಾಗ ಮಾಡಿದ ದಾನವು ಪಕ್ಷದ ಹದಿನೈದು ತಿಥಿಗಳು ಕಳೆದಂತೆಲ್ಲ ಉತ್ತರೋತ್ತರ ಗುಣಭರಿತವಾಗುವುದು.

೪೦. ಯಾವನು ಶುಚಿರ್ಭೂತನಾಗಿ ಶುಕ್ಲತೀರ್ಥಕ್ಕೆ ಪ್ರದಕ್ಷಿಣೆಯನ್ನು ಮಾಡುವನೊ, ಅವನಿಗೆ ಸಮಸ್ತಭೂಮಂಡಲವನ್ನೂ ಸುತ್ತುವರೆದು ಬಂದ ಪುಣ್ಯವುಂಟು.

೪೧. ಮಹಾದೇವನ ಪ್ರೀತ್ಯರ್ಥವಾಗಿ ಯಾವನು ಬ್ರಾಹ್ಮಣ ದಂಪತಿ ಗಳಿಗೆ ಅಲ್ಲಿ ಪೂಜೆಯನ್ನು ಮಾಡುವನೊ, ಅವನಿಗೆ ಏಳು ಜನ್ಮಗಳಲ್ಲಿಯೂ ಎಂದಿಗೂ ಪತ್ನೀವಿಯೋಗವಾಗುವುದಿಲ್ಲ.

೪೨. ಎಲೈ ರಾಜನೆ! ಮಹಾದೇವನಿಂದ ನಾನು ಕೇಳಿದ ಈ ಶುಕ್ಲ ತೀರ್ಥದ ಮಹತ್ತರವಾದ ಪ್ರಭಾವವನ್ನು ಸಂಕ್ಷೇಪವಾಗಿ ನಿನಗೆ ವರ್ಣಿ ಸಿರುವೆನು.

೪೩. ಇದನ್ನು ಯಾವನು ಭಕ್ತಿಯಿಂದ ಕೇಳುವನೊ, ಅವನು ಪುರಾಣ ದಲ್ಲಿ ಹೇಳಲ್ಪಟ್ಟಿರುವ ಫಲವನ್ನು ಪಡೆಯುವುದರಲ್ಲಿ ಸಂಶಯವಿಲ್ಲ. ಇದು ಮೂರು ಮೂರು ಬಾರಿಗೂ ಸತ್ಯವು.

**ಪುತ್ರಾರ್ಥೀ ಲಭತೇ ಪುತ್ರಂ ಧನಾರ್ಥೀ ಲಭತೇ ಧನಂ ।**
**ಮೋಕ್ಷಾರ್ಥೀ ಲಭತೇ ಮೋಕ್ಷಂ ಸ್ನಾನದಾನಫಲಂ ಮಹತ್ ॥ ೪೪ ॥**

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ
ಪಂಚಮೇ ಆವಂತ್ಯಖಂಡೇ ತೃತೀಯೇ ರೇವಾಖಂಡೇ
"ಶುಕ್ಲತೀರ್ಥಮಾಹಾತ್ಮ್ಯವರ್ಣನಂ"
ನಾಮ ಷಟ್‌ಪಂಚಾಶದಧಿಕಶತತಮೋಽಧ್ಯಾಯಃ

---

೪೪. ಇಲ್ಲಿ ಮಾಡಿದ ಸ್ನಾನದಾನಗಳ ಫಲವು ಅನಂತವಾದುದು. ಪುತ್ರಹೀನನು ಸತ್ಪುತ್ರನನ್ನೂ, ದರಿದ್ರನು ಐಶ್ವರ್ಯವನ್ನೂ, ಮೋಕ್ಷಕಾಮನಾದವನು ಮೋಕ್ಷವನ್ನೂ ಪಡೆಯುವರು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ
ಶ್ರೀ ಸ್ಕಾಂದಮಹಾಪುರಾಣದ ಐದನೆಯ ಆವಂತ್ಯಖಂಡದ ಮೂರನೆಯ ರೇವಾಖಂಡದಲ್ಲಿ
"ಶುಕ್ಲತೀರ್ಥಮಾಹಾತ್ಮ್ಯವರ್ಣನ" ಎಂಬ
ನೂರಐವತ್ತಾರನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

## ಅಥ ಸಪ್ತಪಂಚಾಶದಧಿಕಶತತಮೋಽಧ್ಯಾಯಃ

### ಹುಂಕಾರಸ್ವಾಮಿತೀರ್ಥಮಾಹಾತ್ಮ್ಯವರ್ಣನಂ

ಶ್ರೀ ಮಾರ್ಕಂಡೇಯ ಉವಾಚ :—

ತಸ್ಯೈವಾಽನಂತರಂ ರಾಜಂಛುಕ್ಲತೀರ್ಥಸಮೀಪತಃ ।
ವಾಸುದೇವಸ್ಯ ತೀರ್ಥಂ ತು ಸರ್ವಲೋಕೇಷು ಪೂಜಿತಂ ॥ ೧ ॥
ತದ್ಧಿ ಪುಣ್ಯಂ ಸುವಿಖ್ಯಾತಂ ನರ್ಮದಾಯಾಂ ಪುರಾತನಂ ।
ಯತ್ರ ಹುಂಕಾರಮಾತ್ರೇಣ ರೇವಾ ಕ್ರೋಶಂ ಜಗಾಮ ಸಾ ॥ ೨ ॥
ಯದಾ ಪ್ರಭೃತಿ ರಾಜೇಂದ್ರ ಹುಂಕಾರೇಣ ಗತಾ ಸರಿತ್ ।
ತದಾ ಪ್ರಭೃತಿ ಸ ಸ್ವಾಮೀ ಹುಂಕಾರಃ ಶಬ್ದಿತೋ ಬುಧೈಃ ॥ ೩ ॥
ಹುಂಕಾರತೀರ್ಥೇ ಯಃ ಸ್ನಾತ್ವಾ ಪಶ್ಯತ್ಯವ್ಯಯಮಚ್ಯುತಂ ।
ಸ ಮುಚ್ಯತೇ ನರಃ ಪಾಪೈಃ ಸಪ್ತಜನ್ಮಕೃತೈರಪಿ ॥ ೪ ॥
ಸಂಸಾರಾರ್ಣವಮಗ್ನಾನಾಂ ನರಾಣಾಂ ಪಾಪಕರ್ಮಿಣಾಂ ।
ನೈವೋದ್ಧರ್ತಾ ಜಗನ್ನಾಥಂ ವಿನಾ ನಾರಾಯಣಂ ಪರಃ ॥ ೫ ॥

---

## ಕನ್ನಡದ ಅನುವಾದ

### ಹುಂಕಾರಸ್ವಾಮಿತೀರ್ಥಮಾಹಾತ್ಮ್ಯವರ್ಣನ

೧. ಮಾರ್ಕಂಡೇಯನು ಹೇಳುತ್ತಾನೆ:—ಧರ್ಮರಾಜನೆ! ಬಳಿಕ ಆ ಶುಕ್ಲ ತೀರ್ಥದ ಬಳಿಯಲ್ಲಿಯೇ ಸಕಲಲೋಕಗಳಲ್ಲಿಯೂ ಪೂಜೆಯನ್ನು ಕೈಕೊಳ್ಳುತ್ತಿರುವ ವಾಸುದೇವನ ತೀರ್ಥವೊಂದಿರುವುದು.

೨. ನರ್ಮದೆಯ ತೀರ್ಥಗಳಲ್ಲೆಲ್ಲ ಅದು ಪುಣ್ಯಪ್ರದವೂ, ಪ್ರಖ್ಯಾತವೂ, ಅತ್ಯಂತ ಪುರಾತನವೂ ಆಗಿರುವುದು. ಪರಮಾತ್ಮನ ಹುಂಕಾರಮಾತ್ರದಿಂದಲೇ ಅಲ್ಲಿ ನದಿಯು ಒಂದು ಕ್ರೋಶದಷ್ಟು ಮುಂದಕ್ಕೆ ಪ್ರವಹಿಸಿತು.

೩. ರಾಜೇಂದ್ರನೆ! ಯಾವದಿನ ಆ ಹುಂಕಾರದಿಂದ ನದಿಯು ಪ್ರವಹಿಸ ತೊಡಗಿತೊ, ಅಂದಿನಿಂದ ಅಲ್ಲಿರುವ ಸ್ವಾಮಿಯು ಪ್ರಾಜ್ಞರಿಂದ ಹುಂಕಾರನೆಂದೇ ಕರೆಯಲ್ಪಡುತ್ತಿರುವನು.

೪. ಹುಂಕಾರತೀರ್ಥದಲ್ಲಿ ಯಾವನು ಸ್ನಾನವನ್ನು ಮಾಡಿ ಅಲ್ಲಿರುವ ಅನಂತನಾದ ಮಹಾವಿಷ್ಣುವನ್ನು ನೋಡುವನೊ, ಆ ನರನು ಏಳು ಜನ್ಮಗಳಲ್ಲಿ ಮಾಡಿದ ಪಾತಕಗಳಿಂದಲೂ ಮುಕ್ತನಾಗುವನು.

೫. ಸಂಸಾರವೆಂಬ ಸಮುದ್ರದಲ್ಲಿ ಮುಳುಗಿ ಪಾಪಕರ್ಮಗಳಲ್ಲಿಯೇ ತೊಡಗಿರುವವರಿಗೆ ಲೋಕನಾಥನಾದ ಶ್ರೀಮನ್ನಾರಾಯಣನಲ್ಲದೆ ಬೇರೆ ಉದ್ಧಾರಕನಿಲ್ಲ.

ಸಾ ಜಿಹ್ವಾ ಯಾ ಹರಿಂ ಸ್ತೌತಿ ತಚ್ಚಿತ್ತಂ ಯತ್ತದರ್ಪಿತಂ ।
ತಾವೇವ ಕೇವಲೌ ಶ್ಲಾಘ್ಯೌ ಯೌ ತತ್ಪೂಜಾಕರೌ ಕರೌ ॥ ೬ ॥
ಸರ್ವದಾ ಸರ್ವಕಾರ್ಯೇಷು ನಾಸ್ತಿ ತೇಷಾಮಮಂಗಲಂ ।
ಯೇಷಾಂ ಹೃದಿಸ್ಥೋ ಭಗವಾನ್ಮಂಗಲಾಯತನೋ ಹರಿಃ ॥ ೭ ॥
ಯದನ್ಯದ್ದೇವತಾರ್ಚಾಯಾಃ ಫಲಂ ಪ್ರಾಪ್ನೋತಿ ಮಾನವಃ ।
ಸಾಷ್ಟಾಂಗಪ್ರಣಿಪಾತೇನ ತತ್ಫಲಂ ಲಭತೇ ಹರೇಃ ॥ ೮ ॥
ರೇಣುಗುಂಠಿತಗಾತ್ರಸ್ಯ ಯಾವಂತೋಽಸ್ಯ ರಜಃಕಣಾಃ ।
ತಾವದ್ವರ್ಷಸಹಸ್ರಾಣಿ ವಿಷ್ಣುಲೋಕೇ ಮಹೀಯತೇ ॥ ೯ ॥

ಸಮ್ಮಾರ್ಜನಾಽಭ್ಯುಕ್ಷಣಲೇಪನೇನ
ತದಾಲಯೇ ನಶ್ಯತಿ ಸರ್ವಪಾಪಂ ।
ನಾರೀ ನರಾಣಾಂ ಪರಯಾ ತು ಭಕ್ತ್ಯಾ
ದೃಷ್ಟ್ವಾ ತು ರೇವಾಂ ನರಸತ್ತಮಸ್ಯ ॥ ೧೦ ॥
ಯೇನಾಽರ್ಚಿತೋ ಭಗವಾನ್ ವಾಸುದೇವೋ
ಜನ್ಮಾರ್ಜಿತಂ ನಶ್ಯತಿ ತಸ್ಯ ಪಾಪಂ ।
ಸ ಯಾತಿ ಲೋಕಂ ಗರುಡಧ್ವಜಸ್ಯ
ವಿಧೂತಪಾಪಃ ಸುರಸಂಘಪೂಜ್ಯತಾಂ ॥ ೧೧ ॥

---

೬. ಶ್ರೀ ಹರಿಯನ್ನು ಸ್ತುತಿಸುವ ಜಿಹ್ವೆಯೇ ಜಿಹ್ವೆಯು. ಆತನಲ್ಲಿ ನೆಟ್ಟಮನವೇ ಮನವು. ಕೇವಲ ಆತನ ಪೂಜೆಯ ಕೆಲಸದಲ್ಲಿಯೇ ನಿರತವಾಗಿರುವ ಕೈಗಳೇ ಶ್ಲಾಘ್ಯಗಳು.

೭–೮. ಯಾರ ಹೃದಯದಲ್ಲಿ ಸಕಲ ಮಂಗಳಗಳಿಗೂ ನಿಲಯನೆನಿಸಿದ ಹರಿಯು ನೆಲಸಿರುವನೊ, ಅವರಿಗೆ ಎಂದಿಗೂ ಯಾವ ಕಾರ್ಯಗಳಲ್ಲಿಯೂ ಅಮಂಗಳವೆಂಬುದಿಲ್ಲ. ಇತರ ದೇವತೆಗಳ ಸಮಗ್ರ ಪೂಜೆಯಿಂದ ಮನುಜನು ಯಾವ ಫಲವನ್ನು ಪಡೆಯುವನೊ, ಅದನ್ನೆಲ್ಲ ಶ್ರೀಹರಿಗೆ ಮಾಡಿದ ಒಂದು ಸಾಷ್ಟಾಂಗಪ್ರಣಾಮದಿಂದಲೇ ಪಡೆಯಬಹುದು.

೯. ಹಾಗೆ ಪ್ರಣಾಮವನ್ನು ಮಾಡಿದವನ ದೇಹದಲ್ಲಿ ಎಷ್ಟು ಧೂಳಿನ ಕಣಗಳು ಅಂಟಿಕೊಂಡಿರುವುವೊ, ಅಷ್ಟು ಸಾವಿರ ವರ್ಷಗಳವರೆಗೂ ಆತನು ವಿಷ್ಣುಲೋಕದಲ್ಲಿ ಪೂಜಿತನಾಗಿರುವನು.

೧೦. ನರ್ಮದೆಯನ್ನು ಕಂಡು ಅಲ್ಲಿರುವ ಪುರುಷೋತ್ತಮನಲ್ಲಿ ಅನನ್ಯ ಭಕ್ತಿಯುಕ್ತರಾದ ನಾರಿಯೇ ಆಗಲಿ, ಪುರುಷನೇ ಆಗಲಿ ಆತನ ದೇವಾಲಯದಲ್ಲಿ ನೀರನ್ನು ಚಿಮುಕಿಸುವುದರಿಂದಲೂ, ಸಾರಿಸುವುದರಿಂದಲೂ, ರಂಗವಲ್ಲ್ಯಾದಿಗಳಿಂದ ಲೇಪಿಸುವುದರಿಂದಲೂ ಸಕಲ ಪಾಪಗಳೂ ನಾಶವಾಗುವುವು.

೧೧. ಭಗವಂತನಾದ ವಾಸುದೇವನ ಪೂಜೆಯನ್ನು ಮಾಡಿದವನ ಜನ್ಮ

ಶಾಠ್ಯೇನಾಽಪಿ ನಮಸ್ಕಾರಂ ಪ್ರಯುಂಜಂಶ್ಚಕ್ರಪಾಣಿನಃ ।
ಸಪ್ತ ಜನ್ಮಾರ್ಜಿತಂ ಪಾಪಂ ಗಚ್ಛತ್ಯಾಶು ನ ಸಂಶಯಃ ॥ ೧೨ ॥
ಪೂಜಾಯಾಂ ಪ್ರೀಯತೇ ರುದ್ರೋ ಜಪಹೋಮೈರ್ದಿವಾಕರಃ ।
ಶಂಖಚಕ್ರಗದಾಪಾಣಿಃ ಪ್ರಣಿಪಾತೇನ ತುಷ್ಯತಿ ॥ ೧೩ ॥

ಭವಜಲಧಿಗತಾನಾಂ ದ್ವಂದ್ವವಾತಾಹತಾನಾಂ
ಸುತದುಹಿತೃ ಕಲತ್ರತ್ರಾಣಭಾರಾರ್ದಿತಾನಾಂ ।
ವಿಷಮವಿಷಯತೋಯೇ ಮಜ್ಜತಾಮಪ್ಲವಾನಾಂ
ಭವತಿ ಶರಣಮೇಕೋ ವಿಷ್ಣುಪೋತೋ ನರಾಣಾಂ ॥೧೪॥

ಹುಂಕಾರತೀರ್ಥೇ ರಾಜೇಂದ್ರ ಶುಭಂ ವಾ ಯದಿ ವಾಽಶುಭಂ ।
ಯತ್ಕೃತಂ ಪುರುಷವ್ಯಾಘ್ರ ತನ್ನಶ್ಯತಿ ನ ಕರ್ಹಿಚಿತ್ ॥ ೧೫ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ
ಪಂಚಮೇ ಆವಂತ್ಯಖಂಡೇ ತೃತೀಯೇ ರೇವಾಖಂಡೇ
"ಹುಂಕಾರಸ್ವಾಮಿತೀರ್ಥಮಾಹಾತ್ಮ್ಯವರ್ಣನಂ"ನಾಮ
ಸಪ್ತಪಂಚಾಶದಧಿಕಶತತಮೋಽಧ್ಯಾಯಃ

---

ಜನ್ಮಾಂತರಗಳ ಪಾಪರಾಶಿಯು ತೊಡೆದು ಹೋಗುವುದು. ಆತನು ಪಾತಕ ರಹಿತನಾಗಿ ವೈಕುಂಠಲೋಕಕ್ಕೆ ಹೋಗಿ ದೇವತೆಗಳ ಸಮೂಹದಿಂದಲೂ ಪೂಜೆಯನ್ನು ಕೈಗೊಳ್ಳುತ್ತಿರುವನು.

೧೨. ಮೂರ್ಖತನದಿಂದಲಾದರೂ ಚಕ್ರಪಾಣಿಗೆ ನಮಸ್ಕಾರವನ್ನು ಮಾಡಲು ಏಳು ಜನ್ಮಗಳ ಪಾತಕಗಳು ನಿಮಿಷದಲ್ಲಿಯೇ ತೊಡೆದುಹೋಗುವುದರಲ್ಲಿ ಸಂದೇಹವಿಲ್ಲ.

೧೩. ಪೂಜೆಯಿಂದ ಮಹಾದೇವನು ಸುಪ್ರೀತನಾಗುವನು. ಸೂರ್ಯನು ಜಪದಿಂದಲೂ ಹೋಮದಿಂದಲೂ ತೃಪ್ತನಾಗುವನು. ಶಂಖಚಕ್ರ ಗದಾಪಾಣಿಯಾದ ವಿಷ್ಣುವು ನಮಸ್ಕಾರದಿಂದಲೇ ಸಂತೋಷಗೊಳ್ಳುವನು.

೧೪. ಸಂಸಾರವೆಂಬ ಸಮುದ್ರದಲ್ಲಿ ಬಿದ್ದು, ಸುಖದುಃಖಾದಿಗಳೆಂಬ ದ್ವಂದ್ವಗಳ ಬಿರುಗಾಳಿಗೆ ಸಿಲುಕಿ, ಹೆಂಡಿರು ಮಕ್ಕಳನ್ನು ಕಾಪಾಡುವ ಭಾರದಿಂದ ಕುಗ್ಗಿಹೋಗಿ, ದುರ್ಗಮಗಳಾದ ವಿಷಯಗಳ ಜಲದಲ್ಲಿ ತೇಲಲಾರದೆ ಮುಳುಗುತ್ತಿರುವ ನರರಿಗೆ ಶ್ರೀ ವಿಷ್ಣುವೆಂಬವನೇ ಆಶ್ರಯವಾದ ಹರಿಗೋಲು.

೧೫. ಪುರುಷವ್ಯಾಘ್ರನೆ! ಈ ಹುಂಕಾರತೀರ್ಥದಲ್ಲಿ ಮಾಡಿದ ಪುಣ್ಯವೇ ಆಗಲಿ, ಪಾಪವೇ ಆಗಲಿ, ಎಂದಿಗೂ ಕೊನೆಗಾಣುವುದಿಲ್ಲ.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ
ಶ್ರೀ ಸ್ಕಾಂದಮಹಾಪುರಾಣದ ಐದನೆಯ ಆವಂತ್ಯಖಂಡದ ಮೂರನೆಯ ರೇವಾಖಂಡದಲ್ಲಿ
"ಹುಂಕಾರಸ್ವಾಮಿತೀರ್ಥಮಾಹಾತ್ಮ್ಯವರ್ಣನ"ವೆಂಬ
ನೂರಐವತ್ತೇಳನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

# ಅಥಾಷ್ಟಪಂಚಾಶದಧಿಕಶತತಮೋಽಧ್ಯಾಯಃ

## ಸಂಗಮೇಶ್ವರತೀರ್ಥಮಾಹಾತ್ಮ್ಯವರ್ಣನಂ

ಶ್ರೀ ಮಾರ್ಕಂಡೇಯ ಉವಾಚ :—

ತತೋ ಗಚ್ಛೇತ್ಪರಂ ತೀರ್ಥಂ ಸಂಗಮೇಶ್ವರಮುತ್ತಮಂ ।
ನರ್ಮದಾ ದಕ್ಷಿಣೇ ಕೂಲೇ ಸರ್ವಪಾಪಭಯಾಽಪಹಂ ॥ ೧ ॥
ಧನದಸ್ತತ್ರ ವಿಶ್ರಾಂತೋ ಮುಹೂರ್ತಂ ನೃಪಸತ್ತಮ ।
ಪಿತೃಲೋಕಾತ್ಸಮಾಯಾತಃ ಕೈಲಾಸಂ ಧರಣೀಧರಂ ॥ ೨ ॥
ಪ್ರತ್ಯಯಾರ್ಥಂ ನೃಪಶ್ರೇಷ್ಠ ಹ್ಯದ್ಯಾಪಿ ಧರಣೀತಲೇ ।
ಕೃಷ್ಣವರ್ಣಾ ಹಿ ಪಾಷಾಣಾ ದೃಶ್ಯಂತೇ ಸ್ಫಟಿಕೋಜ್ಜ್ವಲಾಃ ॥ ೩ ॥
ವಿಂಧ್ಯನಿರ್ಝರನಿಷ್ಕ್ರಾಂತಾ ಪುಣ್ಯತೋಯಾ ಸರಿದ್ವರಾ ।
ಪ್ರವಿಷ್ಟಾ ನರ್ಮದಾತೋಯೇ ಸರ್ವಪಾಪಪ್ರಣಾಶನೇ ॥ ೪ ॥
ಸಂಗಮೇ ತತ್ರ ಯಃ ಸ್ನಾತ್ವಾ ಪೂಜಯೇತ್ಸಂಗಮೇಶ್ವರಂ ।
ಅಶ್ವಮೇಧಸ್ಯ ಯಜ್ಞಸ್ಯ ಫಲಂ ಪ್ರಾಪ್ನೋತ್ಯಸಂಶಯಂ ॥ ೫ ॥

---

## ಕನ್ನಡದ ಅನುವಾದ

### ಸಂಗಮೇಶ್ವರತೀರ್ಥಮಾಹಾತ್ಮ್ಯವರ್ಣನ

೧. ಮಾರ್ಕಂಡೇಯನು ಹೇಳುತ್ತಾನೆ:—ಬಳಿಕ ನರ್ಮದಾ ನದಿಯ ದಕ್ಷಿಣತೀರದಲ್ಲಿರುವುದೂ, ಸರ್ವೋತ್ತಮವೂ, ಸಕಲ ಪಾಪಗಳನ್ನೂ ಭಯವನ್ನೂ ಪರಿಹರಿಸುವುದೂ ಆದ ಸಂಗಮೇಶ್ವರ ತೀರ್ಥಕ್ಕೆ ಹೋಗಬೇಕು.

೨. ಚಕ್ರವರ್ತಿಯೆ ! ಕುಬೇರನೊಮ್ಮೆ ಪಿತೃಲೋಕದಿಂದ ಬರುತ್ತ ಅಲ್ಲಿ ಒಂದು ಮುಹೂರ್ತಕಾಲ ವಿಶ್ರಮಿಸಿಕೊಂಡು ಕೈಲಾಸಪರ್ವತಕ್ಕೆ ಹೊರಟು ಹೋದನು.

೩. ಅದರ ಗುರುತಿಗಾಗಿ ಈಗಲೂ ಅಲ್ಲಿ ಬಿದ್ದಿರುವ ಕಲ್ಲುಗಳು ಕಪ್ಪುಬಣ್ಣದವುಗಳಾದರೂ ಸ್ಫಟಿಕಗಳಂತೆ ಉಜ್ಜ್ವಲಗಳಾಗಿ ಕಾಣುತ್ತಿರುವುವು.

೪. ವಿಂಧ್ಯಪರ್ವತದಿಂದ ಹೊರಟ ಪುಣ್ಯತೋಯವೆಂಬ ಝರಿಯು ಅಲ್ಲಿ ಸಕಲ ಪಾಪಗಳನ್ನೂ ಪರಿಹರಿಸುವ ನರ್ಮದೆಯ ನೀರಿನೊಡನೆ ಸೇರುವುದು.

೫. ಆ ಸಂಗಮದಲ್ಲಿ ಮಿಂದು ಸಂಗಮೇಶ್ವರನ ಪೂಜೆಯನ್ನು ಮಾಡಿದ ಮನುಜನು ನಿಸ್ಸಂಶಯವಾಗಿಯೂ ಅಶ್ವಮೇಧಯಜ್ಞದ ಫಲವನ್ನು ಪಡೆಯುವನು.

ಘಂಟಾಪತಾಕಾವಿತನಂ ಯೋ ದದೇತ್ಸಂಗಮೇಶ್ವರೇ ।
ಹಂಸಯುಕ್ತವಿಮಾನಸ್ಥೋ ದಿವ್ಯಸ್ತ್ರೀಶತಸಂವೃತಃ ॥ ೬ ॥
ಸ ರುದ್ರಪದಮಾಪ್ನೋತಿ ರುದ್ರಸ್ಯಾನುಚರೋ ಭವೇತ್ ।
ದಧಿಭಕ್ತೇನ ದೇವಸ್ಯ ಯಃ ಕುರ್ಯಾಲ್ಲಿಂಗಪೂರಣಂ ॥ ೭ ॥
ಸಿಕ್ಥಸಂಖ್ಯಂ ಶಿವೇ ಲೋಕೇ ಸ ವಸೇತ್ಕಾಲಮೀಪ್ಸಿತಂ ।
ಶ್ರೀಫಲೈಃ ಪೂರಯೇಲ್ಲಿಂಗಂ ನಿಃಸ್ವೋ ಭೂತ್ವಾ ಭವಸ್ಯ ತು ॥ ೮ ॥
ಸೋಽಪಿ ತತ್ಫಲಮಾಪ್ನೋತಿ ಗತಃ ಸ್ವರ್ಗೇ ನರೇಶ್ವರ ।
ಅಕ್ಷಯಾ ಸಂತತಿಸ್ತಸ್ಯ ಜಾಯತೇ ಸಪ್ತಜನ್ಮಸು ॥ ೯ ॥
ಸ್ನಪನಂ ದೇವದೇವಸ್ಯ ದಧ್ನಾ ಮಧುಘೃತೇನ ವಾ ।
ಯಃ ಕರೋತಿ ವಿಧಾನೇನ ತಸ್ಯ ಪುಣ್ಯಫಲಂ ಶೃಣು ॥ ೧೦ ॥
ಘೃತಕ್ಷೀರವಹಾ ನದ್ಯೋ ಯತ್ರ ವೃಕ್ಷಾ ಮಧುಸ್ರವಾಃ ।
ತತ್ರ ತೇ ಮಾನವಾ ಯಾಂತಿ ಸುಪ್ರಸನ್ನೇ ಮಹೇಶ್ವರೇ ॥ ೧೧ ॥

---

೬. ಯಾರು ಸಂಗಮೇಶ್ವರನಿಗೆ ಘಂಟೆ, ಪತಾಕೆಗಳು, ಮುಂತಾದುವುಗಳನ್ನು ಹೇರಳವಾಗಿ ಸಮರ್ಪಿಸುವರೊ, ಅವರು ಹಂಸಗಳ ವಾಹನದಲ್ಲಿ ಕುಳಿತು ನೂರಾರು ದೇವಕನ್ಯೆಯರಿಂದ ಪರಿವಾರಿತರಾಗಿರುವರು.

೭-೯. ಅವನು ರುದ್ರಲೋಕವನ್ನು ಸೇರಿ ಮಹಾದೇವನ ಅನುಚರನಾಗುವನು. ಮೊಸರಿನ ಅನ್ನದಿಂದ ಯಾವನು ದೇವನ ಲಿಂಗಕ್ಕೆ ಅಲಂಕಾರವನ್ನು ಮಾಡುವನೊ, ಅವನು ಆ ಅನ್ನದ ಅಗುಳುಗಳ ಸಂಖ್ಯೆಯಷ್ಟು ವರ್ಷಗಳವರೆಗೂ ಶಿವಲೋಕದಲ್ಲಿ ಬೇಕಾದ ಭೋಗಗಳನ್ನು ಪಡೆಯುತ್ತಿರುವನು. ಕಡುಬಡವನಾದವನು ಬಿಲ್ವಫಲದ ತಿರುಳಿನಿಂದಾದರೂ ಮಹೇಶ್ವರನ ಲಿಂಗವನ್ನು ಅಲಂಕರಿಸಬೇಕು. ರಾಜನೆ! ಅವನೂ ಸ್ವರ್ಗಲೋಕಕ್ಕೆ ಹೋಗಿ ಆ ಫಲವನ್ನೇ ಅನುಭವಿಸುವನು. ಅವನಿಗೆ ಏಳು ಜನ್ಮಗಳಲ್ಲಿಯೂ ಕೊನೆಯಿಲ್ಲದ ಸಂತಾನವುಂಟಾಗುವುದು.

೧೦. ಇನ್ನು ಮಹಾದೇವನಿಗೆ ಮೊಸರಿನಿಂದಲೊ, ಜೇನುತುಪ್ಪದಿಂದಲೊ, ತುಪ್ಪದಿಂದಲೊ, ಅಭಿಷೇಕವನ್ನು ಮಾಡಿದವನಿಗೆ ಲಭಿಸುವ ಪುಣ್ಯದ ಫಲವನ್ನು ಕೇಳು.

೧೧. ಮಹೇಶ್ವರನು ಅವರಲ್ಲಿ ಪ್ರಸನ್ನನಾಗಲು ಅವರು ಹಾಲು ತುಪ್ಪಗಳು ತುಂಬಿದ ನದಿಗಳೂ, ಜೇನುತುಪ್ಪವನ್ನು ಸುರಿಸುವ ವೃಕ್ಷಗಳೂ ಇರುವ ದಿವ್ಯ ಲೋಕಕ್ಕೆ ಹೋಗುವರು.

ಪತ್ರಂ ಪುಷ್ಪಂ ಫಲಂ ತೋಯಂ ಯಸ್ತು ದದ್ಯಾನ್ಮಹೇಶ್ವರೇ ।
ತತ್ಸರ್ವಂ ಸಪ್ತಜನ್ಮಾನಿ ಹ್ಯಕ್ಷಯಂ ಫಲಮಶ್ನುತೇ ॥ ೧೨ ॥
ಸರ್ವೇಷಾಮೇವ ಪಾತ್ರಾಣಾಂ ಮಹಾಪಾತ್ರಂ ಮಹೇಶ್ವರಃ ।
ತಸ್ಮಾತ್ಸರ್ವಪ್ರಯತ್ನೇನ ಪೂಜನೀಯೋ ಮಹೇಶ್ವರಃ ॥ ೧೩ ॥
ಬ್ರಹ್ಮಚರ್ಯಸ್ಥಿತೋ ನಿತ್ಯಂ ಯಸ್ತು ಪೂಜಯತೇ ಶಿವಂ ।
ಇಹ ಜೀವನ್ ಸ ದೇವೇಶೋ ಮೃತೋ ಗಚ್ಛೇದನಾಮಯಂ ॥ ೧೪ ॥
ಶಿವೇ ತು ಪೂಜಿತೇ ಪಾರ್ಥ ಯತ್ಫಲಂ ಪ್ರಾಪ್ಯತೇ ಬುಧೈಃ ।
ಯೋಗೀಂದ್ರೇ ಚೈವ ತತ್ಪಾರ್ಥ ಪೂಜಿತೇ ಲಭತೇ ಫಲಂ ॥ ೧೫ ॥
ತೇ ಧನ್ಯಾಸ್ತೇ ಮಹಾತ್ಮಾನಸ್ತೇಷಾಂ ಜನ್ಮ ಸುಜೀವಿತಂ ।
ಯೇಷಾಂ ಗೃಹೇಷು ಭುಂಜಂತಿ ಶಿವಭಕ್ತಿರತಾ ನರಾಃ ॥ ೧೬ ॥
ಸನ್ನಿರುಧ್ಯೇಂದ್ರಿಯಗ್ರಾಮಂ ಯತ್ರ ಯತ್ರ ವಸೇನ್ಮುನಿಃ ।
ತತ್ರ ತತ್ರ ಕುರುಕ್ಷೇತ್ರಂ ನೈಮಿಷಂ ಪುಷ್ಕರಾಣಿ ಚ ॥ ೧೭ ॥
ಯತ್ಫಲಂ ವೇದವಿದುಷಿ ಭೋಜಿತೇ ಶತಸಂಖ್ಯಯಾ ।
ತತ್ಫಲಂ ಜಾಯತೇ ಪಾರ್ಥ ಹ್ಯೇಕೇನ ಶಿವಯೋಗಿನಾ ॥ ೧೮ ॥

---

೧೨. ಮಹೇಶ್ವರನಿಗೆ ಪತ್ರವನ್ನೇ ಆಗಲಿ, ಪುಷ್ಪವನ್ನು, ಫಲವನ್ನು, ನೀರನ್ನೇ ಆಗಲಿ ಭಕ್ತಿಯಿಂದ ಅರ್ಪಿಸಿದವನಿಗೆ ಅದರ ಫಲವು ಏಳು ಜನ್ಮಗಳ ವರೆಗೂ ಅನಂತಗುಣಿತವಾಗಿರುವುದು.

೧೩. ಸಕಲ ಪಾತ್ರಗಳಲ್ಲಿಯೂ ಮಹೇಶ್ವರನೇ ದಾನಗಳಿಗೆ ಉತ್ತಮ ಪಾತ್ರವು. ಆದುದರಿಂದ ಸರ್ವ ಪ್ರಕಾರದಿಂದಲೂ ಆತನನ್ನೇ ಪೂಜಿಸಬೇಕು.

೧೪. ಯಾವನು ಆಜನ್ಮ ಬ್ರಹ್ಮಚಾರಿಯಾಗಿ ನಿತ್ಯವೂ ಶಿವಪೂಜೆಯನ್ನು ಮಾಡುತ್ತಿರುವನೊ, ಅವನು ಇಲ್ಲಿ ಜೀವಿಸಿರುವಾಗಲೇ ದೇವೇಶ್ವರನಾಗಿ ಮೃತ ನಾದಮೇಲೆ ಶಾಶ್ವತಪದವಿಯನ್ನು ಹೊಂದುವನು.

೧೫. ಧರ್ಮರಾಜನೆ! ವಿದ್ವಾಂಸರಿಗೆ ಶಿವನನ್ನು ಪೂಜಿಸಲು ಯಾವ ಫಲವುಂಟೊ, ಅದನ್ನೇ ಶಿವಯೋಗನಿರತನಾದವನನ್ನು ಪೂಜಿಸುವುದರಿಂದಲೂ ಪಡೆಯಬಹುದು.

೧೬. ಶಿವಭಕ್ತನಿರತರಾದ ಜನರು ಯಾರ ಮನೆಗಳಲ್ಲಿ ಭೋಜನವನ್ನು ಮಾಡುವರೊ, ಅವರೇ ಧನ್ಯರು, ಮಹಾತ್ಮರು. ಅವರ ಜನ್ಮವೇ ಸಫಲ ಜೀವನವು.

೧೭. ಇಂದ್ರಿಯಗಳ ವ್ಯಾಪಾರವನ್ನು ತಡೆದುಕಟ್ಟಿರುವ ಮುನಿಯು ಎಲ್ಲಿ ವಾಸಮಾಡುವನೊ, ಅಲ್ಲಲ್ಲಿಯೇ ಕುರುಕ್ಷೇತ್ರವೂ, ನೈಮಿಷವೂ, ಪುಷ್ಕರ ತೀರ್ಥವೂ ಇರುವುವು.

೧೮. ಪಾರ್ಥನೆ! ನೂರು ಮಂದಿ ವೇದಜ್ಞರಾದವರಿಗೆ ಭೋಜನವನ್ನು

ಯತ್ರ ಭುಂಜತಿ ಭಸ್ಮಾಂಗೀ ಮೂರ್ಖೋ ವಾ ಯದಿ ಪಂಡಿತಃ ।
ತತ್ರ ಭುಂಜತಿ ದೇವೇಶಃ ಸಪತ್ನೀಕೋ ವೃಷಧ್ವಜಃ ॥ ೧೯ ॥
ವಿಪ್ರಾಣಾಂ ವೇದವಿದುಷಾಂ ಕೋಟಿಂ ಸಂಭೋಜ್ಯ ಯತ್ಫಲಂ ।
ಭಿಕ್ಷಾಮಾತ್ರಪ್ರದಾನೇನ ತತ್ಫಲಂ ಶಿವಯೋಗಿನಾಂ ॥ ೨೦ ॥
ಸಂಗಮೇಶ್ವರಮಾಸಾದ್ಯ ಪ್ರಾಣತ್ಯಾಗಂ ಕರೋತಿ ಯಃ ।
ನ ತಸ್ಯ ಪುನರಾವೃತ್ತಿಃ ಶಿವಲೋಕಾತ್ಕದಾಚನ ॥ ೨೧ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ
ಪಂಚಮೇ ಆವಂತ್ಯಖಂಡೇ ತೃತೀಯೇ ರೇವಾಖಂಡೇ
"ಸಂಗಮೇಶ್ವರತೀರ್ಥಮಾಹಾತ್ಮ್ಯವರ್ಣನಂ"
ನಾಮಾಷ್ಟಪಂಚಾಶದಧಿಕಶತತಮೋಽಧ್ಯಾಯಃ

---

ಮಾಡಿಸಲು ಯಾವ ಫಲವುಂಟೊ, ಅದನ್ನೇ ಒಬ್ಬ ಶಿವಯೋಗಿಗೆ ಅನ್ನವನ್ನಿಡು ವುದರಿಂದ ಪಡೆಯಬಹುದು.

೧೯. ಭಸ್ಮಲೇಪಿತಾಂಗನಾದವನು ಮೂರ್ಖನೇ ಆಗಿರಲಿ, ಪಂಡಿತನೇ ಆಗಿರಲಿ, ಎಲ್ಲಿ ಊಟವನ್ನು ಮಾಡುತ್ತಾನೆಯೊ, ಅಲ್ಲಿ ಪತ್ನೀಸಮೇತನೂ, ಮಹಾದೇವನೂ ಆದ ವೃಷಭಧ್ವಜನೇ ಭೋಜನವನ್ನು ಮಾಡುತ್ತಿರುವನು.

೨೦. ವೇದನಿಷ್ಣಾತರಾದ ಒಂದು ಕೋಟಿ ಬ್ರಾಹ್ಮಣರಿಗೆ ಊಟವನ್ನು ಮಾಡಿಸುವುದರಿಂದ ಯಾವ ಫಲವುಂಟೊ, ಅದೇ ಶಿವಯೋಗಿಗಳಿಗೆ ಭಿಕ್ಷೆಯನ್ನು ನೀಡುವ ಮಾತ್ರದಿಂದಲೇ ಲಭಿಸುವುದು.

೨೧. ಸಂಗಮೇಶ್ವರತೀರ್ಥಕ್ಕೆ ಬಂದು ಅಲ್ಲಿ ಯಾವನು ಪ್ರಾಣತ್ಯಾಗವನ್ನು ಮಾಡುತ್ತಾನೆಯೊ, ಅವನಿಗೆಂದಿಗೂ ಶಿವಲೋಕದಿಂದ ಭೂಲೋಕಕ್ಕೆ ಪುನರಾಗಮನವಿಲ್ಲ.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ
ಶ್ರೀ ಸ್ಕಾಂದಮಹಾಪುರಾಣದ ಐದನೆಯ ಆವಂತ್ಯಖಂಡದ ಮೂರನೆಯ ರೇವಾಖಂಡದಲ್ಲಿ
"ಸಂಗಮೇಶ್ವರತೀರ್ಥಮಾಹಾತ್ಮ್ಯವರ್ಣನ"ವೆಂಬ
ನೂರೈವತ್ತೆಂಟನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

## ಅಥೈಕೋನಷಷ್ಟ್ಯುತ್ತರಶತತಮೋಽಧ್ಯಾಯಃ

### ಅನರಕೇಶ್ವರತೀರ್ಥಮಾಹಾತ್ಮ್ಯವರ್ಣನಂ

ಶ್ರೀ ಮಾರ್ಕಂಡೇಯ ಉವಾಚ :—

ತತೋ ಗಚ್ಛೇನ್ಮಹಾರಾಜ ತೀರ್ಥಂ ಪರಮಪಾವನಂ ।
ನರ್ಮದಾಯಾಂ ಸುದುಷ್ಪ್ರಾಪಂ ಸಿದ್ಧಂ ಹ್ಯನರಕೇಶ್ವರಂ ॥ ೧ ॥
ತಸ್ಮಿಂಸ್ತೀರ್ಥೇ ನರಃ ಸ್ನಾತ್ವಾ ಪಾಪಕರ್ಮಾಽಪಿ ಭಾರತ ।
ನ ಪಶ್ಯತಿ ಮಹಾಘೋರಂ ನರಕದ್ವಾರಸಂಜ್ಞಿಕಂ ॥ ೨ ॥

ಯುಧಿಷ್ಠಿರ ಉವಾಚ :—

ಶುಭಾಽಶುಭಫಲೈಸ್ತಾತ ಭುಕ್ತಭೋಗನರಾಸ್ತ್ವಿಹ ।
ಜಾಯಂತೇ ಲಕ್ಷಣೈರ್ಯೈಸ್ತು ತಾನಿ ಮೇ ವದ ಸತ್ತಮ ॥ ೩ ॥
ಯಥಾ ನಿರ್ಗಚ್ಛತೇ ಜೀವಸ್ತ್ಯಕ್ತ್ವಾ ದೇಹಂ ನ ಪಶ್ಯತಿ ।
ತಥಾ ಗಚ್ಛನ್ ಪುನರ್ದೇಹಂ ಪಂಚಭೂತಸಮನ್ವಿತಃ ॥ ೪ ॥

---

### ಕನ್ನಡದ ಅನುವಾದ

#### ಅನರಕೇಶ್ವರತೀರ್ಥಮಾಹಾತ್ಮ್ಯವರ್ಣನ

೧. ಮಾರ್ಕಂಡೇಯನು ಹೇಳುತ್ತಾನೆ:—ಮಹಾರಾಜನೆ! ಅಲ್ಲಿಂದ ನರ್ಮದೆಯಲ್ಲಿ ಪರಮಪವಿತ್ರವೂ, ಅತ್ಯಂತ ದುಷ್ಪ್ರಾಪ್ಯವೂ, ಸಿದ್ಧಿಪ್ರದವೂ ಆದ ಅನರಕೇಶ್ವರತೀರ್ಥಕ್ಕೆ ಹೋಗಬೇಕು.

೨. ಭರತಕುಲತಿಲಕನೆ! ಎಂತಹ ಪಾಪಕರ್ಮಿಯೇ ಆದರೂ ಈ ತೀರ್ಥದಲ್ಲಿ ಸ್ನಾನವನ್ನು ಮಾಡಲು ನರಕದ್ವಾರವೆಂಬ ಹೆಸರಿನ ಮಹಾಭಯಾನಕ ದೃಶ್ಯವನ್ನು ನೋಡುವುದಿಲ್ಲ.

೩. ಯುಧಿಷ್ಠಿರನು ಹೇಳುತ್ತಾನೆ:—ಮಹಾಪ್ರಾಜ್ಞನೆ! ತಮ್ಮ ತಮ್ಮ ಶುಭಾಶುಭ ಫಲಗಳನ್ನು ಲೋಕಾಂತರಗಳಲ್ಲಿ ಅನುಭವಿಸಿದಮೇಲೆ ಇಲ್ಲಿ ಮನುಷ್ಯರು ಯಾವ ಯಾವ ಲಕ್ಷಣಗಳಿಂದ ಕೂಡಿರುವರೆಂಬುದನ್ನು ನನಗೆ ಹೇಳು.

೪. ಜೀವನು ಈ ದೇಹವನ್ನು ಬಿಟ್ಟು ಹೊರಡುವಾಗ ಹೇಗೆ ಜ್ಞಾನಶೂನ್ಯನಾಗಿರುವನೊ, ಹಾಗೆಯೇ ಪಂಚಭೂತಗಳ ರಾಶಿಯೆನಿಸಿದ ಇದನ್ನು ಪ್ರವೇಶಿಸುವಾಗಲೂ ಇರುವನಲ್ಲವೆ.

ತ್ವಗಸ್ಥಿಮಾಂಸಮೇದೋಽಸೃಕ್ಕೇಶಸ್ನಾಯುಶತೈಃ ಸಹ ।
ವಿಣ್ಮೂತ್ರರೇತಃ ಸಂಘಾತೇ ಕಾ ಸಂಜ್ಞಾ ಜಾಯತೇ ನೃಣಾಂ ॥ ೫ ॥
ಏವಮುಕ್ತಃ ಸ ಮಾರ್ಕಂಡಃ ಕಥಯಾಮಾಸ ಯೋಗವಿತ್ ।
ಧ್ಯಾತ್ವಾ ಸನಾತನಂ ಶರ್ವಂ ದೇವದೇವಂ ಮಹೇಶ್ವರಂ ॥ ೬ ॥

ಮಾರ್ಕಂಡೇಯ ಉವಾಚ :—

ಶೃಣು ಪಾರ್ಥ ಮಹಾಪ್ರಶ್ನಂ ಕಥಯಾಮಿ ಯಥಾಶ್ರುತಂ ।
ಸಕಾಶಾದ್ಬ್ರಹ್ಮಣಃ ಪೂರ್ವಮೃಷಿದೇವಸಮಾಗಮೇ ॥ ೭ ॥
ಗುರುರಾತ್ಮವತಾಂ ಶಾಸ್ತಾ ರಾಜಾ ಶಾಸ್ತಾ ದುರಾತ್ಮನಾಂ ।
ಇಹ ಪ್ರಚ್ಛನ್ನಪಾಪಾನಾಂ ಶಾಸ್ತಾ ವೈವಸ್ವತೋ ಯಮಃ ॥ ೮ ॥
ಅಚೀರ್ಣಪ್ರಾಯಶ್ಚಿತ್ತಾನಾಂ ಯಮಲೋಕೇ ಹ್ಯನೇಕಧಾ ।
ಯಾತನಾಭಿರ್ನಿಯುಕ್ತಾನಾಮನೇಕಾಂ ಜೀವಸಂತತಿಂ ॥ ೯ ॥
ಗತ್ವಾ ಮನುಷ್ಯಭಾವೇ ತು ಪಾಪಚಿಹ್ನಾ ಭವಂತಿ ತೇ ।
ತತ್ತೇಽಹಂ ಸಂಪ್ರವಕ್ಷ್ಯಾಮಿ ಶೃಣುಷ್ವೈಕಮನಾ ನೃಪ ॥ ೧೦ ॥

---

೫. ಚರ್ಮ, ಮೂಳೆ, ಮಾಂಸ, ಮೇದಸ್ಸು, ರಕ್ತ, ಕೂದಲು, ನರಗಳು ಮುಂತಾದ ನೂರಾರು ಪದಾರ್ಥಗಳಿಂದ ಕೂಡಿ ಮಲಮೂತ್ರ ರೇತಸ್ಸುಗಳಿಂದ ತುಂಬಿರುವ ಈ ದೇಹದಲ್ಲಿ ಜನರಿಗೆ ಯಾವ ಜ್ಞಾನವುಂಟಾಗುವುದು?

೬. ಇಂತೆಂದ ಧರ್ಮರಾಜನಿಗೆ ತತ್ತ್ವಜ್ಞನಾದ ಮಾರ್ಕಂಡೇಯನು ಸನಾತನನೂ, ಸರ್ವವ್ಯಾಪಿಯೂ, ದೇವಾಧಿದೇವನೂ ಆದ ಮಹೇಶ್ವರನನ್ನು ಧ್ಯಾನಿಸಿ ಹೇಳತೊಡಗಿದನು.

೭–೮. ಮಾರ್ಕಂಡೇಯನು ಹೇಳುತ್ತಾನೆ:—ಪಾರ್ಥನೆ! ಕೇಳು. ನಿನ್ನ ಮಹಾಪ್ರಶ್ನೆಗೆ ನಾನು ಕೇಳಿರುವಂತೆ ಉತ್ತರವನ್ನು ಹೇಳುವೆನು. ಮಹರ್ಷಿಗಳೂ ದೇವತೆಗಳೂ ಸೇರಿದ್ದ ಸಭೆಯಲ್ಲಿ ಹಿಂದೆ ನಾನು ಬ್ರಹ್ಮದೇವನಿಂದಲೇ ಇದನ್ನು ಕೇಳಿದೆನು. ಆತ್ಮವಂತರಿಗೆ ಗುರುವೇ ಶಿಕ್ಷಕನು. ದುರಾತ್ಮರಿಗೆ ರಾಜನೇ ದಂಡಾಧಿಕಾರಿಯು. ಇಲ್ಲಿ ಪ್ರಚ್ಛನ್ನವಾಗಿ ಪಾಪಗಳನ್ನು ಮಾಡಿದವರಿಗೆಲ್ಲ ವೈವಸ್ವತ (ಯಮ)ನೇ ಶಾಸಕನು.

೯. ಯಮಲೋಕದಲ್ಲಿ ಬಹುವಿಧಗಳಾದ ಪ್ರಾಯಶ್ಚಿತ್ತ (ಯಾತನೆ)ಗಳನ್ನನುಭವಿಸಿದರೂ ಮುಗಿಯದೆ ಬಂದ ಕೆಲವು ಜೀವರು ನಾನಾ ವಿಧವಾದ ಜೀವ ರಾಶಿಗಳಲ್ಲಿ ಹುಟ್ಟುವರು.

೧೦. ಅಂತಹವರು ಮನುಷ್ಯ ಜನ್ಮಗಳನ್ನು ತಾಳಿದರೆ ತಮ್ಮ ಪಾಪದ ಲಾಂಛನಗಳನ್ನು ತಾಳಿರುವರು. ರಾಜನೆ! ಅದನ್ನು ನಾನು ನಿನಗೆ ಹೇಳುವೆನು. ಸಾವಧಾನದಿಂದ ಕೇಳು.

ಸಹಿತ್ವಾ ಯಾತನಾಂ ಸರ್ವಾಂ ಗತ್ವಾ ವೈವಸ್ವತಕ್ಷಯಂ ।
ನಿಸ್ತೀರ್ಣಯಾತನಾ ಯೇ ತು ಲೋಕಮಾಯಾಂತಿ ಚಿಹ್ನಿತಾಃ ॥ ೧೧ ॥
ಗದ್ಗದೋಽನೃತವಾದೀಸ್ಯಾನ್ಮೂಕಶ್ಚೈವ ಗವಾಽನೃತೇ ।
ಬ್ರಹ್ಮಹಾ ಜಾಯತೇ ಕುಷ್ಠೀ ಶ್ಯಾವದಂತಸ್ತು ಮದ್ಯಪಃ ॥ ೧೨ ॥
ಕುನಖೀ ಸ್ವರ್ಣಹರಣಾದ್ದುಶ್ಚರ್ಮಾ ಗುರುತಲ್ಪಗಃ ।
ಸಂಯೋಗೀ ಹೀನಯೋನಿಃ ಸ್ಯಾದ್ದರಿದ್ರೋಽದತ್ತದಾನತಃ ॥ ೧೩ ॥
ಗ್ರಾಮಸೂಕರತಾಂ ಯಾತಿ ಹ್ಯಯಾಜ್ಯಯಾಜಕೋ ನೃಪ ।
ಖರೋ ವೈ ಬಹುಯಾಜೀ ಸ್ಯಾಚ್ಛ್ವಾಽನಿಮಂತ್ರಿತಭೋಜನಾತ್ ॥ ೧೪ ॥
ಅಪರೀಕ್ಷಿತಭೋಜೀ ಸ್ಯಾದ್ವಾನರೋ ವಿಜನೇ ವನೇ ।
ವಿತರ್ಜಕೋಽಥ ಮಾರ್ಜಾರಃ ಖದ್ಯೋತಃ ಕಕ್ಷದಾಹತಃ ॥ ೧೫ ॥
ಅವಿದ್ಯಾಂ ಯಃ ಪ್ರಯಚ್ಛೇತ ಬಲೀವರ್ದೋ ಭವೇದ್ಧಿ ಸಃ ।
ಅನ್ನಂ ಪರ್ಯುಷಿತೇ ವಿಪ್ರೇ ದದಾನಃ ಕ್ಲೀಬತಾಂ ವ್ರಜೇತ್ ॥ ೧೬ ॥

---

೧೧. ಮೃತರಾಗಿ ಯಮಲೋಕಕ್ಕೆ ಹೋಗಿ ಅಲ್ಲಿ ಸಕಲ ಯಾತನೆಗಳನ್ನೂ ಅನುಭವಿಸಿ ಆ ಲೋಕದಿಂದ ಪಾಪಶೇಷಸಹಿತರಾಗಿ ಹಿಂತಿರುಗಿ ಬಂದವರು ಈ ಲೋಕದಲ್ಲಿ ದೇಹಚಿಹ್ನೆಗಳಿಂದ ಕೂಡಿರುವರು.

೧೨. ಸುಳ್ಳನ್ನು ಹೇಳುವವನು ಗದ್ಗದ ಭಾಷಿಯಾಗುವನು. ಗೋವಿಗಾಗಿ ಸುಳ್ಳನ್ನು ಹೇಳುವವನು ಮೂಗನೂ, ಬ್ರಹ್ಮಘಾತಕನು ಕುಷ್ಠರೋಗಿಯೂ, ಮದ್ಯಪಾನವನ್ನು ಮಾಡಿದವನು ಶ್ಯಾವದಂತನೂ (ತುಟಿಗಳಿಂದ ಹೊರಬಿದ್ದ ಹಲ್ಲುಗಳವನೂ) ಆಗುವರು.

೧೩. ಸುವರ್ಣಸ್ತೇಯದಿಂದ ನಖಗಳು ವಕ್ರವಾಗುವುವು. ಗುರುತಲ್ಪಗಾಮಿಯು ಕೆಟ್ಟ ಚರ್ಮರೋಗದವನಾಗುವನು. ಸ್ವೇಚ್ಛೆಯಿಂದ ಸ್ತ್ರೀ ಸಂಯೋಗವನ್ನು ಮಾಡುವವನು ನೀಚಯೋನಿಯಲ್ಲಿ ಜನಿಸುವನು. ದಾನಗಳನ್ನು ಕೊಡದವನು ದರಿದ್ರನಾಗುವನು.

೧೪. ಯಜ್ಞಾರ್ಹರಲ್ಲದವರಿಗೆ ಯಜ್ಞಗಳನ್ನು ಮಾಡಿಸಿದವನು ಗ್ರಾಮದಲ್ಲಿ ಹಂದಿಯಾಗುವನು. ಬಹುಯಾಜಕನು ಕತ್ತೆಯೂ, ಕರೆಸಿಕೊಳ್ಳದೆ ಊಟಕ್ಕೆ ಹೋಗುವವನು ನಾಯಿಯೂ ಆಗುವರು.

೧೫–೧೬. ದಾತೃಗಳ ಪಾತ್ರಾಪಾತ್ರಗಳನ್ನು ವಿಚಾರಿಸದೆ ಭೋಜನವನ್ನು ಮಾಡುವವನು ನಿರ್ಜನವಾದ ಅರಣ್ಯದಲ್ಲಿ ಕೋತಿಯಾಗುವನು. ಇತರರನ್ನು ಬಯ್ಯುವವನು ಬೆಕ್ಕಾಗಿಯೂ, ಗೃಹದಾಹವನ್ನು ಮಾಡಿದವನು ಮಿಣುಕು ಹುಳುವಾಗಿಯೂ ಹುಟ್ಟುವರು. ಸಲ್ಲದ ವಿದ್ಯೆಯನ್ನು ಬೋಧಿಸುವವನು ಎತ್ತಾಗಿ ಜನಿಸುವನು. ಹಿಂದಿನ ದಿನದ (ತಂಗಳು) ಅನ್ನವನ್ನು ಬ್ರಾಹ್ಮಣನಿಗೆ ಕೊಡಲು ನಪುಂಸಕತ್ವವನ್ನು ಪಡೆಯುವನು.

ಮಾತ್ಸರ್ಯಾದಥ ಜಾತ್ಯಂಧೋ ಜನ್ಮಾಂಧಃ ಪುಸ್ತಕಂ ಹರನ್ ।
ಫಲಾನ್ಯಾಹರತೋಽಪತ್ಯಂ ಮ್ರಿಯತೇ ನಾಽತ್ರ ಸಂಶಯಃ ॥ ೧೭ ॥
ಮೃತೋ ವಾನರತಾಂ ಯಾತಿ ತನ್ಮುಕ್ತೋಽಥ ಗಲಾಡವಾನ್ ।
ಅದತ್ವಾ ಭಕ್ಷಯಂಸ್ತಾನಿ ಹ್ಯನಪತ್ಯೋ ಭವೇನ್ನರಃ ॥ ೧೮ ॥
ಹರನ್ವಸ್ತ್ರಂ ಭವೇದ್ಗೋಧಾ ಗರದಃ ಪವನಾಽಶನಃ ।
ಪ್ರವ್ರಾಜೀಂ ಗಮನಾದ್ರಾಜನ್ಭವೇನ್ಮರುಪಿಶಾಚಕಃ ॥ ೧೯ ॥
ವಾತಕೋ ಜಲಹರ್ತಾ ಚ ಧಾನ್ಯಹರ್ತಾ ಚ ಮೂಷಕಃ ।
ಅಪ್ರಾಪ್ತಯೌವನಾಂ ಗಚ್ಛನ್ಭವೇತ್ಸರ್ಪ ಇತಿ ಶ್ರುತಿಃ ॥ ೨೦ ॥
ಗುರುದಾರಾಽಭಿಲಾಷೀ ಚ ಕೃಕಲಾಸೋ ಭವೇಚ್ಚಿರಂ ।
ಜಲಪ್ರಸ್ರವಣಂ ಯಸ್ತು ಭಿಂದ್ಯಾನ್ಮತ್ಸ್ಯೋ ಭವೇನ್ನರಃ ॥ ೨೧ ॥
ಅವಿಕ್ರೇಯಾನ್ವಿಕ್ರಯನ್ವೈ ವಿಕಟಾಽಕ್ಷೋ ಭವೇನ್ನರಃ ।
ಅಯೋನಿಗೋ ವೃಕೋ ಹಿ ಸ್ಯಾದುಲೂಕಃ ಕ್ರಯವಂಚನಾತ್ ॥ ೨೨ ॥

---

೧೭. ಮಾತ್ಸರ್ಯದಿಂದ ಕುದಿಯುವವನು ಜಾತಿಯಿಲ್ಲದವನಾಗುವನು. ಪುಸ್ತಕವನ್ನು ಕದ್ದವನು ಹುಟ್ಟುಕುರುಡನಾಗುವನು. ಫಲಗಳನ್ನಪಹರಿಸಿದವನ ಸಂತತಿಯು ನಾಶವಾಗುವುದು ನಿಶ್ಚಯವು.

೧೮. ಅಂತಹವನು ಸತ್ತು ವಾನರಜನ್ಮವನ್ನು ತಾಳುವನು. ಅದನ್ನು ಕಳೆದು ಕತ್ತಿನ ವ್ಯಾಧಿಯುಳ್ಳವನಾಗುವನು. ಇತರರಿಗೆ ಕೊಡದೆ ಹಣ್ಣು ಗಳನ್ನು ತಿನ್ನುವ ನರನು ಪುತ್ರಹೀನನಾಗುವನು.

೧೯. ವಸ್ತ್ರವನ್ನು ಕದ್ದವನು ಹಲ್ಲಿಯಾಗುವನು. ವಿಷವನ್ನಿಕ್ಕಿದವನು ಸರ್ಪವಾಗುವನು. ಮಹಾರಾಜನೆ! ಪ್ರವ್ರಾಜಕಿಯನ್ನು ಕೂಡಿದವನು ಮರು ಭೂಮಿಯಲ್ಲಿ ಪಿಶಾಚಿಯಾಗುವನು.

೨೦. ಜಲವನ್ನಪಹರಿಸಿದವನು ವಾತರೋಗಿಯಾಗುವನು. ಧಾನ್ಯವನ್ನು ಕದ್ದವನು ಇಲಿಯಾಗಿ ಹುಟ್ಟುವನು. ರಜಸ್ವಲೆಯಾಗದವಳನ್ನು ಕೂಡಿದವನು ಸರ್ಪವಾಗುವನೆಂದು ಶ್ರುತಿಯಿರುವುದು.

೨೧. ಗುರುಸ್ತ್ರೀಯನ್ನು ಅಪೇಕ್ಷಿಸಿದವನು ಬಹಳ ಕಾಲದವರೆಗೂ ಓತಿ ಯಾಗಿರುವನು. ಜಲದ ಪ್ರವಾಹವನ್ನು ಭೇದಿಸಿದ ಮಾನವನು ಮೀನಾಗಿ ಹುಟ್ಟುವನು.

೨೨. ಮಾರಬಾರದ ವಸ್ತುಗಳನ್ನು ಮಾರುವವನು ವಿಕಟಗಳಾದ ನೇತ್ರ ಗಳಿಂದ ಕೂಡಿರುವನು. ಅಯೋನಿಗಾಮಿಯು ತೋಳವಾಗುವನು. ವ್ಯಾಪಾರ ದಲ್ಲಿ ಮೋಸಮಾಡಿದವನು ಗೂಗೆಯಾಗುವನು.

ಮೃತಸ್ಯೈಕಾದಶಾಽಹೇತು ಭುಂಜಾನಃ ಶ್ವೋಽಪಜಾಯತೇ ।
ಪ್ರತಿಶ್ರುತ್ಯ ದ್ವಿಜಾಯಾರ್ಥಮದದನ್ಮಧುಕೋ ಭವೇತ್ ॥ ೨೩ ॥
ರಾಜ್ಞೀಗಮಾದ್ಭವೇದ್ದುಷ್ಟತಸ್ಕರೋ ವಿಡ್ವರಾಹಕಃ ।
ಪರಿವಾದೀ ದ್ವಿಜಾತೀನಾಂ ಲಭತೇ ಕಾಚ್ಛಪೀಂ ತನುಂ ॥ ೨೪ ॥
ವ್ರಜೇದ್ದೇವಲಕೋ ರಾಜನ್ಯೋಽನಿಂ ಚಾಂಡಾಲಸಂಜ್ಞಿತಾಂ ।
ದುರ್ಭಗಃ ಫಲವಿಕ್ರೇತಾ ವೃಶ್ಚಿಕೋ ವೃಷಲೀಪತಿಃ ॥ ೨೫ ॥
ಮಾರ್ಜಾರೋಽಗ್ನಿಂ ಪದಾ ಸ್ಪೃಷ್ಟ್ವಾ ರೋಗವಾನ್ ಪರಮಾಂಸಭುಕ್ ।
ಸೋದರ್ಯಾಗಮನಾತ್ ಷಂಡೋ ದುರ್ಗಂಧಶ್ಚ ಸುಗಂಧಹೃತ್॥ ೨೬ ॥
ಗ್ರಾಮಭಟ್ಟೋ ದಿವಾಕೀರ್ತಿರ್ದೈವಜ್ಞೋ ಗರ್ದಭೋ ಭವೇತ್
ಕುಪಂಡಿತಃ ಸ್ಯಾನ್ಮಾರ್ಜಾರೋ ಭಷಣೋ ವ್ಯಾಸ ಏವ ಚ ॥ ೨೭ ॥
ಸ ಏವ ದೃಶ್ಯತೇ ರಾಜನ್ ಪ್ರಕಾಶಾತ್ಪರಮರ್ಮಣಾಂ ।
ಯದ್ವಾ ತದ್ವಾಽಪಿ ಪಾರಕ್ಯಂ ಸ್ವಲ್ಪಂ ವಾ ಯದಿ ವಾ ಬಹು ॥ ೨೮ ॥

---

೨೩. ಸತ್ತ ಹನ್ನೊಂದನೆಯ ದಿನದ ಶ್ರಾದ್ಧಾನ್ನವನ್ನು ತಿಂದವನು ನಾಯಿಯಾಗಿ ಹುಟ್ಟುವನು. ಬ್ರಾಹ್ಮಣನಿಗೆ ಕೊಡುವೆನೆಂದು ಭಾಷೆಯನ್ನಿತ್ತು ಕೊಡದಿರುವವನು ದುಂಬಿಯಾಗುವನು.

೨೪. ರಾಣಿಯನ್ನು ಸೇರಿದವನು ದುಷ್ಟನಾದ ಕಳ್ಳನೂ, ಬಳಿಕ ಅಮೇಧ್ಯ ಭಕ್ಷಕವಾದ ಹಂದಿಯೂ ಆಗುವನು. ಬ್ರಾಹ್ಮಣರನ್ನು ನಿಂದಿಸುವವನು ಆಮೆಯ ಜನ್ಮವನ್ನು ತಾಳುವನು.

೨೫. ಧರ್ಮರಾಜನೆ! ಸಂಬಳಕ್ಕಾಗಿ ದೇವತಾರ್ಚನೆಯನ್ನು ಮಾಡುವವನು ಚಂಡಾಲಯೋನಿಯಲ್ಲಿ ಬೀಳುವನು. ಫಲಗಳನ್ನು ವಿಕ್ರಯಿಸುವವನು ದೌರ್ಭಾಗ್ಯವಂತನೂ, ವೃಷಲಿಯ (ಅವಿವಾಹಿತ ಪ್ರೌಢಕನ್ಯೆಯ) ಪತಿಯು ವೃಶ್ಚಿಕವೂ ಆಗುವರು.

೨೬. ಅಗ್ನಿಯನ್ನು ಪಾದದಿಂದ ಮುಟ್ಟಿದವನು ಮಾರ್ಜಾಲವಾಗುವನು. ಪರಮಾಂಸಭೋಜನವನ್ನು ಮಾಡಿದವನು ರೋಗಿಯೂ, ಸಹೋದರಿಯನ್ನು ಕೂಡಿದವನು ಷಂಡನೂ, ಸುಗಂಧದ್ರವ್ಯಗಳನ್ನು ಕದ್ದವನು ದುರ್ಗಂಧದೇಹದವನೂ ಆಗುವರು.

೨೭. ಗ್ರಾಮಪುರೋಹಿತನು ನಾಪಿತನೂ, ಜ್ಯೋತಿಷ್ಕನು ಕತ್ತೆಯೂ, ಕುಪಂಡಿತನು ಮಾರ್ಜಾಲವೂ, ಭೇದವನ್ನು ಬೋಧಿಸುವ ಪೌರಾಣಿಕನು ನಾಯಿಯೂ ಆಗುವರು.

೨೮–೨೯. ರಾಜಸತ್ತಮನೆ! ಅವನೇ ಇತರರ ಮರ್ಮಗಳನ್ನು ಎತ್ತಿ ಆಡುವವನಾಗುವವನಾಗಿ ಕಾಣುವನು. ಯಾವ ವಿಧವಾಗಿಯೇ ಆಗಲಿ, ಸ್ವಲ್ಪವೊ ಬಹಳವೊ ಪಾಪವನ್ನು ಮಾಡಲು ಪ್ರಾಣಿಯು ತಿರ್ಯಗ್ಯೋನಿಯಲ್ಲಿ

ಕೃತ್ವಾ ವೈ ಯೋನಿಮಾಪ್ನೋತಿ ತೈರಶ್ಚೀಂ ನಾಽತ್ರ ಸಂಶಯಃ ।
ಏವಮಾದೀನಿ ಚಾಽನ್ಯಾನಿ ಚಿಹ್ನಾನಿ ನೃಪಸತ್ತಮ ॥ ೨೯ ॥
ಸ್ವಕರ್ಮವಿಹಿತಾನ್ಯೇವ ದೃಶ್ಯಂತೇ ಯೈಸ್ತು ಮಾನವಾಃ ।
ತತೋ ಜನ್ಮ ತತೋ ಮೃತ್ಯುಃ ಸರ್ವಜಂತುಷು ಭಾರತ ॥ ೩೦ ॥
ಜಾಯತೇ ನಾಽತ್ರ ಸಂದೇಹಃ ಸಮಿಾಭೂತೇ ಶುಭಾಽಶುಭೇ ।
ಸ್ತ್ರೀಪುಂಸೋಃ ಸಂಪ್ರಯೋಗೇಣ ವಿಶುದ್ಧೇ ಶುಕ್ರಶೋಣಿತೇ ॥ ೩೧ ॥
ಪಂಚಭೂತಸಮೋಪೇತಃ ಸ ಷಷ್ಠಃ ಪರಮೇಶ್ವರಃ ।
ಇಂದ್ರಿಯಾಣಿ ಮನಃ ಪ್ರಾಣಾ ಜ್ಞಾನಮಾಯುಃ ಸುಖಂ ಧೃತಿಃ ॥ ೩೨ ॥
ಧಾರಣಂ ಪ್ರೇರಣಂ ದುಃಖಮಿಚ್ಛಾಽಹಂಕಾರ ಏವ ಚ ।
ಪ್ರಯತ್ನ ಆಕೃತಿರ್ವರ್ಣಃ ಸ್ವರದ್ವೇಷೌ ಭವಾಭವೌ ॥ ೩೩ ॥
ತಸ್ಯೇದಮಾತ್ಮನಃ ಸರ್ವಮನಾದೇರಾದಿಮಿಚ್ಛತಃ ।
ಪ್ರಥಮೇ ಮಾಸಿ ಸಕ್ಲೇದಭೂತೋ ಧಾತುವಿಮೂರ್ಛಿತಃ ॥ ೩೪ ॥
ಮಾಸ್ಯರ್ಬುದಂ ದ್ವಿತೀಯೇ ತು ತೃತೀಯೇ ಚೇಂದ್ರಿಯೈರ್ಯುತಃ ।
ಆಕಾಶಾಲ್ಲಾಘವಂ ಸೌಕ್ಷ್ಮ್ಯಂ ಶಬ್ದಂ ಶ್ರೋತ್ರಬಲಾದಿಕಂ ।
ವಾಯೋಸ್ತು ಸ್ಪರ್ಶನಂ ಚೇಷ್ಟಾಂ ದಹನಂ ರೌಕ್ಷ್ಯಮೇವ ಚ ॥ ೩೫ ॥

---

ಹುಟ್ಟುವುದರಲ್ಲಿ ಸಂಶಯವಿಲ್ಲ. ಇವೇ ಮೊದಲಾದ ಅನೇಕ ಚಿಹ್ನೆಗಳು ಮನುಷ್ಯರ ದೇಹಗಳಲ್ಲಿ ಕಾಣುತ್ತಿರುವುವು.

೩೦–೩೧. ಮನುಷ್ಯರಲ್ಲಿ ಕಾಣುವ ಈ ಲಾಂಛನಗಳೆಲ್ಲವೂ ಅವರವರ ಕರ್ಮಗಳ ಫಲಗಳೇ ಆಗಿರುವುವು. ಆ ಕರ್ಮದಿಂದಲೇ ಸಕಲಪ್ರಾಣಿಗಳಿಗೂ ಜನನವೂ ಮರಣವೂ ಉಂಟಾಗುವುವು. ಪಾಪಪುಣ್ಯಗಳು ಸಮವಾಗಲು ಮನುಷ್ಯನಾಗಿ ಹುಟ್ಟುವುದರಲ್ಲಿ ಸಂದೇಹವಿಲ್ಲ. ಸ್ತ್ರೀಪುರುಷರು ಸೇರುವಾಗ ಅವರ ಶುದ್ಧ ಶುಕ್ಲಶೋಣಿತಗಳು ಸೇರುವುವು.

೩೨–೩೪. ಪಂಚಭೂತಗಳ ರಾಶಿಯಾದ ದೇಹದಲ್ಲಿ ಆರನೆಯವನೇ ಪರಮೇಶ್ವರನು. ಇಂದ್ರಿಯಗಳು, ಮನಸ್ಸು, ಪ್ರಾಣಗಳು, ಜ್ಞಾನ, ಆಯುಷ್ಯ, ಸುಖ, ಧೈರ್ಯ, ಧಾರಣೆ, ಪ್ರೇರಣೆ, ದುಃಖ, ಇಚ್ಛೆ, ಅಹಂಕಾರ, ಪ್ರಯತ್ನ, ಆಕಾರ, ಮೈಬಣ್ಣ, ಧ್ವನಿ, ದ್ವೇಷ, ಜನನಮರಣಗಳು, ಮುಂತಾದುವುಗಳೆಲ್ಲವೂ ಜನ್ಮವನ್ನಿಚ್ಛಿಸುವ ಸ್ವತಃ ಅನಾದಿಯಾದ ಆತ್ಮನಿಂದ ಸ್ವೀಕರಿಸಲ್ಪಡುವುವು. ಗರ್ಭವು ಮೊದಲನೆಯ ತಿಂಗಳಿನಲ್ಲಿ ಕ್ಲೇದವೆನಿಸಿ ಧಾತುಗಳ ಉಪಟಳದಿಂದ ಮೂರ್ಛಾವಸ್ಥೆಯಲ್ಲಿರುವುದು.

೩೫. ಎರಡನೆಯ ಮಾಸದಲ್ಲಿ ಅರ್ಬುದವೆನಿಸುವುದು. ಮೂರನೆಯ ತಿಂಗಳಿನಲ್ಲಿ ಇಂದ್ರಿಯಗಳು ಸೇರುವುವು. ಆಕಾಶತತ್ತ್ವದಿಂದ ಲಾಘವವೂ, ಸೂಕ್ಷ್ಮ

ಪಿತ್ತಾತ್ತು ದರ್ಶನಂ ಪಕ್ತಿಮೌಷ್ಣ್ಯಂ ರೂಪಂ ಪ್ರಕಾಶನಂ ।
ಸಲಿಲಾದ್ರಸನಾಂ ಶೈತ್ಯಂ ಸ್ನೇಹಂ ಕ್ಲೇದಂ ಸಮಾರ್ದವಂ ॥ ೩೬ ॥
ಭೂಮೇರ್ಗಂಧಂ ತಥಾ ಘ್ರಾಣಂ ಗೌರವಂ ಮೂರ್ತಿಮೇವ ಚ ।
ಆತ್ಮಾ ಗೃಹ್ಣಾತ್ಯಜಃ ಪೂರ್ವಂ ತೃತೀಯೇ ಸ್ಪದಂತೇ ಚ ಸಃ ॥ ೩೭ ॥
ದೌಹೃದಸ್ಯಾಽಪ್ರದಾನೇನ ಗರ್ಭೋ ದೋಷಮವಾಪ್ನುಯಾತ್ ।
ವೈರೂಪ್ಯಂ ಮರಣಂ ವಾಽಪಿ ತಸ್ಮಾತ್ಕಾರ್ಯಂ ಪ್ರಿಯಂ ಸ್ತ್ರಿಯಾಃ॥ ೩೮ ॥
ಸ್ಥೈರ್ಯಂ ಚತುರ್ಥೇ ತ್ವಂಗಾನಾಂ ಪಂಚಮೇ ಶೋಣಿತೋದ್ಭವಃ ।
ಷಷ್ಠೇ ಬಲಂ ಚ ವರ್ಣಶ್ಚ ನಖರೋಮ್ಣಾಂ ಚ ಸಂಭವಃ ॥ ೩೯ ॥
ಮನಸಾ ಚೇತನಾಯುಕ್ತೋ ನಖರೋಮಶತಾವೃತಃ ।
ಸಪ್ತಮೇ ಚಾಽಷ್ಟಮೇ ಚೈವ ತ್ವಚಾವಾನ್ ಸ್ಮೃತಿವಾನಪಿ ॥ ೪೦ ॥
ಪುನರ್ಗರ್ಭಂ ಪುನರ್ಧಾತ್ರೀಮೇನಸ್ತಸ್ಯ ಪ್ರಧಾವತಿ ।
ಅಷ್ಟಮೇ ಮಾಸ್ಯತೋ ಗರ್ಭೋ ಜಾತಃ ಪ್ರಾಣೈರ್ವಿಯುಜ್ಯತೇ ॥ ೪೧ ॥

---

ತ್ವವೂ, ಶಬ್ದೇಂದ್ರಿಯವೂ, ಶ್ರೋತ್ರಪಾಟವವೂ ಉಂಟಾಗುವುವು. ವಾಯುವಿನಿಂದ ತ್ವಗಿಂದ್ರಿಯವೂ, ಚಲನವೂ, ಸುಡುವುದೂ, ರೂಕ್ಷಭಾವವೂ ಹುಟ್ಟುವುವು.

೩೬. ಅಗ್ನಿಯಿಂದ ನೇತ್ರವೂ, ಆಹಾರಪಚನಶಕ್ತಿಯೂ, ಉಷ್ಣತೆಯೂ, ರೂಪವೂ, ಕಾಂತಿಯೂ ಉಂಟಾಗುವುವು. ಜಲತತ್ತ್ವದಿಂದ ಜಿಹ್ವೇಂದ್ರಿಯವೂ, ಶೈತ್ಯವೂ, ಸ್ನೇಹವೂ, ಕ್ಲೇದವೂ, ಮಾರ್ದವವೂ ಉಂಟಾಗುವುವು.

೩೭. ಭೂಮಿಯಿಂದ ಗಂಧವೂ, ಘ್ರಾಣೇಂದ್ರಿಯವೂ, ತೂಕವೂ, ದೇಹವೂ ಉಂಟಾಗುವುವು. ಇವುಗಳೆಲ್ಲವನ್ನೂ ಅನಾದಿಯಾದ ಆತ್ಮನು ಮೊದಲು ಗ್ರಹಿಸುವನು. ಮೂರನೆಯ ತಿಂಗಳಲ್ಲಿ ಗರ್ಭವು ಚಲಿಸಲಾರಂಭಿಸುವುದು.

೩೮. ಬಸಿರಿನ ಬಯಕೆಯನ್ನು ನೆರವೇರಿಸದಿರುವುದರಿಂದ ಗರ್ಭವು ದೋಷವನ್ನೋ, ವಿಕಾರವನ್ನೋ, ಮರಣವನ್ನೋ ಹೊಂದುವುದರಿಂದ ಗರ್ಭಿಣೀ ಸ್ತ್ರೀಯಳಿಗೆ ಸಂತೋಷವನ್ನುಂಟುಮಾಡಬೇಕು.

೩೯. ನಾಲ್ಕನೆಯ ತಿಂಗಳಲ್ಲಿ ಅವಯವಗಳು ಬಲಗೊಳ್ಳುವುವು. ಐದನೆಯದರಲ್ಲಿ ರಕ್ತದ ಉತ್ಪತ್ತಿಯಾಗುವುದು. ಆರನೆಯ ತಿಂಗಳಲ್ಲಿ ದೇಹಬಲವೂ, ವರ್ಣವೂ, ಉಗುರು ಮತ್ತು ಕೂದಲುಗಳೂ ಉಂಟಾಗುವುವು.

೪೦. ಏಳು, ಎಂಟನೆಯ ಮಾಸಗಳಲ್ಲಿ ಮನಸ್ಸು, ಚೈತನ್ಯಗಳಿಂದ ಕೂಡಿದುದಾಗಿ ನೂರಾರು ರೋಮಗಳಿಂದಲೂ, ನಖಗಳಿಂದಲೂ, ಚರ್ಮದಿಂದಲೂ, ಪೂರ್ವಜನ್ಮದ ಸ್ಮರಣೆಯಿಂದಲೂ ಕೂಡಿಕೊಂಡಿರುವುದು.

೪೧. ಅದರ ಪಾಪವೊಮ್ಮೆ ಗರ್ಭವನ್ನೂ, ತಾಯಿಯನ್ನೂ ಸೇರುತ್ತಿರುವುದು. ಆದುದರಿಂದಲೇ ಎಂಟನೆಯ ತಿಂಗಳಿನಲ್ಲಿ ಹುಟ್ಟಿದ ಮಗುವು ಪ್ರಾಣವನ್ನು ನೀಗುವುದು.

ನವಮೇ ದಶಮೇ ವಾಽಪಿ ಪ್ರಬಲೈಃ ಸೂತಿಮಾರುತೈಃ ।
ನಿರ್ಗಚ್ಛತೇ ಬಾಣ ಇವ ಯಂತ್ರಚ್ಛಿದ್ರೇಣ ಸಜ್ವರಃ ॥ ೪೨ ॥
ಶರೀರಾಽವಯವೈರ್ಯುಕ್ತೋ ಹ್ಯಂಗಪ್ರತ್ಯಂಗಸಂಯುತಃ ।
ಅಷ್ಟೋತ್ತರಂ ಮರ್ಮಶತಂ ತತ್ರಸ್ಥಾತು ಶತತ್ರಯಂ ॥ ೪೩ ॥
ಸಪ್ತಶಿರಃ ಕಪಾಲಾನಿ ವಿಹಿತಾನಿ ಸ್ವಯಂಭುವಾ ।
ತಿಸ್ರಃ ಕೋಟ್ಯೋಽರ್ಧಕೋಟೀ ಚ ರೋಮ್ಣಾಮಂಗೇಷು ಭಾರತ ॥ ೪೪ ॥
ದ್ವಾಸಪ್ತತಿಸಹಸ್ರಾಣಿ ಹೃದಯಾದಭಿನಿಃಸೃತಾಃ ।
ಹಿತಾ ನಾಮ ಹಿ ತಾ ನಾಡ್ಯಸ್ತಾಸಾಂ ಮಧ್ಯೇ ಶಶಿಪ್ರಭಾ ॥ ೪೫ ॥
ಏವಂ ಪ್ರವರ್ತತೇ ಚಕ್ರಂ ಭೂತಗ್ರಾಮೇ ಚತುರ್ವಿಧೇ ।
ಉತ್ಪತ್ತಿಶ್ಚ ವಿನಾಶಶ್ಚ ಭವತಃ ಸರ್ವದೇಹಿನಾಂ ॥ ೪೬ ॥
ಗತಿರೂರ್ಧ್ವಾ ಚ ಧರ್ಮೇಣ ಹ್ಯಧರ್ಮೇಣ ತ್ವಧೋಗತಿಃ ।
ಜಾಯತೇ ಸರ್ವವರ್ಣಾನಾಂ ಸ್ವಧರ್ಮಚಲನಾನ್ನೃಪ ॥ ೪೭ ॥

---

೪೨. ಒಂಬತ್ತನೆಯ ತಿಂಗಳಲ್ಲಿಯೊ, ಹತ್ತನೆಯದರಲ್ಲಿಯೊ, ಪ್ರಬಲಗಳಾದ ಪ್ರಸೂತಿವಾಯುಗಳಿಂದ ತಳ್ಳಲ್ಪಟ್ಟು ಜ್ವರಸಹಿತವಾಗಿ ಯಂತ್ರದ ಛಿದ್ರದಿಂದ ಹೊರಡುವ ಬಾಣದಂತೆ ಯೋನಿದ್ವಾರದಿಂದ ಹೊರಬೀಳುವುದು.

೪೩. ಆ ಶಿಶುವು ಶರೀರದ ಸಮಸ್ತಅಂಗಪ್ರತ್ಯಂಗಗಳಿಂದಲೂ ಕೂಡಿರುವುದಾಗಿರುವುದು. ದೇಹದಲ್ಲಿ ನೂರೆಂಟು ಮರ್ಮಸ್ಥಾನಗಳೂ, ಮುನ್ನೂರು ಮೂಳೆಗಳೂ ಇರುವುವು.

೪೪. ಬ್ರಹ್ಮದೇವನು ತಲೆಯಲ್ಲಿ ಏಳು ಕಪಾಲಗಳನ್ನು ವಿಧಿಸಿರುವನು. ಧರ್ಮರಾಜನೆ! ದೇಹದ ಆದ್ಯಂತದಲ್ಲಿಯೂ ಮೂರೂವರೆಕೋಟಿ ರೋಮಗಳಿರುವುವು.

೪೫. ಹೃದಯದಿಂದ ಹಿತಗಳೆಂಬ ಹೆಸರಿನ ಎಪ್ಪತ್ತೆರಡು ಸಾವಿರ ನಾಡಿಗಳು ಹೊರಟು ಬರುವುವು. ಅವುಗಳಲ್ಲಿ ಒಂದು ಮಾತ್ರ ಚಂದ್ರವರ್ಣದ್ದಾಗಿರುವುದು.

೪೬. ಈ ವಿಧವಾಗಿ ಜರಾಯುಜಾದಿ ನಾಲ್ಕು ವಿಧಗಳಾದ ಪ್ರಾಣಿಗಳಲ್ಲಿಯೂ ಸಂಸಾರಚಕ್ರವು ಪ್ರವರ್ತಿಸುತ್ತಿರುವುದು. ಸಕಲಪ್ರಾಣಿಗಳಿಗೂ ಜನನಮರಣಗಳು ಸಂಭವಿಸುತ್ತಿರುವುವು.

೪೭. ಧರ್ಮಾಚರಣೆಯಿಂದ ಉತ್ತಮಲೋಕಪ್ರಾಪ್ತಿಯೂ, ಅಧರ್ಮದಿಂದ ಅಧೋಲೋಕಗಮನವೂ ಉಂಟಾಗುವುವು. ಸಕಲವರ್ಣಗಳವರಿಗೂ ತಮ್ಮಧರ್ಮವನ್ನು ಬಿಡುವುದರಿಂದ ದೋಷವುಂಟಾಗುವುದು.

ದೇವತ್ವೇ ಮಾನವತ್ವೇ ಚ ದಾನಭೋಗಾದಿಕಾಃ ಕ್ರಿಯಾಃ ।
ದೃಶ್ಯಂತೇ ಯಾ ಮಹಾರಾಜ ತತ್ಸರ್ವಂ ಕರ್ಮಜಂ ಫಲಂ ॥ ೪೮ ॥
ಸ್ವಕರ್ಮವಿಹಿತೇ ಘೋರೇ ಕಾಮಕ್ರೋಧಾರ್ಜಿತೇ ಶುಭೇ ।
ನಿಮಜ್ಜೇನ್ನರಕೇ ಘೋರೇ ಯಸ್ಯೋತ್ತಾರೋ ನ ವಿದ್ಯತೇ ॥ ೪೯ ॥
ಉತ್ತಾರಣಾಯ ಜಂತೂನಾಂ ನರ್ಮದಾತಟಸಂಸ್ಥಿತಂ ।
ಏವಮೇತನ್ಮಹಾತೀರ್ಥಂ ನರಕೇಶ್ವರಮುತ್ತಮಂ ॥ ೫೦ ॥
ನರಕಾಽಪಹಂ ಮಹಾಪುಣ್ಯಂ ಮಹಾಪಾತಕನಾಶನಂ ।
ತತ್ತೀರ್ಥಂ ಸರ್ವತೀರ್ಥಾನಾಮುತ್ತಮಂ ಭುವಿ ದುರ್ಲಭಂ ॥ ೫೧ ॥
ತತ್ರ ತೀರ್ಥೇ ತು ಯಃ ಸ್ನಾತ್ವಾ ಪೂಜಯೇತ ಮಹೇಶ್ವರಂ ।
ಮಹಾಪಾತಕಯುಕ್ತೋಽಪಿ ನರಕಂ ನೈವ ಪಶ್ಯತಿ ॥ ೫೨ ॥
ತತ್ರ ತೀರ್ಥೇ ತು ಯೋ ದದ್ಯಾದ್ಧೇನುಂ ವೈತರಣೀಂ ಶುಭಾಂ ।
ಸ ಮುಚ್ಯತೇ ಸುಖೇನೈವ ವೈತರಣ್ಯಾಂ ನ ಸಂಶಯಃ ॥ ೫೩ ॥

---

೪೮. ಮಹಾರಾಜನೆ! ದೇವತೆಗಳಲ್ಲಿಯೂ, ಮನುಷ್ಯರಲ್ಲಿಯೂ ದಾನ ಭೋಗಗಳೇ ಮೊದಲಾದ ಯಾವ ಕರ್ಮಗಳು ಕಾಣುತ್ತಿರುವುವೊ, ಅವುಗಳೆಲ್ಲವೂ ಅವರವರ ಕರ್ಮಗಳ ಫಲವೇ ಆಗಿರುವುದು.

೪೯. ಮನುಷ್ಯನು ತನ್ನ ಕರ್ಮದಿಂದ ವಿಹಿತವಾದುದೂ, ಕಾಮಕ್ರೋಧ ಗಳಿಂದ ಸಂಪಾದಿಸಲ್ಪಟ್ಟುದೂ ಅಶುಭವೂ ಭಯಂಕರವೂ ಆದ ನರಕದಲ್ಲಿ ಬೀಳುವನು. ಅದರಿಂದ ಸುಲಭವಾದ ಉತ್ತರಣೋಪಾಯವಿಲ್ಲ.

೫೦. ಅಂತಹ ಜಂತುಗಳ ಉದ್ಧಾರಕ್ಕಾಗಿಯೇ ನರ್ಮದಾನದಿಯ ತೀರದಲ್ಲಿ ಈ ಅನರಕೇಶ್ವರವೆಂಬ ಸರ್ವೋತ್ತಮವಾದ ತೀರ್ಥವು ಸೃಷ್ಟ ವಾಗಿರುವುದು.

೫೧. ಈ ತೀರ್ಥವು ನರಕವನ್ನು ಕಳೆಯುವುದೂ, ಮಹಾಪುಣ್ಯಪ್ರದವೂ, ಮಹಾಪಾತಕಗಳನ್ನು ಕಳೆಯುವುದೂ, ಸಮಸ್ತತೀರ್ಥಗಳಲ್ಲಿ ಶ್ರೇಷ್ಠವೂ, ಭೂಲೋಕದಲ್ಲಿ ಅತ್ಯಂತ ದುರ್ಲಭವೂ ಆಗಿರುವುದು.

೫೨. ಆ ತೀರ್ಥದಲ್ಲಿ ಯಾವನು ಸ್ನಾನವನ್ನು ಮಾಡಿ ಮಹಾದೇವನನ್ನು ಪೂಜಿಸುವನೊ, ಅವನು ಮಹಾಪಾತಕಗಳನ್ನು ಮಾಡಿದವನಾದರೂ ನರಕ ವನ್ನು ನೋಡುವುದೇ ಇಲ್ಲ.

೫೩. ಆ ತೀರ್ಥದಲ್ಲಿ ಮಂಗಳಕರವಾದ ವೈತರಣೀ ಗೋದಾನವನ್ನು ಮಾಡಿದವನು ಪರಲೋಕದಲ್ಲಿಯೂ ವೈತರಣಿಯನ್ನು ಸುಖವಾಗಿ ದಾಟುವುದ ರಲ್ಲಿ ಸಂದೇಹವಿಲ್ಲ.

**ಯುಧಿಷ್ಠಿರ ಉವಾಚ :—**

**ಯಮದ್ವಾರೇ ಮಹಾಘೋರೇ ಯಾ ಸಾ ವೈತರಣೀ ನದೀ ।**
**ಕಿಂ ರೂಪಾ ಕಿಂ ಪ್ರಮಾಣಾ ಸಾ ಕಥಂ ವಾ ವಹತಿ ದ್ವಿಜ ॥ ೫೪ ॥**
**ಕಥಂ ತಸ್ಯಾಃ ಪ್ರಮುಚ್ಯಂತೇ ಕೇಷಾಂ ವಾಸಸ್ತು ಸಂತತಂ ।**
**ಕೇಷಾಂ ತು ಸಾನುಕೂಲಾ ಸಾ ಹ್ಯೇತದ್ವಿಸ್ತರತೋ ವದ ॥ ೫೫ ॥**

**ಶ್ರೀ ಮಾರ್ಕಂಡೇಯ ಉವಾಚ :—**

**ಧರ್ಮಪುತ್ರ ಮಹಾಬಾಹೋ ಶೃಣು ಸರ್ವಂ ಮಯೋದಿತಂ ।**
**ಯಾ ಸಾ ವೈತರಣೀ ನಾಮ ಯಮದ್ವಾರೇ ಮಹಾಸರಿತ್ ॥ ೫೬ ॥**
**ಅಗಾಧಾ ಪಾರರಹಿತಾ ದೃಷ್ಟಮಾತ್ರಾ ಭಯಾವಹಾ ।**
**ಪೂಯಶೋಣಿತತೋಯಾ ಸಾ ಮಾಂಸಕರ್ದಮನಿರ್ಮಿತಾ ॥ ೫೭ ॥**
**ತತ್ತೋಯಂ ಭ್ರಮತೇ ತೂರ್ಣಂ ತಾಪೀಮಧ್ಯೇ ಘೃತಂ ಯಥಾ ।**
**ಕೃಮಿಭಿಃ ಸಂಕುಲಂ ಪೂಯಂ ವಜ್ರತುಂಡೈರಯೋಮುಖೈಃ ॥ ೫೮ ॥**
**ಶಿಶುಮಾರೈಶ್ಚ ಮಕರೈರ್ವಜ್ರಕರ್ತರಿಸಂಯುತೈಃ ।**
**ಅನ್ಯೈಶ್ಚ ಜಲಜೀವೈಃ ಸಾ ಸುಹಿಂಸ್ರೈರ್ಮರ್ಮಭೇದಿಭಿಃ ॥ ೫೯ ॥**

---

೫೪. ಯುಧಿಷ್ಠಿರನು ಹೇಳುತ್ತಾನೆ:—ಬ್ರಾಹ್ಮಣೋತ್ತಮನೆ! ಮಹಾ ಭಯಂಕರವಾದ ಯಮಲೋಕದ ಬಾಗಿಲಲ್ಲಿರುವ ಆ ವೈತರಣಿಯೆಂಬ ನದಿಯು ಯಾವ ರೂಪವುಳ್ಳದು? ಯಾವ ಪ್ರಮಾಣದ್ದು? ಹೇಗೆ ಹರಿಯುತ್ತಿರುವುದು?

೫೫. ಅದರಿಂದ ಜಂತುಗಳು ಹೇಗೆ ಬಿಡುಗಡೆಯನ್ನು ಹೊಂದುವುವು? ಯಾರಿಗೆ ಅದರಲ್ಲಿ ನಿತ್ಯವಾಸವು? ಯಾರಿಗೆ ಅದು ಅನುಕೂಲವಾಗಿರುವುದು? ಇದೆಲ್ಲವನ್ನೂ ನನಗೆ ವಿಸ್ತಾರವಾಗಿ ತಿಳಿಸುವವನಾಗು.

೫೬. ಮಾರ್ಕಂಡೇಯನು ಹೇಳುತ್ತಾನೆ:—ಮಹಾಪರಾಕ್ರಮಿಯಾದ ಧರ್ಮಪುತ್ರನೆ! ನಾನು ಹೇಳುವುದನ್ನು ಕೇಳು. ವೈತರಣಿಯೆಂಬ ಹೆಸರಿನ ಈ ಮಹಾನದಿಯು ಯಮಲೋಕದ ಬಾಗಿಲಲ್ಲಿರುವುದು.

೫೭–೫೮. ಅದು ಬಹಳ ಆಳವೂ, ಕೊನೆಯಿಲ್ಲದುದೂ, ನೋಡುವುದಕ್ಕೇ ಭಯಂಕರವೂ ಆಗಿರುವುದು. ಕೀವುರಕ್ತಗಳೇ ಅದರಲ್ಲಿ ಜಲವು; ಮಾಂಸವೇ ಅಲ್ಲಿಯ ಕೆಸರು. ನೀರಿನ ಮಧ್ಯದ ತುಪ್ಪದ ಬಿಂದುವಿನಂತೆ ಆ ನೀರು ವೇಗವಾಗಿ ಸುಳಿಗೊಳ್ಳುತ್ತಿರುವುದು. ಆ ಕೀವು ವಜ್ರದಂತೆ ಕಠಿನವಾದ ಮುಖವೂ ಕಬ್ಬಿಣದ ಮುಸುಡಿಯೂ ಉಳ್ಳ ಕೃಮಿಗಳಿಂದ ತುಂಬಿರುವುದು.

೫೯. ವಜ್ರದ ಕತ್ತರಿಗಳಂತಿರುವ ಬಾಯಿಯ ಮೊಸಳೆಗಳು ಮಕ್ಕಳನ್ನು ಕೊಲ್ಲುತ್ತಿರುವುವು. ಆ ನದಿಯು ಬಹು ಹಿಂಸೆಯನ್ನು ಕೊಡುವುವುಗಳೂ ಮರ್ಮಭೇದಕಗಳೂ ಆದ ಇತರ ಜಲಜಂತುಗಳಿಂದಲೂ ನಿಬಿಡಿತವಾಗಿರುವುದು.

ತಪಂತಿ ದ್ವಾದಶಾದಿತ್ಯಾಃ ಪ್ರಲಯಾಂತ ಇವೋಲ್ಬಣಾಃ ।
ಪತಂತಿ ತತ್ರ ವೈ ಮರ್ತ್ಯಾಃ ಕ್ರಂದಂತೋ ಭೃಶದಾರುಣಂ ॥ ೬೦ ॥
ಹಾ ಭ್ರಾತಃ ಪುತ್ರ ಹಾ ಮಾತಃ ಪ್ರಲಪಂತಿ ಮುಹುರ್ಮುಹುಃ ।
ಅಸಿಪತ್ರವನೇ ಘೋರೇ ಪತಂತಂ ಯೋಽಭಿರಕ್ಷತಿ ॥ ೬೧ ॥
ಪ್ರತರಂತಿ ನಿಮಜ್ಜಂತಿ ಗ್ಲಾನಿಂ ಗಚ್ಛಂತಿ ಜಂತವಃ ।
ಚತುರ್ವಿಧೈಃ ಪ್ರಾಣಿಗಣೈರ್ದ್ರಷ್ಟವ್ಯಾ ಸಾ ಮಹಾನದೀ ॥ ೬೨ ॥
ತರಂತಿ ತಸ್ಯಾಂ ಸದ್ದಾನೈರನ್ಯಥಾ ತು ಪತಂತಿ ತೇ ।
ಮಾತರಂ ಯೇ ನ ಮನ್ಯಂತೇ ಹ್ಯಾಚಾರ್ಯಂ ಗುರುಮೇವ ಚ ॥ ೬೩ ॥
ಅವಜಾನಂತಿ ಯೇ ಮೂಢಾ ತೇಷಾಂ ವಾಸಸ್ತು ಸಂತತಂ ।
ಪತಿವ್ರತಾಂ ಸಾಧುಶೀಲಾಮೂಢಾಂ ಧರ್ಮೇಷು ನಿಶ್ಚಲಾಂ ॥ ೬೪ ॥
ಪರಿತ್ಯಜಂತಿ ಯೇ ಪಾಪಾಃ ಸಂತತಂ ತು ವಸಂತಿ ತೇ ।
ವಿಶ್ವಾಸಪ್ರತಿಪನ್ನಾನಾಂ ಸ್ವಾಮಿಮಿತ್ರತಪಸ್ವಿನಾಂ ॥ ೬೫ ॥

---

೬೦. ಪ್ರಳಯಕಾಲದ ಕೊನೆಯ ದಿನದಲ್ಲಿರುವಂತೆ ಹನ್ನೆರಡು ಆದಿತ್ಯರೂ ಸುಡುತ್ತಿರುವರು. ಆ ಬೇಗೆಯಿಂದ ಬಹಳ ದಾರುಣವಾಗಿ ಚೀರುತ್ತ ಮನುಜರು ನದಿಯಲ್ಲಿ ಬೀಳುವರು.

೬೧. "ಆಹಾ! ಸೋದರನೆ! ಹಾ! ಮಗನೆ! ಅಯ್ಯೋ! ತಾಯಿಯೆ" ಎಂದು ಅಡಿಗಡಿಗೂ ಪ್ರಲಾಪಿಸುತ್ತಿರುವರು. ಭಯಂಕರವಾದ ಅಸಿಪತ್ರವನದಲ್ಲಿ ಬೀಳುತ್ತಿರುವವನನ್ನು ರಕ್ಷಿಸಬೇಕು.

೬೨. ಆ ನದಿಯಲ್ಲಿ ತೇಲುತ್ತ ಮುಳುಗುತ್ತ ಪ್ರಾಣಿಗಳು ಬಹಳ ಕಷ್ಟ ವನ್ನನುಭವಿಸುವುವು. ನಾಲ್ಕು ವಿಧಗಳಾದ ಪ್ರಾಣಿಗಳೂ ಆ ಮಹಾನದಿ ಯನ್ನು ನೋಡಲೇಬೇಕು.

೬೩-೬೬. ಸತ್ಪಾತ್ರರಲ್ಲಿ ದಾನವನ್ನುಮಾಡಿದವರು ಅದನ್ನು ದಾಟುವರು. ಇತರರು ಅದರಲ್ಲಿ ಮುಳುಗುವರು. ತಾಯಿಯನ್ನೂ, ಗುರುಗಳನ್ನೂ, ಆಚಾರ್ಯರನ್ನೂ ಯಾರು ಬಹೂಕರಿಸುವುದಿಲ್ಲವೊ, ಯಾವ ಮೂಢರು ಅವರನ್ನು ಅಲ್ಲಗಳೆಯುವರೊ, ಅವರು ನಿರಂತರವೂ ಆ ನದಿಯಲ್ಲಿಯೇ ಬಿದ್ದಿರು ವರು. ಪತಿವ್ರತೆಯೂ, ಸಾಧುಶೀಲಳೂ, ಧರ್ಮದಲ್ಲಿ ತತ್ಪರಳೂ, ಧರ್ಮ ಪತ್ನಿಯೂ ಆದವಳನ್ನು ಯಾವ ಪಾಪಿಗಳು ತ್ಯಜಿಸುವರೊ, ಅವರೂ ಅಲ್ಲಿ ಸಂತತವಾಸವನ್ನು ಮಾಡುವರು. ವಿಶ್ವಾಸಭಾವದಿಂದ ಬಂದವರನ್ನೂ, ಸ್ವಾಮಿಯನ್ನೂ, ಸ್ನೇಹಿತನನ್ನೂ, ತಪಸ್ವಿಯನ್ನೂ, ಸ್ತ್ರೀಯರನ್ನೂ, ಬಾಲಕ

ಸ್ತ್ರೀಬಾಲವೃದ್ಧದೀನಾನಾಂ ಛಿದ್ರಮನ್ವೇಷಯಂತಿ ಯೇ ।
ಪಚ್ಯಂತೇ ತತ್ರ ಮಧ್ಯೇ ವೈ ಕ್ರಂದಮಾನಾಃ ಸುಪಾಪಿನಃ ॥ ೬೬ ॥
ಶ್ರಾಂತಂ ಬುಭುಕ್ಷಿತಂ ವಿಪ್ರಂ ಯೋ ವಿಘ್ನಯತಿ ದುರ್ಮತಿಃ ।
ಕೃಮಿಭಿರ್ಭಕ್ಷ್ಯತೇ ತತ್ರ ಯಾವತ್ಕಲ್ಪಶತತ್ರಯಂ ॥ ೬೭ ॥
ಬ್ರಾಹ್ಮಣಾಯ ಪ್ರತಿಶ್ರುತ್ಯ ಯೋ ದಾನಂ ನ ಪ್ರಯಚ್ಛತಿ ।
ಆಹೂಯ ನಾಸ್ತಿ ಯೋ ಬ್ರೂತೇ ತಸ್ಯ ವಾಸಸ್ತು ಸಂತತಂ ॥ ೬೮ ॥
ಅಗ್ನಿದೋ ಗರದಶ್ಚೈವ ರಾಜಗಾಮೀ ಚ ಪೈಶುನೀ ।
ಕಥಾಭಂಗಕರಶ್ಚೈವ ಕೂಟಸಾಕ್ಷೀ ಚ ಮದ್ಯಪಃ ॥ ೬೯ ॥
ವಜ್ರವಿಧ್ವಂಸಕಶ್ಚೈವ ಸ್ವಯಂ ದತ್ತಾಽಪಹಾರಕಃ ।
ಸುಕ್ಷೇತ್ರಸೇತುಭೇದೀ ಚ ಪರದಾರಪ್ರಧರ್ಷಕಃ ॥ ೭೦ ॥
ಬ್ರಾಹ್ಮಣೋ ರಸವಿಕ್ರೇತಾ ವೃಷಲೀಪತಿರೇವ ಚ ।
ಗೋಕುಲಸ್ಯ ತೃಷಾರ್ತಸ್ಯ ಪಾಲೀಭೇದಂ ಕರೋತಿ ಯಃ ॥ ೭೧ ॥
ಕನ್ಯಾಭಿದೂಷಕಶ್ಚೈವ ದಾನಂ ದತ್ವಾ ತು ತಾಪಕಃ ।
ಶೂದ್ರಸ್ತು ಕಪಿಲಾಪಾನೀ ಬ್ರಾಹ್ಮಣೋ ಮಾಂಸಭೋಜಿನೀ ॥ ೭೨ ॥

---

ರನ್ನೂ, ವೃದ್ಧರನ್ನೂ ನೋಡಿ ದೋಷಗಳನ್ನೇ ಎಣಿಸುತ್ತಿರುವವರು ಮಹಾ ಪಾಪಿಗಳಾಗಿ ಕೂಗಿಕೊಳ್ಳುತ್ತ ಆ ನದಿಯ ಮಧ್ಯದಲ್ಲಿ ಬಿದ್ದಿರುವರು.

೬೭. ಆಯಾಸಗೊಂಡವನೂ, ಹಸಿವಿನಿಂದ ಬಳಲಿದವನೂ ಆದ ಬ್ರಾಹ್ಮಣನಿಗೆ ವಿಘ್ನವನ್ನುಂಟುಮಾಡುವವನು ಅಲ್ಲಿ ಮುನ್ನೂರು ಕಲ್ಪಗಳವರೆಗೂ ಕ್ರಿಮಿಗಳಿಗೆ ಆಹಾರವಾಗಿರುವನು.

೬೮. ಬ್ರಾಹ್ಮಣನಿಗೆ ವಚನವನ್ನಿತ್ತು ದಾನವನ್ನು ಕೊಡದವನೂ, ಆತನನ್ನು ಕರೆದು ಬಳಿಕ ಇಲ್ಲವೆಂದು ಹೇಳುವವನೂ ಅಲ್ಲಿ ಶಾಶ್ವತವಾಗಿ ನರಳುತ್ತ ಬಿದ್ದಿರುವರು.

೬೯-೭೩. ಅಸ್ತಿಗೆ ಬೆಂಕಿಯನ್ನಿಟ್ಟವನು, ವಿಷವನ್ನಿಕ್ಕಿದವನು, ರಾಜಸ್ತ್ರೀಗಾಮಿಯು, ಲೋಭಿಯು, ಸತ್ಕಥೆಯಲ್ಲಿ ಭಂಗವನ್ನುಂಟುಮಾಡುವವನು, ಸುಳ್ಳುಸಾಕ್ಷ್ಯವನ್ನು ಹೇಳುವವನು, ಮದ್ಯಪಾನನಿರತನು, ವಜ್ರಗಳನ್ನು ಭೇದಿಸುವವನು, ತಾನು ಕೊಟ್ಟದ್ದನ್ನೇ ಅಪಹರಿಸುವವನು, ಪುಣ್ಯಕ್ಷೇತ್ರಗಳ ನಿಯಮಗಳನ್ನು ಮೀರುವವನು, ಪರಸ್ತ್ರೀಯರನ್ನು ಬಲಾತ್ಕರಿಸುವವನು, ರಸವಿಕ್ರಯವನ್ನು ಮಾಡುವ ಬ್ರಾಹ್ಮಣನು, ವೃಷಲೀಪತಿಯು, ಗೋಸಮೂಹವು ಬಾಯಾರಿಸಲು ಕಟ್ಟೆಯನ್ನು ಒಡೆಯುವವನು, ಕನ್ಯೆಯನ್ನು ನಿಷ್ಕಾರಣವಾಗಿ ದೂಷಿಸುವವನು, ದಾನವನ್ನಿತ್ತು ಬಳಿಕ ಸಂಕಟಗೊಳಿಸುವವನು, ಕಪಿಲೆಯ ಹಾಲನ್ನು ಕುಡಿಯುವ ಶೂದ್ರನು, ಮಾಂಸವನ್ನು ತಿನ್ನುವ ಬ್ರಾಹ್ಮಣನು,

ಏತೇ ವಸಂತಿ ಸತತಂ ಮಾ ವಿಚಾರಂ ಕೃಥಾ ನೃಪ ।
ಸಾನುಕೂಲಾ ಭವೇದ್ಯೇನ ತಚ್ಛೃಣುಷ್ವ ನರಾಧಿಪ ॥ ೭೩ ॥
ಅಯನೇ ವಿಷುವೇ ಚೈವ ವ್ಯತೀಪಾತೇ ದಿನಕ್ಷಯೇ ।
ಅನ್ಯೇಷು ಪುಣ್ಯಕಾಲೇಷು ದೀಯತೇ ದಾನಮುತ್ತಮಂ ॥ ೭೪ ॥
ಕೃಷ್ಣಾಂ ವಾ ಪಾಟಲಾಂ ವಾಽಪಿ ಕುರ್ಯಾದ್ವೈತರಣೀಂ ಶುಭಾಂ ।
ಸ್ವರ್ಣಶೃಂಗೀಂ ರೂಪ್ಯಖುರಾಂ ಕಾಂಸ್ಯಪಾತ್ರಸ್ಯ ದೋಹಿನಾಂ ॥ ೭೫ ॥
ಕೃಷ್ಣವಸ್ತ್ರಯುಗಾಚ್ಛನ್ನಾಂ ಸಪ್ತಧಾನ್ಯಸಮನ್ವಿತಾಂ ।
ಕುರ್ಯಾತ್ಸದ್ರೋಣಶಿಖರ ಆಸೀನಾಂ ತಾಮ್ರಭಾಜನೇ ॥ ೭೬ ॥
ಯಮಂ ಹೈಮಂ ಪ್ರಕುರ್ವೀತ ಲೋಹದಂಡಸಮನ್ವಿತಂ ।
ಇಕ್ಷುದಂಡಮಯಂ ಬದ್ಧ್ವಾ ಹ್ಯುಡುಪಂ ಪಟ್ಟಬಂಧನೈಃ ॥ ೭೭ ॥
ಉಡುಪೋಪರಿ ತಾಂ ಧೇನುಂ ಸೂರ್ಯದೇಹಸಮುದ್ಭವಾಂ ।
ಕೃತ್ವಾ ಪ್ರಕಲ್ಪಯೇದ್ವಿದ್ವಾಂಛತ್ರೋಪಾನದ್ಯುಗಾನ್ವಿತಾಂ ॥ ೭೮ ॥

---

ಇವರೆಲ್ಲರೂ ಆ ನದಿಯಲ್ಲಿ ನಿರಂತರವೂ ಬಿದ್ದಿರುವರು. ಮಹಾರಾಜನೆ! ಈ ವಿಷಯದಲ್ಲಿ ಸಂದೇಹವಿಲ್ಲ. ಇನ್ನು ಆ ವೈತರಣಿಯು ಯಾವನಿಗೆ ಅನುಕೂಲವಾಗಿರುವುದೆಂಬುದನ್ನು ಹೇಳುತ್ತೇನೆ, ಕೇಳು.

೭೪. ಉತ್ತರಾಯಣ ದಕ್ಷಿಣಾಯನಗಳು, ವಿಷುವತ್ಪುಣ್ಯಕಾಲಗಳು, ವ್ಯತೀಪಾತದಿನಗಳು, ಸಾಯಂಕಾಲಗಳು ಮತ್ತು ಇತರ ಪುಣ್ಯಕಾಲಗಳಲ್ಲಿ ಕೊಡುವ ದಾನವೇ ಉತ್ತಮವು.

೭೫. ವೈತರಣೀಗೋದಾನಕ್ಕೆ ಹಸುವು ಕಪ್ಪು ಅಥವ ಕೆಂಪು ಬಣ್ಣದ್ದಾಗಿ ಸರ್ವಾಂಗಸುಂದರವಾಗಿರಬೇಕು. ಕೊಂಬುಗಳಿಗೆ ಚಿನ್ನದ ಕಳಶಗಳೂ, ಗೊರಸುಗಳಿಗೆ ಬೆಳ್ಳಿಯ ತಗಡುಗಳೂ, ಹಾಲುಕರೆಯಲು ಕಂಚಿನ ಪಾತ್ರೆಯೂ ಸಿದ್ಧವಾಗಿರಬೇಕು.

೭೬. ಎರಡು ಕಪ್ಪುವಸ್ತ್ರಗಳನ್ನು ಹೊದಿಸಿ ನಾಲ್ಕು ಕೊಳಗಗಳ ಅಳತೆಯ ಸಪ್ತಧಾನ್ಯಗಳ ರಾಶಿಯ ಮೇಲೆ ಒಂದು ತಾಮ್ರದ ಪಾತ್ರೆಯನ್ನಿಟ್ಟು ಅದರಲ್ಲಿ ಆಕಳನ್ನು ನಿಲ್ಲಿಸಬೇಕು.

೭೭. ಚಿನ್ನದಿಂದ ಯಮನ ಪ್ರತಿಮೆಯನ್ನುಮಾಡಿ, ಅದರ ಕೈಗೆ ಲೋಹದ ದಂಡವನ್ನು ಕೊಡಬೇಕು. ಕಬ್ಬುಗಳನ್ನು ನಾರುಗಳಿಂದ ಬಿಗಿದು ಒಂದು ನಾವೆಯನ್ನು ರಚಿಸಬೇಕು.

೭೮. ಆ ನಾವೆಯ ಮೇಲೆ ಸೂರ್ಯದೇಹದಿಂದ ಹುಟ್ಟಿದ ಆ ಹಸುವನ್ನು ಛತ್ರಿ, ಪಾದುಕೆಗಳೊಡನೆ ವಿದ್ವಾಂಸನು ವಿದ್ವಾಂಸನನ್ನು ಏರಿಸಬೇಕು.

ಅಂಗುಲೀಯಕವಾಸಾಂಸಿ ಬ್ರಾಹ್ಮಣಾಯ ನಿವೇದಯೇತ್ ।
ಇಮಮುಚ್ಚಾರಯೇನ್ಮಂತ್ರಂ ಸಂಗೃಹ್ಯಾಽಸ್ಯಾಶ್ಚ ಪುಚ್ಛಕಂ ॥ ೭೯ ॥
ಓಂ ಯಮದ್ವಾರೇ ಮಹಾಘೋರೇ ಯಾಸಾ ವೈತರಣೀ ನದೀ ।
ತರ್ತುಕಾಮೋ ದದಾಮ್ಯೇನಾಂ ತುಭ್ಯಂ ವೈತರಣೀ ನಮಃ ॥ ೮೦ ॥

॥ ಇತ್ಯಧಿವಾಸನಮಂತ್ರಃ ॥

ಗಾವೋ ಮೇ ಚಾಗ್ರತಃ ಸಂತು ಗಾವೋ ಮೇ ಸಂತು ಪೃಷ್ಠತಃ ।
ಗಾವೋ ಮೇ ಹೃದಯೇ ಸಂತು ಗವಾಂ ಮಧ್ಯೇ ವಸಾಮ್ಯಹಂ ॥ ೮೧ ॥
ಓಂ ವಿಷ್ಣುರೂಪ ದ್ವಿಜಶ್ರೇಷ್ಠ ಭೂದೇವ ಪಂಕ್ತಿಪಾವನ ।
ಸ ದಕ್ಷಿಣಾ ಮಯಾ ದತ್ತಾ ತುಭ್ಯಂ ವೈತರಣೀ ನಮಃ ॥ ೮೨ ॥

॥ ಇತಿ ದಾನಮಂತ್ರಃ ॥

ಬ್ರಾಹ್ಮಣಂ ಧರ್ಮರಾಜಂ ಚ ಧೇನುಂ ವೈತರಣೀಂ ಶಿವಾಂ ।
ಸರ್ವಂ ಪ್ರದಕ್ಷಿಣೀಕೃತ್ಯ ಬ್ರಾಹ್ಮಣಾಯ ನಿವೇದಯೇತ್ ॥ ೮೩ ॥
ಪುಚ್ಛಂ ಸಂಗೃಹ್ಯ ಸುರಭೇರಗ್ರೇ ಕೃತ್ವಾ ದ್ವಿಜಂ ತತಃ ॥ ೮೪ ॥

---

೭೯. ಬ್ರಾಹ್ಮಣನೊಬ್ಬನಿಗೆ ಉಂಗುರವನ್ನೂ ವಸ್ತ್ರಗಳನ್ನೂ ಇತ್ತು ಸತ್ಕರಿಸಿ ಆ ಗೋವಿನ ಬಾಲವನ್ನು ಕೈಯಲ್ಲಿ ಹಿಡಿದು ಈ ಮಂತ್ರವನ್ನು ಹೇಳಬೇಕು.

೮೦. ಮಹಾಭಯಂಕರವಾದ ಯಮದ್ವಾರದಲ್ಲಿರುವ ವೈತರಣೀನದಿಯನ್ನು ದಾಟಲೆಳಸುವವನಾಗಿ ಈ ಹಸುವನ್ನು ನಿನಗೆ ಕೊಡುತ್ತೇನೆ. ವೈತರಣಿಗೆ ನಮಸ್ಕಾರವು (ಇದು ಅಧಿವಾಸನಮಂತ್ರವು).

೮೧. ಗೋವುಗಳು ನನ್ನ ಮುಂದೆ ಹೋಗಲಿ. ಗೋವುಗಳೇ ನನ್ನ ಹಿಂದೆಯೂ ಬರಲಿ. ಹೃದಯದಲ್ಲಿ ಗೋವುಗಳಿರಲಿ. ಅವುಗಳ ಮಧ್ಯದಲ್ಲಿಯೇ ನಾನು ವಾಸಮಾಡುತ್ತಿರುವೆನು.

೮೨. ವಿಷ್ಣುಸ್ವರೂಪಿಯಾದ ಬ್ರಾಹ್ಮಣೋತ್ತಮನೆ! ಭೂಮಿದೇವನೆ! ಪಙ್ಕ್ತಿಪಾವನನೆ! ದಕ್ಷಿಣೆಯೊಡನೆ ಇದನ್ನು ನಾನು ನಿನಗೆ ಕೊಡುವೆನು. ವೈತರಣಿಗೆ ನಮಸ್ಕಾರವು (ಇದು ದಾನಮಂತ್ರವು).

೮೩. ಬಳಿಕ ಬ್ರಾಹ್ಮಣನಿಗೂ, ಯಮಧರ್ಮರಾಜನಿಗೂ, ಮಂಗಳಪ್ರದವಾದ ವೈತರಣೀಗೋವಿಗೂ ಎಲ್ಲಕ್ಕೂ ಪ್ರದಕ್ಷಿಣೆಯನ್ನುಮಾಡಿ ಬ್ರಾಹ್ಮಣನಿಗೆ ಎಲ್ಲವನ್ನೂ ದಾನಮಾಡಬೇಕು.

೮೪. ಧೇನುವಿನ ಬಾಲವನ್ನು ಹಿಡಿದುಕೊಂಡು ಅದರ ಮುಂದೆ ಬ್ರಾಹ್ಮಣನನ್ನು ನಿಲ್ಲಿಸಿ ಇಂತೆಂದು ಹೇಳಬೇಕು.

ಧೇನುಕೇ ತ್ವಂ ಪ್ರತೀಕ್ಷಸ್ವ ಯಮದ್ವಾರೇ ಮಹಾಭಯೇ ।
ಉತ್ತಿತೀರ್ಷುರಹಂ ಧೇನೋ ವೈತರಣ್ಯೈ ನಮೋಽಸ್ತುತೇ ॥ ೮೫ ॥

॥ ಇತ್ಯನುವ್ರಜಮಂತ್ರಃ ॥

ಅನುವ್ರಜೇತ ಗಚ್ಛಂತಂ ಸರ್ವಂ ತಸ್ಯ ಗೃಹಂ ನಯೇತ್ ।
ಏವಂ ಕೃತೇ ಮಹೀಪಾಲ ಸರಿತ್ಸ್ಯಾತ್ಸುಖವಾಹಿನೀ ।
ತಾರಯತೇ ತಯಾ ಧೇನ್ವಾ ಸಾ ಸರಿಜ್ಜಲವಾಹಿನೀ ॥ ೮೬ ॥
ಸರ್ವಾನ್ಕಾಮಾನವಾಪ್ನೋತಿ ಯೇ ದಿವ್ಯಾ ಯೇ ಚ ಮಾನುಷಾಃ ।
ರೋಗೀ ರೋಗಾದ್ವಿಮುಕ್ತಃ ಸ್ಯಾಚ್ಛಾಮ್ಯಂತಿ ಪರಮಾಪದಃ ॥ ೮೭ ॥
ಸ್ವಸ್ಥೇ ಸಹಸ್ರಗುಣಿತಮಾತುರೇ ಶತಸಂಮಿತಂ ।
ಮೃತಸ್ಯೈವ ತು ಯದ್ದಾನಂ ಪರೋಕ್ಷೇ ತತ್ಸಮಂ ಸ್ಮೃತಂ ॥ ೮೮ ॥
ಸ್ವಹಸ್ತೇನ ತತೋ ದೇಯಂ ಮೃತೇ ಕಃ ಕಸ್ಯ ದಾಸ್ಯತಿ ।
ಇತಿ ಮತ್ವಾ ಮಹಾರಾಜ ಸ್ವದತ್ತಂ ಸ್ಯಾನ್ಮಹಾಫಲಂ ॥ ೮೯ ॥

---

೮೫. ಧೇನುವೇ! ಮಹಾಭಯಪ್ರದವಾದ ಯಮಲೋಕದ ದ್ವಾರದಲ್ಲಿ ನನ್ನನ್ನು ನಿರೀಕ್ಷಿಸುತ್ತಿರು. ಅದನ್ನು ನಾನು ದಾಟಲೆಳಸುವೆನು. ವೈತರಣಿಯಾದ ನಿನಗೆ ನಮಸ್ಕಾರವು (ಇದು ಅನುವ್ರಜನಮಂತ್ರವು).

೮೬. ಅದನ್ನು ತೆಗೆದುಕೊಂಡು ಹೋಗುವ ಬ್ರಾಹ್ಮಣನನ್ನು ಹಿಂಬಾಲಿಸಿ ಪದಾರ್ಥಗಳೆಲ್ಲವನ್ನೂ ಆತನ ಮನೆಗೆ ಕೊಂಡುಹೋಗಬೇಕು. ಮಹಾರಾಜನೆ! ಹೀಗೆ ಮಾಡಲು ಆ ನದಿಯು ಸುಖವಾಗಿ ಪ್ರವಹಿಸುವುದಾಗುವುದು. ಆ ಧೇನುವಿನಿಂದ ನದಿಯು ಜಲಮಯವೇ ಆಗಿ ಸುಲಭವಾಗಿ ದಾಟಲು ಶಕ್ಯವಾಗುವುದು.

೮೭. ಆ ದಾನದಿಂದ ಮಾನವನು ದೇವಲೋಕ ಮನುಷ್ಯಲೋಕಗಳ ಭೋಗಗಳೆಲ್ಲವನ್ನೂ ಪಡೆಯುವನು. ರೋಗಿಯು ತನ್ನ ರೋಗದಿಂದ ಮುಕ್ತನಾಗುವನು. ಕ್ರೂರಗಳಾದ ಆಪತ್ತುಗಳೂ ಶಮನವಾಗುವುವು.

೮೮. ಆರೋಗ್ಯವಾಗಿರುವಾಗ ಮಾಡಿದ ಗೋದಾನವು ಸಾವಿರಪಾಲಿನ ಫಲವನ್ನು ಕೊಡುವುದು. ಆತುರದಲ್ಲಿ ಮಾಡಿದುದು ನೂರು ಪಾಲಿನ ಫಲವುಳ್ಳದ್ದು. ಸತ್ತಮೇಲೆ ಆತನಿಗಾಗಿ ಪರೋಕ್ಷದಲ್ಲಿಮಾಡಿದ ದಾನವೂ ಫಲದಾಯಕವೇ.

೮೯. ಆದುದರಿಂದ ಈ ಗೋದಾನವನ್ನು ತಾನೇ ತನ್ನ ಕೈಯಿಂದಲೇ ಮಾಡಬೇಕು. ಮೃತನಾದ ಮೇಲೆ ಯಾರು ಯಾರಿಗೆ ಕೊಡುವರು! ಮಹಾರಾಜನೆ! ಇದನ್ನು ಯೋಚಿಸಿದರೆ ತನ್ನ ದಾನವೇ ಮಹಾಫಲದಾಯಕವು.

ಇತ್ಯೇವಮುಕ್ತಂ ತವ ಧರ್ಮಸೂನೋ
ದಾನಂ ಮಯಾ ವೈತರಣೀಸಮುತ್ಥಂ ।
ಶೃಣೋತಿ ಭಕ್ತ್ಯಾ ಪಠತೀಹ ಸಮ್ಯಕ್
ಸ ಯಾತಿ ವಿಷ್ಣೋಃ ಪದಮಪ್ರಮೇಯಂ ॥ ೯೦ ॥

ಶ್ರೀ ಮಾರ್ಕಂಡೇಯ ಉವಾಚ :—

ಪ್ರಾಪ್ತೇ ಚಾಽಽಶ್ವಯುಜೇ ಮಾಸಿ ತಸ್ಮಿನ್ಕೃಷ್ಣಾ ಚತುರ್ದಶೀ ।
ಸ್ನಾತ್ವಾ ಕೃತ್ವಾ ತತಃ ಶ್ರಾದ್ಧಂ ಸಂಪೂಜ್ಯ ಚ ಮಹೇಶ್ವರಂ ॥ ೯೧ ॥
ಪಿತೃಭ್ಯೋ ದೀಯತೇ ದಾನಂ ಭಕ್ತಿಶ್ರದ್ಧಾಸಮನ್ವಿತೈಃ ।
ಪಶ್ಚಾಜ್ಜಾಗರಣಂ ಕುರ್ಯಾತ್ಸತ್ಕಥಾಶ್ರವಣಾದಿಭಿಃ ॥ ೯೨ ॥
ತತಃ ಪ್ರಭಾತಸಮಯೇ ಸ್ನಾತ್ವಾ ವೈ ನರ್ಮದಾಜಲೇ ।
ತರ್ಪಣಂ ವಿಧಿವತ್ಕೃತ್ವಾ ಪಿತೄಣಾಂ ದೇವಪೂರ್ವಕಂ ॥ ೯೩ ॥
ಸೌವರ್ಣೇ ಘೃತಸಂಯುಕ್ತಂ ದೀಪಂ ದದ್ಯಾದ್ದ್ವಿಜಾತಯೇ ।
ಪಶ್ಚಾತ್ಸಂಭೋಜಯೇದ್ವಿಪ್ರಾನ್ ಸ್ವಯಂ ಚೈವ ವಿಮತ್ಸರಃ ॥ ೯೪ ॥

---

೯೦. ಧರ್ಮನಂದನನೆ! ಇಂತು ನಿನಗೆ ವೈತರಣಿಯ ಸಂಬಂಧವಾದ ಗೋದಾನವನ್ನು ನಿನಗೆ ಹೇಳಿದೆನು. ಇದನ್ನು ಭಕ್ತಿಯಿಂದ ಯಾವನು ಕೇಳುವನೊ ಮತ್ತು ಹೇಳುವನೊ, ಅವನು ಮಹಾವಿಷ್ಣುವಿನ ಮೇರೆಯಿಲ್ಲದ ಲೋಕಕ್ಕೆ ಹೋಗುವನು.

೯೧. ಮಾರ್ಕಂಡೇಯನು ಹೇಳುತ್ತಾನೆ:—ಆಶ್ವಯುಜಮಾಸವು ಪ್ರಾಪ್ತವಾಗಲು ಕೃಷ್ಣಪಕ್ಷದ ಚತುರ್ದಶಿಯ ದಿನದಲ್ಲಿ ಸ್ನಾನವನ್ನುಮಾಡಿಕೊಂಡು, ಶ್ರಾದ್ಧವನ್ನು ತೀರಿಸಿ ಮಹಾದೇವನನ್ನು ಪೂಜಿಸಬೇಕು.

೯೨. ಬಳಿಕ ಭಕ್ತಿಶ್ರದ್ಧೆಗಳಿಂದ ಕೂಡಿದವರಾಗಿ ಪಿತೃಗಳ ತೃಪ್ತಿಗಾಗಿ ದಾನವನ್ನು ಕೊಡಬೇಕು. ರಾತ್ರಿಯಲ್ಲಿ ಸತ್ಕಥಾಶ್ರವಣ, ಭಜನಾದಿಗಳಿಂದ ಜಾಗರಣೆಯನ್ನುಮಾಡಬೇಕು.

೯೩. ಮಾರನೆಯ ದಿನ ಸೂರ್ಯೋದಯಕಾಲಕ್ಕೆ ಸರಿಯಾಗಿ ನರ್ಮದಾ ಜಲದಲ್ಲಿ ಮಿಂದು ಮೊದಲು ದೇವತೆಗಳಿಗೂ ಬಳಿಕ ಪಿತೃಗಳಿಗೂ ತರ್ಪಣಗಳನ್ನು ಕೊಡಬೇಕು.

೯೪. ಚಿನ್ನದ ಸೊಡರಿನಲ್ಲಿ ತುಪ್ಪದ ದೀಪವನ್ನು ಹಚ್ಚಿ ಬ್ರಾಹ್ಮಣನಿಗೆ ದಾನವನ್ನು ಕೊಡಬೇಕು. ಬಳಿಕ ಮತ್ಸರಾದಿಗಳನ್ನುಳಿದು ಬ್ರಾಹ್ಮಣರಿಗೆ ಭೋಜನವನ್ನು ಮಾಡಿಸಬೇಕು.

ಏವಂ ಕೃತೇ ನರಶ್ರೇಷ್ಠ ನ ಜಂತುರ್ನರಕಂ ವ್ರಜೇತ್ ।
ಅವಶ್ಯಮೇವ ಮನುಜ್ಯೈರ್ದ್ರಷ್ಟವ್ಯಾ ನಾರಕೀ ಸ್ಥಿತಿಃ ॥ ೯೫ ॥
ಅನೇನ ವಿಧಿನಾ ಕೃತ್ವಾ ನ ಪಶ್ಯೇನ್ನರಕಾನ್ನರಃ ।
ತತ್ರ ತೀರ್ಥೇ ಮೃತಾನಾಂ ತು ನರಾಣಾಂ ವಿಧಿನಾ ನೃಪ ॥ ೯೬ ॥
ಮನ್ವಂತರಂ ಶಿವೇ ಲೋಕೇ ವಾಸೋ ಭವತಿ ದುರ್ಲಭೇ ।
ವಿಮಾನೇನಾರ್ಕವರ್ಣೇನ ಕಿಂಕಿಣೀಶತಶೋಭಿನಾ ॥ ೯೭ ॥
ಸ ಗಚ್ಛತಿ ಮಹಾಭಾಗ ಸೇವ್ಯಮಾನೋಽಪ್ಸರೋಗಣೈಃ ।
ಭುನಕ್ತಿ ವಿವಿಧಾನ್ ಭೋಗಾನುಕ್ತಕಾಲಂ ನ ಸಂಶಯಃ ॥ ೯೮ ॥
ಪೂರ್ಣೇ ಚೈವ ತತಃ ಕಾಲ ಇಹ ಮಾನುಷ್ಯತಾಂ ಗತಃ ।
ಸರ್ವವ್ಯಾಧಿವಿನಿರ್ಮುಕ್ತೋ ಜೀವೇಚ್ಚ ಶರದಾಂ ಶತಂ ॥ ೯೯ ॥
ಪ್ರಾಪ್ಯ ಚಾಶ್ವಯುಜೇ ಮಾಸಿ ಕೃಷ್ಣಪಕ್ಷೇ ಚತುರ್ದಶೀಂ ।
ಅಹೋರಾತ್ರೋಷಿತೋ ಭೂತ್ವಾ ಪೂಜಯಿತ್ವಾ ಮಹೇಶ್ವರಂ ।
ಮಹಾಪಾತಕಯುಕ್ತೋಽಪಿ ಮುಚ್ಯತೇ ನಾತ್ರ ಸಂಶಯಃ ॥ ೧೦೦ ॥

---

೯೫. ರಾಜಶ್ರೇಷ್ಠನೆ! ಹೀಗೆ ಮಾಡಲು ಪ್ರಾಣಿಯು ನರಕಕ್ಕೆ ಹೋಗುವುದಿಲ್ಲ. ಮಾನವರು ನರಕಲೋಕದ ಸ್ಥಿತಿಗತಿಗಳನ್ನು ಅವಶ್ಯಕವಾಗಿ ತಿಳಿದುಕೊಳ್ಳಬೇಕು.

೯೬. ಈ ವಿಧಾನದಿಂದ ಗೋದಾನವನ್ನು ಮಾಡಿದ ನರನು ನರಕಗಳನ್ನು ನೋಡುವುದಿಲ್ಲ. ಚಕ್ರವರ್ತಿಯೆ! ಆ ತೀರ್ಥದಲ್ಲಿ ವಿಧಿವಿಹಿತರೀತಿಯಿಂದ ದೇಹವನ್ನು ಬಿಟ್ಟ ನರರಿಗೆ ಅತ್ಯಂತ ದುರ್ಲಭವಾದ ಶಿವಲೋಕದಲ್ಲಿ ಒಂದು ಮನ್ವಂತರದ ವಾಸವು ಲಭಿಸುವುದು.

೯೭-೯೮. ಅಪ್ಸರೋಗಣಗಳು ಸೇವಿಸುತ್ತಿರಲು ಸೂರ್ಯವರ್ಣದ ನೂರಾರು ಕಿರುಗಂಟೆಗಳಿಂದ ಶೋಭಿಸುವ ವಿಮಾನದಲ್ಲಿ ಕುಳಿತು ಅಂತಹವನು ಅಲ್ಲಿಗೆ ಹೋಗುವನು. ಆ ಕಾಲದಲ್ಲಿ ಅವನು ಅಲ್ಲಿ ವಿವಿಧಭೋಗಗಳನ್ನನು ಭವಿಸುವುದರಲ್ಲಿ ಸಂದೇಹವಿಲ್ಲ. ಆ ಸಮಯವು ಪೂರ್ತಿಯಾಗಲು ಮತ್ತೆ ಇಲ್ಲಿ ಮನುಷ್ಯ ಜನ್ಮವನ್ನು ಪಡೆಯುವನು.

೯೯. ಸಕಲದೇಹವ್ಯಾಧಿಗಳಿಂದಲೂ ಮುಕ್ತನಾಗಿ ನೂರು ವರ್ಷಗಳ ಪೂರ್ಣಾಯುಷ್ಯವನ್ನು ಅನುಭವಿಸುವನು. ಹೀಗೆ ಆಶ್ವಯುಜಮಾಸದ ಕೃಷ್ಣ ಚತುರ್ದಶಿಯು ಪರಮಪುಣ್ಯತಿಥಿಯು.

೧೦೦. ಅಂದು ಹಗಲುರಾತ್ರೆಗಳಲ್ಲಿ ಉಪವಾಸವನ್ನುಮಾಡಿ ಮಹಾದೇವನ ಪೂಜೆಯನ್ನುಮಾಡಿದವನು ಮಹಾಪಾತಕಗಳನ್ನು ಮಾಡಿದವನೇ ಆದರೂ ಮೋಕ್ಷಭಾಗಿಯಾಗುವುದರಲ್ಲಿ ಸಂಶಯವೇ ಇಲ್ಲ.

ಅಷ್ಟಾವಿಂಶತಿಕೋಟ್ಯೋ ವೈ ನರಕಾಣಾಂ ಯುಧಿಷ್ಠಿರ ।
ವಿಮುಕ್ತಾ ನರಕೈರ್ದುಃಖೈಃ ಶಿವಲೋಕಂ ವ್ರಜಂತಿ ತೇ ॥ ೧೦೧ ॥
ತತ್ರ ಭುಕ್ತ್ವಾ ಮಹಾಭೋಗಾನ್ದಿವ್ಯೈಶ್ವರ್ಯಸಮನ್ವಿತಾನ್ ।
ಲಭಂತೇ ಮಾನುಷಂ ಜನ್ಮ ದುರ್ಲಭಂ ಭುವಿ ಮಾನವಾಃ ॥ ೧೦೨ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ
ಪಂಚಮೇ ಆವಂತ್ಯಖಂಡೇ ತೃತೀಯೇ ರೇವಾಖಂಡೇ
"ಅನರಕೇಶ್ವರತೀರ್ಥಮಾಹಾತ್ಮ್ಯವರ್ಣನಂ"
ನಾಮೈಕೋನಷಷ್ಟ್ಯುತ್ತರಶತತಮೋಽಧ್ಯಾಯಃ

---

೧೦೧. ಯುಧಿಷ್ಠಿರನೆ! ನರಕಗಳು ಇಪ್ಪತ್ತೆಂಟುಕೋಟಿ ಸಂಖ್ಯೆಯುಳ್ಳವಾಗಿರುವುವು. ಈ ವ್ರತವನ್ನಾಚರಿಸಿದವರು ಅವುಗಳ ದುಃಖಗಳೆಲ್ಲವುಗಳಿಂದಲೂ ದೂರರಾಗಿ ಶಿವಲೋಕವನ್ನು ಸೇರುವರು.

೧೦೨. ಆ ಮನುಷ್ಯರು ಅಲ್ಲಿ ದಿವ್ಯೈಶ್ವರ್ಯಗಳಿಂದ ಕೂಡಿದ ಮಹಾಭೋಗಗಳನ್ನನುಭವಿಸಿದ ಮೇಲೆ ಇಲ್ಲಿ ಬಹಳ ದುರ್ಲಭವೆನಿಸಿದ ಮನುಷ್ಯಜನ್ಮವನ್ನು ತಾಳುವರು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ
ಶ್ರೀ ಸ್ಕಾಂದಮಹಾಪುರಾಣದ ಐದನೆಯ ಆವಂತ್ಯಖಂಡದ ಮೂರನೆಯ ರೇವಾಖಂಡದಲ್ಲಿ
"ಅನರಕೇಶ್ವರತೀರ್ಥಮಾಹಾತ್ಮ್ಯವರ್ಣನ"ವೆಂಬ
ನೂರಐವತ್ತೊಂಬತ್ತನೆಯ ಅಧ್ಯಾಯವು ಮುಗಿದುದು

|| ಶ್ರೀ: ||

## ಅಥ ಷಷ್ಟ್ಯುತ್ತರಶತತಮೋಽಧ್ಯಾಯಃ

### ಮೋಕ್ಷತೀರ್ಥಮಾಹಾತ್ಮ್ಯವರ್ಣನಂ

ಶ್ರೀ ಮಾರ್ಕಂಡೇಯ ಉವಾಚ :—

ತತೋ ಗಚ್ಛೇತ್ಪಾಂಡುಪುತ್ರ ಮೋಕ್ಷತೀರ್ಥಮನುತ್ತಮಂ ।
ಸೇವಿತಂ ದೇವಗಂಧರ್ವೈರ್ಮುನಿಭಿಶ್ಚ ತಪೋಧನೈಃ || ೧ ||
ಬಹವಸ್ತನ್ನ ಜಾನಂತಿ ವಿಷ್ಣುಮಾಯಾವಿಮೋಹಿತಾಃ ।
ಯತ್ರ ಸಿದ್ಧಾ ಮಹಾಭಾಗಾ ಋಷಯಃ ಸ ತಪೋಧನಾಃ || ೨ ||
ಪುಲಸ್ತ್ಯಃ ಪುಲಹೋ ವಿದ್ವಾನ್ಕ್ರತುಶ್ಚೈವ ಮಹಾಮತಿಃ ।
ಪ್ರಾಚೇತಸೋ ವಸಿಷ್ಠಶ್ಚ ದಕ್ಷೋ ನಾರದ ಏವ ಚ || ೩ ||
ಏತೇ ಚಾನ್ಯೇ ಮಹಾಭಾಗಾಃ ಸಪ್ತಸಾಹಸ್ರಸಂಜ್ಞಿತಾಃ ।
ಮೋಕ್ಷಂ ಗತಾಃ ಸಹಸುತೈಸ್ತತ್ತೀರ್ಥಂ ತೇನ ಮೋಕ್ಷದಂ || ೪ ||
ತತ್ರ ಪ್ರವಾಹಮಧ್ಯೇ ತು ಪತಿತಾ ತಮಹಾ ನದೀ ।
ತತ್ರ ತತ್ಸಂಗಮಂ ತೀರ್ಥಂ ಸರ್ವಪಾಪಕ್ಷಯಂಕರಂ || ೫ ||

---

## ಕನ್ನಡದ ಅನುವಾದ

### ಮೋಕ್ಷತೀರ್ಥಮಾಹಾತ್ಮ್ಯವರ್ಣನ

೧. ಮಾರ್ಕಂಡೇಯನು ಹೇಳುತ್ತಾನೆ:—ಪಾಂಡುಪುತ್ರನೆ! ಆ ಅನರಕೇಶ್ವರತೀರ್ಥದಿಂದ ದೇವತೆಗಳಿಂದಲೂ, ಮುನಿಗಳಿಂದಲೂ, ಗಂಧರ್ವರಿಂದಲೂ, ತಪಸ್ವಿಗಳಿಂದಲೂ ಸೇವಿತವಾದ ಸರ್ವಶ್ರೇಷ್ಠವೆನಿಸಿದ ಮೋಕ್ಷತೀರ್ಥಕ್ಕೆ ಹೋಗಬೇಕು.

೨. ಬಹಳ ಜನರು ವಿಷ್ಣುಮಾಯೆಯಿಂದ ಮೋಹಿತರಾಗಿ ಅದನ್ನು ತಿಳಿಯದಿರುವರು. ಅಲ್ಲಿ ಮಹಾಭಾಗ್ಯಶಾಲಿಗಳಾದ ಮಹರ್ಷಿಗಳೂ ತಪೋಧನರೂ ತಪಸ್ಸಿದ್ಧಿಗಳನ್ನು ಪಡೆದರು.

೩–೪. ಪುಲಹ, ಪುಲಸ್ತ್ಯ, ಜ್ಞಾನಿಯಾದ ಕ್ರತು, ಮಹಾಬುದ್ಧಿಶಾಲಿಯಾದ ವಾಲ್ಮೀಕಿ, ವಸಿಷ್ಠ, ದಕ್ಷ, ನಾರದ ಮುಂತಾದ ಏಳುಸಾವಿರ ಸಂಖ್ಯೆಯ ಮಹಾಭಾಗ್ಯವಂತರು ಅಲ್ಲಿ ತಮ್ಮ ಪುತ್ರರೊಡನೆ ಮೋಕ್ಷವನ್ನು ಹೊಂದಿದರು. ಆದುದರಿಂದ ಅದಕ್ಕೆ ಮೋಕ್ಷತೀರ್ಥವೆಂಬ ಹೆಸರಾಯಿತು.

೫. ಆ ಪ್ರದೇಶದಲ್ಲಿ ತಮುಹಾ ಎಂಬ ನದಿಯು ನರ್ಮದೆಯ ಪ್ರವಾಹದ ಮಧ್ಯದಲ್ಲಿ ಸೇರುವುದು. ಅವು ಸೇರುವ ಸಂಗಮದ ತೀರ್ಥವು ಸಮಸ್ತಪಾಪಗಳನ್ನೂ ಕಳೆಯುವುದು.

ಋಗ್ಯಜುಃಸಾಮಸಂಜ್ಞಾನಾಮಭ್ಯಸ್ತಾನಾಂ ತು ಯತ್ಫಲಂ ।
ಸಮ್ಯಗ್ಜಪ್ತ್ವಾ ತು ವಿಧಿನಾ ಗಾಯತ್ರೀಂ ತತ್ರ ತಲ್ಲಭೇತ್ ॥ ೬ ॥
ತತ್ರ ದತ್ತಂ ಹುತಂ ಜಪ್ತಂ ತೀರ್ಥಸೇವಾರ್ಜಿತಂ ಫಲಂ ।
ಸರ್ವಮಕ್ಷಯತಾಂ ಯಾತಿ ಮೋಕ್ಷಸಾಧನಮುತ್ತಮಂ ॥ ೭ ॥
ತತ್ರ ತೀರ್ಥೇ ಮೃತಾನಾಂ ಸನ್ಯಾಸೇನ ದ್ವಿಜನ್ಮನಾಂ ।
ಅನಿವರ್ತಿಕಾ ಗತಿಸ್ತೇಷಾಂ ಮೋಕ್ಷತೀರ್ಥಪ್ರಭಾವತಃ ॥ ೮ ॥
ಏಷ ತೇ ವಿಧಿರುದ್ದಿಷ್ಟಃ ಸಂಕ್ಷೇಪೇಣ ಮಯಾಽನಘ ।
ವ್ಯಷ್ಟಿಸ್ತೀರ್ಥಸ್ಯ ಮಹತೀ ಪುರಾಣೇ ಯಾಽಭಿಧೀಯತೇ ॥ ೯ ॥

**ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ**
**ಪಂಚಮೇ ಆವಂತ್ಯಖಂಡೇ ತೃತೀಯೇ ರೇವಾಖಂಡೇ**
**“ಮೋಕ್ಷತೀರ್ಥಮಾಹಾತ್ಮ್ಯವರ್ಣನಂ” ನಾಮ**
**ಷಷ್ಟ್ಯುತ್ತರಶತತಮೋಽಧ್ಯಾಯಃ**

---

೬. ಋಗ್ಯಜುಸ್ಸಾಮವೇದಗಳನ್ನು ವಿಧಿಪ್ರಕಾರವಾಗಿ ಅಧ್ಯಯನಮಾಡುವುದರಿಂದಲೂ, ನಿಯಮದಿಂದ ಗಾಯತ್ರೀಮಂತ್ರವನ್ನು ಸಾಂಗವಾಗಿ ಜಪಿಸುವುದರಿಂದಲೂ ಯಾವ ಫಲವುಂಟೊ ಆ ಫಲವು ಈ ತೀರ್ಥದ ಸೇವೆಯಿಂದಲೂ ಲಭಿಸುವುದು.

೭. ಆ ತೀರ್ಥದಲ್ಲಿ ಮಾಡಿದ ದಾನವೂ, ಹೋಮವೂ, ಜಪವೂ, ಸೇವೆಯೂ ಸಕಲವೂ ಅಕ್ಷಯಫಲದಾಯಕವಾಗಿ ಉತ್ತಮವಾದ ಮೋಕ್ಷ ಸಾಧನವೆನಿಸುವುದು.

೮. ಆ ಮೋಕ್ಷತೀರ್ಥದಲ್ಲಿ ಸನ್ಯಾಸವನ್ನು ಸ್ವೀಕರಿಸಿ ಮೃತರಾದ ಬ್ರಾಹ್ಮಣರಿಗೆ ಅದರ ಮಹಿಮೆಯಿಂದ ಪುನರಾವೃತ್ತಿಯಿಲ್ಲದ ಸದ್ಗತಿಯು ಪ್ರಾಪ್ತವಾಗುವುದು.

೯. ಎಲೈ ನಿಷ್ಪಾಪನೆ! ಈ ತೀರ್ಥದ ಪ್ರಭಾವವನ್ನು ವಿಸ್ತಾರವಾಗಿ ಪುರಾಣದಲ್ಲಿ ಹೇಳಿರುವರು. ಅದನ್ನೇ ನಾನು ನಿನಗೆ ತೀರ್ಥಸೇವೆಯ ಕ್ರಮದಿಂದ ಸಂಕ್ಷೇಪವಾಗಿ ತಿಳಿಸಿರುವೆನು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ
ಶ್ರೀ ಸ್ಕಾಂದಮಹಾಪುರಾಣದ ಐದನೆಯ ಆವಂತ್ಯಖಂಡದ ಮೂರನೆಯ ರೇವಾಖಂಡದಲ್ಲಿ
“ಮೋಕ್ಷತೀರ್ಥಮಾಹಾತ್ಮ್ಯವರ್ಣನ”ವೆಂಬ
ನೂರರವತ್ತನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

# ಅಥೈಕಷಷ್ಟ್ಯುತ್ತರಶತತಮೋಽಧ್ಯಾಯಃ

## ಸರ್ಪತೀರ್ಥಮಾಹಾತ್ಮ್ಯವರ್ಣನಂ

ಶ್ರೀ ಮಾರ್ಕಂಡೇಯ ಉವಾಚ :—

ತತೋ ಗಚ್ಛೇನ್ಮಹಾರಾಜ ಸರ್ಪತೀರ್ಥಮನುತ್ತಮಂ ।
ಯತ್ರ ಸಿದ್ಧಾ ಮಹಾಸರ್ಪಾಸ್ತಪಸ್ತಪ್ತ್ವಾ ಯುಧಿಷ್ಠಿರ ॥ ೧ ॥
ವಾಸುಕಿಸ್ತಕ್ಷಕೋ ಘೋರಃ ಸರ್ಪ ಐರಾವತಸ್ತಥಾ ।
ಕಾಲಿಯಶ್ಚ ಮಹಾಭಾಗಃ ಕರ್ಕೋಟಕಧನಂಜಯೌ ॥ ೨ ॥
ಶಂಖಚೂಡೋ ಮಹಾತೇಜಾ ಧೃತರಾಷ್ಟ್ರೋ ವೃಕೋದರಃ ।
ಕುಲಿಕೋ ವಾಮನಶ್ಚೈವ ತೇಷಾಂ ಯೇ ಪುತ್ರಪೌತ್ರಿಣಃ ॥ ೩ ॥
ತತ್ರ ತೀರ್ಥೇ ಮಹಾಪುಣ್ಯೇ ತಪಸ್ತಪ್ತ್ವಾ ಸುದುಷ್ಕರಂ ।
ಭುಂಜಂತಿ ವಿವಿಧಾನ್ಭೋಗಾನ್ಕ್ರೀಡಂತಿ ಚ ಯಥಾಸುಖಂ ॥ ೪ ॥
ತತ್ರ ತೀರ್ಥೇ ತು ಯಃ ಸ್ನಾತ್ವಾ ತರ್ಪಯೇತ್ಪಿತೃದೇವತಾಃ ।
ವಾಜಪೇಯಫಲಂ ತಸ್ಯ ಪುರಾ ಪ್ರೋವಾಚ ಶಂಕರಃ ॥ ೫ ॥

---

## ಕನ್ನಡದ ಅನುವಾದ

### ಸರ್ಪತೀರ್ಥಮಾಹಾತ್ಮ್ಯವರ್ಣನ

೧. ಮಾರ್ಕಂಡೇಯನು ಹೇಳುತ್ತಾನೆ :—ಯುಧಿಷ್ಠಿರ ಮಹಾರಾಜನೆ! ಅಲ್ಲಿಂದ ಅನುತ್ತಮವಾದ ಸರ್ಪತೀರ್ಥವನ್ನು ಸೇರಬೇಕು. ಅಲ್ಲಿ ಮಹಾ ಸರ್ಪಗಳು ತಪವನ್ನಾಚರಿಸಿ ಸಿದ್ಧಿಯನ್ನು ಪಡೆದುವು.

೨–೪. ವಾಸುಕಿ, ಘೋರನಾದ ತಕ್ಷಕ, ಐರಾವತವೆಂಬ ಸರ್ಪರಾಜ, ಮಹಾಭಾಗ್ಯಶಾಲಿಯಾದ ಕಾಳಿಯ, ಕರ್ಕೋಟಕ, ಧನಂಜಯ, ಮಹಾ ತೇಜಸ್ವಿಯಾದ ಶಂಖಚೂಡ, ಧೃತರಾಷ್ಟ್ರ, ವೃಕೋದರ, ಕುಳಿಕ, ವಾಮನ, ಇವರ ಪುತ್ರಪೌತ್ರರು—ಎಲ್ಲರೂ ಮಹಾ ಪುಣ್ಯಪ್ರದವಾದ ಈ ತೀರ್ಥದಲ್ಲಿ ಬಹಳ ದುಷ್ಕರವಾದ ತಪಸ್ಸನ್ನಾಚರಿಸಿ ವಿಧವಿಧಗಳಾದ ಭೋಗಗಳನ್ನನುಭವಿ ಸುತ್ತ ಸ್ವೇಚ್ಛೆಯಿಂದ ಕ್ರೀಡಿಸುತ್ತಿರುವರು.

೫. ಆ ತೀರ್ಥದಲ್ಲಿ ಯಾವನು ಸ್ನಾನವನ್ನು ಮಾಡಿ ಪಿತೃದೇವತೆಗಳಿಗೆ

ಸ್ನಾತಾನಾಂ ಸರ್ಪತೀರ್ಥೇ ತು ನರಾಣಾಂ ಭುವಿ ಭಾರತ ।
ಸರ್ಪವೃಶ್ಚಿಕಜಾತಿಭ್ಯೋ ನ ಭಯಂ ವಿದ್ಯತೇ ಕ್ವಚಿತ್ ॥ ೬ ॥
ಮೃತೋ ಭೋಗವತೀಂ ಗತ್ವಾ ಪೂಜ್ಯಮಾನೋ ಮಹೋರಗೈಃ ।
ನಾಗಕನ್ಯಾಪರಿವೃತೋ ಮಹಾಭೋಗಪತಿರ್ಭವೇತ್ ॥ ೭ ॥
ಮಾರ್ಗಶೀರ್ಷಸ್ಯ ಮಾಸಸ್ಯ ಕೃಷ್ಣಪಕ್ಷೇ ಚ ಯಾಽಷ್ಟಮೀ ।
ಸೋಪವಾಸಃ ಶುಚಿರ್ಭೂತ್ವಾ ಲಿಂಗಂ ಸಂಪೂರಯೇತ್ತಿಲೈಃ ।
ಯಥಾವಿಭವಸಾರೇಣ ಗಂಧಪುಷ್ಪೈಃ ಸಮರ್ಚಯೇತ್ ॥ ೮ ॥
ಏವಂ ವಿಧಾಯ ವಿಧಿವತ್ಪ್ರಣಿಪತ್ಯ ಕ್ಷಮಾಪಯೇತ್ ।
ತಸ್ಯ ಯತ್ಫಲಮುದ್ದಿಷ್ಟಂ ತಚ್ಛೃಣುಷ್ವ ನರೇಶ್ವರ ॥ ೯ ॥
ತಿಲಾಸ್ತತ್ರ ಚ ಯತ್ಸಂಖ್ಯಾಃ ಪತ್ರಪುಷ್ಪಫಲಾನಿ ಚ ।
ತಾವತ್ಸ್ವರ್ಗಪುರೇ ರಾಜನ್ಮೋದತೇ ಕಾಲಮೀಪ್ಸಿತಂ ॥ ೧೦ ॥

---

ತರ್ಪಣಗಳನ್ನೀಯುವನೋ, ಅವನಿಗೆ ವಾಜಪೇಯಯಜ್ಞದ ಫಲವುಂಟೆಂದು ಶಂಕರನು ಹಿಂದೆ ಹೇಳಿರುವನು.

೬. ಭರತವಂಶಜನೆ! ಈ ಸರ್ಪತೀರ್ಥದಲ್ಲಿ ಸ್ನಾನಮಾಡಿದ ಮನುಷ್ಯರಿಗೆ ಭೂಲೋಕದಲ್ಲಿ ಎಂದಿಗೂ ಹಾವುಚೇಳುಗಳ ಜಾತಿಗಳಿಂದ ಭಯವುಂಟಾಗದು.

೭. ಅಂತವನು ಮೃತನಾಗಲು ಭೋಗವತೀನಗರಿಗೆ ಹೋಗಿ ಮಹಾನಾಗರಿಂದ ಪೂಜೆಯನ್ನು ಕೈಗೊಳ್ಳುತ್ತ ನಾಗಕನ್ಯೆಯರ ಪರಿವಾರದ ಮಧ್ಯದಲ್ಲಿ ಮಹಾಭೋಗಗಳನ್ನು ಅನುಭವಿಸುವನು.

೮. ಮಾರ್ಗಶೀರ್ಷಮಾಸದ ಕೃಷ್ಣಪಕ್ಷದ ಅಷ್ಟಮಿಯ ದಿನದಲ್ಲಿ ಉಪವಾಸವನ್ನುಮಾಡಿ ಸ್ನಾನದಿಂದ ಶುಚಿಯಾಗಿ ಲಿಂಗಕ್ಕೆ ತಿಲದಿಂದ ಮುಚ್ಚುವಂತೆ ಅಲಂಕರಿಸಬೇಕು. ಮತ್ತು ತನ್ನ ವಿಭವಕ್ಕೆ ತಕ್ಕಂತೆ ಗಂಧಪುಷ್ಪಗಳಿಂದ ಪೂಜಿಸಬೇಕು.

೯. ಇಂತು ಪೂಜಿಸಿ ಬಳಿಕ ವಿಧಿಯಿಂದ ಪ್ರಣಾಮವನ್ನು ಮಾಡಿ ಕ್ಷಮೆಯನ್ನು ಕೇಳಿಕೊಳ್ಳಬೇಕು. ನರೇಶ್ವರನೆ! ಅವನಿಗೆ ಯಾವ ಫಲವು ಹೇಳಲ್ಪಟ್ಟಿರುವುದೆಂಬುನ್ನು ಕೇಳು.

೧೦. ಅಲ್ಲಿ ಎಳ್ಳಿನ ಕಾಳುಗಳೂ, ಪತ್ರಗಳೂ, ಪುಷ್ಪಗಳೂ, ಫಲಗಳೂ ಎಷ್ಟು ಸಂಖ್ಯೆಯಲ್ಲಿರುವುವೊ, ಅಷ್ಟು ವರ್ಷಗಳು ಅವನು ಸ್ವರ್ಗಲೋಕದಲ್ಲಿ ಈಪ್ಸಿತ ಭೋಗಗಳನ್ನನುಭವಿಸುತ್ತ ವಾಸಿಸುವನು.

**ತತಃ ಸ್ವರ್ಗಾತ್ಪರಿಭ್ರಷ್ಟೋ ಜಾಯತೇ ವಿಮಲೇ ಕುಲೇ ।**
**ಸೂರುಪಃ ಸುಭಗಶ್ಚೈವ ಧನಕೋಟಿಪತಿರ್ಭವೇತ್ ॥ ೧೧ ॥**

**ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ**
**ಪಂಚಮೇ ಆವಂತ್ಯಖಂಡೇ ತೃತೀಯೇ ರೇವಾಖಂಡೇ**
**"ಸರ್ಪತೀರ್ಥಮಾಹಾತ್ಮ್ಯವರ್ಣನಂ"**
**ನಾಮ್ನೈಕಷಷ್ಟ್ಯುತ್ತರಶತತಮೋಽಧ್ಯಾಯಃ**

---

೧೧. ಬಳಿಕ ಸ್ವರ್ಗದಿಂದ ಚ್ಯುತನಾಗಲು ಉತ್ತಮವಾದ ಕುಲದಲ್ಲಿ ಸುಂದರನೂ, ಸೌಭಾಗ್ಯಶೀಲನೂ, ಕೋಟಿಧನಕ್ಕೆ ಒಡೆಯನೂ ಆಗಿ ಜನಿಸುವನು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ
ಶ್ರೀ ಸ್ಕಾಂದಮಹಾಪುರಾಣದ ಐದನೆಯ ಆವಂತ್ಯಖಂಡದ ಮೂರನೆಯ ರೇವಾಖಂಡದಲ್ಲಿ
"ಸರ್ಪತೀರ್ಥಮಾಹಾತ್ಮ್ಯವರ್ಣನ"ವೆಂಬ
ನೂರರವತ್ತೊಂದನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

## ಅಥ ದ್ವಿಷಷ್ಟ್ಯುತ್ತರಶತತಮೋಽಧ್ಯಾಯಃ

### ಗೋಪೇಶ್ವರತೀರ್ಥಮಾಹಾತ್ಮ್ಯವರ್ಣನಂ

ಶ್ರೀ ಮಾರ್ಕಂಡೇಯ ಉವಾಚ:—

ಗೋಪೇಶ್ವರಂ ತತೋ ಗಚ್ಛೇತ್ಸರ್ಪಕ್ಷೇತ್ರಾದನಂತರಂ ।
ಯತ್ರ ಸ್ನಾನೇನ ಚೈಕೇನ ಮುಚ್ಯಂತೇ ಪಾತಕೈರ್ನರಾಃ ॥ ೧ ॥
ತತ್ರ ತೀರ್ಥೇ ತು ಯಃ ಸ್ನಾತ್ವಾ ಕುರುತೇ ಪ್ರಾಣಸಂಕ್ಷಯಂ ।
ಸ ಗಚ್ಛೇದ್ಯದಿ ಯುಕ್ತೋಽಪಿ ಪಾಪೇನ ಶಿವಮಂದಿರಂ ॥ ೨ ॥
ತತ್ರ ತೀರ್ಥೇ ತು ಯಃ ಸ್ನಾತ್ವಾ ಪೂಜಯೇದ್ದೇವಮೀಶ್ವರಂ ।
ಮುಚ್ಯತೇ ಸರ್ವಪಾಪೈಶ್ಚ ರುದ್ರಲೋಕಂ ಸ ಗಚ್ಛತಿ ॥ ೩ ॥
ಕ್ರೀಡಿತ್ವಾ ಚ ಯಥಾಕಾಮಂ ರುದ್ರಲೋಕೇ ಮಹಾತಪಾಃ ।
ಇಹ ಮಾನುಷ್ಯತಾಂ ಪ್ರಾಪ್ಯ ರಾಜಾ ಭವತಿ ಧಾರ್ಮಿಕಃ ॥ ೪ ॥

---

### ಕನ್ನಡದ ಅನುವಾದ

#### ಗೋಪೇಶ್ವರತೀರ್ಥಮಾಹಾತ್ಮ್ಯವರ್ಣನ

೧. ಮಾರ್ಕಂಡೇಯನು ಹೇಳುತ್ತಾನೆ:—ಸರ್ಪತೀರ್ಥವನ್ನು ಸೇವಿಸಿದ ಬಳಿಕ ಗೋಪೇಶ್ವರಕ್ಕೆ ಹೋಗಬೇಕು. ಅಲ್ಲಿ ಒಂದು ಸ್ನಾನವನ್ನು ಮಾಡುವುದ ರಿಂದಲೇ ನರರು ಸಕಲ ಪಾತಕಗಳಿಂದಲೂ ಮುಕ್ತರಾಗುವರು.

೨. ಆ ತೀರ್ಥದಲ್ಲಿ ಸ್ನಾನವನ್ನು ಮಾಡಿ ಯಾವನು ಪ್ರಾಣ ಗಳನ್ನು ತ್ಯಜಿಸುವನೊ, ಅವನು ಪಾಪಲೇಪಿತನಾಗಿದ್ದರೂ ಶಿವಲೋಕಕ್ಕೆ ಹೋಗುವನು.

೩. ಅಲ್ಲಿ ಮಿಂದು ದೇವದೇವನಾದ ಮಹೇಶ್ವರನನ್ನು ಪೂಜಿಸುವ ಮನುಜನು ಸಕಲ ಪಾಪಗಳನ್ನೂ ಕಳೆದುಕೊಂಡು ರುದ್ರಲೋಕವನ್ನು ಸೇರುವನು.

೪. ಮಹಾತಪಸ್ಸನ್ನು ಮಾಡಿದವನಂತೆ ಆತನು ರುದ್ರಲೋಕದಲ್ಲಿ ಮನ ಬಂದಂತೆ ವಿಹರಿಸುತ್ತಿದ್ದು ಮತ್ತೆ ಮನುಷ್ಯಲೋಕಕ್ಕೆ ಬರಲು ಧಾರ್ಮಿಕನಾದ ಚಕ್ರವರ್ತಿಯಾಗುವನು.

**ಹಸ್ತ್ಯಶ್ವರಥಸಂಪನ್ನೋ ದಾಸೀದಾಸಸಮನ್ವಿತಃ ।
ಪೂಜ್ಯಮಾನೋ ನರೇಂದ್ರೈಶ್ಚ ಜೀವೇದ್ವರ್ಷಶತಂ ಸುಖೀ ॥ ೫ ॥**

**ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿ ಸಾಹಸ್ರ್ಯಾಂ ಸಂಹಿತಾಯಾಂ
ಪಂಚಮೇ ಆವಂತ್ಯಖಂಡೇ ತೃತೀಯೇ ರೇವಾಖಂಡೇ
"ಗೋಪೇಶ್ವರತೀರ್ಥಮಾಹಾತ್ಮ್ಯವರ್ಣನಂ"ನಾಮ
ದ್ವಿಷಷ್ಟ್ಯುತ್ತರಶತತಮೋಽಧ್ಯಾಯಃ**

---

೫. ಆನೆ, ಕುದುರೆ, ರಥಗಳ ಸೈನ್ಯದಿಂದ ಯುಕ್ತನಾಗಿ, ದಾಸದಾಸಿಯರಿಂದ ಸೇವೆಗೈಸಿಕೊಳ್ಳುತ್ತ, ರಾಜರಿಂದಲೂ ಪೂಜೆಯನ್ನು ಸ್ವೀಕರಿಸುತ್ತ ನೂರು ವರ್ಷಗಳು ಸುಖವಾಗಿ ಜೀವಿಸುವನು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ
ಶ್ರೀ ಸ್ಕಾಂದಮಹಾಪುರಾಣದ ಐದನೆಯ ಆವಂತ್ಯಖಂಡದ ಮೂರನೆಯ ರೇವಾಖಂಡದಲ್ಲಿ
"ಗೋಪೇಶ್ವರತೀರ್ಥಮಾಹಾತ್ಮ್ಯವರ್ಣನ"ವೆಂಬ
ನೂರರವತ್ತೆರಡನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

## ಅಥ ತ್ರಿಷಷ್ಟ್ಯುತ್ತರಶತತಮೋಽಧ್ಯಾಯಃ

### ನಾಗತೀರ್ಥಮಾಹಾತ್ಮ್ಯವರ್ಣನಂ

ಶ್ರೀ ಮಾರ್ಕಂಡೇಯ ಉವಾಚ :—

ತತೋ ಗಚ್ಛೇನ್ಮಹಾರಾಜ ನಾಗತೀರ್ಥಮನುತ್ತಮಂ ।
ಆಶ್ವಿನಸ್ಯ ಸಿತೇ ಪಕ್ಷೇ ಪಂಚಮ್ಯಾಂ ನಿಯತಃ ಶುಚಿಃ ॥ ೧ ॥
ರಾತ್ರೌ ಜಾಗರಣಂ ಕೃತ್ವಾ ಗಂಧಧೂಪನಿವೇದನೈಃ ॥ ೨ ॥
ಪ್ರಭಾತೇ ವಿಮಲೇ ಸ್ನಾತ್ವಾ ಶ್ರಾದ್ಧಂ ಕೃತ್ವಾ ಯಥಾವಿಧಿ ।
ಮುಚ್ಯತೇ ಸರ್ವಪಾಪೇಭ್ಯೋ ನಾಽತ್ರ ಕಾರ್ಯಾ ವಿಚಾರಣಾ ॥ ೩ ॥
ತತ್ರ ತೀರ್ಥೇ ತು ಯೋ ರಾಜನ್ಪ್ರಾಣತ್ಯಾಗಂ ಕರಿಷ್ಯತಿ ।
ಅನಿವರ್ತಿಕಾ ಗತಿಸ್ತಸ್ಯ ಪ್ರೋವಾಚೇತಿ ಶಿವಃ ಸ್ವಯಂ ॥ ೪ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ
ಪಂಚಮೇ ಆವಂತ್ಯಖಂಡೇ ತೃತೀಯೇ ರೇವಾಖಂಡೇ
" ನಾಗತೀರ್ಥಮಾಹಾತ್ಮ್ಯವರ್ಣನಂ " ನಾಮ
ತ್ರಿಷಷ್ಟ್ಯುತ್ತರಶತತಮೋಽಧ್ಯಾಯಃ

---

## ಕನ್ನಡದ ಅನುವಾದ

### ನಾಗತೀರ್ಥಮಾಹಾತ್ಮ್ಯವರ್ಣನ

೧. ಮಾರ್ಕಂಡೇಯನು ಹೇಳುತ್ತಾನೆ:—ಮಹಾರಾಜನೆ! ಬಳಿಕ ಉತ್ತಮೋತ್ತಮವೆನಿಸಿದ ನಾಗತೀರ್ಥಕ್ಕೆ ಹೋಗಬೇಕು. ಆಶ್ವಯುಜಮಾಸದ ಶುಕ್ಲಪಕ್ಷದ ಪಂಚಮಿಯ ದಿನದಲ್ಲಿ ನಿಯಮದಿಂದಿದ್ದು ಸ್ನಾನಶೌಚಗಳನ್ನು ತೀರಿಸಿಕೊಳ್ಳಬೇಕು.

೨. ರಾತ್ರಿಯಲ್ಲಿ ಜಾಗರಣೆಯನ್ನು ಮಾಡಿ ಗಂಧ, ಧೂಪಗಳಿಂದಲೂ, ನೈವೇದ್ಯಗಳಿಂದಲೂ ಮಹಾದೇವನ ಪೂಜೆಯನ್ನು ಮಾಡಬೇಕು.

೩. ಮಾರನೆಯದಿನ ಸುಪ್ರಭಾತವಾಗಲು ಸ್ನಾನವನ್ನು ಮಾಡಿ ಶಾಸ್ತ್ರೋಕ್ತರೀತಿಯಿಂದ ಶ್ರಾದ್ಧವನ್ನು ಮಾಡಿದವನು ಸಮಸ್ತಪಾಪಗಳಿಂದ ಮುಕ್ತನಾಗುವುದರಲ್ಲಿ ಸಂದೇಹವಿಲ್ಲ.

೪. ಮಹಾರಾಜನೆ! ಆ ತೀರ್ಥದಲ್ಲಿ ಯಾವನು ಪ್ರಾಣತ್ಯಾಗವನ್ನು ಮಾಡುವನೊ, ಅವನಿಗೆ ಮರಳಿ ಭೂಲೋಕಕ್ಕೆ ಬರದಂತಹ ಸದ್ಗತಿಯು ಲಭಿಸುವುದೆಂದು ಶಿವನೇ ಹೇಳಿರುವನು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ
ಶ್ರೀ ಸ್ಕಾಂದಮಹಾಪುರಾಣದ ಐದನೆಯ ಆವಂತ್ಯಖಂಡದ ಮೂರನೆಯ ರೇವಾಖಂಡದಲ್ಲಿ
" ನಾಗತೀರ್ಥಮಾಹಾತ್ಮ್ಯವರ್ಣನ "ವೆಂಬ
ನೂರರವತ್ತಮೂರನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

# ಅಥ ಚತುಃಷಷ್ಠ್ಯುತ್ತರಶತತಮೋಽಧ್ಯಾಯಃ

## ಸಾಂಬೌರೇಶ್ವರತೀರ್ಥಮಾಹಾತ್ಮ್ಯವರ್ಣನಂ

**ಶ್ರೀ ಮಾರ್ಕಂಡೇಯ ಉವಾಚ :—**

**ತತೋ ಗಚ್ಛೇನ್ಮಹಾರಾಜ ಸಾಂಬೌರಂ ತೀರ್ಥಮುತ್ತಮಂ ।**
**ಯತ್ರ ಸನ್ನಿಹಿತೋ ಭಾನುಃ ಪೂಜ್ಯಮಾನಃ ಸುರಾಸುರೈಃ ॥ ೧ ॥**
**ತತ್ರ ಯೇ ಪಂಗುತಾಂ ಪ್ರಾಪ್ತಾಃ ಶೀರ್ಣಘ್ರಾಣನಖಾ ನರಾಃ ।**
**ದದ್ರುಮಂಡಲಭಿನ್ನಾಂಗಾ ಮಕ್ಷಿಕಾಕೃಮಿಸಂಕುಲಾಃ ॥ ೨ ॥**
**ಮಾತಾಪಿತೃಭ್ಯಾಂ ರಹಿತಾ ಭ್ರಾತೃಭಾರ್ಯಾವಿವರ್ಜಿತಾಃ ।**
**ಅನಾಥಾ ವಿಕಲಾ ವ್ಯಂಗಾ ಮಗ್ನಾ ಯೇ ದುಃಖಸಾಗರೇ ॥ ೩ ॥**
**ತೇಷಾಂ ನಾಥೋ ಜಗದ್ಯೋನಿರ್ನರ್ಮದಾತಟಮಾಶ್ರಿತಃ ।**
**ಸಾಂಬೌರನಾಥೋ ಲೋಕಾನಾಮಾರ್ತಿಹಾ ದುಃಖನಾಶನಃ ॥ ೪ ॥**
**ತತ್ರ ತೀರ್ಥೇ ತು ಯಃ ಸ್ನಾತ್ವಾ ಮಾಸಮೇಕಂ ನಿರಂತರಂ ।**
**ಪೂಜಯೇದ್ಭಾಸ್ಕರಂ ದೇವಂ ತಸ್ಯ ಪುಣ್ಯಫಲಂ ಶೃಣು ॥ ೫ ॥**

---

## ಕನ್ನಡದ ಅನುವಾದ

### ಸಾಂಬೌರೇಶ್ವರತೀರ್ಥಮಾಹಾತ್ಮ್ಯವರ್ಣನ

೧. ಮಾರ್ಕಂಡೇಯನು ಹೇಳುತ್ತಾನೆ:—ಚಕ್ರವರ್ತಿಯೆ! ಅಲ್ಲಿಂದ ಉತ್ತಮವಾದ ಸಾಂಬೌರವೆಂಬ ತೀರ್ಥಕ್ಕೆ ಹೋಗಬೇಕು. ಅಲ್ಲಿ ಸೂರ್ಯ ದೇವನು ದೇವದಾನವರ ಪೂಜೆಗಳನ್ನು ಸ್ವೀಕರಿಸುತ್ತ ಸನ್ನಿಹಿತನಾಗಿರುವನು.

೨-೪. ಕುಂಟರೂ, ಮೂಗು, ಉಗುರುಗಳಿಲ್ಲದವರೂ, ಕಜ್ಜಿ, ತುರಿ ಗಳಿಂದ ನರಳುವವರೂ, ನೊಣಗಳಿಂದಲೂ, ಕ್ರಿಮಿಗಳಿಂದಲೂ ಹಿಂಸೆಗೊಳ್ಳು ವವರೂ, ತಾಯಿತಂದೆಗಳಿಲ್ಲದವರೂ, ಸಹೋದರರರಹಿತರೂ, ಪತ್ನೀಹೀನರಾದ ವರೂ, ಅನಾಥರೂ, ಬುದ್ಧಿಹೀನರೂ, ಅಂಗರಹಿತರೂ, ಸಂಸಾರವೆಂಬ ದುಃಖದ ಸಾಗರದಲ್ಲಿ ಮುಳುಗಿರುವವರೂ ಆದ ನರರಿಗೆ ನಾಥನಾದ ಜಗತ್ಕರ್ತನು ನರ್ಮದೆಯ ತೀರವನ್ನಾಶ್ರಯಿಸಿರುವನು. ಸಾಂಬೌರನಾಥನು ಸಕಲ ಲೋಕ ಗಳ ರೋಗಗಳನ್ನೂ ದುಃಖಗಳನ್ನೂ ಕಳೆಯುವನು.

೫. ಆ ತೀರ್ಥದಲ್ಲಿ ನಿತ್ಯವೂ ಸ್ನಾನವನ್ನು ಮಾಡಿಕೊಂಡು ಒಂದು ತಿಂಗಳು ಭಾಸ್ಕರನನ್ನು ಎಡಬಿಡದೆ ಪೂಜಿಸುವವನ ಪುಣ್ಯಫಲವನ್ನು ಕೇಳು.

ಯತ್ಫಲಂ ಚೋತ್ತರೇ ಪಾರ್ಥ ತಥಾ ವೈ ಪೂರ್ವಸಾಗರೇ ।
ದಕ್ಷಿಣೇ ಪಶ್ಚಿಮೇ ಸ್ನಾತ್ವಾ ತತ್ರ ತೀರ್ಥೇ ತು ತತ್ಫಲಂ ॥ ೬ ॥
ಕೌಮಾರೇ ಯೌವನೇ ಪಾಪಂ ವಾರ್ಧಕೇ ಯಚ್ಚ ಸಂಚಿತಂ ।
ತತ್ಪ್ರಣಶ್ಯತಿ ಸಾಂವೌರೇ ಸ್ನಾನಮಾತ್ರಾನ್ನ ಸಂಶಯಃ ॥ ೭ ॥
ನವ್ಯಾಧಿರ್ನೈವ ದಾರಿದ್ರ್ಯಂ ನಚೈವೇಷ್ಟವಿಯೋಜನಂ ।
ಸಪ್ತ ಜನ್ಮಾನಿ ರಾಜೇಂದ್ರ ಸಾಂವೌರಪರಿಸೇವನಾತ್ ॥ ೮ ॥
ಸಪ್ತಮ್ಯಾಮುಪವಾಸೇನ ತದ್ದಿನೇ ಚಾಪ್ಯುಪೋಷಿತೇ ।
ಸ ತತ್ಫಲಮವಾಪ್ನೋತಿ ತತ್ರ ಸ್ನಾತ್ವಾ ನ ಸಂಶಯಃ ॥ ೯ ॥
ರಕ್ತಚಂದನಮಿಶ್ರೇಣ ಯದರ್ಘ್ಯೇಣ ಫಲಂ ಸ್ಮೃತಂ ।
ತತ್ರ ತೀರ್ಥೇ ನೃಪಶ್ರೇಷ್ಠ ಸ್ನಾತ್ವಾ ತತ್ಫಲಮಾಪ್ನುಯಾತ್ ॥ ೧೦ ॥
ನರ್ಮದಾಸಲಿಲಂ ರಮ್ಯಂ ಸರ್ವಪಾತಕನಾಶನಂ ।
ನಿರೀಕ್ಷಿತಂ ವಿಶೇಷೇಣ ಸಾಂವೌರೇಣ ಮಹಾತ್ಮನಾ ॥ ೧೧ ॥

---

೬. ಉತ್ತರ, ಪೂರ್ವ, ಪಶ್ಚಿಮ, ದಕ್ಷಿಣಗಳೆಂಬ ಚತುಸ್ಸಮುದ್ರಗಳಲ್ಲಿಯೂ ಸ್ನಾನವನ್ನು ಮಾಡಿದವನಿಗೆ ಸಿಕ್ಕುವ ಫಲವೇ ಈ ತೀರ್ಥವನ್ನು ಸೇವಿಸಿದವನಿಗೂ ಲಭಿಸುವುದು.

೭. ಮನುಷ್ಯನು ತನ್ನ ಕೌಮಾರ, ಯೌವನ, ವಾರ್ಧಕ್ಯಗಳಲ್ಲಿ ಮಾಡಿದ ಸಮಸ್ತಪಾತಕಗಳೂ ಸಾಂವೌರತೀರ್ಥದ ಒಂದು ಸ್ನಾನದ ಮಾತ್ರದಿಂದ ನಾಶವಾಗುವುದರಲ್ಲಿ ಸಂದೇಹವೇ ಇಲ್ಲ.

೮. ಈ ಸಾಂವೌರತೀರ್ಥವನ್ನು ಸೇವಿಸಿದವರಿಗೆ ಏಳು ಜನ್ಮಗಳಲ್ಲಿಯೂ ರೋಗರುಜಿನಗಳಾಗಲಿ, ದಾರಿದ್ರ್ಯವಾಗಲಿ, ಇಷ್ಟವಿಯೋಗವಾಗಲಿ ಸಂಭವಿಸುವುದಿಲ್ಲ.

೯. ನರನು, ಸಪ್ತಮಿಯ ದಿನದಲ್ಲಿ ಉಪವಾಸವನ್ನು ಮಾಡಿ ಆ ತೀರ್ಥವನ್ನು ಸೇವಿಸುವುದರಿಂದಲೂ ಆ ಫಲವನ್ನೇ ಪಡೆಯುವುದರಲ್ಲಿ ಸಂದೇಹವಿಲ್ಲ.

೧೦. ರಕ್ತಚಂದನ ಮಿಶ್ರಿತವಾದ ಅರ್ಘ್ಯವನ್ನು ಸೂರ್ಯನಿಗೆ ಕೊಡುವುದರಲ್ಲಿ ಯಾವ ಫಲವು ಹೇಳಲ್ಪಟ್ಟಿರುವುದೊ, ಆ ತೀರ್ಥದಲ್ಲಿ ಸ್ನಾನಮಾತ್ರದಿಂದಲೇ ಅದು ದೊರಕುವುದು.

೧೧. ನರ್ಮದಾನದಿಯ ಜಲವು ಮನೋಹರವೂ, ಸಕಲ ಪಾತಕನಾಶಕವೂ ಆಗಿರುವುದು. ವಿಶೇಷವಾಗಿ ಮಹಾತ್ಮನಾದ ಸಾಂವೌರನ ಕೃಪಾದೃಷ್ಟಿಗೆ ಒಳಗಾಗಿರುವುದು.

**ತೇ ಧನ್ಯಾಸ್ತೇ ಮಹಾತ್ಮಾನಸ್ತೇಷಾಂ ಜನ್ಮ ಸುಜೀವಿತಂ ।**
**ಸ್ನಾತ್ವಾ ಪಶ್ಯಂತಿ ದೇವೇಶಂ ಸಾಂವೌರೇಶ್ವರಮುತ್ತಮಂ ॥ ೧೨ ॥**
**ಸೂರ್ಯಲೋಕೇ ವಸೇತ್ತಾವದ್ಯಾವದಾಭೂತಸಂಪ್ಲವಂ ॥ ೧೩ ॥**

**ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ**
**ಪಂಚಮೇ ಆವಂತ್ಯಖಂಡೇ ತೃತೀಯೇ ರೇವಾಖಂಡೇ**
**"ಸಾಂವೌರೇಶ್ವರತೀರ್ಥಮಾಹಾತ್ಮ್ಯವರ್ಣನಂ" ನಾಮ**
**ಚತುಃಷಷ್ಟ್ಯುತ್ತರಶತತಮೋಽಧ್ಯಾಯಃ**

---

೧೨. ಯಾರು ಉತ್ತಮವಾದ ಸಾಂವೌರೇಶ್ವರ ಮಹಾದೇವನನ್ನು ಸ್ನಾನ ಪೂರ್ವಕವಾಗಿ ನೋಡುವರೊ, ಅವರೇ ಧನ್ಯರು, ಮಹಾತ್ಮರು. ಅವರ ಜನ್ಮವೇ ಸಾರ್ಥಕವು.

೧೩. ಅಂತಹವನು ಪಂಚಭೂತಗಳ ಮಹಾಪ್ರಳಯವಾಗುವವರೆಗೂ ಸೂರ್ಯಲೋಕದಲ್ಲಿ ವಾಸಮಾಡುತ್ತಿರುವನು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ
ಶ್ರೀ ಸ್ಕಾಂದಮಹಾಪುರಾಣದ ಐದನೆಯ ಆವಂತ್ಯಖಂಡದ ಮೂರನೆಯ ರೇವಾಖಂಡದಲ್ಲಿ
"ಸಾಂವಾರೇಶ್ವರತೀರ್ಥಮಾಹಾತ್ಮ್ಯವರ್ಣನ"ವೆಂಬ
ನೂರರವತ್ತನಾಲ್ಕನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

# ಅಥ ಪಂಚಷಷ್ಟ್ಯುತ್ತರಶತತಮೋಽಧ್ಯಾಯಃ

## ಸಿದ್ಧೇಶ್ವರತೀರ್ಥಮಾಹಾತ್ಮ್ಯವರ್ಣನಂ

ಶ್ರೀ ಮಾರ್ಕಂಡೇಯ ಉವಾಚ:—

ನರ್ಮದಾದಕ್ಷಿಣೇಕೂಲೇ ಸಿದ್ಧೇಶ್ವರಮಿತಿ ಶ್ರುತಂ ।
ತೀರ್ಥಂ ಪರಂ ಮಹಾರಾಜ ಸಿದ್ಧೈಃ ಕೃತಮಿತಿ ಪ್ರಭೋ ॥ ೧ ॥
ತತ್ರ ತೀರ್ಥಂ ಮಹಾಪುಣ್ಯಂ ಸರ್ವತೀರ್ಥೇಷು ಪಾವನಂ ।
ನರ್ಮದಾಯಾ ಮಹಾರಾಜ ದಕ್ಷಿಣಂ ಕೂಲಮಾಶ್ರಿತಂ ॥ ೨ ॥
ತತ್ರ ತೀರ್ಥೇ ನರಃ ಸ್ನಾತ್ವಾ ತರ್ಪಯೇತ್ಪಿತೃದೇವತಾಃ ।
ಶ್ರಾದ್ಧಂ ತತ್ರೈವ ಯೋ ದದ್ಯಾತ್ಪಿತ್ರೂನುದ್ದಿಶ್ಯ ಭಾರತ ॥ ೩ ॥
ತೃಪ್ಯಂತಿ ಪಿತರಸ್ತಸ್ಯ ದ್ವಾದಶಾಬ್ದಾನ್ನ ಸಂಶಯಃ ।
ತತ್ರ ತೀರ್ಥೇ ತು ಯೋ ಭಕ್ತ್ಯಾ ಸ್ನಾತ್ವಾ ಪೂಜಯತೇ ಶಿವಂ ॥ ೪ ॥
ರಾತ್ರೌ ಜಾಗರಣಂ ಕೃತ್ವಾ ಪಠೇತ್ಪೌರಾಣಿಕೀಂ ಕಥಾಂ ।
ತತಃ ಪ್ರಭಾತೇ ವಿಮಲೇ ಸ್ನಾನಂ ಕುರ್ಯಾದ್ಯಥಾವಿಧಿ ॥ ೫ ॥

---

## ಕನ್ನಡದ ಅನುವಾದ

### ಸಿದ್ಧೇಶ್ವರತೀರ್ಥಮಾಹಾತ್ಮ್ಯವರ್ಣನ

೧. ಮಾರ್ಕಂಡೇಯನು ಹೇಳುತ್ತಾನೆ:—ಮಹಾರಾಜನೆ! ನರ್ಮದೆಯ ದಕ್ಷಿಣ ತೀರದಲ್ಲಿಯೇ ಸಿದ್ಧೇಶ್ವರವೆಂಬ ಪರಮಪಾವನವಾದ ತೀರ್ಥವೊಂದಿರುವುದು. ಅದನ್ನು ಸಿದ್ಧರೇ ನಿರ್ಮಿಸಿದರೆಂದು ಹೇಳುವರು.

೨. ಧರ್ಮರಾಜನೆ! ನರ್ಮದೆಯ ದಕ್ಷಿಣತೀರದ ಆ ತೀರ್ಥವು ಮಹಾಪುಣ್ಯಪ್ರದವೂ ಸಕಲ ತೀರ್ಥಗಳಲ್ಲಿ ಪಾವನವೂ ಆಗಿರುವುದು.

೩. ಆ ತೀರ್ಥದಲ್ಲಿ ಸ್ನಾನವನ್ನು ಮಾಡಿ ನರನು ಪಿತೃದೇವತೆಗಳಿಗೆ ತರ್ಪಣಗಳನ್ನು ಕೊಡಬೇಕು. ಧರ್ಮರಾಜನೆ! ಅವರ ಸಂತೃಪ್ತಿಗಾಗಿ ಅವರ ಹೆಸರಿನಲ್ಲಿ ಶ್ರಾದ್ಧವನ್ನು ಮಾಡಬೇಕು.

೪. ಆ ಕರ್ಮದಿಂದ ಪಿತೃಗಳು ಹನ್ನೆರಡು ವರ್ಷಗಳು ತೃಪ್ತಿಗೊಳ್ಳುವುದರಲ್ಲಿ ಸಂಶಯವಿಲ್ಲ. ಆ ತೀರ್ಥದಲ್ಲಿ ಭಕ್ತಿಯಿಂದ ಸ್ನಾನಮಾಡಿ ಶಿವನನ್ನು ಪೂಜಿಸಬೇಕು.

೫. ರಾತ್ರಿಯಲ್ಲಿ ಜಾಗರಣೆಯನ್ನು ಮಾಡಿ ಪುರಾಣಗಳ ಕಥೆಗಳನ್ನು ಓದಬೇಕು. ಬಳಿಕ ಸುಪ್ರಭಾತವಾಗಲು ಯಥಾವಿಧಿಯಾಗಿ ಸ್ನಾನವನ್ನು ಮಾಡಬೇಕು.

ವೀಕ್ಷತೇ ಗಿರಿಜಾಕಾಂತಂ ಸ ಗಚ್ಛೇತ್ಪರಮಾಂ ಗತಿಂ ।
ಪುರಾ ಸಿದ್ಧಾ ಮಹಾಭಾಗಾಃ ಕಪಿಲಾದ್ಯಾ ಮಹರ್ಷಯಃ ॥ ೬ ॥
ಜಪಂತಶ್ಚ ಪರಂ ಬ್ರಹ್ಮ ಯೋಗಸಿದ್ಧಾ ಮಹಾವ್ರತಾಃ ।
ಸಿದ್ಧಿಂ ತೇ ಪರಮಾಂ ಪ್ರಾಪ್ತಾ ನರ್ಮದಾಯಾಃ ಪ್ರಭಾವತಃ ॥ ೭ ॥

**ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ**
**ಪಂಚಮೇ ಆವಂತ್ಯಖಂಡೇ ತೃತೀಯೇ ರೇವಾಖಂಡೇ**
**"ಸಿದ್ಧೇಶ್ವರತೀರ್ಥಮಾಹಾತ್ಮ್ಯವರ್ಣನಂ" ನಾಮ**
**ಪಂಚಷಷ್ಟ್ಯುತ್ತರಶತತಮೋಽಧ್ಯಾಯಃ**

---

೬–೭. ಬಳಿಕ ಪಾರ್ವತೀಪತಿಯ ದರ್ಶನವನ್ನು ತೆಗೆದುಕೊಂಡವನು ಪರಮಪದವನ್ನು ಹೊಂದುವನು. ಹಿಂದೆ ಮಹಾಭಾಗ್ಯಶಾಲಿಗಳಾದ ಸಿದ್ಧರೂ, ಕಪಿಲರೇ ಮೊದಲಾದ ಮಹರ್ಷಿಗಳೂ ಪರಬ್ರಹ್ಮವನ್ನು ಜಪಿಸುತ್ತ ಮಹಾವ್ರತ ಧಾರಿಗಳಾದ ಯೋಗಸಿದ್ಧರೂ ನರ್ಮದೆಯ ಪ್ರಭಾವದಿಂದ ಪರಮಸಿದ್ಧಿಯನ್ನು ಪಡೆದರು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ
ಶ್ರೀ ಸ್ಕಾಂದಮಹಾಪುರಾಣದ ಐದನೆಯ ಆವಂತ್ಯಖಂಡದ ಮೂರನೆಯ ರೇವಾಖಂಡದಲ್ಲಿ
"ಸಿದ್ಧೇಶ್ವರತೀರ್ಥಮಾಹಾತ್ಮ್ಯವರ್ಣನ"ವೆಂಬ
ನೂರರವತ್ತೈದನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

## ಅಥ ಷಟ್‌ಷಷ್ಟ್ಯುತ್ತರಶತತಮೋಽಧ್ಯಾಯಃ

### ಸಿದ್ಧೇಶ್ವರೀತೀರ್ಥಮಾಹಾತ್ಮ್ಯವರ್ಣನಂ

ಶ್ರೀ ಮಾರ್ಕಂಡೇಯ ಉವಾಚ :—

ತತಃ ಸಿದ್ಧೇಶ್ವರೀ ದೇವೀ ವೈಷ್ಣವೀ ಪಾಪನಾಶಿನೀ ।
ಆನಂದಂ ಪರಮಂ ಪ್ರಾಪ್ತಾ ದೃಷ್ಟ್ವಾ ಸ್ಥಾನಂ ಸುಶೋಭನಂ ॥ ೧ ॥
ತತ್ರ ತೀರ್ಥೇ ನರಃ ಸ್ನಾತ್ವಾ ಪೂಜಯೇತ್ಪಿತೃದೇವತಾಃ ।
ದೇವೀಂ ಪಶ್ಯತಿ ಯೋ ಭಕ್ತ್ಯಾ ಮುಚ್ಯತೇ ಸರ್ವಪಾತಕೈಃ ॥ ೨ ॥
ಮೃತವತ್ಸಾ ತು ಯಾ ನಾರೀ ವಂಧ್ಯಾ ಸ್ತ್ರೀಜನನೀ ತಥಾ ।
ಪುತ್ರಂ ಸಾ ಲಭತೇ ನಾರೀ ಶೀಲವಂತಂ ಗುಣಾನ್ವಿತಂ ॥ ೩ ॥
ತತ್ರ ತೀರ್ಥೇ ತು ಯಃ ಸ್ನಾತ್ವಾ ಪಶ್ಯೇದ್ದೇವೀಂ ಸುಭಕ್ತಿತಃ ।
ಅಷ್ಟಮ್ಯಾಂ ವಾ ಚತುರ್ದಶ್ಯಾಂ ಸರ್ವಕಾಲೇಽಥವಾ ನೃಪ ॥ ೪ ॥
ಸಂಗಮೇ ತು ತತಃ ಸ್ನಾತ್ವಾ ನಾರೀ ವಾ ಪುರುಷೋಽಪಿ ವಾ ।
ಪುತ್ರಂ ಧನಂ ತಥಾ ದೇವೀ ದದಾತಿ ಪರಿತೋಷಿತಾ ॥ ೫ ॥

---

## ಕನ್ನಡದ ಅನುವಾದ

### ಸಿದ್ಧೇಶ್ವರೀತೀರ್ಥಮಾಹಾತ್ಮ್ಯವರ್ಣನ

೧. ಮಾರ್ಕಂಡೇಯನು ಹೇಳುತ್ತಾನೆ:—ಬಳಿಕ ವಿಷ್ಣುಸಂಭವೆಯೂ, ಪಾಪನಾಶಕಳೂ ಆದ ಸಿದ್ಧೇಶ್ವರೀದೇವಿಯು ಪರಮಶೋಭನವಾದ ಸ್ಥಾನವೊಂದನ್ನು ಕಂಡು ಅತ್ಯಾನಂದಭರಿತಳಾದಳು.

೨. ಆ ತೀರ್ಥದಲ್ಲಿ ಯಾವನು ಸ್ನಾನವನ್ನು ಮಾಡಿ ಪಿತೃದೇವತೆಗಳನ್ನು ಪೂಜಿಸಿ ಭಕ್ತಿಯಿಂದ ಆ ದೇವಿಯ ದರ್ಶನವನ್ನು ತೆಗೆದುಕೊಳ್ಳುವನೊ, ಅವನು ಸಮಸ್ತ ಪಾತಕಗಳಿಂದ ಮುಕ್ತನಾಗುವನು.

೩. ಹುಟ್ಟುತ್ತಲೇ ಸಾಯುವ ಮಕ್ಕಳ ತಾಯಿಯೂ, ಬಂಜೆಯೂ, ಸ್ತ್ರೀ ಶಿಶುಗಳನ್ನೇ ಹಡೆದವಳೂ ಶೀಲವಂತನೂ, ಗುಣಸಂಪನ್ನನೂ ಆದ ಸತ್ಪುತ್ರರನ್ನು ಪಡೆಯುವರು.

೪. ರಾಜೇಂದ್ರನೆ! ಅಷ್ಟಮಿ, ಚತುರ್ದಶಿಯ ದಿನಗಳಲ್ಲಿಯೂ, ಸಕಲ ಕಾಲಗಳಲ್ಲಿಯೂ ಆ ತೀರ್ಥದಲ್ಲಿ ಮಿಂದು ಅತ್ಯಂತ ಭಕ್ತಿಯಿಂದ ದೇವಿಯನ್ನು ಸಂದರ್ಶಿಸಬೇಕು.

೫. ಸಂಗಮದಲ್ಲಿ ಸ್ನಾನವನ್ನು ಮಾಡಿದ ಸ್ತ್ರೀಯರಿಗೂ, ಪುರುಷರಿಗೂ ದೇವಿಯು ಸಂತುಷ್ಟಳಾಗಿ ಪುತ್ರರನ್ನೂ ಧನವನ್ನೂ ಅನುಗ್ರಹಿಸುವಳು.

ಗೋತ್ರರಕ್ಷಾಂ ಪ್ರಕುರುತೇ ದೃಷ್ಟ್ವಾ ದೇವೀ ಸುಪೂಜಿತಾ ।
ಪ್ರಜಾಂ ಚ ಪಾತಿ ಸತತಂ ಪೂಜ್ಯಮಾನಾ ನ ಸಂಶಯಃ ॥ ೬ ॥
ನವಮ್ಯಾಂ ಚ ಮಹಾರಾಜ ಸ್ನಾತ್ವಾ ದೇವೀಮುಪೋಷಿತಃ ।
ಪೂಜಯೇತ್ಪರಯಾ ಭಕ್ತ್ಯಾ ಶ್ರದ್ಧಾಪೂತೇನ ಚೇತಸಾ ॥ ೭ ॥
ಸ ಗಚ್ಛೇತ್ಪರಮಂ ಲೋಕಂ ಯಃ ಸುರೈರಪಿ ದುರ್ಲಭಃ ॥ ೮ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ
ಪಂಚಮೇ ಆವಂತ್ಯಖಂಡೇ ತೃತೀಯೇ ರೇವಾಖಂಡೇ
"ಸಿದ್ಧೇಶ್ವರೀತೀರ್ಥಮಾಹಾತ್ಮ್ಯವರ್ಣನಂ" ನಾಮ
ಷಟ್ಷಷ್ಟ್ಯುತ್ತರಶತತಮೋಽಧ್ಯಾಯಃ

---

೬. ದೇವಿಯನ್ನು ನೋಡಿ ಪೂಜಿಸಲು ಗೋತ್ರದವರೆಲ್ಲರ ಸಂರಕ್ಷಣೆಯನ್ನು ಮಾಡುವಳು. ಪೂಜಿತಳಾದ ಆ ದೇವಿಯು ನಿತ್ಯವೂ ಸಂತತಿಯನ್ನು ಕಾಪಾಡುವುದರಲ್ಲಿ ಸಂಶಯವಿಲ್ಲ.

೭. ಮಹಾರಾಜನೆ! ನವಮಿಯ ದಿನದಲ್ಲಿ ಉಪವಾಸದಿಂದ ಸ್ನಾನವನ್ನು ಮಾಡಿ ಅತ್ಯಂತ ಭಕ್ತಿಯಿಂದಲೂ, ಶ್ರದ್ಧಾಸಹಿತವಾದ ಮನಸ್ಸಿನಿಂದಲೂ ದೇವಿಯನ್ನು ಪೂಜಿಸಬೇಕು.

೮. ಅದನ್ನು ಮಾಡಿದವನು ದೇವತೆಗಳಿಗೂ ದುರ್ಲಭವೆನಿಸಿದ ಉತ್ತಮ ಲೋಕವನ್ನು ಸೇರುವನು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ
ಶ್ರೀ ಸ್ಕಾಂದಮಹಾಪುರಾಣದ ಐದನೆಯ ಅವಂತ್ಯಖಂಡದ ಮೂರನೆಯ ರೇವಾಖಂಡದಲ್ಲಿ
"ಸಿದ್ಧೇಶ್ವರೀತೀರ್ಥಮಾಹಾತ್ಮ್ಯವರ್ಣನ" ವೆಂಬ
ನೂರರವತ್ತಾರನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

## ಅಥ ಸಪ್ತಷಷ್ಟ್ಯುತ್ತರಶತತಮೋಽಧ್ಯಾಯಃ

### ಮಾರ್ಕಂಡೇಶ್ವರತೀರ್ಥಮಾಹಾತ್ಮ್ಯವರ್ಣನಂ

**ಯುಧಿಷ್ಠಿರ ಉವಾಚ:—**

ನರ್ಮದಾದಕ್ಷಿಣೇ ಕೂಲೇ ತ್ವಚ್ಚಿಹ್ನೇನೋಪಲಕ್ಷಿತಂ ।
ತೀರ್ಥಮೇತನ್ಮಮಾಖ್ಯಾಹಿ ಸಂಭವಂ ಚ ಮಹಾಮುನೇ ॥ ೧ ॥

**ಮಾರ್ಕಂಡೇಯ ಉವಾಚ:—**

ಪುರಾ ಕೃತಯುಗಸ್ಯಾದೌ ದಕ್ಷಿಣೇ ಗಿರಿಮುತ್ತಮಂ ।
ವಿಂಧ್ಯಂ ಸರ್ವಗುಣೋಪೇತಂ ನಿಯತೋ ನಿಯತಾಶನಃ ।
ಋಷಿಸಂಘೈಃ ಕೃತಾತಿಥ್ಯೋ ದಂಡಕೇ ನ್ಯವಸಂ ಚಿರಂ ॥ ೨ ॥
ಉಷಿತ್ವಾ ಸುಚಿರಂ ಕಾಲಂ ವರ್ಷಾಣಾಮಯುತಂ ಸುಖೀ ।
ತಾನೃಷೀನ್ ಸಮನುಜ್ಞಾಪ್ಯ ಶಿಷ್ಯೈರನುಗತಸ್ತತಃ ॥ ೩ ॥
ನಿವೃತ್ತಃ ಸುಮಹಾಭಾಗ ನರ್ಮದಾಕೂಲಮಾಗತಃ ।
ಪುಣ್ಯಂ ಚ ರಮಣೀಯಂ ಚ ಸರ್ವಪಾಪವಿನಾಶನಂ ॥ ೪ ॥
ಕೃತ್ವಾಽಹಮಾಸ್ಪದಂ ತತ್ರ ದ್ವಿಜಸಂಘಸಮಾಯುತಃ ।
ಬ್ರಹ್ಮಚಾರಿಭಿರಾಕೀರ್ಣಂ ಗಾರ್ಹಸ್ಥ್ಯೈಃ ಸುಪ್ರತಿಷ್ಠಿತೈಃ ॥ ೫ ॥

---

### ಕನ್ನಡದ ಅನುವಾದ

#### ಮಾರ್ಕಂಡೇಶ್ವರತೀರ್ಥಮಾಹಾತ್ಮ್ಯವರ್ಣನ

೧. ಯುಧಿಷ್ಠಿರನು ಹೇಳುತ್ತಾನೆ:—ಮಹಾಮುನಿಯೆ! ನರ್ಮದೆಯ ದಕ್ಷಿಣ ತೀರದಲ್ಲಿ ನಿನ್ನ ಹೆಸರಿನಿಂದ ಕರೆಯಲ್ಪಡುವ ಒಂದು ತೀರ್ಥವಿರುವುದು. ಅದು ಸಂಭವಿಸಿದ ಚರಿತ್ರೆಯನ್ನು ನನಗೆ ಹೇಳು.

೨. ಮಾರ್ಕಂಡೇಯನು ಹೇಳುತ್ತಾನೆ:—ಹಿಂದೆ ಕೃತಯುಗದ ಆದಿಯಲ್ಲಿ ದಕ್ಷಿಣ ದಿಕ್ಕಿನಲ್ಲಿರುವ ಉತ್ತಮವೂ, ಸಕಲಗುಣೋಪೇತವೂ ಆದ ವಿಂಧ್ಯ ಪರ್ವತದಲ್ಲಿ ನಿಯಮಾನ್ವಿತನೂ, ಮಿತಾಹಾರಿಯೂ ಆಗಿ ಮಹರ್ಷಿಗಳ ಸಮೂಹಗಳ ಆತಿಥ್ಯವನ್ನು ಸ್ವೀಕರಿಸುತ್ತ ಬಹಳಕಾಲ ವಾಸವಾಗಿದ್ದೆನು.

೩. ಹತ್ತುಸಾವಿರ ವರ್ಷಗಳ ದೀರ್ಘಕಾಲವನ್ನು ಅಲ್ಲಿ ಸುಖವಾಸದಿಂದ ಕಳೆದು ಆ ಮಹರ್ಷಿಗಳ ಅಪ್ಪಣೆಯನ್ನು ಪಡೆದು ಶಿಷ್ಯಪರಿವಾರಿತನಾಗಿ ಹೊರಟೆನು.

೪. ಮಹಾಭಾಗ್ಯಶಾಲಿಯೆ! ತರುವಾಯ ಪುಣ್ಯಪ್ರದವೂ, ರಮಣೀಯವೂ, ಸಮಸ್ತಪಾಪಕ್ಷಯಕರವೂ ಆದ ನರ್ಮದಾತೀರವನ್ನು ಸೇರಿ ಅಲ್ಲಿಯೇ ನಿಂತೆನು.

೫. ಅಲ್ಲಿಯೇ ಬ್ರಾಹ್ಮಣರ ಸಮೂಹದಿಂದಲೂ, ಬ್ರಹ್ಮಚಾರಿಗಳಿಂದಲೂ,

ವಾನಪ್ರಸ್ಥೈಶ್ಚ ಯತಿಭಿರ್ಯತಾऽऽಹಾರೈರ್ಯತಾತ್ಮಭಿಃ ।
ತಪಸ್ವಿಭಿರ್ಮಹಾಭಾಗೈಃ ಕಾಮಕ್ರೋಧವಿವರ್ಜಿತೈಃ ॥ ೬ ॥
ತತ್ರಾऽಹಂ ವರ್ಷಮಯುತಂ ತಪಃ ಕೃತ್ವಾ ಸುದಾರುಣಂ ।
ಆರಾಧಯಂ ವಾಸುದೇವಂ ಪ್ರಭುಂ ಕರ್ತಾರವೀಶ್ವರಂ ॥ ೭ ॥
ಜಪಂಸ್ತಪೋಭಿರ್ನಿಯಮೈರ್ನರ್ಮದಾಕೂಲಮಾಶ್ರಿತಃ ।
ತತಸ್ತೌ ವರದೌ ದೇವೌ ಸಮಾಯಾತೌ ಯುಧಿಷ್ಠಿರ ॥ ೮ ॥
ಪ್ರತ್ಯಕ್ಷೌ ಭಾಸ್ಕರೌ ರಾಜನ್ನುಮಾಶ್ರೀಭ್ಯಾಂ ವಿಭೂಷಿತೌ ।
ಪ್ರಣಮ್ಯಾऽಹಂ ತತೋ ದೇವೌ ಭಕ್ತಿಯುಕ್ತೋ ವಚೋऽಬ್ರುವಂ ॥ ೯ ॥
ಭವಂತೌ ಪ್ರಾರ್ಥಯಾಮಿಸ್ಮ ವರಾರ್ಹೌ ವರದೌ ಶಿವೌ ।
ಧರ್ಮಸ್ಥಿತಿಂ ಮಹಾಭಾಗೌ ಭಕ್ತಿಂ ವಾऽನುತ್ತಮಾಂ ಯುವಾಂ ॥ ೧೦ ॥
ಅಜರೋ ವ್ಯಾಧಿರಹಿತಃ ಪಂಚವಿಂಶತಿವರ್ಷವತ್ ।
ಅಸ್ಮಿನ್ ಸ್ಥಾನೇ ಸದಾ ಸ್ಥೇಯಂ ಸಹದೇವೈರಸಂಶಯಂ ॥ ೧೧ ॥

---

ಷಟ್ಕರ್ಮನಿಷ್ಠೆಯಲ್ಲಿದ್ದ ಗೃಹಸ್ಥರಿಂದಲೂ ಕೂಡಿಕೊಂಡು ಒಂದು ಆಶ್ರಮವನ್ನು ಕಟ್ಟಿಕೊಂಡೆನು.

೬. ವಾನಪ್ರಸ್ಥರೂ, ನಿಯತಾಹಾರ ಯಮಾದಿ ನಿಯಮಸಂಪನ್ನರಾದ ಸನ್ಯಾಸಿಗಳೂ, ಮಹಾಭಾಗರಾದ ಕಾಮಕ್ರೋಧವರ್ಜಿತರಾದ ತಪಸ್ವಿಗಳೂ ಅಲ್ಲಿ ನೆರೆದಿದ್ದರು.

೭. ಅಲ್ಲಿ ನಾನು ಹತ್ತುಸಾವಿರ ವರ್ಷಗಳು ಬಹಳ ಕಠಿನವಾದ ತಪಸ್ಸನ್ನಾಚರಿಸಿ ಲೋಕನಾಥನೂ, ಜಗತ್ಕರ್ತನೂ ಆದ ಪರಮೇಶ್ವರನನ್ನೂ, ವಾಸುದೇವನನ್ನೂ ಆರಾಧಿಸಿದೆನು.

೮. ನರ್ಮದೆಯ ತೀರದಲ್ಲಿ ವಾಸಮಾಡುತ್ತ ಜಪತಪಗಳಿಂದಲೂ, ನಿಯಮಗಳಿಂದಲೂ ಪೂಜಿಸುತ್ತಿರಲು ಅವರಿಬ್ಬರೂ ವರಪ್ರಸಾದಕರಾಗಿ ನನಗೆ ಪ್ರತ್ಯಕ್ಷರಾದರು.

೯. ರಾಜನೆ! ಪ್ರತ್ಯಕ್ಷರಾದ ಸೂರ್ಯರಂತೆ ಪಾರ್ವತೀಲಕ್ಷ್ಮಿಯರೊಡನೆ ಅವರು ಕಾಣಿಸಿಕೊಳ್ಳಲು ನಾನು ಭಕ್ತಿಭರಿತನಾಗಿ ಅವರಿಗೆ ಪ್ರಣಾಮವನ್ನು ಮಾಡಿ ಕೇಳಿಕೊಂಡೆನು.

೧೦–೧೧. "ವರವನ್ನು ಬೇಡಲು ಅರ್ಹರೂ, ಪಾತ್ರರೂ, ವರಪ್ರದರೂ, ಮಂಗಳಸ್ವರೂಪರೂ, ಮಹಾ ಭಾಗ್ಯಶಾಲಿಗಳೂ ಆದ ನಿಮ್ಮನ್ನು ಬೇಡಿಕೊಳ್ಳುವೆನು. ನನಗೆ ಧರ್ಮದಲ್ಲಿ ಶ್ರದ್ಧೆಯೂ, ನಿಮ್ಮಲ್ಲಿ ಅನನ್ಯವಾದ ಭಕ್ತಿಯೂ ಉಂಟಾಗಲಿ. ನಾನು ಮುಪ್ಪುರೋಗಗಳಿಲ್ಲದೆ ಯಾವಾಗಲೂ ಇಪ್ಪತ್ತೈದು ವರ್ಷದವನಂತಿರಬೇಕು. ನೀವು ಸಹ ಖಂಡಿತವಾಗಿಯೂ ಸಕಲ ದೇವತೆಗಳೊಡನೆ ಈ ಸ್ಥಳದಲ್ಲಿ ನೆಲಸಬೇಕು."

ಏವಮುಕ್ತೌ ಮಯಾ ಪಾರ್ಥ ತೌ ದೇವೌ ಕೃಷ್ಣಶಂಕರೌ ।
ಮಾಮೂಚತುಃ ಪ್ರಹೃಷ್ಟೌ ತೌ ನಿವಾಸಾರ್ಥಂ ಯುಧಿಷ್ಠಿರ ॥ ೧೨ ॥

ದೇವಾವೂಚತುಃ:—

ಅಸ್ಮಿನ್ ಸ್ಥಾನೇ ಸ್ಥಿತೌ ವಿದ್ಧಿ ಸಹದೇವೈಃ ಸವಾಸವೈಃ ।
ಏವಮುಕ್ತ್ವಾ ತತೋ ದೇವೌ ತತ್ರೈವಾಂತರಧೀಯತಾಂ ॥ ೧೩ ॥
ಅಹಂ ಚ ಸ್ಥಾಪಯಿತ್ವಾ ತೌ ಶಂಕರಂ ಕೃಷ್ಣಮವ್ಯಯಂ ।
ಕೃತಕೃತ್ಯಸ್ತತೋ ಜಾತಃ ಸಂಪೂಜ್ಯ ಸುಸಮಾಹಿತಃ ॥ ೧೪ ॥
ತಸ್ಮಿಂಸ್ತೀರ್ಥೇ ನರಃ ಸ್ನಾತ್ವಾ ಪೂಜಯೇತ್ಪರಮೇಶ್ವರಂ ।
ಮಾರ್ಕಂಡೇಶ್ವರನಾಮ್ನಾ ವೈ ವಿಷ್ಣುಂ ತ್ರಿಭುವನೇಶ್ವರಂ ॥ ೧೫ ॥
ಸ ಗಚ್ಛೇತ್ಪರಮಂ ಸ್ಥಾನಂ ವೈಷ್ಣವಂ ಶೈವಮೇವ ಚ ।
ಘೃತೇನ ಪಯಸಾ ವಾಽಥ ದಧ್ನಾ ಚ ಮಧುನಾ ತಥಾ ॥ ೧೬ ॥
ನಾರ್ಮದೇನೋದಕೇನಾಽಥ ಗಂಧಧೂಪೈಃ ಸುಶೋಭನೈಃ ।
ಪುಷ್ಪೋಪಹಾರೈಶ್ಚ ತಥಾ ನೈವೇದ್ಯೈರ್ನಿಯತಾತ್ಮವಾನ್ ॥ ೧೭ ॥

---

೧೨. ಯುಧಿಷ್ಠಿರನೆ! ಇಂತೆಂದು ವಿಜ್ಞಾಪನೆಯನ್ನು ಮಾಡಿಕೊಂಡ ನನಗೆ ಶಿವಕೃಷ್ಣರಿಬ್ಬರೂ ಸಂತೋಷಗೊಂಡು ನಿವಾಸದ ವಿಷಯವಾಗಿ ಇಂತೆಂದು ಹೇಳಿದರು.

೧೩. ದೇವತೆಗಳು ಹೇಳುತ್ತಾರೆ:—"ಅಯ್ಯಾ ಸಿದ್ಧನೆ! ನಾವು ದೇವತೆಗಳಿಂದಲೂ ಇಂದ್ರನಿಂದಲೂ ಸಹಿತರಾಗಿ ಈ ಸ್ಥಾನದಲ್ಲಿಯೇ ನೆಲಸಿರುವೆವು." ಇಂತೆಂದು ಅವರಿಬ್ಬರೂ ಅದೃಶ್ಯರಾದರು.

೧೪. ನಾನು ಸಹ ಸಮಾಧಾನಚಿತ್ತದಿಂದ ಅಲ್ಲಿ ಆ ವಿಷ್ಣುಮಹಾದೇವರನ್ನು ಪ್ರತಿಷ್ಠೆಗೊಳಿಸಿ ಪೂಜೆಯನ್ನು ಮಾಡಿ ಕೃತಕೃತ್ಯನಾದೆನು.

೧೫. ಆ ತೀರ್ಥದಲ್ಲಿ ಮಿಂದ ನರನು ಮಾರ್ಕಂಡೇಶ್ವರ ನಾಮಕನಾದ ಪರಮೇಶ್ವರನನ್ನೂ ತ್ರಿಲೋಕಗಳಿಗೆ ಅಧಿಪತಿಯಾದ ಮಹಾವಿಷ್ಣುವನ್ನೂ ಪೂಜೆ ಮಾಡಬೇಕು.

೧೬–೧೭. ಅವನು ವಿಷ್ಣುಲೋಕವನ್ನೊ ಶಿವಲೋಕವನ್ನೊ ಸೇರುವನು. ತುಪ್ಪ, ಹಾಲು, ಮೊಸರು, ಜೇನುತುಪ್ಪ ಅಥವಾ ನರ್ಮದೆಯ ನಿರ್ಮಲೋದಕಗಳಿಂದಲೂ ಅಭಿಷೇಕವನ್ನು ಮಾಡಿ ಪವಿತ್ರಗಳಾದ ಗಂಧಧೂಪಗಳಿಂದಲೂ, ಪುಷ್ಪಮಾಲ್ಯಾದಿಗಳಿಂದಲೂ, ನೈವೇದ್ಯಗಳಿಂದಲೂ ಸಂಯಮಿಯಾದವನು ಪೂಜೆಯನ್ನು ಮಾಡಬೇಕು.

ಏವಂ ವಿಷ್ಣೋಃ ಪ್ರಕುರ್ವೀತ ಜಾಗರಂ ಭಕ್ತಿತತ್ಪರಃ ।
ಸ್ನಾನಾದೀನಿ ತಥಾ ರಾಜನ್ ಪ್ರಯತಃ ಶುಚಿಮಾನಸಃ ॥ ೧೮ ॥
ಜ್ಯೇಷ್ಠೇ ಮಾಸಿ ಸಿತೇ ಪಕ್ಷೇ ಚತುರ್ದಶ್ಯಾಮುಪೋಷಿತಃ ।
ದ್ವಾದಶ್ಯಾಂ ಕಾರಯೇದ್ದೇವಪೂಜನಂ ವೈಷ್ಣವೋ ನರಃ ॥ ೧೯ ॥
ಏವಂ ಕೃತ್ವಾ ಚತುರ್ದಶ್ಯಾಮೇಕಾದಶ್ಯಾಂ ನರೋತ್ತಮ ।
ವೈಷ್ಣವಂ ಲೋಕಮಾಪ್ನೋತಿ ವಿಷ್ಣುತುಲ್ಯೋ ಭವೇನ್ನರಃ ॥ ೨೦ ॥
ಮಾಹೇಶ್ವರೇ ಚ ರಾಜೇಂದ್ರ ಗಣವನ್ಮೋದತೇ ಪುರೇ ।
ಶ್ರಾದ್ಧಂ ಚ ಕುರುತೇ ತತ್ರ ಪಿತೄನುದ್ದಿಶ್ಯ ಸುಸ್ಥಿರಃ ॥ ೨೧ ॥
ತಸ್ಯ ತೇ ಹ್ಯಕ್ಷಯಾಂ ತೃಪ್ತಿಂ ಪ್ರಾಪ್ನುವಂತಿ ನ ಸಂಶಯಃ ।
ನರ್ಮದಾಯಾಂ ದ್ವಿಜಃ ಸ್ನಾತ್ವಾ ಮೌನೀ ನಿಯತಮಾನಸಃ ॥ ೨೨ ॥
ಉಪಾಸ್ಯ ಸಂಧ್ಯಾಂ ತತ್ರಸ್ಥೋ ಜಪಂ ಕೃತ್ವಾ ಸುಶೋಭನಂ ।
ತರ್ಪಯಿತ್ವಾ ಪಿತೄನ್ದೇವಾನ್ಮನುಷ್ಯಾಂಶ್ಚ ಯಥಾವಿಧಿ ॥ ೨೩ ॥

---

೧೮. ಇಂತು ವಿಷ್ಣುವಿಗೂ ಪೂಜೆಯನ್ನು ಮಾಡಿ ಭಕ್ತಿಭರಿತನಾಗಿ ಜಾಗರಣೆಯನ್ನು ಆಚರಿಸಬೇಕು. ರಾಜೇಂದ್ರನೆ! ಹಾಗೆಯೇ ಪ್ರಯತ್ನ ದಿಂದಲೂ ಶುದ್ಧಾಂತಃಕರಣದಿಂದಲೂ ಸ್ನಾನಾದಿ ನಿತ್ಯಕರ್ಮಗಳನ್ನು ಮಾಡಿ ಕೊಳ್ಳಬೇಕು.

೧೯. ವಿಷ್ಣುಭಕ್ತನಾದ ಮಾನವನು ಜ್ಯೇಷ್ಠಮಾಸದ ಶುಕ್ಲಪಕ್ಷದ ಚತುರ್ದಶಿಯಲ್ಲಿ ಉಪವಾಸವನ್ನು ಮಾಡಬೇಕು. ದ್ವಾದಶಿಯ ದಿನ ದೇವ ಪೂಜೆಯನ್ನು ನೆರವೇರಿಸಬೇಕು.

೨೦. ಹೀಗೆ ಚತುರ್ದಶಿ ಮತ್ತು ಏಕಾದಶಿಯ ವ್ರತಗಳನ್ನು ಮಾಡಿದ ಮನುಷ್ಯನು ವೈಕುಂಠಲೋಕವನ್ನು ಸೇರಿ ವಿಷ್ಣುವಿಗೆ ಸಮಾನನೆನಿಸುವನು.

೨೧. ಮತ್ತು ಮಹೇಶ್ವರಭಕ್ತನು ಇದೇ ವ್ರತವನ್ನಾಚರಿಸಲು ಶಿವಪುರ ದಲ್ಲಿ ಶಿವಗಣಗಳಂತೆಯೆ ಆನಂದಿಸುವನು. ಅಲ್ಲಿ ಸ್ಥಿರಚಿತ್ತನಾಗಿ ಪಿತೃಗಳ ತೃಪ್ತಿಗಾಗಿ ಶ್ರಾದ್ಧವನ್ನು ಮಾಡಬೇಕು.

೨೨. ಆದರಿಂದ ಪಿತೃಗಳು ಅನಂತಕಾಲದವರೆಗೂ ತೃಪ್ತಿಯನ್ನು ಹೊಂದು ವುದರಲ್ಲಿ ಸಂಶಯವಿಲ್ಲ. ನರ್ಮದೆಯಲ್ಲಿ ಸ್ನಾನವನ್ನು ಮಾಡಿದ ಬ್ರಾಹ್ಮಣನು ಮೌನಿಯೂ, ಸಂಯತಮಾನಸನೂ ಆಗಿರಬೇಕು.

೨೩. ಅಲ್ಲಿಯೇ ಕುಳಿತು ಸಂಧ್ಯೋಪಾಸನೆಯನ್ನೂ, ಪರಮಪಾವನವಾದ ಗಾಯತ್ರಿಯ ಜಪವನ್ನೂ ಮುಗಸಿಕೊಂಡು ಪಿತೃಗಳಿಗೂ, ದೇವತೆಗಳಿಗೂ ಮನುಷ್ಯರಿಗೂ ಯಥಾವಿಧಿಯಾಗಿ ತರ್ಪಣಗಳನ್ನು ಕೊಡಬೇಕು.

ಕೃಷ್ಣಸ್ಯ ಪುರತಃ ಸ್ಥಿತ್ವಾ ಮಾರ್ಕಂಡೇಶಸ್ಯ ವಾ ಪುನಃ ।
ಋಗ್ಯಜುಃಸಾಮಮಂತ್ರಾಂಶ್ಚ ಜಪೇದತ್ರ ಪ್ರಯತ್ನತಃ ॥ ೨೪ ॥
ಋಚಮೇಕಾಂ ಜಪೇದ್ಯಸ್ತು ಋಗ್ವೇದಸ್ಯ ಫಲಂ ಲಭೇತ್ ।
ಯಜುರ್ವೇದಸ್ಯ ಯಜುಷಾ ಸಾಮ್ನಾ ಸಾಮಫಲಂ ಲಭೇತ್ ॥ ೨೫ ॥
ಏಕಸ್ಮಿನ್ಭೋಜಿತೇ ವಿಪ್ರೇ ಕೋಟಿರ್ಭವತಿ ಭೋಜಿತಾ ।
ಮೃತಪ್ರಜಾ ತು ಯಾ ನಾರೀ ವಂಧ್ಯಾ ಸ್ತ್ರೀ ಜನನೀ ತಥಾ ॥ ೨೬ ॥
ರುದ್ರಾಂಸ್ತು ವಿಧಿವಜ್ಜಪ್ತ್ವಾ ಬ್ರಾಹ್ಮಣೋ ವೇದತತ್ತ್ವವಿತ್ ।
ಲಿಂಗಸ್ಯ ದಕ್ಷಿಣೇ ಪಾರ್ಶ್ವೇ ಸ್ಥಾಪಯೇತ್ಕಲಶಂ ಶಿವಂ ॥ ೨೭ ॥
ರುದ್ರೈಕಾದಶಭಿರ್ಮಂತ್ರೈಃ ಸ್ನಾಪಯೇತ್ಕಲಶಾಂಭಸಾ ।
ಪುತ್ರಮಾಪ್ನೋತಿ ರಾಜೇಂದ್ರ ದೀರ್ಘಾಯುಷಮಕಲ್ಮಷಂ ॥ ೨೮ ॥
ಮಾರ್ಕಂಡೇಶ್ವರವೃಕ್ಷಾನ್ಯೋ ದೂರಸ್ಥಾನಪಿ ಪಶ್ಯತಿ ।
ಬ್ರಹ್ಮಹತ್ಯಾದಿ ಪಾಪೇಭ್ಯೋ ಮುಚ್ಯತೇ ಶಂಕರೋಽಬ್ರವೀತ್ ॥ ೨೯ ॥

---

೨೪. ಬಳಿಕ ಶ್ರೀಕೃಷ್ಣನ ಇದಿರಿನಲ್ಲೋ, ಮಾರ್ಕಂಡೇಶ್ವರನ ಸಮ್ಮುಖದಲ್ಲೋ ನಿಂತು ನಾಲ್ಕು ವೇದಗಳ ಮಂತ್ರಗಳನ್ನೂ ಸಾಧ್ಯವಾದಷ್ಟು ಜಪಿಸಬೇಕು.

೨೫. ಋಗ್ವೇದದ ಒಂದು ಋಕ್ಕನ್ನು ಪಠಿಸಿದರೂ, ಯಜುರ್ವೇದದ ಒಂದು ಯಜುಸ್ಸನ್ನು ಜಪಿಸಿದರೂ, ಸಾಮವೇದದ ಒಂದು ಸಾಮವನ್ನು ಹೇಳಿದರೂ ಸಮಗ್ರವೇದವನ್ನು ಪಠಿಸಿದ ಫಲವು ಲಭಿಸುವುದು.

೨೬. ಅಲ್ಲಿ ಒಬ್ಬ ಬ್ರಾಹ್ಮಣನಿಗೆ ಭೋಜನವನ್ನಿಟ್ಟರೂ, ಒಂದುಕೋಟಿ ಬ್ರಾಹ್ಮಣರಿಗೆ ಉಣಬಡಿಸಿದಂತಾಗುವುದು. ಹುಟ್ಟಿ ಸಾಯುವ ಮಕ್ಕಳನವಳೂ, ಬಂಜೆಯೂ, ಹೆಣ್ಣುಮಕ್ಕಳನ್ನೇ ಹೆರುವವಳೂ ಈ ಕೆಲಸವನ್ನು ಮಾಡಬೇಕು.

೨೭. ವೇದಗಳ ರಹಸ್ಯಾರ್ಥಗಳನ್ನರಿತ ಬ್ರಾಹ್ಮಣನು ವಿಧಿವಿಹಿತವಾಗಿ ರುದ್ರಾಧ್ಯಾಯದ ಮಂತ್ರಗಳನ್ನು ಜಪಿಸಿ ಮಾರ್ಕಂಡೇಶ್ವರಲಿಂಗದ ದಕ್ಷಿಣ ದಿಕ್ಕಿನಲ್ಲಿ ಮಂಗಳಕರವಾದ ಕಳಶವೊಂದನ್ನು ಸ್ಥಾಪಿಸಬೇಕು.

೨೮. ರುದ್ರಾಧ್ಯಾಯದ ಹನ್ನೊಂದು ಅನುವಾಕಗಳನ್ನು ಜಪಿಸುತ್ತ ಆ ಕಳಶದ ಉದಕದಿಂದ ಅಭಿಷೇಕವನ್ನು ಮಾಡಬೇಕು. ರಾಜೇಂದ್ರನೆ! ಅಂತು ಮಾಡಿದ ಬ್ರಾಹ್ಮಣನು ದೀರ್ಘಾಯುಷ್ಯವಂತನೂ ನಿಷ್ಕಲ್ಮಷನೂ ಆದ ಪುತ್ರನನ್ನು ಪಡೆಯುವನು.

೨೯. ಮಾರ್ಕಂಡೇಶ್ವರತೀರ್ಥದ ವೃಕ್ಷಗಳನ್ನು ಯಾವನು ದೂರದಿಂದಲಾದರೂ ನೋಡುವನೊ, ಆವನೂ ಬ್ರಹ್ಮಹತ್ಯಾದಿ ಮಹಾ ಪಾತಕಗಳಿಂದಲೂ ಮುಕ್ತನಾಗುವನೆಂದು ಶಿವನು ಹೇಳಿರುವನು.

ಯ ಇದಂ ಶೃಣುಯಾದ್ಭಕ್ತ್ಯಾ ಪಠೇದ್ವಾ ನೃಪಸತ್ತಮ ।
ಸರ್ವಪಾಪವಿಶುದ್ಧಾತ್ಮಾ ಜಾಯತೇ ನಾಽತ್ರ ಸಂಶಯಃ ॥ ೩೦ ॥
ಇದಂ ಯಶಸ್ಯಮಾಯುಷ್ಯಂ ಧನ್ಯಂ ದುಃಸ್ವಪ್ನನಾಶನಂ ।
ಪಠತಾಂ ಶೃಣ್ವತಾಂ ನಾಽಪಿ ಸರ್ವಪಾಪಪ್ರಮೋಚನಂ ॥ ೩೧ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ
ಪಂಚಮೇ ಆವಂತ್ಯಖಂಡೇ ತೃತೀಯೇ ರೇವಾಖಂಡೇ
"ಮಾರ್ಕಂಡೇಶ್ವರತೀರ್ಥಮಾಹಾತ್ಮ್ಯವರ್ಣನಂ"
ನಾಮ ಸಪ್ತಷಷ್ಟ್ಯುತ್ತರಶತತಮೋಽಧ್ಯಾಯಃ

---

೩೦. ರಾಜಸತ್ತಮನೆ! ಯಾವನು ಈ ಅಧ್ಯಾಯವನ್ನು ಭಕ್ತಿಯಿಂದ ಪಠಿಸುವನೊ, ಅಥವಾ ಕೇಳುವನೊ, ಅವನೂ ಸಕಲ ಪಾಪಗಳನ್ನು ಕಳೆದುಕೊಂಡು ಶುದ್ಧನಾಗುವುದರಲ್ಲಿ ಸಂಶಯವಿಲ್ಲ.

೩೧. ಈ ಅಧ್ಯಾಯವು ಓದುವವರಿಗೂ ಕೇಳುವವರಿಗೂ ಯಶಸ್ಸನ್ನೂ, ಆಯುಷ್ಯವನ್ನೂ, ಧನವನ್ನೂ ಕೊಡುವುದು. ದುಷ್ಟಸ್ವಪ್ನಗಳನ್ನೂ ನಾಶಮಾಡಿ ಸಕಲ ಪಾತಕಗಳಿಂದಲೂ ಬಿಡುಗಡೆಯನ್ನು ಮಾಡಿಸುವುದು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ
ಶ್ರೀ ಸ್ಕಾಂದಮಹಾಪುರಾಣದ ಐದನೆಯ ಆವಂತ್ಯಖಂಡದ ಮೂರನೆಯ ರೇವಾಖಂಡದಲ್ಲಿ
"ಮಾರ್ಕಂಡೇಶ್ವರತೀರ್ಥಮಾಹಾತ್ಮ್ಯವರ್ಣನ" ವೆಂಬ
ನೂರರವತ್ತೇಳನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

# ಅಥಾಷ್ಟಷಷ್ಟ್ಯುತ್ತರಶತತಮೋಽಧ್ಯಾಯಃ

## ಅಂಕೂರೇಶ್ವರತೀರ್ಥಮಾಹಾತ್ಮ್ಯವರ್ಣನಂ

**ಶ್ರೀ ಮಾರ್ಕಂಡೇಯ ಉವಾಚ:—**

**ನರ್ಮದಾದಕ್ಷಿಣೇ ರೋಧಸ್ಯಂಕೂರೇಶ್ವರಮುತ್ತಮಂ ।**
**ತೀರ್ಥಂ ಸರ್ವಗುಣೋಪೇತಂ ತ್ರಿಷು ಲೋಕೇಷು ವಿಶ್ರುತಂ ॥ ೧ ॥**
**ಯತ್ರ ಸಿದ್ಧಂ ಮಹಾರಕ್ಷ ಆರಾಧ್ಯ ತು ಮಹೇಶ್ವರಂ ।**
**ಶಂಕರಂ ಜಗತಃ ಪ್ರಾಣಂ ಸ್ಮೃತಿಮಾತ್ರಾಽಘಹಾರಿಣಂ ॥ ೨ ॥**

ಯುಧಿಷ್ಠಿರ ಉವಾಚ:—

**ಕಿಂ ತದ್ರಕ್ಷೋ ದ್ವಿಜಶ್ರೇಷ್ಠ ಕಿಂ ನಾಮ ಕಸ್ಯ ವಾಽನ್ವಯೇ ।**
**ಏತದ್ವಿಸ್ತರತಃ ಸರ್ವಂ ಕಥಯಸ್ವ ಮಮಾಽನಘ ॥ ೩ ॥**
**ಅಜ್ಞಾನತಿಮಿರಾಂಧಾ ಯೇ ಪುಮಾಂಸಃ ಪಾಪಕಾರಿಣಃ ।**
**ಯುಷ್ಮದ್ವಿಧೈರ್ದೀಪಭೂತೈಃ ಪಶ್ಯಂತಿ ಸಚರಾಚರಂ ॥ ೪ ॥**

---

### ಕನ್ನಡದ ಅನುವಾದ

#### ಅಂಕೂರೇಶ್ವರತೀರ್ಥಮಾಹಾತ್ಮ್ಯವರ್ಣನ

೧. ಮಾರ್ಕಂಡೇಯನು ಹೇಳುತ್ತಾನೆ:—ನರ್ಮದೆಯ ದಕ್ಷಿಣದ ದಡದಲ್ಲಿ ಉತ್ತಮವೂ, ಸಕಲಗುಣಸಂಪನ್ನವೂ, ಮೂರು ಲೋಕಗಳಲ್ಲಿಯೂ ಪ್ರಖ್ಯಾತವೂ ಆದ ಅಂಕೂರೇಶ್ವರವೆಂಬ ತೀರ್ಥವಿರುವುದು.

೨. ಸುಖಪ್ರದನೂ, ಲೋಕಕ್ಕೆ ಪ್ರಾಣನೂ, ಸ್ಮರಿಸಿದ ಮಾತ್ರದಿಂದಲೇ ಪಾತಕಗಳನ್ನು ಪರಿಹರಿಸುವವನೂ ಆದ ಮಹಾದೇವನನ್ನು ಅಲ್ಲಿ ಪೂಜಿಸಿ ರಾಕ್ಷಸನೊಬ್ಬನು ಸಿದ್ಧಿಯನ್ನು ಪಡೆದನು.

೩. ಯುಧಿಷ್ಠಿರನು ಹೇಳುತ್ತಾನೆ:—ಬ್ರಾಹ್ಮಣಶ್ರೇಷ್ಠನೆ! ಆ ರಾಕ್ಷಸನು ಯಾರು? ಆವನ ಹೆಸರೇನು? ಅವನು ಯಾವ ಕುಲದವನು? ಇದೆಲ್ಲವನ್ನೂ ವಿಸ್ತಾರವಾಗಿ ನನಗೆ ತಿಳಿಸು.

೪. ಪಾಪಕರ್ಮಿಗಳಾಗಿ ಅಜ್ಞಾನವೆಂಬ ಅಂಧಕಾರದಿಂದ ಕಣ್ಣುಗಾಣದ ಮನುಜರು ದೀಪಗಳಂತಿರುವ ನಿಮ್ಮಂತಹವರ ಸಹಾಯದಿಂದ ಚರಾಚರಾತ್ಮಕವಾದ ಪ್ರಪಂಚವನ್ನು ತಿಳಿಯುವರು.

**ಧರ್ಮಪುತ್ರವಚಃ ಶ್ರುತ್ವಾ ಮಾರ್ಕಂಡೇಯೋ ಮುನೀಶ್ವರಃ ।**
**ಸ್ಮಿತಂ ಕೃತ್ವಾ ಬಭಾಷೇ ತಾಂ ಕಥಾಂ ಪಾಪಪ್ರಣಾಶನೀಂ ॥ ೫ ॥**

**ಮಾರ್ಕಂಡೇಯ ಉವಾಚ:—**

**ಮಾನಸೋ ಬ್ರಹ್ಮಣಃ ಪುತ್ರಃ ಪುಲಸ್ತ್ಯೋ ನಾಮ ಪಾರ್ಥಿವ ।**
**ವೇದಶಾಸ್ತ್ರಪ್ರವಕ್ತಾ ಚ ಸಾಕ್ಷಾದ್ವೇಧಾ ಇವಾಽಪರಃ ॥ ೬ ॥**
**ತೃಣಬಿಂದುಸುತಾ ತಸ್ಯ ಭಾರ್ಯಾಽಽಸೀತ್ಪರಮೇಷ್ಠಿನಃ ।**
**ತಸ್ಯ ಧರ್ಮಪ್ರಸಂಗೇನ ಪುತ್ರೋ ಜಾತೋ ಮಹಾಮನಾಃ ॥ ೭ ॥**
**ಯಸ್ಮಾದ್ವೇದೇತಿಹಾಸೈಶ್ಚ ಸಷಡಂಗಪದಕ್ರಮಾಃ ।**
**ವಿಶ್ರಾಂತಾ ಬ್ರಹ್ಮಣಾ ದತ್ತಾ ನಾಮ ವಿಶ್ರವಸೇತಿ ಚ ॥ ೮ ॥**
**ಕಸ್ಮಿಂಶ್ಚಿದಥ ಕಾಲೇ ಚ ಭರದ್ವಾಜೋ ಮಹಾಮುನಿಃ ।**
**ಸ್ವಸುತಾಂ ಪ್ರದದೌ ರಾಜನ್ಮುದಾ ವಿಶ್ರವಸೇ ನೃಪ ॥ ೯ ॥**
**ಸ ತಯಾ ರಮತೇ ಸಾರ್ಧಂ ಪೌಲೋಮ್ಯಾ ಮಘವಾ ಇವ ।**
**ಮುದಾ ಪರಮಯಾ ರಾಜನ್ಬ್ರಾಹ್ಮಣೋ ವೇದವಿತ್ತಮಃ ॥ ೧೦ ॥**

---

೫. ಧರ್ಮಪುತ್ರನ ಮಾತನ್ನು ಕೇಳಿ ಮುನಿವರ್ಯನಾದ ಮಾರ್ಕಂಡೇಯನು ಮುಗುಳ್ನಗೆಯನ್ನು ಬೀರಿ ಪಾಪನಾಶಕವಾದ ಆ ಕಥೆಯನ್ನು ಹೇಳಲುಪಕ್ರಮಿಸಿದನು.

೬. ಮಾರ್ಕಂಡೇಯನು ಹೇಳುತ್ತಾನೆ:—ಮಹಾರಾಜನೆ! ಚತುರ್ಮುಖ ಬ್ರಹ್ಮನಿಗೆ ಪುಲಸ್ತ್ಯನೆಂಬ ಹೆಸರಿನ ಮಾನಸ ಪುತ್ರನೊಬ್ಬನಿದ್ದನು. ಆತನು ವೇದ ಶಾಸ್ತ್ರಗಳಲ್ಲಿ ಪ್ರವೀಣನಾಗಿ ಎರಡನೆಯ ಬ್ರಹ್ಮನೆನಿಸಿದ್ದನು.

೭. ಆ ಪುಲಸ್ತ್ಯಬ್ರಹ್ಮನಿಗೆ ತೃಣಬಿಂದುಮಹರ್ಷಿಯ ಮಗಳು ಪತ್ನಿಯಾದಳು. ಆತನು ಧರ್ಮಕಾರ್ಯಗಳಲ್ಲಿ ನಿರತನಾಗಿರಲು ಮಹಾಮತಿಯಾದ ಪುತ್ರನೊಬ್ಬನಾದನು.

೮. ಷಡಂಗಗಳನ್ನೂ, ಪದಕ್ರಮಪಾಠಗಳ ಸಹಿತವಾದ ವೇದರಾಶಿಯನ್ನೂ, ಇತಿಹಾಸಗಳನ್ನೂ ಕೊಟ್ಟು ಬ್ರಹ್ಮನು ಆತನನ್ನು ವಿಶ್ರಾಂತಿಸ್ಥಾನವನ್ನಾಗಿ ಮಾಡಿದುದರಿಂದ ಆತನಿಗೆ ವಿಶ್ರವಸ್ಸೆಂದೇ ಹೆಸರಾಯಿತು.

೯. ರಾಜನೆ! ಹೀಗೆ ಕೆಲವು ಕಾಲವು ಕಳೆಯಲು ಭರದ್ವಾಜನೆಂಬ ಮಹರ್ಷಿಯೊಬ್ಬನು ಆ ವಿಶ್ರವಸ್ಸಿಗೆ ಸಂತೋಷದಿಂದ ತನ್ನ ಮಗಳನ್ನು ಮದುವೆಮಾಡಿಕೊಟ್ಟನು.

೧೦. ಧರ್ಮರಾಜನೆ! ವೇದಜ್ಞರಲ್ಲಿ ಶ್ರೇಷ್ಠನಾದ ಆತನು ಪರಮಾನಂದದಿಂದ ಆಕೆಯೊಡನೆ ಇಂದ್ರನು ಶಚೀದೇವಿಯೊಡನೆ ಎಂತೋ ಅಂತು ರಮಿಸುತ್ತಿದ್ದನು.

ಕೇನಚಿತ್ತ್ವಥ ಕಾಲೇನ ಪುತ್ರಃ ಪುತ್ರಗುಣೈರ್ಯುತಃ ।
ಜಜ್ಞೇ ವಿಶ್ರವಸೋ ರಾಜನ್ನಾಮ್ನಾ ವೈಶ್ರವಣಃ ಶ್ರುತಃ ॥ ೧೧ ॥
ಸೋಽಪಿ ಮೌನವ್ರತಂ ಕೃತ್ವಾ ಬಾಲಭಾವಾದ್ಯುಧಿಷ್ಠಿರ ।
ಸರ್ವಭೂತಾಽಭಯಂ ದತ್ವಾ ಚಚಾರ ಪರಮಂ ವ್ರತಂ ॥ ೧೨ ॥
ತಸ್ಯ ತುಷ್ಟೋ ಮಹಾದೇವೋ ಬ್ರಹ್ಮಾ ಬ್ರಹ್ಮರ್ಷಿಭಿಃ ಸಹ ।
ಸಖಿತ್ವಂ ಚೇಶ್ವರೋ ದತ್ವಾ ಧನದತ್ವಂ ಜಗಾಮಹ ॥ ೧೩ ॥
ಯಮೇಂದ್ರವರುಣಾನಾಂ ಚ ಚತುರ್ಥಸ್ತ್ವಂ ಭವಿಷ್ಯಸಿ ।
ಬ್ರಹ್ಮಾಽಪ್ಯುಕ್ತ್ವಾ ಜಗಾಮಾಶು ಲೋಕಪಾಲತ್ವಮಾಪ್ಸಿತಂ ॥ ೧೪ ॥
ತತಸ್ತ್ವನಂತರೇ ಕಾಲೇ ಕೈಕಸೀ ನಾಮ ರಾಕ್ಷಸೀ ।
ಪಾತಾಲಂ ಭೂತಲಂ ತ್ಯಕ್ತ್ವಾ ವಿಶ್ರವಂ ಚಕಮೇ ಪತಿಂ ॥ ೧೫ ॥
ಪುತ್ರೋಽಥ ರಾವಣೋ ಜಾತಸ್ತಸ್ಯಾ ಭರತಸತ್ತಮ ।
ಕುಂಭಕರ್ಣೋ ಮಹಾರಕ್ಷೋ ಧರ್ಮಾತ್ಮಾ ಚ ವಿಭೀಷಣಃ ॥ ೧೬ ॥

---

೧೧. ಸ್ವಲ್ಪಕಾಲದ ಮೇಲೆ ವಿಶ್ರವಸ್ಸಿಗೆ ಸಕಲಸದ್ಗುಣಗಳಿಂದಲೂ ಕೂಡಿದ ವೈಶ್ರವಣನೆಂಬ ಪ್ರಖ್ಯಾತನಾದ ಪುತ್ರನು ಉಂಟಾದನು.

೧೨. ಯುಧಿಷ್ಠಿರನೆ! ಆತನು ಬಾಲ್ಯಾವಸ್ಥೆಯಲ್ಲಿರುವಾಗಲೇ ಮೌನ ವ್ರತವನ್ನವಲಂಬಿಸಿ ಸಮಸ್ತಭೂತಗಳಿಗೂ ಅಭಯವನ್ನಿತ್ತು ಮಹಾ ತಪಸ್ಸ ನ್ನಾಚರಿಸುತ್ತಿದ್ದನು.

೧೩. ಮಹಾದೇವನಾದ ಈಶ್ವರನೂ, ಬ್ರಹ್ಮರ್ಷಿಗಳೊಡನೆ ಬ್ರಹ್ಮದೇವನೂ ಆತನ ತಪಸ್ಸಿನಿಂದ ಸಂತುಷ್ಟರಾದರು. ಈಶ್ವರನು ಆತನಿಗೆ ತನ್ನ ಸ್ನೇಹವನ್ನೂ, ನವನಿಧಿಗಳ ಆಧಿಪತ್ಯವನ್ನೂ ಕೊಟ್ಟು ಹೊರಟುಹೋದನು.

೧೪. ಬ್ರಹ್ಮದೇವನೂ ಆತನ ಮನೋಭೀಷ್ಟವಾದ ಲೋಕಪಾಲಪದವಿ ಯನ್ನಿತ್ತು, "ಯಮ, ಇಂದ್ರ, ವರುಣರಂತೆ ನೀನೂ ನಾಲ್ಕನೆಯ ದಿಕ್ಕಿಗೆ ಅಧಿಪತಿಯಾಗುವೆ" ಎಂದು ಹೇಳಿ ತನ್ನ ಲೋಕಕ್ಕೆ ಪ್ರಯಾಣವನ್ನು ಮಾಡಿದನು.

೧೫. ಬಳಿಕ ಕೆಲವು ಕಾಲದಮೇಲೆ ಕೈಕಸಿಯೆಂಬ ರಾಕ್ಷಸಸ್ತ್ರೀಯೊಬ್ಬಳು ಭೂಲೋಕ ಪಾತಾಳಲೋಕಗಳನ್ನು ಹುಡುಕಿ ಎಲ್ಲರನ್ನೂ ತ್ಯಜಿಸಿ ಆ ವಿಶ್ರವಸ್ಸನ್ನೇ ಪತಿಯನ್ನಾಗಿ ವರಿಸಿದಳು.

೧೬. ಭರತಕುಲಸತ್ತಮನೆ! ಆಕೆಗೆ ರಾವಣನೆಂಬ ಪುತ್ರನೊಬ್ಬನು ಹುಟ್ಟಿದನು. ಬಳಿಕ ಕುಂಭಕರ್ಣನೆಂಬ ಮಹಾ ರಾಕ್ಷಸನೂ ಮಹಾ ಧರ್ಮ ನಿಷ್ಠನಾದ ವಿಭೀಷಣನೂ ಹುಟ್ಟಿದರು.

ಕುಂಭಶ್ಚೈವ ನಿಕುಂಭಶ್ಚ ಕುಂಭಕರ್ಣಸುತಾವುಭೌ ।
ಮಹಾಬಲೌ ಮಹಾವೀರ್ಯೌ ಮಹಾಂತೌ ಪುರುಷೋತ್ತಮ ॥ ೧೭ ॥
ಅಂಕೂರೋ ರಾಕ್ಷಸಶ್ರೇಷ್ಠಃ ಕುಂಭಸ್ಯ ತನಯೋ ಮಹಾನ್ ।
ವಿಭೀಷಣಂ ಚ ಗುಣವದ್ದೃಷ್ಟ್ವೈವಂ ರಾಕ್ಷಸೋತ್ತಮಃ ॥ ೧೮ ॥
ತತಃ ಸ ಯೌವನಂ ಪ್ರಾಪ್ಯ ಜ್ಞಾತ್ವಾ ರಕ್ಷಃಪಿತಾಮಹಂ ।
ಪರಂ ನಿರ್ವೇದಮಾಪನ್ನಶ್ಚಚಾರ ಸುಮಹತ್ತಪಃ ॥ ೧೯ ॥
ದಕ್ಷಿಣಂ ಪಶ್ಚಿಮಂ ಗತ್ವಾ ಸಾಗರಂ ಪೂರ್ವಮುತ್ತರಂ ।
ನರ್ಮದಾಯಾಂ ಪ್ರಸಂಗೇನ ಹ್ಯಂಕೂರೋ ರಾಕ್ಷಸೇಶ್ವರಃ ॥ ೨೦ ॥
ತಪಶ್ಚಚಾರ ಸುಮಹದ್ದಿವ್ಯಂ ವರ್ಷಶತಂ ಕಿಲ ।
ತತಸ್ತುಷ್ಟೋ ಮಹಾದೇವಃ ಸಾಕ್ಷಾತ್ತ್ರಿಪುರಂಜಯಃ ॥ ೨೧ ॥
ವರೇಣ ಛಂದಯಾಮಾಸ ರಾಕ್ಷಸಂ ವೃಷಕೇತನಃ ।
ವರಂ ವೃಣೀಷ್ವ ಭದ್ರಂ ತೇ ತವ ದಾಸ್ಯಾಮಿ ಸುವ್ರತ ॥ ೨೨ ॥

---

೧೭. ಕುಂಭಕರ್ಣನಿಗೆ ಕುಂಭ, ನಿಕುಂಭರೆಂಬ ಇಬ್ಬರು ಪುತ್ರರು ಜನಿಸಿದರು. ರಾಜೇಂದ್ರನೆ! ಅವರು ಮಹಾಪರಾಕ್ರಮಿಗಳೂ, ಬಲಶಾಲಿಗಳೂ, ಯುದ್ಧದಲ್ಲಿ ಮಹತ್ಪರಿಣಾಮದವರೂ ಆಗಿದ್ದರು.

೧೮. ರಾಕ್ಷಸಶ್ರೇಷ್ಠನೂ, ಮಹಾತ್ಮನೂ ಆದ ಅಂಕೂರನೆಂಬುವನು ಕುಂಭನಿಗೆ ಮಗನು. ಆ ರಾಕ್ಷಸೋತ್ತಮನು ವಿಭೀಷಣನು ಗುಣವಂತನಾಗಿದ್ದುದನ್ನು ನೋಡುತ್ತಿದ್ದನು.

೧೯. ಯೌವನವಂತನಾದಮೇಲೆ ತನ್ನ ಪಿತಾಮಹನು ರಾಕ್ಷಸಪ್ರವೃತ್ತಿಯವನಾಗಿರುವುದನ್ನು ಕಂಡು ಬಹಳವಾದ ಜುಗುಪ್ಸೆಯನ್ನು ಹೊಂದಿ ದೀರ್ಘವಾದ ತಪಸ್ಸನ್ನಾಚರಿಸಿದನು.

೨೦. ಪೂರ್ವ, ಪಶ್ಚಿಮ, ಉತ್ತರ, ದಕ್ಷಿಣ ಸಮುದ್ರ ಪ್ರದೇಶಗಳೆಲ್ಲವನ್ನೂ ನೋಡಿಕೊಂಡು ಅಂಕೂರನೆಂಬ ರಾಕ್ಷಸೇಂದ್ರನು ಪ್ರಸಂಗವಶದಿಂದ ನರ್ಮದೆಯನ್ನು ಬಂದು ಸೇರಿದನು.

೨೧. ದೇವಮಾನದಿಂದ ಒಂದು ನೂರು ವರ್ಷಗಳಕಾಲ ಮಹತ್ತರವಾದ ತಪಸ್ಸನ್ನು ಮಾಡಲು ಶತ್ರುಪುರನಾಶಕನಾದ ಮಹಾದೇವನು ಸಂತುಷ್ಟನಾಗಿ ಎದುರಿಗೆ ಕಾಣಿಸಿಕೊಂಡನು.

೨೨. ವೃಷಭವಾಹನನಾದ ಆತನು ರಾಕ್ಷಸನನ್ನು ವರಪ್ರಪಾನದಿಂದ ಪ್ರಲೋಭಿಸಿ "ಎಲೈ ಸುವ್ರತನೆ! ನಿನಗೆ ಬೇಕಾದುದನ್ನು ಕೇಳಿಕೋ ಕೊಡುವೆನು" ಎಂದು ಹೇಳಿದನು.

**ಪ್ರೋವಾಚ ರಾಕ್ಷಸೋ ವಾಕ್ಯಂ ದೇವದೇವಂ ಮಹೇಶ್ವರಂ ।**
**ವರದಂ ಸೋಽಗ್ರತೋ ದೃಷ್ಟ್ವಾ ಪ್ರಣಮ್ಯ ಚ ಪುನಃ ಪುನಃ ॥ ೨೩ ॥**
**ಯದಿ ತುಷ್ಟೋ ಮಹಾದೇವ ವರದೋಽಸಿ ಸುರೇಶ್ವರ ।**
**ದುರ್ಲಭಂ ಸರ್ವಭೂತಾನಾಮಮರತ್ವಂ ಪ್ರಯಚ್ಛ ಮೇ ॥ ೨೪ ॥**
**ಮಮ ನಾಮ್ನಾ ಸ್ಥಿತೋಽನೇನ ವರೇಣ ತ್ರಿಪುರಾಂತಕ ।**
**ಸದಾ ಸನ್ನಿಹಿತೋಽಪ್ಯತ್ರ ತೀರ್ಥೇ ಭವಿತುಮರ್ಹಸಿ ॥ ೨೫ ॥**

**ಈಶ್ವರ ಉವಾಚ:—**

**ಯಾವದ್ವಿಭೀಷಣಮತಂ ಯಾವದ್ಧರ್ಮನಿಷೇವಣಂ ।**
**ಕರಿಷ್ಯಸಿ ದೃಢಾತ್ಮಾ ತ್ವಂ ತಾವದೇತದ್ಭವಿಷ್ಯತಿ ॥ ೨೬ ॥**
**ಏವಮುಕ್ತ್ವಾ ಯಯೌ ದೇವಃ ಸರ್ವದೈವತಪೂಜಿತಃ ।**
**ವಿಮಾನೇನಾಽರ್ಕವರ್ಣೇನ ಕೈಲಾಸಂ ಧರಣೀಧರಂ ॥ ೨೭ ॥**
**ಗತೇ ಚಾದರ್ಶನಂ ದೇವೇ ಸ್ನಾತ್ವಾಚಮ್ಯ ವಿಧಾನತಃ ।**
**ಸ್ಥಾಪಯಾಮಾಸ ರಾಜೇಂದ್ರ ಹ್ಯಂಕೂರೇಶ್ವರಮುತ್ತಮಂ ॥ ೨೮ ॥**

೨೩. ಇಂತು ವರಪ್ರದನಾಗಿ ಮುಂದೆ ಬಂದು ನಿಂತಿರುವ ಮಹೇಶ್ವರನಿಗೆ ಮತ್ತೆ ಮತ್ತೆ ನಮಸ್ಕರಿಸಿ ಅಂಕೂರನು ದೇವದೇವನಾದ ಆತನಿಗೆ ವಿಜ್ಞಾಪಿಸಿಕೊಂಡನು.

೨೪. ಮಹಾದೇವನೆ! ದೇವಾಧಿದೇವನೆ! ನೀನು ನನ್ನ ತಪಸ್ಸಿನಿಂದ ಸಂತುಷ್ಟನಾಗಿ ವರವನ್ನು ಕೊಡುವೆಯಾದರೆ ಸಮಸ್ತ ಪ್ರಾಣಿಗಳಿಗೂ ದುರ್ಲಭವಾದ ಅಮರಪದವಿಯನ್ನು ನನಗೆ ದಯಪಾಲಿಸು.

೨೫. ತ್ರಿಪುರಾಂತಕನೆ! ಈ ವರದ ಫಲವಾಗಿ ನೀನು ನನ್ನ ಹೆಸರಿನಿಂದಲೇ ಈ ತೀರ್ಥದಲ್ಲಿ ಯಾವಾಗಲೂ ಸನ್ನಿಹಿತವಾಗಿರಬೇಕು.

೨೬. ಈಶ್ವರನು ಹೇಳುತ್ತಾನೆ:—ವಿಭೀಷಣನ ಮತವನ್ನು ತಿಳಿದು ಅದರಂತೆ ನೀನು ಎಲ್ಲಿಯವರೆಗೂ ದೃಢವಾದ ಮನಸ್ಸಿನಿಂದ ಧರ್ಮವನ್ನಾಚರಿಸುತ್ತಿರುವೆಯೊ, ಅಲ್ಲಿಯವರೆಗೂ ನಿನ್ನ ಅಭಿಲಾಷೆಯು ನೆರವೇರುವುದು.

೨೭. ಇಂತೆಂದು ನುಡಿದು ಸಮಸ್ತದೇವತೆಗಳ ಪೂಜೆಯನ್ನು ಕೈಕೊಂಡು ಸೂರ್ಯತೇಜ ವಿಮಾನದಲ್ಲಿ ಕುಳಿತು ಕೈಲಾಸಪರ್ವತಕ್ಕೆ ಮಹೇಶ್ವರನು ಹೊರಟುಹೋದನು.

೨೮. ರಾಜೇಂದ್ರನೆ! ಆ ದೇವದೇವನು ಅದೃಶ್ಯನಾಗಲು ಆತನು ಸ್ನಾನಾಚಮನಗಳನ್ನು ಮಾಡಿ ವಿಧಿವಿಹಿತರೀತಿಯಿಂದ ಉತ್ತಮವಾದ ಅಂಕೂರೇಶ್ವರ ಲಿಂಗವನ್ನು ಪ್ರತಿಷ್ಠಿಸಿದನು.

ಗಂಧಪುಷ್ಪೈಸ್ತಥಾ ಧೂಪೈರ್ವಸ್ತ್ರಾಲಂಕಾರಭೂಷಣೈಃ ।
ಪತಾಕೈಶ್ಚಾಮರೈಶ್ಛತ್ರೈರ್ಜಯಶಬ್ದಾದಿಮಂಗಲೈಃ ॥ ೨೯ ॥
ಪೂಜಯಿತ್ವಾ ಸುರೇಶಾನಂ ಸ್ತೋತ್ರೈರ್ಹೃದ್ಯೈಃ ಸುಪುಷ್ಕಲೈಃ ।
ಜಗಾಮ ಭವನಂ ರಕ್ಷೋ ಯತ್ರ ರಾಜಾ ವಿಭೀಷಣಃ ॥ ೩೦ ॥
ಪೂಜಿತಃ ಸ ಯಥಾನ್ಯಾಯಂ ದಾನಸನ್ಮಾನಗೌರವೈಃ ।
ಸೌದರ್ಯೇ ಸ್ಥಾಪಿತೋ ಭಾವೇ ಸೋಽವಾತ್ಸೀತ್ಪರಯಾ ಮುದಾ ॥೩೧॥
ತತ್ರ ತೀರ್ಥೇ ತು ಯಃ ಸ್ನಾತ್ವಾ ಪೂಜಯೇತ್ಪರಮೇಶ್ವರಂ ।
ಅಂಕೂರೇಶ್ವರನಾಮಾನಂ ಸೋಽಶ್ವಮೇಧಫಲಂ ಲಭೇತ್ ॥ ೩೨ ॥
ಮಾಂಡವ್ಯಖಾತಮಾರಭ್ಯ ಸಂಗಮಂ ವಾಽಪಿ ಯಚ್ಛುಭಂ ।
ರೇವಾಯಾ ಆಮಲಕ್ಯಾಶ್ಚ ದೇವಕ್ಷೇತ್ರಂ ಮಹೇಶ್ವರಂ ॥ ೩೩ ॥
ಮಾಂಡವ್ಯಖಾತಾತ್ಪಶ್ಚಿಮತಸ್ತೀರ್ಥಂ ತದಂಕೂರೇಶ್ವರಂ ।
ತತ್ರ ತೀರ್ಥೇ ನರಃ ಸ್ನಾತ್ವಾ ಶುಚಿಃ ಪ್ರಯತಮಾನಸಃ ।
ಸಂಧ್ಯಾಮಾಚಮ್ಯ ಯತ್ನೇನ ಜಪಂ ಕೃತ್ವಾಽಥ ಭಾರತ ॥ ೩೪ ॥

---

೨೯. ಗಂಧಪುಷ್ಪಧೂಪಗಳು, ವಸ್ತ್ರಗಳು, ಅಲಂಕಾರಗಳು, ಆಭರಣಗಳು, ಪತಾಕೆಗಳು, ಛತ್ರಚಾಮರಗಳು, ಮಂಗಳವಾದ್ಯಗಳು, ಜಯಕಾರಗಳು ಮುಂತಾದುವುಗಳಿಂದ ಆ ಪರಮೇಶ್ವರನನ್ನು ಪೂಜಿಸಿದನು.

೩೦. ಇಂತು ಹೃದ್ಯಗಳೂ, ದೀರ್ಘಗಳೂ ಆದ ಸ್ತೋತ್ರಗಳಿಂದ ಸುರೇಶ್ವರನನ್ನು ಪೂಜಿಸಿ ಆ ರಾಕ್ಷಸೇಂದ್ರನು ರಾಜನಾದ ವಿಭೀಷಣನಿದ್ದಲ್ಲಿಗೆ ಹೊರಟು ಬಂದನು.

೩೧. ವಿಭೀಷಣನೂ ಆತನನ್ನು ದಾನ, ಮಾನ, ಗೌರವಗಳಿಂದ ಉಚಿತವಾಗಿ ಸತ್ಕರಿಸಿ ಕರೆದುಕೊಂಡು ಸೋದರಪ್ರೀತಿಯಿಂದ ನೋಡುತ್ತಿರಲು ಅಲ್ಲಿಯೇ ಆತನು ಅತ್ಯಂತ ಸಂತೋಷದಿಂದ ವಾಸಮಾಡಿಕೊಂಡಿದ್ದನು.

೩೨. ಆ ತೀರ್ಥದಲ್ಲಿ ಸ್ನಾನವನ್ನು ಮಾಡಿಕೊಂಡು ಅಂಕೂರೇಶ್ವರನೆಂಬ ಹೆಸರಿನ ಆ ಮಹಾದೇವನನ್ನು ಪೂಜಿಸಿದವನು ಅಶ್ವಮೇಧಯಜ್ಞದ ಫಲವನ್ನು ಪಡೆಯುವನು.

೩೩-೩೪. ಮಾಂಡವ್ಯಖಾತದಿಂದ ಮೊದಲಾಗಿ ನರ್ಮದೆ ಮತ್ತು ಆಮಲಕೀನದಿಗಳು ಸಂಗಮವಾಗುವವರೆಗಿನ ಪ್ರದೇಶವು ಮಹೇಶ್ವರನಿಗೆ ಪ್ರಿಯವಾಗಿ ದೇವಕ್ಷೇತ್ರವೆನಿಸಿರುವುದು. ಈ ಅಂಕೂರೇಶ್ವರವು ಮಾಂಡವ್ಯಖಾತಕ್ಕೆ ಪಶ್ಚಿಮದಲ್ಲಿರುವುದು. ಆ ತೀರ್ಥದಲ್ಲಿ ಸ್ನಾನವನ್ನುಮಾಡಿ ನಿರ್ಮಲನಾದ ಮಾನವನು ಏಕಾಗ್ರಚಿತ್ತನಾಗಿ ಸಂಧ್ಯಾವಂದನೆಯನ್ನು ಮಾಡಿ ಆಚಮನಪೂರ್ವಕವಾಗಿ ಜಪವನ್ನು ಮಾಡಿಕೊಳ್ಳಬೇಕು.

ತರ್ಪಯಿತ್ವಾ ಪಿತೄನ್ದೇವಾನ್ಮನುಷ್ಯಾನ್ಭರತರ್ಷಭ ।
ಸ ಚೈಲಃ ಕ್ಲಿನ್ನವಸನೋ ಮೌನಮಾಸ್ಥಾಯ ಸಂಯುತಃ ॥ ೩೫ ॥
ಅಷ್ಟಮ್ಯಾಂ ವಾ ಚತುರ್ದಶ್ಯಾಮುಪೋಷ್ಯ ವಿಧಿವನ್ನರಃ ।
ಪೂಜಾಂ ಯಃ ಕುರುತೇ ರಾಜಂಸ್ತಸ್ಯ ಪುಣ್ಯಫಲಂ ಶೃಣು ॥ ೩೬ ॥
ಸಾಗ್ರಂ ತು ಯೋಜನಶತಂ ತೀರ್ಥಾನ್ಯಾಯತನಾನಿ ಚ ।
ಭವಂತಿ ತಾನಿ ದೃಷ್ಟಾನಿ ತತಃ ಪಾಪೈಃ ಪ್ರಮುಚ್ಯತೇ ॥ ೩೭ ॥
ತತ್ರ ತೀರ್ಥೇ ತು ಯದ್ದಾನಂ ದೇವಮುದ್ದಿಶ್ಯ ದೀಯತೇ ।
ಸ್ನಾತ್ವಾ ತು ವಿಧಿವತ್ಪಾತ್ರೇ ತದಕ್ಷಯಮುದಾಹೃತಂ ॥ ೩೮ ॥
ಹೋಮಾದ್ದಶಗುಣಂ ಪ್ರೋಕ್ತಂ ಫಲಂ ಜಾಪ್ಯೇ ತತೋಽಧಿಕಂ ।
ತ್ರಿಗುಣಂ ಚೋಪವಾಸೇನ ಸ್ನಾನೇನ ಚ ಚತುರ್ಗುಣಂ ॥ ೩೯ ॥
ಸನ್ಯಾಸಂ ಕುರುತೇ ಯಸ್ತು ಪ್ರಾಣತ್ಯಾಗಂ ಕರೋತಿ ವಾ ।
ಅನಿವರ್ತಿಕಾ ಗತಿಸ್ತಸ್ಯ ರುದ್ರಲೋಕಾದಸಂಶಯಂ ॥ ೪೦ ॥

---

೩೫. ಪಿತೃಗಳಿಗೂ, ದೇವತೆಗಳಿಗೂ, ಮನುಷ್ಯರಿಗೂ ತರ್ಪಣಗಳನ್ನಿತ್ತು ಸಚೇಲಸ್ನಾನವನ್ನು ಮಾಡಿ ಒದ್ದೆಯ ಬಟ್ಟೆಯಿಂದಲೇ ಸಂಯತೇಂದ್ರಿಯನಾಗಿ ಮೌನವನ್ನವಲಂಬಿಸಬೇಕು.

೩೬. ಅಯ್ಯಾ ರಾಜನೆ! ಇಂತಹ ವಿಧಿಯನ್ನನುಸರಿಸಿ ಅಷ್ಟಮಿ ಮತ್ತು ಚತುರ್ದಶಿಯ ತಿಥಿಗಳಲ್ಲಿ ಅಂಕೂರೇಶ್ವರನ ಪೂಜೆಯನ್ನು ಮಾಡುವವನ ಪುಣ್ಯ ಫಲವನ್ನು ಕೇಳು.

೩೭. ಒಂದುನೂರು ಯೋಜನದ ಪ್ರದೇಶದಲ್ಲಿರುವ ಸಕಲ ತೀರ್ಥಗಳನ್ನೂ, ದೇವಾಲಯಗಳನ್ನೂ ಆತನು ನೋಡಿದಂತಾಗುವುದರಿಂದ ತನ್ನ ಪಾಪಗಳನ್ನು ಕಳೆದುಕೊಳ್ಳುವನು.

೩೮. ಆ ತೀರ್ಥದಲ್ಲಿ ಮಿಂದು ವಿಧಿಪ್ರಕಾರವಾಗಿ ಸತ್ಪಾತ್ರನಾದವನಿಗೆ ಮಹಾದೇವನ ಪ್ರೀತ್ಯರ್ಥವಾಗಿ ಯಾವ ದಾನವನ್ನು ಕೊಡುವರೊ ಅದು ಅನಂತ ಫಲದಾಯಕವೆಂದು ಹೇಳುವರು.

೩೯. ಅಲ್ಲಿ ಹೋಮಮಾಡುವುದಕ್ಕಿಂತಲೂ ಜಪವನ್ನು ಮಾಡುವುದು ಹತ್ತರಷ್ಟು ಹೆಚ್ಚಿನ ಫಲವನ್ನು ಕೊಡುವುದು. ಜಪಕ್ಕೆ ಮೂರು ಗುಣದಷ್ಟು ಉಪವಾಸವೂ, ಅದಕ್ಕೆ ನಾಲ್ಕರಷ್ಟು ಫಲವನ್ನು ಸ್ನಾನವೂ ಕೊಡುವುವು.

೪೦. ಅಲ್ಲಿ ಸನ್ಯಾಸವನ್ನು ಸ್ವೀಕರಿಸುವವನೂ, ಪ್ರಾಣತ್ಯಾಗವನ್ನು ಮಾಡುವವನೂ ರುದ್ರಲೋಕವನ್ನು ಸೇರಿ ಅಲ್ಲಿಂದ ಮತ್ತೆ ಹಿಂದಿರುಗುವುದಿಲ್ಲ ವೆಂಬುದು ನಿಶ್ಚಯವು.

ಕೃಮಿಕೀಟಪತಂಗಾನಾಂ ತತ್ರ ತೀರ್ಥೇ ಯುಧಿಷ್ಠಿರ ।
ಅಂಕೂರೇಶ್ವರ ನಾಮಾಖ್ಯೇ ಮೃತಾನಾಂ ಸುಗತಿರ್ಭವೇತ್ ॥ ೪೧ ॥
ಏತತ್ತೇ ಕಥಿತಂ ರಾಜನ್ನಂಕೂರೇಶ್ವರಸಂಭವಂ ।
ತೀರ್ಥಂ ಸರ್ವಗುಣೋಪೇತಂ ಪರಮಂ ಪಾಪನಾಶನಂ ॥ ೪೨ ॥
ಯೇ ಶೃಣ್ವಂತಿ ಭಕ್ತ್ಯೇದಂ ಕೀರ್ತ್ಯಮಾನಂ ಮಹಾಫಲಂ ।
ಲಭಂತೇ ನಾಽತ್ರ ಸಂದೇಹಃ ಶಿವಸ್ಯ ಭುವನಂ ಹಿ ತೇ ॥ ೪೩ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ
ಪಂಚಮೇಽವಂತ್ಯಖಂಡೇ ತೃತೀಯೇ ರೇವಾಖಂಡೇ
"ಅಂಕೂರೇಶ್ವರ ತೀರ್ಥಮಾಹಾತ್ಮ್ಯವರ್ಣನಂ"
ನಾಮಾಷ್ಟಷಷ್ಟ್ಯುತ್ತರಶತತಮೋಽಧ್ಯಾಯಃ

---

೪೧. ಯುಧಿಷ್ಠಿರನೆ! ಆ ಅಂಕೂರೇಶ್ವರವೆಂಬ ಹೆಸರಿನ ತೀರ್ಥದಲ್ಲಿರುವ ಕ್ರಿಮಿ, ಕೀಟ, ಪತಂಗಗಳಿಗು ಸಹ ದೇಹಾವಸಾನಕಾಲದಲ್ಲಿ ಸದ್ಗತಿಯು ಲಭಿಸುವುದು.

೪೨. ಮಹಾರಾಜನೆ! ಇಂತು ಸಕಲ ಗುಣಭರಿತವೂ, ಉತ್ತಮವೂ, ಪಾಪನಾಶಕವೂ ಆದ ಅಂಕೂರೇಶ್ವರವೆಂಬ ತೀರ್ಥವುದ್ಭವಿಸಿದ ಚರಿತ್ರೆಯನ್ನು ನಿನಗೆ ತಿಳಿಸಿರುವೆನು.

೪೩. ಯಾರು ಭಕ್ತಿಯುಕ್ತರಾಗಿ ಈ ಮಹಾಫಲದಾಯಕವಾದ ಅಧ್ಯಾಯದ ಕೀರ್ತನವನ್ನು ಕೇಳುತ್ತಿರುವರೊ, ಅವರೂ ಕೂಡ ಶಿವನ ಆವಾಸವನ್ನು ಹೋಗಿ ಸೇರುವುದರಲ್ಲಿ ಸಂದೇಹವಿಲ್ಲ.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ
ಶ್ರೀ ಸ್ಕಾಂದಮಹಾಪುರಾಣದ ಐದನೆಯ ಆವಂತ್ಯಖಂಡದ ಮೂರನೆಯ ರೇವಾಖಂಡದಲ್ಲಿ
"ಅಂಕೂರೇಶ್ವರತೀರ್ಥಮಾಹಾತ್ಮ್ಯವರ್ಣನ"ವೆಂಬ
ನೂರರವತ್ತೆಂಟನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

## ಅಷ್ಟೈಕೋನಸಪ್ತತ್ಯಧಿಕಶತತಮೋಽಧ್ಯಾಯಃ

### ಕಾಮಮೋದಿನೀಹರಣವರ್ಣನಂ

ಶ್ರೀ ಮಾರ್ಕಂಡೇಯ ಉವಾಚ:—

ತತೋಗಚ್ಛೇತ್ಪರಂ ತೀರ್ಥಂ ಪುಣ್ಯಂ ಪಾಪಪ್ರಣಾಶನಂ ।
ಮಾಂಡವ್ಯೋ ಯತ್ರ ಸಂಸಿದ್ಧ ಋಷಿರ್ನಾರಾಯಣಸ್ತಥಾ ॥ ೧ ॥
ನಾರಾಯಣೇನ ಶುಶ್ರೂಷಾ ಶೂಲಸ್ಥೇನ ಕೃತಾ ಪುರಾ ।
ತತ್ರ ಸ್ನಾತ್ವಾ ಮಹಾರಾಜ ಮುಚ್ಯತೇ ಪಾಪಕಂಚುಕಾತ್ ॥ ೨ ॥

ಯುಧಿಷ್ಠಿರ ಉವಾಚ:—

ಆಶ್ಚರ್ಯಮೇತಲ್ಲೋಕೇಷು ಯತ್ತ್ವಯಾ ಕಥಿತಂ ಮುನೇ ।
ನ ದೃಷ್ಟಂ ನ ಶ್ರುತಂ ತಾತ ಶೂಲಸ್ಥೇನ ತಪಃ ಕೃತಂ ॥ ೩ ॥
ಏತತ್ಸರ್ವಂ ಕಥಯ ಮೇ ಋಷಿಭಿಃ ಸಹಿತಸ್ಯ ವೈ ।
ಅಸ್ಯ ತೀರ್ಥಸ್ಯ ಮಾಹಾತ್ಮ್ಯಂ ಮಾಂಡವ್ಯಸ್ಯ ಕುತೂಹಲಾತ್ ॥ ೪ ॥

---

## ಕನ್ನಡದ ಅನುವಾದ

### ಕಾಮಮೋದಿನೀಹರಣವರ್ಣನ

೧. ಮಾರ್ಕಂಡೇಯನು ಹೇಳುತ್ತಾನೆ:—ಬಳಿಕ ಪುಣ್ಯಪ್ರದವೂ, ಪಾಪ ಪ್ರಣಾಶಕವೂ ಆದ ಮತ್ತೊಂದು ತೀರ್ಥವನ್ನು ಸೇವಿಸಬೇಕು. ಅಲ್ಲಿಯೇ ಮಾಂಡವ್ಯನೂ ಮಹರ್ಷಿಯಾದ ನಾರಾಯಣನೂ ತಪಸ್ಸಿದ್ಧಿಯನ್ನು ಪಡೆದರು.

೨. ಮಹಾರಾಜನೆ! ಶೂಲಕ್ಕೇರಿಸಲ್ಪಟ್ಟ ನಾರಾಯಣನು ಅಲ್ಲಿ ಹಿಂದೆ ತಪಸ್ಸನ್ನಾಚರಿಸಿದನು. ಅಲ್ಲಿ ಸ್ನಾನದಿಂದಲೇ ಮಾನವನು ಪಾಪವೆಂಬ ಕಂಚುಕವನ್ನು ಕಳೆದುಕೊಳ್ಳುವನು.

೩. ಯುಧಿಷ್ಠಿರನು ಹೇಳುತ್ತಾನೆ:—ಮುನಿವರ್ಯನೆ! ನೀನು ಹೇಳುವ ವಿಷಯವು ಮೂರು ಲೋಕಗಳಿಗೂ ಆಶ್ಚರ್ಯಕಾರಕವಾಗಿರುವುದು. ಶೂಲಕ್ಕೇರಿದವನು ತಪಸ್ಸನ್ನು ಮಾಡಿದುದನ್ನು ನಾನೆಲ್ಲಿಯೂ ಕಂಡುದೂ ಇಲ್ಲ. ಕೇಳಿದುದೂ ಇಲ್ಲ.

೪. ನನಗೆ ಬಹಳ ಕುತೂಹಲವಾಗಿರುವುದರಿಂದ ಋಷಿಸಹಿತನಾದ ಮಾಂಡವ್ಯನ ಚರಿತ್ರೆಯನ್ನೂ, ಈ ತೀರ್ಥದ ಮಾಹಾತ್ಮ್ಯವನ್ನೂ ಸಮಗ್ರವಾಗಿ ಹೇಳುವವನಾಗು.

ಶ್ರೀ ಮಾರ್ಕಂಡೇಯ ಉವಾಚ:—

ಶೃಣು ರಾಜನ್ ಯಥಾ ವೃತ್ತಂ ಪುರಾ ತ್ರೇತಾಯುಗೇ ಕ್ಷಿತೌ ।
ಲೋಕಪಾಲೋಪಮೋ ರಾಜಾ ದೇವಪನ್ನೋ ಮಹಾಮತಿಃ ॥ ೫ ॥
ಧರ್ಮಜ್ಞಶ್ಚ ಕೃತಜ್ಞಶ್ಚ ಯಜ್ವಾ ದಾನರತಃ ಸದಾ ।
ಪ್ರಜಾ ರರಕ್ಷ ಯತ್ನೇನ ಪಿತಾ ಪುತ್ರಾನಿವೌರಸಾನ್ ॥ ೬ ॥
ದಾತ್ಯಾಯನೀ ಪ್ರಿಯಾ ಭಾರ್ಯಾ ತಸ್ಯ ರಾಜ್ಞೋ ವಶಾಽನುಗಾ ।
ಹಾರನೂಪುರಘೋಷೇಣ ಝುಂಕಾರರವನಾದಿತಾ ॥ ೭ ॥
ಪರಸ್ಪರಂ ತಯೋಃ ಪ್ರೀತಿರ್ವರ್ಧತೇಽನುದಿನಂ ನೃಪ ।
ವಂಶಸ್ತಂಬೇ ಸ್ಥಿತೋ ರಾಜಾ ಸಂಶಾಸ್ತಿ ಪೃಥಿವೀಮಿಮಾಂ ॥ ೮ ॥
ಹಸ್ತ್ಯಶ್ವರಥಸಂಪೂರ್ಣಾಂ ಧನವಾಹನಸಂಯುತಾಂ ।
ಅಲಂಕೃತೋ ಗುಣೈಃ ಸರ್ವೈರನಪತ್ಯೋ ಮಹೀಪತಿಃ ॥ ೯ ॥
ದುಃಖೇನ ಮಹತಾವಿಷ್ಟಃ ಸಂತಪ್ತಃ ಸಂತತಿಂ ವಿನಾ ।
ಸ್ನಾನಹೋಮರತೋ ನಿತ್ಯಂ ದ್ವಾದಶಾಬ್ದಾನಿ ಭಾರತ ॥ ೧೦ ॥

---

೫–೬. ಮಾರ್ಕಂಡೇಯನು ಹೇಳುತ್ತಾನೆ:—ಮಹಾರಾಜನೆ! ಹಿಂದೆ ತ್ರೇತಾಯುಗದಲ್ಲಿ ಭೂಮಂಡಲದಲ್ಲಿ ನಡೆದ ವಿಷಯವನ್ನು ಕೇಳು. ಮಹಾಬುದ್ಧಿಶಾಲಿಯೂ ಲೋಕಪಾಲಕರಿಗೆ ಸಮಾನನೂ ಆದ ದೇವಪನ್ನನೆಂಬ ರಾಜನೊಬ್ಬನಿದ್ದನು. ಧರ್ಮಗಳನ್ನು ತಿಳಿದವನೂ, ಕೃತಜ್ಞನೂ, ಯಜ್ಞಗಳನ್ನು ಮಾಡುವವನೂ, ನಿತ್ಯವೂ ದಾನನಿರತನೂ ಆದ ಆತನು ಮಕ್ಕಳನ್ನು ಪಾಲಿಸುವ ತಂದೆಯಂತೆ ಪ್ರಜೆಗಳನ್ನು ಜಾಗರೂಕತೆಯಿಂದ ರಕ್ಷಿಸುತ್ತಿದ್ದನು.

೭. ಆ ರಾಜನಿಗೆ ಪ್ರಿಯಳೂ, ವಶವರ್ತಿನಿಯೂ ಆದ ದಾತ್ಯಾಯನಿಯೆಂಬುವಳು ಪತ್ನಿಯಾಗಿದ್ದಳು. ಆಕೆಯು ಹಾರಗಳ ಶಬ್ದದಿಂದಲೂ ಕಾಲ್ಗಡಗಳ ಝುಂಕಾರಗಳಿಂದಲೂ ಕೂಡಿ ಸುಂದರಿಯಾಗಿದ್ದಳು.

೮. ಮಹಾರಾಜನೆ! ಅವರ ಪ್ರೀತಿಯು ದಿನದಿನಕ್ಕೂ ಅಭಿವೃದ್ಧಿಗೊಳ್ಳುತ್ತಿರಲು ಆ ರಾಜನು ವಂಶಸ್ತಂಬವೆಂಬ ನಗರವನ್ನು ರಾಜಧಾನಿಯಾಗಿ ಮಾಡಿಕೊಂಡು ಭೂಮಿಯನ್ನಾಳುತ್ತಿದ್ದನು.

೯. ರಾಜ್ಯವು ಆನೆ, ಕುದುರೆ, ರಥಗಳಿಂದ ತುಂಬಿದುದೂ, ಧನ ವಾಹನಗಳಿಂದ ನಿಬಿಡವೂ ಆಗಿದ್ದಿತು. ರಾಜನು ಸಕಲ ಸದ್ಗುಣಗಳಿಂದ ಭೂಷಿತನಾಗಿದ್ದರೂ ಸಂತಾನಹೀನನಾಗಿದ್ದನು.

೧೦. ಸಂತತಿಯಿಲ್ಲದೆ ಮಹತ್ತರವಾದ ದುಃಖಕ್ಕೀಡಾಗಿ ಹನ್ನೆರಡು ವರ್ಷಗಳವರೆಗೂ ನಿತ್ಯವೂ ಸ್ನಾನ ಹೋಮ ಕರ್ಮಗಳನ್ನು ಮಾಡುವುದರಲ್ಲಿ ನಿರತನಾಗಿದ್ದನು.

ವ್ರತೋಪವಾಸನಿಯಮೈಃ ಪತ್ನೀಭಿಃ ಸಹ ತಸ್ಥಿವಾನ್ ।
ಆರಾಧಯದ್ಭಗವತೀಂ ಚಾಮುಂಡಾಂ ಮುಂಡಮರ್ದಿನೀಂ ॥ ೧೧ ॥
ಸ್ತೋತ್ರೈರನೇಕೈರ್ಭಕ್ತ್ಯಾ ಚ ಪೂಜಾವಿಧಿಸಮಾಧಿನಾ ।
ಜಯ ವಾರಾಹಿ ಚಾಮುಂಡೇ ಜಯದೇವಿ ತ್ರಿಲೋಚನೇ ॥ ೧೨ ॥
ಬ್ರಾಹ್ಮಿ ರೌದ್ರಿ ಚ ಕೌಮಾರಿ ಕಾತ್ಯಾಯನಿ ನಮೋಽಸ್ತು ತೇ ।
ಪ್ರಚಂಡೇ ಭೈರವೇ ರೌದ್ರಿ ಯೋಗಿನ್ಯಾಕಾಶಗಾಮಿನಿ ॥ ೧೩ ॥
ನಾಽಸ್ತಿ ಕಿಂಚಿತ್ತ್ವಯಾ ಹೀನಂ ತ್ರೈಲೋಕ್ಯೇ ಸಚರಾಚರೇ ।
ರಾಜ್ಞಾ ಸ್ತುತಾ ಚ ಸಂತುಷ್ಟಾ ದೇವೀ ವಚನಮಬ್ರವೀತ್ ॥ ೧೪ ॥
ವರಯಸ್ವ ಯಥಾಕಾಮಂ ಯಸ್ತೇ ಮನಸಿ ವರ್ತತೇ ।
ಆರಾಧಿತಾ ತ್ವಯಾ ಭಕ್ತ್ಯಾ ತುಷ್ಟಾ ದಾಸ್ಯಾಮಿ ತೇ ವರಂ ॥ ೧೫ ॥

ದೇವಪನ್ನ ಉವಾಚ :—

ಯದಿ ತುಷ್ಟೋಽಸಿ ದೇವೇಶಿ ವರಾಽಹೋಽರ್ಹೇ ಯದಿ ವಾಽಪ್ಯಹಂ ।
ಪುತ್ರಸಂತಾನರಹಿತಂ ಸಂತಪ್ತಂ ಮಾಂ ಸಮುದ್ಧರ ॥ ೧೬ ॥

---

೧೧. ತನ್ನ ಪತ್ನಿಯರೊಡನೆ ವ್ರತಗಳಿಂದಲೂ, ಉಪವಾಸ ನಿಯಮಗಳಿಂದಲೂ ಕೂಡಿರುತ್ತಿದ್ದನು. ಮತ್ತು ಮುಂಡಾಸುರ ನಿಷೂದನಿಯಾದ ಚಾಮುಂಡಾದೇವಿಯನ್ನು ಪೂಜಿಸುತ್ತಿದ್ದನು.

೧೨. ಪೂಜೆಯ ವಿಧಿಯಲ್ಲಿಯೇ ಏಕಾಗ್ರಚಿತ್ತನಾಗಿ ಭಕ್ತಿಯಿಂದ ಬಹುವಿಧಗಳಾದ ಸ್ತೋತ್ರಗಳಿಂದ ಹೊಗಳುತ್ತಿದ್ದನು. "ವಾರಾಹಿಯೆ! ಚಾಮುಂಡಿಯೆ! ತ್ರಿಲೋಚನಿಯಾದ ದೇವಿಯೆ !

೧೩. ಬ್ರಾಹ್ಮಿಯೆ! ರೌದ್ರಿಯೆ! ಕೌಮಾರಿಯೆ! ಕಾತ್ಯಯನಿಯಾದ ನಿನಗೆ ನಮಸ್ಕರಿಸುವೆನು. ಪ್ರಚಂಡಳೆ! ಭೈರವಿಯೆ! ಯೋಗಿನಿಯೆ! ಆಕಾಶಗಮನದವಳೆ!

೧೪. ಚರಾಚರಗಳನ್ನೊಳಗೊಂಡ ಮೂರು ಲೋಕಗಳಲ್ಲಿಯೂ ನಿನ್ನಿಂದ ರಹಿತವಾದ ಪದಾರ್ಥವಿಲ್ಲ." ಇಂತೆಂದ ರಾಜನ ಸ್ತೋತ್ರದಿಂದ ಸಂತುಷ್ಟಳಾದ ದೇವಿಯು ಹೇಳಿದಳು.

೧೫. "ನಿನ್ನ ಮನಸ್ಸಿನಲ್ಲಿರುವ ಅಭಿಲಾಷೆಯನ್ನು ನಿಸ್ಸಂಕೋಚವಾಗಿ ಕೇಳಿಕೊ. ಭಕ್ತಿಯಿಂದ ಮಾಡಿದ ನಿನ್ನ ಪೂಜೆಯಿಂದ ಸಂತುಷ್ಟಳಾದ ನಾನು ವರವನ್ನು ಕೊಡುತ್ತೇನೆ."

೧೬. ದೇವಪನ್ನನು ಹೇಳುತ್ತಾನೆ:—ದೇವೇಶ್ವರಿಯೆ ! ನೀನು ಸಂತೋಷಗೊಂಡಿದ್ದರೆ, ನಾನೂ ವರಕ್ಕೆ ಅರ್ಹನಾಗಿದ್ದರೆ ಕೇಳುವೆನು. ಪುತ್ರಸಂತಾನವಿಲ್ಲದೆ ಪರಿತಪಿಸುತ್ತಿರುವ ನನ್ನನ್ನುದ್ಧರಿಸು.

ಸಂತಾನಂ ನಯ ಮೇ ವೃದ್ಧಿಂ ಗೋತ್ರರಕ್ಷಾಂ ಕುರುಷ್ವ ಮೇ ।
ಅಪುತ್ರಿಣಾಂ ಗೃಹಾಣೀಹ ಸ್ಮಶಾನ ಸದೃಶಾನಿ ಹಿ ॥ ೧೭ ॥
ಪಿತರಸ್ತಸ್ಯ ನಾಽಶ್ನಂತಿ ದೇವತಾ ಋಷಿಭಿಃ ಸಹ ।
ಕ್ರಿಯಮಾಣೇಽಪ್ಯಹರಹಃ ಶ್ರಾದ್ಧೇಮತ್ಪಿತರಃ ಸದಾ ॥ ೧೮ ॥
ದರ್ಶಯಂತಿ ಸದಾತ್ಮಾನಂ ಸ್ವಪ್ನೇ ಕ್ಷುತ್ಪೀಡಿತಂ ಮಮ ।
ಇತಿ ರಾಜ್ಞೋ ವಚಃ ಶ್ರುತ್ವಾ ದೇವೀ ಧ್ಯಾನಮುಪಾಗತಾ ॥ ೧೯ ॥
ದಿವ್ಯೇನ ಚಕ್ಷುಷಾ ದೃಷ್ಟಂ ತ್ರೈಲೋಕ್ಯಂ ಸಚರಾಚರಂ ।
ಪ್ರಸನ್ನ ವದನಾ ದೇವೀ ರಾಜಾನಮಿದಮಬ್ರವೀತ್ ॥ ೨೦ ॥
ಸಂತಾನಂ ನಾಸ್ತಿ ತೇ ರಾಜಂಸ್ತ್ರೈಲೋಕ್ಯೇ ಸಚರಾಚರೇ ।
ಯಜಸ್ವ ಯಜ್ಞಪುರುಷಮಪತ್ಯಂ ನಾಽಸ್ತಿ ತೇಽನ್ಯಥಾ ॥ ೨೧ ॥
ಮಯಾ ದೃಷ್ಟಂ ಮಹೀಪಾಲ ತ್ರೈಲೋಕ್ಯಂ ದಿವ್ಯಚಕ್ಷುಷಾ ।
ಏವಮುಕ್ತ್ವಾ ಗತಾ ದೇವೀ ರಾಜಾ ಸ್ವಗೃಹಮಾಗಮತ್ ॥ ೨೨ ॥
ಇಯಾಜ ಯಜ್ಞಪುರುಷಂ ಸಂಜಾತಾ ಕನ್ಯಕಾ ತತಃ ।
ತೇಜಸ್ವಿನೀ ರೂಪವತೀ ಸರ್ವಲೋಕಮನೋಹರಾ ॥ ೨೩ ॥

---

೧೭. ನನ್ನ ಸಂತಾನವನ್ನು ವೃದ್ಧಿಗೊಳಿಸಿ ಗೋತ್ರರಕ್ಷಣೆಯನ್ನು ಮಾಡು. ಪುತ್ರರಿಲ್ಲದವರ ಮನೆಗಳು ಸ್ಮಶಾನಗಳಿಗೆ ಸಮಾನವಾದವುಗಳಷ್ಟೆ.

೧೮–೧೯. ಪಿತೃಗಳೂ, ದೇವತೆಗಳೂ, ಮಹರ್ಷಿಗಳೂ ಆತನು ಕೊಡುವುದನ್ನು ಸ್ವೀಕರಿಸುವುದಿಲ್ಲ. ಪ್ರತಿನಿತ್ಯವೂ ನಾನು ಶ್ರಾದ್ಧಗಳನ್ನು ಮಾಡುತ್ತಿದ್ದರೂ ನನ್ನ ಪಿತೃಗಳು ಸ್ವಪ್ನದಲ್ಲಿ ಹಸಿವುಗೊಂಡವರಾಗಿಯೇ ಕಾಣುತ್ತಿರುತ್ತಾರೆ. ಇಂತೆಂದ ರಾಜನ ಮಾತನ್ನು ಕೇಳಿ ದೇವಿಯು ಧ್ಯಾನತತ್ಪರಳಾದಳು.

೨೦. ದಿವ್ಯದೃಷ್ಟಿಯಿಂದ ಮೂರು ಲೋಕಗಳಲ್ಲಿನ ಚರಾಚರ ಜಂತುಗಳ ವಿಷಯಗಳನ್ನೆಲ್ಲಿ ತಿಳಿದುಕೊಂಡು ದೇವಿಯು ಪ್ರಸನ್ನವದನಳಾಗಿ ರಾಜನಿಗಿಂತೆಂದಳು.

೨೧. "ರಾಜನೆ! ಮೂರು ಲೋಕಗಳಲ್ಲೆಲ್ಲಿಯೂ ನಿನಗೆ ಪುತ್ರಲಾಭವಿಲ್ಲ. ಯಜ್ಞಪುರುಷನನ್ನು ತೃಪ್ತಿಗೊಳಿಸಿದಲ್ಲದೆ ನಿನ್ನ ಅಭೀಷ್ಟಸಿದ್ಧಿಯಾಗಲಾರದು.

೨೨. ಮಹೀನಾಥನೆ! ನಿನಗಾಗಿ ನಾನು ಚರಾಚರಗಳನ್ನೊಳಗೊಂಡ ಮೂರು ಲೋಕಗಳನ್ನೂ ನೋಡಿದೆನು." ಇಂತೆಂದು ದೇವಿಯು ಅದೃಶ್ಯಳಾಗಲು ರಾಜನೂ ತನ್ನ ಅರಮನೆಗೆ ಹಿಂದಿರುಗಿದನು.

೨೩. ಮತ್ತು ಯಜ್ಞಪುರುಷನನ್ನು ಯಾಗದಿಂದ ಸಂತೋಷಗೊಳಿಸಲು ತೇಜಸ್ಸಂಪನ್ನಳೂ, ಸೌಂದರ್ಯವತಿಯೂ, ಸಕಲಲೋಕಗಳಿಗೂ ಮನೋಹರಳೂ ಆದ ಕನ್ಯೆಯೊಬ್ಬಳು ಹುಟ್ಟಿದಳು.

ದೇವಗಂಧರ್ವಲೋಕೇಽಪಿ ತಾದೃಶೀ ನಾಽಸ್ತಿ ಕಾಮಿನೀ ।
ತಸ್ಯಾ ನಾಮ ಕೃತಂ ಪಿತ್ರಾ ಹರ್ಷಾತ್ಕಾಮಪ್ರಮೋದಿನೀ ॥ ೨೪ ॥
ತತಃ ಕಾಲೇನ ವವೃಧೇ ರೂಪೇಣಾಸ್ತಂಭಯಜ್ಜಗತ್ ।
ಹಂಸಲೀಲಾಗತಿಃ ಸುಭ್ರೂಃ ಸ್ತನಭಾರಾಽವನಾಮಿತಾ ॥ ೨೫ ॥
ರಕ್ತಮಾಲ್ಯಾಂಬರಧರಾ ಕುಂಡಲಾಭರಣೋಜ್ಜ್ವಲಾ ।
ದಿವ್ಯಾನುಲೇಪನವತೀ ಸಖೀಭಿಃ ಸಾ ಸುರಕ್ಷಿತಾ ॥ ೨೬ ॥
ಕುಚಮಧ್ಯಗತೋ ಹಾರೋ ವಿದ್ಯುನ್ಮಾಲೇವ ರಾಜತೇ ।
ಭ್ರಮರಾಂಚಿತಕೇಶೀಸಾ ಬಿಂಬೋಷ್ಠೀ ಚಾರುಹಾಸಿನೀ ॥ ೨೭ ॥
ಕರ್ಣಾಂತಪ್ರಾಪ್ತನೇತ್ರಾಭ್ಯಾಂ ಪಿಬಂತೀವಾಽಥ ಕಾಮಿನಃ ।
ಚಂದ್ರತಾಂಬೂಲಸೌರಭ್ಯೈರಾಕರ್ಷಂತೀವ ಮನ್ಮಥಂ ॥ ೨೮ ॥
ಕಂಬುಗ್ರೀವಾ ಚಾರುಮಧ್ಯಾ ತಾಮ್ರಪಾದಾಂಗುಲೀನಖಾ ।
ನಿಮ್ನನಾಭಿಃ ಸುಜಘನಾ ರಂಭೋರೂ ಸುದತೀ ಶುಭಾ ॥ ೨೯ ॥

---

೨೪. ದೇವಗಂಧರ್ವಾದಿ ಲೋಕಗಳಲ್ಲಿಯೂ ಅಂತಹ ಸುಂದರಿಯು ದೊರೆಯಲಾರಳು. ಆದುದರಿಂದಲೇ ಮಹಾರಾಜನು ಆನಂದದಿಂದ ಆಕೆಗೆ ಕಾಮಮೋದಿನಿಯೆಂದೇ ಹೆಸರನ್ನಿಟ್ಟನು.

೨೫. ಬಳಿಕ ಕಾಲಕ್ರಮದಲ್ಲಿ ಆ ಕನ್ಯೆಯು ಬೆಳೆದು ರೂಪದಿಂದಲೂ, ಹಂಸದಂತಹ ಮಂದಗಮನದಿಂದಲೂ, ಸುಂದರಭ್ರೂಯುಗಳದಿಂದಲೂ, ಸ್ತನಭಾರದಿಂದ ಬಾಗಿದ ಬಡನಡುವಿನಿಂದಲೂ ಜಗತ್ತನ್ನೇ ಸ್ತಂಭನಗೊಳಿಸಿದ್ದಳು.

೨೬. ಕೆಂಪುಹೂಮಾಲೆಗಳನ್ನೂ, ಉಡುಪನ್ನೂ ಧರಿಸಿ, ಕುಂಡಲಗಳೇ ಮೊದಲಾದ ಆಭರಣಗಳಿಂದಲೂ ಥಳಥಳಿಸುತ್ತ, ದಿವ್ಯಗಂಧಗಳಿಂದ ಲೇಪಿತಳಾದ ಆಕೆಯನ್ನು ಸಖಿಯರು ಜಾಗರೂಕತೆಯಿಂದ ರಕ್ಷಿಸುತ್ತಿದ್ದರು.

೨೭. ಆಕೆಯ ಸ್ತನಗಳಮಧ್ಯದಲ್ಲಿ ಹಾರವು ಮಿಂಚಿನಬಳ್ಳಿಯಂತೆ ವಿರಾಜಿಸುತ್ತಿದ್ದಿತು. ಆಕೆಯು ದುಂಬಿಗಳ ಬಣ್ಣದ ಮುಂಗುರುಳಿನವಳೂ, ತೊಂಡೆಯ ಹಣ್ಣನ್ನು ಹೋಲುವ ತುಟಿಗಳುಳ್ಳವಳೂ, ಮುಗುಳ್ನಗೆಯುವಳೂ ಆಗಿದ್ದಳು.

೨೮. ಕಿವಿಗಳವರೆಗೂ ಪಸರಿಸಿರುವ ವಿಶಾಲನೇತ್ರಗಳಿಂದ ಕಾಮಿಗಳ ಮನಸ್ಸನ್ನು ಕುಡಿಯುವಂತಿದ್ದಳು. ಕರ್ಪೂರ ತಾಂಬೂಲದ ಸುಗಂಧದಿಂದ ಮನ್ಮಥನನ್ನಾಕರ್ಷಿಸುವಂತಿದ್ದಳು.

೨೯. ಶಂಖವನ್ನು ಹೋಲುವ ಕುತ್ತಿಗೆಯಿಂದಲೂ, ಸುಂದರವಾದ ನಡುವಿನಿಂದಲೂ, ಕೆಂಪಾದ ಕಾಲ್ಬೆರಳುಗಳ ಉಗುರುಗಳಿಂದಲೂ, ಆಳವಾದ ನಾಭಿಯಿಂದಲೂ, ವೃತ್ತಗಳಾದ ಜಘನಗಳಿಂದಲೂ, ಬಾಳೆಯ ಕಾಂಡದಂತಿರುವ ತೊಡೆಗಳಿಂದಲೂ, ಸುಲಿಪಲ್ಗಳಿಂದಲೂ ಸುಂದರಿಯಾಗಿದ್ದಳು.

ಮಾತಾಪಿತೃಸುಹೃದ್ವರ್ಗೇ ಕ್ರೀಡಾನಂದವಿವರ್ಧಿನೀ ।
ಏಕಸ್ಮಿನ್ದಿವಸೇ ಬಾಲಾ ಸಖೀವೃಂದಸಮನ್ವಿತಾ ॥ ೩೦ ॥
ಚಂದನಾಗರುತಾಂಬೂಲಧೂಪಸೌಮನಸಾಂಚಿತಾ ।
ಗೃಹೀತ್ವಾ ಪುಷ್ಪಧೂಪಾದಿ ಗತಾ ದೇವೀಪ್ರಪೂಜನೇ ॥ ೩೧ ॥
ತಡಾಗತಟೆ ಉತ್ಸೃಜ್ಯ ಭೂಷಣಾನ್ಯಂಗವೇಷ್ಟಕಾನ್ ।
ಚಕ್ರುಃ ಸರಸಿ ತಾಃ ಕ್ರೀಡಾಂ ಜಲಮಧ್ಯಗತಾಸ್ತದಾ ॥ ೩೨ ॥
ಕ್ರೀಡಂತೀಂ ತಾಮವೇಕ್ಷ್ಯಾಽಥ ಸಸಖೀಂ ವಿಮಲೇ ಜಲೇ ।
ರಾಕ್ಷಸಃ ಶಂಬರೋ ನಾಮ ಶ್ಯೇನರೂಪೇಣ ಚಾಗಮತ್ ॥ ೩೩ ॥
ಗೃಹೀತಾ ಜಲಮಧ್ಯಸ್ಥಾ ತೇನ ಸಾ ಕಾಮಮೋದಿನೀ ।
ಖಮುತ್ಪಪಾತ ದುಷ್ಟಾತ್ಮಾ ಗೃಹೀತ್ವಾಭರಣಾನ್ಯಪಿ ॥ ೩೪ ॥
ವಾಯುಮಾರ್ಗಂ ತತಃ ಸೋಽಥ ಕಾಮಿನ್ಯಾ ಸಹ ಭಾರತ ।
ಅಪತನ್ಕುಂಡಲಾದೀನಿ ಯತ್ರ ತೋಯೇ ಮಹಾಮುನಿಃ ॥ ೩೫ ॥

---

೩೦–೩೧. ತಾಯಿ, ತಂದೆ, ಸ್ನೇಹಿತರ ಮಧ್ಯದಲ್ಲಿ ಆಟಪಾಟಗಳ ಆನಂದದಿಂದ ಬೆಳೆಯುತ್ತಿರಲು ಒಂದು ದಿವಸ ಆ ಬಾಲೆಯು ತನ್ನ ಸಖೀಜನರೊಡಗೂಡಿ ಚಂದನ, ಅಗರು, ಧೂಪ, ಪುಷ್ಪ, ತಾಂಬೂಲಗಳನ್ನು ಧರಿಸಿ ಪುಷ್ಪ ಧೂಪಾದಿ ಪೂಜಾಸಾಮಗ್ರಿಗಳನ್ನು ತೆಗೆದುಕೊಂಡು ದೇವಿಯ ಅರ್ಚನೆಗಾಗಿ ಹೊರಟಳು.

೩೨. ಕೊಳದ ಬಳಿಯಲ್ಲಿ ತಮ್ಮ ಆಭರಣಗಳನ್ನೂ ವಸ್ತ್ರಗಳನ್ನೂ ಕಳಚಿಟ್ಟು ನೀರಿನ ಮಧ್ಯವನ್ನು ಪ್ರವೇಶಿಸಿ ಅವರು ಕೊಳದಲ್ಲಿ ಕ್ರೀಡಿಸುತ್ತಿದ್ದರು.

೩೩. ಇಂತು ನಿರ್ಮಲವಾದ ನೀರಿನಲ್ಲಿ ಸಖಿಯರೊಡನೆ ಜಲಕ್ರೀಡೆಯನ್ನಾಡುತ್ತಿದ್ದ ಆಕೆಯನ್ನು ಕಂಡು ಶಂಬರನೆಂಬ ರಾಕ್ಷಸನೊಬ್ಬನು ಗಿಡಗನ ರೂಪದಿಂದ ಅಲ್ಲಿಗೆ ಬಂದನು.

೩೪. ಜಲಮಧ್ಯದಲ್ಲಿದ್ದ ಆ ಕಾಮಮೋದಿನಿಯು ಹಾಗೆಯೇ ಆತನಿಂದ ಹಿಡಿಯಲ್ಪಟ್ಟಳು. ಆ ದುರಾತ್ಮನು ಆಕೆಯ ಆಭರಣಗಳನ್ನೂ ತೆಗೆದುಕೊಂಡು ಆಕಾಶಕ್ಕೆ ಹಾರಿದನು.

೩೫. ಎಲೈ ಧರ್ಮರಾಜನೆ! ಆ ರಾಕ್ಷಸನು ಕನ್ಯೆಯೊಡನೆ ವಾಯುಮಾರ್ಗದಲ್ಲಿ ಹೋಗುತ್ತಿರಲು ಮಹಾಮುನಿಯೊಬ್ಬನು ಜಲದಲ್ಲಿ ನಿಂತು ತಪಸ್ಸನ್ನು ಮಾಡುತ್ತಿದ್ದ ಪ್ರದೇಶದಲ್ಲಿ ಕುಂಡಲಗಳೇ ಮೊದಲಾದ ಆಕೆಯ ಕೆಲವು ಆಭರಣಗಳು ಬಿದ್ದುವು.

ಮಾಂಡವ್ಯೋ ನರ್ಮದಾತೀರೇ ಕಾಷ್ಠವತ್ಸಂಜಿತೇಂದ್ರಿಯಃ ।
ಲೀನೋ ಮಾಹೇಶ್ವರೇ ಸ್ಥಾನೇ ನಾರಾಯಣಪದೇ ಪದೇ ॥ ೩೬ ॥
ತಸ್ಯ ಚಾಽನುಚರೋ ಭ್ರಾತಾ ಭ್ರಾತುಃ ಶುಶ್ರೂಷಣೇ ರತಃ ।
ತಪೋಜಪಕೃಶೀಭೂತೋ ದಧ್ಯೌ ದೇವಂ ಜನಾರ್ದನಂ ॥ ೩೭ ॥

ಇತೀ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ
ಪಂಚಮೇ ಆವಂತ್ಯಖಂಡೇ ತೃತೀಯೇ ರೇವಾಖಂಡೇ
"ಕಾಮಮೋದಿನೀಹರಣವರ್ಣನಂ"
ನಾಮೈಕೋನಸಪ್ತತ್ಯಧಿಕಶತತಮೋಽಧ್ಯಾಯಃ

---

೩೬. ಮಾಂಡವ್ಯನೆಂಬ ಆ ಋಷಿವರ್ಯನು ನರ್ಮದೆಯ ತೀರದಲ್ಲಿ ಮಾಹೇಶ್ವರಸ್ಥಾನವೆಂದು ಪ್ರಸಿದ್ಧವಾದ ನಾರಾಯಣಮುನಿಯೆಂಬ ತನ್ನ ತಮ್ಮನ ಆಶ್ರಮದಲ್ಲಿ ಜಿತೇಂದ್ರಿಯನಾಗಿ ಕಾಷ್ಠದಂತೆ ಸಮಾಧಿಮಗ್ನನಾಗಿದ್ದನು.

೩೭. ಆತನ ತಮ್ಮನೂ ಅಣ್ಣನ ಶುಶ್ರೂಷೆಯಲ್ಲಿಯೇ ನಿರತನಾಗಿರುತ್ತ ಜಪತಪಗಳಿಂದ ಕೃಶನಾದ ಶರೀರವುಳ್ಳವನಾಗಿ ಪರಮಾತ್ಮನ ಧ್ಯಾನದಲ್ಲಿರುತ್ತಿದ್ದನು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ
ಶ್ರೀ ಸ್ಕಾಂದಮಹಾಪುರಾಣದ ಐದನೆಯ ಆವಂತ್ಯಖಂಡದ ಮೂರನೆಯ ರೇವಾಖಂಡದಲ್ಲಿ
"ಕಾಮಮೋದಿನೀಹರಣವರ್ಣನ"ವೆಂಬ
ನೂರರವತ್ತೊಂಬತ್ತನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

## ಅಥ ಸಪ್ತತ್ಯಧಿಕಶತತಮೋಽಧ್ಯಾಯಃ

### ಮಾಂಡವ್ಯಶೂಲಾರೋಪಣವರ್ಣನಂ

ಶ್ರೀ ಮಾರ್ಕಂಡೇಯ ಉವಾಚ :—

ಕಾಮಪ್ರಮೋದಿನೀಸಖ್ಯೋ ನೀಯಮಾನಾಂ ಚ ತೇನ ತು ।
ದೃಷ್ಟ್ವಾ ತಾಶ್ಚುಕ್ರುಶುಃ ಸರ್ವಾ ನಿಃಸೃತ್ಯ ಜಲಮಧ್ಯತಃ ॥ ೧ ॥
ಗತಾ ರಾಜಗೃಹೇ ಸರ್ವಾಃ ಕಥಯಂತಿ ಸುದುಃಖಿತಾಃ ।
ಕಾಮಪ್ರಮೋದಿನೀ ರಾಜನ್ ಹೃತಾ ಶ್ಯೇನೇನ ಪಕ್ಷಿಣಾ ॥ ೨ ॥
ಕ್ರೀಡಂತೀ ಚ ಜಲಸ್ಥಾನೇ ತಡಾಗೇ ದೇವಸನ್ನಿಧೌ ।
ಅನ್ವೇಷ್ಯಾ ಚ ತ್ವಯಾ ರಾಜಂಸ್ತಸ್ಯ ಮಾರ್ಗಂ ವಿಜಾನತಾ ॥ ೩ ॥
ತಾಸಾಂ ತದ್ವಚನಂ ಶ್ರುತ್ವಾ ದೇವಪನ್ನಃ ಸುದುಃಖಿತಃ ।
ಹಾ ಹೇತ್ಯುಕ್ತ್ವಾ ಸಮುತ್ಥಾಯ ರುದಮಾನೋ ವರಾಸನಾತ್ ॥ ೪ ॥
ಮಂತ್ರಿಭಿಃ ಸಹಿತಸ್ತಸ್ಮಿಂಸ್ತಡಾಗೇ ಜಲಸನ್ನಿಧೌ ।
ನ ಚಿಹ್ನಂ ನ ಚ ಪಂಥಾನಂ ದೃಷ್ಟ್ವಾ ದುಃಖಾನ್ಮುಮೋಹ ಚ ॥ ೫ ॥

---

### ಕನ್ನಡದ ಅನುವಾದ

#### ಮಾಂಡವ್ಯಶೂಲಾರೋಪಣವರ್ಣನ

೧. ಮಾರ್ಕಂಡೇಯನು ಹೇಳುತ್ತಾನೆ:—ಕಾಮಪ್ರಮೋದಿನಿಯ ಸಖಿಯರು ಆಕೆಯನ್ನು ರಾಕ್ಷಸನು ಎತ್ತಿಕೊಂಡು ಹೋದುದನ್ನು ಕಂಡು ಜಲದಿಂದ ಹೊರಬಿದ್ದು ಎಲ್ಲರೂ ರೋದಿಸತೊಡಗಿದರು.

೨. ರಾಜನ ಅರಮನೆಗೆ ಹೋಗಿ ಬಹು ದುಃಖದಿಂದ ಆತನಿಗೆಲ್ಲವನ್ನೂ ವಿವರಿಸಿದರು. "ಮಹಾರಾಜನೆ! ಕಾಮಪ್ರಮೋದಿನಿಯು ಶ್ಯೇನಪಕ್ಷಿಯಿಂದ ಅಪಹೃತಳಾದಳು.

೩. ದೇವಿಯ ದೇವಸ್ಥಾನದ ಎದುರಿನ ತಟಾಕದ ನೀರಿನ ಮಧ್ಯದಲ್ಲಿ ಕ್ರೀಡಿಸುತ್ತಿದ್ದವಳು ಹೋಗಿಬಿಟ್ಟಳು. ರಾಜನೆ! ನೀನು ಆ ಪಕ್ಷಿಯ ಮಾರ್ಗವನ್ನು ತಿಳಿದು ರಾಜಕುಮಾರಿಯನ್ನು ಹುಡುಕಬೇಕು."

೪. ಸಖಿಯರ ಮಾತನ್ನು ಕೇಳಿ ದೇವಪನ್ನಮಹಾರಾಜನು ಬಹಳ ದುಃಖದಿಂದ ಹಾಹಾಕಾರವನ್ನು ಮಾಡಿ ರೋದಿಸುತ್ತ ಸಿಂಹಾಸನದಿಂದೆದ್ದನು.

೫. ಮಂತ್ರಿಗಳೊಡನೆ ಆ ತಟಾಕದ ಬಳಿಗೆ ಬಂದು ಜಲಸಮೀಪದಲ್ಲಿ ಗುರುತುಗಳನ್ನಾಗಲಿ, ದಾರಿಯನ್ನಾಗಲಿ ಕಾಣದೆ ಮೂರ್ಛೆಯನ್ನು ಹೊಂದಿದನು.

ತಸ್ಯ ರಾಜ್ಞಸ್ತು ದುಃಖೇನ ದುಃಖಿತೋ ನಾಗರೋ ಜನಃ ।
ಕ್ಷಣೇನಾಶ್ವಾಸಿತೋ ರಾಜಾ ಮಂತ್ರಿಭಿಃ ಸ ಪುರೋಹಿತೈಃ ॥ ೬ ॥
ಕಿಂ ಕುರ್ಮ ಇತ್ಯುವಾಚೇದಮಸ್ಮಿನ್ಕಾಲೇ ವಿಧೀಯತಾಂ ।
ಸರ್ವೈಸ್ತತ್ಸಂವಿದಂ ಕೃತ್ವಾ ವಾಹಿನೀಂ ಚತುರಂಗಿಣೀಂ ॥ ೭ ॥
ಪ್ರೇಷಯಾಮ ದಿಶಃ ಸರ್ವಾ ಹಸ್ತ್ಯಶ್ವರಥಸಂಕುಲಾ ।
ವಾದಿತ್ರಾಣಿ ಚ ವಾದ್ಯಂತೇ ವ್ಯಾಕುಲೀಭೂತಸಂಕುಲೇ ॥ ೮ ॥
ನಾರಾಚೈಸ್ತೋಮರೈರ್ಭಲ್ಲೈಃ ಖಡ್ಗೈಃ ಪರಶ್ವಧಾದಿಭಿಃ ।
ರಾಜಾ ಸನ್ನಾಹಬದ್ಧೋಽಭೂದ್ಗಗನಂ ಗ್ರಸತೇ ಕಿಲ ॥ ೯ ॥
ನ ದೇವೋ ನ ಚ ಗಂಧರ್ವೋ ನ ದೈತ್ಯೋ ನ ಚ ರಾಕ್ಷಸಃ ।
ಕಿಂ ಕರಿಷ್ಯತಿ ರಾಜಾಽದ್ಯ ನ ಜಾನೇ ರೋಷನಿಷ್ಕೃತಿಂ ॥ ೧೦ ॥
ನಾಗರೋಽಪಿ ಜನಸ್ತತ್ರ ದೃಷ್ಟ್ವಾ ಚಕಿತಮಾನಸಃ ।
ಚತುರ್ದಶಸಹಸ್ರಾಣಿ ದಂತಿನಾಂ ಸೃಣಿಧಾರಿಣಾಂ ॥ ೧೧ ॥

---

೬. ರಾಜನ ದುಃಖದಿಂದ ನಗರದ ಸಕಲನಾಗರಿಕರೂ ಮರುಗಿದರು. ನಿಮಿಷಮಾತ್ರದಲ್ಲಿಯೆ ಮಂತ್ರಿಗಳೂ ಪುರೋಹಿತರೂ ಆತನನ್ನು ಸಮಾಧಾನ ಗೊಳಿಸಿ ಎಚ್ಚರಿಸಿದರು.

೭. ಈ ಸಮಯದಲ್ಲಿ ಮಹಾರಾಜನು ಯಾವುದನ್ನು ಮಾಡಬೇಕೆಂದು ಯೋಚಿಸಿ ಇಂತೆಂದನು. "ಎಲ್ಲರೊಡನೆಯೂ ಒಡಂಬಡಿಕೆಯನ್ನು ಮಾಡಿ ಕೊಂಡು ಚತುರಂಗ ಸೈನ್ಯವನ್ನು ಕೂಡಿಸುವೆನು.

೮. ಆನೆ, ಕುದುರೆ, ರಥಗಳೊಡನೆ ನನ್ನ ಸೈನ್ಯವನ್ನು ಹತ್ತು ದಿಕ್ಕುಗಳಿಗೂ ಕಳುಹಿಸಿಕೊಡುವೆನು." ಕೂಡಲೆ ಸೈನ್ಯ ಸನ್ನದ್ಧವಾಯಿತು. ಸೈನ್ಯದ ಸನ್ನಾಹವಾಗುತ್ತಿರಲು ವ್ಯಾಕುಲಿತವಾದ ಆ ದೇಶದಲ್ಲಿ ರಣವಾದ್ಯಗಳು ಮೊಳಗಿದುವು.

೯. ಬಾಣಗಳು, ತೋಮರಗಳು, ಭಲ್ಲಗಳು, ಖಡ್ಗಗಳು, ಪರಶ್ವಥಗಳು, ಮುಂತಾದ ಆಯುಧಗಳಿಂದ ಸನ್ನದ್ಧನಾಗಿ ರಾಜನು ಆಕಾಶವನ್ನೆ ನುಂಗು ವಂತೆ ತೋರುತ್ತಿದ್ದನು.

೧೦. "ದೇವತೆಯಾಗಲಿ, ಗಂಧರ್ವನಾಗಲಿ, ದೈತ್ಯನಾಗಲಿ, ರಾಕ್ಷಸ ನಾಗಲಿ ಇಲ್ಲದ ಈ ಸಮಯದಲ್ಲಿ ರಾಜನು ತನ್ನ ರೋಷಕ್ಕೆ ಶಾಂತಿಯನ್ನು ಹೇಗೆ ಮಾಡುವನೆಂಬುದನ್ನು ನಾವು ಕಾಣೆವು."

೧೧. ಇಂತೆಂದು ಪುರಜನರ ಸಮೂಹವು ಚಿಂತಿಸುತ್ತ ಚಕಿತಭಾವದಿಂದ ಸೈನ್ಯವನ್ನು ನೋಡುತ್ತಿದ್ದಿತು. ಮದವನ್ನು ಸುರಿಸುತ್ತಿರುವ ಹದಿನಾಲ್ಕು ಸಾವಿರ ಆನೆಗಳು ನೆರೆದುವು.

ಅಶ್ವಾರೋಹಸಹಸ್ರಾಣಿ ಹ್ಯಶೀತಿಃ ಶಸ್ತ್ರಪಾಣಿನಾಂ ।
ರಥಾನಾಂ ತ್ರಿಸಹಸ್ರಾಣಿ ವಿಂಶತಿರ್ಭರತರ್ಷಭ ॥ ೧೨ ॥
ಸಂಗ್ರಾಮಭೇರೀನಿನದೈಃ ಖುರರೇಣುರ್ನಭೋಗತಾ ।
ಏತಸ್ಮಿನ್ನಂತರೇ ತಾತ ರಕ್ಷಕೋ ನಗರಸ್ಯ ಹಿ ॥ ೧೩ ॥
ಗೃಹೀತ್ವಾಽಽಭರಣಂ ತಸ್ಯಾಸ್ತ್ವಂಗಪ್ರತ್ಯಂಗಿಕಂ ತಥಾ ।
ಕುಂಡಲಾಂಗದಕೇಯೂರಹಾರನೂಪುರಝುಲ್ಲರೀಃ ॥ ೧೪ ॥
ನಿವೇದ್ಯಾಽಕಥಯದ್ರಾಜ್ಞೇ ಮಯಾ ದೃಷ್ಟಂ ತ್ವವೇಕ್ಷಣಾತ್ ।
ತಾಪಸಾನಾಮಾಶ್ರಮೇ ತು ಮಾಂಡವ್ಯೋ ಯತ್ರ ತಿಷ್ಠತಿ ॥ ೧೫ ॥
ತಾಪಸೈರ್ವೇಷ್ಟಿತೋ ಯತ್ರ ದದೃಶೇ ತತ್ರ ಸನ್ನಿಧೌ ।
ದಂಡಪಾಸಿವಚಃ ಶ್ರುತ್ವಾ ಪ್ರತ್ಯಕ್ಷಾಂಗವಿಭೂಷಣಂ ॥ ೧೬ ॥
ಸ ಕ್ರೋಧರಕ್ತನಯನೋ ಮಂತ್ರಿಣೋ ವೀಕ್ಷ್ಯ ನೈಗಮಾನ್ ।
ಈದೃಗ್ಭೂತಸ್ಸಮಾಚಾರೋ ಬ್ರಾಹ್ಮಣೋ ನಗರೇ ಮಮ ॥ ೧೭ ॥

---

೧೨. ಶಸ್ತ್ರಪಾಣಿಗಳಾದ ಎಂಬತ್ತುಸಾವಿರ ಕುದುರೆಯಾಳುಗಳು ಸೇರಿದರು. ಧರ್ಮರಾಜನೆ! ಇಪ್ಪತ್ತುಮೂರುಸಾವಿರ ರಥಗಳು ಸಜ್ಜುಗೊಳಿಸಲ್ಪಟ್ಟುವು.

೧೩. ಯುದ್ಧಯಾತ್ರೆಯ ಭೇರಿಯ ಶಬ್ದದಿಂದಲೂ ಕುದುರೆಗಳ ಗೊರಸುಗಳ ಧೂಳಿನಿಂದಲೂ ಆಕಾಶವು ತುಂಬಿಹೋಯಿತು. ರಾಜನೆ! ಇಷ್ಟರಲ್ಲಿಯೇ ನಗರಪಾಲಕನು ಬಂದನು.

೧೪. ಆ ಕಾಮಪ್ರಮೋದಿನಿಯ ಅಂಗಾಂಗಳ ಕುಂಡಲ, ಅಂಗದ, ಕೇಯೂರ, ಹಾರ, ನೂಪುರ, ಝುಲ್ಲರಿಗಳೇ ಮುಂತಾದ ಆಭರಣಗಳನ್ನು ಕೈಗಳಲ್ಲಿ ಹಿಡಿದು ತಂದನು.

೧೫. ಅವುಗಳನ್ನು ರಾಜನೆದುರಿನಲ್ಲಿಟ್ಟು ಇಂತೆಂದನು. "ನಾನು ಕಾಮಮೋದಿನಿಯನ್ನು ಹುಡುಕುತ್ತಿರಲು ಮಾಂಡವ್ಯನೆಂಬವನು ವಾಸಮಾಡುತ್ತಿರುವ ತಾಪಸಾಶ್ರಮವೊಂದನ್ನು ಕಂಡೆನು.

೧೬. ತಪಸ್ವಿಗಳಿಂದ ಪರಿವೃತನಾದ ಆತನ ಸನ್ನಿಧಿಯಲ್ಲಿ ಇವುಗಳೆಲ್ಲವನ್ನೂ ಕಂಡೆನು." ರಾಜನು ಪ್ರತಿಹಾರಿಯ ಮಾತನ್ನು ಕೇಳಿ ಮಗಳ ಅಂಗಭೂಷಣಗಳನ್ನೂ ನೋಡಿದನು.

೧೭. ಮತ್ತು ಕೋಪದಿಂದ ಕೆಂಪೇರಿದ ಕಣ್ಣುಗಳಿಂದ ನಿಗಮಾಗಮಶಾಸ್ತ್ರಜ್ಞರಾದ ಮಂತ್ರಿಗಳನ್ನು ನೋಡಿ ಹೇಳಿದನು: "ಇಂತಹ ಆಚರಣೆಯುಳ್ಳ ಬ್ರಾಹ್ಮಣನು ನಮ್ಮ ನಗರದಲ್ಲಿರುವನೆ?

ಚೌರಚರ್ಯಾಂ ವ್ರತಚ್ಛನ್ನಃ ಪರದ್ರವ್ಯಾಪಹಾರಕಃ ।
ತೇನ ಕನ್ಯಾ ಹೃತಾ ಮೇಽದ್ಯ ತಪಸ್ವಿಪಾಪಕರ್ಮಿಣಾ ॥ ೧೮ ॥
ಶಾಕುಂತಂ ರೂಪಮಾಸ್ಥಾಯ ಜಲಸ್ಥೋ ಗಗನಂ ಯಯೌ ।
ಪಾಖಂಡಿನೋ ವಿಕರ್ಮಸ್ಥಾನ್ಬಿಡಾಲವ್ರತಿಕಾಂಛಠಾನ್ ॥ ೧೯ ॥
ಚಾಟುತಸ್ಕರದುರ್ವೃತ್ತಾನ್ಹನ್ಯಾನ್ನಸ್ಯಸ್ಯ ಪಾತಕಂ ।
ನ ದ್ರಷ್ಟವ್ಯೋ ಮಯಾ ಪಾಪಃ ಸ್ತೇಯೀ ಕನ್ಯಾಪಹಾರಕಃ ॥ ೨೦ ॥
ಶೂಲಮಾರೋಪ್ಯತಾಂ ಕ್ಷಿಪ್ರಂ ನ ವಿಚಾರಸ್ತು ತಸ್ಯ ವೈ ।
ಸ ಚ ವಧ್ಯೋ ಮಯಾ ದುಷ್ಟೋ ರಕ್ಷೋರೂಪೀ ತಪೋಧನಃ ॥ ೨೧ ॥
ಏವಂ ಬ್ರುವಂಶ್ಚಲನ್ಕ್ರೋಧಾದಾದಿಶ್ಯ ದಂಡವಾಸಿನಂ ।
ಕಾರ್ಯಾಕಾರ್ಯಂ ನ ವಿಜ್ಞಾಯ ಶೂಲಮಾರೋಪಯದ್ದ್ವಿಜಂ ॥ ೨೨ ॥
ಪೌರಾ ಜಾನಪದಾಃ ಸರ್ವೇ ಅಶ್ರುಪೂರ್ಣಮುಖಾಸ್ತದಾ ।
ಹಾಹೇತ್ಯುಕ್ತ್ವಾ ರುದಂತ್ಯನ್ಯೇ ವದಂತಿ ಚ ಪೃಥಕ್ಪೃಥಕ್ ॥ ೨೩ ॥

---

೧೮. ವ್ರತಗಳನ್ನು ಮಾಡುವ ವೇಷದಿಂದ ಚೌರ್ಯವನ್ನೇ ಅವಲಂಬಿಸಿ ಪರದ್ರವ್ಯವನ್ನಪಹರಿಸುವ ಪಾಪಕರ್ಮಿಯಾದ ಇವನಿಂದಲೇ ಇಂದು ನನ್ನ ಮಗಳು ಅಪಹೃತಳಾಗಿರಬೇಕು.

೧೯–೨೧. ಅವನು ಶಕುಂತಪಕ್ಷಿಯ ರೂಪದಿಂದ ಜಲದಲ್ಲಿಯೇ ವಾಸವಾಗಿದ್ದು ಗಗನಕ್ಕೆ ಹಾರಿಹೋಗಿರಬೇಕು. ಪಾಷಂಡಿಗಳೂ, ಮಾಡಬಾರದ ಕೆಲಸಗಳನ್ನು ಮಾಡುವವರೂ, ಬಿಡಾಲವ್ರತಧಾರಿಗಳೂ, ಶಠರೂ, ಚಾಟೂಕ್ತಿಗಳನ್ನು ಹೇಳುತ್ತ ಮೋಸಮಾಡುವವರೂ, ದುರಾಚಾರಿಗಳೂ ಆದವರನ್ನು ಕೊಲ್ಲತಕ್ಕದ್ದು; ಇದರಲ್ಲಿ ಯಾವ ಪಾತಕವೂ ಇರುವುದಿಲ್ಲ. ಕನ್ಯಾಪಹಾರಕನೂ, ಕಳ್ಳನೂ, ಪಾಪಿಯೂ ಆದ ಅವನನ್ನು ನಾನು ನೋಡತಕ್ಕದ್ದಲ್ಲ. ದುಷ್ಟನೂ, ರಾಕ್ಷಸರೂಪನೂ, ತಪೋಧನನ ವೇಷದಿಂದಿರುವವನೂ ಆದ ಅವನನ್ನು ಜಾಗ್ರತೆಯಾಗಿ ಶೂಲಕ್ಕೇರಿಸಿರಿ. ಅವನ ವಿಷಯದಲ್ಲಿ ಯಾವ ವಿಚಾರವನ್ನೂ ಮಾಡುವುದು ಬೇಡ.''

೨೨. ಆ ಮಹಾರಾಜನು ಈ ರೀತಿ ನುಡಿದು, ಕೋಪದಿಂದ ಕದಲುತ್ತ, ಕಾರ್ಯಾಕಾರ್ಯಗಳನ್ನು ತಿಳಿಯದೆ ಚಂಡಾಲರಿಗೆ ಆಜ್ಞಾಪಿಸಿ ಆ ಬ್ರಾಹ್ಮಣನನ್ನು ಶೂಲಕ್ಕೇರಿಸಿದನು.

೨೩. ಆಗ ಪುರಜನರೂ, ಜನಪದದವರೂ ಎಲ್ಲರೂ ಕಂಬನಿದುಂಬಿದವರಾಗಿ ಹಾಹಾಕಾರಮಾಡಿದರು. ಇತರರು ಬೇರೆ ಬೇರೆಯಾಗಿ ಮಾತನಾಡತೊಡಗಿದರು.

ಕುತ್ಸಿತಂ ಚ ಕೃತಂ ಕರ್ಮ ರಾಜ್ಞಾ ಚಂಡಾಲಚಾರಿಣಾ ।
ಬ್ರಾಹ್ಮಣೋ ನೈವ ವಧ್ಯೋ ಹಿ ವಿಶೇಷೇಣ ತಪೋವೃತಃ ॥ ೨೪ ॥
ಯದಿ ರೋಷಸಮಾಚಾರೋ ನಿರ್ವಾಸ್ಯೋ ನಗರಾದ್ಬಹಿಃ ।
ನ ಜಾತು ಬ್ರಾಹ್ಮಣಂ ಹನ್ಯಾತ್ಸರ್ವಪಾಪೇಷ್ವವಸ್ಥಿತಂ ॥ ೨೫ ॥
ರಾಷ್ಟ್ರಾದೇನಂ ಬಹಿಃ ಕುರ್ಯಾತ್ಸಮಗ್ರಧನಮಕ್ಷತಂ ।
ನಾಶ್ನಾತಿ ಚ ಗೃಹೇ ರಾಜನ್ನಾಽಗ್ನಿರ್ನಗರವಾಸಿನಾಂ ।
ಸರ್ವೇಽಪ್ಯುದ್ವಿಗ್ನಮನಸೋ ಗೃಹವ್ಯಾಪ್ತಿವಿವರ್ಜಿತಾಃ ॥ ೨೬ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ
ಪಂಚಮೇ ಆವಂತ್ಯಖಂಡೇ ತೃತೀಯೇ ರೇವಾಖಂಡೇ
"ಮಾಂಡವ್ಯಶೂಲಾರೋಪಣವರ್ಣನಂ" ನಾಮ
ಸಪ್ತತ್ಯಧಿಕಶತತಮೋಽಧ್ಯಾಯಃ

---

೨೪. "ಅಯ್ಯೋ! ಚಂಡಾಲನಾದ ಈ ರಾಜನು ಬಹಳ ಹೇಯವಾದ ಕಾರ್ಯವನ್ನು ಮಾಡಿದನು. ಬ್ರಾಹ್ಮಣನನ್ನು ಕೊಲ್ಲಬಾರದು. ಅದರಲ್ಲಿಯೂ ತಪೋಧನನ್ನು ಕೊಲ್ಲಲೇಬಾರದು.

೨೫. ಹಾಗೆ ರೋಷಬರುವಂತಹ ಕೆಲಸವನ್ನು ಮಾಡಿದ್ದರೂ ಬ್ರಾಹ್ಮಣನಾದವನನ್ನು ಊರಿನಿಂದ ಹೊರಕ್ಕೆ ಅಟ್ಟಬೇಕು. ಸಮಸ್ತ ಪಾಪಗಳನ್ನು ಮಾಡಿದ್ದರೂ ವಿಪ್ರನನ್ನೆಂದಿಗೂ ಕೊಲ್ಲಬಾರದು.

೨೬. ದೊರೆಯೆ! ಇವನಲ್ಲಿರುವ ಸಮಗ್ರಧನದೊಡನೆ ಇವನನ್ನು ಕೊಲ್ಲದೆ ರಾಷ್ಟ್ರದಿಂದ ಬಹಿಷ್ಕರಿಸಬೇಕು. ಇವನನ್ನು ಕೊಂದುದಾದರೆ ನಗರದಲ್ಲಿ ಯಾರ ಮನೆಗಳಲ್ಲಿಯೂ ಅಗ್ನಿಯು ಹವಿಸ್ಸನ್ನು ಭುಜಿಸುವುದಿಲ್ಲ" ಎಂದು ನುಡಿದು ಎಲ್ಲರೂ ಉದ್ವಿಗ್ನಮನಸ್ಕರಾಗಿ ಮನೆಗಳಿಗೆ ಹೋಗದೆ ಅಲ್ಲಿಯೆ ನಿಂತರು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ
ಶ್ರೀ ಸ್ಕಾಂದಮಹಾಪುರಾಣದ ಐದನೆಯ ಆವಂತ್ಯಖಂಡದ ಮೂರನೆಯ ರೇವಾಖಂಡದಲ್ಲಿ
"ಮಾಂಡವ್ಯಶೂಲಾರೋಪಣವರ್ಣನ"ವೆಂಬ
ನೂರೆಪ್ಪತ್ತನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

## ಅಥೈಕಸಪ್ತತ್ಯುತ್ತರಶತತಮೋಽಧ್ಯಾಯಃ

### ಶಾಂಡಿಲೀಋಷಿಸಂವಾದವರ್ಣನಂ

ಶ್ರೀ ಮಾರ್ಕಂಡೇಯ ಉವಾಚ:—

**ಕಥಿತಂ ಬ್ರಾಹ್ಮಣಂ ದ್ರಷ್ಟುಂ ಶೂಲೇ ಕ್ಷಿಪ್ತಂ ತಪೋಧನೈಃ ।**
**ನಾರಾಯಣಸಮೀಪೇ ತು ಗತಾಃ ಸರ್ವೇ ಮಹರ್ಷಯಃ ॥ ೧ ॥**
**ನಾರದೋ ದೇವಲೋ ರೈಭ್ಯೋ ಯಮಃ ಶಾತಾತಪೋಽಂಗಿರಾಃ ।**
**ವಸಿಷ್ಠೋ ಜಮದಗ್ನಿಶ್ಚ ಯಾಜ್ಞವಲ್ಕ್ಯೋ ಬೃಹಸ್ಪತಿಃ ॥ ೨ ॥**
**ಕಶ್ಯಪೋಽತ್ರಿರ್ಭರದ್ವಾಜೋ ವಿಶ್ವಾಮಿತ್ರೋಽರುಣಿರ್ಮುನಿಃ ।**
**ವಾಲಖಿಲ್ಯಾದಯೋಽನ್ಯೇಽಚ ಸರ್ವೇಽಪ್ಯೃಷಿಗಣಾಽಸ್ತ್ವಯಾಃ ॥ ೩ ॥**
**ದದೃಶುಃ ಶೂಲಮಾರೂಢಂ ಮಾಂಡವ್ಯಮೃಷಿಪುಂಗವಾಃ ।**
**ಪ್ರೋಚುರ್ನಾರಾಯಣಂ ವಿಪ್ರಂ ಕಿಂ ಕುರ್ಮಸ್ತವ ಚೇಪ್ಸಿತಂ ॥ ೪ ॥**
**ಸರ್ವೇ ತೇ ತತ್ರ ಸಾನ್ನಿಧ್ಯಾನ್ಮಾಂಡವ್ಯಸ್ಯ ಮಹಾತ್ಮನಃ ।**
**ಸಂಭ್ರಾಂತಾ ಆಗತಾ ಊಚುಃ ಕಿಂ ಮೃತಃ ಕಿಂ ನು ಜೀವತಿ ॥ ೫ ॥**

---

## ಕನ್ನಡದ ಅನುವಾದ

### ಶಾಂಡಿಲೀಋಷಿಸಂವಾದವರ್ಣನ

೧–೩. ಶ್ರೀ ಮಾರ್ಕಂಡೇಯನು ಹೇಳುತ್ತಾನೆ:—ನಾರದ, ದೇವಲ, ರೈಭ್ಯ, ಯಮ, ಶಾತಾತಪ, ಅಂಗಿರ, ವಸಿಷ್ಠ, ಜಮದಗ್ನಿ, ಯಾಜ್ಞವಲ್ಕ್ಯ, ಬೃಹಸ್ಪತಿ, ಕಶ್ಯಪ, ಅತ್ರಿ, ಭರದ್ವಾಜ, ವಿಶ್ವಾಮಿತ್ರ, ಅರುಣಿ, ವಾಲಖಿಲ್ಯರು ಇವರೇ ಮೊದಲಾದ ಸಮಸ್ತಮುನಿಗಳೂ ತಪಸ್ವಿಗಳು ಹೇಳಿದಂತೆ ಶೂಲವನ್ನೇರಿಸಿರುವ ಮಾಂಡವ್ಯನನ್ನು ನೋಡಲು ನಾರಾಯಣ ಮುನಿಯ ಬಳಿಗೆ ಹೋದರು.

೪. ಅವರು ಶೂಲದಲ್ಲಿರುವ ಮಾಂಡವ್ಯನನ್ನು ನೋಡಿ ನಾರಾಯಣನನ್ನು ಕುರಿತು, "ಈಗ ನಾವು ನಿನಗೆ ಯಾವ ಅಭೀಷ್ಟವನ್ನುಂಟುಮಾಡಬೇಕು?" ಎಂದು ಪ್ರಶ್ನಿಸಿದರು.

೫. ಅವರೆಲ್ಲರೂ ಆ ಮಾಂಡವ್ಯನ ಬಳಿಗೈದಿ ಸಂಭ್ರಾಂತರಾಗಿ, "ಈ ಮುನಿಯು ಮಡಿದಿರುವನೊ? ಬದುಕಿರುವನೊ?" ಎಂದು ಕೇಳಿದರು.

ಅವಸ್ಥಾಂ ತಸ್ಯ ತೇ ದೃಷ್ಟ್ವಾ ವಿಷಾದಮುಗಮನ್ಪರಂ ।
ಅಸಹಿತ್ವಾ ತು ತದ್ದುಃಖಂ ಸರ್ವೇ ತೇ ಮನಸಾ ದ್ವಿಜಾಃ ॥ ೬ ॥
ಪೃಚ್ಛ್ಯತಾಂ ಯದಿ ಮನ್ಯೇತ ರಾಜಾನಂ ಭಸ್ಮಸಾತ್ಕುರು ।
ತೇಷಾಂ ತದ್ವಚನಂ ಶ್ರುತ್ವಾ ವಾಕ್ಯಂ ನಾರಾಯಣೋಽಬ್ರವೀತ್ ॥ ೭ ॥
ಮಯಿ ಜೀವತಿ ಮದ್ಭ್ರಾತಾ ಹ್ಯವಸ್ಥಾಮೀದೃಶೀಂ ಗತಃ ।
ಧಿಗ್ಜೀವಿತಂ ಚ ಮೇ ಕಿಂ ತು ತಪಸೋ ವಿದ್ಯತೇ ಫಲಂ ॥ ೮ ॥
ದೃಷ್ಟ್ವಾ ಶೂಲಸ್ಥಿತಂ ಜ್ಯೇಷ್ಠಂ ಮನ್ಮನೋಽನುವಿದೀರ್ಯತೇ ।
ಪರಂ ಕಿಂ ತು ಕರಿಷ್ಯಾಮಿ ಯೇನ ರಾಷ್ಟ್ರಂ ಸರಾಜಕಂ ॥ ೯ ॥
ಭಸ್ಮಸಾಚ್ಚ ಕರೋಮ್ಯದ್ಯ ಭವದ್ಭಿಃ ಕ್ಷಮ್ಯತಾಮಿಹ ।
ಏವಮುಕ್ತ್ವಾ ಗೃಹೀತ್ವಾಽಸೌ ಕರಸ್ಥಮಭಿಮಂತ್ರಯತ್ ॥ ೧೦ ॥
ಕ್ರೋಧೇನ ಪಶ್ಯತೇ ಯಾವತ್ತಾವದ್ಧುಂಕಾರಕೋಽಭವತ್ ।
ತೇನ ಹುಂಕಾರಶಬ್ದೇನ ಋಷಯೋ ವಿಸ್ಮಿತಾಸ್ತದಾ ॥ ೧೧ ॥
ಮಾಂಡವ್ಯಸ್ಯ ಸಮೀಪೇ ತು ಹ್ಯಪೃಚ್ಛಂಸ್ತೇ ದ್ವಿಜೋತ್ತಮಾಃ ।
ನಿವಾರಯಸಿ ಕಿಂ ವಿಪ್ರ ಶಾಪಂ ನೃಪಜಿಘಾಂಸನಂ ॥ ೧೨ ॥
ಅಪಾಪಸ್ಯ ತು ಯೇನೇಹ ಕೃತಮಸ್ಯ ಜಿಘಾಂಸನಂ ।
ಋಷೀಣಾಂ ವಚನಂ ಶ್ರುತ್ವಾ ಕೃಚ್ಛ್ರಾನ್ಮಾಂಡವ್ಯಕೋಽಬ್ರವೀತ್॥ ೧೩ ॥

---

೬–೭. ಅವನ ದಾರುಣಾವಸ್ಥೆಯನ್ನು ಕಂಡು ಅತ್ಯಂತ ವ್ಯಥೆಗೊಂಡು ಅವನ ದುಃಖವನ್ನು ಸಹಿಸದೆ, "ಮಾಂಡವ್ಯನನ್ನು ಕೇಳು. ಅವನು ಒಪ್ಪಿದರೆ ದೊರೆಯನ್ನು ಬೂದಿಮಾಡು" ಎಂದರು. ನಾರಾಯಣನು ಆ ಮುನಿಗಳ ಆ ಮಾತನ್ನು ಕೇಳಿ ಇಂತೆಂದನು.

೮. ನಾನು ಬದುಕಿರುವಾಗ ನನ್ನ ಸಹೋದರನು ಇಂತಹ ಅವಸ್ಥೆಯನ್ನು ಹೊಂದಿರುವನಲ್ಲ! ನನ್ನ ಬಾಳು ನಿಂದ್ಯವಾದುದು. ಆದರೆ ನನ್ನಲ್ಲಿ ತಪಸ್ಸಿನ ಫಲವಿರುವುದು.

೯–೧೦. ಶೂಲದಲ್ಲಿರುವ ನನ್ನ ಅಣ್ಣನನ್ನು ನೋಡಿದರೆ ನನ್ನ ಮನಸ್ಸು ವ್ಯಥೆಗೊಳ್ಳುವುದು. ಆದ್ದರಿಂದ ರಾಜನೊಡನೆ ಈ ದೇಶವನ್ನು ಬೂದಿಮಾಡುವೆನು. ನೀವು ಕ್ಷಮಿಸಿರಿ." ಹೀಗೆ ಹೇಳಿ ಅವನು ಕೈಯಲ್ಲಿ ನೀರನ್ನು ಹಿಡಿದುಕೊಂಡು ಜಪಿಸಿದನು.

೧೧–೧೩. ಅವನು ಕೋಪದಿಂದ ನೋಡುವಷ್ಟರಲ್ಲಿ ಹುಂಕಾರವೊಂದು ಕೇಳಿಸಲು ಋಷಿಗಳು ಅದರಿಂದ ಆಶ್ಚರ್ಯಗೊಂಡು ಮಾಂಡವ್ಯನನ್ನು ಕುರಿತು, "ಪಾಪಿಯಲ್ಲದ ನಿನ್ನನ್ನು ಕೊಲ್ಲಲು ಆಜ್ಞೆಮಾಡಿದ ರಾಜನನ್ನು ಶಾಪದಿಂದ ಕೊಲ್ಲುವುದನ್ನು ತಡೆಯುವೆಯಾ?" ಎಂದು ಪ್ರಶ್ನಿಸಿದರು. ಋಷಿಗಳ ಆ ಮಾತನ್ನು ಕೇಳಿ ಮಾಂಡವ್ಯನು ಕಷ್ಟದಿಂದ ಇಂತೆಂದನು.

ಅಭಿವಂದಾಮಿ ವೋ ಮೂರ್ಧ್ನಾ ಸ್ವಾಗತಂ ಋಷಯಃ ಸದಾ ।
ಅರ್ಘ್ಯಸನ್ಮಾನಪೂಜಾರ್ಹಾಃ ಸರ್ವೇಽತ್ರೋಪವಿಶಂತು ತೇ ॥ ೧೪ ॥
ನಿವಿಷ್ಟೈಕಾಗ್ರಮನಸಾ ಸರ್ವಾನ್ ಮಾಂಡವ್ಯಕೋಽಬ್ರವೀತ್ ॥ ೧೫ ॥
ಪ್ರಾಪ್ತಂ ದುಃಖಂ ಮಯಾ ಘೋರಂ ಪೂರ್ವಜನ್ಮಾರ್ಜಿತಂ ಫಲಂ ।
ಮಾ ವಿಷಾದಂ ಕುರುಧ್ವಂ ಭೋಃ ಕೃತಂ ಪಾಪಂ ತು ಭುಜ್ಯತೇ ॥ ೧೬ ॥

ಋಷಯ ಊಚುಃ:–

ಕೇನ ಕರ್ಮವಿಪಾಕೇನ ಇಹ ಜಾತ್ಯಂತರಂ ವ್ರಜೇತ್ ।
ದಾನಧರ್ಮಫಲೇನೈವ ಕೇನ ಸ್ವರ್ಗಂ ಚ ಗಚ್ಛತಿ ॥ ೧೭ ॥

ಮಾಂಡವ್ಯ ಉವಾಚ:–

ಅದತ್ತದಾನಾ ಜಾಯಂತೇ ಪರಭಾಗ್ಯೋಪಜೀವಿನಃ ।
ನ ಸ್ನಾನಂ ನ ಜಪೋ ಹೋಮೋ ನಾಽಽತಿಥ್ಯಂ ನ ಸುರಾರ್ಚನಂ ॥ ೧೮ ॥
ನ ಪರ್ವಣಿ ಪಿತೃಶ್ರಾದ್ಧಂ ನ ದಾನಂ ದ್ವಿಜಸತ್ತಮಾಃ ।
ವ್ರಜಂತಿ ನರಕೇ ಘೋರೇ ಯಾಂತಿ ತೇ ತ್ವಂತ್ಯಜಾಂ ಗತಿಂ ॥ ೧೯ ॥

ಪುನರ್ದರಿದ್ರಾಃ ಪುನರೇವ ಪಾಪಾಃ
ಪಾಪಪ್ರಭಾವಾನ್ನರಕೇ ವಸಂತಿ ।
ತೇನೈವ ಸಂಸಾರಿಣಿ ಮರ್ತ್ಯಲೋಕೇ
ಜೀವಾದಿಭೂತೇ ಕೃಮಯಃ ಪತಂಗಾಃ ॥ ೨೦ ॥

---

೧೪. "ಮುನಿಗಳೆ! ನಮಸ್ಕಾರ. ನಿಮಗೆ ಸ್ವಾಗತವಾಗಲಿ. ಅರ್ಘ್ಯ ಮೊದಲಾದುವುಗಳಿಂದ ಸನ್ಮಾನಮಾಡಲರ್ಹರಾದ ನೀವೆಲ್ಲರೂ ಇಲ್ಲಿ ಕುಳಿತುಕೊಳ್ಳಿರಿ."

೧೫–೧೬. ಇಂತು ನುಡಿದುದಲ್ಲದೆ ಒಮ್ಮನಸ್ಸಿನಿಂದ ಮಾಂಡವ್ಯನು ಹೀಗೆಂದನು. "ನಾನು ಪೂರ್ವಜನ್ಮದಲ್ಲಿ ಮಾಡಿದ ಪಾಪದಿಂದ ಘೋರವಾದ ದುಃಖವು ಪ್ರಾಪ್ತವಾಗಿದೆ. ನೀವು ವ್ಯಥೆಗೊಳ್ಳಬೇಡಿರಿ. ಮಾಡಿದ ಪಾಪದ ಫಲವನ್ನು ಈಗ ಅನುಭವಿಸುತ್ತಿರುವೆನು."

೧೭. ಋಷಿಗಳು ಹೇಳುತ್ತಾರೆ:—ಮಾನವನು ಯಾವ ಕರ್ಮದ ಪರಿಣಾಮದಿಂದ ಬೇರೆ ಜಾತಿಯನ್ನು ಹೊಂದುವನು? ಯಾವ ದಾನಧರ್ಮದ ಫಲದಿಂದ ಸ್ವರ್ಗವನ್ನು ಸೇರುವನು?

೧೮–೧೯. ಮಾಂಡವ್ಯನು ಹೇಳುತ್ತಾನೆ:—ದಾನವನ್ನು ಕೊಡದಿದ್ದವರು ಪರರ ಭಾಗ್ಯದಿಂದ ಜೀವಿಸುವರು. ಸ್ನಾನ ಜಪ, ಹೋಮ, ಆತಿಥ್ಯ, ದೇವಪೂಜೆ, ಪರ್ವಕಾಲದಲ್ಲಿ ಪಿತೃಶ್ರಾದ್ಧ, ದಾನ ಇವುಗಳನ್ನು ಮಾಡದಿದ್ದವರು ಘೋರ ನರಕವನ್ನು ಸೇರಿ ಚಂಡಾಲರಾಗುವರು.

೨೦. ಮರಳಿ ಬಡವರೂ, ಪಾಪಿಗಳೂ, ಪಾಪದ ಪ್ರಭಾವದಿಂದ ನರಕವಾಸಿಗಳೂ, ಅದರಿಂದಲೇ ಭೂಲೋಕದಲ್ಲಿ ಕೃಮಿ ಪತಂಗಗಳೂ ಆಗುವರು.

ಯೇ ಸ್ನಾನಶೀಲಾ ದ್ವಿಜದೇವಭಕ್ತಾ
ಜಿತೇಂದ್ರಿಯಾ ಜೀವದಯಾಽನುಶೀಲಾಃ ।
ತೇ ದೇವಲೋಕೇಷು ವಸಂತಿ ಹೃಷ್ಟಾ
ಯೇ ಧರ್ಮಶೀಲಾ ಜಿತಮಾನರೋಷಾಃ ॥ ೨೧ ॥
ವಿದ್ಯಾವಿನೀತಾ ನ ಪರೋಪತಾಪಿನಃ
ಸ್ವದಾರತುಷ್ಟಾಃ ಪರದಾರವರ್ಜಿತಾಃ ।
ತೇಷಾಂ ನ ಲೋಕೇ ಭಯಮಸ್ತಿ ಕಿಂಚಿ
ತ್ಸ್ವಭಾವಶುದ್ಧಾ ಗತಕಲ್ಮಷಾ ಹಿ ತೇ ॥ ೨೨ ॥

ಋಷಯ ಊಚುಃ :—

ಪೂರ್ವಜನ್ಮನಿ ವಿಪ್ರೇಂದ್ರ ಕಿಂ ತ್ವಯಾ ದುಷ್ಕೃತಂ ಕೃತಂ ।
ಯೇನ ಕಷ್ಟಮಿದಂ ಪ್ರಾಪ್ತಂ ಸಂಧಾನಂ ಶೂಲಗರ್ಹಿತಂ ॥ ೨೩ ॥
ಶೂಲಸ್ಥಂ ತ್ವಾಂ ಸಮಾಲಕ್ಷ್ಯ ಹ್ಯಾಗತಾಃ ಸರ್ವ ಏವ ಹಿ ।
ಜೀವಂತಂ ತ್ವಾಂ ಪ್ರಪಶ್ಯಾಮ ತ್ವಂ ತರನ್ನವತಾರಯನ್ ।
ರುಜಾ ಸಂತಾಪಜಂ ದುಃಖಂ ಸೋಢ್ವಾಽಪಿ ತ್ವಮವೇದ ನಃ ॥ ೨೪ ॥

ಮಾಂಡವ್ಯ ಉವಾಚ :—

ಸ್ವಯಮೇವ ಕೃತಂ ಕರ್ಮ ಸ್ವಯಮೇವೋಪಯುಜ್ಯತೇ ।
ಸುಕೃತಂ ದುಷ್ಕೃತಂ ಪೂರ್ವೇ ನಾಽನ್ಯೇ ಭುಂಜಂತಿ ಕರ್ಹಿಚಿತ್ ॥ ೨೫ ॥

---

೨೧–೨೨. ಸ್ನಾನಶೀಲರೂ, ದೇವಬ್ರಾಹ್ಮಣರಲ್ಲಿ ಭಕ್ತಿಯುಳ್ಳವರೂ, ಜಿತೇಂದ್ರಿಯರೂ, ಪ್ರಾಣಿದಯೆಯುಳ್ಳವರೂ ಆದ ಮಾನವರು ದೇವಲೋಕದಲ್ಲಿ ವಾಸಮಾಡುವರು. ಧರ್ಮಶೀಲರೂ, ಅಭಿಮಾನ ಕೋಪಗಳನ್ನು ತ್ಯಜಿಸಿದವರೂ, ವಿದ್ಯಾವಿನಯಸಂಪನ್ನರೂ, ಪರರನ್ನು ಪೀಡಿಸದವರೂ, ಸ್ವದಾರನಿರತರೂ, ಪರರ ಪತ್ನಿಯರನ್ನು ಕಣ್ಣೆತ್ತಿ ನೋಡದವರೂ, ಸ್ವಭಾವಶುದ್ಧರೂ, ಪಾಪ ರಹಿತರೂ ಆದ ಜನರಿಗೆ ಲೋಕದಲ್ಲಿ ಭಯವಿಲ್ಲ.

೨೩. ಋಷಿಗಳು ಹೇಳುತ್ತಾರೆ :—ಬ್ರಾಹ್ಮಣೋತ್ತಮನೆ! ನೀನು ಹಿಂದಿನ ಜನ್ಮದಲ್ಲಿ ಯಾವ ಪಾಪವನ್ನು ಮಾಡಿರುವೆ? ಯಾವುದರಿಂದ ನಿಂದ್ಯವೂ ಕಷ್ಟಕರವೂ ಆದ ಈ ಶೂಲವನ್ನೇರಿರುವೆ?

೨೪. ನೀನು ಶೂಲದಲ್ಲಿರುವುದನ್ನು ನೋಡಿ ನಾವೆಲ್ಲರೂ ಇಲ್ಲಿಗೆ ಬಂದೆವು. ನೀನು ಇಂತಹ ದುಃಖವನ್ನು ಸಹಿಕೊಂಡು ವೇದನೆಯಿಲ್ಲದೆ ಬದುಕಿರುವೆಯೆಂತು?

೨೫. ಮಾಂಡವ್ಯನು ಹೇಳುತ್ತಾನೆ :—ಮಾನವನು ತಾನು ಮಾಡಿದ ಪುಣ್ಯವನ್ನಾಗಲಿ, ಪಾಪವನ್ನಾಗಲಿ ತಾನೇ ಅನುಭವಿಸುವನು. ಬೇರೆ ಯಾವ ಹಿಂದಿನವರೂ ಅನುಭವಿಸುವುದಿಲ್ಲ.

ಯಥಾ ಧೇನುಸಹಸ್ರೇಷು ವತ್ಸೋ ವಿಂದಂತಿ ಮಾತರಂ ।
ತಥಾ ಪೂರ್ವಕೃತಂ ಕರ್ಮ ಕರ್ತಾರಮುಪಗಚ್ಛತಿ ॥ ೨೬ ॥
ನ ಮಾತಾ ನ ಪಿತಾ ಭ್ರಾತಾ ನ ಭಾರ್ಯಾ ನ ಸುತಾಃ ಸುಹೃತ್ ।
ನ ಕಸ್ಯ ಕರ್ಮಣಾಂ ಲೇಪಃ ಸ್ವಯಮೇವೋಪಯುಜ್ಯತೇ ॥ ೨೭ ॥
ಶ್ರೂಯತಾಂ ಮಮ ವಾಕ್ಯಂ ಚ ಭವದ್ಭಿಃ ಪೃಚ್ಛಿತೋ ಹ್ಯಹಂ ।
ಪೂರ್ವೇ ವಯಸಿ ಭೋ ವಿಪ್ರಾ ಮಲಸ್ನಾನಕೃತಕ್ಷಣಃ ॥ ೨೮ ॥
ಅಜ್ಞಾನಾದ್ಬಾಲಭಾವೇನ ಯೂಕಾ ಕಂಟೇಽಧಿರೋಪಿತಾ ।
ತೈಲಾಽಭ್ಯಕ್ತಶಿರೋಗಾತ್ರೇ ಮಯಾ ಯೂಕಾ ಧೃತಾ ನಹಿ ॥ ೨೯ ॥
ಕಂಕತೀಂ ರೋಪ್ಯ ಕೇಶೇಷು ಸಾ ಸಾ ಕಂಟೇಽಧಿರೋಪಿತಾ ।
ತೇಷು ಪಾಪಂ ಕೃತಂ ಸದ್ಯಃ ಫಲಮೇತನ್ಮಮಾಽಭವತ್ ॥ ೩೦ ॥
ಕಿಂಚಿತ್ಕಾಲಂ ಕ್ಷಪಿತ್ವಾಽಹಂ ಪ್ರಾಪ್ಸ್ಯೇ ಮೋಕ್ಷಂ ನಿರಾಮಯಂ ।
ಭವಂತಸ್ತ್ವಿಹ ಸಂತಾಪಂ ಮಾಕುರುಧ್ವಂ ಮಹರ್ಷಯಃ ॥ ೩೧ ॥
ಇಮಾಮವಸ್ಥಾಂ ಭುಂಕ್ತ್ವಾಽಹಂ ಕಂಚಿಚ್ಛಪೇ ನಚೋಚ್ಚರೇ ।
ಅಹಾನಿ ಕತಿಚಿಚ್ಛೂಲೇ ಕ್ಷಪಯಿಷ್ಯಾಮಿ ಕಿಲ್ಬಿಷಂ ॥ ೩೨ ॥

---

೨೬. ಸಾವಿರ ಹಸುಗಳ ನಡುವೆ ಕರುವು ತನ್ನ ತಾಯಿಯನ್ನು ಸೇರುವಂತೆ ಹಿಂದೆ ಮಾಡಿದ ಕರ್ಮವು ಕರ್ತೃವನ್ನು ಸೇರುವುದು.

೨೭. ತಾಯಿ, ತಂದೆ, ಸಹೋದರ, ಪತ್ನಿ, ಮಕ್ಕಳು, ಮಿತ್ರರು ಇವರಾರಿಗೂ ಕರ್ಮವು ಸಂಬಂಧಿಸುವುದಿಲ್ಲ. ಮಾಡಿದವನೇ ಅದರ ಫಲವನ್ನನುಭವಿಸುವನು.

೨೮–೨೯. ನೀವು ಈಗ ನಾನು ಹೇಳುವ ಮಾತನ್ನು ಕೇಳಿರಿ. ನಾನು ಪೂರ್ವವಯಸ್ಸಿನಲ್ಲಿ ಮಲಲಿಪ್ತನಾಗಿ ಅಜ್ಞಾನದಿಂದಲೂ, ಬಾಲ್ಯದಿಂದಲೂ ಹೇನುಗಳನ್ನು ಮುಳ್ಳಿಗೆ ಚುಚ್ಚಿದೆನು. ತೈಲಾಭ್ಯಂಗಮಾಡಿಕೊಂಡ ನನ್ನ ತಲೆಯಲ್ಲಿ ಹೇನುಗಳನ್ನು ಉಳಿಸದೆ ಎಲ್ಲವನ್ನು ತೆಗೆದು ಮುಳ್ಳಿಗೆ ಚುಚ್ಚಿದೆನು.

೩೦. ಆ ಹೇನುಗಳನ್ನು ಬಾಚಣಿಗೆಯಿಂದ ಬಾಚಿ ಮುಳ್ಳಿಗೆ ಚುಚ್ಚಿದೆನು. ಆ ಪಾಪದ ಫಲವೀಗ ನನಗೆ ಉಂಟಾಗಿದೆ.

೩೧. ಮಹರ್ಷಿಗಳೆ! ನಾನು ಹೀಗೆಯೇ ಸ್ವಲ್ಪಕಾಲವನ್ನು ಕಳೆದು ದುಃಖರಹಿತವಾದ ಮೋಕ್ಷವನ್ನು ಪಡೆಯುವೆನು. ನೀವಿಲ್ಲಿ ದುಃಖಪಡಬೇಡಿರಿ.

೩೨. ನಾನು ಈ ಅವಸ್ಥೆಯನ್ನನುಭವಿಸಿ ಯಾರನ್ನೂ ಶಪಿಸುವುದಿಲ್ಲ ಮತ್ತು ಬಯ್ಯುವುದೂ ಇಲ್ಲ. ಕೆಲವು ದಿನಗಳವರೆಗೆ ಶೂಲದಲ್ಲಿಯೇ ಇದ್ದು ಪಾಪವನ್ನು ಕಳೆಯುವೆನು.

ಪ್ರಾಕ್ತನಂ ಕರ್ಮ ಭುಂಜಾಮಿ ಯನ್ಮಯಾ ಸಂಚಿತಂ ದ್ವಿಜಾಃ ।
ಕ್ಷಂತವ್ಯಮಸ್ಯ ರಾಜ್ಞೋಽಥ ಕೋಪಶ್ಚೈವ ವಿಸೃಜ್ಯತಾಂ ॥ ೩೩ ॥
ಶ್ರುತ್ವಾ ತು ತಸ್ಯ ತದ್ವಾಕ್ಯಂ ಮಾಂಡವ್ಯಸ್ಯ ಮಹರ್ಷಯಃ ।
ಪ್ರಹರ್ಷಮತುಲಂ ಲಬ್ಧ್ವಾ ಸಾಧುಸಾಧ್ವಿತ್ಯಪೂಜಯನ್ ॥ ೩೪ ॥

ನಾರಾಯಣ ಉವಾಚ :—

ಇದಂ ಜಲಂ ಮಂತ್ರಪೂತಂ ಕಸ್ಮಿನ್‌ಸ್ಥಾನೇ ಕ್ಷಿಪಾಮ್ಯಹಂ ।
ಯೇನ ರಾಜಾ ಭವೇದ್ಭಸ್ಮ ಸರಾಷ್ಟ್ರಃ ಸ ಪುರೋಹಿತಃ ॥ ೩೫ ॥

ಮಾಂಡವ್ಯ ಉವಾಚ :—

ಇದಂ ಜಲಂ ಚ ರಕ್ಷಸ್ವ ಕಾಲಕೂಟವಿಷೋಪಮಂ ।
ಸಮುದ್ರೇ ಕ್ಷಿಪಯಿಷ್ಯಾಮಿ ದೇವಕಾರ್ಯಂ ಸಮುತ್ಥಿತಂ ॥ ೩೬ ॥
ಅಥ ತೇ ಮುನಯಃ ಸರ್ವೇ ಮಾಂಡವ್ಯಂ ಪ್ರಣಿಪತ್ಯ ಚ ।
ಆಮಂತ್ರಯಿತ್ವಾ ಹರ್ಷಾಚ್ಚ ಕಶ್ಯಪಾದ್ಯಾ ಗೃಹಾನ್ಯಯುಃ ॥ ೩೭ ॥
ಗಚ್ಛಮಾನಾಸ್ತು ತೇ ಚೋಕ್ತಾಃ ಪಂಚಮೇಽಹನಿ ತಾಪಸಾಃ ।
ಆಗಂತವ್ಯಂ ಭವದ್ಭಿಶ್ಚ ಮತ್ಸಕಾಶಂ ಪ್ರತಿಜ್ಞಯಾ ॥ ೩೮ ॥
ತಥೇತಿ ತೇ ಪ್ರತಿಜ್ಞಾಯ ನಾರದಾದ್ಯಾ ಅದರ್ಶನಂ ।
ಗತೇಷು ವಿಪ್ರಮುಖ್ಯೇಷು ಶಾಂಡಿಲೀ ಚ ತಪೋಧನಾ ॥ ೩೯ ॥

---

೩೩. ದ್ವಿಜರೇ! ನಾನು ಹಿಂದೆ ಮಾಡಿದ ಕರ್ಮವನ್ನು ಅನುಭವಿಸುವೆನು. ರಾಜನನ್ನು ಕ್ಷಮಿಸಿರಿ, ಕೋಪವನ್ನು ತ್ಯಜಿಸಿರಿ.

೩೪. ಮಹರ್ಷಿಗಳು ಮಾಂಡವ್ಯನ ಆ ಮಾತನ್ನು ಕೇಳಿ ಅತ್ಯಂತ ಸಂತೋಷಗೊಂಡು ಒಳ್ಳೆಯದೆಂದು ಅವನನ್ನು ಪೂಜಿಸಿದರು.

೩೫. ನಾರಾಯಣನು ಹೇಳುತ್ತಾನೆ:—ಮಂತ್ರ ಶುದ್ಧವಾದ ಈ ನೀರನ್ನು ಯಾವ ಸ್ಥಳದಲ್ಲಿ ಎಸೆಯಲಿ, ಇದರಿಂದ ರಾಜನು, ರಾಜ್ಯ ಮತ್ತು ಪುರೋಹಿತ ರೊಡನೆ ಮಡಿಯುವನಷ್ಟೆ.

೩೬–೩೭. ಮಾಂಡವ್ಯನು ಹೇಳುತ್ತಾನೆ:—ಕಾಲಕೂಟವಿಷದಂತಿರುವ ಈ ನೀರನ್ನು ರಕ್ಷಿಸು, ದೇವತೆಗಳ ಕಾರ್ಯವು ಸಂಭವಿಸಿದೆಯಾದ್ದರಿಂದ ಇದನ್ನು ಸಮುದ್ರದಲ್ಲಿ ಎಸೆಯಬಯಸುವೆನು. ಅನಂತರ ಆ ಕಶ್ಯಪಾದಿ ಮಹರ್ಷಿಗಳು ಮಾಂಡವ್ಯನನ್ನು ವಂದಿಸಿ ಆತನ ಅಪ್ಪಣೆಯನ್ನು ಕೇಳಿಕೊಂಡು ಸಂತೋಷದಿಂದ ಮನೆಗೆ ತೆರಳಿದರು.

೩೮. ಆ ಮುನಿಗಳು ಮನೆಗೆ ಹೋಗುತ್ತಿರಲು ಮಾಂಡವ್ಯನು, "ಮುನಿಗಳೆ! ನೀವು ಐದನೆಯ ದಿನ ನನ್ನ ಬಳಿಗೆ ಬರಬೇಕು" ಎಂದನು.

೩೯–೪೧. ನಾರದಾದಿ ಮುನಿಗಳು ಹಾಗೆಯೇ ಆಗಲೆಂದು ಒಪ್ಪಿ ಹೊರಟು ಹೋಗಲು ಮಾರನೆಯ ದಿನ ರಾತ್ರಿ ಶಾಂಡಿಲಿಯೆಂಬ ಒಬ್ಬ ಮುನಿಪತ್ನಿಯು

ದ್ವಿತೀಯೇಽಹ್ನಿ ಸಮಾಯಾತಾ ನ ತು ಬುದ್ಧ್ವಾಽಥ ತಂ ಋಷಿಂ ।
ಭರ್ತಾರಂ ಶಿರಸಾ ಧಾರ್ಯ ರಾತ್ರೌ ಪರ್ಯಟತೇಸ್ಮ ಸಾ ॥ ೪೦ ॥
ನ ದೃಷ್ಟಃ ಶೂಲಕೇ ವಿಪ್ರೋ ಭರಾಕ್ರಾಂತ್ಯಾ ಯುಧಿಷ್ಠಿರ ।
ಸ್ಖಲಿತಾ ತಸ್ಯ ಜಾನುಭ್ಯಾಂ ಶೂಲಸ್ಥಸ್ಯ ಪತಿವ್ರತಾ ॥ ೪೧ ॥
ಸರ್ವಾಂಗೇಷು ವ್ಯಥಾ ಜಾತಾ ತಸ್ಯಾಃ ಪ್ರಸ್ಖಲನಾನ್ಮುನೇಃ ।
ಈದೃಶೀಂ ವರ್ತಮಾನಾಂ ಚ ಹ್ಯವಸ್ಥಾಂ ಪೂರ್ವದೈವಿಕೀಂ ॥ ೪೨ ॥
ಪುನಃ ಪಾಪಫಲಂ ಕಿಂಚಿದ್ಧಾ ಕಷ್ಟಂ ಮಮ ವರ್ತತೇ ।
ವ್ಯಥಿತೋಽಹಂ ತ್ವಯಾ ಪಾಪೇ ಕಿಮರ್ಥಂ ಸೂನಕರ್ಮಣಿ ॥ ೪೩ ॥
ಸ್ವೈರಿಣೀಂ ತ್ವಾಂ ಪ್ರಪಶ್ಯಾಮಿ ರಾಕ್ಷಸೀ ತಸ್ಕರೀ ನು ಕಿಂ ।
ಏವಮುಕ್ತ್ವಾ ಕ್ಷಣಂ ಮೋಹಾತ್ಕ್ರಂದಮಾನೋ ಮುಹುರ್ಮುಹುಃ ॥
ತಪಸ್ವಿನೋಽಥ ಋಷಯಃ ಸರ್ವೇ ಸಂತ್ರಸ್ತಮಾನಸಾಃ ।
ಪಶ್ಯಮಾನಾ ಮುನೇಃ ಕಷ್ಟಂ ಪೃಚ್ಛಂತೇ ತೇ ಯುಧಿಷ್ಠಿರ ॥ ೪೫ ॥
ಪರ್ಯಟಸೇ ಕಿಮರ್ಥಂ ತ್ವಂ ನಿಶೀಥೇ ವಹನಂ ಸು ಕಿಂ ।
ಕ್ಷಿಪ್ತಂ ತು ಝೋಲಿಕಾಭಾರಂ ಕಿಂ ವಾಽಽಗಮನಕಾರಣಂ ।
ವ್ಯಥಾಮುತ್ಪಾದ್ಯ ಋಷಯೇ ದುಃಖಾದ್ದುಃಖವಿಲಾಸಿನಿ ॥ ೪೬ ॥

ಶಾಂಡಿಲ್ಯುವಾಚ :—

ನಾಽಽಸುರೀಂ ನ ಚ ಗಂಧರ್ವೀಂ ನ ಪಿಶಾಚೀಂ ನ ರಾಕ್ಷಸೀಂ ।
ಪತಿವ್ರತಾಂ ತು ಮಾಂ ಸರ್ವೇ ಜಾನಂತು ತಪಸಿಸ್ಥಿತಾಂ ॥ ೪೭ ॥

---

ಅಲ್ಲಿಗೆಬಂದು ಮಾಂಡವ್ಯನು ಶೂಲದಲ್ಲಿರುವುದನ್ನರಿಯದೆ ತನ್ನ ಪತಿಯನ್ನು ತಲೆಯ ಮೇಲೆ ಹೊತ್ತುಕೊಂಡು ಸಂಚರಿಸುತ್ತಿದ್ದಳು. ಅವಳು ಭಾರಾತಿಶಯದಿಂದ ಶೂಲ ದಲ್ಲಿರುವ ಮುನಿಯನ್ನು ನೋಡದೆ ಅವನ ಮೊಣಕಾಲಿಗೆ ತಗಲಿ ಜಾರಿದಳು.

೪೨–೪೪. ಅದರಿಂದ ಮಾಂಡವ್ಯನ ಶರೀರದಲ್ಲೆಲ್ಲ ವ್ಯಥೆಯುಂಟಾಗಲು ಅವನು ಮರಳಿ ಯಾವುದಾದರೂ ಪಾಪದಿಂದ ತನಗೆ ಈ ಕಷ್ಟವುಂಟಾಯಿತೆ? ಎಂದುಕೊಂಡು ಶಾಂಡಿಲಿಯನ್ನು ಕುರಿತು, "ನೀನು ವ್ಯಭಿಚಾರಿಣಿಯೊ ರಾಕ್ಷಸಿಯೊ ಕಳ್ಳಿಯೊ ಆಗಿರುವೆ" ಎಂದು ಹೇಳಿ ಬಹುವಾಗಿ ಕೂಗಿಕೊಂಡನು.

೪೫–೪೬. ಬಳಿಕ ಮುನಿಗಳೆಲ್ಲ ಮಾಂಡವ್ಯನ ಕಷ್ಟವನ್ನು ನೋಡಿ ಶಾಂಡಿಲಿ ಯನ್ನು ಕುರಿತು, "ತಪಸ್ವಿನಿಯೆ! ನೀನು ಅರ್ಧರಾತ್ರಿಯ ವೇಳೆ ಈ ಜೋಳಿಗೆ ಯನ್ನು ಹೊತ್ತುಕೊಂಡು ಮಾಂಡವ್ಯನಿಗೆ ಕಷ್ಟವನ್ನುಂಟುಮಾಡುತ್ತ ಏಕೆ ಸಂಚರಿಸುತ್ತೀಯೆ?" ಎಂದು ಪ್ರಶ್ನಿಸಿದರು.

೪೭. ಶಾಂಡಿಲಿಯು ಹೇಳುತ್ತಾನೆ:—ಮುನಿಗಳೇ! ನನ್ನನ್ನು ಅಸುರ, ಗಂಧರ್ವ, ಪಿಶಾಚ, ರಾಕ್ಷಸಸ್ತ್ರೀಯನ್ನಾಗಿ ತಿಳಿಯಬೇಡಿರಿ. ತಪೋನಿರತ ಳಾದ ಪತಿವ್ರತೆಯನ್ನಾಗಿ ಅರಿಯಿರಿ.

ನಮೇ ಕಾಮೋ ನಮೇ ಕ್ರೋಧೋ ನ ವೈರಂ ನ ಚ ಮತ್ಸರಃ ।
ಅಜ್ಞಾನಾದ್ದೃಷ್ಟಿಮಾಂದ್ಯಾಚ್ಚ ಸ್ಖಲನಂ ಕ್ಷಂತುಮರ್ಹಥ ॥ ೪೮ ॥
ವಹನಂ ಭರ್ತೃಸೌಖ್ಯಾಯ ದಿವಾ ಸಂಪೀಡ್ಯತೇ ರುಜಾ ।
ಅಯಂ ಭರ್ತಾ ವಿಜಾನೀಥ ಝೋಲಿಕಾಸಂಸ್ಥಿತಃ ಸದಾ ॥ ೪೯ ॥
ಭರಣಂ ಪಾನಂ ವಸ್ತ್ರಂ ಚ ದದಾಮ್ಯೇತಸ್ಯ ರೋಗಿಣಃ ।
ಋಷಿಃ ಶೌನಕಮುಖ್ಯೋಽಸೌ ಶಾಂಡಿಲೀಂ ಮಾಂ ವಿಜಾನತ ॥ ೫೦ ॥
ಸ್ವಭರ್ತೃಧರ್ಮಿಣೀಂ ಕೋಪಂ ಮಾಕುರುಷ್ವಾತಿಥಿಂ ಕುರು ।
ಸತಾಂ ಸಮೀಪಂ ಸಂಪ್ರಾಪ್ತಾಂ ಸರ್ವಂ ಮೇ ಕ್ಷಂತುಮರ್ಹಥ ॥ ೫೧ ॥

ಋಷಯ ಊಚುಃ—

ಪರವ್ಯಥಾಂ ನ ಜಾನೀಷೇ ವ್ಯಚರಂತೀ ಯದೃಚ್ಛಯಾ ।
ಪ್ರಭಾತೇಽಭ್ಯುದಿತೇ ಸೂರ್ಯೇ ತವ ಭರ್ತಾ ಮರಿಷ್ಯತಿ ॥ ೫೨ ॥
ಆತ್ಮದುಃಖಾತ್ಪರಂ ದುಃಖಂ ನ ಜಾನಾಸಿ ಕುಲಾಧಮೇ ।
ತೇನ ವಾಕ್ಯೇನ ಘೋರೇಣ ಶಾಂಡಿಲೀ ವಿಮನಾಽಭವತ್ ॥ ೫೩ ॥
ಪರಂ ವಿಷಾದಮಾಪನ್ನಾ ಕ್ಷಣಂ ಧ್ಯಾತ್ವಾಽಬ್ರವೀದ್ವಚಃ ।
ಕೋಪಾತ್ಸಂರಕ್ತನಯನಾ ನಿರೀಕ್ಷಂತೀ ಮುನೀಂಸ್ತದಾ ॥ ೫೪ ॥

---

೪೮. ನನಗೆ ಕಾಮ, ಕ್ರೋಧ, ವೈರ, ಮಾತ್ಸರ್ಯಗಳಿಲ್ಲ. ಅಜ್ಞಾನದಿಂದಲೂ, ದೃಷ್ಟಿಮಾಂದ್ಯದಿಂದಲೂ ಜಾರಿದ ನನ್ನನ್ನು ಕ್ಷಮಿಸಲರ್ಹರಾಗಿರುವಿರಿ.

೪೯. ಯಾವಾಗಲೂ ಈ ಜೋಳಿಗೆಯೊಳಗಿರುವ ನನ್ನ ಪ್ರಿಯನು ಹಗಲು ರೋಗಪೀಡಿತನಾಗಿರುವನು. ಆದ್ದರಿಂದ ಅವನ ಸೌಖ್ಯಕ್ಕಾಗಿ ರಾತ್ರಿವೇಳೆ ಹೊತ್ತುಕೊಂಡು ಹೋಗುವೆನು.

೫೦–೫೧. ರೋಗಗ್ರಸ್ತನಾದ ಈ ಶೌನಕನೆಂಬ ನನ್ನ ಪತಿಗೆ ಬಟ್ಟೆ ನೀರನ್ನು ಕೊಟ್ಟು ಕಾಪಾಡುತ್ತಿರುವೆನು. ನನ್ನನ್ನು ಪತಿವ್ರತೆಯಾದ ಶಾಂಡಿಲಿಯನ್ನಾಗಿ ತಿಳಿಯಿರಿ. ಸಜ್ಜನರಾದ ನಿಮ್ಮ ಬಳಿಗೆ ಬಂದ ನನ್ನಲ್ಲಿ ಕುಪಿತರಾಗದೆ ಅತಿಥಿಯನ್ನಾಗಿ ಭಾವಿಸಿರಿ. ನನ್ನ ಅಪರಾಧವನ್ನೆಲ್ಲ ಕ್ಷಮಿಸಿರಿ.

೫೨. ಋಷಿಗಳು ಹೇಳುತ್ತಾರೆ:—“ಶಾಂಡಿಲಿ! ನೀನು ಸ್ವೇಚ್ಛೆಯಾಗಿ ಸಂಚರಿಸುತ್ತ ಇತರರ ವ್ಯಥೆಯನ್ನು ತಿಳಿಯುವುದಿಲ್ಲ. ನಾಳೆ ಬೆಳಗ್ಗೆ ಸೂರ್ಯನು ಉದಯಿಸಲು ನಿನ್ನ ಪತಿಯು ಮಡಿಯುವನು.

೫೩–೫೪. ಕುಲಾಧಮಳೆ! ನೀನು ನಿನ್ನ ದುಃಖಕ್ಕಿಂತ ಹೆಚ್ಚಾದ ಪರರದುಃಖವನ್ನರಿಯದೆಹೋದೆ.” ಶಾಂಡಿಲಿಯು ಋಷಿಗಳ ಈಬಿರುನುಡಿಯನ್ನು ಕೇಳಿ ಅತ್ಯಂತ ವ್ಯಥೆಗೊಂಡಳು. ಅವಳು ಬಹಳ ವಿಷಣ್ಣಳಾಗಿ ಸ್ವಲ್ಪ ಹೊತ್ತು ಚಿಂತಿಸಿ ಕೋಪದಿಂದ ಕೆಂಪೇರಿದ ಕಣ್ಣುಗಳುಳ್ಳವಳಾಗಿ ಮುನಿಗಳನ್ನು ನೋಡುತ್ತ ಇಂತೆಂದಳು.

ಸತಾಂ ಗೇಹೇ ಕಿಲ ಪ್ರಾಪ್ತಾ ಭವತಾಂ ಚಾಽಪಕಾರಿಣೀ ।
ಸಾಮೇನಾಽತಿಥಿಪೂಜಾಯಾಂ ಶಿಷ್ಟೇ ಚ ಗೃಹಮಾಗತೇ ॥ ೫೫ ॥
ಭವದ್ಭಿರೀದೃಗಾತಿಥ್ಯಂ ಕೃತಂ ಚೈವ ಮಮೈವ ತು ।
ಸ್ವರ್ಗಾಽಪವರ್ಗಧರ್ಮಶ್ಚ ಭವದ್ಭಿರ್ನ ನಿರೀಕ್ಷಿತಂ ॥ ೫೬ ॥
ಪ್ರಾಜಾಪತ್ಯಾಮಿಮಾಂ ದೃಷ್ಟ್ವಾ ಮಾಂ ಯಥಾ ಪ್ರಾಕೃತಾಃ ಸ್ತ್ರಿಯಃ ।
ಭವಂತಃ ಸ್ತ್ರೀಬಲಂ ಮೇಽದ್ಯ ಪಶ್ಯಂತು ದಿವಿ ದೇವತಾಃ ॥ ೫೭ ॥
ಮರಿಷ್ಯತಿ ನಮೇ ಭರ್ತಾ ಹ್ಯಾದಿತ್ಯೋ ನೋದಯಿಷ್ಯತಿ ।
ಅಂಧಕಾರಂ ಜಗತ್ಸರ್ವಂ ಕ್ಷೀಯತೇ ನಾಽದ್ಯ ಶರ್ವರೀ ॥ ೫೮ ॥
ಏವಮುಕ್ತೇ ತಯಾ ವಾಕ್ಯೇ ಸ್ತಂಭಿತೇಽರ್ಕೇ ತಮೋಮಯಂ ।
ನ ಚ ಪ್ರಜ್ಞಾಯತೇ ಸರ್ವಂ ನಿರ್ವಷಟ್ಕಾರಸತ್ಕ್ರಿಯಂ ॥ ೫೯ ॥
ಸ್ವಾಹಾಕಾರಃ ಸ್ವಧಾಕಾರಃ ಪಂಚಯಜ್ಞವಿಧಿರ್ನಹಿ ।
ಸ್ನಾನಂ ದಾನಂ ಜಪೋ ನಾಽಸ್ತಿ ಸಂಧ್ಯಾಲೋಪಪ್ಯತಿಕ್ರಮಃ ।
ಷಣ್ಮಾಸಂ ಚ ತದಾ ಪಾರ್ಥ ಲುಪ್ತಪಿಂಡೋದಕಕ್ರಿಯಂ ॥ ೬೦ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ
ಪಂಚಮೇ ಆವಂತ್ಯಖಂಡೇ ತೃತೀಯೇ ರೇವಾಖಂಡೇ
"ಶಾಂಡಲೀಋಷಿಸಂವಾದವರ್ಣನಂ"
ನಾಮೈಕಸಪ್ತತ್ಯುತ್ತರಶತತಮೋಽಧ್ಯಾಯಃ

---

೫೫–೫೬. "ಸಜ್ಜನರಾದ ನಿಮ್ಮ ಮನೆಗೆ ಬಂದು ಅಪಕಾರಮಾಡಿದ ನನ್ನನ್ನು ನೀವು ಸಮಾಧಾನಗೊಳಿಸಿ ಸರಿಯಾದ ಆತಿಥ್ಯವನ್ನು ಮಾಡದೆ ಇಂತಹ ಆತಿಥ್ಯವನ್ನು ಮಾಡಿದಿರಲ್ಲವೆ? ನೀವು ಸ್ವರ್ಗಮೋಕ್ಷಧರ್ಮಗಳನ್ನು ನೋಡಲಿಲ್ಲ.

೫೭. ಪತಿವ್ರತೆಯಾದ ನನ್ನನ್ನು ಪಾಮರ ಸ್ತ್ರೀಯೆಂದು ತಿಳಿಯುವಿರಲ್ಲವೆ? ಈಗ ಸ್ವರ್ಗವಾಸಿಗಳಾದ ದೇವತೆಗಳು ಈ ಹೆಂಗಸಿನ ಶಕ್ತಿಯನ್ನು ನೋಡಲಿ.

೫೮. ಸೂರ್ಯನು ಉದಯಿಸುವುದೂ ಇಲ್ಲ. ನನ್ನ ಪತಿಯು ಮಡಿಯುವುದೂ ಇಲ್ಲ. ಕತ್ತಲೆಯು ಜಗತ್ತನ್ನೆಲ್ಲ ವ್ಯಾಪಿಸಿರುವುದು. ರಾತ್ರಿಯು ಕ್ಷಯಿಸುವುದಿಲ್ಲ."

೫೯–೬೦. ಅವಳು ಹೀಗೆ ಹೇಳಿ ಸೂರ್ಯನನ್ನು ತಡೆಯಲು ಎಲ್ಲವೂ ತಮೋಮಯವಾಯಿತು. ಯಜ್ಞಯಾಗಾದಿಗಳೂ, ಸ್ನಾನ, ದಾನ, ಜಪಗಳೂ ನಡೆಯಲಿಲ್ಲ. ಸಂಧ್ಯಾವಂದನೆಯು ಲುಪ್ತವಾಯಿತು. ಹೀಗೆ ಆರು ತಿಂಗಳ ಕಾಲ ಪಿಂಡಪ್ರದಾನ ತರ್ಪಣಾದಿಗಳು ನಡೆಯಲಿಲ್ಲ.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ
ಶ್ರೀ ಸ್ಕಾಂದಮಹಾಪುರಾಣದ ಐದನೆಯ ಆವಂತ್ಯಖಂಡದ ಮೂರನೆಯ ರೇವಾಖಂಡದಲ್ಲಿ
"ಶಾಂಡಿಲೀಋಷಿಸಂವಾದವರ್ಣನ"ವೆಂಬ
ನೂರೆಪ್ಪತ್ತೊಂದನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

## ಅಥ ದ್ವಿಸಪ್ತತ್ಯಧಿಕಶತತಮೋಽಧ್ಯಾಯಃ

### ಮಾಂಡವ್ಯತೀರ್ಥಮಾಹಾತ್ಮ್ಯವರ್ಣನಂ

ಶ್ರೀಮಾರ್ಕಂಡೇಯ ಉವಾಚ :—

ಅಥ ತೇ ಋಷಯಃ ಸರ್ವೇ ದೇವಾಶ್ಚೇಂದ್ರಪುರೋಗಮಾಃ ।
ಮಾಂಡವ್ಯಸ್ಯಾಶ್ರಮೇ ಪುಣ್ಯೇ ಸಮಾಯಯುರ್ನರ್ಮದಾತಟೇ ॥ ೧ ॥
ಶಂಖದುಂದುಭಿನಾದೇನ ದೀಪಿಕಾಜ್ವಲನೇನ ಚ ।
ಅಪ್ಸರೋಗೀತನಾದೇನ ನೃತ್ಯಂತ್ಯೋ ವಾರಯೋಷಿತಃ ॥ ೨ ॥
ಕಥಾನಕೈಃ ಸ್ತುವಂತ್ಯನ್ಯೇ ತಸ್ಯ ಶೂಲಾಗ್ರಧಾರಿಣಃ ।
ಅಷ್ಟಾಶೀತಿಸಹಸ್ರಾಣಿ ಸ್ನಾತಕಾನಾಂ ತಪಸ್ವಿನಾಂ ॥ ೩ ॥
ಸಮಾಜೇ ತ್ರಿದಶೈಃ ಸಾರ್ಧಂ ತತ್ರ ತೇ ಚ ದಿದೃಕ್ಷಯಾ ।
ಬ್ರಹ್ಮವಿಷ್ಣುಮಹೇಶಾನಾಸ್ತತ್ರ ಹರ್ಷಾತ್ಸಮಾಗತಾಃ ॥ ೪ ॥
ಮಾತರೋ ಮಲ್ಲಿಕಾದ್ಯಾಶ್ಚ ಕ್ಷೇತ್ರಪಾಲಾ ವಿನಾಯಕಾಃ ।
ದಿಕ್ಪಾಲಾ ಲೋಕಪಾಲಾಶ್ಚ ಗಂಗಾದ್ಯಾಶ್ಚ ಸರಿದ್ವರಾಃ ॥ ೫ ॥

---

### ಕನ್ನಡದ ಅನುವಾದ

#### ಮಾಂಡವ್ಯತೀರ್ಥಮಾಹಾತ್ಮ್ಯವರ್ಣನ

೧. ಶ್ರೀ ಮಾರ್ಕಂಡೇಯನು ಹೇಳುತ್ತಾನೆ:— ಬಳಿಕ ಆ ಮುನಿಗಳೂ, ಇಂದ್ರನೇ ಮೊದಲಾದ ದೇವತೆಗಳೂ ನರ್ಮದಾ ತಟದಲ್ಲಿರುವ ಪುಣ್ಯಕರವಾದ ಮಾಂಡವ್ಯನ ಆಶ್ರಮಕ್ಕೆ ಬಂದರು.

೨. ಅಲ್ಲಿ ದೇವ ವೇಶ್ಯಾಂಗನೆಯರು ಶಂಖ ದುಂದುಭಿ ಧ್ವನಿಯಿಂದಲೂ, ದೀಪದ ಪ್ರಕಾಶದಿಂದಲೂ, ಗೀತವಾದ್ಯಾದಿಗಳಿಂದಲೂ ಕೂಡಿ ಕುಣಿದರು.

೩. ಎಂಬತ್ತೆಂಟುಸಾವಿರ ಮಂದಿ ಸ್ನಾತಕರಾದ ತಪಸ್ವಿಗಳು ಶೂಲಾರೂಢನಾದ ಮಾಂಡವ್ಯನ ಕಥೆಯನ್ನು ಹೇಳುತ್ತಿದ್ದರು.

೪. ಬ್ರಹ್ಮ ವಿಷ್ಣು ಮಹೇಶ್ವರರು ದೇವತೆಗಳೊಡನೆ ಸಂತೋಷದಿಂದ ಅಲ್ಲಿಗೆ ನೋಡಲು ಬಂದರು.

೫. ಹಾಗೆಯೇ ಮಲ್ಲಿಕಾದಿ ಮಾತೆಯರೂ, ಕ್ಷೇತ್ರಪಾಲಕರೂ, ವಿನಾಯಕರೂ, ದಿಕ್ಪಾಲ ಲೋಕಪಾಲಕರೂ ಬಂದರು. ಗಂಗಾದಿ ಉತ್ತಮ ನದಿಗಳೂ ಅಲ್ಲಿಗೆ ಬಂದುವು.

ಋಷಿದೇವಸಮಾಜೇ ತು ನಿತ್ಯಂ ಹರ್ಷಪ್ರಮೋದನೇ ।
ತತ್ರ ರಾಜಾ ಸಮಾಯಾತಃ ಪೌರಜಾನಪದೈಃ ಸಹ ॥ ೬ ॥
ದೃಷ್ಟ್ವಾ ಕೌತೂಹಲಂ ತತ್ರ ವ್ಯಾಕುಲೀಕೃತಮಾನಸಂ ।
ವಿತ್ರಸ್ತಮನಸೋ ಭೂತ್ವಾ ಭಯಾತ್ಸರ್ವೇ ಸಮಾಸ್ಥಿತಾಃ ॥ ೭ ॥
ತಸ್ಮಿನ್ ಸಮಾಗಮೇ ದಿವ್ಯೇ ಬ್ರಹ್ಮವಿಷ್ಣ್ವೀಶಮಬ್ರುವನ್ ।
ಭೋ ಮಾಂಡವ್ಯ ಮಹಾಸತ್ವ ವರದಾಸ್ತೇಽಮರೈಃ ಸಹ ॥ ೮ ॥
ಅನೇಕಕಷ್ಟತಪಸಾ ತವ ಸಿದ್ಧಿರ್ಭವಿಷ್ಯತಿ ।
ಪ್ರಾರ್ಥಯಸ್ವ ಯಥಾಕಾಮಂ ಯಸ್ತೇ ಮನಸಿ ರೋಚತೇ ॥ ೯ ॥
ಅನಾದಿತ್ಯಮಯಂ ಲೋಕಂ ನಿರ್ವಷಟ್ಕಾರಮಾಕುಲಂ ।
ನಷ್ಟಧರ್ಮಂ ವಿಜಾನೀಹಿ ಪ್ರಕೃತಿಸ್ಥಂ ಕುರುಷ್ವ ಚ ।
ಅನುಗ್ರಹಂ ತು ಶಾಂಡಿಲ್ಯಾಃ ಪ್ರಾರ್ಥಯಾಮ ದ್ವಿಜೋತ್ತಮ ॥ ೧೦ ॥
ಏಷ ತೇ ಕಷ್ಟದೋ ರಾಜಾ ಸಮಾಯಾತಸ್ತವಾಽಗ್ರತಃ ।
ಸಂಭೂಷಯಸ್ವ ವಿಪ್ರರ್ಷೇ ಜನಂ ದೇವಾಸುರಂ ಗಣಂ ॥ ೧೧ ॥

ಮಾಂಡವ್ಯ ಉವಾಚ:—

ಯದಿ ಪ್ರಸನ್ನಾ ಮೇ ದೇವಾಃ ಸಮಾಯಾತಾ ಸುರೈಃ ಸಹ ।
ತ್ರಿಕಾಲಮತ್ರ ತೀರ್ಥೇ ಚ ಸ್ಥಾತವ್ಯಮೃಷಿಭಿಃ ಸಹ ॥ ೧೨ ॥

---

೬. ಅಲ್ಲಿ ನಿತ್ಯವೂ ಋಷಿದೇವತೆಗಳ ಸಮಾಜವು ಸಂತೋಷಗೊಳ್ಳುತ್ತಿರಲು ದೊರೆಯು ನಗರ ಗ್ರಾಮಗಳ ಜನಗಳೊಡನೆ ಅಲ್ಲಿಗೆ ಬಂದನು.

೭-೮. ಅದನ್ನು ನೋಡಿ ವ್ಯಾಕುಲಗೊಂಡ ರಾಜನನ್ನು ಕಂಡು ಎಲ್ಲರೂ ಭಯಗೊಂಡರು. ಆ ದಿವ್ಯಸಭೆಯಲ್ಲಿ ಬ್ರಹ್ಮವಿಷ್ಣುಮಹೇಶ್ವರರು ಇಂತೆಂದರು. “ಎಲೈ ಮಾಂಡವ್ಯನೆ! ನಾವು ದೇವತೆಗಳೊಡನೆ ನಿನಗೆ ವರವನ್ನು ಕೊಡುವೆವು.

೯. ನಿನಗೆ ಲಭಿಸುವ ಸಿದ್ಧಿಯು ಕಷ್ಟತರವಾದ ಅನೇಕ ತಪಸ್ಸುಗಳಿಂದ ಸಾಧ್ಯವಾದುದು. ನಿನ್ನ ಮನೋಭೀಷ್ಟವನ್ನು ಬೇಡಿಕೊ.

೧೦. ಈ ಲೋಕವು ಸೂರ್ಯನಿಲ್ಲದಿರುವುದೂ, ಯಜ್ಞಯಾಗಾದಿಗಳಿಂದ ರಹಿತವೂ, ನಷ್ಟಧರ್ಮವುಳ್ಳುದೂ ಆಗಿ ವ್ಯಾಕುಲಗೊಂಡಿದೆ. ಅದನ್ನು ಮೊದಲಿನಂತೆ ಸರಿಮಾಡು. ಶಾಂಡಿಲ್ಯೆಯನ್ನು ಅನುಗ್ರಹಿಸು.

೧೧. ನಿನಗೆ ಕಷ್ಟವನ್ನುಂಟುಮಾಡಿದ ರಾಜನು ನಿನ್ನ ಮುಂದೆ ಬಂದಿರುವನು. ಮುನಿಯೆ! ಈ ದೇವಾಸುರರ ಸಮೂಹವನ್ನು ಗೌರವಿಸಿ ಅಲಂಕರಿಸು.

೧೨. ಮಾಂಡವ್ಯನು ಹೇಳುತ್ತಾನೆ:—ದೇವತೆಗಳೊಡನೆ ಬಂದಿರುವ ಬ್ರಹ್ಮಾದಿಗಳೆ! ನೀವು ಪ್ರಸನ್ನರಾಗಿದ್ದರೆ ತ್ರಿಕಾಲದಲ್ಲಿಯೂ ಈ ತೀರ್ಥದಲ್ಲಿ ಋಷಿಗಳೊಡನೆ ನೆಲೆಸಿರಿ.

ಭವತಾಂ ತು ಪ್ರಸಾದೇನ ರುಜಾ ಮೇ ಶಾಮ್ಯತಾಂ ಸದಾ ।
ಏವಮಸ್ತ್ವಿತಿ ದೇವೇಶಾ ಯಾವಜ್ಜಲ್ಪಂತಿ ಪಾಂಡವ ॥ ೧೩ ॥
ತಾವದ್ರಕ್ಷೋ ಗೃಹೀತ್ವಾಽಗ್ರೇ ಕನ್ಯಾಂ ಕಾಮಪ್ರಮೋದಿನೀಂ ।
ಉವಾಚ ಭಗವಂ ಛಾಪಂಪುರಾದತ್ತೋರ್ವಶೀ ಮಮ ॥ ೧೪ ॥
ಯದಾ ಕನ್ಯಾಂ ಹರೇ ರಕ್ಷಃ ಶಾಪಾಂತಸ್ತೇ ಭವಿಷ್ಯತಿ ।
ತೇ ನ ಮೇ ಗರ್ಹಿತಂ ಕರ್ಮ ಶಾಪೇನಾಽಕೃತಬುದ್ಧಿನಾ ॥ ೧೫ ॥
ಕ್ಷಂತವ್ಯಮಿತಿ ಚೋಕ್ತ್ವಾ ಚ ಗತಶ್ಚಾದರ್ಶನಂ ಪುನಃ ।
ಗತೇ ಚೈವ ತು ಸಾ ಕನ್ಯಾ ದೃಷ್ಟ್ವಾ ಪದ್ಮದಲೇಕ್ಷಣಾ ॥ ೧೬ ॥
ಮಂತ್ರಯಿತ್ವಾ ಸುರೈಃ ಸರ್ವೈರ್ದತ್ತಾ ಮಾಂಡವ್ಯ ಧೀಮತೇ ।
ತಾಂ ವಜ್ರಶೂಲಿಕಾಂ ಪ್ಲಾವ್ಯ ಪವಿತ್ರೈರ್ನರ್ಮದೋದಕೈಃ ॥ ೧೭ ॥
ಮಾಂಡವ್ಯಮೃಷಿಮುತ್ತಾರ್ಯ ಜಯಶಬ್ದಾದಿಮಂಗಲೈಃ ।
ವಿವಾಹಯಿತ್ವಾ ತಾಂ ಕನ್ಯಾಂ ಮಾಂಡವ್ಯಋಷಿಪುಂಗವಃ ॥ ೧೮ ॥
ಅಭಿವಾದ್ಯ ಚ ತಾನ್ ಸರ್ವಾನ್ಸ್ನಾನಸನ್ಮಾನಗೌರವೈಃ ।
ಅಥ ರಾಜಾ ಸಮೀಪಸ್ಥೋ ರತ್ನೈಶ್ಚ ವಿವಿಧೈರಪಿ ॥ ೧೯ ॥
ಧಿಗ್ವಾದೈರ್ನಿಂದಿತಃ ಸರ್ವೈಸ್ತೈರ್ಜನೈರ್ಭೂಷಿತಃ ಪುನಃ ।
ರಾಜ್ಞಾ ಚ ಬ್ರಾಹ್ಮಣಾಃ ಸರ್ವೇ ಭೂಷಣಾಚ್ಛಾದನಾಽಶನೈಃ ॥ ೨೦ ॥

---

೧೩–೨೧. ನಿಮ್ಮ ಅನುಗ್ರಹದಿಂದ ನನ್ನ ರೋಗವು ಶಾಂತವಾಗಲಿ. ಬ್ರಹ್ಮಾದಿಗಳು ಹಾಗೆಯೇ ಆಗಲೆಂದು ಹೇಳುವಷ್ಟರಲ್ಲಿ ಮುಂದೆ ಒಬ್ಬ ರಾಕ್ಷಸನು ಓರ್ವ ಕನ್ಯೆಯನ್ನು ತಂದು ನಿಲ್ಲಿಸಿ ಇಂತೆಂದನು. "ಹಿಂದೆ ಊರ್ವಶಿಯು ನನಗೆ ಶಾಪವನ್ನಿತ್ತು, ರಾಕ್ಷಸನೆ! ನೀನು ಕನ್ಯೆಯೋರ್ವಳನ್ನು ಅಪಹರಿಸಿದಾಗ ನಿನ್ನ ಶಾಪವು ಅವಸಾನಗೊಳ್ಳುವುದು" ಎಂದಿರುವಳು. ಆ ಶಾಪ ವಶದಿಂದ ಮೂಢನಾದ ನಾನು ನಿಂದ್ಯವಾದ ಈ ಕಾರ್ಯವನ್ನೆಸಗಿರುವೆನು. ಈ ಅಪರಾಧವನ್ನು ಕ್ಷಮಿಸಿರಿ" ಎಂದು ಹೇಳಿ ಅವನು ಅದೃಶ್ಯನಾಗಲು ಇಂದ್ರಾದಿ ದೇವತೆಗಳು ಸುಂದರಿಯಾದ ಆ ಕನ್ಯೆಯನ್ನು ಕಂಡು ಆಲೋಚಿಸಿ ಅವಳನ್ನು ಮಾಂಡವ್ಯನಿಗಿತ್ತರು. ಪವಿತ್ರವಾದ ನರ್ಮದಾಜಲದಿಂದ ಆ ವಜ್ರ ಶೂಲವನ್ನು ತೊಳೆದು ಜಯಶಬ್ದಾದಿಗಳಿಂದ ಮಾಂಡವ್ಯನನ್ನು ಇಳಿಸಿ ಆ ಕನ್ಯೆಯನ್ನು ಅವನಿಗೆ ಕೊಟ್ಟರು. ಮಾಂಡವ್ಯನು ಆ ಮುನಿಗಳನ್ನೆಲ್ಲ ಮಾನದಾನಾದಿಗಳಿಂದ ಗೌರವಿಸಿ ವಂದಿಸಿ ಆ ಕನ್ಯೆಯನ್ನು ವಿವಾಹಮಾಡಿಕೊಂಡನು. ಬಳಿಕ ಹತ್ತಿರ ದಲ್ಲಿರುವ ಎಲ್ಲರಿಂದಲೂ ನಿಂದಿತನಾಗಿ ನಾನಾವಿಧರತ್ನಗಳಿಂದ ಭೂಷಿತನಾದ ಆ ದೊರೆಯು ಬ್ರಾಹ್ಮಣರಿಗೂ ಒಡವೆ ವಸ್ತ್ರಾದಿಗಳನ್ನೂ, ಕೋಟಿ ಸುವರ್ಣ

ಸುವರ್ಣಕೋಟಿದಾನೇನ ತುಷ್ಟಾನ್ಕೃತ್ವಾ ಕ್ಷಮಾಪಿತಾಃ ।
ವೃತ್ತೇ ವಿವಾಹ ಆಹೂಯ ಶಾಂಡಿಲೀಂ ತಾಮಥಾಽಬ್ರವೀತ್ ॥ ೨೦ ॥
ಮಾನಯಸ್ವ ಇಮಾನ್ವಿಪ್ರಾನ್ಮೋಚಯಸ್ವ ದಿವಾಕರಂ ।
ಅಪಹೃತ್ಯ ತಮೋ ಯೇನ ಕೃಪಾ ಸದ್ಯಃ ಪ್ರವರ್ತತೇ ॥ ೨೨ ॥
ಋಷೀಣಾಂ ವಚನಂ ಶ್ರುತ್ವಾ ಶಾಂಡಿಲೀ ದುಃಖಿತಾಽಬ್ರವೀತ್ ।
ಉದಿತೇಽರ್ಕೇ ತು ಮೇ ಭರ್ತಾ ಮೃತ್ಯುಂ ಯಾಸ್ಯತಿ ಭೋ ದ್ವಿಜಾಃ॥೨೩॥
ತಂ ಕಥಂ ಮೋಚಯಾಮೀಹ ಹ್ಯಾತ್ಮನೋಽನಿಷ್ಟಸಿದ್ಧಯೇ ।
ಕ್ರಿಯಾಪ್ರವರ್ತನಾಚ್ಚಾಽದ್ಯ ಕಿಂ ಕಾರ್ಯಂ ಮೇ ಮಹರ್ಷಯಃ ॥ ೨೪ ॥
ನಿಃಪುಂಸೀ ಸ್ತ್ರೀ ಹ್ಯನಾಥಾಽಹಂ ಭವಾಮಿ ಭವತೋ ಮತಂ ।
ತಿಷ್ಠ ತ್ವಮಂಧಕಾರೇ ತು ನೇಚ್ಛಾಮಿ ರವಿಣೋದಯಂ ॥ ೨೫ ॥
ತೇನ ವಾಕ್ಯೇನ ತೇ ಸರ್ವೇ ದೇವಾಽಸುರಮಹರ್ಷಯಃ ।
ಶಿರಃ ಸಂಚಾಲನಾಃ ಸರ್ವೇ ಸಾಧು ಸಾಧ್ವಿತಿ ಚಾಽಬ್ರುವನ್ ॥ ೨೬ ॥
ಪತಿವ್ರತೇ ಮಹಾಭಾಗೇ ಶೃಣು ವಾಕ್ಯಂ ತಪೋಧನೇ ।
ಮನ್ಯಸೇ ಯದಿ ನಃ ಸರ್ವಾನ್ಕುರುಷ್ವ ವಚನಂ ಚ ಯತ್ ॥ ೨೭ ॥

---

ಗಳನ್ನೂ ದಾನಮಾಡಿ ಕ್ಷಮೆಬೇಡಿದನು. ವಿವಾಹವು ಮುಗಿದ ತರುವಾಯ ಮಾಂಡವ್ಯನು ಶಾಂಡಿಲಿಯನ್ನು ಕರೆಯಿಸಿ ಹೀಗೆಂದನು.

೨೨. "ಶಾಂಡಿಲಿ! ನೀನು ಈ ಬ್ರಾಹ್ಮಣರನ್ನು ಸನ್ಮಾನಿಸು. ಸೂರ್ಯನನ್ನು ಬಿಡಿಸು. ಅದರಿಂದ ಕತ್ತಲೆಯನ್ನು ನಿವಾರಿಸು; ದಯೆತೋರು."

೨೩. ಶಾಂಡಿಲಿಯು ಮುನಿಗಳ ಮಾತನ್ನು ಕೇಳಿ ದುಃಖಗೊಂಡು ಇಂತೆಂದಳು. "ಎಲೈ ಬ್ರಾಹ್ಮಣರೆ! ಸೂರ್ಯನು ಉದಯಿಸಿದರೆ ನನ್ನ ಪತಿಯು ಮಡಿಯುವನು.

೨೪. ನನಗೆ ಅನಿಷ್ಟವನ್ನುಂಟುಮಾಡುವುದರಿಂದ ಆ ಸೂರ್ಯನನ್ನು ಹೇಗೆ ಬಿಡಿಸಲಿ. ಮಹರ್ಷಿಗಳೆ! ಕ್ರಿಯಾನುಷ್ಠಾನ ನಡೆಯುವುದರಿಂದ ನನಗೇನು ಪ್ರಯೋಜನ?

೨೫–೨೬. ನಾನು ಪುರುಷನಿಲ್ಲದೆ ಅನಾಥಳಾಗಿರಬೇಕೆಂದು ನಿನ್ನ ಅಭಿಪ್ರಾಯವೇ? ನೀವೇ ಕತ್ತಲೆಯಲ್ಲಿರಿ. ನಾನು ಸೂರ್ಯೋದಯವನ್ನು ಇಚ್ಛಿಸುವುದಿಲ್ಲ." ಅವಳ ಆ ಮಾತಿನಿಂದ ಸಮಸ್ತದೇವದಾನವಮಹರ್ಷಿಗಳು ತಲೆದೂಗುತ್ತ, "ಒಳ್ಳೆಯದು ಒಳ್ಳೆಯದು" ಎಂದರು.

೨೭. "ಮಹಾತ್ಮಳೂ, ಪತಿವ್ರತೆಯೂ, ತಪಸ್ವಿನಿಯೂ ಆಗಿರುವ ಶಾಂಡಿಲಿಯೆ! ನಮ್ಮಾ ಮಾತನ್ನು ಕೇಳು. ನಮ್ಮನ್ನೆಲ್ಲ ಸನ್ಮಾನಿಸುವುದಾದರೆ ಈ ಮಾತನ್ನು ನಡೆಸು" ಎಂದರು.

ಶಾಂಡಿಲ್ಯುವಾಚ :—

ಯೇನ ಮೇ ನಮರೇದ್ಭರ್ತಾ ಯೇನ ಸತ್ಯಂ ಮುನೇರ್ವಚಃ ।
ತತ್ಕುರುಧ್ವಂ ವಿಚಾರ್ಯಾಶು ಯೇನ ಸಂವರ್ಧತೇ ಸುಖಂ ॥ ೨೮ ॥
ತಸ್ಯಾಸ್ತದ್ವಚನಂ ಶ್ರುತ್ವಾ ಸ್ವಪ್ನಾವಸ್ಥಾಕೃತೋ ಹ್ಯೃಷಿಃ ।
ಅಂತರ್ಹಿತೋ ಮುಹೂರ್ತಂ ಚ ಶಾಂಡಿಲ್ಯಾಶ್ಚ ಪ್ರಪಶ್ಯತಾಂ ॥ ೨೯ ॥
ಪುನರಾದಾಯ ತೇ ಸರ್ವೇ ಕೃತ್ವಾ ನಿರ್ವ್ರಣಸತ್ತನುಂ ।
ಸ್ನಾಪಿತೋ ನರ್ಮದಾತೋಯೇ ಶಾಂಡಿಲ್ಯಾಯೈ ಸಮರ್ಪಿತಃ ॥ ೩೦ ॥
ತತಃ ಸಾ ಹೃಷ್ಟಮನಸಾ ಪತಿಂ ದೃಷ್ಟ್ವಾ ತು ತೈಜಸಂ ।
ಪ್ರಣಮ್ಯ ತಾನೃಷೀನ್ದೇವಾನ್ವಿಮಲಾರ್ಕಂ ಜಗತ್ಕೃತಂ ॥ ೩೧ ॥
ಕ್ರಿಯಾಃ ಪ್ರವರ್ತಿತಾಃ ಸರ್ವೇ ದೇವಗಂಧರ್ವಮಾನುಷಾಃ ।
ಹೃಷ್ಟತುಷ್ಟಾ ಗತಾಃ ಸರ್ವೇ ಸ್ವಮಾಶ್ರಮಪದಂ ಮಹತ್ ॥ ೩೨ ॥
ಪತಿವ್ರತಾ ಸ್ವಭರ್ತ್ರಾ ಸಾ ಮಾಸಮೇವಾಽಽಶ್ರಮೇ ಸ್ಥಿತಾ ।
ಮಾಂಡವ್ಯೇನಾಽಪ್ಯನುಜ್ಞಾತಾ ಯಯೌ ನತ್ವಾ ಸ್ವಮಾಶ್ರಮಂ ॥ ೩೩ ॥

---

೨೮. ಶಾಂಡಿಲಿಯು ಹೇಳುತ್ತಾಳೆ:—ನೀವು ಆಲೋಚಿಸಿ ನನ್ನ ಪತಿಯು ಮಡಿಯದಂತೆಯೂ, ಮುನಿಯ ಮಾತು ಸತ್ಯವಾಗುವಂತೆಯೂ, ಸುಖವು ಹೆಚ್ಚುವಂತೆಯೂ ಮಾಡಿರಿ.

೨೯. ಮುನಿಗಳು ಆ ಶಾಂಡಿಲಿಯ ಮಾತನ್ನು ಕೇಳಿ ಅವಳ ಪತಿಯನ್ನು ಸ್ವಪ್ನಾವಸ್ಥೆಯುಳ್ಳವನನ್ನಾಗಿ ಮಾಡಿ ಶಾಂಡಿಲಿಗೆ ತೋರಿಸಿ ಸ್ವಲ್ಪಹೊತ್ತು ಅಡಗಿಸಿಟ್ಟರು.

೩೦. ಅನಂತರ ಅವರೆಲ್ಲರೂ ಹುಣ್ಣುಗಳಿಲ್ಲದೆ ಸುಂದರನಾದ ಆ ಮುನಿಯನ್ನು ನರ್ಮದಾನದಿಯ ನೀರಿನಲ್ಲಿ ಸ್ನಾನ ಮಾಡಿಸಿ ಶಾಂಡಿಲಿಗೆ ಒಪ್ಪಿಸಿದರು.

೩೧. ಬಳಿಕ ಅವಳು ತೇಜಸ್ವಿಯಾದ ಪತಿಯನ್ನು ಕಂಡು ಸಂತೋಷಗೊಂಡು ಆ ಋಷಿ ದೇವತೆಗಳನ್ನು ನಮಸ್ಕರಿಸಿ ಜಗತ್ತಿನಲ್ಲಿ ಶುದ್ಧನಾದ ಸೂರ್ಯನಿರುವಂತೆ ಮಾಡಿದಳು.

೩೨. ಆಗ ಪ್ರಪಂಚದಲ್ಲಿ ಯಜ್ಞಯಾಗಾದಿ ಸತ್ಕ್ರಿಯೆಗಳು ನಡೆದುವು. ದೇವಗಂಧರ್ವಮನುಷ್ಯರು ಹೃಷ್ಟತುಷ್ಟರಾಗಿ ತಮ್ಮ ಆಶ್ರಮಕ್ಕೆ ತೆರಳಿದರು.

೩೩. ಪತಿವ್ರತೆಯಾದ ಆ ಶಾಂಡಿಲಿಯು ಒಂದು ತಿಂಗಳಕಾಲ ಪತಿಯೊಡನೆ ಆ ಮಾಂಡವ್ಯನ ಆಶ್ರಮದಲ್ಲಿ ವಾಸಿಸಿ ಅವನ ಅಪ್ಪಣೆಯನ್ನು ಪಡೆದು ನಮಸ್ಕರಿಸಿ ತನ್ನ ಆಶ್ರಮಕ್ಕೆ ಹೋದಳು.

ಗತೇಷು ತೇಷು ಸರ್ವೇಷು ಸ್ಥಾಪಯಾಮಾಸ ಚಾಽಚ್ಯುತಂ ।
ಮಾಂಡವ್ಯೇಶ್ವರನಾಮಾನಂ ನಾರಾಯಣ ಇತಿ ಸ್ಮೃತಂ ॥ ೩೪ ॥
ದಿವ್ಯಂ ವರ್ಷಸಹಸ್ರಂ ತು ಪೂಜಯಾಮಾಸ ಭಾರತ ।
ಗತೋಽಸಾವೃಷಿಸಂಘೈಶ್ಚ ಸಹಿತೋಽಮರಪರ್ವತಂ ॥ ೩೫ ॥
ತಪಸ್ತಪಂತೌ ತೌ ತತ್ರ ಹ್ಯದ್ಯಾಪಿ ಕಿಲ ಭಾರತ ।
ಭ್ರಾತರೌ ಸಂಯತಾತ್ಮಾನೌ ಧ್ಯಾಯತಃ ಪರಮಂ ಪದಂ ॥ ೩೬ ॥
ತತ್ರ ತೀರ್ಥೇ ತು ಯಃ ಸ್ನಾತ್ವಾ ತರ್ಪಯೇತ್ಪಿತೃದೇವತಾಃ ।
ಪಿತರಸ್ತಸ್ಯ ತೃಪ್ಯಂತಿ ಪಿಂಡದಾನಾದ್ದಶಾಬ್ದಿಕಂ ॥ ೩೭ ॥
ದೇವಗೃಹೇ ತು ಪಕ್ಷಾದೌ ಯಃ ಕರೋತಿ ವಿಲೇಪನಂ ।
ಗೋದಾನಶತಸಾಹಸ್ರೇ ದತ್ತೇ ಭವತಿ ಯತ್ಫಲಂ ॥ ೩೮ ॥
ಉಪಲೇಪನೇನ ದ್ವಿಗುಣಮರ್ಚನೇ ತು ಚತುರ್ಗುಣಂ ।
ದೀಪಪ್ರಜ್ವಲನೇ ಪುಣ್ಯಮಷ್ಟಧಾ ಪರಿಕೀರ್ತಿತಂ ॥ ೩೯ ॥
ದಿವ್ಯನೇತ್ರಧರೋ ಭೂತ್ವಾ ತ್ರೈಲೋಕ್ಯೇ ಸಚರಾಚರೇ ।
ದಧ್ನಾ ಮಧುಘೃತೈರ್ದೇವಂ ಪಯಸಾ ನರ್ಮದೋದಕೈಃ ॥ ೪೦ ॥
ಸ್ನಪನಂ ಯೇ ಪ್ರಕುರ್ವಂತಿ ಪುಷ್ಪಮಾಲಾವಿಲೇಪನೈಃ ।
ಯೇಽರ್ಚಯಂತಿ ವಿರೂಪಾಕ್ಷಂ ದೇವಂ ನಾರಾಯಣಂ ಹರಿಂ ॥ ೪೧ ॥

---

೩೪–೩೫. ಅವರೆಲ್ಲ ತಮ್ಮ ಆಶ್ರಮಕ್ಕೆ ತೆರಳಲು ಮಾಂಡವ್ಯನು ಮಾಂಡವ್ಯೇಶ್ವರನೆಂಬ ವಿಷ್ಣುವನ್ನು ಅಲ್ಲಿ ಪ್ರತಿಷ್ಠೆಮಾಡಿ ಒಂದು ಸಾವಿರ ವರ್ಷ ಕಾಲ ಪೂಜಿಸಿ ಋಷಿಗಳೊಡನೆ ಅಮರಪರ್ವತಕ್ಕೆ ಹೋದನು.

೩೬. ಈಗಲೂ ಅವರಿಬ್ಬರೂ ಅಲ್ಲಿ ಜಿತೇಂದ್ರಿಯರಾಗಿ ತಪಸ್ಸನ್ನು ಮಾಡುತ್ತ ಉತ್ತಮಪದವಿಯನ್ನು ಧ್ಯಾನಿಸುತ್ತಿರುವರು.

೩೭. ಆ ತೀರ್ಥದಲ್ಲಿ ಮಿಂದು ಪಿತೃದೇವತೆಗಳಿಗೆ ತರ್ಪಣವಮಾಡಿದರೆ ಅವರು ಹತ್ತು ವರ್ಷಗಳಕಾಲ ಪಿಂಡಪ್ರದಾನಮಾಡುವುದರಿಂದಾಗುವ ತೃಪ್ತಿಯನ್ನು ಹೊಂದುವರು.

೩೮. ದೇವಾಲಯದಲ್ಲಿ ಪಾಡ್ಯದ ದಿನ ವಿಲೇಪನ ಮಾಡಿದವನು ಲಕ್ಷ ಗೋವುಗಳನ್ನು ದಾನಮಾಡಿದ ಫಲವನ್ನು ಪಡೆಯುವನು.

೩೯–೪೦. ಅಲ್ಲಿ ಉಪಲೇಪನಮಾಡುವುದರಿಂದ ಇಮ್ಮಡಿಯೂ, ಪೂಜಿಸುವುದರಿಂದ ನಾಲ್ಮಡಿಯೂ, ದೀಪವನ್ನು ಹೊತ್ತಿಸುವುದರಿಂದ ಎಂಟರಷ್ಟೂ ಪುಣ್ಯವುಂಟಾಗುವುದು. ಮತ್ತು ಹಾಗೆ ಮಾಡಿದವನು ದಿವ್ಯನೇತ್ರಧಾರಿಯಾಗಿ ತ್ರೈಲೋಕ್ಯದಲ್ಲಿ ಸಂಚರಿಸುವನು. ಮೊಸರು, ಜೇನು, ತುಪ್ಪ, ಹಾಲು, ನರ್ಮದಾ ಜಲಗಳಿಂದ ಅಭಿಷೇಕಮಾಡಿ ಪುಷ್ಪಮಾಲೆ, ಗಂಧಗಳಿಂದ ಶಿವನನ್ನೂ,

ತೇಽಪಿ ದಿವ್ಯವಿಮಾನೇನ ಕ್ರೀಡಂತೇ ಕಲ್ಪಸಂಖ್ಯಯಾ ।
ದೀಪಾಷ್ಟಕಂ ತು ಯಃ ಕುರ್ಯಾದಷ್ಟಮ್ಯಾಂ ಚ ಚತುರ್ದಶೀಂ ॥ ೪೨ ॥
ಏಕಾದಶ್ಯಾಂ ತು ಕೃಷ್ಣಸ್ಯ ನ ಪಶ್ಯಂತಿ ಯಮಂ ತು ತೇ ।
ಫಲೈರ್ನಾನಾವಿಧೈಃ ಶುಭ್ರೈರ್ಯಃ ಕುರ್ಯಾಲ್ಲಿಂಗಪೂರಣಂ ॥ ೪೩ ॥
ತೇಽಪಿ ಯಾಂತಿ ವಿಮಾನೇನ ಸಿದ್ಧಚಾರಣಸೇವಿತಾಃ ।
ಘಂಟಾ ಚೈವ ಪತಾಕಾ ಚ ವಿಮಾನೇ ಪುಷ್ಪಮಾಲಿಕಾ ॥ ೪೪ ॥
ವಾದಿತ್ರಾಣಿ ಯಥಾರ್ಹಾಣಿ ಪ್ರಾಂತೇ ಚ ಗಚ್ಛತೇ ಶಿವಂ ।
ದೇವಾಲಯಂ ತು ಯಃ ಕುರ್ಯಾದ್ವೈಷ್ಣವಂ ಮಾಂಡವೇಶ್ವರಂ ॥ ೪೫ ॥
ಸ್ವರ್ಗೇ ವಸತಿ ಧರ್ಮಾತ್ಮಾ ಯಾವದಾಭೂತಸಂಪ್ಲವಂ ।
ಮಾಂಡವ್ಯನಾರಾಯಣಾಖ್ಯೇ ವಿಪ್ರಾನ್ಭೋಜಯತೇಽಗ್ರತಃ ॥ ೪೬ ॥
ಏಕಸ್ಮಿನ್ಭೋಜಿತೇ ವಿಪ್ರೇ ಕೋಟಿರ್ಭವತಿ ಭೋಜಿತಾ ।
ಆಶ್ವಿನೇ ಮಾಸಿ ಸಂಪ್ರಾಪ್ತೇ ಶುಕ್ಲಪಕ್ಷೇ ಚತುರ್ದಶೀಂ ॥ ೪೭ ॥
ಕೃತೋಪವಾಸನಿಯಮೋ ರಾತ್ರೌ ಜಾಗರಣೇನ ಚ ।
ದೀಪಮಾಲಾಂ ಚತುರ್ದಿಕ್ಷು ಪೂಜಾಂ ಕೃತ್ವಾ ತು ಶಕ್ತಿತಃ ॥ ೪೮ ॥
ನಾರೀ ವಾ ಪುರುಷೋ ವಾಽಪಿ ನೃತ್ಯಗೀತಪ್ರವಾದನೈಃ
ಪ್ರಭಾತೇ ವಿಮಲೇ ಸೂರ್ಯೇ ಸ್ನಾನಾದಿಕವಿಧಿಂ ನೃಪ ॥ ೪೯ ॥

---

ನಾರಾಯಣನನ್ನೂ ಅರ್ಚಿಸುವವರು ದಿವ್ಯ ವಿಮಾನವನ್ನೇರಿ ಕಲ್ಪಕಾಲದವರೆಗೆ ವಿನೋದಪಡುವರು. ಅಷ್ಟಮಿ, ಚತುರ್ದಶೀ, ಕೃಷ್ಣಪಕ್ಷದ ಏಕಾದಶೀ ದಿನಗಳಲ್ಲಿ ಎಂಟು ದೀಪಗಳನ್ನು ಹೊತ್ತಿಸುವವರು ಯಮನನ್ನು ನೋಡುವುದಿಲ್ಲ. ಶುದ್ಧವಾದ ಬಗೆಬಗೆಯ ಫಲಗಳಿಂದ ಲಿಂಗವನ್ನು ಪೂರ್ತಿಮಾಡುವವರು ಸಿದ್ಧಚಾರಣರಿಂದ ಸೇವಿತರಾಗಿ ವಿಮಾನದಿಂದ ಸಂಚರಿಸುತ್ತಾರೆ. ವಿಮಾನದಲ್ಲಿ ಘಂಟೆ, ಪತಾಕೆ, ಹೂವಿನಮಾಲೆ, ಉಚಿತವಾದ ವಾದ್ಯಗಳು ಇವುಗಳನ್ನು ಇಡುವವರು ಮರಣಾನಂತರದಲ್ಲಿ ಶಂಕರನನ್ನೇ ಸೇರುವರು. ಮಾಂಡವ್ಯೇಶ್ವರ ವಿಷ್ಣು ದೇವಾಲಯವನ್ನು ನಿರ್ಮಿಸಿದವನು ಪ್ರಳಯಕಾಲದವರೆಗೆ ಸ್ವರ್ಗದಲ್ಲಿ ವಾಸಿಸುವನು. ಈ ಮಾಂಡವ್ಯ ನಾರಾಯಣ ಕ್ಷೇತ್ರದಲ್ಲಿ ಬ್ರಾಹ್ಮಣರನ್ನು ಭೋಜನಮಾಡಿಸಿದರೆ ಒಬ್ಬ ಬ್ರಾಹ್ಮಣನ ಭೋಜನದಿಂದ ಕೋಟಿ ಸಂಖ್ಯೆಯ ಬ್ರಾಹ್ಮಣರನ್ನು ಭೋಜನ ಮಾಡಿಸಿದಂತಾಗುವುದು. ಆಶ್ವಿನ ಶುಕ್ಲಪಕ್ಷದ ಚತುರ್ದಶೀ ದಿನ ಉಪವಾಸಮಾಡಿ ರಾತ್ರಿ ಜಾಗರಣೆಗೈದು ನಾಲ್ಕು ದಿಕ್ಕುಗಳಲ್ಲಿ ದೀಪಮಾಲೆಯನ್ನು ಇಟ್ಟು ನೃತ್ಯಗೀತಾದಿಗಳಿಂದ ಶಕ್ತ್ಯನುಸಾರ ಪೂಜೆಮಾಡಿ ಬೆಳಗ್ಗೆ ಸೂರ್ಯೋದಯ ಕಾಲದಲ್ಲಿ ಸ್ನಾನಾದಿಗಳನ್ನು ಪೂರಯಿಸಿ ಈ ಮಾಂಡವ್ಯೇ

ಅಭಿನಿರ್ವರ್ತ್ಯ ಮೌನೇನ ಪಶ್ಯತೇ ದೇವಮೀದೃಶಂ ।
ಸರ್ವಪಾಪವಿನಿರ್ಮುಕ್ತೋ ರುದ್ರಲೋಕೇ ಮಹೀಯತೇ ॥ ೫೦ ॥
ಅಥವಾ ಮಾರ್ಗಶೀರ್ಷೇ ಚ ಚೈತ್ರವೈಶಾಖಯೋರಪಿ ।
ಶ್ರಾವಣೇ ವಾ ಮಹಾರಾಜ ಸರ್ವಕಾಲೇಽಥವಾಽಪಿ ಚ ॥ ೫೧ ॥
ಶಿವರಾತ್ರಿಸಮಂ ಪುಣ್ಯಮಿತ್ಯೇವಂ ಶಿವಭಾಷಿತಂ ।
ವಾಜಪೇಯಾಽಶ್ವಮೇಧಾಭ್ಯಾಂ ಫಲಂ ಭವತಿ ನಾಽನ್ಯಥಾ ॥ ೫೨ ॥
ದುರ್ಭಗಾ ದುಃಖಿತಾ ವಂಧ್ಯಾ ದರಿದ್ರಾ ಚ ಮೃತಪ್ರಜಾ ।
ಸ್ನಾತಿ ರುದ್ರಘಟೈರ್ಯಾ ಸ್ತ್ರೀ ಸರ್ವಾನ್ಕಾಮಾನವಾಪ್ನುಯಾತ್ ॥ ೫೩ ॥
ಕೃಮಿಕೀಟಪತಂಗಾಶ್ಚ ತಸ್ಮಿಂಸ್ತೀರ್ಥೇ ತು ಯೇ ಮೃತಾಃ ।
ಸ್ವರ್ಗಂ ಪ್ರಯಾಂತಿ ತೇ ಸರ್ವೇ ದಿವ್ಯರೂಪಧರಾ ನೃಪ ॥ ೫೪ ॥
ಅನಾಶಕೇ ಜಲೇಽಗ್ನೌ ತು ಯೇ ಮೃತಾ ವ್ಯಾಧಿಪೀಡಿತಾಃ ।
ಅನಿವರ್ತಿಕಾ ಗತಿಸ್ತೇಷಾಂ ರುದ್ರಲೋಕೇ ಹ್ಯಸಂಶಯಂ ॥ ೫೫ ॥
ನಿತ್ಯಂ ನಮತಿ ಯೋ ರಾಜಂಛಿವನಾರಾಯಣಾವುಭೌ ।
ಗೋದಾನಫಲಮಾಪ್ನೋತಿ ತಸ್ಯ ತೀರ್ಥಪ್ರಭಾವತಃ ॥ ೫೬ ॥

---

ಶ್ವರನನ್ನು ದರ್ಶನಮಾಡಿದ ಹೆಂಗಸಾಗಲಿ, ಗಂಡಸಾಗಲಿ ಸಕಲ ಪಾಪಮುಕ್ತರಾಗಿ ರುದ್ರಲೋಕದಲ್ಲಿ ಪೂಜ್ಯರಾಗುವರು.

೫೧–೫೨. ಅಥವಾ ಮಾರ್ಗಶೀರ್ಷ, ಚೈತ್ರ, ವೈಶಾಖ, ಶ್ರಾವಣ ಮಾಸಗಳಲ್ಲಾಗಲಿ, ಇತರ ಕಾಲದಲ್ಲಾಗಲಿ ಇಲ್ಲಿ ಶಿವರಾತ್ರಿಗೆ ಸಮವಾದ ಪುಣ್ಯವು ಲಭಿಸುವುದು, ಎಂದು ಶಿವನು ಹೇಳಿದ್ದಾನೆ. ಇಲ್ಲಿ ವಾಜಪೇಯಾಶ್ವಮೇಧಯಾಗಗಳ ಫಲವೂ ದೊರೆಯುವುವು.

೫೩. ದುರ್ಭಗಳೂ, ದುಃಖಿತಳೂ, ಬಂಜೆಯೂ, ಬಡವಳೂ, ಮೃತವಾದ ಸಂತತಿಯುಳ್ಳವಳೂ ಇಲ್ಲಿ ರುದ್ರಘಟಗಳಿಂದ ಮಿಂದರೆ ಸಮಸ್ತೇಷ್ಟಾರ್ಥಗಳನ್ನೂ ಪಡೆಯುವಳು.

೫೪. ಈ ತೀರ್ಥದಲ್ಲಿ ಮಡಿದ ಕೃಮಿ, ಕೀಟ, ಪತಂಗಗಳೂ ದಿವ್ಯರೂಪವನ್ನು ಧರಿಸಿ ಸ್ವರ್ಗಕ್ಕೆ ಹೋಗುವುವು.

೫೫. ಅಲ್ಲಿ ವ್ಯಾಧಿಪೀಡಿತರಾದವರು ಜಲಾಗ್ನಿಗಳಲ್ಲಿ ಮಡಿದರೆ ರುದ್ರಲೋಕದಲ್ಲಿ ಶಾಶ್ವತವಾದ ಗತಿಯುಂಟಾಗುವುದು.

೫೬. ಇಲ್ಲಿ ನಿತ್ಯವೂ ವಿಷ್ಣುಮಹೇಶ್ವರರನ್ನು ವಂದಿಸುವವನು ತೀರ್ಥದ ಪ್ರಭಾವದಿಂದ ಗೋದಾನದ ಫಲವನ್ನು ಹೊಂದುವನು.

ದೇವಾಲಯೇ ತು ರಾಜೇಂದ್ರ ಯಶ್ಚ ಕುರ್ಯಾತ್ಪ್ರದಕ್ಷಿಣಾಂ ।
ಪ್ರದಕ್ಷಿಣೀಕೃತಾ ತೇನ ಸಸಾಗರಧರಾ ಧರಾ ॥ ೫೭ ॥
ಸಾರ್ಧಂ ಶತಂ ಚ ತೀರ್ಥಾನಿ ಮಲ್ಲಿಕಾಭವನಾದ್ಬಹಿಃ ।
ತಸ್ಯ ತೀರ್ಥಪ್ರಮಾಣಂ ತು ವಿಸ್ತರಂ ರಾಜಸತ್ತಮ ॥ ೫೮ ॥
ಸೂತ್ರೇಣ ವೇಷ್ಟಯೇತ್ಕ್ಷೇತ್ರಮಥವಾ ಶಿವಮಂದಿರಂ ।
ಅಥವಾ ಶಿವಲಿಂಗಂ ಚ ತಸ್ಯ ಪುಣ್ಯಫಲಂ ಶೃಣು ॥ ೫೯ ॥
ಜಂಬೂದ್ವೀಪಶ್ಚ ಕೃತ್ಸ್ನಶ್ಚ ಶಾಲ್ಮಲೀ ಕುಶಕ್ರೌಂಚಕೌ ।
ಶಾಕಪುಷ್ಕರ ಗೋಮೇದೈಃ ಸಪ್ತದ್ವೀಪಾ ವಸುಂಧರಾ ॥ ೬೦ ॥
ಭೂಷಿತಾ ತೇನ ರಾಜೇಂದ್ರ ಸಶೈಲವನಕಾನನಾ ।
ರೇವಾಯಾಂ ದಕ್ಷಿಣೇ ಭಾಗೇ ಶಿವಕ್ಷೇತ್ರಾತ್ಸಮೀಪತಃ ॥ ೬೧ ॥
ದೇವಖಾತಂ ಮಹಾಪುಣ್ಯಂ ನಿರ್ಮಿತಂ ತ್ರಿದಶೈರಪಿ ।
ತಸ್ಮಿನ್ ಯಃ ಕುರುತೇ ಸ್ನಾನಂ ಮುಚ್ಯತೇ ಸರ್ವಪಾತಕೈಃ ॥ ೬೨ ॥
ಪೂರ್ಣಿಮಾಯಾಮಮಾವಾಸ್ಯಾಂ ವ್ಯತೀಪಾತೇಽರ್ಕಸಂಕ್ರಮೇ ।
ಶ್ರಾದ್ಧಂ ಚ ಸಂಗ್ರಹೇ ಕುರ್ಯಾತ್ಸ ಗಚ್ಛೇತ್ಪರಮಾಂ ಗತಿಂ ॥ ೬೩ ॥
ದೇವಖಾತೇ ತ್ರಯೋ ದೇವಾ ಬ್ರಹ್ಮವಿಷ್ಣುಮಹೇಶ್ವರಾಃ ।
ತಿಷ್ಠಂತಿ ಋಷಿಭಿಃ ಸಾರ್ಧಂ ಪಿತೃದೇವಗಣೈಃ ಸಹ ॥ ೬೪ ॥

---

೫೭. ಮಹಾರಾಜ! ಆ ದೇವಾಲಯವನ್ನು ಪ್ರದಕ್ಷಿಣೆಗೈದವನು ಸಮುದ್ರ ಪರ್ವತಗಳಿಂದ ಕೂಡಿದ ಭೂಮಿಯನ್ನು ಪ್ರದಕ್ಷಿಣೆ ಮಾಡಿದವನಂತಾಗುವನು.

೫೮. ಅಲ್ಲಿ ಮಲ್ಲಿಕಾಭವನದ ಹೊರಗೆ ನೂರೈವತ್ತು ತೀರ್ಥಗಳು ಇರುವುದರಿಂದ ಆ ತೀರ್ಥವು ವಿಸ್ತಾರವಾಗಿದೆ.

೫೯. ಆ ಕ್ಷೇತ್ರವನ್ನಾಗಲಿ, ಶಿವಾಲಯವನ್ನಾಗಿ, ಶಿವಲಿಂಗವನ್ನಾಗಲಿ ಸೂತ್ರದಿಂದ ಸುತ್ತಿದವನಿಗೆ ದೊರಕುವ ಫಲವನ್ನು ಕೇಳು.

೬೦–೬೨. ಜಂಬು, ಶಾಲ್ಮಲಿ, ಕುಶ, ಕ್ರೌಂಚ, ಶಾಕ, ಪುಷ್ಕರ, ಗೋಮೇದ ದ್ವೀಪಗಳಿಂದಲೂ, ಪರ್ವತವನಗಳಿಂದಲೂ ಅಲಂಕಾರಗೊಂಡ ಭೂಮಿಯನ್ನು ಅಲಂಕಾರಮಾಡಿದ ಫಲವು ದೊರೆಯುವುದು. ಯಮುನಾ ನದಿಯ ದಕ್ಷಿಣಭಾಗದಲ್ಲಿ ಶಿವಕ್ಷೇತ್ರದ ಹತ್ತಿರ ದೇವತೆಗಳು ನಿರ್ಮಿಸಿದ ಸರೋವರವೊಂದಿರುವುದು. ಅಲ್ಲಿ ಮಿಂದವನು ಸಮಸ್ತಪಾಪಮುಕ್ತನಾಗುವನು.

೬೩–೬೪. ಅಲ್ಲಿ ಹುಣ್ಣಿಮೆ, ಅಮಾವಾಸ್ಯೆ, ವ್ಯತೀಪಾತ, ಸೂರ್ಯಸಂಕ್ರಾಂತಿ, ಗ್ರಹಣ ಮೋಕ್ಷಕಾಲ ಇವುಗಳಲ್ಲಿ ಶ್ರಾದ್ಧಮಾಡಿದವನು ಉತ್ತಮಗತಿಯನ್ನು ಪಡೆಯುವನು. ದೇವಖಂಡದಲ್ಲಿ ಬ್ರಹ್ಮ ವಿಷ್ಣು ಮಹೇಶ್ವರರು, ಋಷಿಗಳಿಂದಲೂ, ಪಿತೃ ದೇವಗಣಗಳಿಂದಲೂ ಕೂಡಿ ಇರುತ್ತಾರೆ.

ತತ್ರ ತೀರ್ಥೇಽಶ್ವಿನೇ ಮಾಸಿ ಚತುರ್ದಶ್ಯಾಂ ವಿಶೇಷತಃ ।
ವಾಯುಮಾರ್ಗೇ ಸ್ಥಿತಃ ಶಕ್ರಸ್ತಿಷ್ಠತೇ ದೇವತೈಃ ಸಹ ॥ ೬೫ ॥
ಪೃಥಿವ್ಯಾಂ ಯಾನಿ ತೀರ್ಥಾನಿ ಸರಿತಃ ಸಾಗರಾಸ್ತಥಾ ।
ವಿಶಂತಿ ತಾನಿ ಸರ್ವಾಣಿ ದೇವಖಾತೇ ದಿನದ್ವಯಂ ॥ ೬೬ ॥
ಗಯಾಶಿರೇ ಚ ಯತ್ಪುಣ್ಯಂ ಪ್ರಯಾಗೇಽಮರಕಂಟಕೇ ।
ಪ್ರಯಾಗೇ ಸೋಮತೀರ್ಥೇ ಚ ತತ್ಪುಣ್ಯಂ ಮಾಂಡವೇಶ್ವರೇ ॥ ೬೭ ॥
ಪಟ್ಟಬಂಧೇನ ಯತ್ಪುಣ್ಯಂ ಮಾತ್ರಾಯಾಂ ಲಕುಲೇಶ್ವರೇ ।
ಆಶ್ವಿನ್ಯಾಮಶ್ವಿನೇ ಯೋಗೇ ತತ್ಪುಣ್ಯಂ ಮಾಂಡವೇಶ್ವರೇ ॥ ೬೮ ॥
ಉಜ್ಜಯಿನ್ಯಾಂ ಮಹಾಕಾಲೇ ವಾರಾಣಸ್ಯಾಂ ತ್ರಿಪುಷ್ಕರೇ ।
ಸನ್ನಿಹತ್ಯಾಂ ರವಿಗ್ರಸ್ತೇ ಮಾಂಡವ್ಯಾಖ್ಯೇ ಸನಾತನಂ ॥ ೬೯ ॥
ಇತಿ ಜ್ಞಾತ್ವಾ ಮಹಾರಾಜ ಸರ್ವತೀರ್ಥೇಷು ಚೋತ್ತಮಂ ।
ಪಿತೄನ್ದೇವಾನ್ ಸಮಭ್ಯರ್ಚ್ಯ ಸ್ನಾನದಾನಾದಿಪೂಜನೈಃ ॥ ೭೦ ॥
ಚತುರ್ದಶ್ಯಾಂ ನಿರಾಹಾರಃ ಸ್ಥಿತೋ ಭೂತ್ವಾ ಶುಚಿವ್ರತಃ ।
ಪೂಜಯೇತ್ಪರಯಾ ಭಕ್ತ್ಯಾ ರಾತ್ರೌ ಜಾಗರಣೇ ಶಿವಂ ॥ ೭೧ ॥

---

೬೫. ಅಲ್ಲಿ ಆಶ್ವಿನ ಶುಕ್ಲ ಚತುರ್ದಶಿಯದಿನ ಇಂದ್ರನು ದೇವತೆಗಳೊಡನೆ ವಾಯುಮಾರ್ಗದಲ್ಲಿರುವನು.

೬೬. ಆ ದೇವಖಾತದಲ್ಲಿ ಎರಡುದಿನ ಭೂಮಿಯಲ್ಲಿರುವ ಸಕಲ ತೀರ್ಥಗಳೂ, ನದಿಗಳೂ, ಸಮುದ್ರಗಳೂ ನೆಲೆಸಿರುವುವು.

೬೭. ಆ ಮಾಂಡವ್ಯೇಶ್ವರ ಕ್ಷೇತ್ರದಲ್ಲಿ ಗಯಾಶಿರ, ಅಮರಕಂಟಕ, ಪ್ರಯಾಗದ ಸೋಮತೀರ್ಥ ಇವುಗಳಲ್ಲಾಗುವ ಪುಣ್ಯವು ದೊರೆಯುವುದು.

೬೮. ಆಶ್ವಿನಮಾಸದ ಅಶ್ವಿನೀ ನಕ್ಷತ್ರ ಯೋಗವಿರುವ ಹುಣ್ಣಿಮೆಯ ದಿನ ಆ ಮಾಂಡವ್ಯೇಶ್ವರದಲ್ಲಿ, ಲಕುಲೇಶ್ವರದಲ್ಲಿ ಪಟ್ಟಬಂಧನ ಮಾಡಿದ ಪುಣ್ಯವು ಲಭಿಸುವುದು.

೬೯. ಉಜ್ಜಯಿನಿಯ ಮಹಾಕಾಲದಲ್ಲಿಯೂ, ಕಾಶಿಯ ತ್ರಿಪುಷ್ಕರದಲ್ಲಿಯೂ, ಸನ್ನಿಹಿತಿಯಲ್ಲಿ ಸೂರ್ಯಗ್ರಹಣಗಳಲ್ಲಿಯೂ ಉಂಟಾಗುವ ಪುಣ್ಯವು ಈ ಮಾಂಡವ್ಯಾಖ್ಯ ತೀರ್ಥದಲ್ಲಿ ಲಭಿಸುವುದು.

೭೦–೭೧. ಮಹಾರಾಜ! ಸಕಲ ತೀರ್ಥಗಳಲ್ಲಿ ಉತ್ತಮವಾದ ಈ ತೀರ್ಥವನ್ನು ತಿಳಿದು ಚತುರ್ದಶಿಯ ದಿನ ಉಪವಾಸಮಾಡಿ ಶುದ್ಧನಾಗಿ ಪಿತೃದೇವತೆಗಳನ್ನು ಸ್ನಾನದಾನಾದಿಗಳಿಂದ ಪೂಜಿಸಿ ರಾತ್ರಿ ಜಾಗರಣೆಗೈದು ಶಿವನನ್ನು ಅತಿ ಭಕ್ತಿಯಿಂದ ಪೂಜಿಸಬೇಕು.

ಸ್ನಾನೈಶ್ಚ ವಿವಿಧೈರ್ದೇವಂ ಪುಷ್ಪಾಗರುವಿಲೇಪನೈಃ ।
ಪ್ರಭಾತೇ ಪೌರ್ಣಮಾಸ್ಯಾಂ ತು ಸ್ನಾನಾದಿ ವಿಧಿತರ್ಪಣೈಃ ॥ ೭೨ ॥
ಶ್ರಾದ್ಧೇನ ಹವ್ಯಕವ್ಯೇನ ಶಿವಪೂಜಾರ್ಚನೇನ ಚ ।
ಅಗ್ನಿಷ್ಟೋಮಾದಿ ಯಜ್ಞೈಶ್ಚ ವಿಧಿವಚ್ಚಾಪ್ತದಕ್ಷಿಣೈಃ ॥ ೭೩ ॥
ಧೌತಪಾಪೋ ವಿಶುದ್ಧಾತ್ಮಾ ಲಭತೇ ಫಲಮುತ್ತಮಂ ।
ಗೋಸಹಸ್ರಪ್ರದಾನೇನ ದತ್ತಂ ಭವತಿ ಭಾರತ ॥ ೭೪ ॥
ಸ್ನಾನಾದ್ಯೈರ್ವಿಧಿವತ್ತತ್ರ ತದ್ದಿನೇ ಶಿವಸನ್ನಿಧೌ ।
ಹಿರಣ್ಯಂ ವೃಷಭಂ ಧೇನುಂ ಭೂಮಿಂ ಗೋಮಿಥುನಂ ಹಯಂ ॥ ೭೫ ॥
ಶಿವಮುದ್ದಿಶ್ಯ ವೈ ವಸ್ತ್ರಯುಗ್ಮೇ ದದ್ಯಾತ್ಸ್ವರೂಪಿಣೇ ।
ಪಾದುಕೋಪಾನಹೌ ಛತ್ರಂ ಭಾಜನಂ ರಕ್ತವಾಸಸೀ ॥ ೭೬ ॥
ಹೋಮಂ ದಾನಂ ತಥಾ ಜಾಪ್ಯಮಕ್ಷಯಂ ಸರ್ವಮೇವ ತತ್ ।
ಋಚಮೇಕಾಂ ತು ಋಗ್ವೇದೇ ಯಜುರ್ವೇದೇ ಯಜುಸ್ತಥಾ ॥ ೭೭ ॥
ಸಾಮೈಕಂ ಸಾಮವೇದೇ ತು ಜಪೇದ್ದೇವಾಗ್ರಸಂಸ್ಥಿತಃ ।
ಸಮ್ಯಗ್ವೇದಫಲಂ ತಸ್ಯ ಭವೇದ್ವೈ ನಾತ್ರ ಸಂಶಯಃ ॥ ೭೮ ॥
ಗಾಯತ್ರೀ ಜಾಪ್ಯಮಾತ್ರಸ್ತು ವೇದತ್ರಯಫಲಂ ಲಭೇತ್ ।
ಕುಲಕೋಟಿಶತಂ ಸಾಗ್ರಂ ಲಭತೇ ತು ಶಿವಾರ್ಚನಾತ್ ॥ ೭೯ ॥

---

೭೨–೭೪. ಪೂರ್ಣಿಮೆಯ ಬೆಳಗ್ಗೆ ಶಿವನನ್ನು ಸ್ನಾನ, ಪುಷ್ಪ, ಅಗರು ಗಂಧಗಳಿಂದ ಅರ್ಚಿಸಿ ಶ್ರಾದ್ಧ, ತರ್ಪಣ, ಹವ್ಯಕವ್ಯ, ಅಗ್ನಿಷ್ಟೋಮಾದಿ ಯಜ್ಞಗಳನ್ನು ಮಾಡಿ ಪಾಪರಹಿತನಾದವನು ಸಾವಿರ ಗೋವುಗಳನ್ನು ದಾನಮಾಡಿದ ಫಲವನ್ನು ಪಡೆಯುವನು.

೭೫–೭೬. ಆ ದಿನ ಶಿವನ ಹತ್ತಿರ ವಿಧಿಯಂತೆ ಮಿಂದು ಸುವರ್ಣ, ವೃಷಭ, ಧೇನು, ಭೂಮಿ, ಗೋಮಿಥುನ, ಅಶ್ವ, ವಸ್ತ್ರಯುಗ್ಮ, ಪಾದುಕ, ಛತ್ರ, ಪಾತ್ರೆ, ರಕ್ತವಸ್ತ್ರ ಇವುಗಳನ್ನು ದಾನಮಾಡಬೇಕು.

೭೭–೭೮. ಅಲ್ಲಿ ಮಾಡಿದ ಹೋಮ, ಜಪ, ದಾನ ಇವುಗಳೆಲ್ಲ ಅಕ್ಷಯ ವಾಗುವುವು. ಋಗ್ವೇದದಲ್ಲಿ ಒಂದು ಋಕ್ಕನ್ನೂ, ಯಜುರ್ವೇದದಲ್ಲಿ ಒಂದು ಯಜುಸ್ಸನ್ನೂ, ಸಾಮವೇದದಲ್ಲಿ ಒಂದು ಸಾಮವನ್ನೂ ಶಿವನ ಮುಂದೆ ಜಪಿಸಿದರೆ ಸಂಪೂರ್ಣ ವೇದಾಧ್ಯಯನಮಾಡಿದ ಫಲವು ನಿಶ್ಚಯವಾಗಿಯೂ ಲಭಿಸುವುದು.

೭೯. ಗಾಯತ್ರೀಜಪದಿಂದ ಮೂರು ವೇದಗಳನ್ನು ಪಾರಾಯಣಮಾಡಿದ ಫಲವು ದೊರೆಯುವುದು. ಶಿವಾರ್ಚನೆಯಿಂದ ನೂರುಕೋಟಿ ಕುಲಗಳು ವೃದ್ಧಿಯಾಗುವುವು.

ಸ್ನಾನೇ ದಾನೇ ತಥಾ ಶ್ರಾದ್ಧೇ ಜಾಗರೇ ಗೀತವಾದಿತೇ ।
ಅನಿವರ್ತಿಕಾ ಗತಿಸ್ತಸ್ಯ ಶಿವಲೋಕಾತ್ಕದಾಚನ ॥ ೮೦ ॥
ಕಾಲೇನ ಮಹತಾವಿಷ್ಟೋ ಮರ್ತ್ಯಲೋಕೇ ಸಮಾವಿಶೇತ್ ।
ರಾಜಾ ಭವತಿ ಮೇಧಾವೀ ಸರ್ವವ್ಯಾಧಿವಿವರ್ಜಿತಃ ॥ ೮೧ ॥
ಜೀವೇದ್ವರ್ಷಶತಂ ಸಾಗ್ರಂ ಪುತ್ರಪೌತ್ರಧನಾನ್ವಿತಃ ।
ತಚ್ಚ ತೀರ್ಥಂ ಪುನಃ ಸ್ಮೃತ್ವಾ ಲೀಯಮಾನೋ ಮಹೇಶ್ವರೇ ॥ ೮೨ ॥
ಉಪಾಸ್ತೇ ಯಸ್ತು ವೈ ಸಂಧ್ಯಾಂ ತಸ್ಮಿಂಸ್ತೀರ್ಥೇ ಚ ಪರ್ವಣಿ ।
ಸಾಂಗೋಪಾಂಗೈಶ್ಚತುರ್ವೇದೈರ್ಲಭತೇ ಫಲಮುತ್ತಮಂ ॥ ೮೩ ॥
ತತ್ರ ಸರ್ವಂ ಶಿವಕ್ಷೇತ್ರಾಚ್ಛರಪಾತಂ ಸಮಂತತಃ ।
ನ ಸಂಚರೇದ್ಭಯೋದ್ವಿಗ್ನಾ ಬ್ರಹ್ಮಹತ್ಯಾ ನರಾಧಿಪ ॥ ೮೪ ॥
ಯತ್ರ ಯತ್ರ ಸ್ಥಿತೋ ವೃಕ್ಷಾನ್ಪಶ್ಯತೇ ತೀರ್ಥತತ್ಪರಃ ।
ವಿವಿಧೈಃ ಪಾತಕೈರ್ಮುಕ್ತೋ ಮುಚ್ಯತೇ ನಾಽತ್ರ ಸಂಶಯಃ ॥ ೮೫ ॥
ಶ್ವಭ್ರೇ ತತ್ರ ಮಹಾರಾಜ ಜಲಮಧ್ಯೇ ಪ್ರದೃಶ್ಯತೇ ।
ಕಥಾನಿಕಾ ಪುರಾಣೋಕ್ತಾ ವಾನರೀತೀರ್ಥ ಸೇವನಾತ್ ॥ ೮೬ ॥

---

೮೦. ಸ್ನಾನ, ದಾನ, ಶ್ರಾದ್ಧ, ಜಾಗರಣೆ, ಸಂಗೀತ, ವಾದ್ಯ ಇವುಗಳಿಂದ ಸೇವೆಗೈದು ಶಿವಲೋಕವನ್ನು ಸೇರಿದ ಮಾನವನು ಬಹು ಕಾಲದವರೆಗೆ ಹಿಂದಿರುಗುವುದಿಲ್ಲ.

೮೧. ಅನಂತರ ಬಹಳ ಕಾಲದಮೇಲೆ ಭೂಲೋಕವನ್ನು ಸೇರಿ ಸಕಲ ವ್ಯಾಧಿರಹಿತನೂ, ಬುದ್ಧಿವಂತನೂ ಆದ ರಾಜನಾಗುವನು.

೮೨. ಆ ತೀರ್ಥವನ್ನು ಸ್ಮರಿಸಿ ಮಹೇಶ್ವರನಲ್ಲಿ ಲೀನನಾಗುವವನು ಪುತ್ರ ಪೌತ್ರಧನಾದಿಗಳಿಂದ ಕೂಡಿ ನೂರು ವರ್ಷಕಾಲ ಬದುಕುವನು.

೮೩. ಪರ್ವಕಾಲದಲ್ಲಿ ಆ ತೀರ್ಥದಲ್ಲಿ ಸಂಧ್ಯಾವಂದನೆಯನ್ನು ಮಾಡಿದವನು ಅಂಗಗಳೊಡನೆ ನಾಲ್ಕು ವೇದಗಳನ್ನು ಪಾರಾಯಣಮಾಡಿದ ಫಲವನ್ನು ಪಡೆಯುವನು.

೮೪. ಆ ಶಿವಕ್ಷೇತ್ರದ ಸುತ್ತಲೂ ಒಂದು ಬಾಣವು ಬೀಳುವಷ್ಟು ದೂರ ಬ್ರಹ್ಮಹತ್ಯೆಯು ಭಯದಿಂದ ಸಂಚರಿಸುವುದಿಲ್ಲ.

೮೫. ಆ ತೀರ್ಥದಲ್ಲಿ ಆಸಕ್ತನಾಗಿ ಎಲ್ಲಿಂದಲಾದರೂ ಅಲ್ಲಿರುವ ಮರಗಳನ್ನು ನೋಡಿದವನು ನಿಶ್ಚಯವಾಗಿಯೂ ನಾನಾವಿಧ ಪಾತಕಗಳಿಂದ ಮುಕ್ತನಾಗುವನು.

೮೬. ಅಲ್ಲಿ ವಾನರಿಯು ಆ ತೀರ್ಥವನ್ನು ಸೇವನೆಮಾಡುವುದರಿಂದಾದ ಒಂದು ಕುಣಿಯು ಕಾಣಿಸುವುದು. ಈ ವಿಷಯವು ಪುರಾಣದಲ್ಲಿ ಉಕ್ತವಾಗಿದೆ.

ತತ್ರ ಕೂಪೋ ಮಹಾರಾಜ ತಿಷ್ಠತೇ ದೇವನಿರ್ಮಿತಃ ।
ಶಿವಸ್ಯ ಪಶ್ಚಿಮೇ ಭಾಗೇ ಶಿವಕ್ಷೇತ್ರಮನುತ್ತಮಂ ॥ ೮೭ ॥
ವೃಷೋತ್ಸರ್ಗಂ ತು ಯಃ ಕುರ್ಯಾತ್ತಸ್ಮಿಂಸ್ತೀರ್ಥೇ ನರಾಧಿಪ ।
ಕ್ರೀಡಂತಿ ಪಿತರಸ್ತಸ್ಯ ಸ್ವರ್ಗಲೋಕೇ ಯದೃಚ್ಛಯಾ ॥ ೮೮ ॥
ಅಗಮ್ಯಾಗಮನೇ ಪಾಪಮಯಾಜ್ಯಯಾಜನೇ ಕೃತೇ ।
ಸ್ತೇಯಾಚ್ಚ ಬ್ರಹ್ಮಗೋಹತ್ಯಾ ಗುರುಘಾತಾಚ್ಚ ಪಾತಕಂ ।
ತತ್ಸರ್ವಂ ನಶ್ಯತೇ ಪಾಪಂ ವೃಷೋತ್ಸರ್ಗೇ ಕೃತೇ ತು ವೈ ॥ ೮೯ ॥
ಮಾಂಡವ್ಯತೀರ್ಥಮಾಹಾತ್ಮ್ಯಂ ಯಃ ಶೃಣೋತಿ ಸಮಾಧಿನಾ ।
ಮುಚ್ಯತೇ ಸರ್ವಪಾಪೇಭ್ಯೋ ನಾತ್ರ ಕಾರ್ಯಾ ವಿಚಾರಣಾ ॥ ೯೦ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ
ಪಂಚಮೇ ಆವಂತ್ಯಖಂಡೇ ತೃತೀಯೇ ರೇವಾಖಂಡೇ
"ಮಾಂಡವ್ಯತೀರ್ಥಮಾಹಾತ್ಮ್ಯವರ್ಣನಂ" ನಾಮ
ದ್ವಿಸಪ್ತತ್ಯಧಿಕಶತತಮೋಽಧ್ಯಾಯಃ

---

೮೭. ಅಲ್ಲಿ ದೇವನಿರ್ಮಿತವಾದ ಒಂದು ಕೂಪವಿದೆ. ಶಿವನ ಪಶ್ಚಿಮ ಭಾಗದಲ್ಲಿ ಉತ್ತಮವಾದ ಕ್ಷೇತ್ರವಿರುವುದು.

೮೮. ಆ ತೀರ್ಥದಲ್ಲಿ ವೃಷೋತ್ಸರ್ಗವನ್ನು ಮಾಡಿದವನ ಪಿತೃಗಳು ಸ್ವರ್ಗಲೋಕದಲ್ಲಿ ಸ್ವೇಚ್ಛೆಯಾಗಿ ಕ್ರೀಡಿಸುವರು.

೮೯. ಅಲ್ಲಿ ವೃಷೋತ್ಸರ್ಗಮಾಡುವುದರಿಂದ ಅಗಮ್ಯಾಗಮನ, ಅಯಾಜ್ಯಯಾಜನ, ಸ್ತೇಯ, ಬ್ರಹ್ಮಗೋಗುರುಹತ್ಯೆ ಇವುಗಳಿಂದುಂಟಾದ ಪಾಪವು ಪರಿಹಾರವಾಗುವುದು.

೯೦. ಮಾಂಡವ್ಯತೀರ್ಥಮಾಹಾತ್ಮ್ಯವನ್ನು ಒಮ್ಮನಸ್ಸಿನಿಂದ ಕೇಳಿದವನು ಸಮಸ್ತ ಪಾಪಮುಕ್ತನಾಗುವನು. ಈ ವಿಷಯದಲ್ಲಿ ವಿಚಾರವಿಲ್ಲ.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ
ಶ್ರೀ ಸ್ಕಾಂದಮಹಾಪುರಾಣದ ಐದನೆಯ ಆವಂತ್ಯಖಂಡದ ಮೂರನೆಯ ರೇವಾಖಂಡದಲ್ಲಿ
"ಮಾಂಡವ್ಯತೀರ್ಥಮಾಹಾತ್ಮ್ಯವರ್ಣನ"ವೆಂಬ
ನೂರೆಪ್ಪತ್ತೆರಡನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

## ಅಥ ತ್ರಿಸಪ್ತತ್ಯುತ್ತರಶತತಮೋಽಧ್ಯಾಯಃ

### ಶುದ್ಧೇಶ್ವರತೀರ್ಥಮಾಹಾತ್ಮ್ಯವರ್ಣನಂ

ಶ್ರೀ ಮಾರ್ಕಂಡೇಯ ಉವಾಚ :—

ತತೋ ಗಚ್ಛೇತ್ತು ರಾಜೇಂದ್ರ ತೀರ್ಥಂ ಪರಮಶೋಭನಂ ।
ನರ್ಮದಾ ದಕ್ಷಿಣೇ ಕೂಲೇ ಸರ್ವಪಾಪ ಪ್ರಣಾಶನಂ ॥ ೧ ॥
ಶುದ್ಧೇಶ್ವರಮಿತಿಖ್ಯಾತಂ ಮಹಾಪಾತಕನಾಶನಂ ।
ಯತ್ರ ಶುದ್ಧಿಂ ಪರಾಂ ಪ್ರಾಪ್ತೋ ದೇವದೇವೋ ಮಹೇಶ್ವರಃ ।
ಪುರಾ ಹತ್ಯಾಯುತಃ ಪಾರ್ಥ ದೇವದೇವಸ್ತ್ರಿಶೂಲಧೃಕ್ ॥ ೨ ॥
ಪುರಾ ಪಂಚಶಿರಾ ಆಸೀದ್ಬ್ರಹ್ಮಾ ಲೋಕಪಿತಾಮಹಃ ।
ತೇನಾಽನೃತಂ ವಚಶ್ಚೋಕ್ತಂ ಕಸ್ಮಿಂಶ್ಚಿತ್ಕಾರಣಾಂತರೇ ॥ ೩ ॥
ತಚ್ಛ್ರುತ್ವಾ ಸಹಸಾ ತಸ್ಮೈ ಚುಕೋಪ ಪರಮೇಶ್ವರಃ ।
ಛೇದಯಾಮಾಸ ಭಗವಾನ್ಮೂರ್ಧಾನಂ ಕರಜೈಸ್ತದಾ ॥ ೪ ॥
ತಸ್ಯ ತತ್ಕರಸಂಲಗ್ನಂ ಚ್ಯವತೇ ನ ಕದಾಚನ ।
ತತೋ ಹಿ ದೇವದೇವೇಶಃ ಪರ್ಯಟನ್ಪೃಥಿವೀಮಿಮಾಂ ॥ ೫ ॥

### ಕನ್ನಡದ ಅನುವಾದ

#### ಶುದ್ಧೇಶ್ವರತೀರ್ಥಮಾಹಾತ್ಮ್ಯವರ್ಣನ

೧-೨. ಶ್ರೀ ಮಾರ್ಕಂಡೇಯನು ಹೇಳುತ್ತಾನೆ:—ಮಹಾರಾಜ! ಅನಂತರ ನರ್ಮದಾನದಿಯ ದಕ್ಷಿಣದಡದಲ್ಲಿರುವುದೂ, ಅತ್ಯಂತ ಮಂಗಳಕರವೂ, ಸಮಸ್ತಪಾಪನಾಶಕವೂ ಆದ ಶುದ್ಧೇಶ್ವರವೆಂಬ ತೀರ್ಥಕ್ಕೆ ಹೋಗಬೇಕು. ಇದರಲ್ಲಿ ಹಿಂದೆ ಬ್ರಹ್ಮಹತ್ಯೆಯಿಂದ ಕೂಡಿದ ತ್ರಿಶೂಲಧಾರಿಯಾದ ಶಂಕರನು ಶುದ್ಧನಾಗಿರುವನು.

೩. ಹಿಂದೆ ಚತುರ್ಮುಖಬ್ರಹ್ಮನು ಐದುತಲೆಗಳುಳ್ಳವನಾಗಿದ್ದನು. ಅವನು ಯಾವುದೊ ಒಂದು ವಿಷಯದಲ್ಲಿ ಆ ಶಿರಸ್ಸಿನಿಂದ ಸುಳ್ಳನ್ನಾಡಿದನು.

೪. ಪರಮೇಶ್ವರನು ಅದನ್ನು ಕೇಳಿ ಕೂಡಲೆ ಕುಪಿತನಾಗಿ ಉಗುರುಗಳಿಂದ ಆ ಬ್ರಹ್ಮನ ತಲೆಯನ್ನು ಕತ್ತರಿಸಿದನು.

೫-೬. ಆಗ ಅವನ ಕೈಯಲ್ಲಿ ಅಂಟಿಕೊಂಡ ಆ ಬ್ರಹ್ಮನ ತಲೆಯು ಬಿದ್ದು ಹೋಗಲಿಲ್ಲ. ಅನಂತರ ಶಿವನು ಈ ಭೂಮಿಯಲ್ಲಿ ಸಂಚರಿಸುತ್ತ ಕಾಶಿಗೆ

ತತೋ ವಾರಾಣಸೀಂ ಪ್ರಾಪ್ತಸ್ತಸ್ಯಾಂ ತದಪತಚ್ಛಿರಃ ।
ಪತಿತೇ ತು ಕಪಾಲೇ ಚ ಬ್ರಹ್ಮಹತ್ಯಾ ನ ಮುಂಚತಿ ॥ ೬ ॥
ತತಸ್ತು ಸಾಗರೇ ಗತ್ವಾ ಪೂರ್ವೇ ಚ ದಕ್ಷಿಣೇ ತಥಾ ।
ಪಶ್ಚಿಮೇ ಚೋತ್ತರೇ ಪಾರ್ಥ ದೇವದೇವೋ ಮಹೇಶ್ವರಃ ॥ ೭ ॥
ಪರ್ಯಟನ್ಸರ್ವತೀರ್ಥೇಷು ಬ್ರಹ್ಮಹತ್ಯಾ ನ ಮುಂಚತಿ ।
ನರ್ಮದಾದಕ್ಷಿಣೇ ಕೂಲೇ ಸುತೀರ್ಥಂ ಪ್ರಾಪ್ತವಾನ್ ಪ್ರಭುಃ ॥ ೮ ॥
ಕುಲಕೋಟಿಂ ಸಮಾಸಾದ್ಯ ಪ್ರಾರ್ಥಯಾಮಾಸ ಚಾತ್ಮವಾನ್ ।
ಪ್ರಾಯಶ್ಚಿತ್ತಂ ತತಃ ಕೃತ್ವಾ ಬಭೂವ ಗತಕಲ್ಮಷಃ ॥ ೯ ॥
ತತೋ ನಿಷ್ಕಲ್ಮಷೋ ಜಾತೋ ದೇವದೇವೋ ಮಹೇಶ್ವರಃ ।
ದತ್ವಾ ಸುರೇಭ್ಯಸ್ತತ್ಸ್ಥಾನಂ ತತಶ್ಚಾಂತರ್ದಧೇ ಪ್ರಭುಃ ॥ ೧೦ ॥
ತದಾ ಪ್ರಭೃತಿ ತತ್ತೀರ್ಥಂ ಶುದ್ಧರುದ್ರೇತಿ ಕೀರ್ತಿತಂ ।
ವಿಖ್ಯಾತಂ ತ್ರಿಷು ಲೋಕೇಷು ಬ್ರಹ್ಮಹತ್ಯಾಹರಂ ಪರಂ ॥ ೧೧ ॥
ಮಾಸೇ ಮಾಸೇ ಸಿತೇ ಪಕ್ಷೇಽಮಾವಾಸ್ಯಾಯಾಂ ಯುಧಿಷ್ಠಿರ ।
ಸ್ನಾತ್ವಾ ತತ್ರ ವಿಧಾನೇನ ತರ್ಪಯೇತ್ಪಿತೃದೇವತಾಃ ॥ ೧೨ ॥
ದದ್ಯಾತ್ಪಿಂಡಂ ಪಿತೄಣಾಂ ತು ಭಾವಿತೇನಾಂತರಾತ್ಮನಾ ।
ತಸ್ಯ ತೇ ದ್ವಾದಶಾಬ್ದಾನಿ ಸುತೃಪ್ತಾಃ ಪಿತರೋ ನೃಪ ॥ ೧೩ ॥

---

ಬರಲು ಅಲ್ಲಿ ಆ ತಲೆಯು ಬಿದ್ದಿತು. ಕಪಾಲವು ಬಿದ್ದರೂ ಬ್ರಹ್ಮಹತ್ಯೆಯು ಆತನನ್ನು ಬಿಡಲಿಲ್ಲ.

೭–೯. ಬಳಿಕ ಆ ಮಹೇಶ್ವರನು ಪೂರ್ವ ಪಶ್ಚಿಮ ದಕ್ಷಿಣೋತ್ತರ ಸಮುದ್ರಗಳಲ್ಲಿ ಸಂಚರಿಸಿದರೂ ಆ ಬ್ರಹ್ಮಹತ್ಯೆಯು ಬಿಡಲಿಲ್ಲ. ತರುವಾಯ ಅವನು ನರ್ಮದಾನದಿಯ ದಕ್ಷಿಣದಡದಲ್ಲಿರುವ ತೀರ್ಥಕ್ಕೆ ಬಂದು ತನ್ನನ್ನೇ ಪ್ರಾರ್ಥಿಸಿದನು. ಮತ್ತು ಪ್ರಾಯಶ್ಚಿತ್ತವನ್ನು ಮಾಡಿ ಪಾಪರಹಿತನಾದನು.

೧೦. ಬಳಿಕ ಪಾಪರಹಿತನಾದ ಶಂಕರನು ದೇವತೆಗಳಿಗೆ ಆ ಸ್ಥಳವನ್ನಿತ್ತು ಅಡಗಿಹೋದನು.

೧೧. ಅದು ಮೊದಲ್ಗೊಂಡು ಬ್ರಹ್ಮಹತ್ಯೆಯನ್ನು ಪರಿಹರಿಸುವ ಆ ತೀರ್ಥವು ಶುದ್ಧರುದ್ರವೆಂದು ಮೂರು ಲೋಕಗಳಲ್ಲಿಯೂ ವಿಖ್ಯಾತವಾಯಿತು.

೧೨–೧೩. ಯುಧಿಷ್ಠಿರ! ಮಾನವನು ಪ್ರತಿತಿಂಗಳ ಅಮಾವಾಸ್ಯೆಯ ದಿನ ಅಲ್ಲಿ ಮಿಂದು ವಿಧಿಯಂತೆ ಪಿತೃದೇವತೆಗಳಿಗೆ ತರ್ಪಣಮಾಡಿ ಚಿತ್ತೈಕಾಗ್ರ್ಯದಿಂದ ಪಿಂಡಪ್ರದಾನಮಾಡಬೇಕು. ಅದರಿಂದ ಅವನ ಪಿತೃಗಳು ಹನ್ನೆರಡು ವರ್ಷ ಕಾಲ ತೃಪ್ತರಾಗುವರು.

ಗಂಧಧೂಪಪ್ರದೀಪಾದ್ಯೈರಭ್ಯರ್ಚ್ಯ ಪರಮೇಶ್ವರಂ ।
ಶುದ್ಧೇಶ್ವರಾಽಭಿಧಾನಂತು ಶಿವಲೋಕೇ ಮಹೀಯತೇ ॥ ೧೪ ॥
ಏತತ್ತೇ ಕಥಿತಂ ರಾಜಂಛುದ್ಧರುದ್ರಮನುತ್ತಮಂ ।
ಮಯಾ ಶ್ರುತಂ ಯಥಾ ದೇವಸಕಾಶಾಚ್ಛೂಲಪಾಣಿನಃ ।
ಮುಚ್ಯತೇ ಸರ್ವಪಾಪೇಭ್ಯೋ ರುದ್ರಲೋಕಂ ಸಗಚ್ಛತಿ ॥ ೧೫ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ
ಪಂಚಮೇ ಆವಂತ್ಯಖಂಡೇ ತೃತೀಯೇ ರೇವಾಖಂಡೇ
"ಶುದ್ಧೇಶ್ವರತೀರ್ಥಮಾಹಾತ್ಮ್ಯವರ್ಣನಂ"ನಾಮ
ತ್ರಿಸಪ್ತತ್ಯುತ್ತರಶತತಮೋಽಧ್ಯಾಯಃ

---

೧೪. ಈ ಶುದ್ಧೇಶ್ವರನನ್ನು ಗಂಧಧೂಪ, ದೀಪಾದಿಗಳಿಂದ ಪೂಜಿಸಿದವನು ಶಿವಲೋಕದಲ್ಲಿ ಪೂಜ್ಯನಾಗುವನು.

೧೫. ದೊರೆಯೆ! ನಾನು ಶಂಕರನಿಂದ ಕೇಳಿದ ಶುದ್ಧರುದ್ರತೀರ್ಥದ ಮಾಹಾತ್ಮ್ಯವನ್ನು ನಿನಗೆ ಹೇಳಿರುತ್ತೇನೆ. ಇದನ್ನು ಕೇಳಿದವನು ಸಕಲ ಪಾಪಮುಕ್ತನಾಗಿ ರುದ್ರಲೋಕಕ್ಕೆ ತೆರಳುವನು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ
ಶ್ರೀ ಸ್ಕಾಂದಮಹಾಪುರಾಣದ ಐದನೆಯ ಆವಂತ್ಯಖಂಡದ ಮೂರನೆಯ ರೇವಾಖಂಡದಲ್ಲಿ
"ಶುದ್ಧೇಶ್ವರತೀರ್ಥಮಾಹಾತ್ಮ್ಯವರ್ಣನ"ವೆಂಬ
ನೂರೆಪ್ಪತ್ತನಾಲ್ಕನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

## ಅಥ ಚತುಃಸಪ್ತತ್ಯುತ್ತರಶತತಮೋಽಧ್ಯಾಯಃ

### ಗೋಪೇಶ್ವರತೀರ್ಥಮಾಹಾತ್ಮ್ಯವರ್ಣನಂ

ಶ್ರೀ ಮಾರ್ಕಂಡೇಯ ಉವಾಚ:—

ಗೋಪೇಶ್ವರಂ ತತೋ ಗಚ್ಛೇದುತ್ತರೇ ನರ್ಮದಾತಟೇ ।
ಯತ್ರ ಸ್ನಾನೇನ ಚೈಕೇನ ಮುಚ್ಯಂತೇ ಪಾತಕೈರ್ನರಾಃ ॥ ೧ ॥
ತತ್ರ ತೀರ್ಥೇ ತು ಯಃ ಸ್ನಾತ್ವಾ ಕುರುತೇ ಪ್ರಾಣಸಂಕ್ಷಯಂ ।
ಬರ್ಹಿಯುಕ್ತೇನ ಯಾನೇನ ಸ ಗಚ್ಛೇಚ್ಛಿವಮಂದಿರಂ ॥ ೨ ॥
ಕ್ರೀಡಿತ್ವಾ ಸುಚಿರಂ ಕಾಲಂ ಶಿವಲೋಕೇ ನರಾಧಿಪ ।
ಇಹ ಮಾನುಷ್ಯತಾಂ ಪ್ರಾಪ್ಯ ರಾಜಾ ಭವತಿ ವೀರ್ಯವಾನ್ ॥ ೩ ॥
ಹಸ್ತ್ಯಶ್ವರಥಸಂಪನ್ನೋ ದಾಸೀದಾಸಸಮನ್ವಿತಃ ।
ಪೂಜ್ಯಮಾನೋ ನರೇಂದ್ರೈಶ್ಚ ಜೀವೇದ್ವರ್ಷಶತಂ ನರಃ ॥ ೪ ॥
ಸಂಪ್ರಾಪ್ತೇ ಕಾರ್ತಿಕೇ ಮಾಸಿ ನವಮ್ಯಾಂ ಶುಕ್ಲಪಕ್ಷತಃ ।
ಸೋಪವಾಸಃ ಶುಚಿರ್ಭೂತ್ವಾ ದೀಪಕಾಂಸ್ತತ್ರ ದಾಪಯೇತ್ ॥ ೫ ॥
ಗಂಧಪುಷ್ಪೈಃ ಸಮಭ್ಯರ್ಚ್ಯ ರಾತ್ರೌ ಕುರ್ವೀತ ಜಾಗರಂ ।
ತಸ್ಯ ಯತ್ಫಲಮುದ್ದಿಷ್ಟಂ ತಚ್ಛೃಣುಷ್ವ ನರಾಧಿಪ ॥ ೬ ॥

---

### ಕನ್ನಡದ ಅನುವಾದ

#### ಗೋಪೇಶ್ವರತೀರ್ಥಮಾಹಾತ್ಮ್ಯವರ್ಣನ

೧. ಶ್ರೀ ಮಾರ್ಕಂಡೇಯನು ಹೇಳುತ್ತಾನೆ:—ಅನಂತರ ನರ್ಮದಾ ನದಿಯ ಉತ್ತರ ತಟದಲ್ಲಿರುವ ಗೋಪೇಶ್ವರತೀರ್ಥಕ್ಕೆ ಹೋಗಬೇಕು. ಅಲ್ಲಿ ಒಂದು ಸಾರಿ ಸ್ನಾನಮಾಡುವುದರಿಂದ ಮಾನವರು ಪಾಪಮುಕ್ತರಾಗುವರು.

೨. ಆ ತೀರ್ಥದಲ್ಲಿ ಮಿಂದು ಮಡಿಯುವವನು ಮಯೂರವಾಹನವನ್ನೇರಿ ಶಿವಮಂದಿರಕ್ಕೆ ತೆರಳುವನು.

೩. ಅಲ್ಲಿ ಬಹುಕಾಲ ಕ್ರೀಡಿಸಿ ಈ ಲೋಕದಲ್ಲಿ ಮನುಷ್ಯನಾಗಿ ಹುಟ್ಟಿ ವೀರ್ಯವಂತನಾದ ರಾಜನಾಗುವನು.

೪. ಅವನು ಆನೆ, ಕುದುರೆ, ರಥಗಳಿಂದಲೂ, ದಾಸೀದಾಸ ಜನರಿಂದಲೂ ಕೂಡಿ ರಾಜಪೂಜ್ಯನಾಗಿ ನೂರುವರ್ಷಗಳ ಕಾಲ ಜೀವಿಸುವನು.

೫–೬. ಕಾರ್ತಿಕ ಶುಕ್ಲಪಕ್ಷದ ನವಮಿಯದಿನ ಅಲ್ಲಿ ಉಪವಾಸ ಮಾಡಿ ಶುದ್ಧನಾಗಿ ದೀಪಗಳನ್ನು ಹೊತ್ತಿಸಿ ಗಂಧಪುಷ್ಪಗಳಿಂದ ಅರ್ಚಿಸಿ ರಾತ್ರಿ ಜಾಗರಣೆ ಮಾಡಿದರೆ ಉಂಟಾಗುವ ಫಲವನ್ನು ಕೇಳು.

ಯಾವತ್ಪುಣ್ಯಫಲಂ ಸಂಖ್ಯಾ ದೀಪಕಾನಾಂ ತಥೈವ ಚ ।
ತಾವದ್ಯುಗಸಹಸ್ರಾಣಿ ಶಿವಲೋಕೇ ಮಹೀಯತೇ ॥ ೭ ॥
ತಸ್ಮಿಂಸ್ತೀರ್ಥೇ ತು ರಾಜೇಂದ್ರ ಲಿಂಗಪೂರಣಕಂ ವಿಧಿಂ ।
ತಥೈವ ಪದ್ಮಕೈಶ್ಚೈವ ದಧಿಭಕ್ತೈಸ್ತಥೈವ ಚ ॥ ೮ ॥
ಯಸ್ತು ಕುರ್ಯಾನ್ನರಶ್ರೇಷ್ಠ ತಸ್ಯ ಪುಣ್ಯಫಲಂ ಶೃಣು ।
ಯಾವಂತಿ ತಿಲಸಂಖ್ಯಾನಿ ದಧಿಭಕ್ತಂ ತಥೈವ ಚ ॥ ೯ ॥
ಪದ್ಮಸಂಖ್ಯಾ ಶಿವೇ ಲೋಕೇ ಮೋದತೇ ಕಾಲಮಾಪ್ಸಿತಂ ।
ತಸ್ಮಿಂಸ್ತೀರ್ಥೇ ತು ರಾಜೇಂದ್ರ ಯತ್ಕಿಂಚಿದ್ದೀಯತೇ ನೃಪ ॥ ೧೦ ॥
ಸರ್ವಂ ಕೋಟಿಗುಣಂ ತಸ್ಯ ಸಂಖ್ಯಾತುಂ ನಾ ನ ಶಕ್ಯತೇ ।
ಏತತ್ತೇ ಕಥಿತಂ ಸರ್ವಂ ಸರ್ವತೀರ್ಥಮನುತ್ತಮಂ ॥ ೧೧ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ
ಪಂಚಮೇ ಅವಂತ್ಯಖಂಡೇ ತೃತೀಯೇ ರೇವಾಖಂಡೇ
"ಗೋಪೇಶ್ವರತೀರ್ಥಮಾಹಾತ್ಮ್ಯವರ್ಣನಂ" ನಾಮ
ಚತುಃಸಪ್ತತ್ಯುತ್ತರಶತತಮೋಽಧ್ಯಾಯಃ

೭. ಅವನು ಹೊತ್ತಿಸಿದ ದೀಪಗಳ ಸಂಖ್ಯೆಯಷ್ಟು ಸಹಸ್ರ ಯುಗಗಳ ಕಾಲ ಶಿವಲೋಕದಲ್ಲಿ ಪೂಜ್ಯನಾಗುವನು.

೮–೧೧. ಮಾನವನು ಆ ತೀರ್ಥದಲ್ಲಿ ಪದ್ಮ, ಮೊಸರನ್ನಗಳಿಂದ ಲಿಂಗ ಪೂರಣವನ್ನು ಮಾಡಿದರೆ ಆ ತಿಲವನ್ನ ಪದ್ಮಗಳ ಸಂಖ್ಯೆಯಷ್ಟು ಕಾಲ ಶಿವಲೋಕದಲ್ಲಿ ಆನಂದಪಡುವನು. ಆ ತೀರ್ಥದಲ್ಲಿ ಏನನ್ನಾದರೂ ದಾನ ಮಾಡಿದರೆ ಅದು ಕೋಟಿಯಷ್ಟು ಹೆಚ್ಚಾಗುವುದು. ಅದರ ಸಂಖ್ಯೆಯನ್ನು ಹೇಳಲು ಸಾಧ್ಯವಿಲ್ಲ. ಹೀಗೆ ಆ ತೀರ್ಥದ ವಿಷಯವನ್ನೆಲ್ಲ ಹೇಳಿರುತ್ತೇನೆ.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ
ಶ್ರೀ ಸ್ಕಾಂದಮಹಾಪುರಾಣದ ಐದನೆಯ ಅವಂತ್ಯಖಂಡದ ಮೂರನೆಯ ರೇವಾಖಂಡದಲ್ಲಿ
"ಗೋಪೇಶ್ವರತೀರ್ಥಮಾಹಾತ್ಮ್ಯವರ್ಣನ" ವೆಂಬ
ನೂರೆಪ್ಪತ್ತನಾಲ್ಕನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

# ಅಥ ಪಂಚಸಪ್ತಾಽಧಿಕಶತತಮೋಽಧ್ಯಾಯಃ

## ಕಪಿಲೇಶ್ವರತೀರ್ಥಮಾಹಾತ್ಮ್ಯವರ್ಣನಂ

ಶ್ರೀ ಮಾರ್ಕಂಡೇಯ ಉವಾಚ :—

ಉತ್ತರೇ ನರ್ಮದಾಕೂಲೇ ಭೃಗುಕ್ಷೇತ್ರಸ್ಯ ಮಧ್ಯತಃ ।
ಕಪಿಲೇಶ್ವರಂ ತು ವಿಖ್ಯಾತಂ ವಿಶೇಷಾತ್ಪಾಪನಾಶನಂ ॥ ೧ ॥
ಯೋಽಸೌ ಸನಾತನೋ ದೇವಃ ಪುರಾಣೇ ಪರಿಪಠ್ಯತೇ ।
ವಾಸುದೇವೋ ಜಗನ್ನಾಥಃ ಕಪಿಲತ್ವಮುಪಾಗತಃ ॥ ೨ ॥
ಪಾತಾಲಂ ಸುತಲಂ ನಾಮ ತಸ್ಯೈವ ನಿತಲಂ ಹ್ಯಧಃ ।
ಗಭಸ್ತಿಗಂ ಚ ತಸ್ಯಾಽಧೋ ಹ್ಯಂಧತಾಮಿಸ್ರಮೇವ ಚ ॥ ೩ ॥
ಪಾತಾಲಂ ಸಪ್ತಮಂ ಯಚ್ಚ ಹ್ಯಧಸ್ತಾತ್ಸಂಸ್ಥಿತಂ ಮಹತ್ ।
ವಸತೇ ತತ್ರ ವೈ ದೇವಃ ಪುರಾಣಃ ಪರಮೇಶ್ವರಃ ॥ ೪ ॥
ಸ ಬ್ರಹ್ಮಾ ಸ ಮಹಾದೇವಃ ಸ ದೇವೋ ಗರುಡಧ್ವಜಃ ।
ಪೂಜ್ಯಮಾನಃ ಸುರೈಃ ಸಿದ್ಧೈಸ್ತಿಷ್ಠತೇ ಬ್ರಹ್ಮವಾದಿಭಿಃ ॥ ೫ ॥
ವಸತಸ್ತಸ್ಯ ರಾಜೇಂದ್ರ ಕಪಿಲಸ್ಯ ಜಗದ್ಗುರೋಃ ।
ವಿನಾಶಂ ಚಾಗ್ರತಃ ಪ್ರಾಪ್ತಾಃ ಕ್ಷಣೇನ ಸಗರಾತ್ಮಜಾಃ ॥ ೬ ॥

---

## ಕನ್ನಡದ ಅನುವಾದ

### ಕಪಿಲೇಶ್ವರತೀರ್ಥಮಾಹಾತ್ಮ್ಯವರ್ಣನ

೧. ಶ್ರೀ ಮಾರ್ಕಂಡೇಯನು ಹೇಳುತ್ತಾನೆ:—ನರ್ಮದಾನದಿಯ ಉತ್ತರ ದಡದಲ್ಲಿ ಭೃಗುಕ್ಷೇತ್ರದ ಮಧ್ಯದಲ್ಲಿ ಪಾಪನಾಶಕವಾದ ಕಪಿಲೇಶ್ವರ ಕ್ಷೇತ್ರ ವಿರುವುದು.

೨. ಪುರಾಣಪ್ರತಿಪಾದ್ಯನಾದ ಶ್ರೀಮನ್ನಾರಾಯಣನು ಇಲ್ಲಿ ಕಪಿಲ ರೂಪಿಯಾದನು.

೩–೪. ಪಾತಾಳ, ಸುತಲ, ನಿತಲ, ಗಭಸ್ತಿಗ, ಅಂಧತಾಮಿಸ್ರವೇ ಮೊದಲಾದ ಸಪ್ತಲೋಕಗಳಲ್ಲಿ ಒಂದಾದ ಪಾತಾಳದಲ್ಲಿ ಪುರಾಣ ಪುರುಷನಾದ ವಿಷ್ಣುವು ವಾಸಮಾಡುತ್ತಿರುವನು.

೫. ಬ್ರಹ್ಮ, ವಿಷ್ಣು, ಮಹೇಶ್ವರರೂಪಿಯಾದ ಆ ವಿಷ್ಣುವು ಸುರ, ಸಿದ್ಧ, ಬ್ರಹ್ಮಜ್ಞಾನಿಗಳಿಂದ ಆರಾಧಿಸಲ್ಪಡುತ್ತ ಅಲ್ಲಿ ನೆಲೆಸಿರುವನು.

೬. ಜಗದ್ಗುರುವಾದ ಕಪಿಲನು ಅಲ್ಲಿ ವಾಸಮಾಡುತ್ತಿರಲು ಅವನ ಮುಂದೆ ಸಗರತನಯರು ಕ್ಷಣಕಾಲದಲ್ಲಿ ನಾಶವಾದರು.

ಭಸ್ಮೀಭೂತಾಂಸ್ತು ತಾನ್ದೃಷ್ಟ್ವಾ ಕಪಿಲೋ ಮುನಿಸತ್ತಮಃ ।
ಜಗಾಮ ಪರಮಂ ಶೋಕಂ ಚಿಂತ್ಯಮಾನೋಽಥ ಕಿಲ್ಬಿಷಂ ॥ ೭ ॥
ಸರ್ವಸಂಗಪರಿತ್ಯಾಗೇ ಚಿತ್ತೇ ನಿರ್ವಿಷಯೀಕೃತೇ ।
ಅಯುಕ್ತಂ ಷಷ್ಟಿಸಹಸ್ರಾಣಾಂ ಕರ್ತುಂ ಮಮ ವಿನಾಶನಂ ॥ ೮ ॥
ಕೃತಸ್ಯ ಕರಣಂ ನಾಽಸ್ತಿ ತಸ್ಮಾತ್ಪಾಪವಿನಾಶನಂ ।
ಗತ್ವಾ ತು ಕಾಪಿಲಂ ತೀರ್ಥಂ ನೋಚಯಾಮ್ಯಘಮಾತ್ಮನಃ ॥ ೯ ॥
ಪಾತಾಲಂ ತು ತತೋ ಮುಕ್ತ್ವಾ ಕಪಿಲೋ ಮುನಿಸತ್ತಮಃ ।
ತಪಶ್ಚಚಾರ ಸುಮಹನ್ನರ್ಮದಾತಟಮಾಸ್ಥಿತಃ ॥ ೧೦ ॥
ವ್ರತೋಪವಾಸೈರ್ವಿವಿಧೈಃ ಸ್ನಾನದಾನಜಪಾದಿಕೈಃ ।
ಪರಂ ನಿರ್ವಾಣಮಾಪನ್ನಃ ಪೂಜಯನ್ರುದ್ರಮವ್ಯಯಂ ॥ ೧೧ ॥
ತತ್ರ ತೀರ್ಥೇ ತು ಯಃ ಸ್ನಾತ್ವಾ ಪೂಜಯೇತ್ಪರಮೇಶ್ವರಂ ।
ಗೋಸಹಸ್ರಫಲಂ ತಸ್ಯ ಲಭತೇ ನಾಽತ್ರ ಸಂಶಯಃ ॥ ೧೨ ॥
ಜ್ಯೇಷ್ಠಮಾಸೇ ತು ಸಂಪ್ರಾಪ್ತೇ ಶುಕ್ಲಪಕ್ಷೇ ಚತುರ್ದಶೀ ।
ತತ್ರ ಸ್ನಾತ್ವಾ ವಿಧಾನೇನ ಭಕ್ತ್ಯಾ ದಾನಂ ಪ್ರಯಚ್ಛತಿ ॥ ೧೩ ॥

---

೭. ಆ ಸಗರಪುತ್ರರು ಬೂದಿಯಾಗಿರುವುದನ್ನು ಕಂಡು ಕಪಿಲಮುನಿಯು ತನಗೆ ಪಾಪವು ಸಂಭವಿಸಿತೆಂದು ಅತ್ಯಂತ ದುಃಖಗೊಂಡನು.

೮. "ನಾನು ಸಕಲ ಸಂಗವನ್ನೂ ಪರಿತ್ಯಜಿಸಿ ವಿಷಯ ವಿಮುಖನಾಗಿರಲು ನನ್ನಿಂದ ಸಗರನ ಅರುವತ್ತುಸಾವಿರ ಪುತ್ರರು ನಾಶವಾದುದು ಉಚಿತವಲ್ಲ.

೯. ಮಾಡಿದ್ದನ್ನು ಮರಳಿ ಮಾಡಲಾಗದು. ಆದ್ದರಿಂದ ನಾನು ಪಾಪ ನಿವಾರಕವಾದ ಕಪಿಲತೀರ್ಥಕ್ಕೆ ಹೋಗಿ ಈ ಪಾಪವನ್ನು ಹೋಗಲಾಡಿಸಿ ಕೊಳ್ಳುವೆನು."

೧೦. ಹೀಗೆ ಆಲೋಚಿಸಿ ಅವನು ಪಾತಾಳವನ್ನು ತ್ಯಜಿಸಿ ನರ್ಮದಾ ತಟಕ್ಕೆ ಹೋಗಿ ಘೋರತಪಸ್ಸನ್ನಾಚರಿಸಿದನು.

೧೧. ನಾನಾವಿಧ ವ್ರತೋಪವಾಸಗಳಿಂದಲೂ, ಸ್ನಾನ, ದಾನ, ಜಪಾದಿ ಗಳಿಂದಲೂ ಶಾಶ್ವತನಾದ ರುದ್ರನನ್ನು ಪೂಜಿಸುತ್ತ ಅತ್ಯಂತ ವೈರಾಗ್ಯ ವನ್ನು ಹೊಂದಿದನು.

೧೨. ಆ ತೀರ್ಥದಲ್ಲಿ ಮಿಂದು ಪರಮೇಶ್ವರನನ್ನು ಪೂಜಿಸಿದವನು ಸಾವಿರ ಗೋವುಗಳನ್ನು ದಾನಮಾಡಿದ ಫಲವನ್ನು ಪಡೆಯುವನು.

೧೩-೧೪. ಜ್ಯೇಷ್ಠಮಾಸದ ಶುಕ್ಲಪಕ್ಷದ ಚತುರ್ದಶೀದಿನ ಅಲ್ಲಿ ವಿಧಿ ಯಿಂದ ಮಿಂದು ಸತ್ಪಾತ್ರನಾದ ಬ್ರಾಹ್ಮಣನಿಗೆ ಭಕ್ತಿಯಿಂದ ಸ್ವಲ್ಪವೋ ಅಥವಾ

ಪಾತ್ರಭೂತಾಯ ವಿಪ್ರಾಯ ಸ್ವಲ್ಪಂ ವಾ ಯದಿ ವಾ ಬಹು ।
ಅಕ್ಷಯಂ ತತ್ಫಲಂ ಪ್ರೋಕ್ತಂ ಶಿವೇನ ಪರಮೇಷ್ಠಿನಾ ॥ ೧೪ ॥
ಅಂಗಾರಕದಿನೇ ಪ್ರಾಪ್ತೇ ಚತುರ್ಥ್ಯಾಂ ನವಮೀಷು ಚ ।
ಸ್ನಾನಂ ಕರೋತಿ ಪುರುಷೋ ಭಕ್ತ್ಯೋಪೋಷ್ಯ ವರಾಂಗನಾ ॥ ೧೫ ॥
ರೂಪವೈಶ್ವರ್ಯಮತುಲಂ ಸೌಭಾಗ್ಯಂ ಸಂತತಿಂ ಪರಾಂ ।
ಲಭತೇ ಸಪ್ತಜನ್ಮಾನಿ ಸತ್ಯಂ ಸತ್ಯಂ ಪುನಃ ಪುನಃ ॥ ೧೬ ॥
ಪೌರ್ಣಮಾಸ್ಯಾಮಮಾವಾಸ್ಯಾಂ ಸ್ನಾತ್ವಾ ಪಿಂಡಂ ಪ್ರಯಚ್ಛತಿ ।
ತಸ್ಯ ತೇ ದ್ವಾದಶಾಬ್ದಾನಿ ತೃಪ್ತಾ ಯಾಂತಿ ಸುರಾಲಯಂ ॥ ೧೭ ॥
ತತ್ರ ತೀರ್ಥೇ ತು ಯೋ ಭಕ್ತ್ಯಾ ದದ್ಯಾದ್ದೀಪಂ ಸುಶೋಭನಂ ।
ಜಾಯತೇ ತಸ್ಯ ರಾಜೇಂದ್ರ ಮಹಾದೀಪ್ತಿಃ ಶರೀರಜಾ ॥ ೧೮ ॥
ತತ್ರ ತೀರ್ಥೇ ಮೃತಾನಾಂ ತು ಜಂತೂನಾಂ ಸರ್ವದಾ ಕಿಲ ।
ಅನಿವರ್ತಿಕಾ ಭವೇತ್ತೇಷಾಂ ಗತಿಸ್ತು ಶಿವಮಂದಿರಾತ್ ॥ ೧೯ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ
ಪಂಚಮೇ ಆವಂತ್ಯಖಂಡೇ ತೃತೀಯೇ ರೇವಾಖಂಡೇ
"ಕಪಿಲೇಶ್ವರತೀರ್ಥಮಾಹಾತ್ಮ್ಯವರ್ಣನಂ" ನಾಮ
ಪಂಚಸಪ್ತಾಧಿಕಶತತಮೋಽಧ್ಯಾಯಃ

---

ಬಹುವಾಗಿಯೋ ದಾನಮಾಡಿದವನಿಗೆ ಅಕ್ಷಯಫಲವು ದೊರೆಯುವುದೆಂದು ಶಂಕರನು ಹೇಳಿದ್ದಾನೆ.

೧೫–೧೬. ಚತುರ್ಥೀ ನವಮೀದಿನಗಳಲ್ಲಿ ಮಂಗಳವಾರವು ಬರಲು ಸ್ನಾನ ಮಾಡಿ ಭಕ್ತಿಯಿಂದ ಉಪವಾಸಮಾಡಿದ ಹೆಂಗಸಾಗಲಿ, ಗಂಡಸಾಗಲಿ ಏಳು ಜನ್ಮಗಳಲ್ಲಿ ರೂಪ, ಐಶ್ವರ್ಯ, ಸೌಭಾಗ್ಯ, ಉತ್ತಮ ಸಂತತಿಗಳನ್ನು ಪಡೆಯುವರು.

೧೭. ಹುಣ್ಣಿಮೆ ಅಮಾವಾಸ್ಯೆ ದಿನಗಳಲ್ಲಿ ಅಲ್ಲಿ ಮಿಂದು ಪಿಂಡಪ್ರದಾನ ಮಾಡಿದವನ ಪಿತೃಗಳು ಹನ್ನೆರಡುವರ್ಷಕಾಲ ತೃಪ್ತಿಗೊಂಡು ದೇವಲೋಕಕ್ಕೆ ತೆರಳುವರು.

೧೮. ಆ ತೀರ್ಥದಲ್ಲಿ ಭಕ್ತಿಯಿಂದ ಮಂಗಳಕರವಾದ ದೀಪವನ್ನು ಹೊತ್ತಿಸಿದವನ ಶರೀರದಲ್ಲಿ ಅತ್ಯಂತ ಕಾಂತಿಯುಂಟಾಗುವುದು.

೧೯. ಆ ತೀರ್ಥದಲ್ಲಿ ಮೃತರಾದ ಜಂತುಗಳಿಗೆ ಯಾವಾಗಲೂ ಶಿವಮಂದಿರವಲ್ಲಿ ಪುನರಾಗಮನವಿಲ್ಲದ ಗತಿಯುಂಟಾಗುವುದು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ
ಶ್ರೀ ಸ್ಕಾಂದಮಹಾಪುರಾಣದ ಐದನೆಯ ಆವಂತ್ಯಖಂಡದ ಮೂರನೆಯ ರೇವಾಖಂಡದಲ್ಲಿ
"ಕಪಿಲೇಶ್ವರತೀರ್ಥಮಾಹಾತ್ಮ್ಯವರ್ಣನ" ವೆಂಬ
ನೂರೆಪ್ಪತ್ತೈದನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

## ಅಥ ಷಟ್ಸಪ್ತತ್ಯುತ್ತರಶತತಮೋಽಧ್ಯಾಯಃ

### ಪಿಂಗಲೇಶ್ವರತೀರ್ಥಮಾಹಾತ್ಮ್ಯವರ್ಣನಂ

ಶ್ರೀ ಮಾರ್ಕಂಡೇಯ ಉವಾಚ:—

ತತೋ ಗಚ್ಛೇನ್ಮಹೀಪಾಲ ಪಿಂಗಲಾವರ್ತಮುತ್ತಮಂ ।
ತೀರ್ಥಂ ಸರ್ವಗುಣೋಪೇತಂ ಕಾಮಿಕಂ ಭುವಿ ದುರ್ಲಭಂ ॥ ೧ ॥
ವಾಚಿಕಂ ಮಾನಸಂ ಪಾಪಂ ಕರ್ಮಜಂ ಯತ್ಪುರಾ ಕೃತಂ ।
ಪಿಂಗಲೇಶ್ವರಮಾಸಾದ್ಯ ತತ್ಸರ್ವಂ ವಿಲಯಂ ವ್ರಜೇತ್ ॥ ೨ ॥
ತತ್ರ ಸ್ನಾನಂ ಚ ದಾನಂ ಚ ದೇವಖಾತೇ ಕೃತಂ ನೃಪ ।
ಅಕ್ಷಯಂ ತದ್ಭವೇತ್ಸರ್ವಮಿತ್ಯೇವಂ ಶಂಕರೋಽಬ್ರವೀತ್ ॥ ೩ ॥
ಪೃಥಿವ್ಯಾಂ ಸರ್ವತೀರ್ಥೇಷು ಸಮುದ್ಧೃತ್ಯ ಶುಭೋದಕಂ ।
ಮುಕ್ತಂ ತತ್ರ ಸುರೈಃ ಖಾತ್ವಾ ದೇವಖಾತಂ ತತೋಽಭವತ್ ॥ ೪ ॥

ಯುಧಿಷ್ಠಿರ ಉವಾಚ:—

ಕಥಂ ತು ದೇವಖಾತಂ ತತ್ಸಂಜಾತಂ ದ್ವಿಜಸತ್ತಮ ।
ಸುರಾಃ ಸರ್ವೇ ಕಥಂ ತತ್ರ ಮುಮುಚುರ್ವಾರಿ ತೀರ್ಥಜಂ ।
ಸರ್ವಂ ಕಥಯ ಮೇ ವಿಪ್ರ ಶ್ರವಣೇ ಲಂಪಟಂ ಮನಃ ॥ ೫ ॥

---

## ಕನ್ನಡದ ಅನುವಾದ

### ಪಿಂಗಲೇಶ್ವರತೀರ್ಥಮಾಹಾತ್ಮ್ಯವರ್ಣನ

೧. ಶ್ರೀ ಮಾರ್ಕಂಡೇಯನು ಹೇಳುತ್ತಾನೆ:—ಬಳಿಕ ಸಕಲ ಗುಣಗಳಿಂದ ಕೂಡಿ ಇಷ್ಟಾರ್ಥವನ್ನೀಯುವುದಾದ ಪಿಂಗಲೇಶ್ವರತೀರ್ಥಕ್ಕೆ ಹೋಗಬೇಕು.

೨. ಆ ತೀರ್ಥದಲ್ಲಿ ಸ್ನಾನಮಾಡುವುದರಿಂದ ಹಿಂದೆ ಮಾಡಿದ ವಾಚಿಕ, ಮಾನಸಿಕ, ಕರ್ಮಜರೂಪವಾದ ಪಾಪಗಳೆಲ್ಲವೂ ನೀಗುವುದು.

೩. ಆ ದೇವತೀರ್ಥದಲ್ಲಿ ಮಾಡಿದ ಸ್ನಾನದಾನಾದಿಗಳು ಅಕ್ಷಯವಾಗುವುವೆಂದು ಶಂಕರನೇ ಹೇಳಿರುತ್ತಾನೆ.

೪. ದೇವತೆಗಳು ಭೂಮಿಯಲ್ಲಿ ಸಕಲತೀರ್ಥಗಳ ಜಲವನ್ನೂ ತೆಗೆದುಕೊಂಡುಬಂದು ಅಲ್ಲಿ ಹಾಕಿದರು. ಅದರಿಂದ ಅದು ದೇವಖಾತವೆಂದು ಹೆಸರಾಯಿತು.

೫. ಯುಧಿಷ್ಠಿರನು ಹೇಳುತ್ತಾನೆ:—ದ್ವಿಜವರ್ಯನೆ! ಆ ದೇವಖಾತವು ಹೇಗಾಯಿತು? ದೇವತೆಗಳೆಲ್ಲ ಅಲ್ಲಿ ಹೇಗೆ ನೀರನ್ನು ಹಾಕಿದರು? ದ್ವಿಜನೆ! ಇದನ್ನೆಲ್ಲ ನನಗೆ ಹೇಳು. ನನ್ನ ಮನಸ್ಸು ಕೇಳುವುದರಲ್ಲಿ ಆಸಕ್ತವಾಗಿದೆ.

ಶ್ರೀ ಮಾರ್ಕಂಡೇಯ ಉವಾಚ:—

ಯದಾ ತು ಶೂಲಶುದ್ಧ್ಯರ್ಥಂ ರುದ್ರೋ ದೇವಗಣೈಃ ಸಹ ।
ಬಭ್ರಾಮ ಪೃಥಿವೀಂ ಸರ್ವಾಂ ಕಮಂಡಲುಧರಃ ಶುಭಾಂ ॥ ೬ ॥
ಪ್ರಭಾಸಾದ್ಯೇಷು ತೀರ್ಥೇಷು ಸ್ನಾನಂ ಚಕ್ರುಃ ಸುರಾಸ್ತದಾ ।
ಸರ್ವತೀರ್ಥೋತ್ಥಿತಂ ತೋಯಂ ಪಾತ್ರೇ ವೈ ನಿಹಿತಂ ತು ತೈಃ ॥ ೭ ॥
ಶೂಲಭೇದಮನುಪ್ರಾಪ್ಯ ಶೂಲಂ ಶುದ್ಧಂ ತು ಶೂಲಿನಃ ।
ತತ್ರೋತ್ಥಮುದಕಂ ಗೃಹ್ಯ ಆಗತಾ ಭೃಗುಕಚ್ಛಕೇ ॥ ೮ ॥
ತತ್ರಾಪಶ್ಯಂಸ್ತತೋ ಹ್ಯಗ್ನಿಂ ಪಿಂಗಲಾಕ್ಷಂ ಚ ರೋಗಿಣಂ ।
ತಪಸ್ಯುಗ್ರೇ ವ್ಯವಸಿತಂ ಧ್ಯಾಯಮಾನಂ ಮಹೇಶ್ವರಂ ॥ ೯ ॥
ಹವಿರ್ಭಾಗೈಸ್ತು ವಿಪ್ರಾಣಾಂ ರಾಜ್ಞಾಂ ಚೈವಾಮಯಾವಿನಾಂ ।
ದೃಷ್ಟ್ವಾ ತು ಬಹುರೋಗಾರ್ತಮಗ್ನಿಂ ದೇವಮುಖಂ ಸುರಾಃ ।
ಪ್ರಾಹುಸ್ತೇ ಸಹಿತಾ ದೇವಂ ಶಂಕರಂ ಲೋಕಶಂಕರಂ ॥ ೧೦ ॥

ದೇವಾ ಊಚುಃ:—

ಪ್ರಸಾದಃ ಕ್ರಿಯತಾಂ ಶಂಭೋ ಪಿಂಗಲಸ್ಯಾಮಯಾವಿನಃ ।
ಯಥಾ ಹಿ ನೀರುಜಃ ಕಾಯೋ ಹವಿಷಾಂ ಗ್ರಹಣಕ್ಷಮಃ ।
ಪುನರ್ಭವತಿ ಪಿಂಗಸ್ತು ತಥಾ ಕುರು ಮಹೇಶ್ವರ ॥ ೧೧ ॥

---

೬–೭. ಶ್ರೀ ಮಾರ್ಕಂಡೇಯನು ಹೇಳುತ್ತಾನೆ:—ರುದ್ರನು ಶೂಲಶುದ್ಧಿಗಾಗಿ ದೇವತೆಗಳೊಡನೆ ಕಮಂಡಲುವನ್ನು ಧರಿಸಿ ಸಮಗ್ರ ಭೂಮಿಯಲ್ಲಿ ಸಂಚರಿಸುತ್ತಿರಲು ದೇವತೆಗಳು ಪ್ರಭಾಸಾದಿ ತೀರ್ಥಗಳಲ್ಲಿ ಮಿಂದು ಆ ತೀರ್ಥಗಳ ನೀರನ್ನು ಒಂದು ಪಾತ್ರೆಯಲ್ಲಿ ಇಟ್ಟರು.

೮. ಅವರು ಶೂಲಭೇದವನ್ನುಸೇರಿ ಮಹೇಶ್ವರನ ಶೂಲವನ್ನು ಶುದ್ಧಮಾಡಿ ಅಲ್ಲಿಯ ನೀರನ್ನು ತೆಗೆದುಕೊಂಡು ಭೃಗುಕಚ್ಛಕ್ಕೆ ಬಂದರು.

೯–೧೦. ಅಲ್ಲಿ ಹಳದಿಯ ಕಣ್ಣುಗಳುಳ್ಳವನೂ, ಉಗ್ರತಪಸ್ಸನ್ನು ಮಾಡುತ್ತಿರುವವನೂ, ಶಂಕರನನ್ನು ಧ್ಯಾನಿಸುತ್ತಿರುವವನೂ, ರೋಗಿಗಳಾದ ವಿಪ್ರಬ್ರಾಹ್ಮಣರ ಹವಿರ್ಭಾಗಗಳಿಂದ ಅತ್ಯಂತ ರೋಗಿಯೂ ಆದ ಅಗ್ನಿಯನ್ನು ನೋಡಿ ಪ್ರಪಂಚಕ್ಕೆ ಮಂಗಳವನ್ನುಂಟುಮಾಡುವ ಶಂಕರನನ್ನು ಕುರಿತು ಇಂತೆಂದರು.

೧೧. ದೇವತೆಗಳು ಹೇಳುತ್ತಾರೆ:—ಮಹೇಶ್ವರ! ಈ ಅಗ್ನಿಯು ರೋಗರಹಿತನಾಗಿ ಹವಿಸ್ಸನ್ನು ಗ್ರಹಣಮಾಡಲು ಶಕ್ತನಾಗುವಂತೆ ಅನುಗ್ರಹ ಮಾಡು.

ಈಶ್ವರ ಉವಾಚ :—

ಭೋ ಭೋಃ ಸುರಾ ಹಿ ತಪಸಾ ತುಷ್ಟೋಽಹಂ ವೋ ವಿಶೇಷತಃ ।
ವಚನಾಚ್ಚ ವಿಶೇಷೇಣ ದದಾಮ್ಯಭಿಮತಂ ವರಂ ॥ ೧೨ ॥

ಪಿಂಗಲ ಉವಾಚ :—

ಯದಿ ತುಷ್ಟೋಽಸಿ ದೇವೇಶ ದೀಯತೇ ದೇವ ಚೇಪ್ಸಿತಂ ।
ಚಂದ್ರಾದಿತ್ಯೌ ಚ ನಯನೇ ಕೃತ್ವಾಽತ್ರ ಕಲಯಾ ಸ್ಥಿತಃ ॥ ೧೩ ॥
ತಥಾ ಪುನರ್ನವಃ ಕಾಯೋ ಭವೇದ್ವ್ಯೈ ಮಮ ಶಂಕರ ।
ತಥಾ ಕುರು ವಿರೂಪಾಕ್ಷ ನಮಸ್ತುಭ್ಯಂ ಪುನಃ ಪುನಃ ॥ ೧೪ ॥

ಮಾರ್ಕಂಡೇಯ ಉವಾಚ :—

ತತಃ ಸ ಭಗವಾಂಛಂಭುರ್ಮೂರ್ತಿಮಾದಿತ್ಯರೂಪಿಣೀಂ ।
ಕೃತ್ವಾ ತು ತಸ್ಯ ತದ್ರೋಗಮಪಾನುದತ ಶಂಕರಃ ॥ ೧೫ ॥
ತತಃ ಪುನರ್ನವೀಭೂತಃ ಪುನಃ ಪ್ರೋವಾಚ ಶಂಕರಂ ।
ಅತ್ರೈವ ಸ್ಥೀಯತಾಂ ಶಂಭೋ ತಥೈವ ಭಾಸ್ಕರಃ ಸ್ವಯಂ ॥ ೧೬ ॥
ಪ್ರಾಣಿನಾಮುಪಕಾರಾಯ ರೋಗಾಣಾಮುಪಶಾಂತಯೇ ।
ಪಾಪಾನಾಂ ಧ್ವಂಸನಾರ್ಥಾಯ ಶ್ರೇಯಸಾಂ ಚೈವ ವೃದ್ಧಯೇ ॥ ೧೭ ॥

---

೧೨. ಈಶ್ವರನು ಹೇಳುತ್ತಾನೆ:—ಎಲೈ ದೇವತೆಗಳೆ! ನಾನು ನಿಮ್ಮ ತಪಸ್ಸಿನಿಂದಲೂ, ಮಾತಿನಿಂದಲೂ ವಿಶೇಷವಾಗಿ ಸಂತುಷ್ಟನಾಗಿರುವೆನು. ನಿಮಗೆ ಇಷ್ಟವಾದ ವರವನ್ನು ಕೊಡುವೆನು.

೧೩–೧೪. ಪಿಂಗಲನು ಹೇಳುತ್ತಾನೆ:— ಚಂದ್ರಸೂರ್ಯರೇ ಕಣ್ಣುಗಳಾಗುಳ್ಳ ಓ ಶಂಕರನೆ! ನೀನು ಸಂತುಷ್ಟನಾಗಿ ವರವನ್ನೀಯುವುದಾದರೆ ನನ್ನ ಶರೀರವು ರೋಗವಿಲ್ಲದೆ ಹೊಸದಾಗಿರುವಂತೆ ಮಾಡು. ನಿನಗೆ ಪುನಃ ಪುನಃ ನಮಸ್ಕಾರವು!

೧೫. ಮಾರ್ಕಂಡೇಯನು ಹೇಳುತ್ತಾನೆ:— ಬಳಿಕ ಆ ಶಂಕರನು ಸೂರ್ಯನ ಶರೀರವನ್ನು ಧರಿಸಿ ಆ ಅಗ್ನಿಯ ರೋಗವನ್ನು ನಿವಾರಿಸಿದನು.

೧೬–೧೭. ಅನಂತರ ಹೊಸ ಶರೀರವನ್ನು ಪಡೆದ ಅಗ್ನಿಯು, "ಶಂಕರ! ನೀನು ಪ್ರಾಣಿಗಳ ಉಪಕಾರಕ್ಕಾಗಿಯೂ, ರೋಗಗಳ ಶಾಂತಿಗಾಗಿಯೂ, ಪಾಪ ಪರಿಹಾರಕ್ಕಾಗಿಯೂ, ಶ್ರೇಯೋವೃದ್ಧಿಗಾಗಿಯೂ ಇಲ್ಲಿ ಸೂರ್ಯರೂಪದಿಂದ ನೆಲೆಸು" ಎಂದನು.

ಏವಮುಕ್ತಸ್ತು ಭಗವಾನ್ ಪಿಂಗಲೇನ ಮಹಾತ್ಮನಾ ।
ಅವತಾರಂ ಚ ಕೃತವಾನ್ಗೀರ್ವಾಣಾನಿದಮಬ್ರವೀತ್ ॥ ೧೮ ॥

ಈಶ್ವರ ಉವಾಚ:—

ಮುಂಚಧ್ವಮುದಕಂ ದೇವಾಸ್ತೀರ್ಥೇಭ್ಯೋ ಯತ್ಸಮಾಹೃತಂ ।
ಮಮ ಚೋತ್ತರತಃ ಕೃತ್ವಾ ಖಾತಂ ದೇವಮಯಂ ಶುಭಂ ॥ ೧೯ ॥
ತತ್ರ ನಿಕ್ಷಿಪ್ಯತಾಂ ವಾರಿ ಸರ್ವರೋಗವಿನಾಶನಂ ।
ಸರ್ವಪಾಪಹರಂ ದಿವ್ಯಂ ಸರ್ವೈರಪಿ ಸುರಾದಿಭಿಃ ॥ ೨೦ ॥
ಏವಮುಕ್ತಾಃ ಸುರಾಃ ಸರ್ವೇ ಖಾತಂ ಕೃತ್ವಾ ತಥೋತ್ತರೇ ।
ತ್ರಯಸ್ತ್ರಿಂಶತ್ಕೋಟಿಗಣೈರ್ಯುಕ್ತಂ ತತ್ತೀರ್ಥಜಂ ಜಲಂ ॥ ೨೧ ॥
ಪ್ರೋಚುಸ್ತೇ ಸಹಿತಾಃ ಸರ್ವೇ ವಿರೂಪಾಕ್ಷಪುರೋಗಮಾಃ ।
ಯಃಕಶ್ಚಿದ್ದೇವಖಾತೇಽಸ್ಮಿನ್ಮೃದಾಲಂಭನಪೂರ್ವಕಂ ॥ ೨೨ ॥
ಸ್ನಾನಂ ಕೃತ್ವಾ ರವಿದಿನೇ ಸಂಸ್ನಾಯ ನರ್ಮದಾಜಲೇ ।
ಶ್ರಾದ್ಧಂ ಕೃತ್ವಾ ಪಿತೃಭ್ಯೋ ವೈ ದಾನಂ ದತ್ವಾ ಸ್ವಶಕ್ತಿತಃ ॥ ೨೩ ॥
ಪೂಜಯಿಷ್ಯತಿ ಪಿಂಗೇಶಂ ತಸ್ಯ ವಾಸಸ್ತ್ರಿವಿಷ್ಟಪೇ ।
ಭವಿಷ್ಯತಿ ಸುರೈರುಕ್ತಂ ಶೃಣೋತಿ ಸಕಲಂ ಜಗತ್ ॥ ೨೪ ॥

---

೧೮. ಪಿಂಗಲನು ಹೀಗೆನ್ನಲು ಶಂಕರನು ಕೆಳಗಿಳಿದು ದೇವತೆಗಳನ್ನು ಕುರಿತು ಇಂತೆಂದನು.

೧೯–೨೦. ಈಶ್ವರನು ಹೇಳುತ್ತಾನೆ:—ದೇವತೆಗಳೆ! ನನ್ನ ಉತ್ತರ ಭಾಗದಲ್ಲಿ ದೇವಮಯವಾದ ಒಂದು ಕುಣಿಯನ್ನು ತೋಡಿ ನೀವು ತೀರ್ಥಗಳಿಂದ ತಂದ ಸಕಲ ರೋಗಗಳನ್ನೂ, ಪಾಪವನ್ನೂ ಪರಿಹರಿಸುವ ನೀರನ್ನು ತುಂಬಿರಿ.

೨೧. ಶಂಕರನು ಹೀಗೆನ್ನಲು ಮೂವತ್ತಮೂರು ಕೋಟಿ ದೇವತೆಗಳೂ ಉತ್ತರ ಭಾಗದಲ್ಲಿ ಸರೋವರವನ್ನು ನಿರ್ಮಿಸಿ ಅದರಲ್ಲಿ ನೀರನ್ನು ತುಂಬಿದರು.

೨೨–೨೪. ಮತ್ತು ವಿರೂಪಾಕ್ಷನೇ ಮೊದಲಾದ ಆ ದೇವತೆಗಳೆಲ್ಲರೂ ಹೀಗೆಂದರು. "ಈ ದೇವಖಾತದಲ್ಲಿ ಭಾನುವಾರದಿನ ಮೃತ್ತಿಕಾಶೌಚಪೂರ್ವಕ ವಾಗಿ ಮಿಂದು ಪಿತೃಗಳಿಗೆ ಶ್ರಾದ್ಧವನ್ನುಮಾಡಿ ಶಕ್ತ್ಯನುಸಾರ ದಾನವನ್ನಿತ್ತು ಪಿಂಗೇಶನನ್ನು ಪೂಜಿಸಿದವನು ಸ್ವರ್ಗದಲ್ಲಿ ವಾಸಿಸುವನು." ದೇವತೆಗಳು ಹೇಳಿದ ಈ ಮಾತನ್ನು ಸಕಲ ಪ್ರಪಂಚವೂ ಕೇಳಿತು.

ಆಮಯಾ ಭುವಿ ಮರ್ತ್ಯಾನಾಂ ಕ್ಷಯರೋಗವಿಚರ್ಚಿಕಾಃ ।
ವ್ಯಾಧಯೋ ವಿಕೃತಾಕಾರಾಃ ಕಾಸಶ್ವಾಸಜ್ವರೋದ್ಭವಾಃ ॥ ೨೫ ॥
ಏಕದ್ವಿತ್ರಿ ಚತುರ್ಥಾಹಾ ಯೇ ಜ್ವರಾ ಭೂತಸಂಭವಾಃ ।
ಯೇ ಚಾಽನ್ಯೇ ವಿಕೃತಾ ದೋಷಾ ದದ್ರುಶ್ಚ ಕಾಮಲಂ ತಥಾ ॥ ೨೬ ॥
ದಿನೈಸ್ತೇ ಸಪ್ತಭಿರ್ಯಾಂತಿ ನಾಶಂ ಸ್ನಾನೈ ರವೇರ್ದಿನೇ ।
ಶತಭೇದಪ್ರಭಿನ್ನಾ ಯೇ ಕುಷ್ಠಾ ಬಹುವಿಧಾಸ್ತಥಾ ॥ ೨೭ ॥
ಶತಮಾದಿತ್ಯವಾರಾಣಾಂ ಸ್ನಾಯಾದಷ್ಟೋತ್ತರಂ ತು ಯಃ ।
ಸಂಪೂಜ್ಯ ಶಂಕರಂ ದದ್ಯಾತ್ತಿಲಪಾತ್ರಂ ದ್ವಿಜಾತಯೇ ॥ ೨೮ ॥
ನಶ್ಯಂತಿ ತಸ್ಯ ಕುಷ್ಠಾನಿ ಗರುಡೇನೇವ ಪನ್ನಗಾಃ ।
ಏವಮುಕ್ತ್ವಾ ಗತಾಃ ಸರ್ವೇ ತ್ರಿದಶಾಸ್ತ್ರಿದಶಾಲಯಂ ॥ ೨೯ ॥

**ಮಾರ್ಕಂಡೇಯ ಉವಾಚ :—**

ನದೀಷು ದೇವಖಾತೇಷು ತಡಾಗೇಷು ಸರಿತ್ಸು ಚ ।
ಸ್ನಾನಂ ಸಮಾಚರೇನ್ನಿತ್ಯಂ ನರಃ ಪಾಪೈಃ ಪ್ರಮುಚ್ಯತೇ ॥ ೩೦ ॥
ಷಷ್ಟಿತೀರ್ಥಸಹಸ್ರೇಷು ಷಷ್ಟಿತೀರ್ಥಶತೇಷು ಚ ।
ಯತ್ಫಲಂ ಸ್ನಾನದಾನೇಷು ದೇವಖಾತೇ ತತೋಽಧಿಕಂ ॥ ೩೧ ॥
ದೇವಖಾತೇಷು ಯಃ ಸ್ನಾತ್ವಾ ತರ್ಪಯಿತ್ವಾ ಪಿತೄನ್ನೃಪ ।
ಪೂಜಯೇದ್ದೇವದೇವೇಶಂ ಪಿಂಗಲೇಶ್ವರಮುತ್ತಮಂ ॥ ೩೨ ॥

---

೨೫–೨೯. ಮತ್ತು ಆ ದೇವತೆಗಳು ಹೀಗೆಂದರು. "ಭೂಮಿಯಲ್ಲಿರುವ ಕ್ಷಯ, ವಿಚರ್ಚಿಕೆ, ವಿಕಾರವಾದ ಆಕೃತಿಗಳುಳ್ಳ ಕೆಮ್ಮು, ಉಬ್ಬಸ, ಒಂದು, ಎರಡು ಮೂರು, ನಾಲ್ಕು ದಿನಗಳ ಜ್ವರಗಳೂ, ಕಜ್ಜಿ, ಕಾಮಲ ಈ ರೋಗಗಳೂ ಇಲ್ಲಿ ಏಳು ಭಾನುವಾರಗಳಲ್ಲಿ ಸ್ನಾನಮಾಡುವುದರಿಂದ ನಾಶವಾಗುವುವು. ಅನೇಕ ವಿಧವಾದ ಕುಷ್ಠಗಳು ಇಲ್ಲಿ ನೂರೊಂಟು ಭಾನುವಾರಗಳಲ್ಲಿ ಸ್ನಾನಮಾಡಿ ಶಂಕರನನ್ನು ಪೂಜಿಸಿ ಬ್ರಾಹ್ಮಣನಿಗೆ ತಿಲಪಾತ್ರವನ್ನು ದಾನಮಾಡಿದರೆ ಗರುಡನಿಂದ ಹಾವುಗಳು ಅಡಗಿಹೋಗುವಂತೆ ಪರಿಹಾರವಾಗುವುವು." ದೇವತೆಗಳು ಹೀಗೆ ಹೇಳಿ ಎಲ್ಲರೂ ಸ್ವರ್ಗಕ್ಕೆ ತೆರಳಿದರು.

೩೦. ಮಾರ್ಕಂಡೇಯನು ಹೇಳುತ್ತಾನೆ:—ನದಿಗಳಲ್ಲಿಯೂ, ದೇವಖಾತಗಳಲ್ಲಿಯೂ, ತಟಾಕಗಳಲ್ಲಿಯೂ ಮಿಂದ ಮನುಷ್ಯನು ಪಾಪಮುಕ್ತನಾಗುವನು.

೩೧. ದೇವಖಾತದಲ್ಲಿ ಮಿಂದವನಿಗೆ ಅರುವತ್ತಾರು ಸಾವಿರ ತೀರ್ಥಗಳಲ್ಲಿ ಸ್ನಾನಮಾಡಿದ ಫಲವು ದೊರೆಯುವುದು.

೩೨–೩೩. ದೇವಖಾತಗಳಲ್ಲಿ ಮಿಂದು ಪಿತೃಗಳಿಗೆ ತರ್ಪಣಮಾಡಿ ಶಂಕರ

**ಸೋಽಶ್ವಮೇಧಸ್ಯ ಯಜ್ಞಸ್ಯ ವಾಜಪೇಯಸ್ಯ ಭಾರತ ।**
**ದ್ವಯೋಃ ಪುಣ್ಯಮವಾಪ್ನೋತಿ ನಾಽತ್ರ ಕಾರ್ಯಾ ವಿಚಾರಣಾ ॥ ೩೩ ॥**

**ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ**
**ಪಂಚಮೇ ಆವಂತ್ಯಖಂಡೇ ತೃತೀಯೇ ರೇವಾಖಂಡೇ**
**"ಪಿಂಗಲೇಶ್ವರತೀರ್ಥಮಾಹಾತ್ಮ್ಯವರ್ಣನಂ" ನಾಮ**
**ಷಟ್‌ಸಪ್ತತ್ಯುತ್ತರಶತತಮೋಽಧ್ಯಾಯಃ**

---

ನನ್ನ ಪೂಜಿಸಿದವನಿಗೆ ಅಶ್ವಮೇಧ ವಾಜಪೇಯ ಯಾಗಗಳ ಫಲವು ನಿಶ್ಚಯ ವಾಗಿಯೂ ಲಭಿಸುವುದು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ
ಶ್ರೀ ಸ್ಕಾಂದಮಹಾಪುರಾಣದ ಐದನೆಯ ಆವಂತ್ಯಖಂಡದ ಮೂರನೆಯ ರೇವಾಖಂಡದಲ್ಲಿ
"ಪಿಂಗಲೇಶ್ವರತೀರ್ಥಮಾಹಾತ್ಮ್ಯವರ್ಣನ"ವೆಂಬ
ನೂರೆಪ್ಪತ್ತಾರನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

# ಅಥ ಸಪ್ತಸಪ್ತತ್ಯಧಿಕಶತತಮೋಽಧ್ಯಾಯಃ

## ಭೂತೀಶ್ವರತೀರ್ಥಮಾಹಾತ್ಮ್ಯವರ್ಣನಂ

ಶ್ರೀ ಮಾರ್ಕಂಡೇಯ ಉವಾಚ :—

**ಭೂತೀಶ್ವರಂ ತತೋ ಗಚ್ಛೇತ್ಸರ್ವತೀರ್ಥೇಷ್ವನುತ್ತಮಂ ।**
**ದರ್ಶನಾದೇವ ರಾಜೇಂದ್ರ ಯಸ್ಯ ಪಾಪಂ ಪ್ರಣಶ್ಯತಿ ॥ ೧ ॥**
**ತತ್ರ ಸ್ಥಾನೇ ಪುರಾ ಪಾರ್ಥ ದೇವದೇವೇನ ಶೂಲಿನಾ ।**
**ಉದ್ಧೂಲನಂ ಕೃತಂ ಗಾತ್ರೇ ತೇನ ಭೂತೀಶ್ವರಂ ತು ತತ್ ॥ ೨ ॥**
**ಪುಷ್ಯೇ ವಾ ಜನ್ಮ ನಕ್ಷತ್ರ ಅಮಾವಾಸ್ಯಾಂ ವಿಶೇಷತಃ ।**
**ಭೂತೀಶ್ವರೇ ನರಃ ಸ್ನಾತ್ವಾ ಕುಲಕೋಟಿಂ ಸಮುದ್ಧರೇತ್ ॥ ೩ ॥**
**ತತ್ರ ಸ್ಥಾನೇ ತು ಯೋ ಭಕ್ತ್ಯಾ ಕುರುತೇ ಹ್ಯಂಗಗುಂಠನಂ ।**
**ತಸ್ಯ ಯತ್ಫಲಮುದ್ದಿಷ್ಟಂ ತಚ್ಛೃಣುಷ್ವ ನರಾಧಿಪ ॥ ೪ ॥**

---

## ಕನ್ನಡದ ಅನುವಾದ

### ಭೂತೀಶ್ವರತೀರ್ಥಮಾಹಾತ್ಮ್ಯವರ್ಣನ

೧. ಶ್ರೀ ಮಾರ್ಕಂಡೇಯನು ಹೇಳುತ್ತಾನೆ:—ಮಹಾರಾಜ! ಅನಂತರ ಸಕಲತೀರ್ಥಗಳಲ್ಲಿ ಉತ್ತಮವಾದ ಭೂತೀಶ್ವರ ತೀರ್ಥಕ್ಕೆ ಹೋಗಬೇಕು. ಆ ಪುಣ್ಯತೀರ್ಥದ ದರ್ಶನದಿಂದಲೇ ಸಕಲ ಪಾಪರಾಶಿಗಳೂ ಪರಿಹಾರವಾಗುವುವು.

೨. ಯುಧಿಷ್ಠಿರ! ಅಲ್ಲಿ ಹಿಂದೆ ಶಂಕರನು ಭಸ್ಮವನ್ನು ಲೇಪನಮಾಡಿಕೊಂಡಿರುವುದರಿಂದ ಅದು ಭೂತೀಶ್ವರವೆಂದು ಪ್ರಸಿದ್ಧವಾಯಿತು.

೩. ಪುಷ್ಯ ನಕ್ಷತ್ರದಲ್ಲಾಗಲಿ, ಜನ್ಮ ನಕ್ಷತ್ರದಲ್ಲಾಗಲಿ, ಅಮಾವಾಸ್ಯೆ ದಿನದಲ್ಲಾಗಲಿ ಅಲ್ಲಿ ಮಿಂದ ಮಾನವನು ತನ್ನ ಕೋಟಿಕುಲವನ್ನು ಉದ್ಧರಿಸುವನು.

೪. ಆ ಸ್ಥಳದಲ್ಲಿ ಭಕ್ತಿಯಿಂದ ಅವಯವಗಳಿಗೆ ಭಸ್ಮವನ್ನು ಲೇಪನಮಾಡಿಕೊಂಡವನಿಗೆ ಉಂಟಾಗುವ ಫಲವನ್ನು ಕೇಳು.

ಯಾವಂತೋ ಭೂತಿಕಣಿಕಾ ಗಾತ್ರೇ ಲಗ್ನಾಃ ಶಿವಾಲಯೇ ।
ತಾವದ್ವರ್ಷಸಹಸ್ರಾಣಿ ಶಿವಲೋಕೇ ಮಹೀಯತೇ ॥ ೫ ॥
ಸರ್ವೇಷಾಮೇವ ಸ್ನಾನಾನಾಂ ಭಸ್ಮಸ್ನಾನಂ ಪರಂ ಸ್ಮೃತಂ ।
ಪುರಾಣೈರ್ಋಷಿಭಿಃ ಪ್ರೋಕ್ತಂ ಸರ್ವಶಾಸ್ತ್ರೇಷ್ವನುತ್ತಮಂ ॥ ೬ ॥
ಏಕಕಾಲಂ ದ್ವಿಕಾಲಂ ವಾ ತ್ರಿಕಾಲಂ ಚಾಽಪಿ ಯಃ ಸದಾ ।
ಸ್ನಾನಂ ಕರೋತಿ ಚಾಗ್ನೇಯಂ ಪಾಪಂ ತಸ್ಯ ಪ್ರಣಶ್ಯತಿ ॥ ೭ ॥
ದಿವ್ಯಸ್ನಾನಾದ್ವರಂ ಸ್ನಾನಂ ವಾಯವ್ಯಂ ಭರತರ್ಷಭ ।
ವಾಯವ್ಯಾದುತ್ತಮಂ ಬ್ರಾಹ್ಮ್ಯಂ ವರಂ ಬ್ರಾಹ್ಮ್ಯಾತ್ತು ವಾರುಣಂ ॥ ೮ ॥
ಆಗ್ನೇಯಂ ವಾರುಣಾಚ್ಛ್ರೇಷ್ಠಂ ಯಸ್ಮಾದುಕ್ತಂ ಸ್ವಯಂಭುವಾ ।
ತಸ್ಮಾತ್ಸರ್ವಪ್ರಯತ್ನೇನ ಹ್ಯಾಗ್ನೇಯಂ ಸ್ನಾನಮಾಚರೇತ್ ॥ ೯ ॥

**ಯುಧಿಷ್ಠಿರ ಉವಾಚ:—**

ಆಗ್ನೇಯಂ ವಾರುಣಂ ಬ್ರಾಹ್ಮ್ಯಂ ವಾಯವ್ಯಂ ದಿವ್ಯಮೇವ ಚ ।
ಕಿಮುಕ್ತಂ ಶ್ರೋತುಮಿಚ್ಛಾಮಿ ಪರಂ ಕೌತೂಹಲಂ ಹಿ ಮೇ ॥ ೧೦ ॥

**ಮಾರ್ಕಂಡೇಯ ಉವಾಚ:—**

ಆಗ್ನೇಯಂ ಭಸ್ಮನಾ ಸ್ನಾನಮವಗಾಹ್ಯ ಚ ವಾರುಣಂ ।
ಆಪೋಹಿಷ್ಠೇತಿ ಚ ಬ್ರಾಹ್ಮ್ಯಂ ವಾಯವ್ಯಂ ಗೋರಜಃ ಸ್ಮೃತಂ ॥ ೧೧ ॥

---

೫. ಅವನ ಶರೀರದಲ್ಲಿ ಎಷ್ಟು ಬೂದಿಯ ಕಣಗಳು ಅಂಟಿಕೊಂಡಿರುವುವೊ ಅಷ್ಟು ಸಾವಿರ ವರ್ಷಕಾಲ ಅವನು ಶಿವಲೋಕದಲ್ಲಿ ಪೂಜ್ಯನಾಗುವನು.

೬–೭. ಪುರಾಣಗಳೂ, ಸಕಲಶಾಸ್ತ್ರಗಳೂ ಸಕಲಸ್ನಾನಗಳಲ್ಲಿ ಭಸ್ಮಸ್ನಾನವು ಉತ್ತಮವಾದುದೆಂದು ಹೇಳಿರುತ್ತಾರೆ. ಋಷಿಗಳೂ ಅವನ್ನೇ ಅನುಮೋದಿಸುತ್ತಾರೆ. ಒಂದುಸಾರಿ, ಎರಡುಸಾರಿ, ಅಥವಾ ಮೂರುಸಾರಿ ಭಸ್ಮಸ್ನಾನಮಾಡಿದವನ ಪಾಪವು ಪರಿಹಾರವಾಗುವುದು.

೮–೯. ದಿವ್ಯಸ್ನಾನಕ್ಕಿಂತ ವಾಯವ್ಯಸ್ನಾನವೂ, ವಾಯವ್ಯಕ್ಕಿಂತ ಬ್ರಾಹ್ಮ್ಯಸ್ನಾನವೂ, ಬ್ರಾಹ್ಮ್ಯಸ್ನಾನಕ್ಕಿಂತ ವಾರುಣಸ್ನಾನವೂ, ವಾರುಣಕ್ಕಿಂತ ಆಗ್ನೇಯಸ್ನಾನವೂ ಉತ್ತಮವಾದುದೆಂದು ಬ್ರಹ್ಮನು ಹೇಳಿರುವುದರಿಂದ ಆಗ್ನೇಯಸ್ನಾನವನ್ನು ಮಾಡಬೇಕು.

೧೦. ಯುಧಿಷ್ಠಿರನು ಹೇಳುತ್ತಾನೆ:—ಆಗ್ನೇಯ, ವಾರುಣ, ಬ್ರಾಹ್ಮ್ಯ, ವಾಯವ್ಯ, ದಿವ್ಯ ಸ್ನಾನಗಳೆಂದರೇನು? ಇದನ್ನು ಕೇಳಲು ನನಗೆ ಬಹಳ ಕುತೂಹಲವುಂಟಾಗಿದೆ.

೧೧–೧೩. ಭಸ್ಮಸ್ನಾನವು ಆಗ್ನೇಯವೆಂದೂ, ಅವಗಾಹನ ಸ್ನಾನವು ವಾರುಣವೆಂದೂ, ಆಪೋಹಿಷ್ಠೇತ್ಯಾದಿ ಮಂತ್ರದಿಂದ ಮಾಡುವ ಸ್ನಾನವು

ಸೂರ್ಯೇ ದೃಷ್ಟೇ ತು ಯತ್ಸ್ನಾನಂ ಗಂಗಾತೋಯೇನ ತತ್ಸಮಂ ।
ತತ್ಸ್ನಾನಂ ಪಂಚಮಂ ಪ್ರೋಕ್ತಂ ದಿವ್ಯಂ ಪಾಂಡವಸತ್ತಮ ॥ ೧೨ ॥
ತಸ್ಮಾತ್ಸರ್ವಪ್ರಯತ್ನೇನ ಸ್ನಾತ್ವಾ ಭೂತೇಶ್ವರೇ ತು ಯಃ ।
ಪೂಜಯೇದ್ದೇವಮೀಶಾನಂ ಸಬಾಹ್ಯಾಭ್ಯಂತರಃ ಶುಚಿಃ ॥ ೧೩ ॥
ತತ್ರ ಸ್ಥಾನೇ ತು ಯೇ ನಿತ್ಯಂ ಧ್ಯಾಯಂತಿ ಪರಮಂ ಪದಂ ।
ಸೂಕ್ಷ್ಮಂ ಚಾತೀಂದ್ರಿಯಂ ನಿತ್ಯಂ ತೇ ಧನ್ಯಾ ನಾಽತ್ರ ಸಂಶಯಃ ॥ ೧೪ ॥
ಮುಕ್ತಿತೀರ್ಥಂ ತು ತತ್ತೀರ್ಥಂ ಸರ್ವತೀರ್ಥೇಷ್ವನುತ್ತಮಂ ।
ದರ್ಶನಾದೇವ ಯಸ್ಯೈವ ಪಾಪಂ ಯಾತಿ ಮಹತ್ಕ್ಷಯಂ ॥ ೧೫ ॥
ಜಾಯತೇ ಪೂಜಯಾ ರಾಜ್ಯಂ ತತ್ರ ಸ್ತುತ್ವಾ ಮಹೇಶ್ವರಂ ।
ಜಪೇನ ಪಾಪಸಂಶುದ್ಧಿರ್ಧ್ಯಾನೇನಾನಂತ್ಯಮಶ್ನುತೇ ॥ ೧೬ ॥
ಓಂ ಜ್ಯೋತಿಃ ಸ್ವರೂಪಮನಾದಿಮಧ್ಯಮನುತ್ಪಾದ್ಯ
ಮಾನಮನುಚ್ಚಾರ್ಯಮಾಣಾಕ್ಷರಂ ।
ಸರ್ವಭೂತಸ್ಥಿತಂ ಶಿವಂ ಸರ್ವಯೋಗೇಶ್ವರಂ ಸರ್ವ
ಲೋಕೇಶ್ವರಂ ಮೋಹಶೋಕಹೀನಂ ಮಹಾಜ್ಞಾನಗಮ್ಯಂ ॥೧೭॥

---

ಬ್ರಾಹ್ಮ್ಯವೆಂದೂ ಗೋಧೂಳಿಸ್ನಾನವು ವಾಯವ್ಯವೆಂದೂ, ಗಂಗಾಜಲ ದಂತಿರುವ ಸೂರ್ಯಾತಪದರ್ಶನವು ಐದನೆಯ ದಿವ್ಯಸ್ನಾನವೆಂದೂ ಹೇಳಿಸಿ ಕೊಳ್ಳುವುದು.

೧೩. ಆದ್ದರಿಂದ ಭೂತೇಶ್ವರದಲ್ಲಿ ಮಿಂದು ಈಶ್ವರನನ್ನು ಪೂಜಿಸಿದವನು ಒಳಗೂ ಹೊರಗೂ ಶುದ್ಧನಾಗುವನು.

೧೪. ಆ ಸ್ಥಳದಲ್ಲಿ ನಿತ್ಯವೂ ಸೂಕ್ಷ್ಮವೂ, ಅತೀಂದ್ರಿಯವೂ ಆದ ಉತ್ತಮ ಸ್ಥಾನವನ್ನು ಧ್ಯಾನಮಾಡುವವರು ನಿಶ್ಚಯವಾಗಿಯೂ ಧನ್ಯರು.

೧೫. ಆ ಮುಕ್ತಿತೀರ್ಥವು ಸಮಸ್ತತೀರ್ಥಗಳಲ್ಲಿಯೂ ಉತ್ತಮವಾದುದು. ಅದರ ದರ್ಶನದಿಂದಲೇ ಪಾಪವು ನಾಶವಾಗುವುದು.

೧೬–೧೭. ಮಹೇಶ್ವರನನ್ನು ಸ್ತುತಿಸಿ ಪೂಜಿಸಿದರೆ ರಾಜ್ಯವೂ, ಜಪದಿಂದ ಪಾಪ ಪರಿಹಾರವೂ ಉಂಟಾಗುವುದು. ಜ್ಯೋತಿಸ್ಸ್ವರೂಪನೂ, ಆದಿಮಧ್ಯಾಂತ ರಹಿತನೂ, ಉತ್ಪತ್ತಿಯಿಲ್ಲದವನೂ, ಉಚ್ಚರಿಸಲಾಗದ ಅಕ್ಷರಗಳುಳ್ಳ ವನೂ, ಸಕಲ ಭೂತಾಂತರ್ಯಾಮಿಯೂ, ಸಮಸ್ತ ಯೋಗಿಗಳಿಗೆ ಒಡೆಯನೂ, ಸರ್ವಲೋಕೇಶ್ವರನೂ ಮೋಹದುಃಖವಿಲ್ಲದವನೂ, ಮಹಾಜ್ಞಾನ ಗಮ್ಯನೂ ಆದ ಆ ಮಹೇಶ್ವರನನ್ನು ಧ್ಯಾನಿಸುವುದರಿಂದ ಮೋಕ್ಷವು ಲಭಿಸುವುದು.

ತತ್ರ ತೀರ್ಥೇ ತು ಯೋ ಗತ್ವಾ ಸ್ನಾನಂ ಕುರ್ಯಾನ್ನರೇಶ್ವರ ।
ಅಶ್ವಮೇಧಸ್ಯ ಯಜ್ಞಸ್ಯ ಫಲಂ ಪ್ರಾಪ್ನೋತಿ ಮಾನವಃ ।
ಏವಂಭೂತಂ ನ ಜಾನಂತಿ ಮೋಕ್ಷಾಽಪೇಕ್ಷಣಿಕಾ ನರಾಃ ॥ ೧೮ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ
ಪಂಚಮೇ ಆವಂತ್ಯಖಂಡೇ ತೃತೀಯೇ ರೇವಾಖಂಡೇ
"ಭೂತೀಶ್ವರತೀರ್ಥಮಾಹಾತ್ಮ್ಯವರ್ಣನಂ" ನಾಮ
ಸಪ್ತಸಪ್ತತ್ಯಧಿಕಶತತಮೋಽಧ್ಯಾಯಃ

---

೧೮. ಮಹಾರಾಜ! ಆ ತೀರ್ಥಕ್ಕೆ ಹೋಗಿ ಮಿಂದ ನರನು ಅಶ್ವಮೇಧ ಯಾಗದ ಫಲವನ್ನು ಪಡೆಯುವನು. ಮೋಕ್ಷವನ್ನು ಬಯಸುವ ಜನರು ಇಂತಹ ಶಿವನನ್ನರಿಯುವುದಿಲ್ಲ.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ
ಶ್ರೀ ಸ್ಕಾಂದಮಹಾಪುರಾಣದ ಐದನೆಯ ಆವಂತ್ಯಖಂಡದ ಮೂರನೆಯ ರೇವಾಖಂಡದಲ್ಲಿ
"ಭೂತೀಶ್ವರತೀರ್ಥಮಾಹಾತ್ಮ್ಯವರ್ಣನ" ಎಂಬ
ನೂರೆಪ್ಪತ್ತೇಳನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

## ಅಥಾಷ್ಟಸಪ್ತತ್ಯುತ್ತರಶತತಮೋಽಧ್ಯಾಯಃ

### ಗಂಗಾವಾಹಕತೀರ್ಥಮಾಹಾತ್ಮ್ಯವರ್ಣನಂ

ಶ್ರೀ ಮಾರ್ಕಂಡೇಯ ಉವಾಚ :—

ತತೋ ಗಚ್ಛೇತ್ತು ರಾಜೇಂದ್ರ ಗಂಗಾವಾಹಕಮುತ್ತಮಂ ।
ನರ್ಮದಾಯಾಂ ಮಹಾಪುಣ್ಯಂ ಭೃಗುತೀರ್ಥಸಮೀಪತಃ ॥ ೧ ॥
ತತ್ರ ಗಂಗಾ ಮಹಾಪುಣ್ಯಾ ಚಚಾರ ವಿಪುಲಂ ತಪಃ ।
ಪುರಾ ವರ್ಷಶತಂ ಸಾಗ್ರಂ ಪರಮಂ ವ್ರತಮಾಸ್ಥಿತಾ ॥ ೨ ॥
ಧ್ಯಾತ್ವಾ ದೇವಂ ಜಗದ್ಯೋನಿಂ ನಾರಾಯಣಮಕಲ್ಮಷಂ ।
ಆತ್ಮಾನಂ ಪರಮಂ ಧಾಮ ಸರಿತ್ವಾ ಜಗತೀಪತೇಃ ॥ ೩ ॥
ತತೋ ಜನಾರ್ದನೋ ದೇವ ಆಗತ್ಯೇದಮುವಾಚ ಹ ॥ ೪ ॥

ವಿಷ್ಣುರುವಾಚ :—

ತಪಸಾ ತವ ತುಷ್ಟೋಽಹಂ ಮತ್ಪಾದಾಂಬುಜಸಂಭವೇ ।
ಮತ್ತಃ ಕಿಮಿಚ್ಛಸೇ ದೇವಿ ಬ್ರೂಹಿ ಕಿಂ ಕರವಾಣಿ ತೇ ॥ ೫ ॥

ಗಂಗೋವಾಚ :—

ತ್ವತ್ಪಾದಕಮಲಾದ್ಭ್ರಷ್ಟಾ ಗಂಗಾ ಸಹಚರಾ ವಿಭೋ ।
ಯದೃಚ್ಛಯಾ ತ್ರಿಲೋಕೇಶ ವಂದ್ಯಮಾನಾ ದಿವೌಕಸೈಃ ॥ ೬ ॥

---

## ಕನ್ನಡದ ಅನುವಾದ

### ಗಂಗಾವಾಹಕತೀರ್ಥಮಾಹಾತ್ಮ್ಯವರ್ಣನ

೧. ಶ್ರೀ ಮಾರ್ಕಂಡೇಯನು ಹೇಳುತ್ತಾನೆ:—ಮಹಾರಾಜ! ಅನಂತರ ನರ್ಮದಾನದಿಯಲ್ಲಿ ಭೃಗುತೀರ್ಥದ ಹತ್ತಿರವಿರುವ ಪುಣ್ಯಕರವಾದ ಗಂಗಾ ವಾಹಕ ತೀರ್ಥಕ್ಕೆ ಹೋಗಬೇಕು.

೨–೩. ಅಲ್ಲಿ ಹಿಂದೆ ಗಂಗಾದೇವಿಯು ಜಗತ್ಕಾರಣನೂ, ನಿರ್ದುಷ್ಟನೂ ಆದ ಶ್ರೀಮನ್ನಾರಾಯಣನನ್ನು ಧ್ಯಾನಿಸುತ್ತ ವ್ರತಧಾರಿಣಿಯಾಗಿ ನೂರುವರ್ಷ ಕಾಲ ತಪಸ್ಸನ್ನು ಮಾಡಿದಳು.

೪. ಬಳಿಕ ವಿಷ್ಣುವು ಆ ಪ್ರದೇಶಕ್ಕೈತಂದು ಬಂದು ಆ ಗಂಗಾವಾಹಿನಿ ಯನ್ನು ಕುರಿತು ಇಂತೆಂದನು.

೫. ವಿಷ್ಣುವು ಹೇಳುತ್ತಾನೆ:—ನನ್ನ ಪಾದ ಸಂಭೂತಳಾದ ಗಂಗೆಯೆ! ನಿನ್ನ ತಪಸ್ಸಿನಿಂದ ಸಂತುಷ್ಟನಾಗಿದ್ದೇನೆ. ನೀನು ನನ್ನಿಂದ ಏನನ್ನು ಇಚ್ಛಿಸುವೆ? ಏನನ್ನು ಮಾಡಲಿ?

೬. ಗಂಗೆಯು ಹೇಳುತ್ತಾಳೆ:—ತ್ರೈಲೋಕ್ಯಾಧಿಪನೇ! ನಿನ್ನ ಪಾದದಿಂದ ಹುಟ್ಟಿದ ನನ್ನನ್ನು ದೇವತೆಗಳು ವಂದಿಸುತ್ತಾರೆ.

ನೃಪೋ ಭಗೀರಥಸ್ತಸ್ಮಾತ್ತಪಃ ಕೃತ್ವಾ ಸುದುಷ್ಕರಂ ।
ಸಮಾರಾಧ್ಯ ಜಗನ್ನಾಥಂ ಶಂಕರಂ ಲೋಕಶಂಕರಂ ॥ ೭ ॥
ಅವತಾರಯಾಮಾಸ ಹಿ ಮಾಂ ಪೃಥಿವ್ಯಾಂ ಧರಣೀಧರ ।
ಮಯಾ ವೈ ಯುವಯೋರ್ವಾಕ್ಯಾದವತಾರಃ ಕೃತೋ ಭುವಿ ॥ ೮ ॥
ವೈಷ್ಣವೀಮಿತಿ ಮಾಂ ಮತ್ವಾ ಜನಃ ಸರ್ವಾಪ್ಲುತೋ ಮಯಿ ।
ಯೇ ವೈ ಬ್ರಹ್ಮಹಣೋ ಲೋಕೇ ಯೇ ಚ ವೈ ಗುರುತಲ್ಪಗಾಃ ॥ ೯ ॥
ತ್ಯಾಗಿನಃ ಪಿತೃಮಾತೃಭ್ಯಾಂ ಯೇ ಚ ಸ್ವರ್ಣಹರಾ ನರಾಃ ।
ಗೋಘ್ನಾ ಯೇ ಮನುಜಾ ಲೋಕೇ ತಥಾ ಯೇ ಪ್ರಾಣಿಹಿಂಸಕಾಃ ॥೧೦॥
ಅಗಮ್ಯಾಗಾಮಿನೋ ಯೇ ಚ ಹ್ಯಭಕ್ಷ್ಯಸ್ಯ ಚ ಭಕ್ಷಕಾಃ ।
ಯೇ ಚಾಽನೃತಪ್ರವಕ್ತಾರೋ ಯೇ ಚ ವಿಶ್ವಾಸಘಾತಕಾಃ ॥ ೧೧ ॥
ದೇವಬ್ರಾಹ್ಮಣವಿತ್ತಾನಾಂ ಹರ್ತಾರೋ ಯೇ ನರಾಧಮಾಃ ।
ದೇವಬ್ರಹ್ಮಗುರುಸ್ತ್ರೀಣಾಂ ಯೇ ಚ ನಿಂದಾಕರಾ ನರಾಃ ॥ ೧೨ ॥
ಬ್ರಹ್ಮಶಾಪಪ್ರದಗ್ಧಾ ಯೇ ಯೇ ಚೈವಾತ್ಮಹನೋ ದ್ವಿಜಾಃ ।
ಭ್ರಷ್ಟಾನಶನಸನ್ಯಾಸನಿಯುತವ್ರತಚಾರಿಣಃ ॥ ೧೩ ॥
ತಥೈವಾಪೇಯಪೇಯಾಶ್ಚ ಯೇ ಚ ಸ್ವಗುರುನಿಂದಕಾಃ ।
ನಿಷೇಧಕಾ ಯೇ ದಾನಾನಾಂ ಪಾತ್ರದಾನಪರಾಙ್ಮುಖಾಃ ॥ ೧೪ ॥
ಋತುಘ್ನಾ ಯೇ ಸ್ವಪತ್ನೀನಾಂ ಪಿತ್ರೋಃ ಸ್ನೇಹಪರಾ ನಹಿ ।
ಬಾಂಧವೇಷು ಚ ದೀನೇಷು ಕರುಣಾ ಯಸ್ಯ ನಾಸ್ತಿ ವೈ ॥ ೧೫ ॥

---

೭-೮. ಭಗೀರಥರಾಜನು ದಾರುಣತಪವನ್ನಾಚರಿಸಿ ಲೋಕಮಂಗಳಕರನಾದ ಶಂಕರನನ್ನು ಪೂಜಿಸಿ ನನ್ನನ್ನು ಭೂಮಿಗೆ ಇಳಿಸಿದನು. ನಾನು ನಿಮ್ಮೀರ್ವರ ಮಾತಿನಿಂದ ಭೂಮಿಗೆ ಇಳಿದೆನು.

೯-೨೦. ನಾನು ವಿಷ್ಣುಪಾದ ಸಂಭೂತಳಾಗಿರುವೆನೆಂದು ತಿಳಿದು ಜನರೆಲ್ಲ ನನ್ನಲ್ಲಿ ಸ್ನಾನಮಾಡುವರು. ಲೋಕದಲ್ಲಿ ಬ್ರಹ್ಮಘ್ನರೂ, ಗುರುಭಾರ್ಯಾಗಾಮಿಗಳೂ, ತಾಯಿ ತಂದೆಗಳನ್ನು ತ್ಯಜಿಸಿದವರೂ, ಸ್ವರ್ಣವನ್ನು ಕದ್ದವರೂ, ಗೋಘ್ನರೂ, ಪ್ರಾಣಿಹಿಂಸಕರೂ, ಅಗಮ್ಯಾಗಾಮಿಗಳೂ, ಅಭಕ್ಷ್ಯಭಕ್ಷಕರೂ, ಮಿಥ್ಯಾವಾದಿಗಳೂ, ವಿಶ್ವಾಸಘಾತುಕರೂ, ದೇವಬ್ರಾಹ್ಮಣರ ವಿತ್ತವನ್ನು ಅಪಹರಿಸಿದವರೂ, ದೇವಬ್ರಹ್ಮಗುರುಸ್ತ್ರೀಯರನ್ನು ನಿಂದಿಸಿದವರೂ, ಬ್ರಾಹ್ಮಣಶಾಪಗ್ರಸ್ತರೂ, ಆತ್ಮಹತ್ಯೆಮಾಡಿಕೊಂಡವರೂ, ಭ್ರಷ್ಟವಾದ ಅನಶನ, ಸಂನ್ಯಾಸವ್ರತವುಳ್ಳವರೂ, ಅಪೇಯವನ್ನು ಪಾನಮಾಡಿದವರೂ, ತಮ್ಮ ಗುರುಗಳನ್ನು ನಿಂದಿಸುವವರೂ, ದಾನಗಳನ್ನು ತಡೆಯುವವರೂ, ಸತ್ಪಾತ್ರದಾನದಲ್ಲಿ ಪರಾಙ್ಮುಖರೂ, ತಮ್ಮ ಪತ್ನಿಯರ ಋತುಕಾಲವನ್ನು ಹಾಳು

ಕ್ಷೇತ್ರಸೇತುವಿಭೇದೀ ಚ ಪೂರ್ವಮಾರ್ಗಪ್ರಲೋಪಕಃ ।
ನಾಸ್ತಿಕಃ ಶಾಸ್ತ್ರಹೀನಸ್ತು ವಿಪ್ರಃ ಸಂಧ್ಯಾವಿವರ್ಜಿತಃ ॥ ೧೬ ॥
ಅಹುತಾಶೀ ಹ್ಯಸಂತುಷ್ಟಃ ಸರ್ವಾಶೀ ಸರ್ವವಿಕ್ರಯೀ ।
ಕದರ್ಯಾ ನಾಸ್ತಿಕಾಃ ಕ್ರೂರಾಃ ಕೃತಘ್ನಾ ಯೇ ದ್ವಿಜಾತಯಃ ॥ ೧೭ ॥
ಪೈಶುನ್ಯಾ ರಸವಿಕ್ರೇಯಾಃ ಸರ್ವಕಾಲವಿನಾಕೃತಾಃ ।
ಸ್ವಗೋತ್ರಾಂ ಪರಗೋತ್ರಾಂ ವಾ ಯೇ ಭುಂಜಂತಿ ದ್ವಿಜಾಽಧಮಾಃ ॥ ೧೮ ॥
ತೇ ಮಾಂ ಪ್ರಾಪ್ಯ ವಿಮುಚ್ಯಂತೇ ಪಾಪಸಂಘೈಃ ಸುಸಂಚಿತೈಃ ।
ತತ್ಪಾಪಕ್ಷಾರತಪ್ತಾಯಾ ನ ಶರ್ಮ ಮಮ ವಿದ್ಯತೇ ॥ ೧೯ ॥
ತಥಾ ಕುರು ಜಗನ್ನಾಥ ಯಥಾಽಹಂ ಶರ್ಮ ಚಾಪ್ನುಯಾಂ ।
ಏವಮುಕ್ತಸ್ತು ದೇವೇಶಸ್ತುಷ್ಟಃ ಪ್ರೋವಾಚ ಜಾಹ್ನವೀಂ ॥ ೨೦ ॥

ವಿಷ್ಣುರುವಾಚ :—

ಅಹಮತ್ರ ವಸಿಷ್ಯಾಮಿ ಗಂಗಾಧರಸಹಾಯವಾನ್ ।
ಪ್ರವಿಶಸ್ವ ಸದಾ ರೇವಾಂ ತ್ವಮತ್ರೈವ ಚ ಮೂರ್ತಿನಾ ॥ ೨೧ ॥
ಮಮ ಪಾದಪಲಂ ಪ್ರಾಪ್ಯ ವಹ ತ್ರಿಪಥಗಾಮಿನೀ ।
ಯದಾ ಬಹೂದಕೇ ಕಾಲೇ ನರ್ಮದಾ ಜಲಸಂಭೃತಾ ॥ ೨೨ ॥

---

ಮಾಡಿದವರೂ, ತಂದೆ ತಾಯಿಗಳಲ್ಲಿ ಪ್ರೀತಿಯಿಲ್ಲದವರೂ, ಬಂಧುಗಳಲ್ಲಿಯೂ, ದೀನರಲ್ಲಿಯೂ ದಯೆಯಿಲ್ಲದವರೂ, ಕ್ಷೇತ್ರಸೇತುಭೇದಕರೂ, ಹಿಂದಿನದಾರಿಯನ್ನು ಹಾಳುಮಾಡುವವರೂ, ನಾಸ್ತಿಕರೂ, ಶಾಸ್ತ್ರಹೀನರೂ, ಸಂಧ್ಯಾವಂದನೆ ಮಾಡದ ಬ್ರಾಹ್ಮಣರೂ, ಹುತವಾದುದನ್ನು ತಿನ್ನದವರೂ, ಅಸಂತುಷ್ಟರೂ, ಎಲ್ಲವನ್ನೂ ಭಕ್ಷಿಸುವವರೂ, ಸಮಸ್ತವನ್ನೂ ಮಾರುವವರೂ, ನೀಚರೂ, ನಾಸ್ತಿಕರೂ, ಕ್ರೂರರೂ, ಕೃತಘ್ನರೂ, ಚಾಡಿಹೇಳುವವರೂ, ರಸವಸ್ತುಗಳನ್ನು ಮಾರುವವರೂ, ತನ್ನ ಮತ್ತು ಪರಗೋತ್ರದ ಹೆಂಗಸನ್ನು ಉಪಭೋಗಿಸುವವರೂ ನನ್ನನ್ನು ಹೊಂದಿ ಪಾಪಸಮೂಹದಿಂದ ಮುಕ್ತರಾಗುವರು. ಅವರ ಪಾಪವೆಂಬ ಕ್ಷಾರದಿಂದ ವ್ಯಥೆಗೊಂಡ ನನಗೆ ಸುಖವೇ ಇಲ್ಲ. ಆದ್ದರಿಂದ ನನಗೆ ಸುಖವುಂಟಾಗುವಂತೆ ಮಾಡು. ಹೀಗೆ ಹೇಳಲ್ಪಟ್ಟ ವಿಷ್ಣುವು ಸಂತುಷ್ಟನಾಗಿ ಗಂಗೆಯನ್ನು ಕುರಿತು ಇಂತೆಂದನು.

೨೧. ವಿಷ್ಣುವು ಹೇಳುತ್ತಾನೆ :—ದೇವಿ! ನಾನು ಇಲ್ಲಿ ಮಹೇಶ್ವರನೊಡನೆ ವಾಸಮಾಡುವೆನು. ನೀನು ಈ ಶರೀರದಿಂದ ಇಲ್ಲಿಯೇ ನರ್ಮದಾನದಿಯನ್ನು ಪ್ರವೇಶಿಸು.

೨೨–೨೩. ನನ್ನ ಪಾದದ ಅಡಿಯನ್ನು ಹೊಂದಿ ಪ್ರವಹಿಸು. ನೀನು

ಪ್ರಾವೃಟ್ಕಾಲಂ ಸಮಾಸಾದ್ಯ ಭವಿಷ್ಯತಿ ಜಲಾಕುಲಾ ।
ಪ್ಲಾವ್ಯೋಭಯತಟಂ ದೇವೀ ಪ್ರಾಪ್ಯ ಮಾಮುತ್ತರಸ್ಥಿತಂ ॥ ೨೩ ॥
ಪ್ಲಾವಯಿಷ್ಯತಿ ತೋಯೇನ ಯದಾ ಶಂಖಂ ಕರೇ ಸ್ಥಿತಂ ।
ತದಾ ಪರ್ವಶತೋದ್ಯುಕ್ತಂ ವೈಷ್ಣವಂ ಪರ್ವಸಂಜ್ಞಿತಂ ॥ ೨೪ ॥
ನ ತೇನ ಸದೃಶಂ ಕಿಂಚಿದ್ವ್ಯತೀಪಾತಾದಿ ಸಂಕ್ರಮಂ ।
ಅಯನೇ ದ್ವೇ ಚ ನ ತಥಾ ಪುಣ್ಯಾತ್ಪುಣ್ಯತರಂ ಯಥಾ ॥ ೨೫ ॥
ತಸ್ಮಿನ್ಪರ್ವಣಿ ದೇವೇಶಿ ಶಂಖಂ ಸಂಸ್ಪೃಶ್ಯ ಮಾನವಃ ।
ಸ್ನಾನಮಾಚರತೇ ತೋಯೇ ಮಿಶ್ರೇ ಗಾಂಗೇಯನಾರ್ಮದೇ ॥ ೨೬ ॥
ಪುಣ್ಯಂ ತ್ವಶೇಷಪುಣ್ಯಾನಾಂ ಮಂಗಲಾನಾಂ ಚ ಮಂಗಲಂ ।
ವಿಷ್ಣುನಾ ವಿಧೃತೋ ಯೇನ ತಸ್ಮಾಚ್ಛಾಂತಿಃ ಪ್ರಚಕ್ರಮೇ ॥ ೨೭ ॥
ತತ್ರಾಂತಂ ಪಾಪಸಂಘಸ್ಯ ಧ್ರುವಮಾಪ್ನೋತಿ ಮಾನವಃ ।
ಶಂಖೋದ್ಧಾರೇ ನರಃ ಸ್ನಾತ್ವಾ ತರ್ಪಯೇತ್ಪಿತೃದೇವತಾಃ ॥ ೨೮ ॥
ತೃಪ್ತಾಸ್ತೇ ದ್ವಾದಶಾಬ್ದಾನಿ ಸಿದ್ಧಿಂ ಚ ಸಾರ್ವಕಾಮಿಕೀಂ ।
ಗಂಗಾವಹೇ ತು ಯಃ ಶ್ರಾದ್ಧಂ ಶಂಖೋದ್ಧಾರೇ ಪ್ರದಾಸ್ಯತಿ ॥ ೨೯ ॥
ತೇನ ಪಿಂಡಪ್ರದಾನೇನ ನೃತ್ಯಂತಿ ಪಿತರಸ್ತಥಾ ।
ಶಂಖೋದ್ಧಾರೇ ನರಃ ಸ್ನಾತ್ವಾ ಪೂಜಯೇದ್ಬಲಕೇಶವೌ ॥ ೩೦ ॥

---

ನರ್ಮದಾನದಿಯೊಡನೆ ಮಳೆಗಾಲದಲ್ಲಿ ತುಂಬಿದ ನೀರುಳ್ಳವಳಾಗಿ ಎರಡು ದಡಗಳನ್ನು ಹೊಂದಿ ನನ್ನನ್ನು ನೆನೆಸು.

೨೪. ನೀನು ನನ್ನ ಕೈಯಲ್ಲಿರುವ ಶಂಖವನ್ನು ನೀರಿನಿಂದ ನೆನೆಸಿದಾಗ ನೂರು ಪರ್ವಕಾಲಗಳಿಗಿಂತ ಅಧಿಕವಾದ ವೈಷ್ಣವಪರ್ವ ಉಂಟಾಗುವುದು.

೨೫. ವ್ಯತೀಪಾತ, ಅಯನಕಾಲಗಳೂ ಅತಿ ಪುಣ್ಯಕರವಾದ ಆ ವೈಷ್ಣವ ಪರ್ವಕ್ಕೆ ಸಮಾನಗಳಲ್ಲ.

೨೬–೩೦. ಆ ಪರ್ವಕಾಲದಲ್ಲಿ ಮಾನವನು ಶಂಖವನ್ನು ಮುಟ್ಟಿ ಮಿಶ್ರವಾದ ಗಂಗಾ ಯಮುನಾನದಿಯ ಜಲದಲ್ಲಿ ಸ್ನಾನಮಾಡಿದರೆ ಪುಣ್ಯಗಳಲ್ಲಿ ಉತ್ತಮವಾದ ಪುಣ್ಯವನ್ನೂ, ಮಂಗಳಗಳಲ್ಲಿ ಉತ್ತಮವಾದ ಮಂಗಳವನ್ನೂ ಪಡೆಯುವನು. ವಿಷ್ಣುವು ಶಂಖವನ್ನು ಹಿಡಿದಿರುವುದರಿಂದ ಅದರ ಸ್ಪರ್ಶದಿಂದ ನರನು ನಿಶ್ಚಯವಾಗಿಯೂ ಪಾಪಸಮೂಹವನ್ನು ಪರಿಹರಿಸಿಕೊಳ್ಳುವನು. ಶಂಖೋದ್ಧಾರದಲ್ಲಿ ಮಿಂದು ಪಿತೃದೇವತೆಗಳಿಗೆ ತರ್ಪಣಮಾಡಿದ ನರನ ಪಿತೃಗಳು ತೃಪ್ತಿಗೊಂಡು ಹನ್ನೆರಡು ವರ್ಷಕಾಲ ಸಕಲೇಷ್ಟಾರ್ಥಗಳನ್ನೀಯುವ ಸಿದ್ಧಿಯನ್ನು ಪಡೆಯುವರು. ಗಂಗಾವಾಹದಲ್ಲಿ ಶ್ರಾದ್ಧಮಾಡಿ ಪಿಂಡಪ್ರದಾನ ಮಾಡಿದರೆ ಪಿತೃಗಳು ನರ್ತಿಸುವರು. ಮಾನವನು ಶಂಖೋದ್ಧಾರದಲ್ಲಿ ಮಿಂದು

ರಾತ್ರೌ ಜಾಗರಣಂ ಕೃತ್ವಾ ಶುದ್ಧೋ ಭವತಿ ಜಾಹ್ನವಿ ।
ಯತ್ತ್ವಂ ಲೋಕಕೃತಂ ಕರ್ಮ ಮನ್ಯಸೇ ಭುವಿ ದುಃಸಹಂ ॥ ೩೧ ॥
ತಸ್ಮಿನ್ಪರ್ವಣಿ ತತ್ಸರ್ವಂ ತತ್ರ ಸ್ನಾತ್ವಾ ವ್ಯಪೋಹಯ ।
ಏವಮುಕ್ತ್ವಾ ನರಶ್ರೇಷ್ಠ ವಿಷ್ಣುಶ್ಚಾಂತರಧೀಯತ ॥ ೩೨ ॥
ತದಾ ಪ್ರಭೃತಿ ತತ್ತೀರ್ಥಂ ಗಂಗಾವಾಹಕಮುತ್ತಮಂ ।
ಬ್ರಹ್ಮಾದ್ಯೈರ್ಋಷಿಭಿಸ್ಸ್ನಾತ ಪಾರಂಪರ್ಯಕ್ರಮಾಗತೈಃ ॥ ೩೩ ॥
ತತ್ರ ತೀರ್ಥೇ ತು ಯಃ ಸ್ನಾತ್ವಾ ಭಕ್ತಿಭಾವೇನ ಭಾರತ ।
ಗಂಗಾತೀರ್ಥೇ ತು ಸ ಸ್ನಾತಃ ಸಮುಸ್ತೇಷು ನ ಸಂಶಯಃ ॥ ೩೪ ॥
ತತ್ರ ತೀರ್ಥೇ ಮೃತಾನಾಂ ತು ನರಾಣಾಂ ಭಾವಿತಾತ್ಮನಾಂ ।
ಅನಿವರ್ತಿಕಾ ಗತಿಸ್ತೇಷಾಂ ವಿಷ್ಣುಲೋಕಾತ್ಕದಾಚನ ॥ ೩೫ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ
ಪಂಚಮೇ ಅವಂತ್ಯಖಂಡೇ ತೃತೀಯೇ ರೇವಾಖಂಡೇ
"ಗಂಗಾವಾಹಕತೀರ್ಥಮಾಹಾತ್ಮ್ಯವರ್ಣನಂ"
ನಾಮಾಷ್ಟಸಪ್ತತ್ಯುತ್ತರಶತತಮೋಽಧ್ಯಾಯಃ

---

ಬಲರಾಮಕೃಷ್ಣರನ್ನು ಪೂಜಿಸಿ ರಾತ್ರಿಜಾಗರಣೆಮಾಡಿದರೆ ಶುದ್ಧನಾಗುವನು. ಗಂಗೆಯೇ! ನೀನು ಭೂಲೋಕದ ಜನರ ದುಸ್ಸಹವಾದ ಕರ್ಮವನ್ನು ಆ ಪರ್ವಕಾಲದಲ್ಲಿ ಅಲ್ಲಿ ಮಿಂದು ಹೋಗಲಾಡಿಸಿಕೊ." ವಿಷ್ಣುವು ಹೀಗೆ ಹೇಳಿ ಅಲ್ಲಿಯೆ ಅಂತರ್ಧಾನವಾದನು.

೩೩. ಪಾರಂಪರ್ಯಕ್ರಮದಿಂದ ಬಂದ ಬ್ರಹ್ಮಾದಿದೇವತೆಗಳೂ, ಋಷಿಗಳೂ, ಅದು ಮೊದಲ್ಗೊಂಡು ಆ ಗಂಗಾವಾಹಕ ತೀರ್ಥವನ್ನು ಸೇವಿಸಿದರು.

೩೪. ಆ ತೀರ್ಥದಲ್ಲಿ ಭಕ್ತಿಯಿಂದ ಮಿಂದವನು ಗಂಗಾದಿ ತೀರ್ಥಗಳಲ್ಲಿ ಮಿಂದವನಂತಾಗುವನು.

೩೫. ಆ ತೀರ್ಥದಲ್ಲಿ ಮಿಂದ ಜ್ಞಾನಿಗಳು ವಿಷ್ಣುಲೋಕವನ್ನು ಸೇರಿ ಎಂದೆಂದಿಗೂ ಹಿಂದಿರುಗುವುದಿಲ್ಲ.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ
ಶ್ರೀ ಸ್ಕಾಂದಮಹಾಪುರಾಣದ ಐದನೆಯ ಅವಂತ್ಯಖಂಡದ ಮೂರನೆಯ ರೇವಾಖಂಡದಲ್ಲಿ
"ಗಂಗಾವಾಹಕತೀರ್ಥಮಾಹಾತ್ಮ್ಯವರ್ಣನ"ವೆಂಬ
ನೂರೆಪ್ಪತ್ತೆಂಟನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

## ಅಥೈಕೋನಾಶೀತ್ಯಧಿಕಶತತಮೋಽಧ್ಯಾಯಃ

### ಗೌತಮೇಶ್ವರತೀರ್ಥಮಾಹಾತ್ಮ್ಯವರ್ಣನಂ

ಶ್ರೀ ಮಾರ್ಕಂಡೇಯ ಉವಾಚ :—

ತತೋ ಗಚ್ಛೇತ್ತು ರಾಜೇಂದ್ರ ಗೌತಮೇಶ್ವರಮುತ್ತಮಂ ।
ಸರ್ವಪಾಪಹರಂ ತೀರ್ಥಂ ತ್ರಿಷು ಲೋಕೇಷು ವಿಶ್ರುತಂ ॥ ೧ ॥
ಗೌತಮೇನ ತಪಸ್ತಪ್ತಂ ತತ್ರ ತೀರ್ಥೇ ಯುಧಿಷ್ಠಿರ ।
ದಿವ್ಯಂ ವರ್ಷಸಹಸ್ರಂ ತು ತತಸ್ತುಷ್ಟೋ ಮಹೇಶ್ವರಃ ॥ ೨ ॥
ಪ್ರಣಮ್ಯ ಶಿರಸಾ ತತ್ರ ಸ್ಥಾಪಿತಃ ಪರಮೇಶ್ವರಃ ।
ಸ್ಥಾಪಿತೋ ಗೌತಮೇನೇಶೋ ಗೌತಮೇಶ್ವರ ಉಚ್ಯತೇ ॥ ೩ ॥
ತತ್ರ ದೇವೈಶ್ಚ ಗಂಧರ್ವೈರ್ಋಷಿಭಿಃ ಪಿತೃದೇವತೈಃ ।
ಸಂಪ್ರಾಪ್ತಾ ಹ್ಯುತ್ತಮಾ ಸಿದ್ಧಿರಾರಾಧ್ಯ ಪರಮೇಶ್ವರಂ ॥ ೪ ॥
ತತ್ರ ತೀರ್ಥೇ ತು ಯಃ ಸ್ನಾತ್ವಾ ಪೂಜಯೇತ್ಪಿತೃದೇವತಾಃ ।
ಪೂಜಯೇತ್ಪರಮೀಶಾನಂ ಸರ್ವಪಾಪೈಃ ಪ್ರಮುಚ್ಯತೇ ॥ ೫ ॥

---

## ಕನ್ನಡದ ಅನುವಾದ

### ಗೌತಮೇಶ್ವರತೀರ್ಥಮಾಹಾತ್ಮ್ಯವರ್ಣನ

೧. ಮಾರ್ಕಂಡೇಯನು ಹೇಳುತ್ತಾನೆ:—ಬಳಿಕ ಸಕಲ ಪಾಪಗಳನ್ನೂ ಪರಿಹರಿಸುವ ಮೂರು ಲೋಕಗಳಲ್ಲಿ ಪ್ರಸಿದ್ಧವಾದ ಗೌತಮೇಶ್ವರಕ್ಷೇತ್ರಕ್ಕೆ ಹೋಗಬೇಕು.

೨. ಯುಧಿಷ್ಠಿರ! ಆ ತೀರ್ಥದಲ್ಲಿ ಗೌತಮನು ಸಾವಿರ ವರ್ಷಕಾಲ ತಪಸ್ಸನ್ನು ಮಾಡಲು ಮಹೇಶ್ವರನು ಸಂತುಷ್ಟನಾದನು.

೩. ಗೌತಮನು ಅಲ್ಲಿ ಆ ಶಂಕರನನ್ನು ತಲೆಬಾಗಿ ವಂದಿಸಿ ಪ್ರತಿಷ್ಠೆಮಾಡಿದನು. ಅವನು ಗೌತಮೇಶ್ವರನೆಂದು ಪ್ರಸಿದ್ಧನಾದನು.

೪. ಅಲ್ಲಿ ದೇವ, ಗಂಧರ್ವ, ಋಷಿ, ಪಿತೃದೇವತೆಗಳು ಶಂಕರನನ್ನಾರಾಧಿಸಿ ಉತ್ತಮಸಿದ್ಧಿಯನ್ನು ಪಡೆದರು.

೫. ಆ ತೀರ್ಥದಲ್ಲಿ ಮಿಂದು ಪಿತೃದೇವತೆಗಳನ್ನೂ, ಪರಮೇಶ್ವರನನ್ನೂ ಪೂಜಿಸಿದ ಮನುಷ್ಯನು ಸಕಲ ಪಾಪಮುಕ್ತನಾಗುವನು.

ಬಹವಸ್ತನ್ನ ಜಾನಂತಿ ವಿಷ್ಣುಮಾಯಾವಿಮೋಹಿತಾಃ ।
ತತ್ರ ಸನ್ನಿಹಿತಂ ದೇವಂ ಶೂಲಪಾಣಿಂ ಮಹೇಶ್ವರಂ ॥ ೬ ॥
ಬ್ರಹ್ಮಚಾರೀ ತು ಯೋ ಭೂತ್ವಾ ತತ್ರ ತೀರ್ಥೇ ನರೇಶ್ವರ ।
ಸ್ನಾತ್ವಾರ್ಚಯೇನ್ಮಹಾದೇವಂ ಸೋಽಶ್ವಮೇಧಫಲಂ ಲಭೇತ್ ॥ ೭ ॥
ಬ್ರಹ್ಮಚಾರೀ ತು ಯೋ ಭೂತ್ವಾ ತರ್ಪಯೇತ್ಪಿತೃದೇವತಾಃ ।
ಪೂಜಯೇತ್ಪರಮೀಶಾನಂ ಸರ್ವಪಾಪೈಃ ಪ್ರಮುಚ್ಯತೇ ॥ ೮ ॥
ತತ್ರ ತೀರ್ಥೇ ತು ಯೋ ದಾನಂ ಭಕ್ತ್ಯಾ ದದ್ಯಾದ್ದ್ವಿಜಾತಯೇ ।
ತದಕ್ಷಯಫಲಂ ಸರ್ವಂ ನಾಽತ್ರ ಕಾರ್ಯಾ ವಿಚಾರಣಾ ॥ ೯ ॥
ಮಾಸೇ ಚಾಶ್ವಯುಜೇ ರಾಜನ್ಕೃಷ್ಣಪಕ್ಷೇ ಚತುರ್ದಶೀಂ ।
ಸ್ನಾತ್ವಾ ತತ್ರ ವಿಧಾನೇನ ದೀಪಕಾನಾಂ ಶತಂ ದದೇತ್ ॥ ೧೦ ॥
ಪೂಜಯಿತ್ವಾ ಮಹಾದೇವಂ ಗಂಧಪುಷ್ಪಾದಿಭಿರ್ನರಃ ।
ಮುಚ್ಯತೇ ಸರ್ವಪಾಪೇಭ್ಯೋ ಮೃತಃ ಶಿವಪುರಂ ವ್ರಜೇತ್ ॥ ೧೧ ॥
ಅಷ್ಟಮ್ಯಾಂ ಚ ಚತುರ್ದಶ್ಯಾಂ ಕಾರ್ತಿಕ್ಯಾಂ ತು ವಿಶೇಷತಃ ।
ಉಪೋಷ್ಯ ಪ್ರಯತೋ ಭೂತ್ವಾ ಘೃತೇನ ಸ್ನಾಪಯೇಚ್ಛಿವಂ ॥ ೧೨ ॥
ಪಂಚಗವ್ಯೇನ ಮಧುನಾ ದಧ್ನಾ ವಾ ಶೀತವಾರಿಣಾ ।
ಸ ಚ ಸರ್ವಸ್ಯ ಯಜ್ಞಸ್ಯ ಫಲಂ ಪ್ರಾಪ್ನೋತಿ ಮಾನವಃ ॥ ೧೩ ॥

---

೬. ವಿಷ್ಣುಮಾಯಾಮೋಹಿತರಾದ ಅನೇಕ ಜನರು ಅಲ್ಲಿ ಸನ್ನಿಹಿತನಾಗಿರುವ ಶಂಕರನನ್ನು ಅರಿಯುವುದಿಲ್ಲ.

೭. ಆ ತೀರ್ಥದಲ್ಲಿ ಬ್ರಹ್ಮಚಾರಿಯಾಗಿ ಮಿಂದು ಶಿವನನ್ನು ಅರ್ಚಿಸಿದವನು ಅಶ್ವಮೇಧಯಾಗದ ಫಲವನ್ನು ಪಡೆಯುವನು.

೮. ಬ್ರಹ್ಮಚಾರಿಯಾಗಿ ಪಿತೃದೇವತೆಗಳಿಗೆ ತರ್ಪಣಮಾಡಿದವನೂ, ಶಂಕರನನ್ನು ಪೂಜಿಸಿದವನೂ ಸಕಲ ಪಾಪಮುಕ್ತನಾಗುವರು.

೯. ಆ ತೀರ್ಥದಲ್ಲಿ ಬ್ರಾಹ್ಮಣನಿಗೆ ಭಕ್ತಿಯಿಂದ ದಾನವನ್ನಿತ್ತರೆ ಅದು ಅಕ್ಷಯವಾಗುವುದರಲ್ಲಿ ಸಂದೇಹವಿಲ್ಲ.

೧೦–೧೧. ಆಶ್ವಯುಜ ಕೃಷ್ಣಪಕ್ಷದ ಚತುರ್ದಶೀ ದಿನ ಅಲ್ಲಿ ವಿಧಿಯಂತೆ ಮಿಂದು ನೂರು ದೀಪಗಳನ್ನು ಹೊತ್ತಿಸಿ ಮಹಾದೇವನನ್ನು ಗಂಧ ಪುಷ್ಪಾದಿಗಳಿಂದ ಪೂಜಿಸಿದವನು ಸಕಲ ಪಾಪಗಳಿಂದಲೂ ಮುಕ್ತನಾಗಿ ಮರಣಾನಂತರ ಶಿವಾಲಯಕ್ಕೆ ತೆರಳುವನು.

೧೨–೧೩. ಕಾರ್ತಿಕಮಾಸದ ಅಷ್ಟಮೀ ಚತುರ್ದಶೀ ದಿನಗಳಲ್ಲಿ ಉಪವಾಸ ಮಾಡಿ ಶುದ್ಧನಾಗಿ ಶಿವನನ್ನು ಘೃತ, ಪಂಚಗವ್ಯ ಅಥವಾ ಮಧು, ದಧಿ, ಶೀತ ಜಲದಿಂದ ಅಭಿಷೇಕಮಾಡಿದವನು ಸಕಲ ಯಜ್ಞಗಳ ಫಲವನ್ನು ಪಡೆಯುವನು.

ಭಕ್ತ್ಯಾ ತು ಪೂಜಯೇತ್ಪಶ್ಚಾತ್ಸಲಭೇತ್ಫಲಮುತ್ತಮಂ ।
ಬಿಲ್ವಪತ್ರೈರಖಂಡೈಶ್ಚ ಪುಷ್ಪೈರುನ್ಮತ್ತಕೋದ್ಭವೈಃ ॥ ೧೪ ॥
ಕುಶಾಪಾಮಾರ್ಗಸಹಿತೈಃ ಕದಂಬದ್ರೋಣಜೈರಪಿ ।
ಮಲ್ಲಿಕಾಕರವೀರೈಶ್ಚ ರಕ್ತಪೀತೈಃ ಸಿತಾಽಸಿತೈಃ ॥ ೧೫ ॥
ಪುಷ್ಪೈರನ್ಯೈರ್ಯಥಾಲಾಭಂ ಯೋ ನರಃ ಪೂಜಯೇಚ್ಛಿವಂ ।
ನೈರಂತರ್ಯೇಣ ಷಣ್ಮಾಸಂ ಯೋಽರ್ಚಯೇದ್ಗೌತಮೇಶ್ವರಂ ।
ಸರ್ವಾನ್ಕಾಮಾನವಾಪ್ನೋತಿ ಮೃತಃ ಶಿವಪುರಂ ವ್ರಜೇತ್ ॥ ೧೬ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ
ಪಂಚಮೇ ಆವಂತ್ಯಖಂಡೇ ತೃತೀಯೇ ರೇವಾಖಂಡೇ
"ಗೌತಮೇಶ್ವರತೀರ್ಥಮಾಹಾತ್ಮ್ಯವರ್ಣನಂ"
ನಾಮೈಕೋನಾಽಶೀತ್ಯಧಿಕಶತತಮೋಽಧ್ಯಾಯಃ

---

೧೪–೧೬. ಬಿಲ್ವಪತ್ರ, ಅಖಂಡವಾದ ಉನ್ಮತ್ತಕ ಪುಷ್ಪ, ಕುಶ, ಅಪಾಮಾರ್ಗ, ಈಚಲ, ದ್ರೋಣ, ಮಲ್ಲಿಗೆ, ಕರವೀರ ಪುಷ್ಪಗಳಿಂದಲೂ, ಕೆಂಪು, ಹಳದಿ, ಶ್ವೇತ, ಕೃಷ್ಣವರ್ಣದ ಇತರ ಪುಷ್ಪಗಳಿಂದಲೂ ಆರು ತಿಂಗಳಕಾಲ ಎಡೆಬಿಡದೆ ಗೌತಮೇಶ್ವರನನ್ನು ಪೂಜಿಸಿದವನು ಸಕಲೇಷ್ಟಾರ್ಥಗಳನ್ನು ಪಡೆಯುವನು. ಮಡಿದತರುವಾಯ ಶಿವಪುರಕ್ಕೂ ತೆರಳುವನು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ
ಶ್ರೀ ಸ್ಕಾಂದಮಹಾಪುರಾಣದ ಐದನೆಯ ಆವಂತ್ಯಖಂಡದ ಮೂರನೆಯ ರೇವಾಖಂಡದಲ್ಲಿ
"ಗೌತಮೇಶ್ವರತೀರ್ಥಮಾಹಾತ್ಮ್ಯವರ್ಣನ"ವೆಂಬ
ನೂರೆಪ್ಪತ್ತೊಂಬತ್ತನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

# ಅಥ ಅಶೀತ್ಯುತ್ತರಶತತಮೋಽಧ್ಯಾಯಃ

## ದಶಾಶ್ವಮೇಧತೀರ್ಥಮಾಹಾತ್ಮ್ಯವರ್ಣನಂ

ಶ್ರೀ ಮಾರ್ಕಂಡೇಯ ಉವಾಚ:—

ತತೋ ಗಚ್ಛೇನ್ಮಹೀಪಾಲ ದಶಾಶ್ವಮೇಧಿಕಂ ಪರಂ ।
ತೀರ್ಥಂ ಸರ್ವಗುಣೋಪೇತಂ ಮಹಾಪಾತಕನಾಶನಂ ॥ ೧ ॥
ಯತ್ರ ಗತ್ವಾ ಮಹಾರಾಜ ಸ್ನಾತ್ವಾ ಸಂಪೂಜ್ಯ ಚೇಶ್ವರಂ ।
ದಶಾನಾಮಶ್ವಮೇಧಾನಾಂ ಫಲಂ ಪ್ರಾಪ್ನೋತಿ ಮಾನವಃ ॥ ೨ ॥

ಯುಧಿಷ್ಠಿರ ಉವಾಚ:—

ಅಶ್ವಮೇಧೋ ಮಹಾಯಜ್ಞೋ ಬಹುಸಂಭಾರದಕ್ಷಿಣಃ ।
ಅಶಕ್ಯಃ ಪ್ರಾಕೃತೈಃ ಕರ್ತುಂ ಕಥಂ ತೇಷಾಂ ಫಲಂ ಲಭೇತ್ ॥ ೩ ॥
ಅತ್ಯಾಶ್ಚರ್ಯಮಿದಂ ತತ್ತ್ವಂ ತ್ವಯೋಕ್ತಂ ವದತಾ ಸತಾ ।
ಯಥಾ ಮೇ ಜಾಯತೇ ಶ್ರದ್ಧಾ ದೀರ್ಘಾಯುಸ್ತ್ವಂ ತಥಾ ವದ ॥ ೪ ॥

---

## ಕನ್ನಡದ ಅನುವಾದ

### ದಶಾಶ್ವಮೇಧತೀರ್ಥಮಾಹಾತ್ಮ್ಯವರ್ಣನ

೧. ಶ್ರೀ ಮಾರ್ಕಂಡೇಯನು ಹೇಳುತ್ತಾನೆ:— ಮಹಾರಾಜ! ಅನಂತರ ಸಕಲ ಗುಣಗಳಿಂದ ಕೂಡಿರುವುದೂ ಮಹಾ ಪಾತಕಗಳನ್ನು ನಾಶಗೊಳಿಸುವುದೂ ಆದ ದಶಾಶ್ವಮೇಧಿಕ ತೀರ್ಥಕ್ಕೆ ಹೋಗಬೇಕು.

೨. ಮಾನವನು ಅಲ್ಲಿಗೆ ಹೋಗಿ ಈಶ್ವರನನ್ನು ಪೂಜಿಸಿದರೆ ದಶಾಶ್ವಮೇಧ ಯಾಗದ ಫಲವು ಲಭಿಸುವುದು.

೩. ಯುಧಿಷ್ಠಿರನು ಹೇಳುತ್ತಾನೆ:— ಅಶ್ವಮೇಧಯಜ್ಞವು ಬಹಳ ಸಾಮಗ್ರಿಗಳಿಂದಲೂ ದಕ್ಷಿಣೆಗಳಿಂದಲೂ ಸಾಧ್ಯವಾಗತಕ್ಕುದು. ಅದನ್ನು ಸಾಮಾನ್ಯ ಜನರು ಮಾಡಲಾರರು. ಅದರ ಫಲವು ಅವರಿಗೆ ಹೇಗೆ ಲಭಿಸುವುದು?

೪. ಸಾಧುವಾದ ನೀನು ಹೇಳಿದ ಈ ವಿಷಯವು ನನಗೆ ಅತ್ಯಂತ ಆಶ್ಚರ್ಯವನ್ನುಂಟುಮಾಡಿದೆ. ಚಿರಂಜೀವಿಯಾದ ನೀನು ನನಗೆ ಶ್ರದ್ಧೆಯುಂಟಾಗುವಂತೆ ಹೇಳು.

ಮಾರ್ಕಂಡೇಯ ಉವಾಚ :—

ಇದಮಾಶ್ಚರ್ಯಭೂತಂ ಹಿ ಗೌರ್ಯಾ ಪೃಷ್ಟಸ್ತ್ರಿಯಂಬಕಃ ।
ತತ್ತೇಽಹಂ ಸಂಪ್ರವಕ್ಷ್ಯಾಮಿ ಪೃಚ್ಛತೇ ನಿಪುಣಾಯ ವೈ ॥ ೫ ॥
ಪುರಾ ವೃಷಸ್ಥೋ ದೇವೇಶ ಹ್ಯುಮಯಾ ಸಹ ಶಂಕರಃ ।
ಕದಾಚಿತ್ಪರ್ಯಟನ್ಪೃಥ್ವೀಂ ನರ್ಮದಾತಟಮಾಶ್ರಿತಃ ॥ ೬ ॥
ದಶಾಶ್ವಮೇಧಿಕಂ ತೀರ್ಥಂ ದೃಷ್ಟ್ವಾ ದೇವೋ ಮಹೇಶ್ವರಃ ।
ತೀರ್ಥಂ ಪ್ರತ್ಯಂಜಲಿಂ ಬದ್ಧ್ವಾ ನಮಶ್ಚಕ್ರೇ ತ್ರಿಲೋಚನಃ ॥ ೭ ॥
ಕೃತಾಂಜಲಿಪುಟಂ ದೇವಂ ದೃಷ್ಟ್ವಾ ದೇವೀದಮಬ್ರವೀತ್ ॥ ೮ ॥

ದೇವ್ಯುವಾಚ :—

ಕಿಮೇತದ್ದೇವ ದೇವೇಶ ಚರಾಚರನಮಸ್ಕೃತ ।
ಪ್ರಹ್ವ ನಮ್ರಾಂಜಲಿಂ ಬಧ್ವಾ ಭಕ್ತ್ಯಾ ಪರಮಯಾ ಯುತಃ ॥ ೯ ॥
ಏತದಾಶ್ಚರ್ಯಮತುಲಂ ಸರ್ವಂ ಕಥಯ ಮೇ ಪ್ರಭೋ ॥ ೧೦ ॥

ಈಶ್ವರ ಉವಾಚ :—

ಪ್ರತ್ಯಕ್ಷಂ ಪಶ್ಯ ತೀರ್ಥಸ್ಯ ಫಲಂ ಮಾ ವಿಸ್ಮಿತಾ ಭವ ।
ವಿಯತ್ಸ್ಥಾ ಮೇ ಭುವಿಸ್ಥಸ್ಯ ಕ್ಷಣಂ ದೇವಿ ಸ್ಥಿರಾಭವ ॥ ೧೧ ॥

---

೫. ಮಾರ್ಕಂಡೇಯನು ಹೇಳುತ್ತಾನೆ:—ಈ ಆಶ್ಚರ್ಯ ವಿಷಯವನ್ನು ಹಿಂದೆ ಗೌರಿಯು ಮಹೇಶ್ವರನನ್ನು ಪ್ರಶ್ನಿಸಿರುವಳು. ಅದನ್ನು ಕೇಳುತ್ತಿರುವ ನಿಪುಣನಾದ ನಿನಗೆ ಹೇಳುತ್ತೇನೆ.

೬. ಹಿಂದೆ ಒಂದಾನೊಂದು ದಿನ ಮಹೇಶನು ವೃಷಭವನ್ನೇರಿ ಪಾರ್ವತಿಯೊಡನೆ ಭೂಮಿಯಲ್ಲಿ ಸಂಚರಿಸುತ್ತ ನರ್ಮದಾ ನದಿಯ ದಡಕ್ಕೆ ಬಂದನು.

೭. ಅವನು ಅಲ್ಲಿ ದಶಾಶ್ವಮೇಧಿಕ ತೀರ್ಥವನ್ನು ನೋಡಿ ಕೈಮುಗಿದುಕೊಂಡು ನಮಸ್ಕಾರಮಾಡಿದನು.

೮. ಪಾರ್ವತಿಯು ಕೈಮುಗಿದುಕೊಂಡಿರುವ ಶಂಕರನನ್ನು ಕುರಿತು ಹೀಗೆಂದಳು.

೯. ದೇವಿಯು ಹೇಳುತ್ತಾಳೆ:—ಚರಾಚರಪ್ರಪಂಚದಿಂದ ವಂದಿತನಾದ ಶಂಕರನೆ! ನೀನು ಅತಿ ಭಕ್ತಿಯಿಂದ ಕೈಮುಗಿದುಕೊಂಡು ನಿಂತಿರುವೆಯೇಕೆ?

೧೦. ಇದರಿಂದ ನನಗೆ ಬಹಳ ಆಶ್ಚರ್ಯವುಂಟಾಗಿದೆ. ಎಲ್ಲವನ್ನೂ ನನಗೆ ವಿಸ್ತಾರವಾಗಿ ಹೇಳು.

೧೧. ಈಶ್ವರನು ಹೇಳುತ್ತಾನೆ:—ದೇವಿ! ಆಕಾಶದಲ್ಲಿರುವ ನೀನು ಭೂಮಿಯಲ್ಲಿರುವ ಈ ತೀರ್ಥದ ಮಾಹಾತ್ಮ್ಯೆಯನ್ನು ನೋಡಿ ಆಶ್ಚರ್ಯಗೊಳ್ಳಬೇಡ. ಒಂದು ಕ್ಷಣಕಾಲ ಸ್ಥೈರ್ಯವನ್ನು ಹೊಂದು.

ಏವಮುಕ್ತ್ವಾ ತು ದೇವೇಶೋ ಗೌರವರ್ಣೋ ದ್ವಿಜೋಽಭವತ್ ।
ಕ್ಷುತ್ಕ್ಷಾಮಕಂಠೋ ಜಟಿಲಃ ಶುಷ್ಕೋ ಧಮನಿಸಂತತಃ ॥ ೧೨ ॥
ಉಪವಿಶ್ಯ ಭುವಃ ಪೃಷ್ಠೇ ಸುಸ್ವರಂ ಮಂತ್ರಮುಚ್ಚರನ್ ।
ಕ್ರಮಪ್ರಿಯೋ ಮಹಾದೇವೋ ಮಾಧುರ್ಯೇಣ ಪ್ರಮೋದಯನ್॥೧೩॥
ಶ್ರುತ್ವಾ ತಾಂ ಮಧುರಾಂ ವಾಣೀಂ ಸ್ವಯಂ ದೇವೇನ ನಿರ್ಮಿತಾಂ ।
ಸಂಭ್ರಾಂತಾ ಬ್ರಾಹ್ಮಣಾಃ ಸರ್ವೇ ಸ್ನಾತುಂ ಯೇ ತತ್ರ ಚಾಗತಾಃ ॥ ೧೪ ॥
ನಿತ್ಯಕ್ರಿಯಾ ಚ ಸರ್ವೇಷಾಂ ವಿಸ್ಮೃತಾ ಶ್ರುತಿವಿಭ್ರಮಾತ್ ।
ತಂ ದೃಷ್ಟ್ವಾ ಪಠಮಾನಂ ತು ಕ್ಷುತ್ಪಿಪಾಸಾಭಿಪೀಡಿತಂ ॥ ೧೫ ॥
ದ್ವಿಜೋಽನ್ಯಮಂತ್ರಯತ್ಕಶ್ಚಿದ್ಭಕ್ತ್ಯಾ ತಂ ಭೋಜನಾಯ ವೈ ।
ಪ್ರಸಾದಃ ಕ್ರಿಯತಾಂ ಬ್ರಹ್ಮನ್ಭೋಜನಾಯ ಗೃಹೇ ಮಮ ॥ ೧೬ ॥
ಅದ್ಯ ಮೇ ಸಫಲಂ ಜನ್ಮ ಹ್ಯದ್ಯಮೇ ಸಫಲಾಃ ಕ್ರಿಯಾಃ ।
ಸರ್ವಾನ್ಕಾಮಾನ್ಪ್ರದಾಸ್ಯಂತಿ ಪ್ರೀತಾ ಮೇಽದ್ಯ ಪಿತಾಮಹಾಃ ॥ ೧೭ ॥
ತ್ವಯಿ ಭುಕ್ತೇ ದ್ವಿಜಶ್ರೇಷ್ಠ ಪ್ರಸೀದ ತ್ವಂ ಧ್ರುವಂ ಮಮ ।
ಏವಮುಕ್ತೋ ಮಹಾದೇವೋ ದ್ವಿಜರೂಪಧರಸ್ತದಾ ॥ ೧೮ ॥
ಪ್ರಹಸ್ಯ ಪ್ರತ್ಯುವಾಚೇದಂ ಬ್ರಾಹ್ಮಣಂ ಶ್ಲಕ್ಷ್ಣಯಾ ಗಿರಾ ।
ಮಯಾ ವರ್ಷಸಹಸ್ರಂ ತು ನಿರಾಹಾರಂ ತಪಃ ಕೃತಂ ॥ ೧೯ ॥

---

೧೨–೧೩. ಶಂಕರನು ಹೀಗೆ ಹೇಳಿ ಹಸಿವಿನಿಂದ ಒಣಗಿದ ಕಂಠವುಳ್ಳವನೂ, ಜಟಾಧಾರಿಯೂ, ನಾಡಿಗಳಿಂದ ಮಾತ್ರ ವ್ಯಾಪ್ತನೂ, ಶ್ವೇತವರ್ಣನೂ ಆದ ಬ್ರಾಹ್ಮಣನಾಗಿ ಭೂಮಿಯಮೇಲೆ ಕುಳಿತು ಇಂಪಾದ ಧ್ವನಿಯಿಂದ ಮಂತ್ರವನ್ನು ಉಚ್ಚರಿಸುತ್ತ ಎಲ್ಲರನ್ನೂ ಸಂತೋಷಗೊಳಿಸುತ್ತಿದ್ದನು.

೧೪–೧೭. ಶಂಕರನ ಮಧುರವಾಣಿಯನ್ನು ಕೇಳಿ ಅಲ್ಲಿಗೆ ಸ್ನಾನಮಾಡಲು ಬಂದ ಬ್ರಾಹ್ಮಣರೆಲ್ಲರೂ ಭ್ರಾಂತರಾಗಿ ತಮ್ಮ ನಿತ್ಯಕರ್ಮಗಳನ್ನು ಮರೆತರು. ಅವರಲ್ಲಿ ಒಬ್ಬ ಬ್ರಾಹ್ಮಣನು ವೇದವನ್ನುಚ್ಚರಿಸುತ್ತಿರುವ ಹಸಿವು ಬಾಯಾರಿಕೆಯಿಂದ ಪೀಡಿತನಾದ ಆ ಬ್ರಾಹ್ಮಣನನ್ನು ಕಂಡು ಭಕ್ತಿಯಿಂದ, "ದ್ವಿಜನೆ! ಅನುಗ್ರಹಮಾಡಿ ನನ್ನ ಮನೆಗೆ ಭೋಜನಕ್ಕೆ ಬಾ" ಎಂದು ಕರೆದನು.

೧೭–೨೦. "ದ್ವಿಜವರ್ಯನೆ! ನೀನು ನಮ್ಮ ಮನೆಯಲ್ಲಿ ಭುಜಿಸಿದರೆ ನನ್ನ ಜನ್ಮವೂ ಕರ್ಮಗಳೂ ಸಫಲವಾಗುವುವು. ಈ ದಿನ ನನ್ನ ಪಿತಾಮಹರು ಸಂತುಷ್ಟರಾಗಿ ಇಷ್ಟಾರ್ಥಗಳನ್ನು ನೀಡುವರು. ಆದ್ದರಿಂದ ನಿಶ್ಚಯವಾಗಿಯೂ ನನ್ನಲ್ಲಿ ಅನುಗ್ರಹಮಾಡು." ಬ್ರಾಹ್ಮಣನು ಹೀಗೆನ್ನಲು ದ್ವಿಜರೂಪಿಯಾದ ಶಂಕರನು ನಕ್ಕು ಮೃದುನುಡಿಯಿಂದ ಹೀಗೆಂದನು. "ನಾನು ಸಾವಿರ ವರ್ಷ

ಇದಾನೀಂ ತು ಗೃಹೇ ತಸ್ಯ ಕರಿಷ್ಯೇ ದ್ವಿಜಸತ್ತಮ ।
ದಶಭಿರ್ವಾಜಿಮೇಧೈಶ್ಚ ಯೇನೇಷ್ಟಂ ಪಾರಣಂ ತಥಾ ॥ ೨೦ ॥
ಇತ್ಯುಕ್ತೋ ದೇವದೇವೇನ ಬ್ರಾಹ್ಮಣೋ ವಿಸ್ಮಯಾನ್ವಿತಃ ।
ಉತ್ತಮಾಂಗಂ ವಿಧೂನ್ವನ್ವೈ ಜಗಾಮ ಸ್ವಗೃಹಂ ಪ್ರತಿ ॥ ೨೧ ॥
ಏವಂ ತೇ ಬಹವೋ ವಿಪ್ರಾಃ ಪ್ರತ್ಯಾಖ್ಯಾತೇ ನಿಮಂತ್ರಣೇ ।
ಪುರಾಣಾರ್ಥಮಜಾನಂತೋ ನಾಸ್ತಿಕಾ ಬಹವೋ ಗತಾಃ ॥ ೨೨ ॥
ಅಥ ಕಶ್ಚಿದ್ದ್ವಿಜೋ ವಿದ್ವಾನ್ಪುರಾಣಾರ್ಥಸ್ಯ ತತ್ತ್ವವಿತ್ ।
ದೇವಂ ನಿಮಂತ್ರಯಾಮಾಸ ದ್ವಿಜರೂಪಧರಂ ಶಿವಂ ॥ ೨೩ ॥
ತಥೈವ ಸೋಽಪಿ ದೇವೇನ ಪ್ರೋಕ್ತಃ ಸಪ್ರಾಹ ತಂ ಪುನಃ ।
ಮನಸಾ ಚಿಂತಯಿತ್ವಾ ತು ಪುರಾಣೋಕ್ತಂ ದ್ವಿಜೋತ್ತಮಃ ॥ ೨೪ ॥
ಸ್ಮೃತಿವೇದಪುರಾಣೇಷು ಯದುಕ್ತಂ ತತ್ತಥಾ ಭವೇತ್ ।
ಇತಿ ನಿಶ್ಚಿತ್ಯ ತಂ ವಿಪ್ರಮುವಾಚ ಪ್ರಹಸನ್ನಿವ ॥ ೨೫ ॥
ಭೋ ಭೋ ವಿಪ್ರ ಪ್ರತೀಕ್ಷಸ್ವ ಯಾವದಾಗಮನಂ ಪುನಃ ।
ಇತ್ಯುಕ್ತ್ವಾ ತು ದ್ವಿಜೋ ಗತ್ವಾ ದಶಾಶ್ವಮೇಧಿಕಂ ಪರಂ ॥ ೨೬ ॥
ಸ್ನಾನಂ ಮಹಾಲಂಭನಾದಿ ಕೃತಂ ತೇನ ದ್ವಿಜನ್ಮನಾ ।
ಜಪಂ ಶ್ರಾದ್ಧಂ ತಥಾ ದಾನಂ ಕೃತ್ವಾ ಧರ್ಮಾನುಸಾರತಃ ॥ ೨೭ ॥

---

ಕಾಲ ಉಪವಾಸದಿಂದ ತಪಸ್ಸನ್ನು ಮಾಡಿರುವೆನು. ಈಗ ಹತ್ತು ಅಶ್ವಮೇಧ ಯಾಗ ಮಾಡಿದವನ ಮನೆಯಲ್ಲಿ ಮಾತ್ರ ಪಾರಣೆಮಾಡುವೆನು.''

೨೧. ಶಂಕರನು ಹೀಗೆನ್ನಲು ಬ್ರಾಹ್ಮಣನು ಆಶ್ಚರ್ಯದಿಂದ ತಲೆಯನ್ನು ಅಲ್ಲಾಡಿಸುತ್ತ ತನ್ನ ಮನೆಗೆ ಹೋದನು.

೨೨. ಹೀಗೆ ಅವನು ಅನೇಕ ಮಂದಿ ಬ್ರಾಹ್ಮಣರ ನಿಮಂತ್ರಣವನ್ನು ತಿರಸ್ಕರಿಸಲು ಪುರಾಣದ ಅರ್ಥವನ್ನರಿಯದ ನಾಸ್ತಿಕರಾದ ಅವರೆಲ್ಲರೂ ಹೊರಟುಹೋದರು.

೨೩. ಬಳಿಕ ಪುರಾಣಾರ್ಥದ ತತ್ತ್ವವನ್ನರಿತ ವಿದ್ವಾಂಸನಾದ ಒಬ್ಬ ಬ್ರಾಹ್ಮಣನು ದ್ವಿಜರೂಪನಾದ ಆ ಶಿವನನ್ನು ನಿಮಂತ್ರಿಸಿದನು.

೨೪–೨೫. ಶಂಕರನು ಹಿಂದೆ ಹೇಳಿದಂತೆಯೇ ಹೇಳಿದನು. ಆ ಬ್ರಾಹ್ಮಣೋತ್ತಮನು ಪುರಾಣೋಕ್ತ ವಿಷಯವನ್ನಾಲೋಚಿಸಿ ಸ್ಮೃತಿ ವೇದ ಪುರಾಣಗಳಲ್ಲಿ ಹೇಗೆ ಹೇಳಿರುವುದೋ ಹಾಗೆಯೇ ಆಗುವುದೆಂದು ನಿಶ್ಚಯಿಸಿ ನಗುತ್ತ ಶಂಕರನನ್ನು ಕುರಿತು ಇಂತೆಂದನು.

೨೬–೨೮. ''ಎಲೈ ಬ್ರಾಹ್ಮಣನೆ! ನಾನು ಹಿಂತಿರುಗಿ ಬರುವವರೆಗೆ ನನ್ನನ್ನು ನಿರೀಕ್ಷಿಸುತ್ತಿರು'' ಎಂದು ಹೇಳಿ ದಶಾಶ್ವಮೇಧಿಕ ಕ್ಷೇತ್ರಕ್ಕೆ ಹೋಗಿ

ಸಂಕಲ್ಪ್ಯ ಕಪಿಲಾಂ ತತ್ರ ಪುರಾಣೋಕ್ತವಿಧಾನತಃ ।
ಸಮಾಯಾತ್ತ್ವರಿತಂ ತತ್ರ ಯತ್ರಾಽಸೌ ತಿಷ್ಠತೇ ದ್ವಿಜಃ ॥ ೨೮ ॥
ಅಥಾಽಽಗತ್ಯ ದ್ವಿಜಂ ಪ್ರಾಹ ವಾಜಿಮೇಧಃ ಕೃತೋ ಮಯಾ ।
ಉತ್ತಿಷ್ಠ ಮೇ ಗೃಹಂ ರಮ್ಯಂ ಭೋಜನಾರ್ಥಂ ಹಿ ಗಮ್ಯತಾಂ ॥ ೨೯ ॥
ಇತ್ಯುಕ್ತಃ ಶಂಕರಸ್ತೇನ ಬ್ರಾಹ್ಮಣೇನಾಽತಿವಿಸ್ಮಿತಃ ।
ಉವಾಚ ಬ್ರಾಹ್ಮಣಂ ದೇವ ಇದಾನೀಂ ತ್ವಮಿತೋ ಗತಃ ॥ ೩೦ ॥
ದ್ವಿಜವರ್ಯ ಕಥಂ ಚೇಷ್ಟಾ ದಶ ಯಜ್ಞಾ ಮಹಾಧನಾಃ ॥ ೩೧ ॥

ದ್ವಿಜ ಉವಾಚ:—

ನ ವಿಚಾರಸ್ತ್ವಯಾ ಕಾರ್ಯಃ ಕೃತಾ ಯಜ್ಞಾ ನ ಸಂಶಯಃ ।
ಯದಿ ವೇದಾಃ ಪ್ರಮಾಣಂ ತೇ ಭುವಿ ದೇವಾ ದ್ವಿಜಾಸ್ತಥಾ ॥ ೩೨ ॥
ದಶಾಶ್ವಮೇಧಿಕಂ ತೀರ್ಥಂ ತಥಾ ಸತ್ಯಂ ದ್ವಿಜೋತ್ತಮ ।
ಯದಿ ವೇದಪುರಾಣೋಕ್ತಂ ವಾಕ್ಯಂ ನಿಃಸಂಶಯಂ ಭವೇತ್ ॥ ೩೩ ॥
ತದಾ ಪ್ರಾಪ್ತಂ ಮಯಾ ಸರ್ವಂ ನಾಽತ್ರ ಕಾರ್ಯಾ ವಿಚಾರಣಾ ।
ಏವಮುಕ್ತಸ್ತು ದೇವೇಶ ಆಸ್ತಿಕ್ಯಂ ತಸ್ಯ ಚೇತಸಃ ॥ ೩೪ ॥

---

ಮಿಂದು ಮಹಾಲಂಭನಾದಿಗಳನ್ನು ಮಾಡಿ ಧರ್ಮದಂತೆ ಜಪ, ಶ್ರಾದ್ಧ, ದಾನಾದಿಗಳನ್ನು ಪೂರಯಿಸಿ ಪುರಾಣೋಕ್ತವಿಧಿಯಿಂದ ಕಪಿಲೆಯನ್ನು ದಾನಮಾಡುವುದಾಗಿ ಸಂಕಲ್ಪಿಸಿ ಆ ಶಂಕರನೆಡೆಗೆ ಶೀಘ್ರವಾಗಿ ಬಂದನು.

೨೯. ಅಲ್ಲಿಗೆ ಬಂದು, "ಅಯ್ಯಾ ವಿಪ್ರನೇ! ನಾನು ಅಶ್ವಮೇಧಯಾಗವನ್ನು ಮಾಡಿದ್ದೇನೆ; ಏಳು. ರಮ್ಯವಾದ ನನ್ನ ಮನೆಗೆ ಭೋಜನಕ್ಕಾಗಿ ಹೋಗೋಣ" ಎಂದು ಶಂಕರನಿಗೆ ಹೇಳಿದನು.

೩೦–೩೧. ಅವನು ಹೀಗೆ ಹೇಳಿದ ಕೂಡಲೆ ಆಶ್ಚರ್ಯಗೊಂಡ ಶಂಕರನು ಆ ಬ್ರಾಹ್ಮಣನನ್ನು ಕುರಿತು, "ಅಯ್ಯಾ! ನೀನು ಈಗಲೇ ಇಲ್ಲಿಂದ ಹೋಗಿರುವೆ. ಬಹುಧನ ಸಾಧ್ಯವಾದ ಹತ್ತು ಅಶ್ವಮೇಧಯಾಗಗಳನ್ನು ಹೇಗೆ ಮಾಡಿದೆ?" ಎಂದು ಪ್ರಶ್ನಿಸಿದನು.

೩೨–೩೪. ದ್ವಿಜನು ಹೇಳುತ್ತಾನೆ:—ನಾನು ನಿಶ್ಚಯವಾಗಿಯೂ ಯಜ್ಞಗಳನ್ನು ಮಾಡಿದ್ದೇನೆ. ನೀನು ವಿಚಾರಮಾಡಬೇಡ. ನಿನಗೆ ವೇದಗಳೂ, ದೇವತೆಗಳೂ, ಬ್ರಾಹ್ಮಣರೂ ಪ್ರಮಾಣವಾದರೆ, ದಶಾಶ್ವಮೇಧತೀರ್ಥವು ಸತ್ಯವಾದರೆ, ವೇದ ಪುರಾಣಗಳ ವಾಕ್ಯವು ನಿಶ್ಚಯವಾಗಿದ್ದರೆ ನಾನು ಎಲ್ಲವನ್ನೂ ಮಾಡಿದ್ದೇನೆ. ವಿಚಾರಮಾಡಬೇಕಾಗಿಲ್ಲ. ಹೀಗೆ ಆ ಬ್ರಾಹ್ಮಣನು ಹೇಳಲು ಶಂಕರನು ಅವನ ಮನಸ್ಸಿನ ಆಸ್ತಿಕ್ಯವನ್ನು ಬಹುವಾಗಿ ವಿಮರ್ಶಿಸಿ ಯಾವ

ವಿಮೃಶ್ಯ ಬಹುಭಿಃ ಕಿಂಚಿದುತ್ತರಂ ನ ಪ್ರಪದ್ಯತ ।
ಜಗಾಮ ತದ್ಗೃಹಂ ರಮ್ಯಂ ಪಠನ್ ಬ್ರಹ್ಮ ಸನಾತನಂ ॥ ೩೫ ॥
ಸಂಪ್ರಾಪ್ತಂ ತಂ ದ್ವಿಜಂ ಭಕ್ತ್ಯಾ ಪಾದ್ಯಾರ್ಘ್ಯೇಣ ಸಮರ್ಚಯತ್ ।
ಷಡ್ರಸಂ ಭೋಜನಂ ತೇನ ದತ್ತಂ ಪಶ್ಚಾದ್ಯಥಾವಿಧಿ ॥ ೩೬ ॥
ತತೋ ಭುಕ್ತೇ ಮಹಾದೇವೇ ಸರ್ವದೇವಮಯೇ ಶಿವೇ ।
ಪುಷ್ಪವೃಷ್ಟಿಃ ಪಪಾತಾಶು ಗಗನಾತ್ತಸ್ಯ ಮೂರ್ಧನಿ ।
ತಸ್ಯಾಸ್ತಿಕ್ಯಂ ತು ಸಂಲಕ್ಷ್ಯ ತುಷ್ಟಃ ಪ್ರೋವಾಚ ಶಂಕರಃ ॥ ೩೭ ॥

ಈಶ್ವರ ಉವಾಚ :—

ಕಿಂ ತೇಽದ್ಯ ಕ್ರಿಯತಾಂ ಬ್ರೂಹಿ ವರದೋಽಹಂ ದ್ವಿಜೋತ್ತಮ ।
ಅದೇಯಮಪಿ ದಾಸ್ಯಾಮಿ ಏಕಚಿತ್ತಸ್ಯ ತೇ ಧ್ರುವಂ ॥ ೩೮ ॥

ಬ್ರಾಹ್ಮಣ ಉವಾಚ :—

ಯದಿ ಪ್ರೀತೋಽಸಿ ಮೇ ದೇವ ಯದಿ ದೇಯೋ ವರೋ ಮಮ ।
ಅಸ್ಮಿಂಸ್ತೀರ್ಥೇ ಮಹಾದೇವ ಸ್ಥಾತವ್ಯಂ ಸರ್ವದೈವ ಹಿ ॥ ೩೯ ॥
ಉಪಕಾರಾಯ ದೇವೇಶ ಏಷ ಮೇ ವರ ಉತ್ತಮಃ ।
ಏವಮುಕ್ತಸ್ತು ದೇವೇನ ಆರುರೋಹ ದ್ವಿಜೋತ್ತಮಃ ॥ ೪೦ ॥
ಗಂಧರ್ವಾಪ್ಸರಃಸಂಬಾಧಂ ವಿಮಾನಂ ಸಾರ್ವಕಾಮಿಕಂ ।
ಪೂಜ್ಯಮಾನೋ ಗತಸ್ತತ್ರ ಯತ್ರ ಲೋಕಾ ನಿರಾಮಯಾಃ ॥ ೪೧ ॥

---

ಉತ್ತರವನ್ನೂ ಕೊಡದೆ ವೇದವನ್ನು ಪಠಿಸುತ್ತ ರಮ್ಯವಾದ ಅವನ ಮನೆಗೆ ಹೋದನು.

೩೬. ಆ ಬ್ರಾಹ್ಮಣನು ಮನೆಗೆ ಬಂದ ಶಂಕರನನ್ನು ಪಾದ್ಯಾರ್ಘ್ಯಗಳಿಂದ ಪೂಜಿಸಿ ಷಡ್ರಸಭೋಜನವನ್ನಿತ್ತನು.

೩೭. ಅನಂತರ ಸಕಲದೇವಮಯನಾದ ಶಂಕರನು ಭುಜಿಸಲು ಆಕಾಶದಿಂದ ಅವನ ತಲೆಯಮೇಲೆ ಪುಷ್ಪವೃಷ್ಟಿಯಾಯಿತು. ಶಂಕರನು ಅವನ ಆಸ್ತಿಕ್ಯವನ್ನು ಕಂಡು ಸಂತೋಷಗೊಂಡು ಇಂತೆಂದನು.

೩೮. ಈಶ್ವರನು ಹೇಳುತ್ತಾನೆ:—ದ್ವಿಜವರ್ಯನೆ! ನಾನು ನಿನಗೀಗ ಏನನ್ನು ಮಾಡಲಿ. ಚಿತ್ತೈಕಾಗ್ರ್ಯವುಳ್ಳ ನಿನಗೆ ಕೊಡಬಾರದಾದ ವರವನ್ನಾದರೂ ಕೊಡುವೆನು.

೩೯—೪೧. ಬ್ರಾಹ್ಮಣನು ಹೇಳುತ್ತಾನೆ:—ಮಹಾದೇವ! ನೀನು ಸಂತುಷ್ಟನಾಗಿದ್ದರೆ, ವರವನ್ನು ಕೊಡುವುದಾದರೆ ಜನರ ಉಪಕಾರಕ್ಕಾಗಿ ಯಾವಾಗಲೂ ಈ ತೀರ್ಥದಲ್ಲಿ ನೆಲೆಸು. ಇದೇ ನನ್ನ ಉತ್ತಮವಾದ ವರವಾಗಿದೆ. ಶಂಕರನು ಹಾಗೆಯೇ ಆಗಲೆಂದು ಹೇಳಲು ಆ ಬ್ರಾಹ್ಮಣನು ಗಂಧರ್ವಾಪ್ಸರರಿಂದ ತುಂಬಿ ಸ್ವೇಚ್ಛೆಯಾಗಿ ಹೋಗುವ ವಿಮಾನವನ್ನೇರಿ ದುಃಖರಹಿತವಾದ ಲೋಕಕ್ಕೆ ತೆರಳಿದನು.

ಮಾರ್ಕಂಡೇಯ ಉವಾಚ:—

ಏತದಾಶ್ಚರ್ಯಮತುಲಂ ದೃಷ್ಟ್ವಾ ದೇವೀ ಸುವಿಸ್ಮಿತಾ ।
ವಿಸ್ಮಯೋತ್ಫುಲ್ಲನಯನಾ ಪುನಃ ಪಪ್ರಚ್ಛ ಶಂಕರಂ ॥ ೪೨ ॥

ಪಾರ್ವತ್ಯುವಾಚ:—

ಕಥಮೇತದ್ಭವೇತ್ಸತ್ಯಂ ಯತ್ರೇದಮಸಮಂಜಸಂ ।
ಸ್ನಾನಂ ಕುರ್ವಂತಿ ಬಹವೋ ಲೋಕಾಹ್ಯತ್ರ ಮಹೇಶ್ವರ ॥ ೪೩ ॥
ತೇಷಾಂ ತು ಸ್ವರ್ಗಗಮನಂ ಯಥೈಷ ಸ್ವರ್ಗತಿಂ ಗತಃ ।
ಕಥಮೇತತ್ಸಮಾಚಕ್ಷ್ವ ವಿಸ್ಮಯಃ ಪರಮೋ ಮಮ ॥ ೪೪ ॥
ಏತಚ್ಛ್ರುತ್ವಾ ತು ದೇವೇಶಃ ಪ್ರಹಸನ್ಪ್ರತ್ಯುವಾಚ ತಾಂ ।
ವೇದವಾಕ್ಯೇ ಪುರಾಣಾರ್ಥೇ ಸ್ಮೃತ್ಯರ್ಥೇ ದ್ವಿಜಭಾಷಿತೇ ॥ ೪೫ ॥
ವಿಸ್ಮಯೋ ಹಿ ನ ಕರ್ತವ್ಯೋ ಹ್ಯನುಮಾನಂ ಹಿ ತತ್ತಥಾ ।
ಅಸಂಭಾವ್ಯಂ ಹಿ ಲೋಕಾನಾಂ ಪುರಾಣೇ ಯತ್ಪ್ರಗೀಯತೇ ॥ ೪೬ ॥
ಯದಿ ಪಕ್ಷಂ ಪುರಸ್ಕೃತ್ಯ ಲೋಕಾಃ ಕುರ್ವಂತಿ ಪಾರ್ವತಿ ।
ತಸ್ಮಾನ್ನ ಸಿದ್ಧಿರೇತೇಷಾಂ ಭವತ್ಯೇಕೋ ನ ವಿಸ್ಮಯಃ ॥ ೪೭ ॥
ನಾಸ್ತಿಕಾ ಭಿನ್ನಮರ್ಯಾದಾ ಯೇ ನಿಶ್ಚಯಬಹಿಷ್ಕೃತಾಃ ।
ತೇಷಾಂ ಸಿದ್ಧಿರ್ನವಿದ್ಯೇತ ಆಸ್ತಿಕ್ಯಾದ್ಭವತೇ ಧ್ರುವಂ ॥ ೪೮ ॥

---

೪೨. ಮಾರ್ಕಂಡೇಯನು ಹೇಳುತ್ತಾನೆ:— ಈ ಆಶ್ಚರ್ಯವನ್ನು ನೋಡಿ ವಿಸ್ಮಯಗೊಂಡ ಪಾರ್ವತಿಯು ಮರಳಿ ಶಂಕರನನ್ನು ಹೀಗೆ ಪ್ರಶ್ನಿಸಿದಳು.

೪೩. ಪಾರ್ವತಿಯು ಹೇಳುತ್ತಾಳೆ:— ಶಂಕರ! ಈ ಅಸಮಂಜಸ ಕಾರ್ಯವು ಹೇಗೆ ಸತ್ಯವಾದೀತು. ಇಲ್ಲಿ ಅನೇಕ ಜನರು ಸ್ನಾನಮಾಡುತ್ತಾರೆ.

೪೪. ಇವನು ಸ್ವರ್ಗಕ್ಕೆ ಹೋದಂತೆ ಅವರು ಏಕೆ ಸ್ವರ್ಗಕ್ಕೆ ಹೋಗುವುದಿಲ್ಲ? ಇದು ಹೇಗೆ? ನನಗೆ ಹೇಳು ಅತ್ಯಂತ ಆಶ್ಚರ್ಯವುಂಟಾಗಿದೆ.

೪೫–೪೬. ಶಂಕರನು ಇದನ್ನು ಕೇಳಿ ನಗುತ್ತ ಆ ದೇವಿಯನ್ನು ಕುರಿತು ಇಂತೆಂದನು. "ವೇದವಾಕ್ಯದಲ್ಲಿಯೂ, ಪುರಾಣಸ್ಮೃತ್ಯರ್ಥಗಳಲ್ಲಿಯೂ, ಬ್ರಾಹ್ಮಣರ ಮಾತಿನಲ್ಲಿಯೂ ಆಶ್ಚರ್ಯಪಡಬಾರದು. ಅದು ಪುರಾಣಪ್ರೋಕ್ತವಾಗಿರುವುದರಿಂದ ಜನರಿಗೆ ಅಸಂಭಾವ್ಯವಾದುದಲ್ಲ.

೪೭. ಜನರು ಸಂದೇಹದಿಂದ ಇಲ್ಲಿ ಕಾರ್ಯವನ್ನೆಸಗುವುದರಿಂದ ಅವರಿಗೆ ಸಿದ್ಧಿಯಾಗುವುದಿಲ್ಲ. ಇದು ಆಶ್ಚರ್ಯವೂ ಅಲ್ಲ.

೪೮. ನಾಸ್ತಿಕರೂ, ಮರ್ಯಾದೆಯನ್ನುಲ್ಲಂಘಿಸಿದವರೂ, ನಿಶ್ಚಯವಿಲ್ಲದವರೂ ಆದವರಿಗೆ ಸಿದ್ಧಿಯಾಗುವುದಿಲ್ಲ. ಆಸ್ತಿಕ್ಯದಿಂದ ನಿಶ್ಚಯವಾಗಿಯೂ ಸಿದ್ಧಿಯಾಗುವುದು.

ಶ್ರುತ್ವಾಖ್ಯಾನಮಿದಂ ದೇವೀ ವವಂದೇ ತೀರ್ಥಮುತ್ತಮಂ ।
ಸರ್ವಪಾಪಹರಂ ಪುಣ್ಯಂ ನರ್ಮದಾಯಾಂ ವ್ಯವಸ್ಥಿತಂ ॥ ೪೯ ॥

ಮಾರ್ಕಂಡೇಯ ಉವಾಚ:—

ದಶಾಶ್ವಮೇಧಂ ರಾಜೇಂದ್ರ ಸರ್ವತೀರ್ಥೋತ್ತಮೋತ್ತಮಂ ।
ತೀರ್ಥಂ ಸರ್ವಗುಣೋಪೇತಂ ಮಹಾಪಾತಕ ನಾಶನಂ ॥ ೫೦ ॥
ತತ್ರಾಗತಾ ಮಹಾಭಾಗಾ ಸ್ನಾತುಕಾಮಾ ಸರಸ್ವತೀ ।
ಪುಣ್ಯಾನಾಂ ಪರಮಾ ಪುಣ್ಯಾ ನದೀನಾಮುತ್ತಮಾ ನದೀ ॥ ೫೧ ॥
ನಾಮಮಾತ್ರೇಣ ಯಸ್ಯಾಸ್ತು ಸರ್ವಪಾಪೈಃ ಪ್ರಮುಚ್ಯತೇ ।
ಸ್ನಾತಾಸ್ತತ್ರ ದಿವಂ ಯಾಂತಿ ಯೇ ಮೃತಾಸ್ತೇಽಪುನರ್ಭವಾಃ ॥ ೫೨ ॥
ದಶಾಶ್ವಮೇಧೇ ಸಾ ರಾಜನ್ನಿಯತಾ ಬ್ರಹ್ಮಚಾರಿಣೀ ।
ಆರಾಧಯಿತ್ವಾ ದೇವೇಶಂ ಪರಂ ನಿರ್ವಾಣಮಾಗತಾ ॥ ೫೩ ॥
ಕಾಲುಷ್ಯಂ ಬ್ರಹ್ಮಸಂಭೂತಾ ಸಂವತ್ಸರಸಮುದ್ಭವಂ ।
ಪ್ರಕ್ಷಾಲಯಿತುಮಾಯಾತಿ ದಶಮ್ಯಾಮಾಶ್ವಿನಸ್ಯ ಚ ॥ ೫೪ ॥
ಉಪೋಷ್ಯ ರಜನೀಂ ತಾಂ ತು ಸಂಪೂಜ್ಯ ತ್ರಿಪುರಾಂತಕಂ ।
ರಾಜನ್ನಿಷ್ಕಲ್ಮಷಾ ಯಾಂತಿ ಶ್ವೋ ಭೂತೇ ಶಾಶ್ವತಂ ಪದಂ ॥ ೫೫ ॥

---

೪೯. ದೇವಿಯು ಈ ಕಥೆಯನ್ನು ಕೇಳಿ ಸರ್ವಪಾಪಪರಿಹಾರಕವೂ, ಪುಣ್ಯಕರವೂ, ನರ್ಮದೆಯಲ್ಲಿರುವುದೂ ಆದ ಆ ಉತ್ತಮವಾದ ತೀರ್ಥವನ್ನು ವಂದಿಸಿದಳು.

೫೦. ಮಾರ್ಕಂಡೇಯನು ಹೇಳುತ್ತಾನೆ:—ಮಹಾರಾಜ! ದಶಾಶ್ವಮೇಧ ಕ್ಷೇತ್ರವು ಸಮಸ್ತ ತೀರ್ಥಗಳಲ್ಲಿ ಉತ್ತಮವೂ, ಸಕಲ ಗುಣಗಳಿಂದ ಕೂಡಿರುವುದೂ, ಮಹಾಪಾತಕವನ್ನು ಪರಿಹರಿಸುವುದೂ ಆಗಿರುವುದು.

೫೧. ಮಹಾಭಾಗ್ಯವಂತಳೂ, ಅತಿ ಪುಣ್ಯಕರಳೂ, ನದಿಗಳಲ್ಲಿ ಉತ್ತಮಳೂ ಆದ ಸರಸ್ವತೀನದಿಯು ಅಲ್ಲಿಗೆ ಸ್ನಾನಮಾಡಲು ಬಂದಳು.

೫೨. ಆ ನದಿಯ ಹೆಸರಿನಿಂದಲೇ ಮಾನವನು ಸಕಲ ಪಾಪಗಳಿಂದ ಮುಕ್ತನಾಗುವನು. ಅಲ್ಲಿ ಮಿಂದವರು ಸ್ವರ್ಗಕ್ಕೆ ತೆರಳುವರು. ಮಡಿದವರು ಮೋಕ್ಷವನ್ನು ಪಡೆಯುವರು.

೫೩–೫೪. ದೊರೆಯೆ! ಆ ಸರಸ್ವತಿಯು ದಶಾಶ್ವಮೇಧ ಕ್ಷೇತ್ರದಲ್ಲಿ ಜಿತೇಂದ್ರಿಯಳೂ, ಬ್ರಹ್ಮಚಾರಿಣಿಯೂ, ಆಗಿ ಶಂಕರನನ್ನು ಆರಾಧಿಸಿ ಅತ್ಯಂತ ಸುಖವನ್ನು ಪಡೆದಳು. ಬ್ರಹ್ಮನ ಮಗಳಾದ ಅವಳು ಒಂದು ವರ್ಷದ ಪಾಪವನ್ನು ಪರಿಹರಿಸಿಕೊಳ್ಳಲು ಆಶ್ವಿನಮಾಸದ ದಶಮಿದಿನ ಅಲ್ಲಿಗೆ ಬರುವಳು.

೫೫. ಮಹಾರಾಜ! ಜನರು ಆ ದಿನ ರಾತ್ರಿ ಉಪವಾಸ ಮಾಡಿ ಶಂಕರನನ್ನು ಪೂಜಿಸಿ ಬೆಳಗಾಗಲು ಪಾಪರಹಿತರಾಗಿ ಶಾಶ್ವತಸ್ಥಾನವನ್ನು ಪಡೆಯುವರು.

ಯುಧಿಷ್ಠಿರ ಉವಾಚ :—

ಸರಸ್ವತೀ ಮಹಾಪುಣ್ಯಾ ನದೀನಾಮುತ್ತಮಾ ನದೀ ।
ದಶಾಶ್ವಮೇಧಮಾಯಾತಿ ಸ್ನಾತುಂ ಸಂವತ್ಸರೇ ಸದಾ ।
ಕಿಮಾಧಿಕ್ಯಂ ಭವೇತ್ತೀರ್ಥಂ ದಶಮ್ಯಾಂ ತತ್ರ ಶಂಸ ಮೇ ॥ ೫೬ ॥

ಶ್ರೀ ಮಾರ್ಕಂಡೇಯ ಉವಾಚ :—

ರಾಜನ್ನಾಶ್ವಯುಜೇ ಮಾಸಿ ದಶಮ್ಯಾಂ ತದ್ವಿಶಿಷ್ಯತೇ ।
ಪಾರ್ಥಿವೇಷು ಚ ತೀರ್ಥೇ ತು ಸರ್ವೇಷ್ವೇವ ನ ಸಂಶಯಃ ॥ ೫೭ ॥
ದಶಾಶ್ವಮೇಧಿಕೇ ರಾಜನ್ನಿತ್ಯಂ ಹಿ ದಶಮೀ ಶುಭಾ ।
ವಿಶೇಷಾದಾಶ್ವಿನೇ ಶುಕ್ಲಾ ಮಹಾಪಾತಕನಾಶಿನೀ ॥ ೫೮ ॥
ತಸ್ಯಾಂ ಸ್ನಾತ್ವಾರ್ಚಯೇದ್ದೇವಾನುಪವಾಸಪರಾಯಣಃ ।
ಶ್ರಾದ್ಧಂ ಕೃತ್ವಾ ವಿಧಾನೇನ ಪಶ್ಚಾತ್ಸಂಪೂಜಯೇಚ್ಛಿವಂ ॥ ೫೯ ॥
ತತ್ರಸ್ಥಾಂ ಪೂಜಯೇದ್ದೇವೀಂ ಸ್ನಾತುಕಾಮಾಂ ಸರಸ್ವತೀಂ ।
ನಮೋ ನಮಸ್ತೇ ದೇವೇಶಿ ಬ್ರಹ್ಮದೇವಸಮುದ್ಭವೇ ॥ ೬೦ ॥
ಕುರು ಪಾಪಕ್ಷಯಂ ದೇವಿ ಸಂಸಾರಾನ್ಮಾಂ ಸಮುದ್ಧರ ।
ಗಂಧಧೂಪೈಶ್ಚ ಸಂಪೂಜ್ಯ ಹ್ಯರ್ಚಯಿತ್ವಾ ಪುನಃ ಪುನಃ ॥ ೬೧ ॥
ದಶಪ್ರದಕ್ಷಿಣಾ ದತ್ವಾ ಸೂತ್ರೇಣ ಪರಿವೇಷ್ಟಯೇತ್ ।
ಕಪಿಲಾಂ ತು ತತೋ ವಿಪ್ರೇ ದದ್ಯಾದ್ವಿಗತಮತ್ಸರಃ ॥ ೬೨ ॥

---

೫೬. ಯುಧಿಷ್ಠಿರನು ಹೇಳುತ್ತಾನೆ:—ಅತಿ ಪುಣ್ಯಕರಳೂ, ನದಿಗಳಲ್ಲಿ ಉತ್ತಮಳೂ ಆದ ಸರಸ್ವತಿಯು ವರ್ಷಕ್ಕೊಮ್ಮೆ ಅಲ್ಲಿಗೆ ಬರುವಳಷ್ಟೆ. ದಶಮಿ ದಿನ ಅಲ್ಲಿ ಯಾವ ಆಧಿಕ್ಯವುಂಟಾಗುವುದು? ಅದನ್ನು ನನಗೆ ಹೇಳು.

೫೭. ಮಾರ್ಕಂಡೇಯನು ಹೇಳುತ್ತಾನೆ:—ದೊರೆಯೆ! ಆಶ್ವಿನಮಾಸದ ದಶಮಿದಿನ ಭೂಮಿಯಲ್ಲಿರುವ ತೀರ್ಥಗಳಲ್ಲೆಲ್ಲ ಒಂದು ವಿಶೇಷವುಂಟಾಗುವುದು.

೫೮. ದಶಾಶ್ವಮೇಧಿಕತೀರ್ಥದಲ್ಲಿ ದಶಮಿಯು ಶುಭಕರವಾದುದು. ಆಶ್ವಿನ ಶುಕ್ಲ ದಶಮಿಯು ಅತಿಶಯವಾಗಿ ಪಾಪನಾಶಕವಾದುದು.

೫೯. ಆದಿನ ಅಲ್ಲಿ ಮಿಂದು ದೇವತೆಗಳನ್ನರ್ಚಿಸಿ ಉಪವಾಸವನ್ನು ಮಾಡಿ ವಿಧಿಯಂತೆ ಶ್ರಾದ್ಧಗೈದು ಶಿವನನ್ನಾರಾಧಿಸಬೇಕು.

೬೦–೬೧. ಅಲ್ಲಿ ಸ್ನಾನಮಾಡಲಿಚ್ಛಿಸುವವನು, ಸರಸ್ವತಿಯನ್ನು "ಬ್ರಹ್ಮಸುತಳಾದ ಸರಸ್ವತಿಯೆ! ನಿನಗೆ ನಮಸ್ಕಾರವು. ನನ್ನ ಪಾಪವನ್ನು ನಿವಾರಿಸಿ ಸಂಸಾರದಿಂದ ಉದ್ಧರಿಸು" ಎಂಬ ಮಂತ್ರವನ್ನು ಹೇಳಿ ಗಂಧಧೂಪಗಳಿಂದ ಅರ್ಚಿಸಬೇಕು.

೬೨–೬೩. ಹತ್ತು ಪ್ರದಕ್ಷಿಣೆಗಳನ್ನುಮಾಡಿ ಸೂತ್ರವನ್ನು ಸುತ್ತಬೇಕು. ಅನಂತರ ಸಕಲ ಲಕ್ಷಣಗಳಿಂದ ಕೂಡಿರುವುದೂ, ಸಮಸ್ತ ಸಾಮಗ್ರಿಗಳಿಂದ

ಸರ್ವಲಕ್ಷಣಸಂಪನ್ನಾಂ ಸರ್ವೋಪಸ್ಕರಸಂಯುತಾಂ ।
ದತ್ವಾ ವಿಪ್ರಾಯ ಕಪಿಲಾಂ ನ ಶೋಚತಿ ಕೃತಾಕೃತೇ ॥ ೬೩ ॥
ಪಶ್ಚಾಜ್ಜಾಗರಣಂ ಕುರ್ಯಾದ್ಘೃತೇನೋಜ್ಜ್ವಾಲ್ಯ ದೀಪಕಂ ।
ಪುರಾಣಪಠನೇನೈವ ನೃತ್ಯಗೀತವಿವಾದನೈಃ ॥ ೬೪ ॥
ವೇದೋಕ್ತೈಶ್ಚೈವ ಜಾಪ್ಯೈಶ್ಚ ಪೂಜಯೇಚ್ಛಶಿಶೇಖರಂ ।
ಪ್ರಭಾತೇ ವಿಮಲೇ ಪಶ್ಚಾತ್ಸ್ನಾತ್ವಾ ವೈ ನರ್ಮದಾಜಲೇ ॥ ೬೫ ॥
ಬ್ರಾಹ್ಮಣಾನ್ ಭೋಜಯೇದ್ಭಕ್ತ್ಯಾ ಶಿವಭಕ್ತಾಂಶ್ಚ ಯೋಗಿನಃ ।
ಏವಂ ಕೃತೇ ತತೋ ರಾಜನ್ ಸಮ್ಯಕ್ತೀರ್ಥಫಲಂ ಲಭೇತ್ ॥ ೬೬ ॥
ತತ್ರ ತೀರ್ಥೇ ತು ಯಃ ಸ್ನಾತ್ವಾ ಪೂಜಯೇಚ್ಛಂಕರಂ ನರಃ ।
ದಶಾಽಶ್ವಮೇಧಾಽವಭೃಥಂ ಲಭತೇ ಪುಣ್ಯಮುತ್ತಮಂ ॥ ೬೭ ॥
ಪೂತಾತ್ಮಾ ತೇನ ಪುಣ್ಯೇನ ರುದ್ರಲೋಕಂ ಸ ಗಚ್ಛತಿ ।
ಆರೂಢಃ ಪರಮಂ ಯಾನಂ ಕಾಮಗಂ ಚ ಸುಶೋಭನಂ ॥ ೬೮ ॥
ತತ್ರ ದಿವ್ಯಾಽಪ್ಸರೋಭಿಸ್ತು ವೀಜ್ಯಮಾನೋಽಥ ಚಾಮರೈಃ ।
ಕ್ರೀಡತೇ ಸುಚಿರಂ ಕಾಲಂ ಜಯಶಬ್ದಾದಿಮಂಗಲೈಃ ॥ ೬೯ ॥
ತತೋಽವತೀರ್ಣಃ ಕಾಲೇನ ಇಹ ರಾಜಾ ಭವೇದ್ಧ್ರುವಂ ।
ಹಸ್ತ್ಯಶ್ವರಥಸಂಪನ್ನೋ ಮಹಾಭೋಗೀ ಪರಂತಪಃ ॥ ೭೦ ॥

---

ಸಹಿತವೂ ಆದ ಕಪಿಲಗೋವನ್ನು ಮಾತ್ಸರ್ಯವಿಲ್ಲದೆ ಬ್ರಾಹ್ಮಣನಿಗೆ ದಾನ ಮಾಡಿದವನು ಕೃತಾಕೃತಗಳ ವಿಷಯದಲ್ಲಿ ದುಃಖಿಸುವುದಿಲ್ಲ.

೬೪–೬೬. ತರುವಾಯ ಜಾಗರಣೆ ಮಾಡಿ ತುಪ್ಪದ ದೀಪವನ್ನು ಹೊತ್ತಿಸಿ ಪುರಾಣಪಠನದಿಂದಲೂ, ನೃತ್ಯಗೀತವಾದ್ಯಗಳಿಂದಲೂ, ವೇದೋಕ್ತ ಮಂತ್ರ ಜಪಗಳಿಂದಲೂ ಶಂಕರನನ್ನು ಪೂಜಿಸಬೇಕು. ಬೆಳಗ್ಗೆ ನರ್ಮದಾಜಲ ದಲ್ಲಿ ಮಿಂದು ಭಕ್ತಿಯಿಂದ ಶಿವಭಕ್ತರಾದ ಬ್ರಾಹ್ಮಣರನ್ನೂ ಯೋಗಿಗಳನ್ನೂ ಭೋಜನಮಾಡಿಸಬೇಕು. ಹೀಗೆ ಮಾಡಿದರೆ ತೀರ್ಥಫಲವು ಲಭಿಸುವುದು.

೬೭. ಆ ತೀರ್ಥದಲ್ಲಿ ಮಿಂದು ಶಂಕರನನ್ನು ಪೂಜಿಸಿದ ನರನು ದಶಾಶ್ವ ಮೇಧಯಾಗಮಾಡಿದ ಪುಣ್ಯವನ್ನು ಪಡೆಯುವನು.

೬೮. ಅವನು ಆ ಪುಣ್ಯದಿಂದ ಮಂಗಳಕರವಾದ ಉತ್ತಮ ವಿಮಾನ ವನ್ನೇರಿ ರುದ್ರಲೋಕಕ್ಕೆ ಹೋಗುವನು.

೬೯–೭೦. ಅಲ್ಲಿ ದಿವ್ಯಾಪ್ಸರೆಯರ ಚಾಮರಗಳಿಂದ ಬೀಸಲ್ಪಡುತ್ತ ಜಯಶಬ್ದಾದಿಗಳಿಂದ ಬಹುಕಾಲ ವಿನೋದಪಡುವನು. ಅನಂತರ ಬಹುಕಾಲದ ಮೇಲೆ ಭೂಮಿಯಲ್ಲಿ ಹಸ್ತ್ಯಶ್ವರಥಗಳಿಂದಕೂಡಿದ ಅತ್ಯಂತ ಭೋಗಿಯೂ, ಶತ್ರು ನಾಶಕನೂ ಆದ ರಾಜನಾಗಿ ಅವತರಿಸುವನು.

ದಶಾಶ್ವಮೇಧೇ ಯದ್ದಾನಂ ದೀಯತೇ ಶಿವಯೋಗಿನಾಂ ।
ದಶಾಶ್ವಮೇಧಸದೃಶಂ ಭವೇತ್ತತ್ಸ್ನಾತ್ರ ಸಂಶಯಃ ॥ ೭೧ ॥
ಸರ್ವೇಷಾಮೇವ ಯಜ್ಞಾನಾಮಶ್ವಮೇಧೋ ವಿಶಿಷ್ಯತೇ ।
ದುರ್ಲಭಃ ಸ್ವಲ್ಪವಿತ್ತಾನಾಂ ಭೂರಿಶಃ ಪಾಪಕರ್ಮಣಾಂ ॥ ೭೨ ॥
ತತ್ರ ತೀರ್ಥೇ ತು ರಾಜೇಂದ್ರ ದುರ್ಲಭೋಽಪಿ ಸುರಾಸುರೈಃ ।
ಪ್ರಾಪ್ಯತೇ ಸ್ನಾನದಾನೇನ ಇತ್ಯೇವಂ ಶಂಕರೋಽಬ್ರವೀತ್ ॥ ೭೩ ॥
ಅಕಾಮೋ ವಾ ಸಕಾಮೋ ವಾ ಮೃತಸ್ತತ್ರ ನರೇಶ್ವರ ।
ದೇವತ್ವಂ ಪ್ರಾಪ್ನುಯಾತ್ಸೋಽಪಿ ನಾಽತ್ರ ಕಾರ್ಯಾ ವಿಚಾರಣಾ ॥ ೭೪ ॥
ಅಗ್ನಿಪ್ರವೇಶಂ ಯಃ ಕುರ್ಯಾತ್ತತ್ರ ತೀರ್ಥೇ ನರೋತ್ತಮ ।
ಅಗ್ನಿಲೋಕೇ ವಸೇತ್ತಾವದ್ಯಾವದಾಭೂತಸಂಪ್ಲವಂ ॥ ೭೫ ॥
ಜಲಪ್ರವೇಶಂ ಯಃ ಕುರ್ಯಾತ್ತತ್ರ ತೀರ್ಥೇ ನರಾಧಿಪ ।
ಧ್ಯಾಯಮಾನೋ ಮಹಾದೇವಂ ವಾರುಣಂ ಲೋಕಮಾಪ್ನುಯಾತ್ ॥
ದಶಾಶ್ವಮೇಧೇ ಯಃ ಕಶ್ಚಿಚ್ಛೂರವೃತ್ತ್ಯಾ ತನುಂ ತ್ಯಜೇತ್ ।
ಅಕ್ಷಯಾನುಗತಿಸ್ತಸ್ಯ ಇತ್ಯೇವಂ ಶ್ರುತಿನೋದನಾ ॥ ೭೭ ॥

---

೭೧. ದಶಾಶ್ವಮೇಧದಲ್ಲಿ ಶಿವಯೋಗಿಗಳಿಗೆ ಕೊಟ್ಟ ದಾನದಿಂದ ಹತ್ತು ಅಶ್ವಮೇಧಯಾಗಗಳ ಫಲವು ಲಭಿಸುವುದು.

೭೨. ಸಕಲ ಯಜ್ಞಗಳಲ್ಲಿ ಅಶ್ವಮೇಧವು ಉತ್ತಮವಾದುದು. ಅದು ಅಲ್ಪ ದ್ರವ್ಯವುಳ್ಳ ಪಾಪಿಗಳಿಗೆ ದುರ್ಲಭವಾದುದು.

೭೩. ಮಹಾರಾಜ! ಆ ತೀರ್ಥದಲ್ಲಿ ಸ್ನಾನದಾನಗಳಿಂದ ದೇವಾಸುರರಿಗೂ ದುರ್ಲಭವಾದ ಭೋಗಭಾಗ್ಯಗಳು ಲಭಿಸುವುವು.

೭೪. ಆ ತೀರ್ಥದಲ್ಲಿ ತನ್ನ ಇಚ್ಛೆಯಿಂದಾಗಲಿ, ಇಚ್ಛೆಯಿಲ್ಲದೆಯಾಗಲಿ ಮೃತನಾದ ಮಾನವನು ದೇವತ್ವವನ್ನು ಹೊಂದುವನು. ಈ ವಿಷಯದಲ್ಲಿ ಸಂದೇಹವಿಲ್ಲ.

೭೫. ಮಹಾರಾಜ! ಆ ತೀರ್ಥದಲ್ಲಿ ಅಗ್ನಿಪ್ರವೇಶಮಾಡಿದವನು ಪ್ರಳಯ ಕಾಲದವರೆಗೆ ಅಗ್ನಿಲೋಕದಲ್ಲಿ ವಾಸಮಾಡುವನು.

೭೬. ಅಲ್ಲಿ ಮಹಾದೇವನನ್ನು ಧ್ಯಾನಿಸುತ್ತ ಜಲಪ್ರವೇಶವನ್ನು ಮಾಡಿದವನು ವರುಣಲೋಕವನ್ನು ಹೊಂದುವನು.

೭೭. ಆ ದಶಾಶ್ವಮೇಧದಲ್ಲಿ ಶೌರ್ಯದಿಂದ ದೇಹವನ್ನು ತ್ಯಜಿಸಿದವನಿಗೆ ಅಕ್ಷಯಗತಿಯುಂಟಾಗುವುದೆಂದು ವೇದವು ಸಾರಿ ಹೇಳುವುದು.

ನತಾಂ ಗತಿಂ ಯಾಂತಿ ಭೃಗುಪ್ರಪಾತಿನೋ
ನ ದಂಡಿನೋ ನೈವ ಚ ಸಾಂಖ್ಯಯೋಗಿನಃ ।
ಧ್ವಜಾಕುಲೇ ದುಂದುಭಿಶಂಖನಾದಿತೇ
ಕ್ಷಣೇನ ಯಾಂ ಯಾಂತಿ ಮಹಾಹವೇ ಮೃತಾಃ ॥ ೭೮ ॥
ಯತ್ರ ಯತ್ರ ಹತಃ ಶೂರಃ ಶತ್ರುಭಿಃ ಪರಿವೇಷ್ಟಿತಃ ।
ಅಕ್ಷಯಾಂಲ್ಲಭತೇ ಲೋಕಾನ್ ಯದಿ ಕ್ಲೀಬಂ ನಭಾಷತೇ ॥ ೭೯ ॥
ದಶಾಶ್ವಮೇಧೇ ಸನ್ಯಾಸಂ ಯಃ ಕರೋತಿ ವಿಧಾನತಃ ।
ಅನಿವರ್ತಿಕಾ ಗತಿಸ್ತಸ್ಯ ರುದ್ರಲೋಕಾತ್ಕದಾಚನ ॥ ೮೦ ॥
ದಶಾಶ್ವಮೇಧೇ ಯತ್ಪುಣ್ಯಂ ಸಂಕ್ಷೇಪೇಣ ಯುಧಿಷ್ಠಿರ ।
ಕಥಿತಂ ಪರಯಾ ಭಕ್ತ್ಯಾ ಸರ್ವಪಾಪಪ್ರಣಾಶನಂ ॥ ೮೧ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ
ಪಂಚಮೇ ಅವಂತ್ಯಖಂಡೇ ತೃತೀಯೇ ರೇವಾಖಂಡೇ
"ದಶಾಶ್ವಮೇಧತೀರ್ಥಮಾಹಾತ್ಮ್ಯವರ್ಣನಂ" ನಾಮ
ಅಶೀತ್ಯುತ್ತರಶತತಮೋಽಧ್ಯಾಯಃ

---

೭೮. ಧ್ವಜದಿಂದ ಕೂಡಿರುವುದೂ, ಶಂಖದುಂದುಭಿಗಳ ಧ್ವನಿಯಿಂದ ಸಹಿತವೂ ಆಗಿರುವ ದಶಾಶ್ವಮೇಧ ತೀರ್ಥದಲ್ಲಿ ಮೃತರಾದವರು ಪಡೆಯುವ ಗತಿಯನ್ನು ಭೃಗುಪ್ರಪಾತದಿಂದ ಬಿದ್ದವರೂ, ಸನ್ಯಾಸಿಗಳೂ, ಸಾಂಖ್ಯಯೋಗಿಗಳೂ ಹೊಂದುವುದಿಲ್ಲ.

೭೯. ಅಲ್ಲಿ ಎಲ್ಲಿಯಾದರೂ ಶತ್ರುಗಳಿಂದ ಸುತ್ತಲ್ಪಟ್ಟು ಪೌರುಷವಿಲ್ಲದ ಮಾತನ್ನಾಡದ ಶೂರನು ಮೃತನಾದರೂ ಅಕ್ಷಯವಾದ ಲೋಕವನ್ನು ಸೇರುವನು.

೮೦. ಆ ದಶಾಶ್ವಮೇಧದಲ್ಲಿ ವಿಧಿಯಿಂದ ಸನ್ಯಾಸವನ್ನು ಸ್ವೀಕರಿಸಿದವನಿಗೆ ರುದ್ರಲೋಕದಲ್ಲಿ ಪುನರಾವೃತ್ತಿಯಿಲ್ಲದ ಗತಿಯುಂಟಾಗುವುದು.

೮೧. ಯುಧಿಷ್ಠಿರ! ದಶಾಶ್ವಮೇಧದಲ್ಲಿ ಉಂಟಾಗುವ ಸಕಲ ಪಾಪಗಳನ್ನು ನಿವಾರಿಸುವ ಪುಣ್ಯವನ್ನು ನಿನಗೆ ಹೇಳಿದ್ದೇನೆ.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ
ಶ್ರೀ ಸ್ಕಾಂದಮಹಾಪುರಾಣದ ಐದನೆಯ ಅವಂತ್ಯಖಂಡದ ಮೂರನೆಯ ರೇವಾಖಂಡದಲ್ಲಿ
"ದಶಾಶ್ವಮೇಧತೀರ್ಥಮಾಹಾತ್ಮ್ಯವರ್ಣನ" ವೆಂಬ
ನೂರೆಂಬತ್ತನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

# ಅಷ್ಟೈಕಾಽಶೀತ್ಯುತ್ತರಶತತಮೋಽಧ್ಯಾಯಃ

## ಭೃಗುಕಚ್ಛೋತ್ಪತ್ತಿವರ್ಣನಂ

ಶ್ರೀ ಮಾರ್ಕಂಡೇಯ ಉವಾಚ:—

ಅತಃಪರಂ ಪ್ರವಕ್ಷ್ಯಾಮಿ ಭೃಗುತೀರ್ಥಸ್ಯ ವಿಸ್ತರಂ ।
ಯಂ ಶ್ರುತ್ವಾ ಬ್ರಹ್ಮಹಾ ಗೋಘ್ನೋ ಮುಚ್ಯತೇ ಸರ್ವಪಾತಕೈಃ ॥ ೧ ॥
ತತ್ರ ತೀರ್ಥೇ ತು ವಿಖ್ಯಾತಂ ವೃಷಖಾತಮಿತಿ ಶ್ರುತಂ ।
ಭೃಗುಣಾ ತತ್ರ ರಾಜೇಂದ್ರ ತಪಸ್ತಪ್ತಂ ಪುರಾ ಕಿಲ ॥ ೨ ॥

ಯುಧಿಷ್ಠಿರ ಉವಾಚ:—

ಭೃಗುಕಚ್ಛೇ ಸ ವಿಪ್ರೇಂದ್ರೋ ನಿವಸನ್ಕೇನ ಹೇತುನಾ ।
ತಪಸ್ತಪ್ತ್ವಾ ಸುವಿಪುಲಂ ಪರಾಂ ಸಿದ್ಧಿಮುಪಾಗತಃ ॥ ೩ ॥
ಕೋ ವಾ ವೃಷ ಇತಿ ಪ್ರೋಕ್ತಸ್ತತ್ಖಾತಂ ಯೇನ ಖಾನಿತಂ ।
ಏತತ್ಸರ್ವಂ ಯಥಾ ನ್ಯಾಯಂ ಕಥಯಸ್ವ ಮಮಾಽನಘ ॥ ೪ ॥

---

## ಕನ್ನಡದ ಅನುವಾದ

### ಭೃಗುಕಚ್ಛೋತ್ಪತ್ತಿವರ್ಣನ

೧. ಶ್ರೀ ಮಾರ್ಕಂಡೇಯನು ಹೇಳುತ್ತಾನೆ:—ಅನಂತರ ಭೃಗುತೀರ್ಥದ ವಿಸ್ತಾರವನ್ನು ಹೇಳುವೆನು. ಇದನ್ನು ಕೇಳಿದವನು ಬ್ರಾಹ್ಮಣಹತ್ಯೆ, ಗೋಹತ್ಯೆಗಳನ್ನು ಮಾಡಿದವನಾದರೂ ಸಕಲ ಪಾಪಗಳಿಂದಲೂ ಮುಕ್ತನಾಗುವನು.

೨. ಆ ತೀರ್ಥದಲ್ಲಿ ವೃಷಖಾತವೆಂಬ ಸರೋವರವಿದೆ. ಹಿಂದೆ ಅಲ್ಲಿ ಭೃಗುವು ತಪಸ್ಸನ್ನು ಮಾಡಿರುವನು.

೩. ಯುಧಿಷ್ಠಿರನು ಹೇಳುತ್ತಾನೆ:—ಭೃಗುವೆಂಬ ಆ ಬ್ರಾಹ್ಮಣೋತ್ತಮನು ಭೃಗುಕಚ್ಛದಲ್ಲಿ ಏತಕ್ಕೆ ತಪಸ್ಸನ್ನು ಮಾಡಿ ಉತ್ತಮ ಸಿದ್ಧಿಯನ್ನು ಹೊಂದಿದನು.

೪. ವೃಷನೆಂಬವನು ಯಾರು? ವೃಷಖಾತವನ್ನು ಯಾರು ತೋಡಿಸಿದರು? ಇದನ್ನೆಲ್ಲ ನನಗೆ ಯಥಾನ್ಯಾಯವಾಗಿ ಹೇಳು.

ಶ್ರೀ ಮಾರ್ಕಂಡೇಯ ಉವಾಚ :—

ಏಷ ಪ್ರಶ್ನೋ ಮಹಾರಾಜ ಯಸ್ತ್ವಯಾ ಪರಿಪೃಚ್ಛಿತಃ ।
ತತ್ಸರ್ವಂ ಕಥಯಿಷ್ಯಾಮಿ ಶೃಣುಷ್ವೈಕಮನಾ ನೃಪ ॥ ೫ ॥
ಷಷ್ಠಸ್ತು ಬ್ರಹ್ಮಣಃ ಪುತ್ರೋ ಮಾನಸೋ ಭೃಗುಸತ್ತಮಃ ।
ತಪಶ್ಚಚಾರ ವಿಪುಲಂ ಶ್ರೀವೃತೇ ಕ್ಷೇತ್ರ ಉತ್ತಮೇ ॥ ೬ ॥
ದಿವ್ಯಂ ವರ್ಷಸಹಸ್ರಂ ತು ಸಂಶುಷ್ಕೋ ಮುನಿಸತ್ತಮಃ ।
ನಿರಾಹಾರೋ ನಿರಾನಂದಃ ಕಾಷ್ಠ ಪಾಷಾಣವತ್ಸ್ಥಿತಃ ॥ ೭ ॥
ತತಃ ಕದಾಚಿದ್ದೇವೇಶೋ ವಿಮಾನವರಮಾಸ್ಥಿತಃ ।
ಉಮಯಾ ಸಹಿತಃ ಶ್ರೀಮಾಂಸ್ತೇನ ಮಾರ್ಗೇಣ ಚಾಗತಃ ॥ ೮ ॥
ದೃಷ್ಟ್ವಾ ತತ್ರ ಮಹಾಭಾಗಂ ಭೃಗುಂ ವಲ್ಮೀಕವತ್ಸ್ಥಿತಂ ।
ಉವಾಚ ದೇವೀ ದೇವೇಶಂ ಕಿಮಿದಂ ದೃಶ್ಯತೇ ಪ್ರಭೋ ॥ ೯ ॥

ಈಶ್ವರ ಉವಾಚ :—

ಭೃಗುರ್ನಾಮ ಮಹಾದೇವಿ ತಪಸ್ತಪ್ತ್ವಾ ಸುದಾರುಣಂ ।
ದಿವ್ಯಂ ವರ್ಷಸಹಸ್ರಂ ತು ಮಮ ಧ್ಯಾನಪರಾಯಣಃ ॥ ೧೦ ॥
ಜಲಬಿಂದುಕುಶಾಗ್ರೇಣ ಮಾಸೇ ಮಾಸೇ ಪಿಬೇಚ್ಚ ಸಃ ।
ಸಂವತ್ಸರಶತಂ ಸಾಗ್ರಂ ತಿಷ್ಠತೇ ಚ ವರಾನನೇ ॥ ೧೧ ॥

---

೫. ಮಾರ್ಕಂಡೇಯನು ಹೇಳುತ್ತಾನೆ:—ಮಹಾರಾಜ! ನೀನು ಕೇಳಿದ ಪ್ರಶ್ನೆಗೆ ಉತ್ತರವನ್ನು ಕೊಡುವೆನು. ನೀನು ಅದನ್ನು ಒಮ್ಮನಸ್ಸಿನಿಂದ ಕೇಳು.

೬–೭. ಬ್ರಹ್ಮನ ಆರನೆಯ ಮಾನಸಪುತ್ರನಾದ ಭೃಗುಮುನಿಯು ಶ್ರೀವೃತ ಕ್ಷೇತ್ರದಲ್ಲಿ ಆಹಾರವಿಲ್ಲದೆ ಒಣಗಿದವನೂ, ಆನಂದವಿಲ್ಲದವನೂ, ಸೌದೆ ಕಲ್ಲುಗಳಂತೆ ಸ್ಥಿರನೂ ಆಗಿ ಸಾವಿರ ವರ್ಷಕಾಲ ಉತ್ತಮವಾದ ತಪಸ್ಸನ್ನು ಮಾಡಿದನು.

೮. ಅನಂತರ ಒಂದಾನೊಂದು ದಿನ ಶಂಕರನು ದಿವ್ಯವಾದ ವಿಮಾನ ವನ್ನೇರಿ ಉಮೆಯೊಡನೆ ಆ ಮಾರ್ಗದಿಂದ ಬಂದನು.

೯. ಪಾರ್ವತಿಯು ಹುತ್ತದಂತಿರುವ ಭಾಗ್ಯಶಾಲಿಯಾದ ಭೃಗುವನ್ನು ಕಂಡು ಇಲ್ಲಿ ಕಾಣುತ್ತಿರುವುದೇನೆಂದು ಶಂಕರನನ್ನು ಪ್ರಶ್ನಿಸಿದಳು.

೧೦–೧೧. ಈಶ್ವರನು ಹೇಳುತ್ತಾನೆ:—ಮಹಾದೇವಿ! ಭೃಗುಮಹಾ ಮುನಿಯು ನನ್ನನ್ನು ಧ್ಯಾನಿಸುತ್ತ ತಿಂಗಳಿಗೊಮ್ಮೆ ದರ್ಭೆಯ ಕೊನೆಯಿಂದ ನೀರಿನ ಹನಿಯನ್ನು ಕುಡಿಯುತ್ತ ದಿವ್ಯವಾದ ಸಾವಿರದ ನೂರು ವರ್ಷಗಳ ಕಾಲ ದಿಂದ ತಪಸ್ಸನ್ನು ಮಾಡುತ್ತಿರುವನು.

ತಚ್ಛ್ರುತ್ವಾ ವಚನಂ ಗೌರೀ ಕ್ರೋಧಸಂವರ್ತಿತೇಕ್ಷಣಾ ।
ಉವಾಚ ದೇವೀ ದೇವೇಶಂ ಶೂಲಪಾಣಿಂ ಮಹೇಶ್ವರಂ ॥ ೧೨ ॥
ಸತ್ಯಮುಗ್ರೋಽಸಿ ಲೋಕೇ ತ್ವಂ ಖ್ಯಾಪಿತೋ ವೃಷಭಧ್ವಜ ।
ನಿಷ್ಕಾರುಣ್ಯೋ ದುರಾರಾಧ್ಯಃ ಸರ್ವಭೂತಭಯಂಕರಃ ॥ ೧೩ ॥
ದಿವ್ಯಂ ವರ್ಷಸಹಸ್ರಂ ತು ಧ್ಯಾಯಮಾನಸ್ಯ ಶಂಕರ ।
ಬ್ರಾಹ್ಮಣಸ್ಯ ವರಂ ಕಸ್ಮಾನ್ನ ಪ್ರಯಚ್ಛಸಿ ಶಂಸ ಮೇ ॥ ೧೪ ॥
ಏವಮುಕ್ತೋಽಥ ದೇವೇಶಃ ಪ್ರಹಸ್ಯ ಗಿರಿನಂದಿನೀಂ ।
ಉವಾಚ ನರಶಾರ್ದೂಲ ಮೇಘಗಂಭೀರಯಾ ಗಿರಾ ॥ ೧೫ ॥
ಸ್ತ್ರೀ ವಿನಶ್ಯತಿ ಗರ್ವೇಣ ತಪಃ ಕ್ರೋಧೇನ ನಶ್ಯತಿ ।
ಗಾವೋ ದೂರಪ್ರಚಾರೇಣ ಶೂದ್ರಾನ್ನೇನ ದ್ವಿಜೋತ್ತಮಾಃ ॥ ೧೬ ॥
ಕ್ರೋಧಾನ್ವಿತೋ ದ್ವಿಜೋ ಗೌರಿ ತೇನ ಸಿದ್ಧಿರ್ನವಿದ್ಯತೇ ।
ವರ್ಷಾಽಯುತೈಸ್ತಥಾ ಲಕ್ಷೈರ್ನಕಿಂಚಿತ್ಕಾರಣಂ ಪ್ರಿಯೇ ॥ ೧೭ ॥
ಏವಂಭೂತಸ್ಯ ತಸ್ಯಾಽಪಿ ಕ್ರೋಧಸ್ಯ ಚರಿತಂ ಮಹತ್ ।
ಏವಮುಕ್ತ್ವಾ ತತಃ ಶಂಭುರ್ವೃಷಂ ದಧ್ಯೌ ಚ ತತ್ಕ್ಷಣೇ ॥ ೧೮ ॥

---

೧೨. ಗೌರಿಯು ಮಹೇಶ್ವರನ ಆ ಮಾತನ್ನು ಕೇಳಿ ಕೋಪಗೊಂಡ ಕಣ್ಣು ಗಳುಳ್ಳವಳಾಗಿ ಶಂಕರನನ್ನು ಕುರಿತು ಇಂತೆಂದಳು.

೧೩. "ಶಂಕರ! ನೀನು ಪ್ರಪಂಚದಲ್ಲಿ ದಯೆಯಿಲ್ಲದವನೂ, ಸಂತೋಷ ಗೊಳಿಸಲಶಕ್ಯನೂ, ಸಮಸ್ತಪ್ರಾಣಿಗಳಿಗೆ ಭಯಂಕರನೂ ಆದ್ದರಿಂದ ಉಗ್ರನೆಂದು ಪ್ರಖ್ಯಾತನಾಗಿರುವೆ.

೧೪. ನೂರು ವರ್ಷಗಳಿಂದ ನಿನ್ನನ್ನು ಧ್ಯಾನಿಸುತ್ತಿರುವ ಈ ಬ್ರಾಹ್ಮಣನಿಗೆ ಏಕೆ ವರವನ್ನು ಕೊಡುವುದಿಲ್ಲ. ನನಗೆ ಹೇಳು."

೧೫. ಪಾರ್ವತಿಯು ಹೀಗೆ ಹೇಳಲು ಶಂಕರನು ನಕ್ಕು ಅವಳನ್ನು ಕುರಿತು ಮೇಘದಂತೆ ಗಂಭೀರವಾದ ಮಾತಿನಿಂದ ಇಂತೆಂದನು.

೧೬. "ಹೆಂಗಸು ಗರ್ವದಿಂದಲೂ, ತಪಸ್ಸು ಕೋಪದಿಂದಲೂ, ಗೋವು ಗಳು ದೂರದಲ್ಲಿ ಸಂಚರಿಸುವುದರಿಂದಲೂ, ಬ್ರಾಹ್ಮಣೋತ್ತಮರು ಶೂದ್ರರ ಅನ್ನದಿಂದಲೂ ಹಾಳಾಗುತ್ತಾರೆ.

೧೭. ಗೌರಿ! ಈ ಬ್ರಾಹ್ಮಣನು ಕೋಪಿಷ್ಠನಾಗಿರುವುದರಿಂದ ಹತ್ತುಸಾವಿರ ಅಥವಾ ಲಕ್ಷ ವರ್ಷಗಳಿಂದಲೂ ಸಿದ್ಧಿಯನ್ನು ಹೊಂದುವುದಿಲ್ಲ. ಬೇರೆ ಏನೂ ಕಾರಣವಿಲ್ಲ.

೧೮. ಇಂತು ಆ ಬ್ರಾಹ್ಮಣನ ಕೋಪದ ಚರಿತ್ರೆಯು ಮಹತ್ತಾದುದು." ಶಂಕರನು ಹೀಗೆ ಹೇಳಿ ಕೂಡಲೆ ವೃಷಭವನ್ನು ಧ್ಯಾನಿಸಿದನು.

ವೃಷೋ ಹಿ ಭಗವಾನ್ ಬ್ರಹ್ಮಾ ವೃಷರೂಪೀ ಮಹೇಶ್ವರಃ ।
ಧ್ಯಾನಪ್ರಾಪ್ತಃ ಕ್ಷಣಾದೇವ ಗರ್ಜಯನ್ವೈ ಮುಹುರ್ಮುಹುಃ ॥ ೧೯ ॥
ಕಿಂ ಕರೋಮಿ ಸುರಶ್ರೇಷ್ಠ ಧ್ಯಾತಃ ಕೇನೈವ ಹೇತುನಾ ।
ಕರೋಮಿ ಕಸ್ಯ ನಿಧನಮಕಾಲೇ ಪರಮೇಶ್ವರ ॥ ೨೦ ॥

ಈಶ್ವರ ಉವಾಚ :—

ಕೋಪಯಸ್ವ ದ್ವಿಜಶ್ರೇಷ್ಠಂ ಗತ್ವಾ ತ್ವಂ ಭೃಗುಸತ್ತಮಂ ।
ಯೇನ ಮೇ ಶ್ರದ್ಧಧತ್ಯೇಷಾ ಗೌರೀ ಲೋಕೈಕಸುಂದರೀ ॥ ೨೧ ॥
ಏತಚ್ಛ್ರುತ್ವಾ ವೃಷೋ ಗತ್ವಾ ಧರ್ಷಣಾರ್ಥಂ ದ್ವಿಜೋತ್ತಮಂ ।
ನರ್ಮದಾಯಾಸ್ತಟೇ ರಮ್ಯೇ ಸಮೀಪೇ ಚಾಶ್ರಮೇ ಭೃಗುಃ ॥ ೨೨ ॥
ತತಃ ಶೃಂಗೈರ್ಗೃಹೀತ್ವಾ ತು ಪ್ರಕ್ಷಿಪ್ತೋ ನರ್ಮದಾಜಲೇ ।
ತತಃ ಕ್ರುದ್ಧೋ ಭೃಗುಸ್ತತ್ರ ದಂಡಹಸ್ತೋ ಮಹಾಮುನಿಃ ॥ ೨೩ ॥
ಪಶುವತ್ತೇ ವಧಿಷ್ಯಾಮಿ ದಂಡಘಾತೇನ ಮಸ್ತಕೇ ।
ಶಿಖಾಯಜ್ಞೋಪವೀತೇ ಚ ಪರಿಧಾನಂ ವರಾಸನೇ ॥ ೨೪ ॥
ಸುಸಂವೃತಂ ಕೃತಂ ತೇನ ಧಾವನ್ವೈ ಪೃಷ್ಠತೋಽಬ್ರವೀತ್ ॥ ೨೫ ॥

ಭೃಗುರುವಾಚ :—

ಪಾಪಪಕರ್ಮನ್ದುರಾಚಾರ ಕಥಂ ಯಾಸ್ಯಸಿ ಮೇ ವೃಷ ।
ಅವಮಾನಂ ಸಮುತ್ಪಾದ್ಯ ಕೃತ್ವಾ ಗರ್ತಂ ಖುರೈಸ್ತಥಾ ॥ ೨೬ ॥

---

೧೯—೨೦. ವೃಷಭರೂಪಿಯಾದವನೇ ಬ್ರಹ್ಮನು ; ಮಹೇಶ್ವರನೂ ಆತನೇ! ಆತನು ಧ್ಯಾನಮಾತ್ರದಿಂದಲೇ ಅಲ್ಲಿಗೆ ಬಂದು ಗರ್ಜಿಸುತ್ತ, "ಸುರೇಶ್ವರ! ಏನನ್ನು ಮಾಡಲಿ. ನನ್ನನ್ನು ಏತಕ್ಕೆ ಚಿಂತಿಸಿರುವೆ? ಯಾವನನ್ನು ಅಕಾಲದಲ್ಲಿ ಕೊಲ್ಲಲಿ" ಎಂದು ಕೇಳಿದನು.

೨೧. ಈಶ್ವರನು ಹೇಳುತ್ತಾನೆ:—ನೀನು ಭೃಗುಮಹರ್ಷಿಯೆಡೆಗೆ ಹೋಗಿ ಅವನಿಗೆ ಕೋಪವನ್ನುಂಟುಮಾಡು. ಅದರಿಂದ ತ್ರಿಲೋಕಸುಂದರಿಯಾದ ಈ ಗೌರಿಗೆ ನಂಬಿಕೆಯುಂಟಾಗುವುದು.

೨೨—೨೫. ವೃಷಭವು ಇದನ್ನು ಕೇಳಿ ಆ ಮುನಿಯನ್ನು ತಿರಸ್ಕರಿಸಲು ನರ್ಮದಾನದಿಯ ರಮ್ಯವಾದ ದಡದಲ್ಲಿರುವ ಆಶ್ರಮದಲ್ಲಿ ವಾಸಿಸುವ ಆ ಭೃಗುವನ್ನು ಕೊಂಬುಗಳಿಂದ ಎತ್ತಿ ನರ್ಮದಾಜಲದಲ್ಲಿ ಎಸೆಯಿತು. ಅದರಿಂದ ಕುಪಿತನಾದ ಮುನಿಯು ಕೈಯಲ್ಲಿ ದೊಣ್ಣೆಯನ್ನು ಹಿಡಿದುಕೊಂಡು, "ವೃಷಭವೇ! ನಿನ್ನನ್ನು ದೊಣ್ಣೆಯಿಂದ ತಲೆಯ ಮೇಲೆ ಹೊಡೆದು ಪಶುವಿನಂತೆ ಕೊಲ್ಲುವೆನು" ಎಂದು ಹೇಳಿ ಶಿಖಾ, ಯಜ್ಞೋಪವೀತ, ಬಟ್ಟೆಗಳನ್ನು ಕಟ್ಟಿಕೊಂಡು ಆದರ ಹಿಂದೆ ಓಡುತ್ತ ಹೀಗೆಂದನು.

೨೬—೩೮. ಭೃಗುವು ಹೇಳುತ್ತಾನೆ:—ಪಾಪಿಯೂ, ದುಷ್ಟನೂ ಆದ

ಗರ್ಜಯಿತ್ವಾ ಮಹಾನಾದಂ ತತೋ ವಿಪ್ರಮುಪಾತಯುತ್ ।
ಆತ್ಮಾನಂ ಪಾತಿತಂ ಜ್ಞಾತ್ವಾ ವೃಷೇಣ ಪರಮೇಷ್ಠಿನಾ ॥ ೨೭ ॥
ಭೃಗುಃ ಕ್ರೋಧೇನ ಜಜ್ವಾಲ ಹುತಾಹುತಿರಿವಾಽನಲಃ ।
ಕರೇ ಗೃಹ್ಯ ಮಹಾದಂಡಂ ಬ್ರಹ್ಮದಂಡಮಿವಾಽಪರಂ ॥ ೨೮ ॥
ಹಂತುಕಾಮೋ ವೃಷಂ ವಿಪ್ರೋಽಭ್ಯಧಾವತ ಯುಧಿಷ್ಠಿರ ।
ಧಾವಮಾನಂ ತತೋ ದೃಷ್ಟ್ವಾ ಸ ವೃಷಃ ಪೂರ್ವಸಾಗರೇ ॥ ೨೯ ॥
ಜಂಬೂದ್ವೀಪಂ ಕುಶಂ ಕ್ರೌಂಚಂ ಶಾಲ್ಮಲಿಂ ಶಾಕಮೇವ ಚ ।
ಗೋಮೇದಂ ಪುಷ್ಕರಂ ಪ್ರಾಪ್ತಃ ಪರ್ವತೋ ದಕ್ಷಿಣಾಪಥಂ ॥ ೩೦ ॥
ಉತ್ತರಂ ಪಶ್ಚಿಮಂ ಚೈವ ದ್ವೀಪಾದ್ದ್ವೀಪಂ ನರೇಶ್ವರ ।
ಪಾತಾಲಂ ಸುತಲಂ ಪಶ್ಚಾದ್ವಿತಲಂ ಚ ತಲಾತಲಂ ॥ ೩೧ ॥
ತಾಮಿಸ್ರಮಂಧತಾಮಿಸ್ರಂ ಪಾತಾಲಂ ಸಪ್ತಮಂ ಯಯೌ ।
ತತೋ ಜಗಾಮ ಭೂರ್ಲೋಕಂ ಪ್ರಾಣಾರ್ಥೀ ಸ ವೃಷೋತ್ತಮಃ ॥ ೩೨ ॥
ಭುವಃ ಸ್ವಶ್ಚೈವ ಚ ಮಹಸ್ತಪಃ ಸತ್ಯಂ ಜನಸ್ತಥಾ ।
ಅನುಗಮ್ಯಮಾನೋ ವಿಪ್ರೇಣ ನ ಶರ್ಮ ಲಭತೇ ಕ್ವಚಿತ್ ॥ ೩೩ ॥
ಪಾಪಂ ಕೃತ್ವೈವ ಪುರುಷಃ ಕಾಮಕ್ರೋಧಬಲಾರ್ದಿತಃ ।
ತತೋ ಜಗಾಮ ಶರಣಂ ಬ್ರಹ್ಮಾಣಂ ವಿಷ್ಣುಮೇವ ಚ ॥ ೩೪ ॥
ಇಂದ್ರಂ ಚಂದ್ರಂ ತಥಾದಿತ್ಯೈರ್ಯಮ್ಯವಾರುಣಮಾರುತೈಃ ।
ಯದಾ ಸರ್ವೈಃ ಪರಿತ್ಯಕ್ತೋ ಲೋಕಾಲೋಕೈಃ ಸುರೇಶ್ವರೈಃ ॥ ೩೫ ॥

---

ವೃಷಭವೇ! ನೀನು ಗೊರಸುಗಳಿಂದ ಕುಣಿಯನ್ನು ಮಾಡಿ, ಗಟ್ಟಿಯಾಗಿ ಗರ್ಜಿಸಿ ಬ್ರಾಹ್ಮಣನಾದ ನನ್ನನ್ನು ಕೆಡವಿ ಅವಮಾನವನ್ನುಂಟುಮಾಡಿ ಹೇಗೆ ಹೋಗುವೆ?'' ಭೃಗುವು ಹೀಗೆ ಗದರಿಸಿ ತನ್ನನ್ನು ವೃಷಭೇಶ್ವರನು ಕೆಡವಿರುವನೆಂದರಿತು ಹೋಮಿಸಿದ ಅಗ್ನಿಯಂತೆ ಉರಿದನು. ಬ್ರಹ್ಮದಂಡವಂತಿರುವ ಮತ್ತೊಂದು ದಂಡವನ್ನು ಕೈಯಲ್ಲಿ ಹಿಡಿದುಕೊಂಡು ಆ ವೃಷಭವನ್ನು ಹೊಡೆಯಲು ಓಡಿದನು. ವೃಷಭವು ಓಡಿಬರುತ್ತಿರುವ ಆ ಭೃಗುಮುನಿಯನ್ನು ಕಂಡು ಪೂರ್ವ ಸಮುದ್ರ, ಜಂಬುದ್ವೀಪ, ಕುಶ, ಕ್ರೌಂಚ, ಶಾಲ್ಮಲಿ, ಶಾಕ, ಗೋಮೇದ, ಪುಷ್ಕರ, ದಕ್ಷಿಣಾಪಥ, ಉತ್ತರಪಶ್ಚಿಮದ್ವೀಪಗಳು, ಪಾತಾಳ, ಸುತಳ, ವಿತಲ, ತಲಾತಲ, ತಾಮಿಸ್ರ, ಅಂಧತಾಮಿಸ್ರ, ಪಾತಾಳ, ಭೂಲೋಕ, ಭುವರ್ಲೋಕ, ಸ್ವರ್ಲೋಕ, ಮಹರ್ಲೋಕ, ತಪೋಲೋಕ, ಸತ್ಯಲೋಕ, ಜನಲೋಕ ಇವುಗಳಿಗೆ ಪ್ರಾಣರಕ್ಷಣೆಗಾಗಿ ಓಡಿ ಪಾಪಮಾಡಿ ಕಾಮ ಕ್ರೋಧ ಬಲಗಳಿಂದ ಪೀಡಿತನಾದ ಮನುಷ್ಯನಂತೆ ಎಲ್ಲಿಯೂ ಸುಖವನ್ನು ಹೊಂದಲಿಲ್ಲ. ಬಳಿಕ ಬ್ರಹ್ಮ, ವಿಷ್ಣು, ಇಂದ್ರ, ಆದಿತ್ಯ, ಯಮ, ವರುಣ, ವಾಯು ಇವರನ್ನು ಮರೆ ಹೊಕ್ಕಿತು. ಎಲ್ಲ ದೇವತೆಗಳೂ, ಆ ವೃಷಭವನ್ನು ಕಾಪಾಡದಿರಲು ಮಹೇಶ್ವರ

ತದಾ ದೇವಂ ನಮಸ್ಕೃತ್ವಾ ರಕ್ಷ ರಕ್ಷಸ್ವ ಚಾಬ್ರವೀತ್ ।
ವಧ್ಯಮಾನಂ ಮಹಾದೇವೋ ಭೃಗುಣಾ ಪರಮೇಷ್ಠಿನಾ ॥ ೩೬ ॥
ಸರ್ವಲೋಕೈಃ ಪರಿತ್ಯಕ್ತಮನಾಥಮಿವ ತಂ ಪ್ರಭೋ ।
ದೃಷ್ಟ್ವಾ ಶ್ರಾಂತಂ ವೃಷಂ ದೇವಃ ಪತಿತಂ ಚರಣಾಗ್ರತಃ ॥ ೩೭ ॥
ತತಃ ಪ್ರೋವಾಚ ಭಗವಾನ್ ಸ್ಮಿತಪೂರ್ವಮಿದಂ ವಚಃ ॥ ೩೮ ॥

ಈಶ್ವರ ಉವಾಚ :—

ಪಶ್ಯ ದೇವಿ ಮಹಾಭಾಗೇ ಶಮಂ ವಿಪ್ರಸ್ಯ ಸುಂದರಿ ॥ ೩೯ ॥

ಪಾರ್ವತ್ಯುವಾಚ :—

ಯಾವದ್ವಿಪ್ರೋ ನಚಾಸ್ಮಾಕಂ ಕುಪ್ಯತೇ ಪರಮೇಶ್ವರ ।
ತಾವದ್ವರಂ ಪ್ರಯಚ್ಛಾಶು ಯದಿ ಚೇಚ್ಛಸಿ ಮತ್ಪ್ರಿಯಂ ॥ ೪೦ ॥
ತತೋ ಭಸ್ಮೀ ಜಟೀ ಶೂಲೀ ಚಂದ್ರಾರ್ಧಕೃತಶೇಖರಃ ।
ಉಮಾರ್ಧದೇಹೋ ಭಗವಾನ್ ಭೂತ್ವಾ ವಿಪ್ರಮುವಾಚ ಹ ॥ ೪೧ ॥
ಭೋ ಭೋ ದ್ವಿಜವರ ಶ್ರೇಷ್ಠ ಕ್ರೋಧಸ್ತೇ ನ ಶಮಂ ಗತಃ ।
ಯಸ್ಮಾತ್ತಸ್ಮಾದಿದಂ ತಾತ ಕ್ರೋಧಸ್ಥಾನಂ ಭವಿಷ್ಯತಿ ॥ ೪೨ ॥
ತತೋ ದೃಷ್ಟ್ವಾ ಚ ತಂ ಶಂಭುಂ ಭೃಗುಃ ಶ್ರೇಷ್ಠಂ ತ್ರಿಲೋಚನಂ ।
ಜಾನುಭ್ಯಾಮವನಿಂ ಗತ್ವಾ ಇದಂ ಸ್ತೋತ್ರಮುದೈರಯತ್ ॥ ೪೩ ॥

---

ನನ್ನು ನಮಸ್ಕರಿಸಿ, "ಕಾಪಾಡು ಕಾಪಾಡು" ಎಂದಿತು. ಮಹಾದೇವನು ಭೃಗುವಿನಿಂದ ಕೊಲ್ಲಲ್ಪಡುತ್ತಿರುವುದೂ, ಸಮಸ್ತ ಜನರಿಂದ ಬಿಡಲ್ಪಟ್ಟಿರುವುದೂ, ಅನಾಥವೂ, ಬಳಲಿರುವುದೂ, ಕಾಲಿನ ಮುಂದೆ ಬಿದ್ದಿರುವುದೂ ಆದ ಆ ವೃಷಭವನ್ನು ಕಂಡು ನಗುತ್ತ ಇಂತೆಂದನು.

೩೯. ಈಶ್ವರನು ಹೇಳುತ್ತಾನೆ:—ಮಹಾತ್ಮಳಾದ ದೇವಿಯೆ! ಬ್ರಾಹ್ಮಣನ ಶಾಂತಿಯನ್ನು ನೋಡಿದೆಯಾ?

೪೦. ಪಾರ್ವತಿಯು ಹೇಳುತ್ತಾಳೆ:—ಪರಮೇಶ್ವರ! ನೀನು ನನಗೆ ಇಷ್ಟವನ್ನು ಬಯಸುವುದಾದರೆ ಈ ಬ್ರಾಹ್ಮಣನು ನಮ್ಮಲ್ಲಿ ಕೋಪಿಸಿಕೊಳ್ಳುವುದಕ್ಕಿಂತ ಮುಂಚೆಯೆ ವರವನ್ನು ಕೊಡು.

೪೧. ಅನಂತರ ಶಂಕರನು ಭಸ್ಮ, ಜಟೆ, ಶೂಲಗಳನ್ನು ಧರಿಸಿದವನೂ, ಚಂದ್ರಮೌಳಿಯೂ, ಅರ್ಧನಾರೀಶ್ವರನೂ ಆಗಿ ಆ ಬ್ರಾಹ್ಮಣನನ್ನು ಕುರಿತು ಇಂತೆಂದನು.

೪೨. "ಎಲೈ ಬ್ರಾಹ್ಮಣೋತ್ತಮನೆ! ನಿನ್ನ ಕೋಪವು ಶಾಂತವಾಗದಿರುವುದರಿಂದ ಇದು ಕ್ರೋಧಸ್ಥಾನವೆಂದು ಹೆಸರನ್ನು ಪಡೆಯುವುದು."

೪೩. ಅನಂತರ ಭೃಗುವು ತ್ರಿಲೋಚನನಾದ ಆ ಶಂಕರನನ್ನು ನೋಡಿ ಮೊಳಕಾಲನ್ನೂರಿ ಈ ಸ್ತೋತ್ರವನ್ನು ಹೇಳಿದನು.

ಭೃಗುರುವಾಚ :—

ಪ್ರಣಿಪತ್ಯ ಭೂತನಾಥಂ
 ಭವೋದ್ಭವಂ ಭೂತಿದಂ ಭಯಾತೀತಂ ।
ಭವಭೀತೋ ಭುವನಪತೇ
 ವಿಜ್ಞಪ್ತಿಂ ಕಿಂಚಿದಿಚ್ಛಾಮಿ ॥ ೪೪ ॥
ತ್ವದ್ಗುಣನಿಕರಾನ್ವಕ್ತುಂ
 ಕಾ ಶಕ್ತಿರ್ಮಾನುಷಸ್ಯಾಽಸ್ಯ ।
ವಾಸುಕಿರಪಿ ನ ತಾವದ್ವಕ್ತುಂ
 ವದನಸಹಸ್ರಂ ಭವೇದ್ಯಸ್ಯ ॥ ೪೫ ॥
ಭಕ್ತ್ಯಾ ತಥಾಽಪಿ ಶಂಕರ
 ಶಶಿಧರ ಕಿರಜಾಲಧವಲಿತಾಶೇಷ ।
ಸ್ತುತಿಮುಖರಸ್ಯ ಮಹೇಶ್ವರ
 ಪ್ರಸೀದ ತವ ಚರಣ ನಿರತಸ್ಯ ॥ ೪೬ ॥
ಸತ್ವಂ ರಜಸ್ತಮಸ್ತ್ವಂ
 ಸ್ಥಿತ್ಯುತ್ಪತ್ತಿವಿನಾಶನಂ ದೇವ ।
ಭವಭೀತೋ ಭುವನಪತೇ
 ಭುವನೇಶ ಶರಣನಿರತಸ್ಯ ॥ ೪೭ ॥

---

೪೪. ಭೃಗುವು ಹೇಳುತ್ತಾನೆ :—ಭೂತಗಳಿಗೆ ಒಡೆಯನೂ, ಭೂತಿದಾಯಕನೂ ಭಯಾತೀತನೂ, ಆದ ನಿನ್ನಲ್ಲಿ, ಸಂಸಾರದಿಂದ ಭಯಗೊಂಡ ನಾನು ಒಂದು ವಿಷಯವನ್ನು ವಿಜ್ಞಾಪಿಸಿಕೊಳ್ಳಲು ಬಯಸುತ್ತೇನೆ.

೪೫. ಶಂಕರ! ನಿನ್ನ ಗುಣಗಳನ್ನು ಹೊಗಳಲು ಮನುಷ್ಯನಾದ ಈ ನನಗೆ ಶಕ್ತಿ ಎಲ್ಲಿಯದು? ಸಾವಿರ ಬಾಯಿಯುಳ್ಳ ವಾಸುಕಿಯೂ ಹೊಗಳಲಾರನು.

೪೬. ಹಾಗಾದಾರೂ ಶಶಿಮೌಳಿಯೂ, ಕಾಂತಿಯ ಸಮೂಹದಿಂದ ಬೆಳ್ಳಗೆ ಮಾಡಲ್ಪಟ್ಟ ಸಮಸ್ತಲೋಕವುಳ್ಳವನೂ ಆದ ಶಂಕರನೇ! ನೀನು ನಿನ್ನ ಚರಣಭಕ್ತನಾಗಿ ಸ್ತುತಿಸುತ್ತಿರುವ ನನ್ನ ಭಕ್ತಿಗೆ ಪ್ರಸನ್ನನಾಗು.

೪೭. ನೀನು ಸತ್ವ, ರಜಸ್ತಮೋರೂಪನಾಗಿ, ಸೃಷ್ಟಿ, ಸ್ಥಿತಿ, ಲಯಕಾರಣನಾಗಿ ಜಗದೊಡೆಯನೂ ಆಗಿರುವೆ. ಸಂಸಾರದಿಂದ ಭಯಗೊಂಡವನೂ, ಶರಣಾಗತನೂ ಆದ ನನ್ನ ಭಕ್ತಿಯಿಂದ ಪ್ರಸನ್ನನಾಗು.

ಯಮನಿಯಮಯಜ್ಞದಾನಂ
ವೇದಾಭ್ಯಾಸಶ್ಚ ಧಾರಣಾಯೋಗಃ ।
ತ್ವದ್ಭಕ್ತೇಃ ಸರ್ವಮಿದಂ
ನಾರ್ಹಂತಿ ವೈ ಕಲಾಸಹಸ್ರಾಂಶಂ ॥ ೪೮ ॥

ಉತ್ಕೃಷ್ಟರಸ ರಸಾಯನ
ಖಡ್ಗಾಂಜನ ವಿವರ ಪಾದುಕಾಸಿದ್ಧಿಃ ।
ಚಿಹ್ನಂ ಹಿ ತವ ನತಾನಾಂ
ದೃಶ್ಯತ ಇಹ ಜನ್ಮನಿ ಪ್ರಕಟಂ ॥ ೪೯ ॥

ಶಾಠ್ಯೇ ನ ಯದಿ ಪ್ರಣಮತಿ
ವಿತರಸಿ ತಸ್ಯಾಽಪಿ ಭೂತಿಮಿಚ್ಛಯಾ ದೇವ ।
ಭವತಿ ಭವಚ್ಛೇದಕರೀ
ಭಕ್ತಿರ್ಮೋಕ್ಷಾಯ ನಿರ್ಮಿತಾ ನಾಥ ॥ ೫೦ ॥

ಪರದಾರಪರಸ್ವರತಂ
ಪರಪರಿಭವ ದುಃಖಶೋಕಸಂತಪ್ತಂ ।
ಪರವದನವೀಕ್ಷಣಪರಂ
ಪರಮೇಶ್ವರ ಮಾಂ ಪರಿತ್ರಾಹಿ ॥ ೫೧ ॥

ಅಧಿಕಾಭಿಮಾನಮುದಿತಂ
ಕ್ಷಣಭಂಗುರವಿಭವವಿಲಸಂತಂ ।
ಕ್ರೂರಂ ಕುಪಥಾಭಿಮುಖಂ
ಶಂಕರ ಶರಣಗತಂ ಪರಿತ್ರಾಹಿ ॥ ೫೨ ॥

---

೪೮. ಯಮ, ನಿಯಮ, ಯಜ್ಞ, ದಾನ, ವೇದಾಭ್ಯಾಸ, ಧಾರಣಾದಿಗಳು ನಿನ್ನ ಭಕ್ತಿಯ ಕಲೆಯ ಸಹಸ್ರಭಾಗಕ್ಕೂ ಸರಿಯಲ್ಲ.

೪೯. ನಿನ್ನನ್ನು ನಮಸ್ಕಾರಮಾಡಿದವರಲ್ಲಿ ಉತ್ತಮವಾದ ರಸ ರಸಾಯನ, ಖಡ್ಗ, ಅಂಜನ, ಪಾದುಕೆ ಇವುಗಳ ಸಿದ್ಧಿಯು ಚಿಹ್ನೆಯಾಗಿ ತೋರುವುದು.

೫೦. ನಿನ್ನನ್ನು ಶಾಠ್ಯದಿಂದ ನಮಸ್ಕಾರಮಾಡಿದರೂ ಅವರಿಗೆ ಸ್ವೇಚ್ಛೆಯಾಗಿ ಐಶ್ವರ್ಯವನ್ನು ಕೊಡುವೆ. ಸ್ವಾಮಿ! ನಿನ್ನಲ್ಲಿಮಾಡಿದ ಭಕ್ತಿಯು ಸಂಸಾರವನ್ನು ನಿವಾರಿಸಿ ಮೋಕ್ಷವನ್ನುಂಟುಮಾಡುವುದು.

೫೧–೫೨. ಪರಮೇಶ್ವರ! ಪರಪತ್ನಿ, ಪರರ ವಸ್ತುಗಳಲ್ಲಿ ಆಸಕ್ತನೂ, ದುಃಖ ಸಂತಪ್ತನೂ, ಪರರ ಮುಖವನ್ನು ನೋಡುವುದರಲ್ಲಿ ನಿರತನೂ ಆದ ನನ್ನನ್ನು ಕಾಪಾಡು. ಅತ್ಯಂತಾಭಿಮಾನದಿಂದ ಸಂತೋಷಗೊಂಡವನೂ, ಕ್ಷಣದಲ್ಲಿಯೆ ನಾಶವಾಗುವ ಐಶ್ವರ್ಯದಿಂದ ಪ್ರಕಾಶಿಸುವವನೂ, ಕ್ರೂರನೂ, ಕುಮಾರ್ಗಾಭಿಮುಖನೂ, ಶರಣಾಗತನೂ ಆದ ನನ್ನನ್ನು ಕಾಪಾಡು.

ದೀನಂ ದ್ವಿಜಂ ವರಾರ್ಥೇ
ಬಂಧುಜನೇ ನೈವ ಪೂರಿತಾ ಹ್ಯಾಶಾ ।
ಛಿಂಧಿ ಮಹೇಶ್ವರ ತೃಷ್ಣಾಂ
ಕಿಂ ಮೂಢಂ ಮಾಂ ವಿಡಂಬಯಸಿ ॥ ೫೩ ॥
ತೃಷ್ಣಾಂ ಹರಸ್ವ ಶೀಘ್ರಂ
ಲಕ್ಷ್ಮೀಂ ದದ ಹೃದಯವಾಸಿನೀಂ ನಿತ್ಯಂ ।
ಛಿಂಧಿ ಮದಮೋಹಪಾಶಂ
ಮಾಮುತ್ತಾರಯ ಭವಾಚ್ಚ ದೇವೇಶ ॥ ೫೪ ॥
ಕರುಣಾಭ್ಯುದಯಂ ನಾಮ
ಸ್ತೋತ್ರಮಿದಂ ಸರ್ವಸಿದ್ಧಿದಂ ದಿವ್ಯಂ ।
ಯಃ ಪಠತಿ ಭೃಗುಂ ಸ್ಮರತಿ ಚ
ಶಿವಲೋಕಮಸೌ ಪ್ರಯಾತಿ ದೇಹಾಂತೇ ॥ ೫೫ ॥
ಏತಚ್ಛ್ರುತ್ವಾ ಮಹಾದೇವಃ ಸ್ತೋತ್ರಂ ಚ ಭೃಗುಭಾಷಿತಂ ।
ಉವಾಚ ವರದೋಽಸ್ಮೀತಿ ದೇವ್ಯಾ ಸಹ ವರೋತ್ತಮಂ ॥ ೫೬ ॥

ಭೃಗುರುವಾಚ :—

ಪ್ರಸನ್ನೋ ದೇವದೇವೇಶ ಯದಿ ದೇಯೋ ವರೋ ಮಮ ।
ಸಿದ್ಧಿಕ್ಷೇತ್ರಮಿದಂ ಸರ್ವಂ ಭವಿತಾ ಮಮ ನಾಮತಃ ॥ ೫೭ ॥

---

೫೩. ನಾನು ವರದ ವಿಷಯದಲ್ಲಿಯೂ, ಬಂಧುಜನರಲ್ಲಿಯೂ ಆಶೆಯನ್ನು ಮುಗಿಸಿಕೊಳ್ಳಲಿಲ್ಲ. ಇಂತಹ ದೀನನೂ, ದ್ವಿಜನೂ ಮೂಢನೂ ಆದ ನನ್ನ ಆಶೆಯನ್ನು ನಿವಾರಿಸು. ಏತಕ್ಕೆ ನನ್ನನ್ನು ಅಣಕಿಸುತ್ತೀಯೆ?

೫೪. ಶಂಕರ! ನನ್ನ ಆಶೆಯನ್ನು ಬೇಗನೆ ಪರಿಹರಿಸು. ಯಾವಾಗಲೂ ಹೃದಯದಲ್ಲಿ ವಾಸಿಸುವ ಲಕ್ಷ್ಮಿಯನ್ನು ಕೊಡು. ಮದಮೋಹಗಳ ಪಾಶವನ್ನು ಕತ್ತರಿಸು. ನನ್ನನ್ನು ಸಂಸಾರದಿಂದ ಉದ್ಧರಿಸು."

೫೫–೫೬. ಸಮಸ್ತ ಸಿದ್ಧಿಯನ್ನೀಯುವುದೂ, ದಿವ್ಯವೂ ಆದ ಈ ಕರುಣಾಭ್ಯುದಯವೆಂಬ ಸ್ತೋತ್ರವನ್ನು ಪಠಿಸಿ ಭೃಗುವನ್ನು ಸ್ಮರಿಸುವವನು ದೇಹಾವಸಾನದಲ್ಲಿ ಶಿವಲೋಕಕ್ಕೆ ತೆರಳುವನು. ಮಹಾದೇವನು ಭೃಗುವು ಹೇಳಿದ ಈ ಸ್ತೋತ್ರವನ್ನು ಕೇಳಿ ದೇವಿಯೊಡನೆ, "ಎಲೈ ಮುನಿಯೆ! ಉತ್ತಮವಾದ ವರವನ್ನು ಕೊಡುವೆ"ನೆಂದು ಹೇಳಿದನು.

೫೭. ಭೃಗುವು ಹೇಳುತ್ತಾನೆ.—ದೇವೇಶ! ನೀನು ಪ್ರಸನ್ನನಾಗಿ ವರವನ್ನು ಕೊಡುವುದಾದರೆ ಈ ಕ್ಷೇತ್ರವೆಲ್ಲ ನನ್ನ ಹೆಸರಿನಿಂದ ಸಿದ್ಧಿಕ್ಷೇತ್ರವೆಂದು ಪ್ರಸಿದ್ಧಿಗೊಳ್ಳಲಿ.

ಭವದ್ಭಿಃ ಸನ್ನಿಧಾನೇನ ಸ್ಥಾತವ್ಯಂ ಹಿ ಸಹೋಮಯಾ ।
ದೇವಕ್ಷೇತ್ರಮಿದಂ ಪುಣ್ಯಂ ಯೇನ ಸರ್ವಂ ಭವಿಷ್ಯತಿ ॥ ೫೮ ॥
ಅತ್ರ ಸ್ಥಾನೇ ಮಹಾಸ್ಥಾನಂ ಕರೋಮಿ ಜಗದೀಶ್ವರ ।
ತವ ಪ್ರಸಾದಾದ್ದೇವೇಶ ಪೂರ್ಯಂತಾಂ ಮೇ ಮನೋರಥಾಃ ॥ ೫೯ ॥

ಈಶ್ವರ ಉವಾಚ :—

ಶ್ರಿಯಾ ಕೃತಮಿದಂ ಪೂರ್ವಂ ಕಿಂ ನ ಜ್ಞಾತಂ ತ್ವಯಾ ದ್ವಿಜ ।
ಅನುಮಾನ್ಯ ಶ್ರಿಯಂ ದೇವೀಂ ಯದೀಯಂ ಮನ್ಯತೇ ಭವಾನ್ ॥ ೬೦ ॥
ಕುರುಷ್ವ ಯದಭಿಪ್ರೇತಂ ತ್ವತ್ಕೃತಂ ನ ತದನ್ಯಥಾ ।
ಏವಮುಕ್ತ್ವಾ ಗತೇ ದೇವೇ ಸ್ನಾತ್ವಾ ಗತ್ವಾ ಭೃಗುಃ ಶ್ರಿಯಂ ॥ ೬೧ ॥
ಕೃತ್ವಾ ಚ ಪಾರಣಂ ತತ್ರ ವಸನ್ವಿಪ್ರಸ್ತ್ವಯಾ ಸಹ ।
ಶ್ರಿಯಾ ಚ ಸಹಿತಃ ಕಾಲ ಇದಂ ವಚನಮಬ್ರವೀತ್ ॥ ೬೨ ॥

ಭೃಗುರುವಾಚ :—

ಯದಿ ತೇ ರೋಚತೇ ಭದ್ರೇ ದುಃಖಾಸೀನಂ ಚ ತೇ ಯದಿ ।
ತ್ವಯಾವೃತೇ ಮಹಾಕ್ಷೇತ್ರೇ ಸ್ವೀಯಂ ಸ್ಥಾನಂ ಕರೋಮ್ಯಹಂ ॥ ೬೩ ॥

ಶ್ರೀರುವಾಚ :—

ಮಮ ನಾಮ್ನಾ ತು ವಿಪ್ರರ್ಷೇ ತವ ನಾಮ್ನಾ ತು ಶೋಭನಂ ।
ಸ್ಥಾನಂ ಕುರುಷ್ವಾಭಿಪ್ರೇತಮವಿರೋಧೇನ ಮೇ ಮತಿಃ ॥ ೬೪ ॥

---

೫೮. ನೀನು ಪಾರ್ವತಿಯೊಡನೆ ಇಲ್ಲಿ ನೆಲಸು. ಆದರಿಂದ ಇದು ಪುಣ್ಯಕರವಾದ ದೇವಕ್ಷೇತ್ರವಾಗುವುದು.

೫೯. ಮಹೇಶ್ವರ! ನಾನು ಈ ಸ್ಥಳದಲ್ಲಿ ಮಹಾಸ್ಥಾನವನ್ನು ರಚಿಸುವೆನು. ನಿನ್ನ ಅನುಗ್ರಹದಿಂದ ನನ್ನೀ ಮನೋರಥವು ಫಲಿಸಲಿ.

೬೦–೬೨. ದ್ವಿಜನೆ! ಹಿಂದೆ ಇದನ್ನು ಲಕ್ಷ್ಮಿಯು ರಚಿಸಿರುವಳು. ನೀನು ಇದನ್ನು ಮರೆತೆಯಾ? ಆ ಲಕ್ಷ್ಮಿಯನ್ನು ಒಪ್ಪಿಸಿ ನಿನ್ನಿಷ್ಟದಂತೆ ಮಾಡು. ನೀನು ಮಾಡಿದುದು ವ್ಯತ್ಯಾಸವಾಗುವುದಿಲ್ಲ. ಶಂಕರನು ಹೀಗೆ ಹೇಳಿ ಹೊರಟು ಹೋಗಲು ಭೃಗುವು ಅಲ್ಲಿ ಮಿಂದು ಲಕ್ಷ್ಮಿಯೆಡೆಗೆ ಹೋಗಿ ಪಾರಣೆಮಾಡಿ ಅವಳೊಡನೆ ವಾಸಿಸುತ್ತ ಕಾಲಾಂತರದಲ್ಲಿ ಇಂತೆಂದನು.

೬೩. ಭೃಗುವು ಹೇಳುತ್ತಾನೆ:—ಮಂಗಳಕರಳಾದ ಲಕ್ಷ್ಮಿಯೆ! ನಿನಗಿಷ್ಟವಾದರೆ, ದುಃಖವಿಲ್ಲದಿದ್ದರೆ ನೀನು ಸ್ವೀಕರಿಸಿದ ಈ ಕ್ಷೇತ್ರದಲ್ಲಿ ನನ್ನ ಸ್ಥಳವನ್ನು ರಚಿಸುವೆನು.

೬೪. ಲಕ್ಷ್ಮಿಯು ಹೇಳುತ್ತಾಳೆ:—ಬ್ರಾಹ್ಮಣನೆ! ನೀನು ನಿನ್ನ ಮತ್ತು ನನ್ನ ಹೆಸರಿನಿಂದ ಈ ಸ್ಥಾನವನ್ನು ವಿರೋಧವಿಲ್ಲದಂತೆ ರಚಿಸು. ಇದು ನನ್ನ ಅಭಿಪ್ರಾಯವು.

ಭೃಗುರುವಾಚ :—

ಕಚ್ಛಪಾಧಿಷ್ಠಿತಂ ಹ್ಯೇತತ್ತಸ್ಯ ಪೃಷ್ಠಿಗತಂ ರಮೇ ।
ಸಂಮಂತ್ರ್ಯ ಸಹಿತಂ ತೇನ ಶೋಭನಂ ಭವತೀ ಕುರು ॥ ೬೫ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಽಶೀತಿಸಾಹಸ್ರ್ಯಾಂ ಸಂಹಿತಾಯಾಂ
ಪಂಚಮೇ ಅವಂತ್ಯಖಂಡೇ ತೃತೀಯೇ ರೇವಾಖಂಡೇ
"ಭೃಗುಕಚ್ಛೋತ್ಪತ್ತಿವರ್ಣನಂ"
ನಾಮೈಕಾಽಶೀತ್ಯುತ್ತರಶತತಮೋಽಧ್ಯಾಯಃ

---

೬೫. ಭೃಗುವು ಹೇಳುತ್ತಾನೆ:—ಲಕ್ಷ್ಮೀಯೆ! ನೀನು ವಿಷ್ಣುವಿನೊಡನೆ ಆಲೋಚಿಸಿ ಈ ಸ್ಥಾನವನ್ನು ಆದಿ ಕೂರ್ಮನ ಬೆನ್ನಿನ ಮೇಲಿರುವಂತೆ ಮಾಡಿ ಅಲಂಕರಿಸು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ
ಶ್ರೀ ಸ್ಕಾಂದಮಹಾಪುರಾಣದ ಐದನೆಯ ಅವಂತ್ಯಖಂಡದ ಮೂರನೆಯ ರೇವಾಖಂಡದಲ್ಲಿ
"ಭೃಗುಕಚ್ಛೋತ್ಪತ್ತಿವರ್ಣನ"ವೆಂಬ
ನೂರೆಂಬತ್ತೊಂದನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

## ಅಥ ದ್ವ್ಯಶೀತ್ಯುತ್ತರಶತತಮೋಽಧ್ಯಾಯಃ

### ಭೃಗುಕಚ್ಛತೀರ್ಥಮಾಹಾತ್ಮ್ಯವರ್ಣನಂ

ಶ್ರೀ ಮಾರ್ಕಂಡೇಯ ಉವಾಚ :—

ತತೋ ಭೃಗುಃ ಶ್ರಿಯಾ ಚೈವ ಸಮೇತಃ ಕಚ್ಛಪಂ ಗತಃ ।
ಅಭಿನಂದ್ಯ ಯಥಾನ್ಯಾಯಮುವಾಚ ವಚನಂ ಶುಭಂ ॥ ೧ ॥
ತ್ವಯಾ ಧೃತಾ ಧರಾ ಸರ್ವಾ ತಥಾ ಲೋಕಾಶ್ಚರಾಚರಾಃ ।
ತಥೈವ ಪುಣ್ಯಭಾವತ್ವಾತ್ಸ್ಥಿತಸ್ತತ್ರ ಮಹಾಮತೇ ॥ ೨ ॥
ಚಾತುರ್ವಿಧ್ಯಸ್ಯ ಸಂಸ್ಥಾನಂ ಕರೋಮಿ ರಮಯಾ ಸಹ ।
ಯದಿ ತ್ವಂ ಮನ್ಯಸೇ ದೇವ ತದಾದೇಶಯ ಮಾಂ ವಿಭೋ ॥ ೩ ॥

ಕೂರ್ಮ ಉವಾಚ :—

ಏವಮೇವ ದ್ವಿಜಶ್ರೇಷ್ಠ ಮಮ ನಾಮಾಂಕಿತಂ ಪುರಂ ।
ಭವಿಷ್ಯತಿ ಮಹತ್ಕಾಲಂ ಮಮೋಪರಿ ಸುಸಂಸ್ಥಿತಂ ॥ ೪ ॥
ಅಚಲಂ ಸುಸ್ಥಿರಂ ತಾತ ನ ಭೀಃ ಕಾರ್ಯಾ ಸುಲೋಚನೇ ।
ಏತಚ್ಛ್ರುತ್ವಾ ಶುಭಂ ವಾಕ್ಯಂ ಕಚ್ಛಪಸ್ಯ ಮುಖಾಚ್ಚ್ಯುತಂ ॥ ೫ ॥
ಹೃಷ್ಟಸ್ತುಷ್ಟಃ ಶ್ರಿಯಾಸಾರ್ಧಂ ಪದ್ಮಯೋನಿಸುತೋ ಭೃಗುಃ ।
ಅಭೀಚಿ ಉದಯೇ ಪ್ರಾಪ್ತೇ ಕೃತಕೌತುಕಮಂಗಲಃ ॥ ೬ ॥

---

## ಕನ್ನಡದ ಅನುವಾದ

### ಭೃಗುಕಚ್ಛತೀರ್ಥಮಾಹಾತ್ಮ್ಯವರ್ಣನ

೧—೨. ಶ್ರೀ ಮಾರ್ಕಂಡೇಯನು ಹೇಳುತ್ತಾನೆ:—ಬಳಿಕ ಭೃಗುವು ಲಕ್ಷ್ಮಿಯೊಡನೆ ಕೂರ್ಮನೆಡೆಗೆ ಹೋಗಿ ಯಥಾನ್ಯಾಯವಾಗಿ ಅವನನ್ನು ಅಭಿನಂದಿಸಿ ಹೀಗೆ ನುಡಿದನು. "ಪ್ರಾಜ್ಞನೆ! ನೀನು ಸಮಗ್ರಭೂಮಿಯನ್ನೂ, ಚರಾಚರ ಲೋಕಗಳನ್ನೂ ಧರಿಸಿರುವೆ. ಅವುಗಳು ನಿನ್ನಲ್ಲಿ ಪುಣ್ಯಕರಗಳಾಗಿ ನೆಲೆಸಿರುವುವು.

೩. ಇಲ್ಲಿ ನೀನು ಒಪ್ಪಿದರೆ ನಾನು ಲಕ್ಷ್ಮಿಯೊಡನೆ ನಾಲ್ಕುವಿಧವಾದ ಸ್ಥಾನಗಳನ್ನು ರಚಿಸುವೆನು. ಸ್ವಾಮಿ! ಆದ್ದರಿಂದ ಅಪ್ಪಣೆ ಮಾಡು."

೪—೬. ಕೂರ್ಮನು ಹೇಳುತ್ತಾನೆ:—ದ್ವಿಜವರ್ಯನೆ! ಹೀಗೆಯೇ ಈ ಪಟ್ಟಣವು ನನ್ನ ಹೆಸರಿನಿಂದ ಚಿಹ್ನೆಗೊಂಡು ಬಹುಕಾಲದವರೆಗೆ ನನ್ನಮೇಲೆ ಅಲ್ಲಾಡದೆ ಸ್ಥಿರವಾಗಿರುವುದು. ಸುಂದರಿಯಾದ ಲಕ್ಷ್ಮಿಯೇ! ನೀನು ಹೆದರಬೇಡ." ಕಚ್ಛಪನು ಹೇಳಿದ ಈ ಶುಭವಾಕ್ಯವನ್ನು ಕೇಳಿ ಬ್ರಹ್ಮನಮಗನಾದ ಭೃಗುವು ಸಂತೋಷಗೊಂಡವನಾಗಿ ಸೂರ್ಯೋದಯಕಾಲದಲ್ಲಿ ಕೌತುಕಮಂಗಲವನ್ನು ನೆರವೇರಿಸಿದನು.

ನಂದನೇ ವತ್ಸರೇ ಮಾಘೇ ಪಂಚಮ್ಯಾಂ ಭರತರ್ಷಭ ।
ಶಸ್ತೇ ತು ಹ್ಯುತ್ತರಾಯೋಗೇ ಕುಂಭಸ್ಥೇ ಶಶಿಮಂಡಲೇ ॥ ೭ ॥
ರೇವಾಯಾ ಉತ್ತರೇ ತೀರೇ ಗಂಭೀರೇಚಾಭಿವಾರುಣೇ ।
ಪ್ರಾಗುದಕ್ಪ್ರವಣೇ ದೇಶೇ ಕೋಟಿತೀರ್ಥಸಮನ್ವಿತಂ ॥ ೮ ॥
ಕ್ರೋಶಪ್ರಮಾಣಂ ತತ್ಕ್ಷೇತ್ರಂ ಪ್ರಾಸಾದಶತಸಂಕುಲಂ ।
ಅಚಿರೇಣೈವ ಕಾಲೇನ ತಪೋಬಲಸಮನ್ವಿತಃ ।
ವಿಚಿಂತ್ಯ ವಿಶ್ವಕರ್ಮಾಣಂ ಚಕಾರ ಭೃಗುಸತ್ತಮಃ ॥ ೯ ॥
ಬ್ರಾಹ್ಮಣಾ ವೇದವಿದ್ವಾಂಸಃ ಕ್ಷತ್ರಿಯಾ ರಾಜ್ಯಪಾಲಕಾಃ ।
ವೈಶ್ಯಾ ವೃತ್ತಿರತಾಸ್ತತ್ರ ಶೂದ್ರಾಃ ಶುಶ್ರೂಷಕಾಸ್ತ್ರಿಷು ॥ ೧೦ ॥
ಏವಂ ಶ್ರಿಯಾ ವೃತಂ ಕ್ಷೇತ್ರಂ ಪರಮಾನಂದನಂದಿತಂ ।
ನಿರ್ಮಿತಂ ಭೃಗುಣಾ ತಾತ ಸರ್ವಪಾತಕನಾಶನಂ ॥ ೧೧ ॥

॥ ಇತಿ ಭೃಗುಕಚ್ಛೋತ್ಪತ್ತಿಃ ॥

ಮಾರ್ಕಂಡೇಯ ಉವಾಚ:—

ತತಃ ಕಾಲೇನ ಮಹತಾ ಕಸ್ಮಿಂಶ್ಚಿತ್ಕಾರಣಾಂತರೇ ।
ದೇವಲೋಕಂ ಜಗಾಮಾಽಶು ಲಕ್ಷ್ಮೀರ್ಋಷಿಸಮಾಗಮೇ ॥ ೧೨ ॥

---

೭–೯. ಅವನು ನಂದನಸಂವತ್ಸರದ ಮಾಘಮಾಸದ ಪಂಚಮಿಯ ದಿನ ಶ್ರೇಷ್ಠವಾದ ಉತ್ತರಾ ನಕ್ಷತ್ರದಲ್ಲಿ ಚಂದ್ರನು ಕುಂಭರಾಶಿಯಲ್ಲಿರಲು ನರ್ಮದಾ ನದಿಯ ಉತ್ತರದಡದಲ್ಲಿ ಪಶ್ಚಿಮದಿಕ್ಕಿಗೆ ಅಭಿಮುಖವಾಗಿ ಪೂರ್ವೋತ್ತರವಾಗಿ ವ್ಯಾಪಿಸಿರುವ ದೇಶದಲ್ಲಿ ಕೋಟಿತೀರ್ಥಗಳಿಂದ ಕೂಡಿರುವುದೂ, ಎರಡು ಮೈಲಿ ವಿಸ್ತೀರ್ಣವೂ, ನೂರು ಪ್ರಾಸಾದಗಳಿಂದ ತುಂಬಿರುವುದೂ ಆದ ಕ್ಷೇತ್ರವನ್ನು ವಿಶ್ವಕರ್ಮನನ್ನು ಚಿಂತಿಸಿ ತಪಸ್ಸಿನ ಬಲದಿಂದ ಕೂಡಲೇ ನಿರ್ಮಿಸಿದನು.

೧೦. ವೇದಾಧ್ಯಯನಮಾಡಿದ ಬ್ರಾಹ್ಮಣರು, ರಾಜ್ಯವನ್ನು ಪಾಲಿಸುವ ಕ್ಷತ್ರಿಯರು, ವ್ಯಾಪಾರದಲ್ಲಿ ಆಸಕ್ತರಾದ ವೈಶ್ಯರು, ಬ್ರಾಹ್ಮಣಾದಿ ಮೂರು ವರ್ಣದವರನ್ನು ಸೇವಿಸುವ ಶೂದ್ರರು ಇವರನ್ನು ಅಲ್ಲಿ ಸ್ಥಾಪಿಸಿದನು.

೧೧. ಹೀಗ ಭೃಗುವು ಅಲ್ಲಿ ಲಕ್ಷ್ಮಿಯಿಂದ ಕೂಡಿರುವುದೂ, ಅತ್ಯಾನಂದದಿಂದ ತುಂಬಿರುವುದೂ, ಸಮಸ್ತಪಾಪಗಳನ್ನು ನಿವಾರಿಸುವುದೂ ಆದ ಆ ಕ್ಷೇತ್ರವನ್ನು ನಿರ್ಮಿಸಿದನು.

೧೨–೧೩. ಮಾರ್ಕಂಡೇಯನು ಹೇಳುತ್ತಾನೆ:—ಅನಂತರ ಬಹುಕಾಲದ ತರುವಾಯ ಲಕ್ಷ್ಮಿಯು ಯಾವುದೊ ಒಂದು ಕಾರಣದಿಂದ ಋಷಿಗಳ ಸಮೂಹ

ಸಮರ್ಪ್ಯ ಕುಂಚಿಕಾಟ್ಪಾಲಂ ಭೃಗವೇ ಬ್ರಹ್ಮವಾದಿನೇ ।
ಪಾಲಯಸ್ವ ಯಥಾರ್ಥಂ ವೈ ಸ್ಥಾನಕಂ ಮಮ ಸುವ್ರತ ॥ ೧೩ ॥
ದೇವಕಾರ್ಯಾಣ್ಯಶೇಷಾಣಿ ಕೃತ್ವಾ ಶ್ರೀಃ ಪುನರಾಗತಾ ।
ಆಜಗಾಮ ರಮಾ ದೇವೀ ಭೃಗುಕಚ್ಛಂ ತ್ವರಾನ್ವಿತಾ ॥ ೧೪ ॥
ಪ್ರಾರ್ಥಿತಂ ಕುಂಚಿಕಾಟ್ಪಾಲಂ ಸ್ವಗೃಹಂ ಸಪರಿಗ್ರಹಂ ।
ಭೃಗುರ್ಯದಾ ತದಾ ಪಾರ್ಥ ಮಿಥ್ಯಾ ನಾಸ್ತಿ ತದಾಽವದತ್ ॥ ೧೫ ॥
ಏವಂ ವಿವಾದಃ ಸುಮಹಾನ್ ಸಂಜಾತಶ್ಚ ನರೇಶ್ವರ ।
ಮಮೇತಿ ಮಮ ಚೈವೇತಿ ಪರಸ್ಪರಸಮಾಗಮೇ ॥ ೧೬ ॥
ತತಃ ಕಾಲೇನ ಮಹತಾ ಭೃಗುಣಾ ಪರಮರ್ಷಿಣಾ ।
ಚಾತುರ್ವಿದ್ಯಪ್ರಮಾಣಾರ್ಥಂ ಚಕಾರ ಮಹತೀಂ ಸ್ಥಿತಂ ॥ ೧೭ ॥
ಅಸ್ಮದೀಯಂ ಯಥಾ ಸರ್ವಂ ನಗರಂ ಮೃಗಲೋಚನೇ ।
ಚಾತುರ್ವಿದ್ಯಾ ದ್ವಿಜಾಃ ಸರ್ವೇ ತಥಾ ಜಾನಂತಿ ಸುಂದರಿ ॥ ೧೮ ॥

ಶ್ರೀರುವಾಚ :—

ಪ್ರಮಾಣಂ ಮಮ ವಿಪ್ರೇಂದ್ರ ಚಾತುರ್ವರ್ಣ್ಯಾ ನ ಸಂಶಯಃ ।
ಮದೀಯಂ ವಾ ತ್ವದೀಯಂ ವಾ ಕಥಯಂತು ದ್ವಿಜೋತ್ತಮಾಃ ॥ ೧೯ ॥
ತತಃ ಸಮಸ್ತೈರ್ವಿಬುಧೈಃ ಸಂಪ್ರಧಾರ್ಯ ಪರಸ್ಪರಂ ।
ದ್ವಿಧಾ ತೈರ್ವಾಕ್ಸ್ಥಲಂ ದೃಷ್ಟ್ವಾ ಬ್ರಾಹ್ಮಣಾ ನೃಪಸಂಹಿತಂ ॥ ೨೦ ॥

---

ದಲ್ಲಿ ಬ್ರಹ್ಮಜ್ಞಾನಿಯಾದ ಭೃಗುವಿಗೆ ನನ್ನ ಸ್ಥಾನವನ್ನು ಕಾಪಾಡೆಂದು ತನ್ನ ಪ್ರಾಸಾದವನ್ನು ಅವನಿಗೆ ಒಪ್ಪಿಸಿ ದೇವಲೋಕಕ್ಕೆ ತೆರಳಿದಳು.

೧೪—೧೫. ಅವಳು ದೇವಕಾರ್ಯವನ್ನು ಪೂರಯಿಸಿ ಬೇಗನೆ ಭೃಗು ಕಚ್ಛಕ್ಕೆ ಬಂದು ನನ್ನ ಮನೆಯನ್ನು ಕೊಡೆಂದು ಭೃಗುವನ್ನು ಕೇಳಿದಳು. ಆದರೆ ಅವನು ನಿನ್ನ ಮನೆಯಿಲ್ಲ ಎಂದು ಸುಳ್ಳು ಹೇಳಿದನು.

೧೬—೧೭. ಅನಂತರ ಅವರೀರ್ವರಲ್ಲಿ ಇದು ನನ್ನ ಸ್ಥಾನ ನನ್ನ ಸ್ಥಾನ ಎಂದು ದೊಡ್ಡ ಜಗಳವುಂಟಾಯಿತು. ಅನಂತರ ಬಹುಕಾಲದ ಮೇಲೆ ಭೃಗುವು ಸ್ಥಾನ ನಿರ್ಣಯಕ್ಕಾಗಿ ಚಾತುರ್ವಿದ್ಯ ಬ್ರಾಹ್ಮಣರನ್ನು ಪ್ರಮಾಣವಾಗಿಟ್ಟುಕೊಂಡನು.

೧೮. "ಮೃಗಾಕ್ಷಿ! ಇದೆಲ್ಲ ನನ್ನ ಸ್ಥಾನವೆಂಬುದನ್ನು ಈ ಚಾತುರ್ವಿದ್ಯ ಬ್ರಾಹ್ಮಣರು ಅರಿತಿರುವರು" ಎಂದನು.

೧೯—೨೦. ಲಕ್ಷ್ಮಿಯು ಹೇಳುತ್ತಾಳೆ:—"ಬ್ರಾಹ್ಮಣವರ್ಯನೆ! ಚಾತುರ್ವಿದ್ಯ ಬ್ರಾಹ್ಮಣರು ನನಗೆ ಪ್ರಮಾಣರೇ. ಅವರು ಈ ಸ್ಥಾನವು ನನ್ನದೊ, ನಿನ್ನದೊ ಹೇಳಲಿ." ಅನಂತರ ಸಕಲ ಬ್ರಾಹ್ಮಣರೂ ಅನ್ಯೋನ್ಯವಾಗಿ ನಿಶ್ಚಯಿಸಿ ಆ ಸ್ಥಳ ವನ್ನು ಕಂಡು ಎರಡು ವಿಧವಾಗಿ ಹೇಳಿದರು.

ಅಷ್ಟಾದಶ ಸಹಸ್ರಾಣಿ ನೋಚುರ್ವೈ ಕಿಂಚಿದುತ್ತರಂ ।
ಅಷ್ಟಾದಶ ಸಹಸ್ರೇಷು ಭೃಗುಕೋಪಭಯಾನ್ನೃಪ ।
ಉಕ್ತಂ ಚ ತಾಲಕಂ ಹಸ್ತೇ ಯಸ್ಯ ತಸ್ಯೇದಮುತ್ತರಂ ॥ ೨೧ ॥
ಏತಚ್ಛ್ರುತ್ವಾ ತು ಸಾ ದೇವೀ ನಿಗಮಂ ನೈಗಮೈಃ ಕೃತಂ ।
ಕ್ರೋಧೇನ ಮಹತಾವಿಷ್ಟಾ ಶಶಾಪ ದ್ವಿಜಪುಂಗವಾನ್ ॥ ೨೨ ॥

ಶ್ರೀ ದೇವ್ಯುವಾಚ :—

ಯಸ್ಮಾತ್ಸತ್ಯಂ ಸಮುತ್ಸೃಜ್ಯ ಲೋಭೋಪಹತಮಾನಸೈಃ ।
ಮದೀಯಂ ಲೋಪಿತಂ ಸ್ಥಾನಂ ತಸ್ಮಾಚ್ಛೃಣ್ವಂತು ಮೇ ಗಿರಂ ॥ ೨೩ ॥
ತ್ರಿಪೌರುಷಾ ಭವೇದ್ವಿದ್ಯಾ ತ್ರಿಪುರುಷಂ ನ ಭವೇದ್ಧನಂ ।
ನ ದ್ವಿತೀಯಸ್ತು ವೋ ವೇದಃ ಪಠಿತೋ ಭವತಿ ದ್ವಿಜಾಃ ॥ ೨೪ ॥
ಗೃಹಾಣಿ ನ ದ್ವಿಭೌಮಾನಿ ನ ಚ ಭೂತಿಃ ಸ್ಥಿರಾ ದ್ವಿಜಾಃ ।
ಪಕ್ಷಪಾತೇನ ವೋ ಧರ್ಮೋ ನ ಚ ನಿಃಶ್ರೇಯಭಾವತಃ ॥ ೨೫ ॥
ಇಷ್ಟೋ ಗೋತ್ರಜನಃ ಕಶ್ಚಿಲ್ಲೋಭೇನಾವೃತಮಾನಸಃ ।
ನ ಚ ದ್ವೈಧಂ ಪರಿತ್ಯಜ್ಯ ಹ್ಯೇಕಂ ಸತ್ಯಂ ಭವಿಷ್ಯತಿ ॥ ೨೬ ॥

---

೨೧. ಅವರಲ್ಲಿ ಹದಿನೆಂಟು ಸಾವಿರ ಮಂದಿಗಳು ಯಾವ ಉತ್ತರವನ್ನೂ ಹೇಳಲಿಲ್ಲ. ಅವರು ಭೃಗುವಿನ ಕೋಪದಿಂದ ಭಯಗೊಂಡು ಚಪ್ಪಾಳೆಯೇ ಉತ್ತರವೆಂದರು.

೨೨. ಆ ಲಕ್ಷ್ಮಿಯು ಆ ಬ್ರಾಹ್ಮಣರು ಮಾಡಿದ ನಿರ್ಣಯವನ್ನು ಕೇಳಿ ಅತಿ ಕೋಪದಿಂದ ಬ್ರಾಹ್ಮಣರನ್ನು ಶಪಿಸಿದಳು.

೨೩. ಶ್ರೀ ದೇವಿಯು ಹೇಳುತ್ತಾಳೆ:—ಲೋಭದಿಂದ ಕೂಡಿದ ಮನಸ್ಸುಳ್ಳ ನೀವು ಸತ್ಯವನ್ನು ತ್ಯಜಿಸಿ ನನ್ನ ಸ್ಥಾನವನ್ನು ಹಾಳುಮಾಡಿರುವುದರಿಂದ ನನ್ನ ಮಾತನ್ನು ಕೇಳಿರಿ.

೨೪. ನಿಮ್ಮಲ್ಲಿ ಮೂರು ತಲೆಯುವರು ಮಾತ್ರ ವಿದ್ಯಾವಂತರಾಗುವರು. ಮೂರು ತಲೆಯವರು ದ್ರವ್ಯವಿಲ್ಲದವರಾಗುವರು. ನಿಮ್ಮಲ್ಲಿ ಎರಡನೆಯ ವಂಶದವನು ವೇದಾಧ್ಯಯನ ಮಾಡುವುದಿಲ್ಲ.

೨೫. ನಿಮಗೆ ಮಹಡಿ ಮನೆಗಳು ಇರುವುದಿಲ್ಲ. ಐಶ್ವರ್ಯವು ಸ್ಥಿರವಾಗಿರುವುದಿಲ್ಲ, ನೀವು ಪಕ್ಷಪಾತದಿಂದ ಧರ್ಮವನ್ನಾಚರಿಸುವಿರಿ. ಮೋಕ್ಷಕ್ಕಾಗಿ ಅಲ್ಲ.

೨೬–೨೭. ನಿಮ್ಮ ಬಂಧುಗಳು ಆಶೆಯಿಂದ ಕೂಡಿರುವರು. ನೀವು ಸುಳ್ಳನ್ನು ಬಿಟ್ಟು ಸತ್ಯವನ್ನು ಮಾತ್ರ ಆಡುವುದಿಲ್ಲ. ಇದು ಮೊದಲ್ಗೊಂಡು ಬ್ರಾಹ್ಮಣರು

ಅದ್ಯಪ್ರಭೃತಿ ಸರ್ವೇಷಾಮಹಂಕಾರೋ ದ್ವಿಜನ್ಮನಾಂ ।
ನ ಪಿತಾ ಪುತ್ರವಾಕ್ಯೇನ ನ ಪುತ್ರಃ ಪಿತೃಕರ್ಮಣಿ ॥ ೨೭ ॥
ಅಹಂಕಾರಕೃತಾಃ ಭವಿಷ್ಯಂತಿ ನ ಸಂಶಯಃ ।
ಇತಿ ಶಪ್ತ್ವಾ ರಮಾದೇವೀ ತದೈವ ಚ ದಿವಂ ಯಯೌ ॥ ೨೮ ॥
ತತೋ ಗತಾಯಾಂ ವೈ ಲಕ್ಷ್ಮ್ಯಾಂ ದೇವಾ ಬ್ರಹ್ಮರ್ಷಯೋಽಮಲಾಃ ।
ಕ್ರೋಧಲೋಭಮಿದಂ ಸ್ಥಾನಂ ತೇಽಪಿ ಚೋಕ್ತ್ವಾ ದಿವಂ ಯಯುಃ॥೨೯॥
ಗತಾಂ ದೃಷ್ಟ್ವಾ ತತೋ ದೇವೀಮೃಷೀಂಶ್ಚೈವ ತಪೋಧನಾನ್ ।
ಭೃಗುಶ್ಚ ಪರಮೇಷ್ಠೀ ಸ ವಿಷಾದಮಗಮತ್ಪರಂ ।
ಪ್ರಸಾದಯಾಮಾಸ ಪುನಃ ಶಂಕರಂ ತ್ರಿಪುರಾಂತಕಂ ॥ ೩೦ ॥
ತಪಸಾ ಮಹತಾ ಪಾರ್ಥ ತತಸ್ತುಷ್ಟೋ ಮಹೇಶ್ವರಃ ।
ಉವಾಚ ವಚನಂ ಕಾಲೇ ಹರ್ಷಯನ್ ಭೃಗುಸತ್ತಮಂ ॥ ೩೧ ॥
ಕಿಂ ವಿಷಣ್ಣೋಽಸಿ ವಿಪ್ರೇಂದ್ರ ಕಿಂ ವಾ ಸಂತಾಪಕಾರಣಂ ।
ಮಯಿ ಪ್ರಸನ್ನೇಽಪಿ ತವ ಹ್ಯೇತತ್ಕಥಯ ಮೇಽನಘ ॥ ೩೨ ॥

ಭೃಗುರುವಾಚ :—

ಶಾಪಯಿತ್ವಾ ದ್ವಿಜಾನ್ ಸರ್ವಾನ್ಪುರಾ ಲಕ್ಷ್ಮೀರ್ವಿನಿರ್ಗತಾ ।
ಅಪವಿತ್ರಮಿದಂ ಚೋಕ್ತ್ವಾ ತತೋ ದೇವಾ ವಿನಿರ್ಗತಾಃ ॥ ೩೩ ॥

---

ಅಹಂಕಾರಗೊಳ್ಳುವರು. ತಂದೆಯು ಮಗನ ಮಾತಿನಂತೆ ನಡೆಯುವುದಿಲ್ಲ. ಮಗನು ತಂದೆಯ ಕೆಲಸದಲ್ಲಿ ಆಸಕ್ತನಾಗುವುದಿಲ್ಲ.

೨೮–೨೯. ಎಲ್ಲರೂ ಅಹಂಕಾರಿಗಳಾಗುವರು. ಶ್ರೀ ದೇವಿಯು ಹೀಗೆ ಶಪಿಸಿ ಆಗಲೇ ಸ್ವರ್ಗಕ್ಕೆ ತೆರಳಿದಳು. ಲಕ್ಷ್ಮಿಯು ಹೊರಟುಹೋಗಲು ದೇವತೆಗಳೂ, ಪವಿತ್ರರಾದ ಬ್ರಹ್ಮರ್ಷಿಗಳೂ ಈ ಸ್ಥಳವು ಕ್ರೋಧಲೋಭಗಳಿಗೆ ಆಶ್ರಯವಾದುದೆಂದು ಹೇಳಿ ಸ್ವರ್ಗಕ್ಕೆ ಹೊರಟುಹೋದರು.

೩೦–೩೧. ಆ ಭೃಗು ಮಹರ್ಷಿಯು ಲಕ್ಷ್ಮಿಯೂ, ಋಷಿಗಳೂ, ಮುನಿಗಳೂ ಹೊರಟು ಹೋದುದನ್ನು ನೋಡಿ ಅತ್ಯಂತ ವ್ಯಥೆಗೊಂಡನು. ಅವನು ಮಹಾತಪಸ್ಸಿನಿಂದ ತ್ರಿಪುರಾಂತಕನಾದ ಶಂಕರನನ್ನು ಸಂತೋಷಗೊಳಿಸಿದನು. ಅನಂತರ ಸಂತುಷ್ಟನಾದ ಮಹೇಶ್ವರನು ಕಾಲಾಂತರದಲ್ಲಿ ಭೃಗುಮುನಿಯನ್ನು ಸಂತೋಷಗೊಳಿಸುತ್ತ ಇಂತೆಂದನು.

೩೨. "ಬ್ರಾಹ್ಮಣೋತ್ತಮನೆ! ನಾನು ಪ್ರಸನ್ನನಾಗಿದ್ದರೂ ಏಕೆ ವ್ಯಥೆಗೊಂಡಿರುವೆ? ನಿನ್ನ ಸಂತಾಪಕ್ಕೆ ಕಾರಣವೇನು? ಇದನ್ನು ನನಗೆ ಹೇಳು."

೩೩. ಭೃಗುವು ಹೇಳುತ್ತಾನೆ:—ಹಿಂದೆ ಲಕ್ಷ್ಮಿಯು ಬ್ರಾಹ್ಮಣರನ್ನೆಲ್ಲ ಶಪಿಸಿ ಹೊರಟುಹೋದಳು. ಅನಂತರ ದೇವತೆಗಳೂ ಇದು ಅಪವಿತ್ರವಾದ ಸ್ಥಾನವೆಂದು ಹೇಳಿ ಹೊರಟುಹೋದರು.

**ಈಶ್ವರ ಉವಾಚ :—**

ಪುರಾ ಮಯಾ ಯಥಾ ಪ್ರೋಕ್ತಂ ತತ್ತಥಾ ನ ತದನ್ಯಥಾ ।
ಕ್ರೋಧಸ್ಥಾನಮಸಂದೇಹಂ ತಥಾಽನ್ಯದಪಿ ತಚ್ಛೃಣು ॥ ೩೪ ॥
ತತ್ರ ಸ್ಥಾನಸಮುದ್ಭೂತಾ ಮಹದ್ಭಯವಿವರ್ಜಿತಾಃ ।
ಬ್ರಾಹ್ಮಣಾ ಮತ್ಪ್ರಸಾದೇನ ಭವಿಷ್ಯಂತಿ ನ ಸಂಶಯಃ ॥ ೩೫ ॥
ವೇದವಿದ್ಯಾವ್ರತಸ್ನಾತಾಃ ಸರ್ವಶಾಸ್ತ್ರವಿಶಾರದಾಃ ।
ಯೇಽಪಿ ತೇ ಶತಸಾಹಸ್ರಾಸ್ತ್ವರಿತಾ ಹ್ಯಾಗತಾಸ್ತ್ವಿಹ ॥ ೩೬ ॥
ಅಪಠಸ್ಯಾಽಪಿ ಮೂರ್ಖಸ್ಯ ಸರ್ವಾಽವಸ್ಥಾಂ ಗತಸ್ಯ ಚ ।
ಉತ್ತರಾದುತ್ತರಂ ಶಕ್ತೋ ದಾತುಂ ನ ತು ಭೃಗೂತ್ತಮ ॥ ೩೭ ॥
ಕೋಟಿತೀರ್ಥಮಿದಂ ಸ್ಥಾನಂ ಸರ್ವಪಾಪಪ್ರಣಾಶನಂ ।
ಅದ್ಯ ಪ್ರಭೃತಿ ವಿಪ್ರೇಂದ್ರ ಭವಿಷ್ಯತಿ ನ ಸಂಶಯಃ ॥ ೩೮ ॥
ಮತ್ಪ್ರಸಾದಾದ್ದೇವಗಣೈಃ ಸೇವಿತಂ ಚ ಭವಿಷ್ಯತಿ ।
ಭೃಗುಕ್ಷೇತ್ರೇ ಮೃತಾ ಯೇ ತು ಕೃಮಿಕೀಟ ಪತಂಗಕಾಃ ॥ ೩೯ ॥
ವಾಸಸ್ತೇಷಾಂ ಶಿವೇ ಲೋಕೇ ಮತ್ಪ್ರಸಾದಾದ್ಭವಿಷ್ಯತಿ ।
ವೃಷಖಾತೇ ನರಃ ಸ್ನಾತ್ವಾ ಪೂಜಯಿತ್ವಾ ಮಹೇಶ್ವರಂ ॥ ೪೦ ॥

---

೩೪. ಈಶ್ವರನು ಹೇಳುತ್ತಾನೆ:—ಹಿಂದೆ ನಾನು ಹೇಳಿರುವಂತೆ ಇದು ನಿಶ್ಚಯವಾಗಿಯೂ ಕ್ರೋಧಸ್ಥಾನವು. ಇನ್ನೊಂದು ಮಾತನ್ನು ಕೇಳು.

೩೫. ಆ ಸ್ಥಾನದಲ್ಲಿ ಹುಟ್ಟಿದ ಬ್ರಾಹ್ಮಣರು ನನ್ನ ಮಾತಿನಿಂದ ಅತ್ಯಂತ ಭಯವಿಲ್ಲದೆ ಇರುವರು.

೩೬. ವೇದವಿದ್ಯೆಯನ್ನು ಕಲಿತವರೂ, ವ್ರತಸ್ನಾನಮಾಡಿದವರೂ, ಸಮಸ್ತ ಶಾಸ್ತ್ರನಿಪುಣರೂ ಆದ ಆ ಲಕ್ಷಮಂದಿ ಬ್ರಾಹ್ಮಣರು ಇಲ್ಲಿಗೆ ಬರಲಿ.

೩೭. ಆ ಬ್ರಾಹ್ಮಣರಲ್ಲಿ ಓದದಿರುವವನೂ, ಮೂರ್ಖನೂ, ಸಕಲಾವಸ್ಥೆಯನ್ನು ಹೊಂದಿರುವವನೂ ಆದವನಿಗೂ ನಾನು ಉತ್ತರವನ್ನು ಕೊಡಲು ಶಕ್ತನಾಗುವುದಿಲ್ಲ.

೩೮. ಬ್ರಾಹ್ಮಣವರ್ಯನೆ! ಈ ಕ್ಷೇತ್ರವು ಈ ದಿನ ಮೊದಲ್ಗೊಂಡು ಸಕಲ ಪಾಪನಾಶಕನಾದ ಕೋಟಿತೀರ್ಥವೆಂದು ವಿಖ್ಯಾತವಾಗುವುದು.

೩೯–೪೫. ನನ್ನ ಅನುಗ್ರಹದಿಂದ ದೇವತೆಗಳೂ ಇದನ್ನು ಸೇವಿಸುವರು. ಭೃಗುಕ್ಷೇತ್ರದಲ್ಲಿ ಮೃತರಾದ ಕೃಮಿಕೀಟ ಪತಂಗಗಳೂ ನನ್ನ ಅನುಗ್ರಹದಿಂದ ಶಿವಲೋಕದಲ್ಲಿ ವಾಸಮಾಡುವುವು. ವೃಷಖಾತದಲ್ಲಿ ಬಂದು ಶಿವನನ್ನು ಪೂಜಿಸಿದ ಮಾನವನು ನಿಶ್ಚಯವಾಗಿಯೂ ಅಶ್ವಮೇಧಯಾಗದ ಫಲವನ್ನು ಪಡೆಯುವನು. ಆ ಭೃಗುತೀರ್ಥದಲ್ಲಿ ಮಿಂದು ಪಿತೃದೇವತೆಗಳಿಗೆ ತರ್ಪಣ

ಸರ್ವಮೇಧಸ್ಯ ಯಜ್ಞಸ್ಯ ಫಲಂ ಪ್ರಾಪ್ನೋತ್ಯಸಂಶಯಮ್ ।
ಭೃಗುತೀರ್ಥೇ ನರಃ ಸ್ನಾತ್ವಾ ತರ್ಪಯೇತ್ಪಿತೃದೇವತಾಃ ॥ ೪೧ ॥
ತಸ್ಯ ತೇ ದ್ವಾದಶಾಬ್ದಾನಿ ಶಾಂತಿಂ ಗಚ್ಛಂತಿ ತರ್ಪಿತಾಃ ।
ದಧಿಕ್ಷೀರೇಣ ತೋಯೇನ ಘೃತೇನ ಮಧುನಾ ಸಹ ॥ ೪೨ ॥
ಯೇ ಸ್ನಪಂತಿ ವಿರೂಪಾಕ್ಷಂ ತೇಷಾಂ ವಾಸಸ್ತ್ರಿವಿಷ್ಟಪೇ ।
ಮತ್ಪ್ರಸಾದಾದ್ದ್ವಿಜಶ್ರೇಷ್ಠ ಸರ್ವದೇವಾಽನುಸೇವಿತಮ್ ॥ ೪೩ ॥
ಭವಿಷ್ಯತಿ ಭೃಗುಕ್ಷೇತ್ರಂ ಕುರುಕ್ಷೇತ್ರಾದಿಭಿಃ ಸಮಮ್ ।
ಮಾರ್ತಂಡಗ್ರಹಣ್ ಪ್ರಾಪ್ತೇ ಯವಂ ಕೃತ್ವಾ ಹಿರಣ್ಮಯಮ್ ॥ ೪೪ ॥
ದತ್ವಾ ಶಿರಸಿ ಯಃ ಸ್ನಾತಿ ಭೃಗುಕ್ಷೇತ್ರೇ ದ್ವಿಜೋತ್ತಮ ।
ಅವಿಚಾರೇಣ ತಂ ವಿದ್ಧಿ ಸಂಸ್ನಾತಂ ಕುರುಜಾಂಗಲೇ ॥ ೪೫ ॥
ಅಹಂ ಚೈವ ವಸಿಷ್ಯಾಮಿ ಅಂಬಿಕಾ ಚ ಮಮ ಪ್ರಿಯಾ ।
ಸರ್ವದುಃಖಾಪಹಾ ದೇವೀ ನಾಮ್ನಾ ಸೌಭಾಗ್ಯಸುಂದರೀ ॥ ೪೬ ॥
ವಸಿಷ್ಯಾಮಿ ತಯಾ ದೇವ್ಯಾ ಸಹಿತೋ ಭೃಗುಕಚ್ಛಕೇ ।
ಏವಮುಕ್ತ್ವಾ ಸ್ಥಿತೋ ದೇವೋ ಭೃಗುಕಚ್ಛೇಽಂಬಿಕಾ ತಥಾ ॥ ೪೭ ॥
ಭೃಗುಸ್ತು ಸ್ವಪುರಂ ಪ್ರಾಯಾದ್ಬ್ರಹ್ಮಘೋಷನಿನಾದಿತಮ್ ।
ಋಗ್ಯಜುಃಸಾಮಘೋಷೇಣ ಹ್ಯಥರ್ವಣನಿನಾದಿತಮ್ ॥ ೪೮ ॥
ತತ್ರ ತೀರ್ಥೇ ತು ಯಃ ಸ್ನಾತ್ವಾ ವೃಷಮುತ್ಸೃಜತೇ ನರಃ ।
ಸ ಯಾತಿ ಶಿವಸಾಯುಜ್ಯಮಿತ್ಯೇವಂ ಶಂಕರೋಽಬ್ರವೀತ್ ॥ ೪೯ ॥

---

ಮಾಡಿದವನ ಪಿತೃಗಳು ಹನ್ನೆರಡು ವರ್ಷಕಾಲ ತೃಪ್ತಿಯಿಂದ ಶಾಂತರಾಗುವರು. ವಿರೂಪಾಕ್ಷನನ್ನು ಮೊಸರು, ಹಾಲು, ನೀರು, ತುಪ್ಪ, ಜೇನುತುಪ್ಪಗಳಿಂದ ಅಭಿಷೇಕಮಾಡಿದವರು ದೇವಲೋಕದಲ್ಲಿ ವಾಸಮಾಡುವರು. ದ್ವಿಜವರ್ಯನೆ! ಈ ಕ್ಷೇತ್ರವು ನನ್ನ ಅನುಗ್ರಹದಿಂದ ಸಕಲ ದೇವತೆಗಳಿಂದಲೂ ಸೇವಿಸಲ್ಪಟ್ಟು ಕುರುಕ್ಷೇತ್ರಾದಿಗಳಿಗೆ ಸಮವಾಗುವುದು. ಸೂರ್ಯಗ್ರಹಣ ಕಾಲದಲ್ಲಿ ಚಿನ್ನದ ಯವವನ್ನು ಮಾಡಿ ತಲೆಯಮೇಲಿಟ್ಟುಕೊಂಡು ಭೃಗುಕ್ಷೇತ್ರದಲ್ಲಿ ಮಿಂದವನು ಕುರುಜಾಂಗಲದಲ್ಲಿ ಮಿಂದವನೆಂದು ತಿಳಿ.

೪೬–೪೮. ನಾನು ನನ್ನ ಪತ್ನಿಯಾದ ಪಾರ್ವತಿಯೊಡನೆ ಈ ಭೃಗುಕಚ್ಛದಲ್ಲಿ ವಾಸಮಾಡುವೆನು. ಶಂಕರನು ಹೀಗೆ ಹೇಳಿ ಅಲ್ಲಿಯೇ ನೆಲೆಸಿದನು. ಪಾರ್ವತಿಯೂ ಅಲ್ಲಿದ್ದಳು. ಭೃಗುವು ಋಗ್ಯಜುಸ್ಸಾಮಾಥರ್ವಣವೇದಗಳ ಧ್ವನಿಗಳಿಂದ ತುಂಬಿರುವ ತನ್ನ ಪಟ್ಟಣಕ್ಕೆ ಹೋದನು.

೪೯. ಆ ತೀರ್ಥದಲ್ಲಿ ಮಿಂದು ವೃಷೋತ್ಸರ್ಗವನ್ನು ಮಾಡಿದವನು ಶಿವಸಾಯುಜ್ಯವನ್ನು ಪಡೆಯುವನೆಂದು ಶಂಕರನು ಹೇಳಿದನು.

ತತ್ರ ತೀರ್ಥೇ ತು ಯಃ ಸ್ನಾತ್ವಾ ಚೈತ್ರೇಮಾಸಿ ಸಮಾಚರೇತ್ ।
ದದ್ಯಾಚ್ಚ ಲವಣಂ ವಿಪ್ರೇ ಪೂಜ್ಯ ಸೌಭಾಗ್ಯಸುಂದರೀಂ ॥ ೫೦ ॥
ಗೋಭೂಹಿರಣ್ಯಂ ವಿಪ್ರೇಭ್ಯಃ ಪ್ರೀಯೇತಾಂ ಲಲಿತಾಶಿವೌ ।
ನ ದುಃಖಂ ದುರ್ಭಗತ್ವಂ ಚ ವಿಯೋಗಂ ಪತಿನಾಸಹ ॥ ೫೧ ॥
ಪ್ರಾಪ್ನೋತಿ ನಾರೀ ರಾಜೇಂದ್ರ ಭೃಗುತೀರ್ಥಾಽಪ್ಲವೇನ ಚ ।
ಯಸ್ತು ನಿತ್ಯಂ ಭೃಗುಂ ದೇವಂ ಪಶ್ಯೇದ್ವೈ ಪಾಂಡುನಂದನ ॥ ೫೨ ॥
ಆಬ್ರಹ್ಮಸದನಂ ಯಾವತ್ತತ್ರಸ್ಥೈರ್ದೈವತೈಃ ಸಹ ।
ಯತ್ಫಲಂ ಸಮವಾಪ್ನೋತಿ ತಚ್ಛೃಣುಷ್ವ ನೃಪೋತ್ತಮ ॥ ೫೩ ॥

ಸುವರ್ಣಶೃಂಗೀಂ ಕಪಿಲಾಂ ಪಯಸ್ವಿನೀಂ
ಸಾಧ್ವೀಂ ಸುಶೀಲಾಂ ತರುಣೀಂ ಸವತ್ಸಾಂ ।
ದತ್ವಾ ದ್ವಿಜೇ ಸರ್ವವ್ರತೋಪಪನ್ನೇ
ಫಲಂ ಚ ಯತ್ಸ್ಯಾತ್ತದಿಹೈವ ನೂನಂ ॥ ೫೪ ॥
ಸಮಾಃ ಸಹಸ್ರಾಣಿ ತು ಸಪ್ತವೈ ಜಲೇ
ಮ್ರಿಯೇಲ್ಲಭೇದ್ವಾದಶವಹ್ನಿಮಧ್ಯೇ ।
ತ್ಯಜಂಸ್ತನುಂ ಶೂರವೃತ್ತ್ಯಾ ನರೇಂದ್ರ
ಶಕ್ರಾತಿಥ್ಯಂ ಯಾತಿ ವೈ ಮರ್ತ್ಯಧರ್ಮಾ ॥ ೫೫ ॥

---

೫೦. ಮಾನವನು ಚೈತ್ರಮಾಸದಲ್ಲಿ ಆ ತೀರ್ಥದಲ್ಲಿ ಮಿಂದು ಸೌಭಾಗ್ಯ ಸುಂದರಿನಾಮಕಳಾದ ಪಾರ್ವತಿಯನ್ನು ಪೂಜಿಸಿ ಬ್ರಾಹ್ಮಣನಿಗೆ ಉಪ್ಪನ್ನು ದಾನಮಾಡಬೇಕು.

೫೧–೫೩. ಬ್ರಾಹ್ಮಣರಿಗೆ ಲಲಿತಾ ಶಿವರು ಪ್ರೀತರಾಗಲೆಂದು ಗೋ, ಭೂ, ಹಿರಣ್ಯಗಳನ್ನು ದಾನಮಾಡಬೇಕು. ಭೃಗುತೀರ್ಥದಲ್ಲಿ ಮಿಂದ ಹೆಂಗಸು ದುಃಖ, ದೌರ್ಭಾಗ್ಯ, ಪತಿ ವಿಯೋಗಗಳನ್ನು ಹೊಂದುವುದಿಲ್ಲ. ಯುಧಿಷ್ಠಿರ! ನಿತ್ಯವೂ ಭೃಗುಮಹೇಶ್ವರನನ್ನು ನೋಡಿದ ಮಾನವನು ಬ್ರಹ್ಮಲೋಕದವರೆಗೆ ಅಲ್ಲಿರುವ ದೇವತೆಗಳೊಡನೆ ಯಾವ ಫಲವನ್ನು ಪಡೆಯುವನೆಂಬುದನ್ನು ಕೇಳು.

೫೪. ಸುವರ್ಣಶೃಂಗವುಳ್ಳುದೂ, ಕಪಿಲೆಯೂ, ಹಾಲನ್ನು ಕರೆಯುವುದೂ, ಸಾಧುವೂ, ಒಳ್ಳೆಯ ಸ್ವಭಾವವುಳ್ಳುದೂ, ಯೌವನವುಳ್ಳುದೂ, ಕರುವಿನಿಂದ ಕೂಡಿರುವುದೂ ಆದ ಹಸುವನ್ನು ಸಮಸ್ತವ್ರತಗಳನ್ನಾಚರಿಸಿದ ಬ್ರಾಹ್ಮಣನಿಗೆ ದಾನಮಾಡಿದ ಫಲವು ದೊರೆಯುವುದು.

೫೫. ಇಲ್ಲಿ ಮಾನವನು ಶೂರವೃತ್ತಿಯಿಂದ ನೀರಿನಲ್ಲಿ ಮಡಿದರೆ ಏಳು ಸಾವಿರ ವರ್ಷಗಳೂ, ಅಗ್ನಿಯಲ್ಲಿ ಮಡಿದರೆ ಹನ್ನೆರಡು ಸಾವಿರ ವರ್ಷಗಳೂ ದೇವಲೋಕದಲ್ಲಿ ಇಂದ್ರನ ಆತಿಥ್ಯವನ್ನು ಪಡೆಯುವನು.

ಆಖ್ಯಾನಮೇತಚ್ಚ ಸದಾ ಯಶಸ್ಯಂ
ಸ್ವರ್ಗ್ಯಂ ಧನ್ಯಂ ಪುತ್ರ್ಯಮಾಯುಷ್ಯಕಾರಿ ।
ಶೃಣ್ವಂಲ್ಲಭೇತ್ಸರ್ವಮೇತದ್ಧಿ ಭಕ್ತ್ಯಾ
ಪರ್ವಣಿ ಪರ್ವಣ್ಯಾಜಮೀಢಸ್ಸದೈವ ॥ ೫೬ ॥
ಸನ್ನ್ಯಾಸಂ ಕುರುತೇ ಯಸ್ತು ಭೃಗುತೀರ್ಥೇ ವಿಧಾನತಃ ।
ಸಮೃತಃ ಪರಮಂ ಸ್ಥಾನಂ ಗಚ್ಛೇದ್ವೈ ಯಚ್ಚ ದುರ್ಲಭಂ ॥ ೫೭ ॥
ಏತಚ್ಛ್ರುತ್ವಾ ಭೃಗುಶ್ರೇಷ್ಠೋ ದೇವದೇವೇನ ಭಾಷಿತಂ ।
ಪ್ರಹೃಷ್ಟವದನೋ ಭೂತ್ವಾ ತತ್ರೈವ ಸಂಸ್ಥಿತೋ ದ್ವಿಜಃ ॥ ೫೮ ॥
ತಿರೋಭಾವಂ ಗತೇ ದೇವೇ ಭೃಗುಃ ಶ್ರೇಷ್ಠೋ ದ್ವಿಜೋತ್ತಮಃ ।
ಸ್ವಮೂರ್ತಿಂ ತತ್ರ ಮುಕ್ತ್ವಾ ತು ಬ್ರಹ್ಮಲೋಕಂ ಜಗಾಮಹ ॥ ೫೯ ॥
ಭೃಗುಕಚ್ಛಸ್ಯ ಜೋತ್ಪತ್ತಿಃ ಕಥಿತಾ ತವ ಪಾಂಡವ ।
ಸಂಕ್ಷೇಪೇಣ ಮಹಾರಾಜ ಸರ್ವಪಾಪಪ್ರಣಾಶನೀ ॥ ೬೦ ॥
ಏತತ್ಪುಣ್ಯಂ ಪಾಪಹರಂ ಕ್ಷೇತ್ರಂ ದೇವೇನ ಕೀರ್ತಿತಂ ।
ಚತುರ್ಯುಗಸಹಸ್ರೇಣ ಪಿತಾಮಹದಿನಂ ಸ್ಮೃತಂ ॥ ೬೧ ॥
ಪ್ರಾಪ್ತೇ ಬ್ರಹ್ಮದಿನೇ ವಿಪ್ರಾ ಜಾಯತೇ ಯುಗಸಂಭವಃ ।
ನ ಪಶ್ಯಾಮಿ ತ್ವಿದಂ ಕ್ಷೇತ್ರಮಿತಿ ರುದ್ರಃ ಸ್ವಯಂ ಜಗೌ ॥ ೬೨ ॥

---

೫೬. ಯಶಸ್ಕರವೂ, ಸ್ವರ್ಗಸಾಧನವೂ, ಪುಣ್ಯಕರವೂ, ಪುತ್ರಾಯುಷ್ಯಗಳನ್ನು ನೀಡುವುದೂ ಆದ ಈ ಕಥೆಯನ್ನು ಯಾವಾಗಲೂ ಪರ್ವಕಾಲದಲ್ಲಿ ಭಕ್ತಿಯಿಂದ ಕೇಳುವವನು ಸಮಸ್ತವನ್ನೂ ಹೊಂದುವನು.

೫೭. ಭೃಗುತೀರ್ಥದಲ್ಲಿ ವಿಧಿಯಂತೆ ಸನ್ನ್ಯಾಸವನ್ನು ಸ್ವೀಕರಿಸುವವನು ಮಡಿದ ತರುವಾಯ ದುರ್ಲಭವಾದ ಸ್ಥಾನವನ್ನು ಪಡೆಯುವನು.

೫೮. ಭೃಗೂತ್ತಮನಾದ ಆ ಬ್ರಾಹ್ಮಣನು ಶಂಕರನು ಹೇಳಿದ ಈ ಮಾತನ್ನು ಕೇಳಿ ಸಂತೋಷಗೊಂಡ ಮುಖವುಳ್ಳವನಾಗಿ ಅಲ್ಲಿಯೇ ಇದ್ದನು.

೫೯. ಶಂಕರನು ಅದೃಶ್ಯನಾಗಲು ಭೃಗುವು ತನ್ನ ಶರೀರವನ್ನು ಅಲ್ಲಿ ತ್ಯಜಿಸಿ ಬ್ರಹ್ಮಲೋಕಕ್ಕೆ ತೆರಳಿದನು.

೬೦. ಯುಧಿಷ್ಠಿರ! ನಿನಗೆ ನಾನು ಸಕಲ ಪಾಪಗಳನ್ನು ಪರಿಹರಿಸುವ ಭೃಗುಕಚ್ಛದ ಉತ್ಪತ್ತಿಯನ್ನು ಸಂಕ್ಷೇಪವಾಗಿ ಹೇಳಿರುವೆನು.

೬೧. ಶಂಕರನು ಈಕ್ಷೇತ್ರವು ಪುಣ್ಯಕರವೂ ಪಾಪನಾಶಕವೂ ಆಗಿರುವುದೆಂದು ಹೇಳಿರುತ್ತಾನೆ. ಸಾವಿರ ನಾಲ್ಕುಯುಗಗಳಿಂದ ಬ್ರಹ್ಮನ ಒಂದು ದಿನವಾಗುವುದು.

೬೨. ಬ್ರಹ್ಮನ ಒಂದು ದಿನವಾದಕೂಡಲೆ ಯುಗವುಂಟಾಗುವುದು. ಆಗ ಈ ಕ್ಷೇತ್ರವನ್ನು ನಾನು ನೋಡುವುದಿಲ್ಲವೆಂದು ರುದ್ರನು ತಾನೇ ಹೇಳಿರುತ್ತಾನೆ.

ಯಃ ಶೃಣೋತಿ ತ್ವಿದಂ ಭಕ್ತ್ಯಾ ನಾರೀ ವಾ ಪುರುಷೋಽಪಿ ವಾ ।
ಸಯಾತಿ ಪರಮಂ ಲೋಕಮಿತಿ ರುದ್ರಃ ಸ್ವಯಂ ಜಗೌ ॥ ೬೩ ॥
ದೇವಖಾತೇ ನರಃ ಸ್ನಾತ್ವಾ ಪಿಂಡದಾನಾದಿಸತ್ಕ್ರಿಯಾಂ ।
ಯಾಂ ಕರೋತಿ ದ್ವಿಜಶ್ರೇಷ್ಠ ತಾಮಕ್ಷಯಫಲಾಂ ವಿದುಃ ॥ ೬೪ ॥
ಯ ಇಮಂ ಶೃಣುಯಾದ್ಭಕ್ತ್ಯಾ ಭೃಗುಕಚ್ಛಸ್ಯ ವಿಸ್ತರಂ ।
ಕೋಟಿತೀರ್ಥಫಲಂ ತಸ್ಯ ಭವೇದ್ವೈ ನಾಽತ್ರ ಸಂಶಯಃ ॥ ೬೫ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ
ಪಂಚಮೇ ಆವಂತ್ಯಖಂಡೇ ತೃತೀಯೇ ರೇವಾಖಂಡೇ
"ಭೃಗುಕಚ್ಛತೀರ್ಥಮಾಹಾತ್ಮ್ಯವರ್ಣನಂ" ನಾಮ
ದ್ವ್ಯಶೀತ್ಯುತ್ತರಶತತಮೋಽಧ್ಯಾಯಃ

---

೬೩. ಈ ಆಖ್ಯಾನವನ್ನು ಭಕ್ತಿಯಿಂದ ಕೇಳಿದ ಹೆಂಗಸಾಗಲಿ, ಗಂಡಸಾಗಲಿ ಉತ್ತಮಲೋಕವನ್ನು ಹೊಂದುವರು ಎಂದು ರುದ್ರನು ತಾನೇ ಹೇಳಿರುವನು.

೬೪. ನರನು ದೇವಖಾತದಲ್ಲಿ ಮಿಂದು ಪಿಂಡದಾನಾದಿ ಸತ್ಕರ್ಮವನ್ನು ಮಾಡಿದರೆ ಅಕ್ಷಯ ಫಲವನ್ನು ಪಡೆಯುವನು.

೬೫. ಭಕ್ತಿಯಿಂದ ಭೃಗುಕಚ್ಛದ ಮಹಾತ್ಮ್ಯವನ್ನು ಕೇಳಿದವನಿಗೆ ನಿಶ್ಚಯವಾಗಿಯೂ ಕೋಟಿತೀರ್ಥದ ಫಲವು ಲಭಿಸುವುದು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ
ಶ್ರೀ ಸ್ಕಾಂದಮಹಾಪುರಾಣದ ಐದನೆಯ ಆವಂತ್ಯಖಂಡದ ಮೂರನೆಯ ರೇವಾಖಂಡದಲ್ಲಿ
"ಭೃಗುಕಚ್ಛತೀರ್ಥಮಾಹಾತ್ಮ್ಯವರ್ಣನ"ವೆಂಬ
ನೂರೆಂಬತ್ತೆರಡನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

# ಅಥ ತ್ರ್ಯಶೀತ್ಯುತ್ತರಶತತಮೋಽಧ್ಯಾಯಃ

## ಕೇದಾರೇಶ್ವರತೀರ್ಥಮಾಹಾತ್ಮ್ಯವರ್ಣನಂ

ಶ್ರೀ ಮಾರ್ಕಂಡೇಯ ಉವಾಚ :—

ಅತಃ ಪರಂ ಮಹಾರಾಜ ಗಚ್ಛೇತ್ಕೇದಾರಸಂಜ್ಞಕಂ ।
ಯತ್ರ ಗತ್ವಾ ಮಹಾರಾಜ ಶ್ರಾದ್ಧಂ ಕೃತ್ವಾ ಪಿಬೇಜ್ಜಲಂ ।
ಸಂಪೂಜ್ಯ ದೇವದೇವೇಶಂ ಕೇದಾರೋತ್ಥಂ ಫಲಂ ಲಭೇತ್ ॥ ೧ ॥

ಯುಧಿಷ್ಠಿರ ಉವಾಚ :—

ಕಥಮತ್ರ ಸುರಶ್ರೇಷ್ಠ ಕೇದಾರಾಖ್ಯಃ ಸ್ಥಿತಃ ಸ್ವಯಂ ।
ಉತ್ತರೇ ನರ್ಮದಾಕೂಲೇ ಏತದ್ವಿಸ್ತರತೋ ವದ ॥ ೨ ॥

ಶ್ರೀ ಮಾರ್ಕಂಡೇಯ ಉವಾಚ :—

ಪುರಾ ಕೃತಯುಗಸ್ಯಾದೌ ಶಂಕರಸ್ತು ಮಹೇಶ್ವರಃ ।
ಭೃಗುಣಾರಾಧಿತಃ ಶಪ್ತಃ ಶ್ರಿಯಾ ಚ ಭೃಗುಕಚ್ಛಕೇ ॥ ೩ ॥
ಅಪವಿತ್ರಮಿದಂ ಕ್ಷೇತ್ರಂ ಸರ್ವವೇದವಿವರ್ಜಿತಂ ।
ಭವಿಷ್ಯತಿ ನೃಪಶ್ರೇಷ್ಠ ಗತೇತ್ಯುಕ್ತ್ವಾ ಹರಿಪ್ರಿಯಾ ॥ ೪ ॥
ತಪಶ್ಚಚಾರ ವಿಪುಲಂ ಭೃಗುರ್ವರ್ಷಸಹಸ್ರಕಂ ।
ವಾಯುಭಕ್ಷೋ ನಿರಾಹಾರಶ್ಚಿರಂ ಧಮನಿಸಂತತಃ ॥ ೫ ॥

---

## ಕನ್ನಡದ ಅನುವಾದ

### ಕೇದಾರೇಶ್ವರತೀರ್ಥಮಾಹಾತ್ಮ್ಯವರ್ಣನ

೧. ಶ್ರೀ ಮಾರ್ಕಂಡೇಯನು ಹೇಳುತ್ತಾನೆ:—ಮಹಾರಾಜ! ಅನಂತರ ಕೇದಾರೇಶ್ವರ ತೀರ್ಥಕ್ಕೆ ಹೋಗಬೇಕು. ಅಲ್ಲಿ ಶ್ರಾದ್ಧಮಾಡಿ ಜಲವನ್ನು ಕುಡಿದು ಶಂಕರನನ್ನು ಪೂಜಿಸಿದರೆ ಕೇದಾರ ಕ್ಷೇತ್ರದ ಫಲವು ದೊರೆಯುವುದು.

೨. ಯುಧಿಷ್ಠಿರನು ಹೇಳುತ್ತಾನೆ:—ಸುರವರ್ಯನೆ! ನರ್ಮದಾನದಿಯ ಉತ್ತರದಡದಲ್ಲಿ ಕೇದಾರೇಶ್ವರ ಕ್ಷೇತ್ರವು ಹೇಗುಂಟಾಯಿತೆಂಬುದನ್ನು ವಿಸ್ತಾರವಾಗಿ ಹೇಳು.

೩–೪. ಶ್ರೀ ಮಾರ್ಕಂಡೇಯನು ಹೇಳುತ್ತಾನೆ:—ಹಿಂದೆ ಕೃತಯುಗದ ಆದಿಯಲ್ಲಿ ಭೃಗುಕಚ್ಛಕದಲ್ಲಿ ಶ್ರೀ ದೇವಿಯಿಂದ ಶಪ್ತನಾದ ಭೃಗುವು ಶಂಕರನನ್ನು ಆರಾಧಿಸಿದನು. ಲಕ್ಷ್ಮಿಯು ಈ ಕ್ಷೇತ್ರವು ಅಪವಿತ್ರವೂ, ಸಮುಸ್ತವೇದವರ್ಜಿತವೂ ಆಗುವುದೆಂದು ಹೇಳಿ ದೇವಲೋಕಕ್ಕೆ ಹೊರಟುಹೋಗಿದ್ದಳು.

೫. ಆಗ ಭೃಗುವು ಸಾವಿರವರ್ಷಕಾಲ ವಾಯುಭಕ್ಷನೂ, ನಿರಾಹಾರಿಯೂ, ನಾಡಿಗಳಿಂದ ಮಾತ್ರ ವ್ಯಾಪ್ತನೂ ಆಗಿ ಅತಿಶಯವಾಗಿ ತಪಸ್ಸನ್ನು ಮಾಡಿದನು.

ತತಃ ಪ್ರತ್ಯಕ್ಷತಾಮಾಗಾಲ್ಲಿಂಗೀ ಭೂತೋ ಮಹೇಶ್ವರಃ ।
ಪ್ರಾದುರ್ಭೂತಸ್ತು ಸಹಸಾ ಭಿತ್ವಾ ಪಾತಾಲಸಪ್ತಕಂ ॥ ೬ ॥
ದದರ್ಶಾಽಥ ಭೃಗುರ್ದೇವಮೌತ್ಪಲೀಂ ಕೇಲಿಕಾಮಿವ ।
ಸ್ತುತಿಂ ಚಕ್ರೇ ಸ ದೇವಾಯ ಸ್ಥಾಣವೇ ತ್ರ್ಯಂಬಕೇತಿ ಚ ॥ ೭ ॥
ಏವಂ ಸ್ತುತಃ ಸ ಭಗವಾನ್ಪ್ರೋವಾಚ ಪ್ರಹಸನ್ನಿವ ।
ಪುನಃ ಪುನರ್ಭೃಗುಂ ಮತ್ತಃ ಕಿಂ ನು ಪ್ರಾರ್ಥಯಸೇ ಮುನೇ ॥ ೮ ॥

ಭೃಗುರುವಾಚ :—

ಪಂಚಕ್ರೋಶಮಿದಂ ಕ್ಷೇತ್ರಂ ಪದ್ಮಯಾ ಶಾಪಿತಂ ವಿಭೋ ।
ಅಪವಿತ್ರಮಿದಂ ಕ್ಷೇತ್ರಂ ಸರ್ವವೇದವಿವರ್ಜಿತಂ ।
ಭವಿಷ್ಯತೀತಿ ಚ ಪ್ರೋಚ್ಯ ಗತಾ ದೇವೀ ದಿವಂ ಪ್ರತಿ ॥ ೯ ॥
ಪುನಃ ಪವಿತ್ರತಾಂ ಯಾತಿ ಯಥೇದಂ ಕ್ಷೇತ್ರಮುತ್ತಮಂ ।
ತಥಾ ಕುರು ಮಹೇಶಾನ ಪ್ರಸನ್ನೋ ಯದಿ ಶಂಕರ ॥ ೧೦ ॥

ಈಶ್ವರ ಉವಾಚ :—

ಕೇದಾರಾಖ್ಯಮಿದಂ ಬ್ರಹ್ಮಂಲ್ಲಿಂಗಮಾದ್ಯಂ ಭವಿಷ್ಯತಿ ।
ಕೃತ್ಸ್ನೇದಮಾದಿಲಿಂಗಾನಿ ಭವಿಷ್ಯಂತಿ ದಶೈವ ಹಿ ॥ ೧೧ ॥
ಏಕಾದಶಮದೃಶ್ಯಂ ಹಿ ಕ್ಷೇತ್ರಮಧ್ಯೇ ಭವಿಷ್ಯತಿ ।
ಪಾವಯಿಷ್ಯತಿ ತತ್ಕ್ಷೇತ್ರಮೇಕಾದಶಃ ಸ್ವಯಂ ವಿಭುಃ ॥ ೧೨ ॥

---

೬. ಅನಂತರ ಮಹೇಶ್ವರನು ಸಪ್ತಪಾತಾಳಗಳನ್ನು ಕೂಡಲೇ ಭೇದಿಸಿ ಲಿಂಗವಾಗಿ ಪ್ರತ್ಯಕ್ಷನಾದನು.

೭. ಭೃಗುವು ಶಂಕರನನ್ನು ನೋಡಿ ಉತ್ಪಲಪುಷ್ಪದ ಹಾರವನ್ನು ಅರ್ಪಿಸಿದಂತೆ ಕಂಗೊಳಿಸುತ್ತಿರುವ ಆ ಸ್ವಾಮಿಯನ್ನು ಸ್ಥಾಣುವೂ, ತ್ರ್ಯಂಬಕನೂ ಆದ ನಿನಗೆ ನಮಸ್ಕಾರ ಎಂದು ಸ್ತುತಿಸಿದನು.

೮. ಮುನಿಯು ಹೀಗೆ ಸ್ತುತಿಸಲು ಆ ಶಂಕರನು ನಗುತ್ತ, "ಮುನಿಯೆ! ಪುನಃಪುನಃ ನನ್ನಿಂದ ನೀನು ಏನನ್ನು ಪ್ರಾರ್ಥಿಸುವೆ?" ಎಂದು ಕೇಳಿದನು.

೯–೧೦. ಭೃಗುವು ಹೇಳುತ್ತಾನೆ:—ಸ್ವಾಮಿ! ಲಕ್ಷ್ಮಿಯು ಹತ್ತುಮೈಲಿ ವಿಸ್ತೀರ್ಣದ ಈ ಕ್ಷೇತ್ರವನ್ನು ಅಪವಿತ್ರವೂ, ಸಮಸ್ತ ವೇದವರ್ಜಿತವೂ ಆಗುವುದೆಂದು ಶಪಿಸಿ ಸ್ವರ್ಗಕ್ಕೆ ತೆರಳಿದಳು. ಶಂಕರ! ನೀನು ಪ್ರಸನ್ನನಾಗಿದ್ದರೆ ಈ ಕ್ಷೇತ್ರವು ಪವಿತ್ರವಾಗುವಂತೆ ಮಾಡು.

೧೧–೧೨. ಈಶ್ವರನು ಹೇಳುತ್ತಾನೆ:—ಬ್ರಾಹ್ಮಣನೆ! ಇದು ಕೇದಾರವೆಂಬ ಮೊದಲನೆ ಲಿಂಗವಾಗುವುದು. ಇದು ಮೊದಲ್ಗೊಂಡು ಇನ್ನು ಹತ್ತು ಲಿಂಗಗಳು ಇಲ್ಲಿ ಉಂಟಾಗುವುವು. ಹನ್ನೊಂದನೆಯ ಲಿಂಗವು ಕ್ಷೇತ್ರದ ನಡುವೆ ಅದೃಶ್ಯವಾಗಿ ಇರುವುದು. ಈ ಹನ್ನೊಂದನೆ ಲಿಂಗವು ಕ್ಷೇತ್ರವನ್ನು ಪವಿತ್ರಗೊಳಿಸುವುದು.

ತಥಾ ನ್ವೈ ದ್ವಾದಶಾದಿತ್ಯಾ ಮತ್ಪ್ರಸಾದಾತ್ತು ಮೂರ್ತಿತಃ ।
ವಸಿಷ್ಯಂತಿ ಭೃಗುಕ್ಷೇತ್ರೇ ರೋಗದುಃಖನಿಬರ್ಹಣಾಃ ॥ ೧೩ ॥
ದುರ್ಗಾಃ ಹ್ಯಷ್ಟಾದಶ ತಥಾ ಕ್ಷೇತ್ರಪಾಲಾಸ್ತು ಷೋಡಶ ।
ಭೃಗುಕ್ಷೇತ್ರೇ ಭವಿಷ್ಯಂತಿ ವೀರಭದ್ರಾಶ್ಚ ಮಾತರಃ ॥ ೧೪ ॥
ಪವಿತ್ರೀಕೃತಮೇತದ್ಧಿ ನಿತ್ಯಂ ಕ್ಷೇತ್ರಂ ಭವಿಷ್ಯತಿ ।
ಮಾಘಮಾಸೇ ಹ್ಯುಷಃಕಾಲೇ ಸ್ನಾತ್ವಾ ಮಾಸಂ ಜಿತೇಂದ್ರಿಯಃ ॥ ೧೫ ॥
ಯಃ ಪೂಜಯತಿ ಕೇದಾರಂ ಸ ಗಚ್ಛೇಚ್ಛಿವಮಂದಿರಂ ।
ತಸ್ಮಿಂಸ್ತೀರ್ಥೇ ನರಃ ಸ್ನಾತ್ವಾ ಪಿತೄನುದ್ದಿಶ್ಯ ಭಾರತ ।
ಶ್ರಾದ್ಧಂ ದದಾತಿ ವಿಧಿವತ್ತಸ್ಯ ಪ್ರೀತಾಃ ಪಿತಾಮಹಾಃ ॥ ೧೬ ॥
ಇತಿ ತೇ ಕಥಿತಂ ಸಮ್ಯಕ್ಕೇದಾರಾಖ್ಯಂ ಸ ವಿಸ್ತರಂ ।
ಸರ್ವಪಾಪಹರಂ ಪುಣ್ಯಂ ಸರ್ವದುಃಖ ಪ್ರಣಾಶನಂ ॥ ೧೭ ॥

**ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ ಪಂಚಮೇ ಆವಂತ್ಯಖಂಡೇ ತೃತೀಯೇ ರೇವಾಖಂಡೇ "ಕೇದಾರೇಶ್ವರತೀರ್ಥಮಾಹಾತ್ಮ್ಯವರ್ಣನಂ" ನಾಮ ತ್ರ್ಯಶೀತ್ಯುತ್ತರಶತತಮೋಽಧ್ಯಾಯಃ**

---

೧೩. ಹಾಗೆಯೇ ದ್ವಾದಶಾದಿತ್ಯರು ನನ್ನ ಅನುಗ್ರಹದಿಂದ ಈ ಭೃಗು ಕ್ಷೇತ್ರದಲ್ಲಿ ಶರೀರ ಸಹಿತರಾಗಿ ವಾಸಿಸುತ್ತ ಭಕ್ತರ ರೋಗದುಃಖಗಳನ್ನು ನಿವಾರಿಸುವರು.

೧೪–೧೬. ಹಾಗೆಯೇ ಹದಿನೆಂಟು ಮಂದಿ ದುರ್ಗೆಯರೂ, ಹದಿನಾರು ಮಂದಿ ಕ್ಷೇತ್ರಪಾಲಕರೂ, ವೀರಭದ್ರರೂ, ಮಾತೃದೇವತೆಗಳೂ ಇಲ್ಲಿ ವಾಸ ಮಾಡುತ್ತಾರೆ. ಇವರಿಂದ ಈ ಕ್ಷೇತ್ರವು ನಿತ್ಯವೂ ಪವಿತ್ರವಾಗುವುದು. ಮಾಘ ಮಾಸದ ಪ್ರಾತಃಕಾಲದಲ್ಲಿ ಒಂದು ತಿಂಗಳು ಜಿತೇಂದ್ರಿಯನಾಗಿ ಇಲ್ಲಿ ಮಿಂದು ಕೇದಾರೇಶ್ವರನನ್ನು ಪೂಜಿಸಿದವರು ಶಿವಾಲಯಕ್ಕೆ ತೆರಳುವನು. ಆ ತೀರ್ಥ ದಲ್ಲಿ ಮಿಂದು ಪಿತೃಗಳನ್ನುದ್ದೇಶಿಸಿ ವಿಧಿಯಂತೆ ಶ್ರಾದ್ಧಮಾಡುವವನ ಪಿತಾ ಮಹರು ಸಂತುಷ್ಟರಾಗುವರು.

೧೭. ಹೀಗೆ ನಿನಗೆ ಸಕಲ ಪಾಪಗಳನ್ನು ಪರಿಹರಿಸುವುದೂ, ಪುಣ್ಯ ಕರವೂ, ಸಮಸ್ತ ದುಃಖನಾಶಕವೂ ಆದ ಕೇದಾರವೆಂಬ ಕ್ಷೇತ್ರವನ್ನು ವಿಸ್ತಾರ ವಾಗಿ ಹೇಳಿರುವೆನು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ ಶ್ರೀ ಸ್ಕಾಂದಮಹಾಪುರಾಣದ ಐದನೆಯ ಆವಂತ್ಯಖಂಡದ ಮೂರನೆಯ ರೇವಾಖಂಡದಲ್ಲಿ "ಕೇದಾರೇಶ್ವರತೀರ್ಥಮಾಹಾತ್ಮ್ಯವರ್ಣನ"ವೆಂಬ ನೂರೆಂಬತ್ತಮೂರನೆ ಅಧ್ಯಾಯವು ಮುಗಿದುದು

॥ ಶ್ರೀಃ ॥

## ಅಥ ಚತುರಶೀತ್ರ್ಯುತ್ತರಶತತಮೋಽಧ್ಯಾಯಃ

### ಧೌತಪಾಪತೀರ್ಥಮಾಹಾತ್ಮ್ಯವರ್ಣನಂ

ಶ್ರೀ ಮಾರ್ಕಂಡೇಯ ಉವಾಚ:—

ಧೌತಪಾಪಂ ತತೋ ಗಚ್ಛೇದ್ಭೃಗುತೀರ್ಥಸಮೀಪತಃ ।
ವೃಷೇಣ ತು ಭೃಗುಸ್ತತ್ರ ಭೂಯೋ ಭೂಯೋ ಧುತಸ್ತತಃ ॥ ೧ ॥
ಧೌತಪಾಪಂ ತು ತತ್ತೇನ ನಾಮ್ನಾ ಲೋಕೇಷು ವಿಶ್ರುತಂ ।
ತತ್ರ ಸ್ಥಿತೋ ಮಹಾದೇವಸ್ತುಷ್ಟ್ಯರ್ಥಂ ಭೃಗುಸತ್ತಮೇ ॥ ೨ ॥
ತತ್ರ ತೀರ್ಥೇ ತು ಯಃ ಸ್ನಾತ್ವಾ ಶಾಠ್ಯೇನಾಽಪಿ ನರೇಶ್ವರ ।
ಮುಚ್ಯತೇ ಸರ್ವಪಾಪೇಭ್ಯೋ ನಾಽತ್ರಕಾರ್ಯಾ ವಿಚಾರಣಾ ॥ ೩ ॥
ಯಸ್ತು ಸಮ್ಯಗ್ವಿಧಾನೇನ ತತ್ರ ಸ್ನಾತ್ವಾರ್ಚಯೇಚ್ಛಿವಂ ।
ದೇವಾನ್ ಪಿತ್ರೂನ್ ಸಮಭ್ಯರ್ಚ್ಯ ಮುಚ್ಯತೇ ಸರ್ವಪಾತಕೈಃ ॥ ೪ ॥
ಬ್ರಹ್ಮಹತ್ಯಾ ಗವಾಂ ವಧ್ಯಾ ತತ್ರ ತೀರ್ಥೇ ಯುಧಿಷ್ಠಿರ ।
ಪ್ರವಿಶೇನ್ನ ಸದಾ ಭೀತಾ ಪ್ರವಿಷ್ಟಾಽಪಿ ಕ್ಷಯಂ ವ್ರಜೇತ್ ॥ ೫ ॥

---

## ಕನ್ನಡದ ಅನುವಾದ

### ಧೌತಪಾಪತೀರ್ಥಮಾಹಾತ್ಮ್ಯವರ್ಣನ

೧. ಶ್ರೀ ಮಾರ್ಕಂಡೇಯನು ಹೇಳುತ್ತಾನೆ:—ಅನಂತರ ಭೃಗು ತೀರ್ಥದ ಹತ್ತಿರವಿರುವ ಧೌತಪಾಪ ತೀರ್ಥಕ್ಕೆ ಹೋಗಬೇಕು. ಅಲ್ಲಿ ವೃಷಭವು ಭೃಗುವನ್ನು ಅನೇಕಸಾರಿ ತಿವಿದಿರುವುದು.

೨. ಆದ್ದರಿಂದ ಆ ತೀರ್ಥವು ಲೋಕಗಳಲ್ಲಿ ಧೌತಪಾಪವೆಂದು ಪ್ರಸಿದ್ಧವಾಯಿತು. ಅಲ್ಲಿ ಭೃಗುವಿನ ಸಂತೋಷಕ್ಕಾಗಿ ಮಹಾದೇವನು ನೆಲಸಿದ್ದನು.

೩. ಆ ತೀರ್ಥದಲ್ಲಿ ಶಾಠ್ಯದಿಂದಲಾದರೂ ಮಿಂದವನೂ ಸಕಲಪಾಪಗಳಿಂದ ಮುಕ್ತನಾಗುವನು. ಈ ವಿಷಯದಲ್ಲಿ ವಿಚಾರಮಾಡಬಾರದು.

೪. ಅಲ್ಲಿ ವಿಧಿಯಂತೆ ಮಿಂದು ಶಿವನನ್ನೂ, ದೇವಪಿತೃಗಳನ್ನೂ ಅರ್ಚಿಸಿದವನು ಸಕಲಪಾಪಗಳಿಂದ ಮುಕ್ತನಾಗುವನು.

೫. ಯುಧಿಷ್ಠಿರ! ಆ ತೀರ್ಥವನ್ನು ಬ್ರಹ್ಮ ಗೋಹತ್ಯೆಗಳು ಭಯದಿಂದ ಪ್ರವೇಶಿಸುವುದಿಲ್ಲ. ಪ್ರವೇಶಿಸಿದರೂ ನಾಶವಾಗುವುವು.

ಯುಧಿಷ್ಠಿರ ಉವಾಚ :—

ಆಶ್ಚರ್ಯಭೂತಂ ಲೋಕೇಽಸ್ಮಿನ್ಕಥಯಸ್ವ ದ್ವಿಜೋತ್ತಮ ।
ಪ್ರವಿಶೇನ್ನ ಬ್ರಹ್ಮಹತ್ಯಾ ಯಥಾ ವೈ ಧೌತಪಾಪ್ಮನಿ ॥ ೬ ॥
ಬ್ರಹ್ಮಹತ್ಯಾಸಮಂ ಪಾಪಂ ಭವಿತಾ ನೇಹ ಕಿಂಚನ ।
ಕಥಂ ವಾ ಧೌತಪಾಪೇ ತು ಪ್ರವಿಷ್ಟಂ ನಶ್ಯತೇ ದ್ವಿಜ ।
ಏತದ್ವಿಸ್ತರತಃ ಸರ್ವಂ ಪೃಚ್ಛಾಮಿ ವದ ಕೌತುಕಾತ್ ॥ ೭ ॥

ಮಾರ್ಕಂಡೇಯ ಉವಾಚ :—

ಆದಿಸರ್ಗೇ ಪುರಾ ಶಂಭುರ್ಬ್ರಹ್ಮಣಃ ಪರಮೇಷ್ಠಿನಃ ।
ವಿಕಾರಂ ಪಂಚಮಂ ದೃಷ್ಟ್ವಾ ಶಿರೋಽಶ್ವಮುಖಸನ್ನಿಭಂ ॥ ೮ ॥
ಅಂಗುಷ್ಠಾಂಗುಲಿ ಯೋಗೇನ ತಚ್ಛಿರಸ್ತೇನ ಕೃಂತಿತಂ ।
ಕೃತ್ತಮಾತ್ರೇ ತು ಶಿರಸಿ ಬ್ರಹ್ಮಹತ್ಯಾಽಭವತ್ತದಾ ॥ ೯ ॥
ಬ್ರಹ್ಮಹತ್ಯಾಯುತಶ್ಚಾಸೀದುತ್ತರೇ ನರ್ಮದಾ ತಟೇ ।
ಧುನಿತಂ ತು ಯತೋ ರಾಜನ್ವೃಷೇಣ ಧರ್ಮಮೂರ್ತಿನಾ ॥ ೧೦ ॥
ತತ್ರ ಧೌತೇಶ್ವರೀಂ ದೇವೀಂ ಸ್ಥಾಪಿತಾಂ ವೃಷಭೇಷಣ ತು ।
ದದರ್ಶ ಭಗವಾಂಛಂಭುಃ ಸರ್ವದೈವತಪೂಜಿತಾಂ ॥ ೧೧ ॥
ದೃಷ್ಟ್ವಾ ಧೌತೇಶ್ವರೀಂ ದುರ್ಗಾಂ ಬ್ರಹ್ಮಹತ್ಯಾವಿನಾಶಿನೀಂ ।
ತತ್ರ ವಿಶ್ರಮಮಾಣಶ್ಚ ಶಂಕರಸ್ತ್ರಿಪುರಾಂತಕಃ ॥ ೧೨ ॥

---

೬. ಯುಧಿಷ್ಠಿರನು ಹೇಳುತ್ತಾನೆ:—ದ್ವಿಜವರ್ಯನೆ! ಧೌತಪಾಪಕ್ಷೇತ್ರವನ್ನು ಬ್ರಹ್ಮಹತ್ಯೆಯು ಹೇಗೆ ಪ್ರವೇಶಿಸುವುದಿಲ್ಲ. ಇದು ಆಶ್ಚರ್ಯಕರವಾಗಿದೆ. ಇದನ್ನು ಹೇಳು.

೭. ಈ ಲೋಕದಲ್ಲಿ ಬ್ರಹ್ಮಹತ್ಯೆಗೆ ಸಮಾನವಾದ ಪಾಪವಿಲ್ಲ. ಅದು ಧೌತಪಾಪಕ್ಷೇತ್ರವನ್ನು ಪ್ರವೇಶಿಸಿ ಹೇಗೆ ನಾಶವಾಗುವುದು? ಇದನ್ನು ಕುತೂಹಲದಿಂದ ಕೇಳುತ್ತೇನೆ. ವಿಸ್ತಾರವಾಗಿ ಹೇಳು.

೮–೧೨. ಹಿಂದೆ ಪ್ರಥಮಸೃಷ್ಟಿಯಲ್ಲಿ ಶಂಕರನು ಬ್ರಹ್ಮನ ವಿಕಾರವಾದ ಕುದುರೆ ಮುಖದಂತಿರುವ ಐದನೆ ತಲೆಯನ್ನು ನೋಡಿ ಅದನ್ನು ಅಂಗುಷ್ಠದ ಬೆರಳಿನಿಂದ ಕತ್ತರಿಸಿದನು. ಅದನ್ನು ಕತ್ತರಿಸಿದ ಕೂಡಲೆ ಬ್ರಹ್ಮಹತ್ಯೆಯುಂಟಾಯಿತು. ಶಂಕರನು ಆ ಹತ್ಯೆಯಿಂದ ಕೂಡಿದವನಾದನು. ಆಗ ವೃಷಭವು ನರ್ಮದಾನದಿಯ ದಡವನ್ನು ಅಗೆದು ಅಲ್ಲಿ ಧೌತೇಶ್ವರೀದೇವಿಯನ್ನು ಸ್ಥಾಪಿಸಿತು. ಪೂಜ್ಯನಾದ ಶಂಕರನು ಸಕಲದೇವ ಪೂಜ್ಯಳೂ, ಬ್ರಹ್ಮಹತ್ಯೆಯನ್ನು ನಾಶಗೊಳಿಸುವವಳೂ ಆದ ದುರ್ಗೆಯನ್ನು ಅಲ್ಲಿ ನೋಡಿ ವಿಶ್ರಮಿಸಿಕೊಂಡನು.

ಸ ಶಂಕರೋ ಬ್ರಹ್ಮಹತ್ಯಾ ವಿಹೀನಂ
ಮೇನೇಽತ್ಮಾನಂ ತಸ್ಯ ತೀರ್ಥಪ್ರಭಾವಾತ್ ।
ಸುವಿಸ್ಮಿತೋ ದೇವದೇವೋ ವರೇಣ್ಯೋ
ದೃಷ್ಟ್ವಾ ದೂರೇ ಬ್ರಹ್ಮಹತ್ಯಾಂ ಚ ತೀರ್ಥಾತ್ ॥ ೧೩ ॥
ವಿಧೌತಪಾಪಂ ಮಹಿತಂ ಧರ್ಮಶಕ್ತ್ಯಾ
ವಿಶೇನ್ನ ಹತ್ಯಾ ದೇವೀಭಯಾತ್ರಭೀತಾ ।
ರಕ್ತಾಂಬರಾ ರಕ್ತಮಾಲ್ಯೋಪಯುಕ್ತಾ
ಕೃಷ್ಣಾ ನಾರೀ ರಕ್ತದಾಮುಪ್ರಸಕ್ತಾ ॥ ೧೪ ॥
ಮಾಂ ವಾಂಛಂತೀ ಸ್ಕಂಧದೇಶಂ ರಹಸ್ಯೇ
ದೂರೇ ಸ್ಥಿತಾ ತೀರ್ಥವರ್ಯಪ್ರಭಾವಾತ್ ।
ಸಂಚಿಂತ್ಯ ದೇವೋ ಮನಸಾ ಸ್ಮರಾರಿ
ರ್ವಾಸಾಯ ಬುದ್ಧಿಂ ತತ್ರ ತೀರ್ಥೇ ಚಕಾರ ॥ ೧೫ ॥
ವಿಮೃಶ್ಯ ದೇವೋ ಬಹುಶಃ ಸ್ಥಿತಃ ಸ್ವಯಂ
ವಿಧೌತಪಾಪಃ ಪ್ರಥಿತಃ ಪೃಥಿವ್ಯಾಂ ।
ಬಭೂವ ತತ್ರೈವ ನಿವಾಸಕಾರೀ
ವಿಧೂತಪಾಪನಿಕಟಪ್ರದೇಶೇ ॥ ೧೬ ॥
ತದಾ ಪ್ರಭೃತಿ ರಾಜೇಂದ್ರ ಬ್ರಹ್ಮಹತ್ಯಾವಿನಾಶನಂ ।
ವಿಧೌತಪಾಪಂ ತತ್ತೀರ್ಥಂ ನರ್ಮದಾಯಾಂ ವ್ಯವಸ್ಥಿತಂ ॥ ೧೭ ॥

---

೧೩. ಆ ಶಂಕರನು ತಾನು ಆ ತೀರ್ಥದ ಪ್ರಭಾವದಿಂದ ಬ್ರಹ್ಮಹತ್ಯೆಯಿಲ್ಲದವನಾಗಿರುವೆನೆಂದು ತಿಳಿದನು. ಆ ಬ್ರಹ್ಮಹತ್ಯೆಯು ತೀರ್ಥಕ್ಕಿಂತ ದೂರದಲ್ಲಿರುವುದನ್ನು ಕಂಡು ವಿಸ್ಮಿತನಾದನು.

೧೪–೧೫. ಬ್ರಹ್ಮಹತ್ಯೆಯು ದೇವೀಭಯದಿಂದ ಧೌತಪಾಪ ಕ್ಷೇತ್ರವನ್ನು ಪ್ರವೇಶಿಸಲಾರದು. ರಕ್ತವಸ್ತ್ರವನ್ನುಟ್ಟವಳೂ, ರಕ್ತಮಾಲ್ಯವನ್ನು ಧರಿಸಿದವಳೂ, ಕೃಷ್ಣವರ್ಣಳೂ ಆಗಿ ಸ್ತ್ರೀರೂಪವನ್ನು ಧರಿಸಿದ ಬ್ರಹ್ಮಹತ್ಯೆಯು ನನ್ನ ಭುಜದಲ್ಲಿರಲು ಅಪೇಕ್ಷಿಸುತ್ತ ಈ ತೀರ್ಥದ ಪ್ರಭಾವದಿಂದ ದೂರದಲ್ಲಿ ನಿಂತಿದ್ದಾಳೆ. ಎಂದಾಲೋಚಿಸಿ ಶಂಕರನು ಆ ತೀರ್ಥದಲ್ಲಿಯೇ ವಾಸಮಾಡಲು ಇಚ್ಛಿಸಿದನು.

೧೬. ಶಂಕರನು ಹೀಗೆ ಆಲೋಚಿಸಿ ಅಲ್ಲಿ ವಾಸಮಾಡುತ್ತಿರಲು ಆ ತೀರ್ಥವು ವಿಧೌತಪಾಪವೆಂದು ಭೂಮಿಯಲ್ಲಿ ಪ್ರಸಿದ್ಧಿಗೊಂಡಿತು.

೧೭. ಮಹಾರಾಜ! ಅದು ಮೊದಲ್ಗೊಂಡು ಬ್ರಹ್ಮಹತ್ಯೆಯನ್ನು ಹೋಗಲಾಡಿಸುವ ಆ ತೀರ್ಥವು ನರ್ಮದಾತಟದಲ್ಲಿ ನೆಲೆಸಿತು.

ಅಶ್ವಯುಕ್ಛುಕ್ಲನವಮೀ ತತ್ರ ತೀರ್ಥೇ ವಿಶಿಷ್ಯತೇ ।
ದಿನತ್ರಯಂ ತು ರಾಜೇಂದ್ರ ಸಪ್ತಮ್ಯಾದಿ ವಿಶೇಷತಃ ॥ ೧೮ ॥
ಸಮುಪೋಷ್ಯಾಷ್ಟಮೀಂ ಭಕ್ತ್ಯಾ ಸಾಂಗಂ ವೇದಂ ಪಠೇತ್ತು ಯಃ ।
ಅಹೋ ರಾತ್ರೇಣ ಚೈಕೇನ ಋಗ್ಯಜುಃ ಸಾಮ ಸಂಜ್ಞಕಂ ॥ ೧೯ ॥
ಅಭ್ಯಸನ್ ಬ್ರಹ್ಮಹತ್ಯಾಯಾ ಮುಚ್ಯತೇ ನಾಽತ್ರ ಸಂಶಯಃ ।
ವೃಷಲೀಗಮನಂ ಚೈವ ಯಶ್ಚ ಗುರ್ವಂಗನಾಗಮಃ ॥ ೨೦ ॥
ಸ್ನಾತ್ವಾ ಬ್ರಹ್ಮರಸೋತ್ಕೃಷ್ಟೇ ಕುಂಭೇನೈವ ಪ್ರಮುಚ್ಯತೇ ।
ವಂಧ್ಯಾ ಸ್ತ್ರೀ ಜನನೀ ಯಾ ತು ಕಾಕವಂಧ್ಯಾ ಮೃತಪ್ರಜಾ ॥ ೨೧ ॥
ಸಾಽಪಿ ಕುಂಭೋದಕೈಃ ಸ್ನಾತಾ ಜೀವತ್ಪುತ್ರಾ ಪ್ರಜಾವತೀ ।
ಅಪಠಸ್ತು ನರೋಪೋಷ್ಯ ಋಗ್ಯಜುಃ ಸಾಮಸಂಭವಾಂ ॥ ೨೨ ॥
ಋಚಮೇಕಾಂ ಜಪನ್ವಿಪ್ರಸ್ತಥಾಪರ್ವಣಿ ಯೋ ನೃಪ ।
ಅನೃಚೋಪೋಷ್ಯ ಗಾಯತ್ರೀಂ ಜಪೇದ್ವೈ ವೇದಮಾತರಂ ॥ ೨೩ ॥
ಜಪನ್ನವಮ್ಯಾಂ ವಿಪ್ರೇಂದ್ರೋ ಮುಚ್ಯತೇ ಪಾಪಸಂಚಯಾತ್ ।
ಏವಂ ತು ಕಥಿತಂ ತಾತ ಪುರಾಣೋಕ್ತಂ ಮಹರ್ಷಿಭಿಃ ॥ ೨೪ ॥
ಧೌತಪಾಪಂ ಮಹಾಪುಣ್ಯಂ ಶಿವೇನ ಕಥಿತಂ ಮಮ ।
ಪ್ರಾಣತ್ಯಾಗಂ ತು ಯಃ ಕುರ್ಯಾಜ್ಜಲೇ ವಾಽಗ್ನೌ ಸ್ಥಲೇಽಪಿ ವಾ ॥ ೨೫ ॥
ಸ ಗಚ್ಛತಿ ವಿಮಾನೇನ ಜ್ವಲನಾರ್ಕಸಮಪ್ರಭಃ ।
ಹಂಸಬರ್ಹಿಪ್ರಯುಕ್ತೇನ ಸೇವ್ಯಮಾನೋಽಪ್ಸರೋಗಣೈಃ ॥ ೨೬ ॥

---

೧೮. ಅಶ್ವಯುಜಮಾಸದ ಶುಕ್ಲಪಕ್ಷದ ಸಪ್ತಮಿಯಿಂದ ನವಮೀವರೆಗೆ ಮೂರು ದಿನಗಳು ಆ ತೀರ್ಥದಲ್ಲಿ ಅಧಿಕಫಲಪ್ರದಗಳು.

೧೯–೨೬. ಅಷ್ಟಮೀದಿನ ಉಪವಾಸಮಾಡಿ ಭಕ್ತಿಯಿಂದ ಋಗಾದಿ ಮೂರು ವೇದಗಳನ್ನು ಒಂದು ಹಗಲು ರಾತ್ರಿ ಪಠಿಸಿದವನು ನಿಶ್ಚಯವಾಗಿಯೂ ಬ್ರಹ್ಮಹತ್ಯೆಯಿಂದ ಮುಕ್ತನಾಗುವನು. ವೃಷಲೀಗಮನ, ಗುರುಪತ್ನೀಗಮನ ಮಾಡಿದವನೂ ಬ್ರಹ್ಮ(ವೇದ) ರಸದಿಂದ ಉತ್ಕೃಷ್ಟವಾದ ಕುಂಭೋದಕದಿಂದ ಪಾಪಮುಕ್ತನಾಗುವನು. ಬಂಜೆಯೂ, ಕಾಕವಂಧ್ಯೆಯೂ, ಮಡಿಯುವ ಮಕ್ಕಳುಳ್ಳವಳೂ ಕುಂಭೋದಕದಿಂದ ಮಿಂದರೆ ಸಂತತಿಯುಳ್ಳವಳಾಗುವಳು. ಪರ್ವಕಾಲದಲ್ಲಿ ಋಗಾದಿ ವೇದಗಳ ಋಕ್ಕನ್ನು ಪಠಿಸುವ ಮಾನವನು ಉಪವಾಸ ಮಾಡಿ ವೇದಮಾತೆಯಾದ ಗಾಯತ್ರಿಯನ್ನು ಜಪಿಸಿದರೆ ಪಾಪಮುಕ್ತನಾಗುವನು. ಮಹಾರಾಜ! ನಾನು ಹೀಗೆ ಮಹರ್ಷಿಗಳು ಪುರಾಣಗಳಲ್ಲಿ ಹೇಳಿದ ಶಿವನು ನನಗೆ ಹೇಳಿದ ಪುಣ್ಯಕರವಾದ ಧೌತಪಾಪಕ್ಷೇತ್ರವನ್ನು ನಿನಗೆ ಹೇಳಿರುವೆನು. ಇಲ್ಲಿ ಜಲದಲ್ಲಾಗಲಿ, ನೆಲದಲ್ಲಾಗಲಿ ಅಗ್ನಿಯಲ್ಲಾಗಲಿ ಪ್ರಾಣವನ್ನು

ಶಿವಸ್ಯ ಪರಮಂ ಸ್ಥಾನಂ ಯತ್ಸುರೈರಪಿ ದುರ್ಲಭಂ ।
ಕ್ರೀಡತೇ ಸ್ವೇಚ್ಛಯಾ ತತ್ರ ಯಾವಚ್ಚಂದ್ರಾರ್ಕತಾರಕಂ ॥ ೨೭ ॥
ಧೌತಪಾಪೇ ತು ಯಾ ನಾರೀ ಕುರುತೇ ಪ್ರಾಣಸಂಕ್ಷಯಂ ।
ತತ್ಕ್ಷಣಾದೇವ ಸಾ ಪಾರ್ಥ ಪುರುಷತ್ವಮವಾಪ್ನುಯಾತ್ ॥ ೨೮ ॥
ಅಥ ಕಿಂ ಬಹುನೋಕ್ತೇನ ಶುಭಂ ವಾ ಯದಿ ವಾಽಶುಭಂ ।
ತದಕ್ಷಯಫಲಂ ಸರ್ವಂ ಧೌತಪಾಪೇ ಕೃತಂ ನೃಪ ॥ ೨೯ ॥
ಸನ್ಯಸೇನ್ನಿಯಮೇನಾನ್ನಂ ಸನ್ಯಸೇದ್ವಿಷಯಾದಿಕಂ ।
ಫಲಮೂಲಾದಿಕಂ ಚೈವ ಜಲಮೇಕಂ ನ ಸಂತ್ಯಜೇತ್ ॥ ೩೦ ॥
ಏವಂ ಯಃ ಕುರುತೇ ಪಾರ್ಥ ರುದ್ರಲೋಕಂ ಸ ಗಚ್ಛತಿ ।
ತತ್ರ ಭುಕ್ತ್ವಾಽಖಿಲಾನ್ ಭೋಗಾನ್ ಜಾಯತೇ ಭುವಿ ಭೂಪತಿಃ ॥೩೧॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ
ಪಂಚಮೇ ಅವಂತ್ಯಖಂಡೇ ತೃತೀಯೇ ರೇವಾಖಂಡೇ
" ಧೌತಪಾಪತೀರ್ಥಮಾಹಾತ್ಮ್ಯವರ್ಣನಂ " ನಾಮ
ಚತುರಶೀತ್ಯುತ್ತರಶತತಮೋಽಧ್ಯಾಯಃ

---

ತ್ಯಜಿಸಿದವನು ಸೂರ್ಯಾಗ್ನಿಗಳಿಗೆ ಸಮವಾದ ಕಾಂತಿಯುಳ್ಳವನಾಗಿ ಹಂಸ ಮಯೂರಗಳು ಕಟ್ಟಿರುವ ವಿಮಾನಗಳಲ್ಲಿ ಅಪ್ಸರೆಯರಿಂದ ಸೇವಿಸಲ್ಪಡುತ್ತ ಸುರದುರ್ಲಭವಾದ ಶಂಕರನ ಸ್ಥಾನವನ್ನು ಸೇರುವನು. ಅಲ್ಲಿ ಚಂದ್ರಸೂರ್ಯ ನಕ್ಷತ್ರಗಳಿರುವವರೆಗೆ ಕ್ರೀಡಿಸುವನು.

೨೮. ಈ ಧೌತಪಾಪದಲ್ಲಿ ಮಡಿದ ನಾರಿಯು ಕೂಡಲೆ ಪುರುಷನಾಗಿ ಜನಿಸುವಳು.

೨೯. ಹೆಚ್ಚು ಹೇಳಿ ಏನು ಪ್ರಯೋಜನ? ಆ ಧೌತಪಾಪದಲ್ಲಿ ಮಾಡಿದ ಶುಭಕಾರ್ಯವಾಗಲಿ ಅಶುಭಕಾರ್ಯವಾಗಲಿ ಅದು ಅಕ್ಷಯವಾದ ಫಲವನ್ನು ಕೊಡುವುದು.

೩೦. ಅಲ್ಲಿ ಅನ್ನ, ವಿಷಯಾದಿಗಳು, ಫಲಮೂಲಾದಿಗಳು ಇವುಗಳನ್ನು ಬಿಡಬೇಕು. ನೀರನ್ನು ಮಾತ್ರ ಬಿಡಬಾರದು.

೩೧. ಹೀಗೆ ಮಾಡಿದವನು ರುದ್ರಲೋಕವನ್ನು ಸೇರುವನು. ಅಲ್ಲಿ ಸಕಲ ಭೋಗಗಳನ್ನೂ ಭುಂಜಿಸಿ ಭೂಮಿಯಲ್ಲಿ ರಾಜನಾಗುವನು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ
ಶ್ರೀ ಸ್ಕಾಂದಮಹಾಪುರಾಣದ ಐದನೆಯ ಅವಂತ್ಯಖಂಡದ ಮೂರನೆಯ ರೇವಾಖಂಡದಲ್ಲಿ
" ಧೌತಪಾಪತೀರ್ಥಮಾಹಾತ್ಮ್ಯವರ್ಣನ "ವೆಂಬ
ನೂರೆಂಬತ್ತನಾಲ್ಕನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

# ಅಥ ಪಂಚಾಶೀತ್ಯುತ್ತರಶತತಮೋಽಧ್ಯಾಯಃ

## ಏರಂಡೀತೀರ್ಥಮಾಹಾತ್ಮ್ಯವರ್ಣನಂ

ಶ್ರೀ ಮಾರ್ಕಂಡೇಯ ಉವಾಚ :-

ತತೋ ಗಚ್ಛೇನ್ಮಹೀಪಾಲ ಏರಂಡೀತೀರ್ಥಮುತ್ತಮಂ ।
ಸ್ನಾನಮಾತ್ರೇಣ ತತ್ರೈವ ಬ್ರಹ್ಮಹತ್ಯಾ ಪ್ರಣಶ್ಯತಿ ॥ ೧ ॥
ಮಾಸಿ ಚಾಶ್ವಯುಜೇ ತತ್ರ ಶುಕ್ಲಪಕ್ಷೇ ಚತುರ್ದಶೀಂ ।
ಉಪೋಷ್ಯ ಪ್ರಯತಃ ಸ್ನಾತಸ್ತರ್ಪಯೇತ್ಪಿತೃದೇವತಾಃ ॥ ೨ ॥
ಪುತ್ರರ್ಧಿರೂಪಸಂಪನ್ನೋ ಜೀವೇಚ್ಚ ಶರದಾಂ ಶತಂ ।
ಶಿವಲೋಕಂ ಮೃತೋ ಯಾತಿ ನಾಽತ್ರ ಕಾರ್ಯಾ ವಿಚಾರಣಾ ॥ ೩ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ
ಪಂಚಮೇ ಅವಂತ್ಯಖಂಡೇ ತೃತೀಯೇ ರೇವಾಖಂಡೇ
"ಏರಂಡೀತೀರ್ಥಮಾಹಾತ್ಮ್ಯವರ್ಣನಂ"ನಾಮ
ಪಂಚಾಶೀತ್ಯುತ್ತರಶತತಮೋಽಧ್ಯಾಯಃ

---

## ಕನ್ನಡದ ಅನುವಾದ

### ಏರಂಡೀತೀರ್ಥಮಾಹಾತ್ಮ್ಯವರ್ಣನ

೧. ಶ್ರೀ ಮಾರ್ಕಂಡೇಯನು ಹೇಳುತ್ತಾನೆ:—ಮಹಾರಾಜ! ಬಳಿಕ ಉತ್ತಮವಾದ ಏರಂಡೀತೀರ್ಥಕ್ಕೆ ಹೋಗಬೇಕು. ಅಲ್ಲಿ ಸ್ನಾನಮಾಡುವುದರಿಂದಲೇ ಬ್ರಹ್ಮಹತ್ಯೆಯು ಪರಿಹಾರವಾಗುವುದು.

೨. ಅಲ್ಲಿ ಅಶ್ವಯುಜಮಾಸದ ಶುಕ್ಲಪಕ್ಷದ ಚತುರ್ದಶೀದಿನ ಸ್ನಾನಮಾಡಿ ಶುದ್ಧನಾಗಿ ಉಪವಾಸಮಾಡಿ ಪಿತೃದೇವತೆಗಳಿಗೆ ತರ್ಪಣ ಮಾಡಬೇಕು.

೩. ಅವನು ಪುತ್ರಸಂಪತ್ತಿರೂಪವಾದ ಸಂಪತ್ತುಗಳಿಂದ ಕೂಡಿ ನೂರು ವರ್ಷ ಜೀವಿಸಿ ಮೃತನಾಗಿ ಶಿವಲೋಕಕ್ಕೆ ತೆರಳುವನು. ಈ ವಿಷಯದಲ್ಲಿ ವಿಚಾರಮಾಡಬೇಕಾಗಿಲ್ಲ.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ
ಶ್ರೀ ಸ್ಕಾಂದಮಹಾಪುರಾಣದ ಐದನೆಯ ಅವಂತ್ಯಖಂಡದ ಮೂರನೆಯ ರೇವಾಖಂಡದಲ್ಲಿ
"ಏರಂಡೀತೀರ್ಥಮಾಹಾತ್ಮ್ಯವರ್ಣನ"ವೆಂಬ
ನೂರೆಂಬತ್ತೈದನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

## ಅಥ ಷಡಶೀತ್ಯುತ್ತರಶತತಮೋಽಧ್ಯಾಯಃ

### ಕನಖಲೇಶ್ವರತೀರ್ಥಮಾಹಾತ್ಮ್ಯವರ್ಣನಂ

ಶ್ರೀ ಮಾರ್ಕಂಡೇಯ ಉವಾಚ :—

ತತೋ ಗಚ್ಛೇನ್ಮಹೀಪಾಲ ತೀರ್ಥಂ ಕನಖಲೋತ್ತಮಂ ।
ಗರುಡೇನ ತಪಸ್ತಪ್ತಂ ಪೂಜಯಿತ್ವಾ ಮಹೇಶ್ವರಂ ॥ ೧ ॥
ದಿವ್ಯಂ ವರ್ಷಶತಂ ಯಾವಜ್ಜಾತಮಾತ್ರೇಣ ಭಾರತ।
ತಪೋಜಪ್ಯೈಃ ಕೃಶೀಭೂತೋ ದೃಷ್ಟೋ ದೇವೇನ ಶಂಭುನಾ ॥ ೨ ॥
ತತಸ್ತುಷ್ಟೋ ಮಹಾದೇವೋ ವೈನತೇಯಂ ಮನೋಜವಂ ।
ಉವಾಚ ಪರಮಂ ವಾಕ್ಯಂ ವಿನತಾನಂದವರ್ಧನಂ ॥ ೩ ॥
ಪ್ರಸನ್ನಸ್ತೇ ಮಹಾಭಾಗ ವರಂ ವರಯ ಸುವ್ರತ ।
ದುರ್ಲಭಂ ತ್ರಿಷು ಲೋಕೇಷು ದದಾಮಿ ತವ ಖೇಚರ ॥ ೪ ॥

ಗರುಡ ಉವಾಚ :—

ಇಚ್ಛಾಮಿ ವಾಹನಂ ವಿಷ್ಣೋರ್ದ್ವಿಜೇಂದ್ರತ್ವಂ ಸುರೇಶ್ವರ ।
ಪ್ರಸನ್ನೇ ತ್ವಯಿ ಮೇ ಸರ್ವಂ ಭವಿಷ್ಯತಿ ಮತಿರ್ಮಮ ॥ ೫ ॥

---

### ಕನ್ನಡದ ಅನುವಾದ

#### ಕನಖಲೇಶ್ವರತೀರ್ಥಮಾಹಾತ್ಮ್ಯವರ್ಣನ

೧–೩. ಮಹಾರಾಜ! ಬಳಿಕ ಕನಖಲೇಶ್ವರತೀರ್ಥಕ್ಕೆ ಹೋಗಬೇಕು. ಅಲ್ಲಿ ಗರುಡನು ಹುಟ್ಟಿದ ಕೂಡಲೆ ನೂರು ದಿವ್ಯವರ್ಷಗಳಕಾಲ ಮಹೇಶ್ವರನನ್ನು ಪೂಜಿಸಿ ತಪಸ್ಸನ್ನು ಮಾಡಿದನು. ಬಳಿಕ ಶಂಕರನು ತಪೋಜಪಗಳಿಂದ ಕೃಶನಾದ ವಿನತಾಪುತ್ರನಾದ ಗರುಡನನ್ನು ಕಂಡು ಸಂತುಷ್ಟನಾಗಿ ಈ ಉತ್ತಮವಾದ ಮಾತನ್ನಾಡಿದನು.

೪. "ಮಹಾಭಾಗ್ಯಶಾಲಿಯೆ! ನಾನು ನಿನ್ನಲ್ಲಿ ಸಂತುಷ್ಟನಾಗಿರುವೆನು. ಮೂರು ಲೋಕಗಳಲ್ಲಿ ದುರ್ಲಭವಾದ ವರವನ್ನು ಕೊಡುವೆನು, ಕೇಳಿಕೊ."

೫. ಗರುಡನು ಹೇಳುತ್ತಾನೆ:—ಶಂಕರ! ನಾನು ವಿಷ್ಣುವಿಗೆ ವಾಹನವಾಗಲು ಬಯಸುವೆನು. ನೀನು ಪ್ರಸನ್ನನಾದರೆ ನನಗೆಲ್ಲವೂ ಸಾಧ್ಯವಾಗುವುದೆಂದು ತಿಳಿಯುತ್ತೇನೆ.

ಶ್ರೀ ಮಹೇಶ ಉವಾಚ :—

ದುರ್ಲಭಃ ಪ್ರಾಣಿನಾಂ ತಾತ ಯೋ ವರಃ ಪ್ರಾರ್ಥಿತೋಽನಘ ।
ದೇವದೇವಸ್ಯ ವಹನಂ ದ್ವಿಜೇಂದ್ರತ್ವಂ ಸುದುರ್ಲಭಂ ॥ ೬ ॥
ನಾರಾಯಣೋದರೇ ಸರ್ವಂ ತ್ರೈಲೋಕ್ಯಂ ಸಚರಾಚರಂ ।
ತ್ವಯಾ ಸ ಕಥಮೂಹ್ಯೇತ ದೇವದೇವೋ ಜಗದ್ಗುರುಃ ॥ ೭ ॥
ತೇನೈವ ಸ್ಥಾಪಿತಶ್ಚೇಂದ್ರಸ್ತ್ರೈಲೋಕ್ಯೇ ಸಚರಾಚರೇ ।
ಕಥಮನ್ಯಸ್ಯ ಚೇಂದ್ರತ್ವಂ ಭವತೀತಿ ಸುದುರ್ಲಭಂ ॥ ೮ ॥
ತಥಾಽಪಿ ಮಮ ವಾಕ್ಯೇನ ವಾಹನಂ ತ್ವಂ ಭವಿಷ್ಯಸಿ ।
ಶಂಖಚಕ್ರಗದಾಪಾಣೇರ್ವಹತೋಽಪಿ ಜಗತ್ತ್ರಯಂ ॥ ೯ ॥
ಇಂದ್ರಸ್ತ್ವಂ ಪಕ್ಷಿಣಾಂ ಮಧ್ಯೇ ಭವಿಷ್ಯಸಿ ನ ಸಂಶಯಃ ।
ಇತಿ ದತ್ವಾ ವರಂ ತಸ್ಮಾ ಅಂತರ್ಧಾನಂ ಗತೋ ಹರಃ ॥ ೧೦ ॥
ತತೋ ಗತೇ ಮಹಾದೇವೇ ಹ್ಯರುಣಸ್ಯಾಽನುಜೋ ನೃಪ ।
ಆರಾಧಯಾಮಾಸ ತದಾ ಚಾಮುಂಡಾಂ ಮುಂಡಮುಂಡಿತಾಂ ॥ ೧೧ ॥
ಶ್ಮಶಾನವಾಸಿನೀಂ ದೇವೀಂ ಬಹುಭೂತಸಮನ್ವಿತಾಂ ।
ಯೋಗಿನೀಂ ಯೋಗಸಂಸಿದ್ಧಾಂ ವಸಾಮಾಂಸಾಸವಪ್ರಿಯಾಂ ॥ ೧೨ ॥

---

೬. ಶ್ರೀ ಮಹೇಶ್ವರನು ಹೇಳುತ್ತಾನೆ:—ನಿರ್ದುಷ್ಟನೆ! ನೀನು ಬೇಡಿದ ವರವು ಪ್ರಾಣಿಗಳಿಗೆ ದುರ್ಲಭವಾದುದು. ದೇವದೇವನಾದ ಆ ನಾರಾಯಣ ನನ್ನು ಹೊರುವುದು ಅತ್ಯಂತ ದುರ್ಲಭವಾದುದು.

೭. ಆ ನಾರಾಯಣನ ಉದರದಲ್ಲಿ ಚರಾಚರಾತ್ಮಕವಾದ ಈ ತ್ರಿಭುವನವೇ ಇರುವುದು. ನೀನು ಜಗದ್ಗುರುವಾದ ಅವನನ್ನು ಹೇಗೆ ಹೊರುತ್ತೀಯೆ?

೮. ಅವನೇ ಈ ಪ್ರಪಂಚದಲ್ಲಿ ಇಂದ್ರನನ್ನು ಸ್ಥಾಪಿಸಿರುವನು. ಬೇರೆ ಯವರಿಗೆ ದುರ್ಲಭವಾದ ಇಂದ್ರತ್ವವು ಹೇಗುಂಟಾಗುವುದು?

೯. ಹಾಗಾದರೂ ನೀನು ನನ್ನ ಮಾತಿನಿಂದ ಈ ಶಂಖ ಚಕ್ರ ಗದಾ ಪದ್ಮ ಗಳನ್ನು ಹಿಡಿದು ಜಗತ್ತುಗಳನ್ನು ಹೊರುತ್ತಿರುವ ಆ ವಿಷ್ಣುವಿಗೆ ವಾಹನ ವಾಗುವೆ.

೧೦. ನೀನು ಪಕ್ಷಿಗಳ ನಡುವೆ ರಾಜನಾಗುವೆ; ಇದು ನಿಶ್ಚಯವು. ಶಂಕರನು ಹೀಗೆ ಅವನಿಗೆ ವರವನ್ನಿತ್ತು ಅದೃಶ್ಯನಾದನು.

೧೧–೧೨. ಶಂಕರನು ಹೊರಟುಹೋಗಲು ಅರುಣನ ತಮ್ಮನಾದ ಗರುಡನು ಮುಂಡಮಾಲೆಯಿಂದ ಅಲಂಕಾರಗೊಂಡವಳೂ, ಸ್ಮಶಾನವಾಸಿನಿಯೂ, ಅನೇಕ ಭೂತಗಳಿಂದ ಕೂಡಿದವಳೂ, ಯೋಗಿನಿಯೂ, ಯೋಗಸಿದ್ಧಳೂ, ಮೇದಸ್ಸು, ಮಾಂಸ, ಮದ್ಯಗಳಲ್ಲಿ ಪ್ರೀತಿಯುಳ್ಳವಳೂ ಆದ ಚಾಮುಂಡೆಯನ್ನು ಪೂಜಿಸಿದನು.

ಧ್ಯಾತಮಾತ್ರಾ ತು ತೇನೈವ ಪ್ರತ್ಯಕ್ಷಾ ಹ್ಯಭವತ್ತದಾ ।
ಜಾಲಂಧರೇ ಚ ಯಾ ಸಿದ್ಧಿಃ ಕೌಲೀನೇ ಉಡ್ಡಿಶೇ ಪರೇ ॥ ೧೩ ॥
ಸಮಗ್ರಾ ಸಾ ಭೃಗುಕ್ಷೇತ್ರೇ ಸಿದ್ಧಕ್ಷೇತ್ರೇ ತು ಸಂಸ್ಥಿತಾ ।
ಚಾಮುಂಡಾ ತತ್ರ ಸಾ ದೇವೀ ಸಿದ್ಧಕ್ಷೇತ್ರೇ ವ್ಯವಸ್ಥಿತಾ ॥ ೧೪ ॥
ಸಂಸ್ತುತಾ ಋಷಿಭಿರ್ದೇವೈರ್ಯೋಗಕ್ಷೇಮಾರ್ಥಸಿದ್ಧಯೇ ।
ವಿನತಾನಂದಜನನಸ್ತತ್ರ ತಾಂ ಯೋಗಿನೀಂ ನೃಪ ।
ಭಕ್ತ್ಯಾ ಪ್ರಸಾದಯಾಮಾಸ ಸ್ತೋತ್ರೈರ್ವೈದಿಕಲೌಕಿಕೈಃ ॥ ೧೫ ॥

ಗರುಡ ಉವಾಚ :—

ಯಾ ಸಾ ಕ್ಷುತ್ಕ್ಷಾಮಕಂಠಾ ನವರುಧಿರಮುಖಾ ಪ್ರೇತಪದ್ಮಾಸನಸ್ಥಾ
ಭೂತಾನಾಂ ವೃಂದವೃಂದೈಃ ಪಿತೃವನನಿಲಯಾ ಕ್ರೀಡತೇ ಶೂಲಹಸ್ತಾ ।
ಶಸ್ತ್ರಧ್ವಸ್ತಪ್ರವೀರವ್ರಜರುಧಿರಗಲನ್ಮುಂಡಮಾಲೋತ್ತರೀಯಾ
ದೇವೀ ಶ್ರೀವೀರಮಾತಾ ವಿಮಲಶಶಿನಿಭಾ ಪಾತು ವಶ್ಚರ್ಮಮುಂಡಾ ॥
ಯಾ ಸಾ ಕ್ಷುತ್ಕ್ಷಾಮಕಂಠಾ ವಿಕೃತಭಯಕರೀ ತ್ರಾಸಿನೀ ದುಷ್ಕೃತಾನಾಂ
ಮುಂಚಜ್ಜ್ವಾಲಾಕಲಾಪೈರ್ದಶನಕಸಮುಸ್ಸೈಃ ಖಾದತಿ ಪ್ರೇತಮಾಂಸಂ ।
ಪಿಂಗೋರ್ಧ್ವೋರ್ಧ್ವಬದ್ಧಜೂಟಾರವಿಸದೃಶತನುರ್ವ್ಯಾಘ್ರಚರ್ಮೋತ್ತರೀಯಾ
ದೈತ್ಯೇಂದ್ರೈರ್ಯಕ್ಷರಕ್ಷೋಽಪ್ಸರಸುರನಮಿತಾ ಪಾತು ವಶ್ಚರ್ಮಮುಂಡಾ ॥

---

೧೩–೧೫. ಅವನು ಧ್ಯಾನಮಾಡಿದ ಕೂಡಲೆ ಚಾಮುಂಡಿಯು ಪ್ರತ್ಯಕ್ಷಳಾದಳು. ಜಾಲಂಧರ, ಕೌಲೀನ, ಉಡ್ಡೀಶ ಇವುಗಳಲ್ಲಾಗುವ ಸಿದ್ಧಿಯು ಸಿದ್ಧಕ್ಷೇತ್ರವಾದ ಭೃಗುಕ್ಷೇತ್ರದಲ್ಲಿ ಉಂಟಾಗುವುದು. ಆ ಸಿದ್ಧಕ್ಷೇತ್ರದಲ್ಲಿ ಋಷಿಗಳಿಂದಲೂ, ದೇವತೆಗಳಿಂದಲೂ ಸ್ತುತಿಸಲ್ಪಟ್ಟ ಚಾಮುಂಡೆಯು ಜನರ ಯೋಗಕ್ಷೇಮಕ್ಕಾಗಿ ನೆಲೆಸಿದಳು. ಮಹಾರಾಜ! ಗರುಡನು ಆ ಯೋಗಿನಿಯನ್ನು ವೈದಿಕ ಲೌಕಿಕ ಸ್ತೋತ್ರಗಳಿಂದ ಭಕ್ತಿಯಿಂದ ಸಂತೋಷಗೊಳಿಸಿದನು.

೧೬. ಗರುಡನು ಹೇಳುತ್ತಾನೆ:—ಹಸಿವಿನಿಂದ ಕೃಶವಾದ ಕಂಠವುಳ್ಳವಳೂ, ಮುಖದಲ್ಲಿ ಹೊಸ ರಕ್ತವುಳ್ಳವಳೂ, ಪ್ರೇತಪದ್ಮದಲ್ಲಿ ಕುಳಿತವಳೂ, ಭೂತಗಳ ಸಮೂಹದಿಂದ ಕೂಡಿದವಳೂ, ಸ್ಮಶಾನವಾಸಿನಿಯೂ, ಶೂಲಧಾರಿಣಿಯೂ, ಆಯುಧಗಳಿಂದ ನಾಶಗೊಂಡ ಯೋಧರ ರಕ್ತ ಸುರಿಯುತ್ತಿರುವ ಮುಂಡಮಾಲೆಯನ್ನು ಉತ್ತರೀಯಾಕಾರವಾಗಿ ಧರಿಸಿದವಳೂ, ವೀರಮಾತೆಯೂ, ಶುದ್ಧನಾದ ಚಂದ್ರನಂತಿರುವವಳೂ ಆದ ಚಾಮುಂಡೆಯು ನಿಮ್ಮನ್ನು ಕಾಪಾಡಲಿ.

೧೭. ಹಸಿವಿನಿಂದ ಕೃಶವಾದ ಕಂಠವುಳ್ಳವಳೂ, ವಿಕಾರರೂಪಳೂ, ಭಯವನ್ನುಂಟುಮಾಡುವವಳೂ, ದುಷ್ಟರಿಗೆ ಭಯಂಕರಳೂ, ಅಗ್ನಿಯ ಜ್ವಾಲೆಯನ್ನು

ಯಾ ಸಾ ದೋರ್ದಂಡಚಂಡೈರ್ಡಮರುರಣರಣಾಟೋಪಟಂಕಾರಘಂಟೈಃ
ಕಲ್ಪಾಂತೋತ್ಪಾತವಾತಾಹತಪಟುಪಟಹೈರ್ವಲ್ಗತೇ ಭೂತಮಾತಾ ।
ಕ್ಷುತ್ಕ್ಷಾಮಾ ಶುಷ್ಕಕುಕ್ಷಿಃ ಖರತರನಖರೈಃ ಕ್ಷೋದತಿ ಪ್ರೇತಮಾಂಸಂ
ಮುಂಚಂತೀ ಚಾಟ್ಟಹಾಸಂ ಘುರಘುರಿತರವಾ ಪಾತು ವಶ್ಚರ್ಮಮುಂಡಾ ॥
ಯಾ ಸಾ ನಿಮ್ನೋದರಾಭಾ ವಿಕೃತಭವಭಯತ್ರಾಸಿನೀ ಶೂಲಹಸ್ತಾ
ಚಾಮುಂಡಾ ಮುಂಡಘಾತಾ ರಣರಣಿತರಣಜ್ಝಲ್ಲರೀನಾದರಮ್ಯಾ ।
ತ್ರೈಲೋಕ್ಯಂ ತ್ರಾಸಯಂತೀ ಕಕಹಕಹಕಹೈರ್ಘೋರರಾವೈರನೇಕೈ
ರ್ನೃತ್ಯಂತೀ ಮಾತೃಮಧ್ಯೇ ಪಿತೃವನನಿಲಯಾ ಪಾತುವಶ್ಚರ್ಮಮುಂಡಾ॥ ೧೯॥
ಯಾ ಧತ್ತೇ ವಿಶ್ವಮಖಿಲಂ ನಿಜಾಂಶೇನ ಮಹೋಜ್ಜ್ವಲಾ ।
ಕನಕಪ್ರಸವೇ ಲೀನಾ ಪಾತು ಮಾಂ ಕನಕೇಶ್ವರೀ ॥ ೨೦ ॥

---

ಕಾರುತ್ತ ಪ್ರೇತಮಾಂಸವನ್ನು ಭಕ್ಷಿಸುವವಳೂ, ಹಳದಿ ಬಣ್ಣದ ಜಟೆಯಿಂದ ಅಸದೃಶ ಶರೀರವುಳ್ಳವಳೂ, ವ್ಯಾಘ್ರಚರ್ಮವನ್ನು ಹೊದ್ದವಳೂ, ಯಕ್ಷ, ರಾಕ್ಷಸ, ಅಪ್ಸರ, ಸುರರಿಂದ ನಮಸ್ಕರಿಸಲ್ಪಟ್ಟವಳೂ ಆದ ಚಾಮುಂಡಿಯು ನಿಮ್ಮನ್ನು ಕಾಪಾಡಲಿ.

೧೮. ಡಮರು ರಣರಣಧ್ವನಿ, ಟಂಕಾರ ಶಬ್ದವುಳ್ಳ ಘಂಟೆ ಇವುಗಳುಳ್ಳ ಕಠಿನವಾದ ಭುಜದಂಡಗಳಿಂದಲೂ, ಪ್ರಳಯಕಾಲದ ಉತ್ಪಾತ ಮಾರುತದಿಂದ ಹೊಡೆಯಲ್ಪಟ್ಟ ಪಟಹವಾದ್ಯಗಳಿಂದ ಸಂಚರಿಸುವವಳೂ, ಭೂಮಾತೆಯೂ, ಹಸಿವಿನಿಂದ ಕೃಶಳೂ, ಒಣಗಿದ ಹೊಟ್ಟೆಯುಳ್ಳವಳೂ, ಹರಿತವಾದ ಉಗುರುಗಳಿಂದ ಪ್ರೇತಮಾಂಸವನ್ನು ತಿನ್ನುವವಳೂ, ಅಟ್ಟಹಾಸ ಮಾಡುವವಳೂ, ಘುರುಘುರು ಶಬ್ದವುಳ್ಳವಳೂ ಆದ ಚಾಮುಂಡಿಯು ನಿಮ್ಮನ್ನು ರಕ್ಷಿಸಲಿ.

೧೯. ಆಳವಾದ ಹೊಟ್ಟೆಯ ಕಾಂತಿಯುಳ್ಳವಳೂ, ವಿಕಾರರೂಪಳೂ, ಸಂಸಾರ ಭಯವನ್ನು ನಿವಾರಿಸುವವಳೂ, ಶೂಲವನ್ನು ಹಿಡಿದವಳೂ, ಮುಂಡ ಮಾಲೆಯುಳ್ಳವಳೂ, ರಣರಣ ಶಬ್ದಗೈಯ್ಯುವ ಝುಲ್ಲರಿಯ ಧ್ವನಿಯಿಂದ ಮನೋಹರಳೂ, ಘೋರ ಧ್ವನಿಗಳಿಂದ ಮೂರು ಲೋಕಗಳನ್ನು ಭಯಗೊಳಿಸುವವಳೂ, ಮಾತೆಯರ ನಡುವೆ ಕುಣಿಯುವವಳೂ, ಸ್ಮಶಾನವಾಸಿನಿಯೂ ಆದ ಚಾಮುಂಡಿಯು ನಿಮ್ಮನ್ನು ಕಾಪಾಡಲಿ.

೨೦. ತನ್ನ ಅಂಶದಿಂದ ಸಕಲ ಜಗತ್ತನ್ನು ಧರಿಸಿರುವವಳೂ, ಅತ್ಯಂತೋಜ್ಜ್ವಲಳೂ, ಕನಕಪ್ರಸವದಲ್ಲಿ ಅಡಗಿರುವವಳೂ ಆದ ಕನಕೇಶ್ವರಿಯು ನನ್ನನ್ನು ಕಾಪಾಡಲಿ.

ಹಿಮಾದ್ರಿಸಂಭವಾ ದೇವೀ ದಯಾದರ್ಶಿತವಿಗ್ರಹಾ ।
ಶಿವಪ್ರಿಯಾ ಶಿವೇ ಸಕ್ತಾ ಪಾತು ಮಾಂ ಕನಕೇಶ್ವರೀ ॥ ೨೧ ॥
ಅನಾದಿಜಗದಾದಿರ್ಯಾ ರತ್ನಗರ್ಭಾ ವಸುಪ್ರಿಯಾ ।
ರಥಾಂಗಪಾಣಿನಾ ಪದ್ಮಾ ಪಾತು ಮಾಂ ಕನಕೇಶ್ವರೀ ॥ ೨೨ ॥
ಸಾವಿತ್ರೀ ಯಾ ಚ ಗಾಯತ್ರೀ ಮೃಡಾನೀ ವಾಗಥೇಂದಿರಾ ।
ಸ್ಮರ್ತೄಣಾಂ ಯಾ ಸುಖಂ ದತ್ತೇ ಪಾತು ಮಾಂ ಕನಕೇಶ್ವರೀ ॥ ೨೩ ॥
ಸೌಮ್ಯಾಸೌಮ್ಯೈಃ ಸದಾ ರೂಪೈಃ ಸೃಜತ್ಯವತಿ ಯಾ ಜಗತ್ ।
ಪರಾಶಕ್ತಿಃ ಪರಾ ಬುದ್ಧಿಃ ಪಾತು ಮಾಂ ಕನಕೇಶ್ವರೀ ॥ ೨೪ ॥
ಬ್ರಹ್ಮಣಃ ಸರ್ಗಸಮಯೇ ಸೃಜ್ಯಶಕ್ತಿಃ ಪರಾ ತು ಯಾ ।
ಜಗನ್ಮಾಯಾ ಜಗದ್ಧಾತ್ರೀ ಪಾತು ಮಾಂ ಕನಕೇಶ್ವರೀ ॥ ೨೫ ॥
ವಿಶ್ವಸ್ಯ ಪಾಲನೇ ವಿಷ್ಣೋರ್ಯಾ ಶಕ್ತಿಃ ಪರಿಪಾಲಿಕಾ ।
ಮದನೋನ್ಮಾದಿನೀ ಮುಖ್ಯಾ ಪಾತು ಮಾಂ ಕನಕೇಶ್ವರೀ ॥ ೨೬ ॥

---

೨೧. ಹಿಮಾಚಲನ ಪುತ್ರಿಯಾಗಿ ಹುಟ್ಟಿದವಳೂ, ದಯೆಯಿಂದ ಪ್ರಕಟವಾದ ಶರೀರವುಳ್ಳವಳೂ, ಶಿವಪ್ರಿಯೆಯೂ, ಶಿವನಲ್ಲಿ ಆಸಕ್ತಳೂ ಆದ ಕನಕೇಶ್ವರಿಯು ನನ್ನನ್ನು ಕಾಪಾಡಲಿ.

೨೨. ಅನಾದಿಯಾದ ಜಗತ್ತಿಗೆ ಆದಿಯೂ, ರತ್ನಗರ್ಭಳೂ, ಐಶ್ವರ್ಯ ಸೌಭಾಗ್ಯಗಳಲ್ಲಿ ಪ್ರೀತಿಯುಳ್ಳವಳೂ, ಲಕ್ಷ್ಮೀರೂಪಳೂ ಆದ ಕನಕೇಶ್ವರಿಯು ಚಕ್ರಹಸ್ತದಿಂದ ನನ್ನನ್ನು ಕಾಪಾಡಲಿ.

೨೩. ಸಾವಿತ್ರೀ, ಗಾಯತ್ರೀ, ಮೃಡಾಣೀ, ಸರಸ್ವತೀ, ಲಕ್ಷ್ಮೀ ಇವರ ರೂಪಳಾಗಿ, ಸ್ಮರಿಸುವವರಿಗೆ ಸುಖವನ್ನೀಯುವ ಕನಕೇಶ್ವರಿಯು ನನ್ನನ್ನು ಕಾಪಾಡಲಿ.

೨೪. ಸೌಮ್ಯಾಸೌಮ್ಯರೂಪಗಳಿಂದ ಯಾವಾಗಲೂ ಪ್ರಪಂಚವನ್ನು ಸೃಜಿಸುವವಳೂ, ಪರಶಕ್ತಿಯೂ, ಬುದ್ಧಿರೂಪಳೂ ಆದ ಕನಕೇಶ್ವರಿಯು ನನ್ನನ್ನು ಕಾಪಾಡಲಿ.

೨೫. ಬ್ರಹ್ಮನ ಸೃಷ್ಟಿಸಮಯದಲ್ಲಿ ಸೃಜಿಸುವ ಶಕ್ತಿರೂಪಳೂ, ಜಗನ್ಮಾಯೆಯೂ, ಜಗದ್ಧಾರಕಳೂ ಆದ ಕನಕೇಶ್ವರಿಯು ನನ್ನನ್ನು ಕಾಪಾಡಲಿ.

೨೬. ವಿಷ್ಣುವಿನ ಜಗತ್ಪಾಲನೆಯ ಸಮಯದಲ್ಲಿ ಪರಿಪಾಲಿಕಾಶಕ್ತಿ ರೂಪಳೂ, ಮನ್ಮಥನನ್ನು ಉನ್ಮಾದಗೊಳಿಸುವವಳೂ, ಮುಖ್ಯಳೂ ಆದ ಕನಕೇಶ್ವರಿಯು ನನ್ನನ್ನು ಕಾಪಾಡಲಿ.

ವಿಶ್ವಸಂಲಯನೇ ಮುಖ್ಯಾ ಯಾ ರುದ್ರೇಣ ಸಮಾಶ್ರಿತಾ ।
ರೌದ್ರೀ ಶಕ್ತಿಃ ಶಿವಾನಂತಾ ಪಾತು ಮಾಂ ಕನಕೇಶ್ವರೀ ॥ ೨೭ ॥
ಕೈಲಾಸಸಾನುಸಂರೂಢಕನಕಪ್ರಸವೇಶಯಾ ।
ಭಸ್ಮಕಾಭಿಹೃತಾ ಪೂರ್ವಂ ಪಾತು ಮಾಂ ಕನಕೇಶ್ವರೀ ॥ ೨೮ ॥
ಪತಿಪ್ರಭಾವಮಿಚ್ಛಂತೀ ತ್ರಸ್ಯಂತೀ ಯಾ ವಿನಾ ಪತಿಂ ।
ಅಬಲಾ ತ್ವೇಕಭಾವಾ ಚ ಪಾತು ಮಾಂ ಕನಕೇಶ್ವರೀ ॥ ೨೯ ॥
ವಿಶ್ವಸಂರಕ್ಷಣೇ ಸಕ್ತಾ ರಕ್ಷಿತಾ ಕನಕೇನ ಯಾ ।
ಆಬ್ರಹ್ಮಸ್ತಂಬಜನನೀ ಪಾತು ಮಾಂ ಕನಕೇಶ್ವರೀ ॥ ೩೦ ॥
ಬ್ರಹ್ಮವಿಷ್ಣ್ವೀಶ್ವರಾಃ ಶಕ್ತ್ಯಾ ಶರೀರಗ್ರಹಣಂ ಯಯಾ ।
ಪ್ರಾಪಿತಾಃ ಪ್ರಥಮಾ ಶಕ್ತಿಃ ಪಾತು ಮಾಂ ಕನಕೇಶ್ವರೀ ॥ ೩೧ ॥
ಶ್ರುತ್ವಾ ತು ಗರುಡೇನೋಕ್ತಂ ದೇವೀ ವೃತ್ತಚತುಷ್ಟಯಂ ।
ಪ್ರಸನ್ನಾ ಸಮ್ಮುಖೀ ಭೂತ್ವಾ ವಾಕ್ಯಮೇತದುವಾಚ ಹ ॥ ೩೨ ॥

ಶ್ರೀ ಚಾಮುಂಡೋವಾಚ :—

ಪ್ರಸನ್ನಾ ತೇ ಮಹಾಸತ್ತ್ವ ವರಂ ವರಯ ವಾಂಛಿತಂ ।
ದದಾಮಿ ತೇ ದ್ವಿಜಶ್ರೇಷ್ಠ ಯತ್ತೇ ಮನಸಿ ರೋಚತೇ ॥ ೩೩ ॥

---

೨೭. ಜಗತ್ಪ್ರಳಯಕಾಲದಲ್ಲಿ ರುದ್ರನು ಆಶ್ರಯಿಸುವ ರೌದ್ರಶಕ್ತಿರೂಪಳೂ, ಮಂಗಳಕರಳೂ, ನಾಶರಹಿತಳೂ ಆದ ಕನಕೇಶ್ವರಿಯು ನನ್ನನ್ನು ಕಾಪಾಡಲಿ.

೨೮. ಕೈಲಾಸಪರ್ವತದ ತಪ್ಪಲಲ್ಲಿ ಹುಟ್ಟಿದ ಸುವರ್ಣ ಪುಷ್ಪದಂತೆ ಕೈಯುಳ್ಳವಳೂ, ಹಿಂದೆ ಭಸ್ಮಾಸುರನಿಂದ ಅಪಹೃತಳೂ ಆದ ಕನಕೇಶ್ವರಿಯು ನನ್ನನ್ನು ಕಾಪಾಡಲಿ.

೨೯. ಪತಿಯ ಪ್ರಭಾವವನ್ನು ಬಯಸುವವಳೂ, ಪತಿಯನ್ನು ಬಿಟ್ಟು ಹೆದರುವವಳೂ, ಅಬಲೆಯೂ, ಒಂದೇ ಭಾವವುಳ್ಳವಳೂ ಆದ ಕನಕೇಶ್ವರಿಯು ನನ್ನನ್ನು ಕಾಪಾಡಲಿ.

೩೦. ಪ್ರಪಂಚದ ರಕ್ಷಣೆಯಲ್ಲಿ ಆಸಕ್ತಳೂ, ಕನಕನಿಂದ ರಕ್ಷಿತಳೂ, ಬ್ರಹ್ಮನು ಮೊದಲ್ಗೊಂಡು ಹುಲ್ಲಿನವರೆಗೆ ಇರುವ ಎಲ್ಲ ವಸ್ತುಗಳನ್ನೂ ಸೃಷ್ಟಿ ಮಾಡುವವಳೂ ಆದ ಕನಕೇಶ್ವರಿಯು ನನ್ನನ್ನು ಕಾಪಾಡಲಿ.

೩೧. ಯಾವಳಿಂದ ಬ್ರಹ್ಮ ವಿಷ್ಣು ಮಹೇಶ್ವರರು ಶರೀರವನ್ನು ಪಡೆದರೋ ಪ್ರಥಮ ಶಕ್ತಿಯಾದ ಆ ಕನಕೇಶ್ವರಿಯು ನನ್ನನ್ನು ಕಾಪಾಡಲಿ.''

೩೨. ದೇವಿಯು ಗರುಡನ ಈ ಸ್ತೋತ್ರವನ್ನು ಕೇಳಿ ಪ್ರಸನ್ನಳಾಗಿ ಇಂತೆಂದಳು.

೩೩. ಶ್ರೀ ಚಾಮುಂಡೆಯು ಹೇಳುತ್ತಾಳೆ:—ಅತ್ಯಂತ ಪರಾಕ್ರಮಶಾಲಿಯೆ! ಗರುಡ! ನಾನು ನಿನ್ನಲ್ಲಿ ಪ್ರಸನ್ನಳಾಗಿರುವೆನು. ಇಷ್ಟವಾದ ವರವನ್ನು ಕೇಳಿಕೊ. ನಿನ್ನ ಇಷ್ಟಾರ್ಥವನ್ನು ನೀಡುವೆನು.

ಗರುಡ ಉವಾಚ:—

ಅಜರಶ್ಚಾಮರಶ್ಚೈವ ಅಧೃಷ್ಯಶ್ಚ ಸುರಾಸುರೈಃ ।
ತವ ಪ್ರಸಾದಾಚ್ಚೈವಾನ್ಯೈರಜೇಯಶ್ಚ ಭವಾಮ್ಯಹಂ ॥ ೩೪ ॥
ತ್ವಯಾ ಚಾತ್ರ ಸದಾ ದೇವಿ ಸ್ಥಾತವ್ಯಂ ತೀರ್ಥಸನ್ನಿಧೌ ॥ ೩೫ ॥

ಮಾರ್ಕಂಡೇಯ ಉವಾಚ:—

ಏವಂ ಭವಿಷ್ಯತೀತ್ಯುಕ್ತ್ವಾ ದೇವೀ ದೇವೈರಭಿಷ್ಟುತಾ ।
ಜಗಾಮಾಕಾಶಮಾವಿಶ್ಯ ಭೂತಸಂಘಸಮನ್ವಿತಾ ।
ಯದಾ ಲಕ್ಷ್ಮ್ಯಾ ನೃಪಶ್ರೇಷ್ಠ ಸ್ಥಾಪಿತಂ ಪುರಮುತ್ತಮಂ ॥ ೩೬ ॥
ಅನುಮಾನ್ಯ ತದಾ ದೇವೀಂ ಕೃತಂ ತಸ್ಯಾಂ ಸಮರ್ಪಿತಂ ।

ಲಕ್ಷ್ಮೀರುವಾಚ:—

ರಕ್ಷಣಾಯ ಮಯಾ ದೇವಿ ಯೋಗಕ್ಷೇಮಾರ್ಥಸಿದ್ಧಯೇ ॥ ೩೭ ॥
ಮಾತೃವತ್ಪ್ರತಿಪಾಲ್ಯಂ ತೇ ಸದಾ ದೇವಿ ಪುರಂ ಮಮ ।
ಗರುಡೋಽಪಿ ತತಃ ಸ್ನಾತ್ವಾ ಸಂಪೂಜ್ಯ ಕನಕೇಶ್ವರೀಂ ॥ ೩೮ ॥
ತೀರ್ಥಂ ತತ್ರೈವ ಸಂಸ್ಥಾಪ್ಯ ಜಗಾಮಾಕಾಶಮುತ್ತಮಂ ।
ತತ್ರ ತೀರ್ಥೇ ತು ಯಃ ಸ್ನಾತ್ವಾ ಪೂಜಯೇತ್ಪಿತೃದೇವತಾಃ ॥ ೩೯ ॥
ಸರ್ವಕಾಮಸಮೃದ್ಧಸ್ಯ ಯಜ್ಞಸ್ಯ ಫಲಮಶ್ನುತೇ ।
ಗಂಧಪುಷ್ಪಾದಿಭಿರ್ಯಸ್ತು ಪೂಜಯೇತ್ಕನಕೇಶ್ವರಂ ॥ ೪೦ ॥

---

೩೪. ಗರುಡನು ಹೇಳುತ್ತಾನೆ:—ದೇವಿ! ನಾನು ನಿನ್ನ ಅನುಗ್ರಹದಿಂದ ಜರಾಮರಣವಿಲ್ಲದವನೂ, ದೇವಾಸುರರಿಗೆ ತಿರಸ್ಕರಿಸಲಶಕ್ಯನೂ, ಇತರರಿಗೆ ಅಜೇಯನೂ ಆಗುವಂತೆ ಮಾಡು.

೩೫. ದೇವಿ! ನೀನು ಯಾವಾಗಲೂ ಈ ತೀರ್ಥದ ಹತ್ತಿರವೇ ನೆಲಸಿರು.

೩೬–೪೧. ಮಾರ್ಕಂಡೇಯನು ಹೇಳುತ್ತಾನೆ:—ದೇವಿಯು ಹಾಗೆಯೇ ಆಗಲೆಂದು ಹೇಳಿ ದೇವತೆಗಳಿಂದ ಸ್ತುತಿಸಲ್ಪಟ್ಟವಳಾಗಿ ಭೂತಗಳ ಸಮೂಹಗಳೊಡನೆ ಆಕಾಶವನ್ನು ಆಶ್ರಯಿಸಿ ಹೊರಟುಹೋದಳು. ಲಕ್ಷ್ಮಿಯು ಆ ಪಟ್ಟಣವನ್ನು ಸ್ಥಾಪಿಸಿದಾಗ ಕನಕೇಶ್ವರಿಯನ್ನು ಒಪ್ಪಿಸಿ ಅವಳಿಗೆ ಆ ಪಟ್ಟಣವನ್ನು ಸಮರ್ಪಿಸಿದ್ದಳು.

ಲಕ್ಷ್ಮಿಯು ಹೇಳುತ್ತಾಳೆ:—"ದೇವಿ! ನೀನು ಈ ಪಟ್ಟಣವನ್ನು ಭಕ್ತಜನರ ಯೋಗಕ್ಷೇಮಗಳ ಸಿದ್ಧಿಗಾಗಿ ತಾಯಿಯಂತೆ ಕಾಪಾಡಬೇಕು." ಅನಂತರ ಗರುಡನೂ ಅಲ್ಲಿ ಮಿಂದು ಕನಕೇಶ್ವರಿಯನ್ನು ಪೂಜಿಸಿ ಅಲ್ಲಿಯೇ ತೀರ್ಥವನ್ನು ಸ್ಥಾಪಿಸಿ ಆಕಾಶವನ್ನು ಕುರಿತು ಹೊರಟುಹೋದನು. ಆ ತೀರ್ಥದಲ್ಲಿ ಮಿಂದು ಪಿತೃದೇವತೆಗಳನ್ನು ಪೂಜಿಸಿದವನು ಸಕಲೇಷ್ಟಾರ್ಥಗಳಿಂದ ಸಮೃದ್ಧಿಗೊಂಡ

ತಸ್ಯ ಯೋಗೈಶ್ವರ್ಯಸಿದ್ಧಿರ್ಯೋಗಪೀಠೇಷು ಜಾಯತೇ ।
ಮೃತೋ ಯೋಗೇಶ್ವರಂ ಲೋಕಂ ಜಯಶಬ್ದಾದಿಮಂಗಲೈಃ ।
ಸ ಗಚ್ಛೇನ್ನಾತ್ರ ಸಂದೇಹೋ ಯೋಗಿನೀಗಣಸಂಯುತಃ ॥ ೪೧ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ
ಪಂಚಮೇ ಅವಂತ್ಯಖಂಡೇ ತೃತೀಯೇ ರೇವಾಖಂಡೇ
"ಕನಖಲೇಶ್ವರತೀರ್ಥಮಾಹಾತ್ಮ್ಯವರ್ಣನಂ"ನಾಮ
ಷಡಶೀತ್ಯುತ್ತರಶತತಮೋಽಧ್ಯಾಯಃ

---

ಯಜ್ಞದ ಫಲವನ್ನು ಪಡೆಯುವನು. ಕನಕೇಶ್ವರಿಯನ್ನು ಗಂಧ ಪುಷ್ಪಾದಿಗಳಿಂದ ಪೂಜಿಸಿದವನು ಯೋಗೈಶ್ವರ್ಯಸಿದ್ಧಿಯನ್ನು ಹೊಂದುವನು. ಮಡಿದು ಜಯ ಶಬ್ದಾದಿ ಮಂಗಳಗಳಿಂದ ಯೋಗಿನೀಗಣಗಳೊಡನೆ ಯೋಗೇಶ್ವರಲೋಕಕ್ಕೆ ನಿಶ್ಚಯವಾಗಿಯೂ ಹೋಗುವನು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ
ಶ್ರೀ ಸ್ಕಾಂದಮಹಾಪುರಾಣದ ಐದನೆಯ ಅವಂತ್ಯಖಂಡದ ಮೂರನೆಯ ರೇವಾಖಂಡದಲ್ಲಿ
"ಕನಖಲೇಶ್ವರತೀರ್ಥಮಾಹಾತ್ಮ್ಯವರ್ಣನ"ವೆಂಬ
ನೂರೆಂಬತ್ತಾರನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

## ಅಥ ಸಪ್ತಾಽಶೀತ್ಯುತ್ತರಶತತಮೋಽಧ್ಯಾಯಃ

### ಕಾಲಾಗ್ನಿರುದ್ರತೀರ್ಥಮಾಹಾತ್ಮ್ಯವರ್ಣನಂ

ಶ್ರೀ ಮಾರ್ಕಂಡೇಯ ಉವಾಚ :—

ಜಾಲೇಶ್ವರಂ ತತೋ ಗಚ್ಛೇಲ್ಲಿಂಗಮಾದ್ಯಂ ಸ್ವಯಂಭುವಃ ।
ಕಾಲಾಗ್ನಿರುದ್ರಂ ವಿಖ್ಯಾತಂ ಭೃಗುಕಚ್ಛೇ ವ್ಯವಸ್ಥಿತಂ ॥ ೧ ॥
ಸರ್ವಪಾಪಪ್ರಶಮನಂ ಸರ್ವೋಪದ್ರವನಾಶನಂ ।
ಕ್ಷೇತ್ರಪಾಪವಿನಾಶಾಯ ಕೃಪಯಾ ಚ ಸಮುತ್ಥಿತಂ ॥ ೨ ॥
ಪುರಾಕಲ್ಪೇಽಸುರಗಣೈರಾಕ್ರಾಂತೇ ಭುವನತ್ರಯೇ ।
ವೇದೋಕ್ತಕರ್ಮನಾಶೇ ಚ ಧರ್ಮೇ ಚ ವಿಲಯಂ ಗತೇ ॥ ೩ ॥
ದೇವರ್ಷಿಮುನಿಸಿದ್ಧೇಷು ನಿಶ್ವಾಸಪರಮೇಷು ಚ ।
ಕಾಲಾಗ್ನಿರುದ್ರಾದುತ್ಪನ್ನೋ ಧೂಮಃ ಕಾಲೋದ್ಭವೋದ್ಭವಃ ॥ ೪ ॥
ಧೂಮಾತ್ಸಮುತ್ಥಿತಂ ಲಿಂಗಂ ಭಿತ್ವಾ ಪಾತಾಲಸಪ್ತಕಂ ।
ಅವಟಂ ದಕ್ಷಿಣೇ ಕೃತ್ವಾ ಲಿಂಗಂ ತತ್ರೈವ ತಿಷ್ಠತಿ ॥ ೫ ॥

---

### ಕನ್ನಡದ ಅನುವಾದ

#### ಕಾಲಾಗ್ನಿರುದ್ರತೀರ್ಥಮಾಹಾತ್ಮ್ಯವರ್ಣನ

೧—೨. ಶ್ರೀ ಮಾರ್ಕಂಡೇಯನು ಹೇಳುತ್ತಾನೆ:—ಅನಂತರ ಮಹೇಶ್ವರನ ಮೊದಲನೆಯ ಲಿಂಗವೂ, ಭೃಗುಕಚ್ಛದಲ್ಲಿರುವುದೂ, ಕಾಲಾಗ್ನಿರುದ್ರವೆಂದು ವಿಖ್ಯಾತಿಗೊಂಡುದೂ, ಸಕಲ ಪಾಪಗಳನ್ನು ನಾಶಗೊಳಿಸುವುದೂ, ಸಮಸ್ತೋಪದ್ರವಗಳನ್ನು ನಿವಾರಿಸುವುದೂ, ಕ್ಷೇತ್ರದಲ್ಲೆಸಗಿದ ಪಾಪದ ಪರಿಹಾರಕ್ಕಾಗಿ ದಯೆಯಿಂದ ಉದ್ಭವಿಸಿರುವುದೂ ಆದ ಜಾಲೇಶ್ವರಲಿಂಗದೆಡೆಗೆ ಹೋಗಬೇಕು.

೩—೪. ಹಿಂದಿನ ಕಾಲದಲ್ಲಿ ತ್ರಿಭುವನವನ್ನು ಅಸುರರು ಆಕ್ರಮಿಸಿ ವೇದೋಕ್ತಕರ್ಮಗಳು ನಾಶವಾಗಿ, ಧರ್ಮವು ಲಯವಾಗಿ ದೇವತೆಗಳೂ, ಋಷಿಗಳೂ, ಮುನಿಗಳೂ, ಸಿದ್ಧರೂ ನಿಃಶ್ವಾಸನಿರತರಾಗಿರಲು ಕಾಲಾಗ್ನಿರುದ್ರನಿಂದ ಹೊಗೆಯುಂಟಾಯಿತು.

೫. ಆ ಧೂಮದಿಂದುಂಟಾದ ಲಿಂಗವು ಏಳು ಪಾತಾಳಗಳನ್ನೂ ಭೇದಿಸಿ ದಕ್ಷಿಣಭಾಗದಲ್ಲಿ ಕುಣಿಯನ್ನು ರಚಿಸಿ ಅಲ್ಲಿ ನೆಲೆಸಿತು.

ತತ್ರ ತೀರ್ಥೇ ನೃಪಶ್ರೇಷ್ಠ ಕುಂಡಂ ಜ್ವಾಲಾಸಮುದ್ಭವಂ ।
ಯತ್ರ ಸಾ ಪತಿತಾ ಜ್ವಾಲಾ ಶಿವಸ್ಯ ದಹತಃ ಪುರಂ ॥ ೬ ॥
ತತ್ರಾಽವಟಂ ಸಮುದ್ಭೂತಂ ಧೂಮಾವರ್ತಸ್ತತೋಽಭವತ್ ।
ತಸ್ಮಿನ್ಕುಂಡೇ ತು ಯಃ ಸ್ನಾನಂ ಕೃತ್ವಾ ವೈ ನರ್ಮದಾ ಜಲೇ ॥ ೭ ॥
ಕುರ್ಯಾಚ್ಛ್ರಾದ್ಧಂ ಪಿತೃಭ್ಯೋ ವೈ ಪೂಜಯೇಚ್ಚ ತ್ರಿಲೋಚನಂ ।
ಕಾಲಾಗ್ನಿರುದ್ರನಾಮಾನಿ ಸ ಗಚ್ಛೇತ್ಪರಮಾಂ ಗತಿಂ ॥ ೮ ॥
ಯತ್ಕಿಂಚಿತ್ಕಾಮಿಕಂ ಕರ್ಮ ಹ್ಯಾಭಿಚಾರಿಕಮೇವ ವಾ ।
ರಿಪುಸಂಕ್ಷಯಕೃದ್ವಾಽಪಿ ಸಾಂತಾನಿಕಮಥಾಽಪಿ ವಾ ।
ಅತ್ರ ತೀರ್ಥೇ ಕೃತಂ ಸರ್ವಮಚಿರಾತ್ಸಿದ್ಧ್ಯತೇ ನೃಪ ॥ ೯ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ
ಪಂಚಮೇ ಅವಂತ್ಯಖಂಡೇ ತೃತೀಯೇ ರೇವಾಖಂಡೇ
"ಕಾಲಾಗ್ನಿರುದ್ರತೀರ್ಥಮಾಹಾತ್ಮ್ಯವರ್ಣನಂ"ನಾಮ
ಸಪ್ತಾಶೀತ್ಯುತ್ತರಶತತಮೋಽಧ್ಯಾಯಃ

---

೬. ಆ ತೀರ್ಥದಲ್ಲಿ ತ್ರಿಪುರನನ್ನು ಸುಡುತ್ತಿರುವ ಶಿವನಿಂದುಂಟಾದ ಜ್ವಾಲಿಯಿಂದ ಕುಂಡವುಂಟಾಗಿರುವುದು.

೭–೮. ಅಲ್ಲಿ ಒಂದು ಕುಣಿಯೂ, ಅದರಿಂದ ಧೂಮದ ಸುಳಿಯೂ ಉದ್ಭವಿಸಿತು. ಆ ಕುಂಡದಲ್ಲಿರುವ ನರ್ಮದಾ ಜಲದಲ್ಲಿ ಮಿಂದು ಪಿತೃಗಳಿಗೆ ಶ್ರಾದ್ಧಗೈದು ಕಾಲಾಗ್ನಿರುದ್ರ ನಾಮಗಳಿಂದ ಶಂಕರನನ್ನು ಅರ್ಚಿಸಿದವನು ಉತ್ತಮಗತಿಯನ್ನು ಪಡೆಯುವನು.

೯. ಆ ತೀರ್ಥದಲ್ಲಿ ಮಾಡಿದ ಕಾಮ್ಯ, ಶತ್ರುನಾಶಕವಾದ ಆಭಿಚಾರಿಕ ಕರ್ಮ, ಸಂತಾನಸಂಬಂಧವಾದ ಕರ್ಮ ಇವುಗಳು ಬೇಗನೆ ಸಿದ್ಧಿಸುವುವು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ
ಶ್ರೀ ಸ್ಕಾಂದಮಹಾಪುರಾಣದ ಐದನೆಯ ಅವಂತ್ಯಖಂಡದ ಮೂರನೆಯ ರೇವಾಖಂಡದಲ್ಲಿ
"ಕಾಲಾಗ್ನಿರುದ್ರತೀರ್ಥಮಾಹಾತ್ಮ್ಯವರ್ಣನ"ವೆಂಬ
ನೂರೆಂಬತ್ತೇಳನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

# ಅಥಾಷ್ಟಾಂಶೀತ್ಯುತ್ತರಶತತಮೋಽಧ್ಯಾಯಃ

## ಶಾಲಗ್ರಾಮತೀರ್ಥಮಾಹಾತ್ಮ್ಯವರ್ಣನಂ

ಶ್ರೀ ಮಾರ್ಕಂಡೇಯ ಉವಾಚ :—

ತತಃ ಪರಂ ಮಹಾರಾಜ ಚತ್ವಾರಿಂಶತ್ಕ್ರಮಾಂತರೇ ।
ಶಾಲಗ್ರಾಮಂ ತತೋ ಗಚ್ಛೇತ್ಸರ್ವದೈವತಪೂಜಿತಂ ॥ ೧ ॥
ಯತ್ರಾದಿದೇವೋ ಭಗವಾನ್ವಾಸುದೇವಸ್ತ್ರಿವಿಕ್ರಮಃ ।
ಸ್ವಯಂ ತಿಷ್ಠತಿ ಲೋಕಾತ್ಮಾ ಸರ್ವೇಷಾಂ ಹಿತಕಾಮ್ಯಯಾ ॥ ೨ ॥
ನಾರದೇನ ತಪಸ್ತಪ್ತ್ವಾ ಕೃತಾ ಶಾಲಾ ದ್ವಿಜನ್ಮನಾಂ ।
ಸಿದ್ಧಿಕ್ಷೇತ್ರಂ ಭೃಗುಕ್ಷೇತ್ರಂ ಜ್ಞಾತ್ವಾ ರೇವಾತಟೇ ಸ್ವಯಂ ॥ ೩ ॥
ಶಾಲಗ್ರಾಮಾಭಿಧೋ ದೇವೋ ವಿಪ್ರಾಣಾಂ ತ್ವಧಿವಾಸಿತಃ ।
ಸಾಧೂನಾಂ ಚೋಪಕಾರಾಯ ವಾಸುದೇವಃ ಪ್ರತಿಷ್ಠಿತಃ ॥ ೪ ॥
ಯೋಗಿನಾಮುಪಕಾರಾಯ ಯೋಗಿಧ್ಯೇಯೋ ಜನಾರ್ದನಃ ।
ಶಾಲಗ್ರಾಮೇತಿ ತೇನೈವ ನರ್ಮದಾತಟಮಾಶ್ರಿತಃ ॥ ೫ ॥

---

## ಕನ್ನಡದ ಅನುವಾದ

### ಶಾಲಗ್ರಾಮತೀರ್ಥಮಾಹಾತ್ಮ್ಯವರ್ಣನ

೧. ಶ್ರೀ ಮಾರ್ಕಂಡೇಯನು ಹೇಳುತ್ತಾನೆ:—ಮಹಾರಾಜ! ಅನಂತರ ನಲವತ್ತು ಹೆಜ್ಜೆಗಳ ದೂರದಲ್ಲಿಯೆ ಸಮಸ್ತದೇವಪೂಜಿತವಾದ ಶಾಲಗ್ರಾಮ ಕ್ಷೇತ್ರವಿರುವುದು.

೨. ಅಲ್ಲಿ ಆದಿದೇವನಾದ ವಿಷ್ಣುವು ಸಕಲರಿಗೂ ಹಿತವನ್ನುಂಟುಮಾಡಲು ತಾನೇ ನೆಲಸಿರುವನು.

೩. ನಾರದಮುನಿಯು ನರ್ಮದಾತಟದಲ್ಲಿರುವ ಆ ಭೃಗುಕ್ಷೇತ್ರವು ಸಿದ್ಧಿ ಕ್ಷೇತ್ರವೆಂದರಿತು, ಅಲ್ಲಿಯೆ ತಪಸ್ಸನ್ನು ಮಾಡಿ ದ್ವಿಜಶಾಲೆಯೊಂದನ್ನು ನಿರ್ಮಿಸಿರುವನು.

೪. ಅಲ್ಲಿ ಆ ಮುನಿಯು ಸಜ್ಜನರ ಉಪಕಾರಕ್ಕಾಗಿ ಶಾಲಗ್ರಾಮನೆಂಬ ವಿಷ್ಣುವನ್ನು ಪ್ರತಿಷ್ಠೆಮಾಡಿದನು.

೫. ಯೋಗಿಧ್ಯೇಯನಾದ ಜನಾರ್ದನನು ಯೋಗಿಗಳ ಉಪಕಾರಕ್ಕಾಗಿ ಆ ಶಾಲಗ್ರಾಮನೆಂಬ ಹೆಸರಿನಿಂದಲೇ ನರ್ಮದಾತಟವನ್ನಾಶ್ರಯಿಸಿದನು.

ಮಾಸಿ ಮಾರ್ಗಶಿರೇ ಶುಕ್ಲಾ ಭವತ್ಯೇಕಾದಶೀ ಯದಾ ।
ಸ್ನಾತ್ವಾ ರೇವಾಜಲೇ ಪುಣ್ಯೇ ತದ್ದಿನಂ ಸಮುಪೋಷಯೇತ್ ॥ ೬ ॥
ರಾತ್ರೌ ಜಾಗರಣಂ ಕುರ್ಯಾತ್ಸಂಪೂಜ್ಯ ಚ ಜನಾರ್ದನಂ ।
ಪುನಃ ಪ್ರಭಾತಸಮಯೇ ದ್ವಾದಶ್ಯಾಂ ನರ್ಮದಾಜಲೇ ॥ ೭ ॥
ಸ್ನಾತ್ವಾ ಸಂತರ್ಪ್ಯ ದೇವಾಂಶ್ಚ ಪಿತೄನ್ಮಾತೄಸ್ತಥೈವ ಚ ।
ಶ್ರಾದ್ಧಂ ಕೃತ್ವಾ ತತಃ ಪಶ್ಚಾತ್ಪಿತೃಭ್ಯೋ ವಿಧಿಪೂರ್ವಕಂ ॥ ೮ ॥
ಶಕ್ತಿತೋ ಬ್ರಾಹ್ಮಣಾನ್ಪೂಜ್ಯ ಸ್ವರ್ಣವಸ್ತ್ರಾನ್ನದಾನತಃ ।
ಕ್ಷಮಾಪಯಿತ್ವಾ ತಾನ್ವಿಪ್ರಾಂಸ್ತಥಾ ದೇವಂ ಖಗಧ್ವಜಂ ॥ ೯ ॥
ಏವಂ ಕೃತೇ ಮಹಾರಾಜ ಯತ್ಪುಣ್ಯಂ ಚ ಭವೇನ್ನೃಣಾಂ ।
ಶೃಣುಷ್ವಾವಹಿತೋ ಭೂತ್ವಾ ತತ್ಪುಣ್ಯಂ ನೃಪಸತ್ತಮ ॥ ೧೦ ॥

ನ ಶೋಕದುಃಖೇ ಪ್ರತಿಪತ್ಸ್ಯತೀಹ
ಜೀವನ್ಮೃತೋ ಯಾತಿ ಮುರಾರಿಸಾಮ್ಯಂ ।
ಮಹಾಂತಿ ಪಾಪಾನಿ ವಿಸೃಜ್ಯ ದುಗ್ಧಂ
ಪುನರ್ನ ಮಾತುಃ ಪಿಬತೇ ಸ್ತನೋದ್ಭವತ್ ॥ ೧೧ ॥
ಶಾಲಗ್ರಾಮಂ ಪಶ್ಯತೇ ಯೋಹಿ ನಿತ್ಯಂ
ಸ್ನಾತ್ವಾ ಜಲೇ ನರ್ಮದೇಃಘೌಘಹಾರೇ ।
ಸ ಮುಚ್ಯತೇ ಬ್ರಹ್ಮಹತ್ಯಾದಿಪಾಪೈ
ರ್ನಾರಾಯಣಾನುಸ್ಮರಣೇನ ತೇನ ॥ ೧೨ ॥

---

೬–೧೦. ಮಾರ್ಗಶೀರ್ಷಮಾಸದ ಶುಕ್ಲಪಕ್ಷದ ಏಕಾದಶೀದಿನ ಪುಣ್ಯಕರವಾದ ನರ್ಮದಾನದಿಯ ನೀರಿನಲ್ಲಿ ಮಿಂದು ಉಪವಾಸವಿದ್ದು ರಾತ್ರಿ ಜಾಗರಣೆ ಮಾಡಿ ನಾರಾಯಣನನ್ನು ಪೂಜಿಸಿ ಮರಳಿ ದ್ವಾದಶೀದಿನ ಬೆಳಗ್ಗೆ ನರ್ಮದಾಜಲದಲ್ಲಿ ಮಿಂದು ಪಿತೃದೇವತೆಗಳನ್ನೂ ಮಾತೃಗಳನ್ನೂ ತೃಪ್ತಿಗೊಳಿಸಿ ವಿಧಿಯಂತೆ ಶ್ರಾದ್ಧಗೈದು ಸ್ವರ್ಣ ವಸ್ತ್ರಾನ್ನ ದಾನಗಳಿಂದ ಶಕ್ತ್ಯನುಸಾರ ಬ್ರಾಹ್ಮಣರನ್ನು ಪೂಜಿಸಿ ಆ ಬ್ರಾಹ್ಮಣರನ್ನೂ, ವಿಷ್ಣುವನ್ನೂ ಕ್ಷಮೆ ಬೇಡಿದರೆ ಮಾನವರಿಗುಂಟಾಗುವ ಪುಣ್ಯವನ್ನು ಸಾವಧಾನ ಮನಸ್ಸಿನಿಂದ ಕೇಳು.

೧೧. ನರನು ಜೀವಿಸಿರುವವರೆಗೂ ಶೋಕದುಃಖಗಳನ್ನು ಹೊಂದುವುದಿಲ್ಲ. ಮೃತನಾಗಿ ಮಹಾಪಾಪಗಳನ್ನು ಇಲ್ಲಿಯೆ ತ್ಯಜಿಸಿ ವಿಷ್ಣುಸಾಮ್ಯವನ್ನು ಹೊಂದಿ ಮರಳಿ ಮಾತೃಸ್ತನ್ಯವನ್ನು ಕುಡಿಯುವುದಿಲ್ಲ.

೧೨. ಪಾಪವನ್ನು ಪರಿಹರಿಸುವ ನರ್ಮದಾಜಲದಲ್ಲಿ ಮಿಂದು ಶಾಲಗ್ರಾಮವನ್ನು ನೋಡಿ ನಾರಾಯಣನನ್ನು ಸ್ಮರಿಸುವವನು ಬ್ರಹ್ಮಹತ್ಯಾದಿ ಪಾಪಗಳಿಂದ ಮುಕ್ತನಾಗುವನು

ವಸಂತಿ ಯೇ ಸನ್ನ್ಯಸಿತ್ವಾ ಚ ತತ್ರ
ನಿಗೃಹ್ಯ ದುಃಖಾನಿ ವಿಮುಕ್ತ ಸಂಘಾಃ ।
ಧ್ಯಾಯಂತೋ ವೈ ಸಾಂಖ್ಯವೃತ್ತ್ಯಾ ತುರೀಯಂ
ಪದಂ ಮುರಾರೇಸ್ತೇಽಪಿ ತತ್ರೈವ ಯಾಂತಿ ॥ ೧೩ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ
ಪಂಚಮೇ ಆವಂತ್ಯಖಂಡೇ ತೃತೀಯೇ ರೇವಾಖಂಡೇ
" ಶಾಲಗ್ರಾಮತೀರ್ಥಮಾಹಾತ್ಮ್ಯವರ್ಣನಂ "
ನಾಮಾಷ್ಟಾಶೀತ್ಯುತ್ತರಶತತಮೋಽಧ್ಯಾಯಃ

---

೧೩. ಯಾವ ಮಾನವರು ಆ ಶಾಲಗ್ರಾಮತೀರ್ಥವಲ್ಲಿ ಸನ್ಯಾಸವನ್ನು ಕೈಕೊಂಡು ದುಃಖವನ್ನು ನಿಗ್ರಹಿಸಿ, ಸರ್ವಸಂಗ ಪರಿತ್ಯಾಗಪೂರ್ವಕವಾಗಿ ಸಾಂಖ್ಯಯೋಗದಿಂದ ಆ ಜನಾರ್ದನನ್ನು ಧ್ಯಾನಿಸುವರೋ ಅವರು ಅಲ್ಲಿಯೇ ಮುರಾರಿಯ ಅನುಗ್ರಹ ರೂಪವಾದ ಮೋಕ್ಷಪದವಿಯನ್ನು ಪಡೆಯುತ್ತಾರೆ.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ
ಶ್ರೀ ಸ್ಕಾಂದಮಹಾಪುರಾಣದ ಐದನೆಯ ಆವಂತ್ಯಖಂಡದ ಮೂರನೆಯ ರೇವಾಖಂಡದಲ್ಲಿ
" ಶಾಲಗ್ರಾಮತೀರ್ಥಮಾಹಾತ್ಮ್ಯವರ್ಣನ "ವೆಂಬ
ನೂರೆಂಬತ್ತೆಂಟನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

# ಅಥೈಕೋನ ಸಪತ್ಯುತ್ತರಶತತಮೋಽಧ್ಯಾಯಃ

## ಉದೀರ್ಣವರಾಹತೀರ್ಥಮಾಹಾತ್ಮ್ಯವರ್ಣನಂ

ಶ್ರೀ ಮಾರ್ಕಂಡೇಯ ಉವಾಚ:—

ತತೋ ಗಚ್ಛೇತ್ತು ರಾಜೇಂದ್ರ ತೀರ್ಥಂ ಪರಮಶೋಭನಂ ।
ಉದೀರ್ಣೋ ಯತ್ರ ವಾರಾಹೋ ಹ್ಯಭವದ್ಧರಣೀಧರಃ ॥ ೧ ॥
ಧುನ್ವನ್ ದಂಷ್ಟ್ರಾಂ ಕರಾಲಾಗ್ರಾಂ ಬಿಭ್ರಚ್ಚ ಪೃಥಿವೀಮಿಮಾಂ ।
ಸ ಏವ ಪಂಚಮಃ ಪ್ರೋಕ್ತೋ ವಾರಾಹೋ ಮುಕ್ತಿದಾಯಕಃ ॥ ೨ ॥

ಯುಧಿಷ್ಠಿರ ಉವಾಚ:—

ಕಥಮುದೀರ್ಣರೂಪೋಽಭೂದ್ವಾರಾಹೋ ಧರಣೀಧರಃ ।
ವಾರಾಹತ್ವಂ ಗತಃ ಕೇನ ಪಂಚಮಃ ಕೇನ ಸಂಜ್ಞಿತಃ ॥ ೩ ॥

ಮಾರ್ಕಂಡೇಯ ಉವಾಚ:—

ಆದಿಕಲ್ಪೇ ಪುರಾ ರಾಜನ್ ಕ್ಷೀರೋದೇ ಭಗವಾನ್ ಹರಿಃ ।
ಶೇತೇ ಸ ಭೋಗಿಶಯನೇ ಯೋಗನಿದ್ರಾವಿಮೋಹಿತಃ ॥ ೪ ॥
ಲಕ್ಷ್ಮೀಕರಾಂಬುಜಯುಗವ್ಯುದ್ಯಮಾನಪದದ್ವಯಃ ।
ತಸ್ಮಿನ್ ಸ್ವಪತಿ ದೇವೇಶೇ ಭಾರಾಕ್ರಾಂತಾ ವಸುಂಧರಾ ॥ ೫ ॥

---

## ಕನ್ನಡದ ಅನುವಾದ

### ಉದೀರ್ಣವರಾಹತೀರ್ಥಮಾಹಾತ್ಮ್ಯವರ್ಣನ

೧. ಶ್ರೀ ಮಾರ್ಕಂಡೇಯನು ಹೇಳುತ್ತಾನೆ:—ಮಹಾರಾಜ! ಬಳಿಕ ಉತ್ತಮವಾದ ವಾರಾಹತೀರ್ಥಕ್ಕೆ ಹೋಗಬೇಕು. ಅಲ್ಲಿ ಉತ್ಕೃಷ್ಟನಾದ ವಾರಾಹನು ಭೂಮಿಯನ್ನು ಧರಿಸಿರುವನು.

೨. ಕಠಿನವಾದ ತುದಿಯುಳ್ಳ ಹಲ್ಲನ್ನು ಅಲ್ಲಾಡಿಸುತ್ತ ಈ ಭೂಮಿಯನ್ನು ಧರಿಸಿದ ಆ ಐದನೆಯ ವರಾಹನೇ ಮುಕ್ತಿಯನ್ನೀಯುವನು.

೩. ಯುಧಿಷ್ಠಿರನು ಹೇಳುತ್ತಾನೆ:—ಧರಣೀಧರನಾದ ವರಾಹನು ಹೇಗೆ ಉದೀರ್ಣರೂಪನಾದನು. ಯಾವ ಕಾರಣದಿಂದ ವಿಷ್ಣುವು ವರಾಹತ್ವವನ್ನು ಹೊಂದಿದನು. ಅವನಿಗೆ ಪಂಚಮನೆಂದು ಹೆಸರುಬರಲು ಕಾರಣವೇನು?

೪-೬. ಮಾರ್ಕಂಡೇಯನು ಹೇಳುತ್ತಾನೆ:—ದೊರೆಯೆ! ಹಿಂದೆ ಆದಿ ಕಲ್ಪದಲ್ಲಿ ಪೂಜ್ಯನಾದ ವಿಷ್ಣುವು ಯೋಗನಿದ್ರಾಮೋಹಿತನಾಗಿ ಶೇಷಶಯನದಲ್ಲಿ ಲಕ್ಷ್ಮಿಯಿಂದ ಒತ್ತಲ್ಪಡುವ ಪಾದಯುಗಳವುಳ್ಳವನಾಗಿ ಕ್ಷೀರಸಮುದ್ರದಲ್ಲಿ

ಬಭೂವ ನೃಪತಿಶ್ರೇಷ್ಠ ಗತ್ವಾ ವೈ ದೇವಸನ್ನಿಧೌ ।
ಅವೋಚದ್ಭಾರಖಿನ್ನಾಹಂ ಗಮಿಷ್ಯಾಮಿ ರಸಾತಲಂ ॥ ೬ ॥
ದೃಷ್ಟ್ವಾ ದೇವಾಃ ಸಮುದ್ವಿಗ್ನಾ ಗತಾ ಯತ್ರ ಜನಾರ್ದನಃ ।
ತುಷ್ಟುವುರ್ವಾಗ್ಭಿರಿಷ್ಟಾಭಿಃ ಕೇಶವಂ ಜಗತಃ ಪತಿಂ ॥ ೭ ॥

ದೇವಾ ಊಚುಃ:—

ನಮೋ ನಮಸ್ತೇ ದೇವೇಶ ಸುರಾರ್ತಿಹರ ಸರ್ವಗ ।
ವಿಶ್ವಮೂರ್ತೇ ನಮಸ್ತುಭ್ಯಂ ತ್ರಾಹಿ ಸರ್ವಾನ್ ಮಹದ್ಭಯಾತ್ ॥ ೮ ॥
ಇತ್ಯುಕ್ತೋ ದೈವತೈರ್ದೇವೋ ಹ್ಯುವಾಚ ಕಿಮುಪಸ್ಥಿತಂ ।
ಕಾರ್ಯಂ ವದಧ್ವಂ ಮೇ ದೇವಾ ಯತ್ಕೃತ್ಯಂ ಮಾ ಚಿರಂ ಕೃಥಾಃ ॥ ೯ ॥

ದೇವಾ ಊಚುಃ:—

ಧರಾ ಧರಿತ್ರೀ ಭೂತಾನಾಂ ಭಾರೋದ್ವಿಗ್ನಾ ನಿಮಜ್ಜತಿ ।
ತಾಮುದ್ಧರ ಹೃಷೀಕೇಶ ಲೋಕಾನ್ ಸಂಸ್ಥಾಪಯ ಸ್ಥಿತೌ ॥ ೧೦ ॥
ಏವಮುಕ್ತಃ ಸುರೈಃ ಸರ್ವೈಃ ಕೇಶವಃ ಪರಮೇಶ್ವರಃ ।
ವಾರಾಹಂ ರೂಪಮಾಸ್ಥಾಯ ಸರ್ವಯಜ್ಞಮಯಂ ವಿಭುಃ ॥ ೧೧ ॥
ದಂಷ್ಟ್ರಾಕರಾಲಂ ಪಿಂಗಾಕ್ಷಂ ಸಮಾಕುಂಚಿತಮೂರ್ಧಜಂ ।
ಕೃತ್ವಾಽನಂತಂ ಪಾದಪೀಠಂ ದಂಷ್ಟ್ರಾಗ್ರೇಣೋದ್ಧರನ್ಭುವಂ ॥ ೧೨ ॥

---

ಮಲಗಿದ್ದನು. ಅವನು ನಿದ್ರಿಸುತ್ತಿರಲು ಭಾರದಿಂದ ವ್ಯಾಪ್ತವಾದ ಭೂಮಿಯು ದೇವತೆಗಳ ಹತ್ತಿರಹೋಗಿ, "ನಾನು ಭಾರದಿಂದ ವ್ಯಥೆಗೊಂಡಿದ್ದೇನೆ. ಪಾತಾಳಕ್ಕೆ ಹೊರಟುಹೋಗುವೆನು" ಎಂದಳು.

೭. ಅವಳನ್ನು ನೋಡಿ ವ್ಯಥೆಗೊಂಡ ದೇವತೆಗಳು ಜನಾರ್ದನನೆಡೆಗೆ ಹೋಗಿ ಇಷ್ಟವಾದ ಮಾತುಗಳಿಂದ ಅವನನ್ನು ಸ್ತುತಿಸಿದರು.

೮. "ದೇವತೆಗಳಿಗೆ ಒಡೆಯನೂ, ದೇವತೆಗಳ ದುಃಖವನ್ನು ನಾಶಗೊಳಿಸುವವನೂ, ಸರ್ವವ್ಯಾಪಿಯೂ, ವಿಶ್ವಮೂರ್ತಿಯೂ ಆದ ವಿಷ್ಣುವೆ! ನಿನಗೆ ನಮಸ್ಕಾರ. ನಮ್ಮೆಲ್ಲರನ್ನೂ ಈ ಮಹಾಭಯದಿಂದ ಪಾರುಮಾಡು."

೯. ದೇವತೆಗಳು ಹೀಗೆ ಹೇಳಲು ವಿಷ್ಣುವು, "ದೇವತೆಗಳೆ! ನಿಮ್ಮ ಕಾರ್ಯವಾವುದು? ಹೇಳಿರಿ, ವಿಳಂಬಮಾಡಬೇಡಿರಿ" ಎಂದನು.

೧೦. ದೇವತೆಗಳು ಹೇಳುತ್ತಾರೆ:—ಪ್ರಾಣಿಗಳನ್ನು ಧರಿಸಿರುವ ಈ ಭೂಮಿಯು ಭಾರದಿಂದ ಖಿನ್ನಳಾಗಿ ಮುಳುಗುತ್ತಿರುವಳು. ಅವಳನ್ನುದ್ಧರಿಸು. ಲೋಕಗಳನ್ನು ಕಾಪಾಡು.

೧೧–೧೬. ಸಮಸ್ತದೇವತೆಗಳೂ ಹೀಗೆ ಹೇಳಲು, ವಿಷ್ಣುವು ಕೋರೆದಾಡೆಯಿಂದ ಕಠಿನವೂ, ಹಳದಿಯ ಕಣ್ಣುಳ್ಳದೂ, ಸಂಕೋಚಗೊಂಡ ತಲೆಗೂದಲುಳ್ಳದೂ, ಸಕಲ ಯಜ್ಞರೂಪವುಳ್ಳದೂ ಆದ ವರಾಹರೂಪವನ್ನು ತಾಳಿ

ಸಪರ್ವತವನಾಮುರ್ವೀಂ ಸಮುದ್ರಪರಿಮೇಖಲಾಂ ।
ಉದ್ಧೃತ್ಯ ಭಗವಾನ್ ವಿಷ್ಣುರುದೀರ್ಣಃ ಸಮಜಾಯತ ॥ ೧೩ ॥
ದರ್ಶಯನ್ಪಂಚಧಾತ್ಮಾನಮುತ್ತರೇ ನರ್ಮದಾತಟೇ ।
ತಥಾಽಽದ್ಯಂ ಕೋರಲಾಯಾಂ ತು ದ್ವಿತೀಯಂ ಯೋಧನೀಪುರೇ ॥ ೧೪ ॥
ಜಯಕ್ಷೇತ್ರಾಽಭಿಧಾನೇ ತು ಜಯೇತಿ ಪರಿಕೀರ್ತಿತಂ ।
ಅಸುರಾನ್ ಮೋಹಯಲ್ಲಿಂಗಸ್ತೃತೀಯಃ ಪರಿಕೀರ್ತಿತಃ ॥ ೧೫ ॥
ಪಾವನಾಯ ಜಗದ್ಧೇತೋಃ ಸ್ಥಿತೋ ಯಸ್ಮಾಚ್ಛಶಿಪ್ರಭಃ ।
ಅತಸ್ತು ನೃಪಶಾರ್ದೂಲ ಶ್ವೇತ ಇತ್ಯಭಿಧೀಯತೇ ॥ ೧೬ ॥
ಉದ್ಧೃತ್ಯ ಜಗತಾಂ ದೇವೀಮುದೀರ್ಣೋ ಭೃಗುಕಚ್ಛಕೇ ।
ತತಃ ಪಂಚಮ ಉದೀರ್ಣೋ ವರಾಹ ಇತಿ ಸಂಜ್ಞಿತಃ ॥ ೧೭ ॥
ಇತಿ ಪಂಚವರಾಹಾಸ್ತೇ ಕಥಿತಃ ಪಾಂಡುನಂದನ ।
ಯುಗಪದ್ದರ್ಶನಂ ಚೈಷಾಂ ಬ್ರಹ್ಮಹತ್ಯಾಂ ವ್ಯಪೋಹತಿ ॥ ೧೮ ॥
ಜ್ಯೇಷ್ಠೇ ಮಾಸಿ ಸಿತೇ ಪಕ್ಷ ಏಕಾದಶ್ಯಾಂ ವಿಶೇಷತಃ ।
ಗತ್ವಾ ಹ್ಯಾದಿವರಾಹಂ ತು ಸಂಪ್ರಾಪ್ತೇ ದಶಮೀದಿನೇ ॥ ೧೯ ॥
ಹವಿಷ್ಯಮನ್ನಂ ಭುಂಜೀಯಾಲ್ಲಘು ಸಾಯಂಗತೇ ರವೌ ।
ರಾತ್ರೌ ಜಾಗರಣಂ ಕುರ್ಯಾದ್ವಾರಾಹೇ ಹ್ಯಾದಿಸಂಜ್ಞಕೇ ॥ ೨೦ ॥

---

ಶೇಷನನ್ನು ಪಾದಪೀಠವನ್ನಾಗಿ ಮಾಡಿಕೊಂಡು ಕೋರೆದಾಡೆಯ ಕೊನೆಯಿಂದ ಪರ್ವತವನಗಳಿಂದ ಕೂಡಿರುವುದೂ, ಸಮುದ್ರಮೇಖಲೆಯೂ ಆದ ಭೂಮಿಯನ್ನು ಎತ್ತಿ ನರ್ಮದೆಯ ಉತ್ತರ ದಡದಲ್ಲಿ ತನ್ನನ್ನು ಐದು ಪ್ರಕಾರವಾಗಿ ತೋರಿಸುತ್ತ ಉದೀರ್ಣನಾದನು. ಆ ಐದು ರೂಪಗಳಲ್ಲಿ ಮೊದಲನೆಯದು ಕೋರಲಾಕ್ಷೇತ್ರದಲ್ಲಿಯೂ, ಎರಡನೆಯದು ಯೋಧನೀಪುರದಲ್ಲಿಯೂ ಅಸುರರನ್ನು ಮೋಹಗೊಳಿಸುವ ಜಯವೆಂಬ ಮೂರನೆ ರೂಪವು ಜಯಕ್ಷೇತ್ರದಲ್ಲಿಯೂ, ಚಂದ್ರನಂತೆ ಕಾಂತಿಯುಳ್ಳ ನಾಲ್ಕನೆ ಶ್ವೇತರೂಪವು ಜಗತ್ತಿನ ಪವಿತ್ರತೆಗಾಗಿಯೂ ವಿರಾಜಿಸಿತು.

೧೭. ಜಗತ್ತುಗಳನ್ನು ಉದ್ಧರಿಸಿದ ಉದೀರ್ಣನೆಂಬ ಪಂಚಮ ವರಾಹನು ಭೃಗುಕಚ್ಛಕದಲ್ಲಿ ನೆಲೆಸಿದನು.

೧೮. ಯುಧಿಷ್ಠಿರ! ಹೀಗೆ ನಿನಗೆ ಐದುಮಂದಿ ವರಾಹರನ್ನು ಹೇಳಿದ್ದೇನೆ. ಇವರನ್ನು ಒಂದೇಸಾರಿ ನೋಡುವುದರಿಂದ ಬ್ರಹ್ಮಹತ್ಯೆಯು ನೀಗುವುದು.

೧೯–೨೦. ಜ್ಯೇಷ್ಠ ಶುಕ್ಲ ದಶಮೀ ಏಕಾದಶೀ ದಿನಗಳಲ್ಲಿ ಆದಿವರಾಹ ನೆಡೆಗೆ ಹೋಗಿ ಸಾಯಂಕಾಲ ಸ್ವಲ್ಪ ಹವಿಷ್ಯಾನ್ನವನ್ನು ಭುಂಜಿಸಿ ರಾತ್ರಿ ಜಾಗರಣೆ ಮಾಡಬೇಕು.

ತತಃ ಪ್ರಭಾತೇ ಹ್ಯುಷಸಿ ಸಂಸ್ನಾತ್ವಾ ನರ್ಮದಾ ಜಲೇ ।
ಸಂತರ್ಪ್ಯ ಪಿತೃದೇವಾಂಶ್ಚ ತಿಲೈರ್ಯವವಿಮಿಶ್ರಿತೈಃ ॥ ೨೧ ॥
ಧೇನುಂ ದದ್ಯಾದ್ದ್ವಿಜೇ ಯೋಗ್ಯೇ ಸರ್ವಾಭರಣಭೂಷಿತಾಂ ।
ನಿರ್ಮಮೋ ನಿರಹಂಕಾರೋ ದಾನಂ ದದ್ಯಾದ್ದ್ವಿಜಾತಯೇ ॥ ೨೨ ॥
ಗತ್ವಾ ಸಂಪೂಜಯೇದ್ದೇವಂ ವಾರಾಹಂ ಹ್ಯಾದಿಸಂಜ್ಞಿತಂ ।
ಅನೇನ ವಿಧಿನಾ ಪೂಜ್ಯ ಪಶ್ಚಾದ್ಗಚ್ಛೇಜ್ಜಯಂ ತ್ವರನ್ ॥ ೨೩ ॥
ತ್ವರಿತಂ ತು ಜಯಂ ಗತ್ವಾ ಪೂರ್ವಕಂ ವಿಧಿಮಾಚರೇತ್ ।
ಅಶ್ವಂ ದದ್ಯಾದ್ದ್ವಿಜಾಗ್ರ್ಯಾಯ ಜಯಪೂರ್ವಾಭಿನಿರ್ಗತಂ ॥ ೨೪ ॥
ಲಿಂಗೇ ಚೈವ ತಿಲಾ ದೇಯಾಃ ಶ್ವೇತೇ ಹಿರಣ್ಯಮೇವ ಚ ।
ಉದೀರ್ಣೇ ಚ ಭುವಂ ದದ್ಯಾತ್ಪೂರ್ವಕಂ ವಿಧಿಮಾಚರೇತ್ ॥ ೨೫ ॥
ಅನಸ್ತಮಿತ ಆದಿತ್ಯೇ ವರಾಹಾನ್ಪಂಚ ಪಶ್ಯತಃ ।
ಯತ್ಫಲಂ ಲಭತೇ ಪಾರ್ಥ ತದಿಹೈಕಮನಾಃ ಶೃಣು ॥ ೨೬ ॥
ಬ್ರಹ್ಮಹತ್ಯಾ ಸುರಾಪಾನಂ ಸ್ತೇಯಂ ಗುರ್ವಂಗನಾಗಮಃ ।
ಏಭಿಸ್ತು ಸಹ ಸಂಯೋಗೀ ವಿಶ್ವಸ್ತಾನಾಂ ಚ ವಂಚನಂ ॥ ೨೭ ॥
ಸ್ವಸೃದುಹಿತೃಭಗಿನೀ ಕುಲದಾರೋಪಬೃಂಹಣಂ ।
ಆಜನ್ಮ ಮರಣಾದ್ಯಾವತ್ಪಾಪಂ ಭರತಸತ್ತಮ ॥ ೨೮ ॥

---

೨೧–೨೫. ಅನಂತರ ಬೆಳಗ್ಗೆ ನರ್ಮದಾಜಲದಲ್ಲಿ ಮಿಂದು ಯವಮಿಶ್ರವಾದ ತಿಲಗಳಿಂದ ಪಿತೃದೇವತೆಗಳನ್ನು ತೃಪ್ತಿಗೊಳಿಸಿ ಯೋಗ್ಯನಾದ ಬ್ರಾಹ್ಮಣನಿಗೆ ಸರ್ವಾಭರಣಗಳಿಂದ ಅಲಂಕಾರಗೊಂಡ ಧೇನುವನ್ನು ದಾನಮಾಡಿ ಮಮಕಾರ ಅಹಂಕಾರಗಳಿಲ್ಲದೆ ಬ್ರಾಹ್ಮಣನಿಗೆ ಇತರ ದಾನಗಳನ್ನು ಕೊಡಬೇಕು. ಅನಂತರ ಜಯವರಾಹನೆಡೆಗೆ ಹೋಗಿ ಈ ವಿಧಿಯಿಂದಲೇ ಪೂಜಿಸಿ ಜಯಶಬ್ದ ಪೂರ್ವಕವಾಗಿ ದ್ವಿಜೋತ್ತಮನಿಗೆ ಅಶ್ವವನ್ನು ದಾನಮಾಡಬೇಕು. ಇದೇ ಇತರ ವರಾಹರನ್ನೂ ಪೂಜಿಸಿ, ಮೂರನೆಯ ವರಾಹಲಿಂಗಕ್ಕೆ ತಿಲವನ್ನೂ, ಶ್ವೇತವರಾಹನಿಗೆ ಹಿರಣ್ಯವನ್ನೂ, ಉದೀರ್ಣವರಾಹನಿಗೆ ಭೂಮಿಯನ್ನೂ ದಾನ ಮಾಡಬೇಕು.

೨೬. ಸೂರ್ಯನು ಮುಳುಗದಿರುವುದಕ್ಕಿಂತ ಮುಂಚೆ ಪಂಚವರಾಹರನ್ನೂ ನೋಡುವವನಿಗೆ ಉಂಟಾಗುವ ಫಲವನ್ನು ಕೇಳು.

೨೭–೨೯. ಪಂಚತೀರ್ಥಗಳಿಂದ ಪೂತನಾದ ವೈಷ್ಣವನ ಬ್ರಹ್ಮಹತ್ಯಾ, ಸುರಾಪಾನ, ಕಳ್ಳತನ, ಗುರುಪತ್ನೀಗಮನ, ಇಂತಹ ಪಾಪವುಳ್ಳವರ ಸಹವಾಸ, ವಿಶ್ವಾಸಘಾತಕತನ, ಸಹೋದರಿ, ಮಗಳು, ಕುಲೀನಸ್ತ್ರೀ ಇವರ ಸಂಗ,

ತೀರ್ಥಪಂಚಕಪೂತಸ್ಯ ವೈಷ್ಣವಸ್ಯ ವಿಶೇಷತಃ ।
ಯುಗಪಚ್ಚ ವಿನಶ್ಯೇತ ತೂಲರಾಶಿರಿವಾಽನಲಾತ್ ॥ ೨೯ ॥
ನಾರಾಯಣಾನುಸ್ಮರಣಾಜ್ಜಪಧ್ಯಾನಾದ್ವಿಶೇಷತಃ ।
ವಿಪ್ರಣಶ್ಯಂತಿ ಪಾಪಾನಿ ಗಿರಿಕೂಟಸಮಾನ್ಯಪಿ ॥ ೩೦ ॥
ದೃಷ್ಟ್ವಾ ಪಂಚ ವರಾಹಾನ್ವೈ ಪೌರುಷೇ ಮಹತಿ ಸ್ಥಿತಃ ।
ಆಪ್ಲವನ್ನರ್ಮದಾತೋಯೇ ಶ್ರಾದ್ಧಂ ಕೃತ್ವಾ ಯಥಾವಿಧಿ ॥ ೩೧ ॥
ಉದಯಾಸ್ತಮನಾದರ್ವಾಗ್ಯಃ ಪಶ್ಯೇಲ್ಲೋಟಣೇಶ್ವರಂ ।
ಕಲೇವರವಿಮುಕ್ತಃ ಸ ಇತ್ಯೇವಂ ಶಂಕರೋಽಬ್ರವೀತ್ ॥ ೩೨ ॥
ಮುಕ್ತಿಂ ಪ್ರಯಾತಿ ಸಹಸಾ ದುಷ್ಪ್ರಾಪಾಂ ಪರಮೇಶ್ವರೀಂ ।
ಪೌರುಷೇ ಕ್ರಿಯಮಾಣೇಽಪಿ ನ ಸಿದ್ಧಿರ್ಜಾಯತೇ ಯದಿ ॥ ೩೩ ॥
ಬ್ರುವಂತಿ ಸ್ವರ್ಗಗಮನಮಪಿ ಪಾಪಾನ್ವಿತಸ್ಯ ಚ ।
ಯತ್ರ ತತ್ರ ಗತಸ್ಯೈವ ಭವೇತ್ಪಂಚವರಾಹಕೇ ॥ ೩೪ ॥
ಜ್ಯೇಷ್ಠಸ್ಯೈಕಾದಶೀ ತಿಥೌ ಧ್ರುವಂ ತತ್ರ ವಸೇನ್ನರಃ ।
ಆದಿಂ ಜಯಂ ತಥಾ ಶ್ವೇತಂ ಲಿಂಗಮುದೀರ್ಣಮೇವ ಚ ॥ ೩೫ ॥
ಆಶ್ರಿತ್ಯ ತಸ್ಮಾದ್ದ್ರಷ್ಟವ್ಯಾ ವರಾಹಾಸ್ತು ಯತಸ್ತತಃ ।
ಜ್ಯೇಷ್ಠಸ್ಯೈಕಾದಶೀತಿಥೌ ವಿಷ್ಣುನಾ ಪ್ರಭವಿಷ್ಣುನಾ ॥ ೩೬ ॥

---

ಇವುಗಳೇ ಮೊದಲಾದ ಪಾಪವು ಕೂಡಲೆ ಬೆಂಕಿಯಿಂದ ಹತ್ತಿಯ ರಾಶಿಯಂತೆ ನಾಶವಾಗುವುದು.

೩೦. ನಾರಾಯಣಸ್ಮರಣೆಯಿಂದಲೂ, ವಿಶೇಷವಾಗಿ ಜಪಧ್ಯಾನಗಳಿಂದಲೂ ಪರ್ವತಶಿಖರದಂತಿರುವ ಹೆಚ್ಚಿರುವ ಪಾಪಗಳು ನಾಶವಾಗುವುವು.

೩೧–೩೪. ಮಹಾ ಪೌರುಷದಿಂದ ಪಂಚವರಾಹರನ್ನು ನೋಡಿ ನರ್ಮದಾ ನದಿಯ ನೀರಿನಲ್ಲಿ ಮಿಂದು ವಿಧಿಯಂತೆ ಶ್ರಾದ್ಧವನ್ನು ಮಾಡಿ ಉದಯಾಸ್ತಮನ ಕ್ಕಿಂತ ಮೊದಲು ಲೋಟಣೇಶ್ವರನನ್ನು ನೋಡಿದವನು ದೇಹವನ್ನು ತ್ಯಜಿಸಿದ ತರುವಾಯ ಪರಮೇಶ್ವರ ಸಂಬಂಧವಾದುದೂ, ಹೊಂದಲಾಗದುದೂ ಆದ ಮುಕ್ತಿಯನ್ನು ಪಡೆಯುವನು. ಪೌರುಷವನ್ನಾಶ್ರಯಿಸಿ ಸಿದ್ಧಿಯನ್ನು ಪಡೆಯ ಲಾಗದಿದ್ದರೆ ಪಂಚವರಾಹದಲ್ಲಿ ಎಲ್ಲಿದ್ದರೂ ಪಾಪಿಗೂ ಸ್ವರ್ಗವು ದಿಟವಾಗಿಯೂ ದೊರೆಯುವುದೆಂದು ಹೇಳುತ್ತಾರೆ.

೩೫–೩೬. ಜ್ಯೇಷ್ಠಮಾಸದ ಏಕಾದಶೀದಿನ ಮಾನವನು ಅಲ್ಲಿ ವಾಸಿಸಿ ಆದಿ, ಜಯ, ಶ್ವೇತ, ಲಿಂಗ, ಉದೀರ್ಣ ಎಂಬ ಐದು ವರಾಹರನ್ನು ನೋಡ ಬೇಕು. ಸಮರ್ಥನಾದ ವಿಷ್ಣುವು ಜ್ಯೇಷ್ಠಮಾಸದ ಏಕಾದಶೀದಿನ ವರಾಹ

ವಾರಾಹಂ ರೂಪಮಾಸ್ಥಾಯ ಉದ್ಧೃತಾ ಧರಣೀ ವಿಭೋ ।
ಪುಣ್ಯಾತ್ಪುಣ್ಯತಮಾ ತೇನ ಹ್ಯಶೇಷಾಘೌಘನಾಶಿನೀ ॥ ೩೭ ॥
ದೃಷ್ಟ್ವಾ ಪಂಚವರಾಹಾನ್ವೈ ಕ್ರೋಡಮುದೀರ್ಣರೂಪಿಣಂ ।
ಪೂಜಯಿತ್ವಾ ವಿಧಾನೇನ ಪಶ್ಚಾಜ್ಜಾಗರಣಂ ಚರೇತ್ ॥ ೩೮ ॥
ಸ ಪಂಚವರ್ತಿಕಾನ್ದೀಪಾನ್ ಘೃತೇನೋಜ್ಜ್ವಾಲ್ಯ ಭಕ್ತಿತಃ ।
ಪುರಾಣಶ್ರವಣೈರ್ನೃತ್ಯೈರ್ಗೀತವಾದ್ಯೈಃ ಸುಮಂಗಲೈಃ ॥ ೩೯ ॥
ವೇದಜಾಪ್ಯೈಃ ಪವಿತ್ರೈಶ್ಚ ಕ್ಷಪಯಿತ್ವಾ ಚ ಶರ್ವರೀಂ ।
ಯತ್ಪುಣ್ಯಂ ಲಭತೇ ಮರ್ತ್ಯೋ ಹ್ಯಾಜಮೀಢ ಶೃಣುಷ್ವ ತತ್ ॥ ೪೦ ॥

ರೇವಾಜಲಂ ಪುಣ್ಯತಮಂ ಪೃಥಿವ್ಯಾಂ
ತಥಾ ಚ ದೇವೋ ಜಗತಾಂ ಪತಿರ್ಹರಿಃ ।
ಏಕಾದಶೀ ಪಾಪಹರಾ ನರೇಂದ್ರ
ಬಹ್ವಾಯಾಸೈರ್ಲಭ್ಯತೇ ಮಾನವಾನಾಂ ॥ ೪೧ ॥
ಏಕೈಕಶೋ ಬ್ರಹ್ಮಹತ್ಯಾದಿಕಾನಿ
ಶಕ್ತಾನಿ ಹಂತುಂ ಪಾಪಸಂಘಾನಿ ರಾಜನ್ ।
ನೈತೇ ಸರ್ವೇ ಯುಗಪದ್ವೈ ಸಮೇತಾ
ಹಂತುಂ ಶಕ್ತಾಃ ಕಿಂ ನ ತದ್ಬ್ರೂಹಿ ರಾಜನ್ ॥ ೪೨ ॥

---

ರೂಪವನ್ನಾಶ್ರಯಿಸಿ ಅಶೇಷ ಪಾಪವನ್ನು ನಿವಾರಿಸುವ ಪುಣ್ಯಕರಳಾದ ಭೂಮಿಯನ್ನು ಉದ್ಧಾರಮಾಡಿದನು.

೩೮. ಪಂಚವರಾಹರನ್ನು ನೋಡಿ ಉದೀರ್ಣರೂಪಿಯಾದ ವರಾಹನನ್ನು ವಿಧಿಯಿಂದ ಪೂಜಿಸಿ ಅನಂತರ ಜಾಗರಣೆ ಮಾಡಬೇಕು.

೩೯–೪೦. ಯುಧಿಷ್ಠಿರ! ಪಂಚವರ್ತಿಕ ದೀಪಗಳನ್ನು ಭಕ್ತಿಯಿಂದ ಹೊತ್ತಿಸಿ ಪುರಾಣಶ್ರವಣಗಳಿಂದಲೂ, ಮಂಗಳಕರವಾದ ನೃತ್ಯಗೀತವಾದ್ಯಗಳಿಂದಲೂ, ಪವಿತ್ರಕರವಾದ ವೇದ ಜಪಗಳಿಂದಲೂ, ರಾತ್ರಿಯನ್ನು ಕಳೆದ ಮಾನವನಿಗೆ ಯಾವ ಫಲವು ದೊರೆಯುವುದೆಂಬುದನ್ನು ಕೇಳು.

೪೧. ಭೂಮಿಯಲ್ಲಿ ನರ್ಮದಾನದಿಯ ಜಲವು ಪವಿತ್ರವಾದುದು; ಜಗತ್ಪತಿಯಾದ ವಿಷ್ಣುವು, ಪಾಪವನ್ನು ನಿವಾರಿಸುವ ಏಕಾದಶೀ ತಿಥಿಯೂ ಮಾನವರಿಗೆ ಬಹಳ ಆಯಾಸಗಳಿಂದಲೇ ದೊರೆಯುವುವು.

೪೨. ದೊರೆಯೆ! ಇವುಗಳಲ್ಲಿ ಒಂದೊಂದೂ ಬ್ರಹ್ಮಹತ್ಯೆ ಮೊದಲಾದ ಪಾಪಸಮೂಹಗಳನ್ನು ನಿವಾರಿಸಲು ಶಕ್ತವಾದುವು. ಇವುಗಳೆಲ್ಲ ಒಂದೇ ಸಾರಿ ಒಟ್ಟಿಗೆ ಸೇರಿದರೆ ಯಾವುದನ್ನು ಪರಿಹರಿಸಲು ಶಕ್ತವಾಗಲಾರವು? ಅದನ್ನು ಹೇಳು.

ಯಥೇದಮುಕ್ತಂ ತವ ಧರ್ಮಸೂನೋ
ಶ್ರುತಂ ಚ ಯಚ್ಛಂಕರಾಚ್ಚಂದ್ರಮೌಲೇಃ ।
ಶ್ರುತ್ವೇದಮಿಚ್ಛನ್ಮುಚ್ಯತೇ ಸರ್ವಪಾಪೈಃ
ಪಠನ್ ಪದಂ ಯಾತಿ ಹಿ ವೃತ್ರಶತ್ರೋಃ ॥ ೪೩ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ
ಪಂಚಮೇ ಆವಂತ್ಯಖಂಡೇ ತೃತೀಯೇ ರೇವಾಖಂಡೇ
"ಉದೀರ್ಣವರಾಹತೀರ್ಥಮಾಹಾತ್ಮ್ಯವರ್ಣನಂ"
ನಾಮೈಕೋನನವತ್ಯುತ್ತರಶತತಮೋಽಧ್ಯಾಯಃ

---

೪೩. ಯುಧಿಷ್ಠಿರ! ನಾನು ನಿನಗೆ ಹೇಗೆ ಹೇಳುವೆನೊ, ಹಾಗೆಯೇ ಶಂಕರನಿಂದ ಕೇಳಿದ್ದೇನೆ. ಇದನ್ನು ಕೇಳಿದವನು ಸಮಸ್ತ ಪಾಪಗಳಿಂದ ಮುಕ್ತನಾಗುವನು. ಪಠಿಸುವವನು ಸ್ವರ್ಗಕ್ಕೆ ತೆರಳುವನು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ
ಶ್ರೀ ಸ್ಕಾಂದಮಹಾಪುರಾಣದ ಐದನೆಯ ಆವಂತ್ಯಖಂಡದ ಮೂರನೆಯ ರೇವಾಖಂಡದಲ್ಲಿ
"ಉದೀರ್ಣವರಾಹತೀರ್ಥಮಾಹಾತ್ಮ್ಯವರ್ಣನ"ವೆಂಬ
ನೂರೆಂಬತ್ತೊಂಬತ್ತನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

## ಅಥ ಸಪ್ತತ್ಯುತ್ತರಶತತಮೋಽಧ್ಯಾಯಃ

### ಚಂದ್ರಹಾಸತೀರ್ಥಮಾಹಾತ್ಮ್ಯವರ್ಣನಂ

ಶ್ರೀ ಮಾರ್ಕಂಡೇಯ ಉವಾಚ :—

ತತೋ ಗಚ್ಛೇನ್ಮಹೀಪಾಲ ಸೋಮತೀರ್ಥಮನುತ್ತಮಂ ।
ಚಂದ್ರಹಾಸೇತಿ ವಿಖ್ಯಾತಂ ಸರ್ವದೈವತಪೂಜಿತಂ ॥ ೧ ॥
ಯತ್ರ ಸಿದ್ಧಿಂ ಪರಾಂ ಪ್ರಾಪ್ತಃ ಸೋಮೋ ರಾಜಾ ಸುರೋತ್ತಮಃ ॥ ೨ ॥

ಯುಧಿಷ್ಠಿರ ಉವಾಚ :—

ಕಥಂ ಸಿದ್ಧಿಮನುಪ್ರಾಪ್ತಃ ಸೋಮೋ ರಾಜಾ ಜಗತ್ಪತಿಃ ।
ತತ್ಸರ್ವಂ ಶ್ರೋತುಮಿಚ್ಛಾಮಿ ಕಥಯಸ್ವ ಮಮಾನಘ ॥ ೩ ॥

ಮಾರ್ಕಂಡೇಯ ಉವಾಚ :—

ಪುರಾ ಶಪ್ತೋ ಮುನೀಂದ್ರೇಣ ದಕ್ಷೇಣ ಕಿಲ ಭಾರತ ।
ಅಸೇವನಾದ್ಧಿ ದಾರಾಣಾಂ ಕ್ಷಯರೋಗೀ ಭವಿಷ್ಯಸಿ ॥ ೪ ॥

---

### ಕನ್ನಡದ ಅನುವಾದ

#### ಚಂದ್ರಹಾಸತೀರ್ಥಮಾಹಾತ್ಮ್ಯವರ್ಣನ

೧. ಶ್ರೀ ಮಾರ್ಕಂಡೇಯನು ಹೇಳುತ್ತಾನೆ:—ಯುಧಿಷ್ಠಿರ! ಅನಂತರ ಸಕಲದೇವತೆಗಳಿಂದ ಪೂಜಿತವಾದ ಚಂದ್ರಹಾಸವೆಂಬ ಸೋಮತೀರ್ಥಕ್ಕೆ ಹೋಗಬೇಕು.

೨. ಇಲ್ಲಿ ಹಿಂದೆ ಸುರೋತ್ತಮನಾದ ಸೋಮರಾಜನು ಉತ್ತಮವಾದ ಸಿದ್ಧಿಯನ್ನು ಪಡೆದಿರುವನು.

೩. ಯುಧಿಷ್ಠಿರನು ಹೇಳುತ್ತಾನೆ:—ನಿರ್ದುಷ್ಟನಾದ ಮುನಿಯೆ! ಜಗತ್ಪತಿಯಾದ ಸೋಮರಾಜನು ಸಿದ್ಧಿಯನ್ನು ಹೇಗೆ ಪಡೆದನು? ಅದನ್ನೆಲ್ಲ ಕೇಳ ಬಯಸುವೆನು. ನನಗೆ ಹೇಳು.

೪. ಮಾರ್ಕಂಡೇಯನು ಹೇಳುತ್ತಾನೆ:—ಹಿಂದೆ ದಕ್ಷಮುನಿವರ್ಯನು ತನ್ನ ಮಕ್ಕಳನ್ನು ಸರಿಯಾಗಿ ನೋಡಿಕೊಳ್ಳದಿದ್ದುದ್ದರಿಂದ ಕ್ಷಯರೋಗಿಯಾಗುವೆ ಎಂದು ಚಂದ್ರನಿಗೆ ಶಾಪವನ್ನಿತ್ತನಷ್ಟೆ.

ಉದ್ವಾಹಿತಾನಾಂ ಪತ್ನೀನಾಂ ಯೇನ ಕುರ್ವಂತಿ ಸೇವನಂ ।
ಯಾ ನಿಷ್ಠಾ ಜಾಯತೇ ತೇಷಾಂ ತಾಂ ಶೃಣುಷ್ವ ನರೋತ್ತಮ ॥ ೫ ॥
ಋತುಕಾಲೇ ತು ನಾರೀಣಾಂ ಸೇವನಾಜ್ಜಾಯತೇ ಸುತಃ ।
ಸುತಾತ್ಸ್ವರ್ಗಶ್ಚ ಮೋಕ್ಷಶ್ಚ ಹೀತ್ಯೇವಂ ಶ್ರುತಿನೋದನಾ ॥ ೬ ॥
ತತ್ಕಾಲೋಚಿತಧರ್ಮೇಣ ಯೇನ ಸೇವಂತಿ ತಾಂ ನರಾಃ ।
ತೇಷಾಂ ಬ್ರಹ್ಮಘ್ನಜಂ ಪಾಪಂ ಜಾಯತೇ ನಾಽತ್ರ ಸಂಶಯಃ ॥ ೭ ॥
ತೇನ ಪಾಪೇನ ಘೋರೇಣ ವೇಷ್ಟಿತೋ ರೌರವೇ ಪತೇತ್ ।
ತಸ್ಯ ತದ್ರುಧಿರಂ ಪಾಪಾಃ ಪಿಬಂತೇ ಕಾಲವಿಪ್ಲಾವಿತಂ ॥ ೮ ॥
ತತೋಽವತೀರ್ಣಕಾಲೇನ ಯಾಂ ಯಾಂ ಯೋನಿಂ ಪ್ರಯಾಸ್ಯತಿ ।
ತಸ್ಯಾಂ ತಸ್ಯಾಂ ಸ ದುಷ್ಟಾತ್ಮಾ ದುರ್ಭಗೋ ಜಾಯತೇ ಸದಾ ॥ ೯ ॥
ನಾರೀಣಾಂ ತು ಸದಾ ಕಾಮೋ ಹ್ಯಧಿಕಃ ಪರಿವರ್ತತೇ ।
ವಿಶೇಷೇಣ ಋತೋಃ ಕಾಲೇ ಭಿದ್ಯತೇ ಕಾಮಸಾಯಕೈಃ ॥ ೧೦ ॥
ಪರಿಭೂತಾ ಹಿ ಸಾ ಭರ್ತ್ರಾ ಧ್ಯಾಯತೇಽನ್ಯಂ ಪತಿಂ ತತಃ ।
ತಸ್ಯಾಃ ಪುತ್ರಃ ಸಮುತ್ಪನ್ನೋ ಹ್ಯಟತೇ ಕುಲಮುತ್ತಮಂ ॥ ೧೧ ॥

---

೫. ಮದುವೆಮಾಡಿಕೊಂಡ ಪತ್ನಿಯರನ್ನು ಸೇವಿಸದಿರುವವರಿಗೆ ಉಂಟಾಗುವ ಅನಿಷ್ಟವನ್ನು ಹೇಳುವೆನು ಕೇಳು.

೬. ಋತುಕಾಲದಲ್ಲಿ ನಾರಿಯರನ್ನು ಸೇವಿಸುವುದರಿಂದ ಸುತನುಂಟಾಗುವನು. ಆ ಸುತನಿಂದ ಸ್ವರ್ಗಮೋಕ್ಷಗಳು ದೊರೆಯುವುದೆಂದು ಶ್ರುತಿಯು ಹೇಳುವುದು.

೭. ಋತುಕಾಲೋಚಿತಧರ್ಮದಿಂದ ಅವಳನ್ನು ಸೇವಿಸದಿರುವ ಪುರುಷರಿಗೆ ಬ್ರಹ್ಮಹತ್ಯೆಯುಂಟಾಗುವುದು.

೮. ಆ ಘೋರಪಾಪದಿಂದ ವ್ಯಾಪ್ತರಾದ ಪುರುಷರು ರೌರವನರಕದಲ್ಲಿ ಬೀಳುವರು. ಅವನ ರುಧಿರವನ್ನು ಪಾಪಿಗಳು ಕುಡಿಯುವರು.

೯. ಅನಂತರ ಅವನು ಆ ನರಕದಿಂದ ಹೊರಗೆ ಬಂದು ಯಾವ ಯಾವ ಯೋನಿಯನ್ನು ಹೊಂದುವನೊ; ಆಯಾ ಯೋನಿಯಲ್ಲಿ ಅವನು ದೌರ್ಭಾಗ್ಯವುಳ್ಳವನಾಗುವನು.

೧೦. ಹೆಂಗಸರಿಗೆ ಯಾವಾಗಲೂ ಕಾಮವು ಅಧಿಕವಾಗಿ ಉಂಟಾಗುವುದು. ಋತುಕಾಲದಲ್ಲಿ ಅವರು ವಿಶೇಷವಾಗಿ ಮನ್ಮಥ ಬಾಣಗಳಿಂದ ಪೀಡಿತರಾಗುವರು.

೧೧. ಪತಿಯಿಂದ ತಿರಸ್ಕೃತಳಾದ ಆ ಸ್ತ್ರೀಯು ಇತರ ಪತಿಯನ್ನು ಚಿಂತಿಸುವಳು. ಆ ಮತ್ತೊಬ್ಬನಿಂದ ಹುಟ್ಟಿದ ಸುತನು ಬೇರೆ ಕುಲಕ್ಕೆ ಸೇರುವನು.

ಸ್ವರ್ಗಸ್ಥಾಸ್ತೇನ ಪಿತರಃ ಪೂರ್ವಂ ಜಾತಾ ಮಹೀಪತೇ ।
ಪತಂತಿ ಜಾತಮಾತ್ರೇಣ ಕುಲಟಸ್ತೇನ ಜಾಯತೇ ॥ ೧೨ ॥
ತೇನ ಕರ್ಮವಿಪಾಕೇನ ಕ್ಷಯರೋಗೀ ಶಶೀಹ್ಯಭೂತ್ ।
ತ್ಯಕ್ತ್ವಾಲೋಕಂ ಸುರೇಂದ್ರಾಣಾಂ ಮರ್ತ್ಯಲೋಕಮುಪಾಗತಃ ॥ ೧೩ ॥
ತತ್ರ ತೀರ್ಥಾನ್ಯನೇಕಾನಿ ಪುಣ್ಯಾನ್ಯಾಯತನಾನಿ ಚ ।
ಭ್ರಮಿತ್ವಾ ನರ್ಮದಾಂ ಪ್ರಾಪ್ತಃ ಸರ್ವಪಾಪಪ್ರಣಾಶಿನೀಂ ॥ ೧೪ ॥
ಉಪವಾಸಸ್ತು ದಾನಾನಿ ವ್ರತಾನಿ ನಿಯಮಾಶ್ಚ ಯೇ ।
ಚಚಾರ ದ್ವಾದಶಾಬ್ದಾನಿ ತತೋ ಮುಕ್ತಃ ಸ ಕಿಲ್ಬಿಷೈಃ ॥ ೧೫ ॥
ಸ್ಥಾಪಯಿತ್ವಾ ಮಹಾದೇವಂ ಸರ್ವಪಾತಕನಾಶನಂ ।
ಜಗಾಮ ಪ್ರಭಯಾ ಪೂರ್ಣಃ ಸೋಮಲೋಕಮನುತ್ತಮಂ ॥ ೧೬ ॥
ಯೇನೈವ ಸ್ಥಾಪಿತೋ ದೇವಃ ಪೂಜ್ಯತೇ ವರ್ಷಸಂಖ್ಯಯಾ ।
ತಾವದ್ಯುಗಸಹಸ್ರಾಣಿ ತಸ್ಯ ಲೋಕಂ ಸಮಶ್ನುತೇ ॥ ೧೭ ॥
ತೇನ ದೇವಾನ್ವಿಧಾನೋಕ್ತಾನ್ ಸ್ಥಾಪಯಂತಿ ನರಾ ಭುವಿ ।
ಅಕ್ಷಯಂ ಚಾವ್ಯಯಂ ಯಸ್ಮಾತ್ಫಲಂ ಭವತಿ ನಾಽನ್ಯಥಾ ॥ ೧೮ ॥

---

೧೨. ಅದರಿಂದ ಸ್ವರ್ಗಸ್ಥರಾದ ಅವನ ಪಿತೃಗಳು ಪತಿತರಾಗುವರು. ಆ ಪುತ್ರನು ಕುಲಟನೆಂದು ಹೇಳಿಸಿಕೊಳ್ಳುವನು.

೧೩. ಚಂದ್ರನು ಆ ದಕ್ಷನ ಶಾಪದಪರಿಣಾಮದಿಂದ ಕ್ಷಯರೋಗಿಯಾಗಿ ದೇವಲೋಕವನ್ನು ತ್ಯಜಿಸಿ ಭೂಲೋಕಕ್ಕೆ ಬಂದನು.

೧೪. ಆ ಭೂಮಿಯಲ್ಲಿ ಅವನು ಅನೇಕ ತೀರ್ಥಗಳಲ್ಲಿಯೂ, ಪುಣ್ಯಕರವಾದ ದೇವಾಲಯಗಳಲ್ಲಿಯೂ ಸಂಚರಿಸಿ, ಸಕಲಪಾಪಗಳನ್ನು ಪರಿಹರಿಸುವ ನರ್ಮದಾನದಿಗೆ ಬಂದನು.

೧೫. ಅಲ್ಲಿ ಅವನು ಉಪವಾಸ, ದಾನ, ವ್ರತ, ನಿಯಮಗಳನ್ನು ಹನ್ನೆರಡು ವರ್ಷಕಾಲ ಮಾಡಿ ಪಾಪಮುಕ್ತನಾದನು.

೧೬. ಸಮಸ್ತಪಾಪಗಳನ್ನು ಪರಿಹರಿಸುವ ಮಹೇಶ್ವರನನ್ನು ಸ್ಥಾಪಿಸಿ ಪ್ರಭಾಪೂರ್ಣವಾಗಿ ಉತ್ತಮವಾದ ಚಂದ್ರಲೋಕಕ್ಕೆ ತೆರಳಿದನು.

೧೭. ನರನು ಆ ಚಂದ್ರನು ಸ್ಥಾಪಿಸಿದ ಮಹಾದೇವನನ್ನು ಎಷ್ಟು ವರ್ಷಕಾಲ ಪೂಜಿಸುವನೊ, ಅಷ್ಟುಸಾವಿರ ಯುಗಗಳಕಾಲ ಆ ಚಂದ್ರಲೋಕದಲ್ಲಿ ವಾಸಿಸುವನು.

೧೮. ಆದುದರಿಂದ ಮಾನವರು ವಿಧಿಯಂತೆ ದೇವತೆಗಳನ್ನು ಸ್ಥಾಪಿಸುವರು. ಅದರಿಂದ ಅವರಿಗೆ ನಾಶರಹಿತವೂ, ಶಾಶ್ವತವೂ ಆದ ಫಲವು ದೊರೆಯುವುದು.

ಸೋಮತೀರ್ಥೇ ತು ಯಃ ಸ್ನಾತ್ವಾ ಪೂಜಯೇದ್ದೇವಮೀಶ್ವರಂ ।
ಜಾಯತೇ ಸ ನರೋ ಭೂತ್ವಾ ಸೋಮವತ್ಪ್ರಿಯದರ್ಶನಃ ॥ ೧೯ ॥
ಚಂದ್ರಪ್ರಭಾಸೇ ಯೋ ಗತ್ವಾ ಸ್ನಾನಂ ವಿಧಿವದಾಚರೇತ್ ।
ವ್ಯಾಧಿನಾ ನಾಽಭಿಭೂತಃ ಸ್ಯಾತ್ಕ್ಷಯರೋಗೇಣ ವಾ ಯುತಃ ॥ ೨೦ ॥
ಚಂದ್ರಹಾಸೇ ನರಃ ಸ್ನಾತ್ವಾ ದ್ವಾದಶ್ಯಾಂ ತು ನರೇಶ್ವರ ।
ಚತುರ್ದಶ್ಯಾಮುಪೋಷ್ಯೈವ ಕ್ಷೀರಸ್ಯ ಜುಹುಯಾಚ್ಚರುಂ ॥ ೨೧ ॥
ಮಂತ್ರೈಃ ಪಂಚಭಿರೀಶಾನಂ ಪುರುಷಸ್ತ್ರ್ಯಂಬಕಂ ಯಜೇತ್ ।
ಹವಿಃ ಶೇಷಂ ಸ್ವಯಂ ಪ್ರಾಶ್ಯ ಚಂದ್ರಹಾಸೇಶಮೀಕ್ಷಯೇತ್ ॥ ೨೨ ॥
ಅನೇನ ವಿಧಿನಾ ರಾಜಂಸ್ತುಷ್ಟೋ ದೇವೋ ಮಹೇಶ್ವರಃ ।
ವಿಧಿನಾ ತೀರ್ಥಯೋಗೇನ ಕ್ಷಯರೋಗಾದ್ವಿಮುಚ್ಯತೇ ॥ ೨೩ ॥
ಸಪ್ತಭಿಃ ಸೋಮವಾರೈರ್ಯಃ ಸ್ನಾನಂ ತತ್ರ ಸಮಾಚರೇತ್ ।
ಸರ್ವೈಃಕರ್ಣಕೃತಾದ್ರೋಗಾನ್ಮುಚ್ಯತೇ ಪೂಜಯಂಛಿವಂ ॥ ೨೪ ॥
ಅಕ್ಷಿರೋಗಸ್ತಥಾ ರಾಜಂಶ್ಚಂದ್ರಹಾಸೇ ವಿನಶ್ಯತಿ ।
ಚಂದ್ರಹಾಸೇ ತು ಯೋ ಗತ್ವಾ ಗ್ರಹಣೇ ಚಂದ್ರಸೂರ್ಯಯೋಃ ।
ಸ್ನಾನಂ ಸಮಾಚರೇದ್ಭಕ್ತ್ಯಾ ಮುಚ್ಯತೇ ಸರ್ವಪಾತಕೈಃ ॥ ೨೫ ॥

---

೧೯. ಸೋಮತೀರ್ಥದಲ್ಲಿ ಮಿಂದು ಈಶ್ವರನನ್ನು ಪೂಜಿಸಿದವನು ಚಂದ್ರನಂತೆ ಪ್ರಿಯವಾದ ನೋಟವುಳ್ಳವನಾಗುವನು.

೨೦. ಚಂದ್ರಪ್ರಭಾಸಕ್ಕೆ ಹೋಗಿ ವಿಧಿಯಂತೆ ಮಿಂದವನು ಕ್ಷಯರೋಗಿಯಾಗಿದ್ದರೂ ಆ ವ್ಯಾಧಿಯಿಂದ ಪೀಡಿತನಾಗುವುದಿಲ್ಲ.

೨೧. ನರನು ಚಂದ್ರಹಾಸತೀರ್ಥದಲ್ಲಿ ದ್ವಾದಶೀದಿನ ಮಿಂದು ಚತುರ್ದಶೀದಿನ ಉಪವಾಸ ಮಾಡಿ ಕ್ಷೀರಮಿಶ್ರವಾದ ಚರುವಿನಿಂದ ಹೋಮ ಮಾಡಬೇಕು.

೨೨. ಐದು ಮಂತ್ರಗಳಿಂದ ಈಶ್ವರನನ್ನುದ್ದೇಶಿಸಿ ಹೋಮಮಾಡಿ ಹವಿಸ್ಸಿನ ಶೇಷವನ್ನು ತಾನೇ ಪ್ರಾಶನೆಮಾಡಿ ಚಂದ್ರಹಾಸೇಶ್ವರನನ್ನು ದರ್ಶನ ಮಾಡಬೇಕು.

೨೩. ಈ ವಿಧಿಯಿಂದ ಶಂಕರನು ಸಂತುಷ್ಟನಾಗುವನು. ಅದರಿಂದ ನರನು ಕ್ಷಯರೋಗದಿಂದ ಮುಕ್ತನಾಗುವನು.

೨೪. ಏಳು ಸೋಮವಾರ ದಿನಗಳಲ್ಲಿ ಅಲ್ಲಿ ಮಿಂದು ಶಿವನನ್ನು ಪೂಜಿಸಿದವನು ಕರ್ಣರೋಗದಿಂದ ಮುಕ್ತನಾಗುವನು.

೨೫. ಹಾಗೆಯೇ ಅಲ್ಲಿ ಅಕ್ಷಿರೋಗವೂ ನಾಶವಾಗುವುದು. ಚಂದ್ರಸೂರ್ಯರ ಗ್ರಹಣಕಾಲದಲ್ಲಿ ಚಂದ್ರಹಾಸದಲ್ಲಿ ಭಕ್ತಿಯಿಂದ ಮಿಂದವನು ಸಕಲ ಪಾಪಗಳಿಂದ ಮುಕ್ತನಾಗುವನು.

ತತ್ರ ಸ್ನಾನಂ ಚ ದಾನಂ ಚ ಚಂದ್ರಹಾಸೇ ಶುಭಾಽಶುಭಂ ।
ಕೃತಂ ನೃಪವರಶ್ರೇಷ್ಠ ಸರ್ವಂ ಭವತಿ ಚಾಕ್ಷಯಂ ॥ ೨೬ ॥
ತೇ ಧನ್ಯಾಸ್ತೇ ಮಹಾತ್ಮಾನಸ್ತೇಷಾಂ ಜನ್ಮ ಸುಜೀವಿತಂ ।
ಚಂದ್ರಹಾಸೇ ತು ಯೇ ಸ್ನಾತ್ವಾ ಪಶ್ಯಂತಿ ಗ್ರಹಣಂ ನರಾಃ ॥ ೨೭ ॥
ವಾಚಿಕಂ ಮಾನಸಂ ಪಾಪಂ ಕರ್ಮಜಂ ಯತ್ಪುರಾ ಕೃತಂ ।
ಸ್ನಾನಮಾತ್ರಾತ್ತು ರಾಜೇಂದ್ರ ತತ್ರ ತೀರ್ಥೇ ಪ್ರಣಶ್ಯತಿ ॥ ೨೮ ॥
ಬಹವಸ್ತನ್ನ ಜಾನಂತಿ ಮಹಾಮೋಹಸಮನ್ವಿತಾಃ ।
ದೇಹಸ್ಥ ಇವ ಸರ್ವೇಷಾಂ ಪರಮಾತ್ಮೇವ ಸಂಸ್ಥಿತಂ ॥ ೨೯ ॥
ಪಶ್ಚಿಮೇ ಸಾಗರೇ ಗತ್ವಾ ಸೋಮತೀರ್ಥೇ ತು ಯತ್ಫಲಂ ।
ತತ್ಸಮಗ್ರಮವಾಪ್ನೋತಿ ಚಂದ್ರಹಾಸೇ ನ ಸಂಶಯಃ ॥ ೩೦ ॥
ಸಂಕ್ರಾಂತೌ ಚ ವ್ಯತೀಪಾತೇ ವಿಷುವೇ ಚಾಽಯನೇ ತಥಾ ।
ಚಂದ್ರಹಾಸೇ ನರಃ ಸ್ನಾತ್ವಾ ಸರ್ವಪಾಪೈಃ ಪ್ರಮುಚ್ಯತೇ ॥ ೩೧ ॥
ತೇ ಮೂಢಾಸ್ತೇ ದುರಾಚಾರಾಸ್ತೇಷಾಂ ಜನ್ಮ ನಿರರ್ಥಕಂ ।
ಚಂದ್ರಹಾಸಂ ನ ಜಾನಂತಿ ನರ್ಮದಾಯಾಂ ವ್ಯವಸ್ಥಿತಂ ॥ ೩೨ ॥

೨೬. ನೃಪೋತ್ತಮನೆ! ಅಲ್ಲಿ ಮಾಡಿದ ಸ್ನಾನ, ದಾನ, ಶುಭಾಶುಭ ಕರ್ಮಗಳು ಇವೆಲ್ಲವೂ ಅಕ್ಷಯವಾಗುವುವು.

೨೭. ಚಂದ್ರಹಾಸದಲ್ಲಿ ಮಿಂದು ಗ್ರಹಣವನ್ನು ನೋಡುವ ಮಾನವರು ಧನ್ಯರೂ, ಮಹಾತ್ಮರೂ ಆಗುವರು. ಅವರ ಜೀವನವು ಸುಜೀವನವಾಗುವುದು.

೨೮. ಹಿಂದೆ ಮಾಡಿದ ವಾಚಿಕ, ಮಾನಸಿಕ, ಕರ್ಮಜ ಪಾಪಗಳು ಆ ತೀರ್ಥದಲ್ಲಿ ಸ್ನಾನಮಾಡುವುದರಿಂದಲೂ ನಾಶವಾಗುವುವು.

೨೯. ಅತ್ಯಂತವಾದ ಅಜ್ಞಾನದಿಂದ ಕೂಡಿದ ಅನೇಕ ಜನರು ದೇಹದಲ್ಲಿರುವ ಪರಮಾತ್ಮನಂತೆ ಅದನ್ನರಿಯುವುದಿಲ್ಲ.

೩೦. ಪಶ್ಚಿಮ ಸಮುದ್ರದಲ್ಲಿರುವ ಸೋಮತೀರ್ಥದಲ್ಲಿ ಲಭಿಸುವ ಫಲವನ್ನು ಮಾನವನು ನಿಶ್ಚಯವಾಗಿಯೂ ಚಂದ್ರಹಾಸದಲ್ಲಿ ಪಡೆಯುವನು.

೩೧. ಸಂಕ್ರಾಂತಿ, ವ್ಯತೀಪಾತ, ಯುಗಾದಿ, ದಕ್ಷಿಣೋತ್ತರಾಯಣ ಪುಣ್ಯಕಾಲಗಳು ಇವುಗಳಲ್ಲಿ ಚಂದ್ರಹಾಸ್ಯದಲ್ಲಿ ಮಿಂದ ಮಾನವನು ಸಕಲ ಪಾಪಮುಕ್ತನಾಗುವನು.

೩೨. ನರ್ಮದಾನದಿಯಲ್ಲಿರುವ ಚಂದ್ರಹಾಸ್ಯ ತೀರ್ಥವನ್ನರಿಯದವರು ಮೂಢರೂ, ದುರಾಚಾರರೂ ಆಗಿರುವರು. ಅವರ ಜನ್ಮವು ನಿಷ್ಫಲವು.

**ಚಂದ್ರಹಾಸೇ ತು ಯಃ ಕಶ್ಚಿತ್ಸನ್ಯಾಸಂ ಕುರುತೇ ನೃಪ ।**
**ಅನಿವರ್ತಿಕಾ ಗತಿಸ್ತಸ್ಯ ಸೋಮಲೋಕಾತ್ಕದಾಚನ ॥ ೩೩ ॥**

**ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ ಪಂಚಮೇ ಆವಂತ್ಯಖಂಡೇ ತೃತೀಯೇ ರೇವಾಖಂಡೇ "ಚಂದ್ರಹಾಸತೀರ್ಥಮಾಹಾತ್ಮ್ಯವರ್ಣನಂ" ನಾಮ ನವತ್ಯುತ್ತರಶತತಮೋಽಧ್ಯಾಯಃ**

---

೩೩. ಚಂದ್ರಹಾಸತೀರ್ಥದಲ್ಲಿ ಸನ್ಯಾಸವನ್ನು ಸ್ವೀಕರಿಸಿದವನಿಗೆ ಚಂದ್ರಲೋಕದಲ್ಲಿ ಪುನರಾಗಮನವಿಲ್ಲದ ಮುಕ್ತಿಯುಂಟಾಗುವುದು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ ಶ್ರೀ ಸ್ಕಾಂದಮಹಾಪುರಾಣದ ಐದನೆಯ ಆವಂತ್ಯಖಂಡದ ಮೂರನೆಯ ರೇವಾಖಂಡದಲ್ಲಿ "ಚಂದ್ರಹಾಸತೀರ್ಥಮಾಹಾತ್ಮ್ಯವರ್ಣನ"ವೆಂಬ ನೂರತೊಂಬತ್ತನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

## ಅಷ್ಟೈಕನಸಪ್ತ್ಯುತ್ತರಶತತಮೋಽಧ್ಯಾಯಃ

### ದ್ವಾದಶಾದಿತ್ಯತೀರ್ಥಮಾಹಾತ್ಮ್ಯವರ್ಣನಂ

ಶ್ರೀ ಮಾರ್ಕಂಡೇಯ ಉವಾಚ:—

ಸಿದ್ಧೇಶ್ವರಂ ತತೋ ಗಚ್ಛೇತ್ತಸ್ಯೈವ ತು ಸಮೀಪತಃ ।
ಅಮೃತಸ್ರಾವಿ ತಲ್ಲಿಂಗಮಾದ್ಯಂ ಸ್ವಾಯಂಭುವಂ ತಥಾ ॥ ೧ ॥
ದೃಷ್ಟಮಾತ್ರೇಣ ಯೇನೇಹ ಹ್ಯನೃಣೋ ಜಾಯತೇ ನರಃ ।
ಪುರಾ ವರ್ಷಶತಂ ಸಾಗ್ರಮಾರಾಧ್ಯ ಪರಮೇಶ್ವರಂ ॥ ೨ ॥
ಪ್ರಾಪ್ನುಯುಃ ಪರಮಾಂ ಸಿದ್ಧಿಮಾದಿತ್ಯಾ ದ್ವಾದಶೈವ ತು ।
ಅತಃ ಸಿದ್ಧೇಶ್ವರಃ ಪ್ರೋಕ್ತಃ ಸಿದ್ಧಿದಃ ಸಿದ್ಧಿಕಾಂಕ್ಷಿಣಾಂ ॥ ೩ ॥

ಯುಧಿಷ್ಠಿರ ಉವಾಚ:—

ಕಥಂ ಸಿದ್ಧೇಶ್ವರೇ ಪ್ರಾಪ್ತಾಃ ಸಿದ್ಧಿಂ ದೇವಾ ದ್ವಿಜೋತ್ತಮಾಃ ।
ಆದಿತ್ಯಾ ಇತಿ ಯಚ್ಚೋಕ್ತಂ ತನ್ಮೇ ವಿಸ್ಮಾಪನಂ ಕೃತಂ ॥ ೪ ॥
ತಪಸ್ಯುಗ್ರೇ ವ್ಯವಸಿತಾ ಆದಿತ್ಯಾಃ ಕೇನ ಹೇತುನಾ ।
ಸಂಪ್ರಾಪ್ತಾಸ್ತು ದ್ವಿಜಶ್ರೇಷ್ಠ ಸಿದ್ಧಿಂ ಚೈವಾಭಿಲಾಷಿಕೀಂ ॥ ೫ ॥

---

## ಕನ್ನಡದ ಅನುವಾದ

### ದ್ವಾದಶಾದಿತ್ಯತೀರ್ಥಮಾಹಾತ್ಮ್ಯವರ್ಣನ

೧. ಶ್ರೀ ಮಾರ್ಕಂಡೇಯನು ಹೇಳುತ್ತಾನೆ:—ಅನಂತರ ಚಂದ್ರಹಾಸ ತೀರ್ಥದ ಹತ್ತಿರವಿರುವ ಸಿದ್ಧೇಶ್ವರತೀರ್ಥಕ್ಕೆ ಹೋಗಬೇಕು. ಅಲ್ಲಿ ಅಮೃತವನ್ನು ಸ್ರವಿಸುವ ಸ್ವಾಯಂಭುವ ಲಿಂಗವಿರುವುದು.

೨–೩. ಇಲ್ಲಿ ಮಾನವನು ಆ ಲಿಂಗವನ್ನು ದರ್ಶನಮಾಡುವುದರಿಂದಲೇ ಋಣಮುಕ್ತನಾಗುವನು. ಹಿಂದೆ ದ್ವಾದಶಾದಿತ್ಯರು ನೂರು ವರ್ಷಕಾಲ ಪರಮೇಶ್ವರನನ್ನು ಆರಾಧಿಸಿ ಉತ್ತಮ ಸಿದ್ಧಿಯನ್ನು ಪಡೆದರು. ಆದುದರಿಂದ ಸಿದ್ಧಿಯನ್ನು ಬಯಸುವವರಿಗೆ ಅವನು ಸಿದ್ಧಿಯನ್ನೀಯುವ ಸಿದ್ಧೇಶ್ವರನೆಂದು ಹೇಳುತ್ತಾರೆ.

೪. ಯುಧಿಷ್ಠಿರನು ಹೇಳುತ್ತಾನೆ:—ದ್ವಿಜವರ್ಯನೆ! ದ್ವಾದಶಾದಿತ್ಯರು ಸಿದ್ಧೇಶ್ವರದಲ್ಲಿ ಸಿದ್ಧಿಯನ್ನು ಹೊಂದಿದರೆಂಬುದು ನನಗೆ ಅತ್ಯಂತಾಶ್ಚರ್ಯವನ್ನುಂಟುಮಾಡಿದೆ. ಇದು ಹೇಗೆ?

೫. ಆದಿತ್ಯರು ಏತಕ್ಕಾಗಿ ಉಗ್ರತಪವನ್ನಾಚರಿಸಿ ಇಷ್ಟಾರ್ಥವನ್ನು ಪಡೆದರು?

ಸಂಕ್ಷಿಪ್ಯ ತು ಮಯಾ ಪೃಷ್ಟಂ ವಿಸ್ತರಾದ್ದ್ವಿಜ ಶಂ ಸಮೇ ॥ ೬ ॥

ಮಾರ್ಕಂಡೇಯ ಉವಾಚ :—

ಅದಿತೇರ್ದ್ವಾದಶಾದಿತ್ಯಾ ಜಾತಾಃ ಶಕ್ರ ಪುರೋಗಮಾಃ ।
ಇಂದ್ರೋ ಧಾತಾ ಭಗಸ್ತ್ವಷ್ಟಾ ಮಿತ್ರೋಽಥ ವರುಣೋಽರ್ಯಮಾ ॥೭॥
ವಿವಸ್ವಾನ್ ಸವಿತಾ ಪೂಷಾ ಹ್ಯಂಶುಮಾನ್ವಿಷ್ಣುರೇವ ಚ ।
ತ ಇಮೇ ದ್ವಾದಶಾದಿತ್ಯಾ ಇಚ್ಛಂತೋ ಭಾಸ್ಕರಂ ಪದಂ ॥ ೮ ॥
ನರ್ಮದಾತಟಮಾಶ್ರಿತ್ಯ ತಪಸ್ಯುಗ್ರೇ ವ್ಯವಸ್ಥಿತಾಃ ।
ಸಿದ್ಧೇಶ್ವರೇ ಮಹಾರಾಜ ಕಾಶ್ಯಪೇಯೈರ್ಮಹಾತ್ಮಭಿಃ ॥ ೯ ॥
ಪರಾ ಸಿದ್ಧಿರನುಪ್ರಾಪ್ತಾ ದ್ವಾದಶಾದಿತ್ಯಸಂಜ್ಞಿತೈಃ ।
ಸ್ಥಾಪಿತಶ್ಚ ಜಗದ್ಧಾತಾ ತಸ್ಮಿಂಸ್ತೀರ್ಥೇ ದಿವಾಕರಃ ॥ ೧೦ ॥
ಸ್ವಕೀಯಾಂಶವಿಭಾಗೇನ ದ್ವಾದಶಾದಿತ್ಯಸಂಜ್ಞಿತೈಃ ।
ತದಾ ಪ್ರಭೃತಿ ತತ್ತೀರ್ಥಂ ರಾಜನ್ ಖ್ಯಾತಿಂ ಗತಂ ಭುವಿ ॥ ೧೧ ॥
ಪ್ರಲಯೇ ಸಮನುಪ್ರಾಪ್ತೇ ಹ್ಯಾದಿತ್ಯಾ ದ್ವಾದಶೈವ ತೇ ।
ದ್ವಾದಶಾದಿತ್ಯತೋ ರಾಜನ್ ಸಂಭವಂತಿ ಯುಗಕ್ಷಯೇ ॥ ೧೨ ॥
ಇಂದ್ರಸ್ತು ಪತಿಸೂರ್ಯೇಣ ಧಾತಾ ಚೈವಾಗ್ನಿಗೋಚರೇ ।
ಗಭಸ್ತಿಪತಿರ್ಯೈ ಯಾಮ್ಯೇ ತ್ವಷ್ಟಾ ನೈರ್ಋತದಿಙ್ಮುಖಃ ॥ ೧೩ ॥

---

೬. ನಾನು ಸಂಕ್ಷೇಪವಾಗಿ ಪ್ರಶ್ನೆಮಾಡಿದ್ದೇನೆ. ಮುನಿಯೆ! ವಿಸ್ತಾರವಾಗಿ ಅದನ್ನು ಹೇಳು.

೭–೧೧. ಮಾರ್ಕಂಡೇಯನು ಹೇಳುತ್ತಾನೆ:—ಅದಿತಿಯಿಂದ ಇಂದ್ರ ಮೊದಲಾದ ಹನ್ನೆರಡು ಮಂದಿ ಆದಿತ್ಯರು ಜನಿಸಿದರು. ಇಂದ್ರ, ಧಾತಾ, ಭಗ, ತ್ವಷ್ಟಾ, ಮಿತ್ರ, ವರುಣ, ಅರ್ಯಮನ್, ವಿವಸ್ವಾನ್, ಸವಿತಾ, ಪೂಷಾ, ಅಂಶುಮಾನ್, ವಿಷ್ಣು ಎಂಬ ಈ ಹನ್ನೆರಡು ಮಂದಿ ಆದಿತ್ಯರು ಸೂರ್ಯಪದವಿಯನ್ನು ಬಯಸುವವರಾಗಿ ನರ್ಮದಾತಟದಲ್ಲಿರುವ ಸಿದ್ಧೇಶ್ವರದಲ್ಲಿ ಉಗ್ರತಪವನ್ನಾಚರಿಸಿ ಸಿದ್ಧಿಯನ್ನು ಪಡೆದು ಜಗದ್ಧಾರಕನಾದ ಸೂರ್ಯನನ್ನು ತಮ್ಮ ಅಂಶ ವಿಭಾಗದಿಂದ ಪ್ರತಿಷ್ಠೆಮಾಡಿದರು. ಅದು ಮೊದಲ್ಗೊಂಡು ಆ ತೀರ್ಥವು ದ್ವಾದಶಾದಿತ್ಯತೀರ್ಥವೆಂದು ವಿಖ್ಯಾತವಾಯಿತು.

೧೨. ಪ್ರಳಯಕಾಲವು ಬರಲು ಆ ದ್ವಾದಶಾದಿತ್ಯರು ಆ ದ್ವಾದಶಾದಿತ್ಯತೀರ್ಥದಿಂದ ಉದ್ಭವಿಸುವರು.

೧೩–೨೨. ಇಂದ್ರನು ಪೂರ್ವದಿಕ್ಕಿನಲ್ಲಿಯೂ, ಧಾತನು ಆಗ್ನೇಯದಿಕ್ಕಿನಲ್ಲಿಯೂ, ಭಗನು ದಕ್ಷಿಣದಿಕ್ಕಿನಲ್ಲಿಯೂ, ತ್ವಷ್ಟನು ನೈಋತ್ಯದಿಕ್ಕಿನಲ್ಲಿಯೂ, ವರುಣನು ಪಶ್ಚಿಮದಿಕ್ಕಿನಲ್ಲಿಯೂ, ಮಿತ್ರನು ವಾಯುವ್ಯದಿಕ್ಕಿನಲ್ಲಿಯೂ,

ವರುಣಃ ಪಶ್ಚಿಮೇ ಭಾಗೇ ಮಿತ್ರಸ್ತು ವಾಯವೇ ತಥಾ ।
ವಿಷ್ಣುಶ್ಚ ಸೌಮ್ಯದಿಗ್ಭಾಗೇ ವಿವಸ್ವಾನೀಶಗೋಚರೇ ॥ ೧೪ ॥
ಊರ್ಧ್ವತಶ್ಚೈವ ಸವಿತಾ ಹ್ಯಧಃ ಪೂಷಾ ವಿಶೋಷಯನ್ ।
ಅಂಶುಮಾಂಸ್ತು ತಥಾ ವಿಷ್ಣುರ್ಮುಖತೋ ನಿರ್ಗತಂ ಜಗತ್ ॥ ೧೫ ॥
ಪ್ರದಹನ್ವೈ ನರಶ್ರೇಷ್ಠ ಬಭ್ರಮುಶ್ಚ ಇತಸ್ತತಃ ।
ಯಥೈವ ತೇ ಮಹಾರಾಜ ದಹಂತಿ ಸಕಲಂ ಜಗತ್ ॥ ೧೬ ॥
ತಥೈವ ದ್ವಾದಶಾದಿತ್ಯಾ ಭಕ್ತಾನಾಂ ಭಾವಸಾಧನಾಃ ।
ಪ್ರಾತರುತ್ಥಾಯ ಯಃ ಸ್ನಾತ್ವಾ ದ್ವಾದಶಾದಿತ್ಯಸಂಜ್ಞಿತಂ ॥ ೧೭ ॥
ಪಶ್ಯತೇ ದೇವದೇವೇಶಂ ಶೃಣು ತಸ್ಯೈವ ಯತ್ಫಲಂ ।
ವಾಚಿಕಂ ಮಾನಸಂ ಪಾಪಂ ಕರ್ಮಜಂ ಯತ್ಪುರಾಕೃತಂ ॥ ೧೮ ॥
ನಶ್ಯತೇ ತತ್ಕ್ಷಣಾದೇವ ದ್ವಾದಶಾದಿತ್ಯದರ್ಶನಾತ್ ।
ಪ್ರದಕ್ಷಿಣಂ ತು ಯಃ ಕುರ್ಯಾತ್ತಸ್ಯ ದೇವಸ್ಯ ಭಾರತ ॥ ೧೯ ॥
ಪ್ರದಕ್ಷಿಣೀಕೃತಾ ತೇನ ಪೃಥಿವೀ ನಾಽತ್ರ ಸಂಶಯಃ ।
ತತ್ರ ತೀರ್ಥೇ ತು ಸಪ್ತಮ್ಯಾಮುಪವಾಸೇನ ಯತ್ಫಲಂ ॥ ೨೦ ॥
ಅನ್ಯತ್ರ ಸಪ್ತಸಪ್ತಮ್ಯಾಂ ಲಭಂತಿ ನ ಲಭಂತಿ ಚ ।
ಷಷ್ಠ್ಯಾಂ ವಾರೇ ದಿನಕರೇ ದ್ವಾದಶಾದಿತ್ಯದರ್ಶನಾತ್ ॥ ೨೧ ॥
ಪ್ರದಕ್ಷಿಣಂ ತು ಯಃ ಕುರ್ಯಾತ್ತಸ್ಯ ಪಾಪಂ ತು ನಶ್ಯತಿ ।
ಅರೋಗೀ ಸಪ್ತಜನ್ಮಾನಿ ಭವೇದ್ವೈ ನಾಽತ್ರ ಸಂಶಯಃ ॥ ೨೨ ॥

---

ವಿಷ್ಣುವು ಉತ್ತರದಿಕ್ಕಿನಲ್ಲಿಯೂ, ವಿವಸ್ವಂತನು ಈಶಾನ್ಯದಿಕ್ಕಿನಲ್ಲಿಯೂ, ಸವಿತನು ಮೇಲೂ, ಪೂಷನು ಕೆಳಗೂ ಒಣಗಿಸುವರು. ಅಂಶುಮಂತನೂ, ವಿಷ್ಣುವೂ ಮುಖದಿಂದ ಪ್ರಕಟವಾಗಿರುವ ಈ ಪ್ರಪಂಚವನ್ನು ಸುಡುತ್ತ ಇಲ್ಲಿ ಅಲ್ಲಿ ಸಂಚರಿಸುವರು. ಆ ದ್ವಾದಶಾದಿತ್ಯರು ಪ್ರಪಂಚವನ್ನು ಸುಡುವಂತೆಯೇ ಭಕ್ತರ ಇಷ್ಟಾರ್ಥವನ್ನೂ ಸಾಧಿಸುವರು. ಬೆಳಗ್ಗೆ ಎದ್ದು ದ್ವಾದಶಾದಿತ್ಯರನ್ನು ನೋಡಿದವರಿಗಾಗುವ ಫಲವನ್ನು ಕೇಳು. ಅವರು ಹಿಂದೆ ಮಾಡಿದ ವಾಚಿಕ, ಮಾನಸಿಕ, ಕಾಯಿಕ ಪಾಪಗಳು ಕೂಡಲೆ ನಾಶವಾಗುವುವು. ಆ ದ್ವಾದಶಾದಿತ್ಯರನ್ನು ಪ್ರದಕ್ಷಿಣೆ ಮಾಡಿದವನು ಸಮಗ್ರ ಭೂಮಿಯನ್ನು ಪ್ರದಕ್ಷಿಣೆ ಮಾಡಿದವನಂತಾಗುವನು. ಆ ತೀರ್ಥದಲ್ಲಿ ಸಪ್ತಮಿ ದಿನ ಉಪವಾಸಮಾಡಿದ ಫಲವು ಇತರ ತೀರ್ಥಗಳಲ್ಲಿ ಏಳು ಸಪ್ತಮಿಗಳಲ್ಲಿಯೂ ಲಭಿಸುವುದಿಲ್ಲ. ಷಷ್ಠೀ ಭಾನುವಾರದಿನ ದ್ವಾದಶಾದಿತ್ಯರನ್ನು ದರ್ಶನಮಾಡಿ ಪ್ರದಕ್ಷಿಣೆಗೈದವನ ಪಾಪವು ಪರಿಹಾರವಾಗುವುದು. ಅವನು ಏಳು ಜನ್ಮಗಳಲ್ಲಿ ರೋಗವಿಲ್ಲದವನಾಗುವನು.

ಯಸ್ತು ಪ್ರದಕ್ಷಿಣಶತಂ ದದ್ಯಾದ್ಭಕ್ತ್ಯಾ ದಿನೇ ದಿನೇ ।
ದದ್ರೂಪಿಟಕಕುಷ್ಠಾನಿ ಮಂಡಲಾನಿ ವಿಚರ್ಚಿಕಾಃ ॥ ೨೩ ॥
ನಶ್ಯಂತಿ ವ್ಯಾಧಯಃ ಸರ್ವೇ ಗರುಡೇನೇವ ಪನ್ನಗಾಃ ।
ಪುತ್ರಪ್ರಾಪ್ತಿರ್ಭವೇತ್ತಸ್ಯ ಷಷ್ಠ್ಯಾಂ ವಾ ಸುರಸೇವನಾತ್ ॥ ೨೪ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ
ಪಂಚಮೇ ಅವಂತ್ಯಖಂಡೇ ತೃತೀಯೇ ರೇವಾಖಂಡೇ
"ದ್ವಾದಶಾದಿತ್ಯತೀರ್ಥಮಾಹಾತ್ಮ್ಯವರ್ಣನಂ"
ನಾಮ್ನೈಕನವತ್ಯುತ್ತರಶತತಮೋಽಧ್ಯಾಯಃ

---

೨೩–೨೪. ಆ ದ್ವಾದಶಾದಿತ್ಯರಿಗೆ ಪ್ರತಿದಿನವೂ ನೂರು ಪ್ರದಕ್ಷಿಣೆಗಳನ್ನು ಮಾಡಿದರೆ ದದ್ರು, ಪಿಟಕ, ಕುಷ್ಠ, ಮಂಡಲ, ವಿಚರ್ಚಿಕ ಈ ರೋಗಗಳ ಗರುಡನಿಂದ ಸರ್ಪಗಳು ನಾಶವಾದಂತೆ ನಾಶವಾಗುವುವು. ಷಷ್ಠೀ ದಿನ ಅವರನ್ನು ಸೇವಿಸುವುದರಿಂದ ಪುತ್ರಪ್ರಾಪ್ತಿಯಾಗುವುದು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ
ಶ್ರೀ ಸ್ಕಾಂದಮಹಾಪುರಾಣದ ಐದನೆಯ ಅವಂತ್ಯಖಂಡದ ಮೂರನೆಯ ರೇವಾಖಂಡದಲ್ಲಿ
"ದ್ವಾದಶಾದಿತ್ಯತೀರ್ಥಮಾಹಾತ್ಮ್ಯವರ್ಣನ"ವೆಂಬ
ನೂರತೊಂಬತ್ತೊಂದನೆಯವು ಅಧ್ಯಾಯ ಮುಗಿದುದು

॥ ಶ್ರೀಃ ॥

## ಅಥ ದ್ವಿನವತ್ಯುತ್ತರಶತತಮೋಽಧ್ಯಾಯಃ

### ಶ್ರೀಪತ್ಯುತ್ಪತ್ತಿವರ್ಣನಂ

ಶ್ರೀ ಮಾರ್ಕಂಡೇಯ ಉವಾಚ :—

ತಸ್ಯೈವಾನಂತರಂ ತಾತ ದೇವತೀರ್ಥಮನುತ್ತಮಂ ।
ದೃಷ್ಟ್ವಾ ತು ಶ್ರೀಪತಿಂ ಪಾಪೈರ್ಮುಚ್ಯತೇ ಮಾನವೋ ಭುವಿ ॥ ೧ ॥
ಮಹರ್ಷೇಸ್ತಸ್ಯ ಜಾಮಾತಾ ಭೃಗೋರ್ದೇವೋ ಜನಾರ್ದನಃ ॥ ೨ ॥

ಯುಧಿಷ್ಠಿರ ಉವಾಚ :—

ಕೋಽಯಂ ಶ್ರಿಯಃ ಪತಿರ್ದೇವೋ ದೇವಾನಾಮಧಿಪೋ ವಿಭುಃ ।
ಕಥಂ ಜನ್ಮಾಭವತ್ತಸ್ಯ ದೇವೇಷು ತ್ರಿಷು ವಾ ಮುನೇ ॥ ೩ ॥
ಸಂಬಂಧೀ ಚ ಕಥಂ ಜಾತೋ ಭೃಗುಣಾ ಸಹ ಕೇಶವಃ ।
ಏತದ್ವಿಸ್ತರತೋ ಬ್ರಹ್ಮನ್ವಕ್ತುಮರ್ಹಸಿ ಭಾರ್ಗವ ॥ ೪ ॥

ಮಾರ್ಕಂಡೇಯ ಉವಾಚ :—

ಸಂಕ್ಷೇಪಾತ್ಕಥಯಿಷ್ಯಾಮಿ ಸಾಧ್ವಸ್ಯ ಚರಿತಂ ಮಹತ್ ।
ನ ಹಿ ವಿಸ್ತರತೋ ವಕ್ತುಂ ಶಕ್ತಾಃ ಸರ್ವೇ ಮಹರ್ಷಯಃ ॥ ೫ ॥

---

### ಕನ್ನಡದ ಅನುವಾದ

#### ಶ್ರೀಪತ್ಯುತ್ಪತ್ತಿವರ್ಣನ

೧. ಮಾರ್ಕಂಡೇಯನು ಹೇಳುತ್ತಾನೆ:—ಅನಂತರ ಆ ದ್ವಾದಶಾದಿತ್ಯ ತೀರ್ಥದ ಹತ್ತಿರವಿರುವ ದೇವತೀರ್ಥಕ್ಕೆ ಹೋಗಿ ಅಲ್ಲಿರುವ ಶ್ರೀಪತಿಯನ್ನು ಕಂಡರೆ ಮಾನವನು ಪಾಪಮುಕ್ತನಾಗುವನು.

೨. ಶ್ರೀಪತಿಯಾದ ಆ ವಿಷ್ಣುವು ಭೃಗುಮಹರ್ಷಿಯ ಅಳಿಯನಾಗಿರುವನು.

೩. ಯುಧಿಷ್ಠಿರನು ಹೇಳುತ್ತಾನೆ:–ಶ್ರೀಪತಿಯೆಂಬವನಾರು? ತ್ರಿಮೂರ್ತಿಗಳಲ್ಲೊಬ್ಬನೂ, ದೇವೇಶನೂ ಆದ ಆ ವಿಷ್ಣುವು ಶ್ರೀಪತಿಯಾಗಿ ಹೇಗೆ ಹುಟ್ಟಿದನು?

೪. ಆ ಕೇಶವನು ಭೃಗುಮುನಿಗೆ ಹೇಗೆ ಸಂಬಂಧಿಕನಾದನು? ನೀನು ಇದನ್ನೆಲ್ಲ ವಿಸ್ತಾರವಾಗಿ ಹೇಳು.

೫. ಮಾರ್ಕಂಡೇಯನು ಹೇಳುತ್ತಾನೆ:—ಒಳ್ಳೆಯದು. ಈತನ ಮಹಾ ಚರಿತೆಯನ್ನು ಸಂಕ್ಷೇಪವಾಗಿ ಹೇಳುವೆನು. ಇದನ್ನು ವಿಸ್ತಾರವಾಗಿ ಹೇಳಲು ಸಮಸ್ತ ಮಹರ್ಷಿಗಳೂ ಶಕ್ತರಲ್ಲ.

ನಾರಾಯಣಸ್ಯ ನಾಭ್ಯಬ್ಜಾಜ್ಜಾತೋ ದೇವಶ್ಚತುರ್ಮುಖಃ ।
ತಸ್ಯ ದಕ್ಷೋಽಂಗಜೋ ರಾಜನ್ದಕ್ಷಿಣಾಂಗುಷ್ಠಸಂಭವಃ ॥ ೬ ॥
ಧರ್ಮಃ ಸ್ತನಾಂತಾತ್ಸಂಜಾತಸ್ತಸ್ಯ ಪುತ್ರೋಽಭವತ್ಕಿಲ ।
ನಾರಾಯಣಸಹಾಯೋಽಸಾವಜೋಽಪಿ ಭರತರ್ಷಭ ॥ ೭ ॥
ಮರುತ್ವತೀ ವಸುರ್ಜ್ಞಾನಾ ಲಂಬಾ ಭಾನುಮತೀ ಸತೀ ।
ಸಂಕಲ್ಪಾ ಚ ಮುಹೂರ್ತಾ ಚ ಸಾಧ್ಯಾ ವಿಶ್ವಾವತೀ ಕಕುಪ್ ॥ ೮ ॥
ಧರ್ಮಪತ್ನ್ಯೋ ದಶೈವೈತಾ ದಾಕ್ಷಾಯಣ್ಯೋ ಮಹಾಪ್ರಭಾಃ ।
ತಾಸಾಂ ಸಾಧ್ಯಾ ಮಹಾಭಾಗಾ ಪುತ್ರಾನಜನಯನ್ನೃಪ ॥ ೯ ॥
ನರೋ ನಾರಾಯಣಶ್ಚೈವ ಹರಿಃ ಕೃಷ್ಣಸ್ತಥೈವ ಚ ।
ವಿಷ್ಣೋರಂಶಾಂಶಕಾ ಹ್ಯೇತೇ ಚತ್ವಾರೋ ಧರ್ಮಸೂನವಃ ॥ ೧೦ ॥
ತಥಾ ನಾರಾಯಣನರೌ ಗಂಧಮಾದನಪರ್ವತೇ ।
ಆತ್ಮನ್ಯಾತ್ಮಾನಮಾಧಾಯ ತೇಪತುಃ ಪರಮಂ ತಪಃ ॥ ೧೧ ॥
ಧ್ಯಾಯಮಾನಾವನೌಪಮ್ಯಂ ಸ್ವಂ ಕಾರಣಮಕಾರಣಂ ।
ವಾಸುದೇವಮನಿರ್ದೇಶ್ಯಮಪ್ರತರ್ಕ್ಯಮನಂತರಂ ॥ ೧೨ ॥
ಯೋಗಯುಕ್ತೌ ಮಹಾತ್ಮಾನಾವಾಸ್ಥಿತಾವುರುತಾಪಸೌ ।
ತಯೋಸ್ತಪಃಪ್ರಭಾವೇಣ ನ ತತಾಪ ದಿವಾಕರಃ ॥ ೧೩ ॥

---

೬–೭. ನಾರಾಯಣನ ನಾಭೀಕಮಲದಿಂದ ಚತುರ್ಮುಖ ಬ್ರಹ್ಮನು ಜನಿಸಿದನು. ದಕ್ಷನು ಅವನ ಬಲಗೈಯ ಅಂಗುಷ್ಠದಿಂದಲೂ, ಧರ್ಮನು ಸ್ತನಮಧ್ಯದಿಂದಲೂ ಹುಟ್ಟಿದರು. ಈ ಅಜನು ನಾರಾಯಣನಿಗೆ ಸಹಾಯಕನಾಗಿದ್ದನು.

೮–೧೦. ಮರುತ್ವತೀ, ವಸು, ಜ್ಞಾನಾಲಂಬಾ, ಭಾನುಮತೀ, ಸತೀ, ಸಂಕಲ್ಪಾ, ಮುಹೂರ್ತಾ, ಸಾಧ್ಯಾ, ವಿಶ್ವಾವತೀ, ಕಕುಪ್ ಎಂಬ ಹತ್ತು ಮಂದಿ ಅತ್ಯಂತ ಕಾಂತಿಯುಳ್ಳ ದಕ್ಷನ ಮಕ್ಕಳು ಧರ್ಮನ ಪತ್ನಿಯರಾದರು. ಅವರಲ್ಲಿ ಮಹಾಭಾಗ್ಯವಂತಳಾದ ಸಾಧ್ಯಳು ನರ, ನಾರಾಯಣ, ಹರಿ, ಕೃಷ್ಣ ಎಂಬ ನಾಲ್ಕು ಮಂದಿ ವಿಷ್ಣುವಿನ ಅಂಶವುಳ್ಳ ಮಕ್ಕಳನ್ನು ಹಡೆದಳು.

೧೧. ನಾರಾಯಣ ನರರು ಗಂಧಮಾದನ ಪರ್ವತದಲ್ಲಿ ತಮ್ಮನ್ನು ತಾವೇ ಧ್ಯಾನಿಸುತ್ತ ಅತಿಶಯವಾದ ತಪವನ್ನಾಚರಿಸಿದರು.

೧೨–೧೪. ಅವರು ಸಾದೃಶ್ಯವಿಲ್ಲದವನೂ, ಜಗತ್ಕಾರಣನೂ, ಕಾರಣರಹಿತನೂ, ಅಪರಿಚ್ಛಿನ್ನನೂ, ಊಹಿಸಲಶಕ್ಯನೂ, ಆದ ವಾಸುದೇವನನ್ನು ಧ್ಯಾನಿಸುತ್ತ ಉತ್ಕೃಷ್ಟಮುನಿಗಳಾದರು. ಅವರ ತಪಸ್ಸಿನ ಪ್ರಭಾವದಿಂದ

ನವಾಹ ಶಂಕಿತೋ ವಾಯುಃ ಸುಖಸ್ಪರ್ಶೋಽಪ್ಯಶಂಕಿತಃ ।
ಶಿಶಿರೋಽಭವದತ್ಯರ್ಥಂ ಜ್ವಲನ್ನಪಿ ವಿಭಾವಸುಃ ॥ ೧೪ ॥
ಸಿಂಹವ್ಯಾಘ್ರಾದಯಃ ಸೌಮ್ಯಾಶ್ಚೇರುಃ ಸಹ ಮೃಗೈರ್ಗಿರೌ ।
ತಯೋರ್ಗೌರಿವ ಭಾರಾರ್ತಾ ಪೃಥಿವೀ ಪೃಥಿವೀಪತೇ ॥ ೧೫ ॥
ಚೇರುಶ್ಚ ಭೂಧರಾಶ್ಚೈವ ಚುಕ್ಷುಭೇ ಚ ಮಹೋದಧಿಃ ।
ದೇವಾಶ್ಚ ಸ್ವೇಷು ಧಿಷ್ಣ್ಯೇಷು ನಿಷ್ಪ್ರಭೇಷು ಹತಪ್ರಭಾಃ ।
ಬಭೂವುರವನೀಪಾಲ ಪರಮಂ ಕ್ಷೋಭಮಾಗತಾಃ ॥ ೧೬ ॥
ದೇವರಾಜಸ್ತಥಾ ಶಕ್ರಃ ಸಂತಪ್ತಸ್ತಪಸಾ ತಯೋಃ ।
ಯುಯೋಜಾಪ್ಸರಸಸ್ತತ್ರ ತಯೋರ್ವಿಘ್ನಚಿಕೀರ್ಷಯಾ ॥ ೧೭ ॥

ಇಂದ್ರ ಉವಾಚ:—

ರಂಭೇ ತಿಲೋತ್ತಮೇ ಕುಬ್ಜೇ ಘೃತಾಚಿ ಲಲಿತೇ ಶುಭೇ ।
ಪ್ರಮ್ಲೋಚೇ ಸುಭ್ರು ಸುಮ್ಲೋಚೇ ಸೌರಭೇಯಿ ಮಹೋದ್ಧತೇ ॥ ೧೮ ॥
ಅಲಂಬುಷೇ ಮಿಶ್ರಕೇಶಿ ಪುಂಡರೀಕೇ ವರೂಥಿನಿ ।
ವಿಲೋಕನೀಯಂ ಬಿಭ್ರಾಣಾ ವಪುರ್ಮನ್ಮಥಬೋಧನಂ ॥ ೧೯ ॥
ಗಂಧಮಾದನಮಾಸಾದ್ಯ ಕುರುಧ್ವಂ ವಚನಂ ಮಮ ।
ನರನಾರಾಯಣೌ ತತ್ರ ತಪೋದೀಕ್ಷಾನ್ವಿತೌ ದ್ವಿಜೌ ॥ ೨೦ ॥

---

ಸೂರ್ಯನು ತಪಿಸಲಿಲ್ಲ. ಸುಖಸ್ಪರ್ಶನಾದ ವಾಯುವು ಶಂಕೆಯಿಂದ ಬೀಸಿದನು. ಅಗ್ನಿಯು ಉರಿಯುತ್ತಿದ್ದರೂ ತಣ್ಣಗಾಗಿದ್ದನು.

೧೫. ಸಿಂಹವ್ಯಾಘ್ರಾದಿಗಳು ಬೆಟ್ಟದಲ್ಲಿ ಮೃಗಗಳೊಡನೆ ಸೌಮ್ಯವಾಗಿ ಸಂಚರಿಸಿದುವು. ಅವರಿಂದ ಭೂಮಿಯು ಗೋವಿನಂತೆ ಭಾರಪೀಡಿತವಾಯಿತು.

೧೬. ಬೆಟ್ಟಗಳು ಚಲಿಸಿದುವು. ಸಮುದ್ರವು ಅಲ್ಲೋಲಕಲ್ಲೋಲವಾಯಿತು. ದೇವತೆಗಳು ಕಾಂತಿಯಿಲ್ಲದ ತಮ್ಮ ವಾಸಸ್ಥಳಗಳಲ್ಲಿ ಕಾಂತಿಹೀನರಾಗಿ ಅತ್ಯಂತ ಕ್ಷೋಭೆಗೊಂಡರು.

೧೭. ಅವರ ತಪಸ್ಸಿನಿಂದ ಸಂತಾಪಗೊಂಡ ಇಂದ್ರನು ಅವರಿಗೆ ವಿಘ್ನವನ್ನುಂಟುಮಾಡಲು ಅಪ್ಸರಸ್ತ್ರೀಯರನ್ನು ನೇಮಿಸಿದನು.

೧೮–೨೨. ಇಂದ್ರನು ಹೇಳುತ್ತಾನೆ:—ರಂಭೇ! ತಿಲೋತ್ತಮೇ! ಕುಬ್ಜೇ! ಘೃತಾಚಿ! ಪ್ರಮ್ಲೋಚೆ! ಸುಮ್ಲೋಚೆ! ಸೌರಭೇಯಿ! ಅಲಂಬುಷೇ! ಮಿಶ್ರಕೇಶಿ! ಪುಂಡರೀಕೇ! ವರೂಥಿನಿ! ನೀವೆಲ್ಲರೂ ಸುಂದರವೂ, ಮನ್ಮಥೋದ್ರೇಕಕರವೂ ಆದ ಶರೀರವನ್ನು ಧರಿಸಿದವರಾಗಿ ಗಂಧಮಾದನಪರ್ವತಕ್ಕೆ ಹೋಗಿ ನನ್ನ ಮಾತನ್ನು ನಡೆಯಿಸಿರಿ. ಅಲ್ಲಿ ತಪೋದೀಕ್ಷೆಯಿಂದ ಕೂಡಿದ ಧರ್ಮತನಯರಾದ ನರನಾರಾಯಣರೆಂಬ ದ್ವಿಜರು ದುಶ್ಚರವಾದ ತಪಸ್ಸನ್ನು ಮಾಡು

ತೇಪಾತೇ ಧರ್ಮತನಯೌ ತಪಃ ಪರಮದುಶ್ಚರಂ ।
ತಾವಸ್ಮಾಕಂ ವರಾರೋಹಾಃ ಕುರ್ವಾಣೌ ಪರಮಂ ತಪಃ ॥ ೨೧ ॥
ಕರ್ಮಾತಿಶಯದುಃಖಾರ್ತಿಪ್ರದಾವಾಯತಿನಾಶನೌ ।
ತದ್ಗಚ್ಛತ ನ ಭೀಃ ಕಾರ್ಯಾ ಭವತೀಭಿರಿದಂ ವಚಃ ॥ ೨೨ ॥
ಸ್ಮರಃ ಸಹಾಯೋ ಭವಿತಾ ವಸಂತಶ್ಚ ವರಾಂಗನಾಃ ।
ರೂಪಂ ವಯಃ ಸಮಾಲೋಕ್ಯ ಮದನೋದ್ದೀಪನಂ ಪರಂ ।
ಕಂದರ್ಪವಶಮಭ್ಯೇತಿ ವಿವಶಃ ಕೋ ನ ಮಾನವಃ ॥ ೨೩ ॥

ಮಾರ್ಕಂಡೇಯ ಉವಾಚ:—

ಇತ್ಯುಕ್ತ್ವಾ ದೇವರಾಜೇನ ಮದನೇನ ಸಮಂ ತದಾ ।
ಜಗ್ಮುರಪ್ಸರಸಃ ಸರ್ವಾ ವಸಂತಶ್ಚ ಮಹೀಪತೇ ॥ ೨೪ ॥
ಗಂಧಮಾದನಮಾಸಾದ್ಯ ಪುಂಸ್ಕೋಕಿಲಕುಲಾಕುಲಂ ।
ಚಚಾರ ಮಾಧವೋ ರಮ್ಯಂ ಪ್ರೋತ್ಫುಲ್ಲವನಪಾದಪಂ ॥ ೨೫ ॥
ಪ್ರವವೌ ದಕ್ಷಿಣಾಶಾಯಾಂ ಮಲಯಾಽನುಗತೋಽನಿಲಃ ।
ಭೃಂಗಮಾಲಾತರುರವೈ ರಮಣೀಯಮಭೂದ್ವನಂ ॥ ೨೬ ॥
ಗಂಧಶ್ಚ ಸುರಭಿಃ ಸದ್ಯೋ ವನರಾಜಿಸಮುದ್ಭವಃ ।
ಕಿನ್ನರೋರಗಯಕ್ಷಾಣಾಂ ಬಭೂವ ಘ್ರಾಣತರ್ಪಣಃ ॥ ೨೭ ॥

---

ತ್ತಿರುವರು. ಅವರು ನಮಗೆ ಅತ್ಯಂತ ದುಃಖವನ್ನೀಯುವವರೂ, ಮುಂದಿನ ಸುಖವನ್ನು ಹಾಳುಮಾಡುವವರೂ ಆಗಿರುವರು. ಆದ್ದರಿಂದ ನೀವು ಅಲ್ಲಿಗೆ ಹೋಗಿರಿ, ಹೆದರಬೇಡಿರಿ.

೨೩. ಉತ್ತಮ ತರುಣಿಯರೆ! ನಿಮಗೆ ಮನ್ಮಥನೂ, ವಸಂತನೂ ಸಹಾಯವನ್ನು ಮಾಡುವರು. ಮನ್ಮಥೋದ್ದೀಪಕವಾದ ನಿಮ್ಮ ಸೌಂದರ್ಯ, ವಯಸ್ಸುಗಳನ್ನು ನೋಡಿ ಯಾವ ಮನುಷ್ಯನು ತಾನೆ ನಿಮಗಧೀನನಾಗುವುದಿಲ್ಲ?

೨೪. ಮಾರ್ಕಂಡೇಯನು ಹೇಳುತ್ತಾನೆ:—ಇಂದ್ರನು ಹೀಗೆ ಹೇಳಲು ಅಪ್ಸರೆಯರು ವಸಂತ ಮನ್ಮಥರೊಡನೆ ಅಲ್ಲಿಗೆ ಹೊರಟರು.

೨೫. ವಸಂತನು ಮನೋಹರವೂ, ಅರಳಿದ ಹೂವುಗಳುಳ್ಳ ಕಾಡಿನ ಮರಗಳುಳ್ಳುದೂ, ಕೋಗಿಲೆಗಳ ದನಿಯಿಂದ ಕೂಡಿರುವುದೂ, ಆದ ಗಂಧಮಾದನ ಪರ್ವತಕ್ಕೆ ಹೋಗಿ ಸಂಚರಿಸಿದನು.

೨೬. ಮಲಯಮಾರುತವು ದಕ್ಷಿಣದಿಕ್ಕಿನಿಂದ ಬೀಸಿತು. ತುಂಬಿಗಳ ಧ್ವನಿಯಿಂದ ವನವು ಮನೋಹರವಾಯಿತು.

೨೭. ಕಾಡುಗಳ ಸಾಲುಗಳಿಂದುಂಟಾದ ಪರಿಮಳವು ಕಿನ್ನರ, ಉರಗ, ಯಕ್ಷರ ಮೂಗಿಗೆ ಸಂತೋಷವನ್ನುಂಟುಮಾಡಿತು.

ವರಾಂಗನಾಶ್ಚ ತಾಃ ಸರ್ವಾ ನರನಾರಾಯಣಾವೃಷೀ ।
ವಿಲೋಭಯಿತುಮಾರಬ್ಧಾ ವಾಗಂಗಲಲಿತಸ್ಮಿತೈಃ ॥ ೨೮ ॥
ಜಗೌ ಮನೋಹರಂ ಕಾಚಿನ್ನನರ್ತ ತತ್ರ ಚಾಽಪ್ಸರಾಃ ।
ಅವಾದಯತ್ತಥೈವಾಽನ್ಯಾ ಮನೋಹರತರಂ ನೃಪ ॥ ೨೯ ॥
ಹಾವೈರ್ಭಾವೈಃ ಸ್ಮಿತೈರ್ಹಾಸ್ಯೈಸ್ತಥಾಽನ್ಯಾ ವಲ್ಗುಭಾಷಿತೈಃ ।
ತಯೋಃ ಕ್ಷೋಭಾಯ ತನ್ವಂಗ್ಯಶ್ಚಕ್ರುರುದ್ಯಮಮಂಗನಾಃ ॥ ೩೦ ॥
ತಥಾಽಪಿ ನ ತಯೋಃ ಕಶ್ಚಿನ್ಮನಸಃ ಪೃಥಿವೀಪತೇ ।
ವಿಕಾರೋಽಭವದಧ್ಯಾತ್ಮಪಾರಸಂಪ್ರಾಪ್ತಚೇತಸೋಃ ॥ ೩೧ ॥
ನಿವಾತಸ್ಥೌ ಯಥಾ ದೀಪಾವಕಂಪೌ ನೃಪ ತಿಷ್ಠತಃ ।
ವಾಸುದೇವಾರ್ಪಣಸ್ವಸ್ಥೇ ತಥೈವ ಮನಸೀ ತಯೋಃ ॥ ೩೨ ॥
ಪೂರ್ಯಮಾಣೋಽಪಿ ಚಾಂಭೋಭಿರ್ಭುವಮನ್ಯಾಂ ಮಹೋದಧಿಃ ।
ಯಥಾ ನ ಯಾತಿ ಸಂಕ್ಷೋಭಂ ತಥಾ ತನ್ಮಾನಸಂ ಕ್ವಚಿತ್ ॥ ೩೩ ॥
ಸರ್ವಭೂತಹಿತಂ ಬ್ರಹ್ಮ ವಾಸುದೇವಮಯಂ ಪರಂ ।
ಮನ್ಯಮಾನೌ ನ ರಾಗಸ್ಯ ದ್ವೇಷಸ್ಯ ಚ ವಶಂಗತೌ ॥ ೩೪ ॥

---

೨೮. ಸುಂದರಿಯರಾದ ಅಪ್ಸರೆಯರು ನರನಾರಾಯಣ ಋಷಿಗಳ ಮನಸ್ಸನ್ನು ಮಾತು, ಅಂಗ, ಮನೋಹರವಾದ ಮಂದಹಾಸ ಇವುಗಳಿಂದ ಸೆಳೆಯಲಾರಂಭಿಸಿದರು.

೨೯. ಒಬ್ಬಳು ಇಂಪಾಗಿ ಹಾಡಿದಳು. ಇನ್ನೊಬ್ಬಳು ಕುಣಿದಳು. ಮತ್ತೊಬ್ಬಳು ಮನೋಹರವಾಗಿ ವಾದ್ಯಮಾಡಿದಳು.

೩೦. ಆ ಅಂಗನೆಯರು ಹಾವ, ಭಾವ, ಹಾಸ್ಯ, ಮನೋಹರವಾದ ಮಾತು ಇವುಗಳಿಂದ ಆ ಋಷಿಗಳ ಮನಸ್ಸನ್ನು ಚಂಚಲಗೊಳಿಸಲು ಉದ್ಯುಕ್ತರಾದರು.

೩೧. ಹಾಗಾದರೂ ಪರಮಾತ್ಮನ ಧ್ಯಾನದಲ್ಲಿ ನಿರತರಾದ ಅವರ ಮನಸ್ಸಿನಲ್ಲಿ ಯಾವ ವಿಕಾರವೂ ಉಂಟಾಗಲಿಲ್ಲ.

೩೨. ಗಾಳಿಯಿಲ್ಲದ ಸ್ಥಳದಲ್ಲಿರುವ ದೀಪವು ಅಲ್ಲಾಡದೆ ಇರುವಂತೆ ವಾಸುದೇವನಲ್ಲಿ ನಟ್ಟಿರುವ ಅವರ ಮನಸ್ಸು ನಿಶ್ಚಲವಾಗಿದ್ದಿತು.

೩೩. ಸಮುದ್ರವು ಸತತವೂ ನೀರಿನಿಂದ ತುಂಬುತ್ತಿದ್ದರೂ ಬೇರೆ ಭೂಮಿಗೆ ಹೋಗದೆ ನಿಶ್ಚಲವಾಗಿರುವಂತೆ ಅವರ ಮನಸ್ಸು ಚಂಚಲವಾಗಲಿಲ್ಲ.

೩೪. ವಾಸುದೇವರೂಪನಾದ ಪರಬ್ರಹ್ಮನು ಸಕಲ ಪ್ರಾಣಿಗಳ ಹಿತದಲ್ಲಿ ನಿರತನಾಗಿರುವನೆಂದು ತಿಳಿದ ಅವರು ರಾಗದ್ವೇಷಗಳಿಗೆ ಅಧೀನರಾಗಲಿಲ್ಲ.

ಸ್ಮರೋಽಪಿ ನ ಶಶಾಕಾಽಥ ಪ್ರವೇಷ್ಟುಂ ಹೃದಯಂ ತಯೋಃ ।
ವಿದ್ಯಾಮಯಂ ದೀಪಯುತಮಂಧಕಾರ ಇವಾಲಯಂ ॥ ೩೫ ॥
ಪುಷ್ಪೋಜ್ವಲಾಂಸ್ತರುವರಾನ್ವಸಂತಂ ದಕ್ಷಿಣಾನಿಲಂ ।
ತಾಶ್ಚೈವಾಪ್ಸರಸಃ ಸರ್ವಾಃ ಕಂದರ್ಪಂ ಚ ಮಹಾಮುನೀ ॥ ೩೬ ॥
ಯಚ್ಛಾರಬ್ಧಂ ತಪಸ್ತಾಭ್ಯಾಮಾತ್ಮಾನಂ ಗಂಧಮಾದನಂ ।
ದದರ್ಶಾತೇಽಖಿಲಂ ರೂಪಂ ಬ್ರಹ್ಮಣಃ ಪುರುಷರ್ಷಭ ॥ ೩೭ ॥
ದಾಹಾಯ ನಾಽಮಲೋ ವಹ್ನೇರ್ನಾಪಃ ಕ್ಲೇದಾಯ ಚಾಂಭಸಃ ।
ತದ್ದ್ರವ್ಯಮೇವ ತದ್ದ್ರವ್ಯವಿಕಾರಾಯ ನ ವೈ ಯತಃ ॥ ೩೮ ॥
ತತೋ ವಿಜ್ಞಾಯ ವಿಜ್ಞಾಯ ಪರಂ ಬ್ರಹ್ಮಸ್ವರೂಪತಃ ।
ಮಧುಕಂದರ್ಪಯೋಷಿತ್ಸು ವಿಕಾರೋ ನಾಽಭವತ್ತಯೋಃ ॥ ೩೯ ॥
ತತೋ ಗುರುತರಂ ಯತ್ನಂ ವಸಂತಮದನೌ ನೃಪ ।
ಚಕ್ರಾತೇ ತಾಶ್ಚ ತನ್ವಂಗ್ಯಸ್ತತ್ಕ್ಷೋಭಾಯ ಪುನಃ ಪುನಃ ॥ ೪೦ ॥
ಅಥ ನಾರಾಯಣೋ ಧೈರ್ಯಂ ಸಂಧಾರ್ಯೋದೀರ್ಣಮಾನಸಃ ।
ಊರೋರುತ್ಪಾದಯಾಮಾಸ ವರಾಂಗೀಮಬಲಾಂ ತದಾ ॥ ೪೧ ॥
ತ್ರೈಲೋಕ್ಯಸುಂದರೀರತ್ನಮಶೇಷಮವನೀಪತೇ ।
ಗುಣೈರ್ಲಾಘವಮಭ್ಯೇತಿ ಯಸ್ಯಾಃ ಸಂದರ್ಶನಾದನು ॥ ೪೨ ॥

---

೩೫. ಮನ್ಮಥನೂ ಜ್ಞಾನದಿಂದ ತುಂಬಿರುವ ಅವರ ಹೃದಯವನ್ನು ದೀಪವುಳ್ಳ ಮನೆಯನ್ನು ಕತ್ತಲೆಯು ಹೇಗೋ ಹಾಗೆ ಪ್ರವೇಶಿಸಲಿಲ್ಲ.

೩೬–೩೭. ತಪಸ್ಸನ್ನಾಚರಿಸುವ ಆ ಮುನಿಗಳು ಹೂವುಗಳಿಂದ ಪ್ರಕಾಶಿಸುವ ಮರಗಳನ್ನೂ, ವಸಂತನನ್ನೂ, ದಕ್ಷಿಣ ಮಾರುತವನ್ನೂ, ಎಲ್ಲಾ ಅಪ್ಸರೆಯರನ್ನೂ, ಮನ್ಮಥನನ್ನೂ ಪರಬ್ರಹ್ಮನೆಂದು ತಿಳಿದರು.

೩೮. ಅಗ್ನಿಯು ಸುಡುವುದಕ್ಕೂ, ನೀರು ಒದ್ದೆಮಾಡುವುದಕ್ಕೂ ಸಮರ್ಥವಾಗಲಿಲ್ಲ. ಆ ದ್ರವ್ಯವೇ ದ್ರವ್ಯದ ವಿಕಾರದಲ್ಲಿ ಸಮರ್ಥವಾಗಲಿಲ್ಲ.

೩೯. ಪರಬ್ರಹ್ಮನನ್ನು ಸಂಪೂರ್ಣವಾಗಿ ಅರಿತ ಅವರು ವಸಂತ, ಮನ್ಮಥ, ಮತ್ತು ಆ ಸ್ತ್ರೀಯರು ಇವರಲ್ಲಿ ವಿಕಾರಗೊಳ್ಳಲಿಲ್ಲ.

೪೦. ಅನಂತರ ವಸಂತ, ಮನ್ಮಥ, ಆ ಅಪ್ಸರೆಯರು ಅವರ ಮನಸ್ಸನ್ನು ಚಂಚಲಗೊಳಿಸಲು ಅತಿಶಯವಾಗಿ ಪ್ರಯತ್ನಿಸಿದರು.

೪೧–೪೨. ತರುವಾಯ ಉತ್ಕೃಷ್ಟವಾದ ಸ್ಥಿರಮನಸ್ಸುಳ್ಳ ನಾರಾಯಣನು ಧೈರ್ಯವನ್ನು ತಾಳಿ ತನ್ನ ತೊಡೆಯಿಂದ ಉತ್ತಮಳಾದ ಓರ್ವ ಸ್ತ್ರೀಯನ್ನು ಉಂಟುಮಾಡಿದನು. ತ್ರೈಲೋಕ್ಯಸುಂದರಿಯಾದ ಆ ಹೆಂಗಸನ್ನು ನೋಡಿದ ಕೂಡಲೆ ಯುವತಿಯರು ಅವಳ ಗುಣಗಳಿಂದ ಲಾಘವವನ್ನು ಹೊಂದಿದರು.

ತಾಂ ವಿಲೋಕ್ಯ ಮಹೀಪಾಲ ಚಕಂಪೇ ಮನಸಾಽನಿಲಃ ।
ವಸಂತೋ ವಿಸ್ಮಯಂ ಯಾತಃ ಸ್ಮರಃ ಸಸ್ಮಾರ ಕಿಂಚನ ॥ ೪೩ ॥
ರಂಭಾತಿಲೋತ್ತಮಾದ್ಯಾಶ್ಚ ವೈಲಕ್ಷ್ಯಂ ದೇವಯೋಷಿತಃ ।
ನ ರೇಜುರವನೀಪಾಲ ತಲ್ಲಕ್ಷ್ಯಹೃದಯೇಕ್ಷಣಾಃ ॥ ೪೪ ॥
ತತಃ ಕಾಮೋ ವಸಂತಶ್ಚ ಪಾರ್ಥಿವಾಽಪ್ಸರಸಶ್ಚ ತಾಃ ।
ಪ್ರಣಮ್ಯ ಭಗವಂತೌ ತೌ ತುಷ್ಟುವುರ್ಮುನಿಸತ್ತಮೌ ॥ ೪೫ ॥

ವಸಂತಕಾಮಾಽಪ್ಸರಸ ಊಚುಃ:—

ಪ್ರಸೀದತು ಜಗದ್ಧಾತಾ ಯಸ್ಯ ದೇವಸ್ಯ ಮಾಯಯಾ ।
ಮೋಹಿತಾಃ ಸ್ಮ ವಿಜಾನೀಮೋ ನಾಂತರಂ ವಿದ್ಯತೇ ದ್ವಯೋಃ ॥ ೪೬ ॥
ಪ್ರಸೀದತು ಸ ವಾಂ ದೇವೋ ಯಸ್ಯ ರೂಪಮಿದಂ ದ್ವಿಧಾ ।
ಧಾಮಭೂತಸ್ಯ ಲೋಕಾನಾಮನಾದೇರಪ್ರತಿಷ್ಠಿತಃ ॥ ೪೭ ॥
ನರನಾರಾಯಣೌ ದೇವೌ ಶಂಖಚಕ್ರಾಯುಧಾವುಭೌ ।
ಆಸ್ತಾಂ ಪ್ರಸಾದಸುಮುಖಾವಸ್ಮಾಕಮಪರಾಧಿನಾಂ ॥ ೪೮ ॥
ನಿಧಾನಂ ಸರ್ವವಿದ್ಯಾನಾಂ ಸರ್ವಪಾಪವನಾನಲಃ ।
ನಾರಾಯಣೋಽತೋ ಭಗವಾನ್ ಸರ್ವಪಾಪಂ ವ್ಯಪೋಹತು ॥ ೪೯ ॥

---

೪೩. ಮಹಾರಾಜ! ಮಾರುತನು ಅವಳನ್ನು ನೋಡಿ ಚಂಚಲಮನಸ್ಕನಾದನು. ವಸಂತನು ಆಶ್ಚರ್ಯಗೊಂಡನು. ಮನ್ಮಥನು ಏನನ್ನೋ ಸ್ಮರಿಸಿದನು.

೪೪. ರಂಭೆ, ತಿಲೋತ್ತಮೆ ಮೊದಲಾದ ದೇವಸ್ತ್ರೀಯರು ಅವಳ ಅಧೀನವಾದ ಮನಸ್ಸು, ಕಣ್ಣುಗಳುಳ್ಳವರಾಗಿ ಲಜ್ಜೆಗೊಂಡು ವಿರಾಜಿಸಲಿಲ್ಲ.

೪೫. ಬಳಿಕ ವಸಂತ, ಕಾಮ, ಅಪ್ಸರೆಯರು ಆ ನರನಾರಾಯಣರನ್ನು ವಂದಿಸಿ ಹೀಗೆ ಸ್ತುತಿಸಿದರು.

೪೬. ವಸಂತ ಕಾಮ ಅಪ್ಸರೆಯರು ಹೇಳುತ್ತಾರೆ:—ಜಗದ್ಧಾರಕನಾದ ನಾರಾಯಣನು ಪ್ರಸನ್ನನಾಗಲಿ. ನಿನ್ನ ಮಾಯೆಯಿಂದ ಮೋಹಗೊಂಡ ನಾವು ನಿಮ್ಮಿರ್ವರಲ್ಲಿ ಭೇದವನ್ನರಿಯುವುದಿಲ್ಲ.

೪೭. ಲೋಕಗಳಿಗೆ ಆಧಾರನೂ, ಅವ್ಯಂತರಹಿತನೂ ಆದ ಯಾವ ನಾರಾಯಣನ ರೂಪವು ದ್ವಿವಿಧನಾಗಿರುವುದೊ, ಆ ಸ್ವಾಮಿಯು ಪ್ರಸನ್ನನಾಗಲಿ.

೪೮. ಶಂಖ ಚಕ್ರಗಳನ್ನು ಧರಿಸಿದ ನರನಾರಾಯಣರು ಅಪರಾಧಿಗಳಾದ ನಮ್ಮಲ್ಲಿ ಅನುಗ್ರಹದಿಂದ ಸುಮುಖರಾಗಲಿ.

೪೯. ಸಮಸ್ತ ವಿದ್ಯೆಗಳಿಗೆ ನಿಧಿಯೂ, ಸಮಸ್ತ ಪಾಪಗಳೆಂಬ ವನಕ್ಕೆ ಅಗ್ನಿಯೂ ಆದ ನಾರಾಯಣನು ನಮ್ಮ ಸಕಲ ಪಾಪಗಳನ್ನು ಪರಿಹರಿಸಲಿ.

ಶಾರ್ಙ್ಗಚಿಹ್ನಾಯುಧಃ ಶ್ರೀಮಾನಾತ್ಮಜ್ಞಾನಮಯೋಽನಘಃ ।
ನರಃ ಸಮಸ್ತ ಪಾಪಾನಿ ಹತಾತ್ಮಾ ಸರ್ವದೇಹಿನಾಂ ॥ ೫೦ ॥
ಜಟಾಕಲಾಪಬದ್ಧೋಽಯಮನಯೋರ್ನಃ ಕ್ಷಮಾವತೋಃ ।
ಸೌಮ್ಯಾಸ್ಯ ದೃಷ್ಟಿಃ ಪಾಪಾನಿ ಹಂತುಂ ಜನ್ಮಾರ್ಜಿತಾನಿ ವೈ ॥ ೫೧ ॥
ತಥಾತ್ಮವಿದ್ಯಾದೋಷೇಣ ಯೋಽಪರಾಧಃ ಕೃತೋ ಮಹಾನ್ ।
ತ್ರೈಲೋಕ್ಯವಂದ್ಯೌ ಯೌ ನಾಥೌ ವಿಲೋಭಯಿತುಮಾಗತಾಃ ॥ ೫೨ ॥
ಪ್ರಸೀದ ದೇವ ವಿಜ್ಞಾನಘನ ಮೂಢದೃಶಾಮಿವ ।
ಭವಂತಿ ಸಂತಃ ಸತತಂ ಸ್ವಧರ್ಮಪರಿಪಾಲಕಾಃ ॥ ೫೩ ॥
ದೃಷ್ಟ್ವೈವ ತನ್ನಃ ಸಮುತ್ಪನ್ನಂ ಯಥಾ ಸ್ತ್ರೀರತ್ನಮುತ್ತಮಂ ।
ತ್ವಯಿ ನಾರಾಯಣೋತ್ಪನ್ನಾ ಶ್ರೇಷ್ಠಾ ಪಾರವತೀ ಮತಿಃ ॥ ೫೪ ॥
ತೇನ ಸತ್ಯೇನ ಸತ್ಯಾತ್ಮನ್ಪರಮಾತ್ಮನ್ ಸನಾತನ ।
ನಾರಾಯಣ ಪ್ರಸೀದೇಶ ಸರ್ವಲೋಕಪರಾಯಣ ॥ ೫೫ ॥
ಪ್ರಸನ್ನಬುದ್ಧೇ ಶಾಂತಾತ್ಮನ್ಪ್ರಸನ್ನವದನೇಕ್ಷಣ ।
ಪ್ರಸೀದ ಯೋಗಿನಾಮೀಶ ನರ ಸರ್ವಗತಾಽಚ್ಯುತ ॥ ೫೬ ॥

---

೫೦–೫೧. ಕ್ಷಮೆಯುಳ್ಳ, ಇವರಲ್ಲಿ ಶಾರ್ಙ್ಗ ಎಂಬ ಚಾಪವನ್ನು ಧರಿಸಿದವನೂ, ಆತ್ಮಜ್ಞಾನಿಯೂ, ನಿರ್ದುಷ್ಟನೂ, ಸಕಲ ಪ್ರಾಣಿಗಳ ಪಾಪವನ್ನು ನಿವಾರಿಸಿದವನೂ ಆದ ನರನ ಸೌಮ್ಯವಾದ ಮುಖ ಮತ್ತು ದೃಷ್ಟಿಯು ನಮ್ಮ ಜನ್ಮಾರ್ಜಿತ ದುಃಖಗಳನ್ನು ನಿವಾರಿಸಲಿ.

೫೨. ತ್ರೈಲೋಕ್ಯವಂದ್ಯರಾದ ನಿಮ್ಮನ್ನು ಚಂಚಲಮನಸ್ಕರನ್ನಾಗಿ ಮಾಡಲು ಬಂದ ನಾವು ನಮ್ಮ ವಿದ್ಯಾದೋಷದಿಂದ ಮಹಾಪರಾಧವನ್ನು ಮಾಡಿದ್ದೇವೆ.

೫೩. ವಿಜ್ಞಾನಘನನಾದ ನಾರಾಯಣ! ಪ್ರಸನ್ನನಾಗು. ಸಜ್ಜನರು ಯಾವಾಗಲೂ ತಮ್ಮ ಧರ್ಮಗಳನ್ನು ಕಾಪಾಡಿಕೊಳ್ಳುವರು.

೫೪. ನಮ್ಮನ್ನು ನೋಡುವುದರಿಂದಲೇ ನಿನ್ನಿಂದ ಉತ್ತಮ ಸ್ತ್ರೀರತ್ನವು ಜನಿಸಿದ ಕಾರಣ ನಿನ್ನಲ್ಲಿ ನಮಗೆ ಉತ್ತಮವಾದ ಜ್ಞಾನವುಂಟಾಗಿದೆ.

೫೫. ಸತ್ಯಾತ್ಮನೂ, ಅನಾದಿಯೂ, ಸಮಸ್ತ ಲೋಕರಕ್ಷಣೆಯಲ್ಲಿ ನಿರತನೂ ಆದ ಎಲೈ ನಾರಾಯಣನೆ! ಆ ಸತ್ಯದಿಂದ ನಮ್ಮಲ್ಲಿ ಅನುಗ್ರಹ ಮಾಡು.

೫೬. ಪ್ರಸನ್ನವಾದ ಮನಸ್ಸುಳ್ಳವನೂ, ಶಾಂತಮನಸ್ಕನೂ, ಪ್ರಸನ್ನವಾದ ಮುಖ ಮತ್ತು ನಯನಗಳುಳ್ಳವನೂ, ಯೋಗೀಶ್ವರನೂ, ಸರ್ವವ್ಯಾಪಿಯೂ ಆದ ನರನೆ! ಪ್ರಸನ್ನನಾಗು.

ನಮಸ್ಯಾಮೋ ನರಂ ದೇವಂ ತಥಾ ನಾರಾಯಣಂ ಹರಿಂ ।
ನಮೋ ನರಾಯ ನಮ್ಯಾಯ ನಮೋ ನಾರಾಯಣಾಯ ಚ ॥ ೫೭ ॥
ಪ್ರಪನ್ನಾನಾಮನಾಥಾನಾಂ ತಥಾ ನಾಥವತಾಂ ಪ್ರಭೋ ।
ಶಂ ಕರೋತು ನರೋಽಸ್ಮಾಕಂ ಶಂ ನಾರಾಯಣ ದೇಹಿ ನಃ ॥ ೫೮ ॥

ಮಾರ್ಕಂಡೇಯ ಉವಾಚ :—

ಏವಮಭ್ಯರ್ಚಿತಃ ಸ್ತುತ್ವಾ ರಾಗದ್ವೇಷಾದಿವರ್ಜಿತಃ ।
ಪ್ರಾಹೇಶಃ ಸರ್ವಭೂತಾನಾಂ ಮಧ್ಯೇ ನಾರಾಯಣೋ ನೃಪ ॥ ೫೯ ॥

ನಾರಾಯಣ ಉವಾಚ :—

ಸ್ವಾಗತಂ ಮಾಧವೇ ಕಾಮೋ ಭವತ್ವಪ್ಸರಸಾಮಪಿ ।
ಯತ್ಕಾರ್ಯಮಾಗತಾನಾಂ ಚ ಇಹಾಽಸ್ಮಾಭಿಸ್ತದುಚ್ಯತಾಂ ॥ ೬೦ ॥
ಯೂಯಂ ಸಂಸಿದ್ಧಯೇ ನೂನಮಸ್ಮಾಕಂ ಬಲಶತ್ರುಣಾ ।
ಸಂಪ್ರೇಷಿತಾಸ್ತತೋಽಸ್ಮಾಕಂ ನೃತ್ಯಯೋಗಾದಿದರ್ಶನಂ ॥ ೬೧ ॥
ನ ವಯಂ ಗೀತನೃತ್ಯೇನ ನಾಂಗಚೇಷ್ಟಾದಿಭಾಷಿತೈಃ ।
ಲುಬ್ಧಾ ವೈ ವಿಷಯೈರ್ಮನ್ಯೇ ವಿಷಯಾ ದಾರುಣಾತ್ಮಕಾಃ ॥ ೬೨ ॥
ಶಬ್ದಾದಿಸಂಗದುಷ್ಟಾನಿ ಯದಾ ನಾಕ್ಷಾಣಿ ನಃ ಶುಭಾಃ ।
ತದಾ ನೃತ್ಯಾದಯೋ ಭಾವಾಃ ಕಥಂ ಲೋಭಪ್ರದಾಯಿನಃ ॥ ೬೩ ॥

---

೫೭. ನರನನ್ನೂ, ನಾರಾಯಣನನ್ನೂ ವಂದಿಸುವೆವು. ನರನಿಗೂ ನಾರಾಯಣನಿಗೂ ನಮಸ್ಕಾರವು.

೫೮. ಪ್ರಪನ್ನರೂ, ಅನಾಥರೂ, ಸ್ವಾಮಿಯುಳ್ಳವರೂ ಆದವರಿಗೆ ನರ ನಾರಾಯಣರು ಸುಖವನ್ನುಂಟುಮಾಡಲಿ.

೫೯. ಮಾರ್ಕಂಡೇಯನು ಹೇಳುತ್ತಾನೆ:—ಹೀಗೆ ಸ್ತುತಿಯಿಂದ ಅರ್ಚಿತನೂ, ರಾಗದ್ವೇಷವಿಲ್ಲದವನೂ ಆದ ನಾರಾಯಣನು ಸಕಲ ಪ್ರಾಣಿಗಳ ನಡುವೆ ಇಂತೆಂದನು.

೬೦. ನಾರಾಯಣನು ಹೇಳುತ್ತಾನೆ:—ವಸಂತ, ಕಾಮ, ಅಪ್ಸರೆಯರಿಗೆ ಸುಖಾಗಮನವಾಗಲಿ. ಇಲ್ಲಿಗೆ ಬಂದ ನಿಮಗೆ ನಮ್ಮಿಂದೇನಾಗಬೇಕು? ಹೇಳಿರಿ.

೬೧. ಇಂದ್ರನು ತನ್ನ ಕಾರ್ಯಸಿದ್ಧಿಗಾಗಿ ನಿಮ್ಮನ್ನು ನಮ್ಮ ಬಳಿಗೆ ಕಳುಹಿಸಿರುವನು. ನೀವು ನಮಗೆ ನೃತ್ಯಾದಿಗಳನ್ನು ತೋರಿಸಿರುವಿರಿ.

೬೨. ನಾವು ನೃತ್ಯಗೀತಗಳಿಂದಲೂ, ಅಂಗಚೇಷ್ಟೆ ಮೊದಲಾದುವುಗಳಿಂದಲೂ, ಮಾತುಗಳಿಂದಲೂ ವಶರಾಗುವವರಲ್ಲ. ನಾವು ವಿಷಯಗಳು ಕಠಿನವಾದುವುಗಳೆಂದು ತಿಳಿದಿರುವೆವು.

೬೩. ನಮ್ಮ ಶುಭಕರಗಳಾದ ಇಂದ್ರಿಯಗಳು ಶಬ್ದಾದಿಗಳ ಸಂಬಂಧದಿಂದ ದುಷ್ಟವಾಗದಿರುವಾಗ ನೃತ್ಯಾದಿಭಾವಗಳು ಹೇಗೆ ಆಶೆಯನ್ನುಂಟುಮಾಡುವುವು?

ತೇ ಸಿದ್ಧಾಃ ಸ್ಮ ನ ವೈ ಸಾಧ್ಯಾ ಭವತೀನಾಂ ಸ್ಮರಸ್ಯ ಚ ।
ಮಾಧವಸ್ಯ ಚ ಶಕ್ರೋಽಪಿ ಸ್ವಾಸ್ಥ್ಯಂ ಯಾತ್ವವಿಶಂಕಿತಾಃ ॥ ೬೪ ॥
ಯೋಽಸೌ ಪರಶ್ಚ ಪರಮಃ ಪುರುಷಃ ಪರಮೇಶ್ವರಃ ।
ಪರಮಾತ್ಮಾ ಸಮಸ್ತಸ್ಯ ಸ್ಥಾವರಸ್ಯ ಚರಸ್ಯ ಚ ॥ ೬೫ ॥
ಉತ್ಪತ್ತಿಹೇತುರೇತೇ ಚ ಯಸ್ಮಿನ್ ಸರ್ವಂ ಪ್ರಲೀಯತೇ ।
ಸರ್ವಾವಾಸೀತಿ ದೇವತ್ವಾದ್ವಾಸುದೇವೇತ್ಯುದಾಹೃತಃ ॥ ೬೬ ॥
ವಯಮಂಶಾಂಶಕಾಸ್ತಸ್ಯ ಚತುರ್ವ್ಯೂಹಸ್ಯ ಮಾನಿನಃ ।
ತದಾದೇಶಿತವರ್ತ್ಮಾಸೌ ಜಗದ್ಬೋಧಾಯ ದೇಹಿನಾಂ ॥ ೬೭ ॥
ತತ್ಸರ್ವಭೂತಂ ಸರ್ವೇಶಂ ಸರ್ವತ್ರ ಸಮದರ್ಶಿನಂ ।
ಕುತಃ ಪಶ್ಯಂತೌ ರಾಗಾದೀನ್ಕರಿಷ್ಯಾಮೋ ವಿಭೇದಿನಃ ॥ ೬೮ ॥
ವಸಂತೇ ಮಯಿ ಚೇಂದ್ರೇ ಚ ಭವತೀಷು ತಥಾ ಸ್ಮರೇ ।
ಯದಾ ಸ ಏವ ಭೂತಾತ್ಮಾ ತದಾ ದ್ವೇಷಾದಯಃ ಕಥಂ ॥ ೬೯ ॥
ಯನ್ಮಯಾನ್ಯವಿಭಕ್ತಾನಿ ಯದಾ ಸರ್ವೇಷು ಜಂತುಷು ।
ಸರ್ವೇಶ್ವರೇಶ್ವರೋ ವಿಷ್ಣುಃ ಕುತೋ ರಾಗಾದಯಸ್ತತಃ ॥ ೭೦ ॥

---

೬೪. ನಾವು ಸಿದ್ಧರಾಗಿರುವೆವು. ನಿಮಗೂ, ಮನ್ಮಥ, ವಸಂತರಿಗೂ ವಶಮಾಡಿಕೊಳ್ಳಲು ಸಾಧ್ಯರಲ್ಲ. ಇಂದ್ರನು ಸ್ವಸ್ಥಚಿತ್ತನಾಗಲಿ. ನೀವು ಶಂಕೆಯಿಲ್ಲದೆ ತೆರಳಿರಿ.

೬೫–೬೬. ಉತ್ತಮನೂ, ಪರಮೇಶ್ವರನೂ, ಪರಮಾತ್ಮನೂ ಆದ ಈ ನಾರಾಯಣನು ಚರಾಚರಪ್ರಪಂಚಕ್ಕೆ ಉತ್ಪತ್ತಿಕಾರಣನು. ಈ ಪ್ರಪಂಚವೆಲ್ಲ ಈ ಪರಮಾತ್ಮನಲ್ಲಿಯೇ ಅಡಗುವುದು. ಇವನು ಸರ್ವಾಂತರ್ಯಾಮಿಯಾಗಿರುವುದರಿಂದ ವಾಸುದೇವನೆಂದು ಹೇಳಿಸಿಕೊಳ್ಳುವನು.

೬೭–೬೮. ನಾವು ಚತುರ್ವ್ಯೂಹನಾದ ಆ ವಿಷ್ಣುವಿನ ಅಂಶಾಂಶಕರು. ಪ್ರಾಣಿಗಳ ಜ್ಞಾನೋಪದೇಶಕ್ಕಾಗಿ ಆ ಪರಮಾತ್ಮನು ಉಪದೇಶಿಸಿದ ದಾರಿಯಲ್ಲಿ ನಡೆಯುವೆವು. ಆದ್ದರಿಂದ ಸರ್ವಾಂತರ್ಯಾಮಿಯೂ, ಸರ್ವೇಶನೂ, ಸಕಲವನ್ನೂ ಸಮವಾಗಿ ನೋಡುವವನೂ ಆದ ಅವನನ್ನು ನೋಡುತ್ತಿರುವ ನಾವು ಭೇದಕಗಳಾದ ರಾಗಾದಿಗಳಿಗೆ ಹೇಗೆ ವಶರಾಗುವೆವು ?

೬೯. ಆ ಸರ್ವಾಂತರ್ಯಾಮಿಯಾದ ನಾರಾಯಣನು ವಸಂತನಲ್ಲಿಯೂ, ನನ್ನಲ್ಲಿಯೂ, ಇಂದ್ರನಲ್ಲಿಯೂ, ನಿಮ್ಮಲ್ಲಿಯೂ, ಮನ್ಮಥನಲ್ಲಿಯೂ ಇರುವುದರಿಂದ ದ್ವೇಷಾದಿಗಳು ಹೇಗುಂಟಾಗುವುವು ?

೭೦. ಆ ಪರಮಾತ್ಮನು ಸಕಲ ಪ್ರಾಣಿಗಳಲ್ಲಿ ಅವಿಭಕ್ತನಾಗಿರುವುದರಿಂದ ರಾಗಾದಿಗಳು ಹೇಗುಂಟಾಗುವುವು ?

ಬ್ರಹ್ಮಾಣಮಿಂದ್ರಮೀಶಾನಮಾದಿತ್ಯಂ ಮರುತೋಽಖಿಲಾನ್ ।
ವಿಶ್ವೇದೇವಾನೃಷೀನ್ ಸಾಧ್ಯಾನ್ವಸೂನ್ಪಿತೃಗಣಾಂಸ್ತಥಾ ॥ ೭೧ ॥
ಯಕ್ಷರಾಕ್ಷಸಭೂತಾದೀನ್ನಾಗಾನ್ ಸರ್ಪಾನ್ ಸರೀಸೃಪಾನ್ ।
ಮನುಷ್ಯಪಕ್ಷಿಗೋರೂಪಗಜಸಿಂಹಜಲೇಚರಾನ್ ॥ ೭೨ ॥
ಮಕ್ಷಿಕಾಮಶಕಾನ್ದಂಶಾಂಛಲಭಾನ್ ಜಲಜಾನ್ಕೃಮೀನ್ ।
ಗುಲ್ಮವೃಕ್ಷಲತಾವಲ್ಲೀತ್ವಕ್ಸಾರತೃಣಜಾತಿಷು ॥ ೭೩ ॥
ಯಚ್ಚ ಕಿಂಚಿದದೃಶ್ಯಂ ವಾ ದೃಶ್ಯಂ ವಾ ತ್ರಿದಶಾಂಗನಾಃ ।
ಮನ್ಯಧ್ವಂ ಜಾತಮೇಕಸ್ಯ ತತ್ಸರ್ವಂ ಪರಮಾತ್ಮನಃ ॥ ೭೪ ॥
ಜಾಯಮಾನಃ ಕಥಂ ವಿಷ್ಣುಮಾತ್ಮಾನಂ ಪರಮಂ ಚ ಯತ್ ।
ರಾಗದ್ವೇಷೌ ತಥಾ ಲೋಭಂ ಕಃ ಕುರ್ಯಾದಮರಾಂಗನಾಃ ॥ ೭೫ ॥
ಸರ್ವಭೂತಮಯೇ ವಿಷ್ಣೌ ಸರ್ವಗೇ ಸರ್ವಧಾತರಿ ।
ನಿಪಾತ್ಯ ತಂ ಪೃಥಗ್ಭೂತೇ ಕುತೋ ರಾಗಾದಿಕೋ ಗುಣಃ ॥ ೭೬ ॥
ಏವಮಸ್ಮಾಸು ಯುಷ್ಮಾಸು ಸರ್ವಭೂತೇಷು ಚಾಽಬಲಾಃ ।
ತನ್ಮಯ್ಯೈಕತ್ವಭೂತೇಷು ರಾಗಾದ್ಯವಸರಃ ಕುತಃ ॥ ೭೭ ॥
ಸಮ್ಯಗ್ದೃಷ್ಟಿರಿಯಂ ಪ್ರೋಕ್ತಾ ಸಮಸ್ತೈಕ್ಯಾಽವಲೋಕಿನೀ ।
ಪೃಥಗ್ವಿಜ್ಞಾನಮಾತ್ರೈವ ಲೋಕಸಂವ್ಯವಹಾರವತ್ ॥ ೭೮ ॥

---

೭೧–೭೪. ಬ್ರಹ್ಮ, ಇಂದ್ರ, ಶಂಕರ, ಆದಿತ್ಯರು, ಮರುತ್ತುಗಳು, ವಿಶ್ವೇದೇವರು, ಋಷಿಗಳು, ಸಾಧ್ಯರು, ವಸುಗಳು, ಪಿತೃಗಣಗಳು, ಯಕ್ಷರಾಕ್ಷಸಭೂತಗಳು, ನಾಗರು, ಸರ್ಪಗಳು, ಮನುಷ್ಯ, ಪಕ್ಷಿ, ಗೋವುಗಳು, ಗಜ, ಸಿಂಹ, ಜಲಚರಪ್ರಾಣಿಗಳು, ನೊಣಗಳು, ಸೊಳ್ಳೆಗಳು, ಮಿಡಿತೆಗಳು, ಗುಲ್ಮ, ಲತೆ, ವೃಕ್ಷಗಳು, ಬಿದಿರು ಮೊದಲಾದ ತೃಣಗಳು ಇವುಗಳಲ್ಲಿಯೂ, ಇತರ ದೃಶ್ಯಾದೃಶ್ಯವಸ್ತುಗಳಲ್ಲಿಯೂ ಆ ಪರಮಾತ್ಮನೊಬ್ಬನೇ ಇರುವನು.

೭೫. ದೇವಾಂಗನೆಯರೆ! ಆ ಪರಮಾತ್ಮನಿಂದ ಹುಟ್ಟುವ ಯಾವನ ರಾಗ, ದ್ವೇಷ, ಲೋಭಗಳನ್ನು ಮಾಡಿಯಾನು?

೭೬. ಸರ್ವಭೂತರೂಪನೂ, ಸರ್ವವ್ಯಾಪಿಯೂ, ಸಕಲವನ್ನು ಸೃಜಿಸುವವನೂ ಆದ ಆ ವಿಷ್ಣುವನ್ನು ತಿರಸ್ಕರಿಸಿ ರಾಗಾದಿ ಗುಣಗಳು ಹೇಗುಂಟಾಗುವುವು?

೭೭. ಸ್ತ್ರೀಯರೆ! ಹೀಗೆ ನಮ್ಮಲ್ಲಿಯೂ, ನಿಮ್ಮಲ್ಲಿಯೂ, ಸಕಲ ಪ್ರಾಣಿಗಳಲ್ಲಿಯೂ ಆ ವಿಷ್ಣುವು ನೆಲೆಸಿರಲು ರಾಗಾದಿಗಳಿಗೆ ಅವಕಾಶವೆಲ್ಲಿ?

೭೮. ಇವೆಲ್ಲವೂ ಲೋಕವ್ಯವಹಾರದಂತೆ ಪ್ರತ್ಯೇಕವಾಗಿದ್ದರೂ ಒಂದೇ ಎಂದು ತಿಳಿಯುವುದೇ ಸಮ್ಯಗ್ದೃಷ್ಟಿಯೆನ್ನಿಸಿಕೊಳ್ಳುವುದು.

ಭೂತೇಂದ್ರಿಯಾಂತಃಕರಣಪ್ರಧಾನಪುರುಷಾತ್ಮಕಂ ।
ಜಗದ್ವ್ಯೈ ಹ್ಯೇತದಖಿಲಂ ತದಾ ಭೇದಃ ಕಿಮಾತ್ಮಕಃ ॥ ೭೯ ॥
ಭವಂತಿ ಲಯಮಾಯಾಂತಿ ಸಮುದ್ರಸಲಿಲೋರ್ಮಯಃ ।
ನ ವಾರಿಭೇದತೋ ಭಿನ್ನಾಸ್ತಥೈವೈಕ್ಯಾದಿದಂ ಜಗತ್ ॥ ೮೦ ॥
ಯಥಾಗ್ನೇರರ್ಚಿಷಃ ಪೀತಾಃ ಪಿಂಗಲಾರುಣಧೂಸರಾಃ ।
ತಥಾಽಪಿ ನಾಽಗ್ನಿತೋ ಭಿನ್ನಾಸ್ತಥೈತದ್ಬ್ರಹ್ಮಣೋ ಜಗತ್ ॥ ೮೧ ॥
ಭವತೀಭಿಶ್ಚ ಯತ್ಕ್ಷೋಭಮಸ್ಮಾಕಂ ಸ ಪುರಂದರಃ ।
ಕಾರಯತ್ಯಸದೇತಚ್ಚ ವಿವೇಕಾಚಾರಚೇತಸಾಂ ॥ ೮೨ ॥
ಭವಂತ್ಯಃ ಸ ಚ ದೇವೇಂದ್ರೋ ಲೋಕಾಶ್ಚ ಸಸುರಾಽಸುರಾಃ ।
ಸಮುದ್ರಾಽದ್ರಿವನೋಪೇತಾ ಮದ್ದೇಹಾಂತರಗೋಚರಾಃ ॥ ೮೩ ॥
ಯಥೇಯಂ ಚಾರುಸರ್ವಾಂಗೀ ಭವತೀನಾಂ ಮಯಾಗ್ರತಃ ।
ದರ್ಶಿತಾ ದರ್ಶಯಿಷ್ಯಾಮಿ ತಥಾ ಚೈವಾಽಖಿಲಂ ಜಗತ್ ॥ ೮೪ ॥
ಪ್ರಯಾತು ಶಕ್ರೋ ಮಾ ಗರ್ವಮಿಂದ್ರತ್ವಂ ಕಸ್ಯ ಸುಸ್ಥಿರಂ ।
ಯೂಯಂ ಚ ಮಾ ಸ್ಮಯಂ ಯಾತ ಸಂತಿ ರೂಪಾನ್ವಿತಾಃ ಸ್ತ್ರಿಯಃ ॥ ೮೫ ॥

---

೭೯. ಈ ಸಕಲ ಪ್ರಪಂಚವೂ, ಪಂಚಭೂತಗಳು, ಇಂದ್ರಿಯಗಳು, ಅಂತಃಕರಣ, ಪ್ರಧಾನ, ಪುರುಷ ರೂಪವಾಗಿರುವುದರಿಂದ ಭೇದವೆಂತಹದು ?

೮೦. ಸಮುದ್ರದ ನೀರಿನಲ್ಲಿ ಅಲೆಗಳು ಉಂಟಾಗುವವು. ಮತ್ತು ನಾಶವಾಗುವುವು. ಆದರೆ ಆ ಅಲೆಗಳು ಒಂದೇ ನೀರಿನಿಂದ ಉಂಟಾಗುವುದರಿಂದ ಹೇಗೆ ಬೇರೆಯಲ್ಲವೋ, ಹಾಗಯೇ ಈ ಪ್ರಪಂಚವೂ ಒಂದೇ ಆಗಿದೆ.

೮೧. ಅಗ್ನಿಯ ಜ್ವಾಲೆಗಳು ಹಳದಿ, ಕೆಂಪು, ಬೂದು ಬಣ್ಣವಾಗಿದ್ದರೂ ಅವು ಅಗ್ನಿಗಿಂತ ಹೇಗೆ ಭಿನ್ನವಲ್ಲವೋ, ಹಾಗೆಯೇ ಪ್ರಪಂಚವು ಬ್ರಹ್ಮನಿಗಿಂತ ಬೇರೆಯಲ್ಲ.

೮೨. ಇಂದ್ರನು ನಿಮ್ಮಿಂದ ನಮಗೆ ಕ್ಷೋಭೆಯನ್ನುಂಟುಮಾಡಿಸುವುದು ವಿವೇಕಿಗಳಿಗೆ ಅನುಚಿತವಾದುದು.

೮೩. ನೀವು, ಆ ದೇವೇಂದ್ರನು, ಸುರರು, ಅಸುರರು, ಸಮುದ್ರಗಳು, ಬೆಟ್ಟಗಳು, ವನಗಳು ಇವುಗಳಿಂದ ಕೂಡಿದ ಲೋಕಗಳು ನನ್ನ ದೇಹದೊಳಗಿರುವುವು.

೮೪. ನಾನು ಈ ಸುಂದರಿಯನ್ನು ನಿಮ್ಮ ಮುಂದೆ ತೋರಿಸಿದಂತೆ ನಿಖಿಲ ಜಗತ್ತನ್ನೂ ತೋರಿಸುವೆನು.

೮೫. ಇಂದ್ರನು ಗರ್ವಪಡದಿರಲಿ. ಇಂದ್ರತ್ವವು ಯಾರಿಗೆ ಸ್ಥಿರವಾಗಿರುವುದು ? ನೀವೂ ಗರ್ವಪಡಬೇಡಿರಿ. ಸುಂದರಿಯರಾದ ಇತರ ಸ್ತ್ರೀಯರೂ ಇರುವರೆಂಬುದನ್ನು ಅರಿತುಕೊಳ್ಳಿರಿ.

ಕಿಂ ಸುರೂಪಂ ಕುರೂಪಂ ವಾ ಯದಾ ಭೇದೋ ನ ದೃಶ್ಯತೇ ।
ತಾರತಮ್ಯಂ ಸುರೂಪತ್ವೇ ಸತತಂ ಭಿನ್ನದರ್ಶನಾತ್ ॥ ೮೬ ॥
ಭವತೀನಾಂ ಸ್ಮಯಂ ಮತ್ವಾ ರೂಪೌದಾರ್ಯಗುಣೋದ್ಭವಂ ।
ಮಯೇಯಂ ದರ್ಶಿತಾ ತನ್ವೀ ತತಸ್ತು ಶಮಮೇಷ್ಯಥ ॥ ೮೭ ॥
ಯಸ್ಮಾನ್ಮದೂರೋರ್ನಿಷ್ಪನ್ನಾ ತ್ವಿಯಮಿಂದೀವರೇಕ್ಷಣಾ ।
ಉರ್ವಶೀ ನಾಮ ಕಲ್ಯಾಣೀ ಭವಿಷ್ಯತಿ ವರಾಪ್ಸರಾಃ ॥ ೮೮ ॥
ತದಿಯಂ ದೇವರಾಜಸ್ಯ ನೀಯತಾಂ ವರವರ್ಣಿನೀ ।
ಭವತ್ಯಸ್ತೇನ ಚಾಸ್ಮಾಕಂ ಪ್ರೇಷಿತಾಃ ಪ್ರೀತಿಮಿಚ್ಛತಾ ॥ ೮೯ ॥
ವಕ್ತವ್ಯಶ್ಚ ಸಹಸ್ರಾಕ್ಷೋ ನಾಽಸ್ಮಾಕಂ ಭೋಗಕಾರಣಾತ್ ।
ತಪಶ್ಚರ್ಯಾ ನ ವಾ ಪ್ರಾಪ್ಯಫಲಂ ಪ್ರಾಪ್ತುಮಭೀಪ್ಸತಾ ॥ ೯೦ ॥
ಸನ್ಮಾರ್ಗಮಸ್ಯ ಜಗತೋ ದರ್ಶಯಿಷ್ಯೇ ಕರೋಮ್ಯಹಂ ।
ತಥಾ ನರೇಣ ಸಹಿತೋ ಜಗತಃ ಪಾಲನೋದ್ಯತಃ ॥ ೯೧ ॥
ಯದಿ ಕಶ್ಚಿತ್ತವಾಬಾಧಾಂ ಕರೋತಿ ತ್ರಿದಶೇಶ್ವರ ।
ತಮಹಂ ವಾರಯಿಷ್ಯಾಮಿ ನಿವೃತ್ತೋ ಭವ ವಾಸವ ॥ ೯೨ ॥

---

೮೬. ಭೇದವು ಕಾಣದಿರುವಾಗ ಸುರೂಪವಾಗಲಿ, ಕುರೂಪವಾಗಲಿ ಯಾವುದು? ಭೇದವು ತೋರುವಾಗ ಸೌಂದರ್ಯದಲ್ಲಿ ತಾರತಮ್ಯವು ಕಾಣುವುದು.

೮೭. ನೀವು ರೂಪೌದಾರ್ಯಗಳಿಂದ ಅಹಂಕಾರಗೊಳ್ಳುವುದನ್ನು ತಿಳಿದು ನಾನು ಈ ಸುಂದರಿಯನ್ನು ತೋರಿಸಿದೆನು. ಆದ್ದರಿಂದ ಶಾಂತರಾಗಿರಿ.

೮೮. ಈ ಇಂದೀವರೇಕ್ಷಣೆಯು ನನ್ನ ತೊಡೆಯಿಂದ ಹುಟ್ಟಿರುವುದರಿಂದ ಉರ್ವಶಿಯೆಂಬ ಅಪ್ಸರೆಯಾಗುವಳು.

೮೯. ಆದ್ದರಿಂದ ದೇವೇಂದ್ರನಿಂದ ನನ್ನೆಡೆಗೆ ಕಳುಹಿಸಲ್ಪಟ್ಟ ನೀವು ಇವಳನ್ನು ಆ ದೇವರಾಜನೆಡೆಗೇ ಕರೆದುಕೊಂಡು ಹೋಗಿರಿ.

೯೦. ಮತ್ತು ಆ ಇಂದ್ರನಿಗೆ ತಿಳಿಸಿರಿ. ನಾವು ಭೋಗಕ್ಕಾಗಲಿ, ಅಪ್ರಾಪ್ಯವಾದ ಫಲವನ್ನು ಪಡೆಯುವುದಕ್ಕಾಗಲಿ ತಪಸ್ಸನ್ನು ಮಾಡುವುದಿಲ್ಲ.

೯೧. ಈ ಜಗತ್ತಿಗೆ ಸನ್ಮಾರ್ಗವನ್ನು ತೋರಿಸುವೆನು. ನಾನೂ ಸನ್ಮಾರ್ಗವನ್ನು ಅನುಸರಿಸುವೆನು. ಹಾಗೆಯೇ ನರನೊಡನೆ ಪ್ರಪಂಚವನ್ನು ಪಾಲಿಸುವುದರಲ್ಲಿ ಉದ್ಯುಕ್ತನಾಗಿದ್ದೇನೆ.

೯೨. ಇಂದ್ರ! ನಿನಗಾರಾದರೂ ತೊಂದರೆಯನ್ನುಂಟುಮಾಡುತ್ತಿದ್ದರೆ ಅವನನ್ನೂ ತಡೆಯುವೆನು. ನೀನು ಸುಖಿಯಾಗಿರು.

ಕರ್ತಾಽಸಿ ಚೇತ್ತ್ವಮಾಬಾಧಾಂ ನ ದುಷ್ಟಸ್ಯೇಹ ಕಸ್ಯಚಿತ್ ।
ತಂ ಚಾಽಪಿ ಶಾಸ್ತಾ ತದಹಂ ಪ್ರವರ್ತಿಷ್ಯಾಮ್ಯಸಂಶಯಂ ॥ ೯೩ ॥
ಏತದ್ಜ್ಞಾತ್ವಾ ನ ಸಂತಾಪಸ್ತ್ವಯಾ ಕಾರ್ಯೋ ಹಿ ಮಾಂ ಪ್ರತಿ ।
ಉಪಕಾರಾಯ ಜಗತಾಮವತೀರ್ಣೋಽಸ್ಮಿ ವಾಸವ ॥ ೯೪ ॥
ಯಾ ಚೇಯಮುರ್ವಶೀ ಮತ್ತಃ ಸಮುದ್ಭೂತಾ ಪುರಂದರ ।
ತ್ರೇತಾಗ್ನಿಹೇತುಭೂತೇಯಂ ಏವಂ ಪ್ರಾಪ್ಯ ಭವಿಷ್ಯತಿ ॥ ೯೫ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ
ಪಂಚಮೇ ಆವಂತ್ಯಖಂಡೇ ತೃತೀಯೇ ರೇವಾಖಂಡೇ
"ಶ್ರೀಪತ್ಯುತ್ಪತ್ತಿವರ್ಣನಂ" ನಾಮ
ದ್ವಿನವತ್ಯುತ್ತರಶತತಮೋಽಧ್ಯಾಯಃ

---

೯೩. ನೀನು ಯಾವ ದುಷ್ಟನಿಗೆ ಬಾಧೆಯನ್ನುಂಟುಮಾಡದವನಾದರೆ ಆ ದುಷ್ಟನನ್ನು ನಾನು ಶಿಕ್ಷಿಸುವೆನು. ನಿಶ್ಚಯವಾಗಿಯೂ ಆ ಕಾರ್ಯದಲ್ಲಿ ತೊಡಗುವೆನು.

೯೪. ವಾಸವ! ನೀನು ಇದನ್ನರಿತು ನನ್ನನ್ನು ಕುರಿತು ತಪಿಸಬೇಡ. ನಾನು ಜಗತ್ತುಗಳಿಗೆ ಉಪಕಾರ ಮಾಡಲು ಅವತಾರಮಾಡಿರುವೆನು.

೯೫. ನನ್ನಿಂದ ಹುಟ್ಟಿದ ಈ ಉರ್ವಶಿಯು ಅಗ್ನಿತ್ರಯಗಳಿಗೆ ಕಾರಣಳು. ಇವಳನ್ನು ಹೊಂದಿ ಅಗ್ನಿಯು ಉಂಟಾಗುವುದು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ
ಶ್ರೀ ಸ್ಕಾಂದಮಹಾಪುರಾಣದ ಐದನೆಯ ಆವಂತ್ಯಖಂಡದ ಮೂರನೆಯ ರೇವಾಖಂಡದಲ್ಲಿ
"ಶ್ರೀಪತ್ಯುತ್ಪತ್ತಿವರ್ಣನ"ವೆಂಬ
ನೂರತೊಂಬತ್ತೆರಡನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

# ಅಥ ತ್ರಿಸಪ್ತತ್ಯುತ್ತರಶತತಮೋಽಧ್ಯಾಯಃ

## ಶ್ರೀಪತಿಮಾಹಾತ್ಮ್ಯವರ್ಣನಂ

ಶ್ರೀ ಮಾರ್ಕಂಡೇಯ ಉವಾಚ :—

ಇತ್ಯುಕ್ತ್ವೋಽಪ್ಸರಸಃ ಸರ್ವಾಃ ಪ್ರಣಿಪತ್ಯ ಪುನಃ ಪುನಃ ।
ಊಚುರ್ನಾರಾಯಣಂ ದೇವಂ ತದ್ದರ್ಶನಸಮಾಹಯಾ ॥ ೧ ॥

ವಸಂತಕಾಮಾಪ್ಸರಸ ಊಚುಃ:—

ಭಗವನ್ಭವತಾ ಯೋಽಯಮುಪದೇಶೋ ಹಿತಾರ್ಥಿನಾ ।
ಪ್ರೋಕ್ತಃ ಸ ಸರ್ವೋ ವಿಜ್ಞಾತೋ ಮಾಹಾತ್ಮ್ಯಂ ವಿದಿತಂ ಚ ತೇ ॥ ೨ ॥
ಯತ್ವೇತದ್ಭವತಾ ಪ್ರೋಕ್ತಂ ಪ್ರಸನ್ನೇನಾಂತರಾತ್ಮನಾ ।
ದರ್ಶಿತೇಯಂ ವಿಶಾಲಾಕ್ಷೀ ದರ್ಶಯಿಷ್ಯಾಮಿ ವೋ ಜಗತ್ ॥ ೩ ॥
ತತ್ರಾರ್ಥೇ ಸರ್ವಭಾವೇನ ಪ್ರಪನ್ನಾನಾಂ ಜಗತ್ಪತೇ ।
ದರ್ಶಯಾತ್ಮಾನಮಖಿಲಂ ದರ್ಶಿತೇಯಂ ಯಥೋರ್ವಶೀ ॥ ೪ ॥
ಯದಿ ದೇವಾಽಪರಾಧೇಽಪಿ ನಾಽಸ್ಮಾಸು ಕುಪಿತಂ ತವ ।
ನಮಸ್ತೇ ಜಗತಾಮೀಶ ದರ್ಶಯಾತ್ಮಾನಮಾತ್ಮನಾ ॥ ೫ ॥

---

## ಕನ್ನಡದ ಅನುವಾದ

### ಶ್ರೀಪತಿಮಾಹಾತ್ಮ್ಯವರ್ಣನ

೧. ಶ್ರೀ ಮಾರ್ಕಂಡೇಯನು ಹೇಳುತ್ತಾನೆ:—ನಾರಾಯಣನು ಹೀಗೆ ಹೇಳಲು ಅಪ್ಸರೆಯರೆಲ್ಲ ಅವನನ್ನು ನೋಡಲಿಚ್ಛೆಯಿಂದ ಹೀಗೆಂದರು.

೨. ವಸಂತ ಕಾಮ ಅಪ್ಸರೆಯರು ಹೇಳುತ್ತಾರೆ :—ಪೂಜ್ಯನೆ! ಹಿತವನ್ನು ಬಯಸುವ ನಿನ್ನಿಂದ ಯಾವ ಉಪದೇಶವು ಮಾಡಲ್ಪಟ್ಟಿತೊ, ಅದರ ಮಾಹಾತ್ಮ್ಯವನ್ನೆಲ್ಲ ನಾವು ಅರಿತುಕೊಂಡೆವು.

೩. ನೀನು ಪ್ರಸನ್ನವಾದ ಮನಸ್ಸಿನಿಂದ, "ನಾನು ಈ ವಿಶಾಲಾಕ್ಷಿಯನ್ನು ತೋರಿಸಿರುವೆನು. ನಿಮಗೆ ಜಗತ್ತನ್ನು ತೋರಿಸುವೆನೆ"ಂದು ಹೇಳಿರುವೆ.

೪. ಜಗದೊಡೆಯನಾದ ನಾರಾಯಣನೆ! ಆ ವಿಷಯದಲ್ಲಿ ಭಕ್ತಿಯುಳ್ಳ ನಮಗೆ ನೀನು ಉರ್ವಶಿಯನ್ನು ತೋರಿಸಿದಂತೆ ನಿನ್ನ ಸ್ವರೂಪವನ್ನೂ ತೋರಿಸು.

೫. ಸ್ವಾಮಿ! ನಾವು ಅಪರಾಧವನ್ನು ಮಾಡಿದ್ದರೂ ನೀನು ಕೋಪಗೊಳ್ಳಬೇಡ! ನಿನಗೆ ನಮಸ್ಕಾರ. ನಿನ್ನ ಸ್ವರೂಪವನ್ನು ತೋರಿಸು.

ನಾರಾಯಣ ಉವಾಚ :—

ಪಶ್ಯತೇಹಾಽಖಿಲಾಲ್ಲೋಕಾನ್ಮಮ ದೇಹೇ ಸುರಾಂಗನಾಃ ।
ಮಧುಂ ಮದನಮಾತ್ಮಾನಂ ಯಚ್ಚಾಽನ್ಯದ್ದ್ರಷ್ಟುಮಿಚ್ಛಥ ॥ ೬ ॥

ಶ್ರೀ ಮಾರ್ಕಂಡೇಯ ಉವಾಚ :—

ಇತ್ಯುಕ್ತ್ವಾ ಭಗವಾನ್ ದೇವಸ್ತದಾ ನಾರಾಯಣೋ ನೃಪ ।
ಉಚ್ಚೈರ್ಜಹಾಸ ಸ್ವನವತ್ತತ್ರಾಽಭೂದಖಿಲಂ ಜಗತ್ ॥ ೭ ॥
ಬ್ರಹ್ಮಾ ಪ್ರಜಾಪತಿಃ ಶಕ್ರಃ ಸಹ ರುದ್ರೈಃ ಪಿನಾಕಧೃಕ್ ।
ಆದಿತ್ಯಾ ವಸವಃ ಸಾಧ್ಯಾ ವಿಶ್ವೇದೇವಾ ಮಹರ್ಷಯಃ ॥ ೮ ॥
ನಾಸತ್ಯದಸ್ರಾವನಿಲಃ ಸರ್ವಗಶ್ಚ ತಥಾಽಗ್ನಯಃ ।
ಯಕ್ಷಗಂಧರ್ವಸಿದ್ಧಾಶ್ಚ ಪಿಶಾಚೋರಗಕಿನ್ನರಾಃ ॥ ೯ ॥
ಸಮಸ್ತಾಽಪ್ಸರಸೋ ವಿದ್ಯಾಃ ಸಾಂಗಾ ವೇದಾಸ್ತದುಕ್ತಯಃ ।
ಮನುಷ್ಯಾಃ ಪಶವಃ ಕೀಟಾಃ ಪಕ್ಷಿಣಃ ಪಾದಪಾಸ್ತಥಾ ॥ ೧೦ ॥
ಸರೀಸೃಪಾಶ್ಚಾಽಥ ಸೂಕ್ಷ್ಮಾ ಯಚ್ಚಾಽನ್ಯಜ್ಜೀವಸಂಜ್ಞಿತಂ ।
ಸಮುದ್ರಾಃ ಸಕಲಾಃ ಶೈಲಾಃ ಸರಿತಃ ಕಾನನಾನಿ ಚ ॥ ೧೧ ॥
ದ್ವೀಪಾನ್ಯಶೇಷಾಣಿ ತಥಾ ತಥಾ ಸರ್ವಸರಾಂಸಿ ಚ ।
ನಗರಗ್ರಾಮಪೂರ್ಣಾ ಚ ಮೇದಿನೀ ಮೇದಿನೀಪತೇ ।
ದೇವಾಂಗನಾಭಿರ್ದೇವಸ್ಯ ದೇಹೇ ದೃಷ್ಟಂ ಮಹಾತ್ಮನಃ ॥ ೧೨ ॥

---

೬. ನಾರಾಯಣನು ಹೇಳುತ್ತಾನೆ:—ದೇವಾಂಗನೆಯರೆ! ಈ ನನ್ನ ಶರೀರದಲ್ಲಿ ವಸಂತ, ಮನ್ಮಥರೇ ಅಲ್ಲದೆ ನಿಮ್ಮನ್ನೂ ಸಕಲ ಲೋಕಗಳನ್ನೂ ನೋಡಿರಿ. ಬೇರೆ ಏನನ್ನು ನೋಡಬಯಸುವಿರೋ ಅದನ್ನು ನೋಡಿರಿ.

೭. ಶ್ರೀ ಮಾರ್ಕಂಡೇಯನು ಹೇಳುತ್ತಾನೆ:—ಪೂಜ್ಯನಾದ ನಾರಾಯಣನು ಹೀಗೆ ಹೇಳಿ ಗಟ್ಟಿಯಾಗಿ ನಕ್ಕನು. ಅದರಿಂದ ಸಮಸ್ತ ಪ್ರಪಂಚವೂ ಉಂಟಾಯಿತು.

೮—೧೨. ಆ ದೇವಾಂಗನೆಯರು ಅವನ ಶರೀರದಲ್ಲಿ ಬ್ರಹ್ಮ, ಪ್ರಜಾಪತಿ, ಶಕ್ರ, ರುದ್ರರು, ಶಂಕರ, ಆದಿತ್ಯರು, ವಸುಗಳು, ಸಾಧ್ಯರು, ವಿಶ್ವೇದೇವತೆಗಳು, ಮಹರ್ಷಿಗಳು, ಅಶ್ವಿನೀದೇವತೆಗಳು, ವಾಯು, ಅಗ್ನಿಗಳು, ಯಕ್ಷರು, ಗಂಧರ್ವರು, ಸಿದ್ಧರು, ಪಿಶಾಚಗಳು, ಉರಗಗಳು, ಕಿನ್ನರರು, ಅಪ್ಸರೆಯರು, ವಿದ್ಯೆಗಳು, ಸಾಂಗವೇದಗಳು, ಮನುಷ್ಯರು, ಪಶುಗಳು, ಕೀಟಗಳು, ಪಕ್ಷಿಗಳು, ವೃಕ್ಷಗಳು, ಸರಿಯುವ ಪ್ರಾಣಿಗಳು, ಇತರ ಪ್ರಾಣಿಗಳು, ಸಮುದ್ರಗಳು, ಪರ್ವತಗಳು, ನದಿಗಳು, ಕಾಡುಗಳು, ಸಕಲ ದ್ವೀಪಗಳು, ಸಮಸ್ತ ಸರೋವರಗಳು, ನಗರ, ಗ್ರಾಮಗಳಿಂದ ತುಂಬಿರುವ ಭೂಮಿ ಇವುಗಳೆಲ್ಲವನ್ನು ಕಂಡರು.

ನಕ್ಷತ್ರಗ್ರಹತಾರಾಭಿಃ ಸುಸಂಪೂರ್ಣಂ ನಭಸ್ತಲಂ ।
ದದೃಶುಸ್ತಾಃ ಸುಚಾರ್ವಂಗ್ಯಸ್ತಸ್ಯಾಂತರ್ವಿಶ್ವರೂಪಿಣಃ ॥ ೧೩ ॥
ಊರ್ಧ್ವಂ ನ ತಿರ್ಯಗಧಸ್ತಾದ್ಯದಾಂತಸ್ತಸ್ಯ ದೃಶ್ಯತೇ ।
ತಮನಂತಮನಾದಿಂ ಚ ತತಸ್ತಾಸ್ತುಷ್ಟುವುಃ ಪ್ರಭುಂ ॥ ೧೪ ॥
ಮದನೇನ ಸಮಂ ಸರ್ವಾ ಮಧುನಾ ಚ ವರಾಂಗನಾಃ ।
ಸಸಾಧ್ವಸಾ ಭಕ್ತಿಪರಾಃ ಪರಂ ವಿಸ್ಮಯಮಾಗತಾಃ ॥ ೧೫ ॥

ವಸಂತಕಾಮಾಪ್ಸರಸ ಊಚುಃ:—

ಪಶ್ಯಾಮ ನಾಽಽದಿಂ ತವ ದೇವ ನಾಽಂತಂ
ನ ಮಧ್ಯಮವ್ಯಾಕೃತರೂಪಪಾರಂ ।
ಪರಾಯಣಂ ತ್ವಾಂ ಜಗತಾಮನಂತಂ
ನತಾಃ ಸ್ಮ ನಾರಾಯಣಮಾತ್ಮಭೂತಂ ॥ ೧೬ ॥
ಮಹೀನಭೋವಾಯುಜಲಾಗ್ನಯಸ್ತ್ವಂ
ಶಬ್ದಾದಿರೂಪಸ್ತು ಪರಾಪರಾತ್ಮನ್ ।
ತ್ವತ್ತೋ ಭವತ್ಯಚ್ಯುತ ಸರ್ವಮೇತ
ದ್ಭೇದಾದಿರೂಪೋಽಸಿ ವಿಭೋ ತ್ವಮಾತ್ಮನ್ ॥ ೧೭ ॥
ದ್ರಷ್ಟಾಽಸಿ ರೂಪಸ್ಯ ಪರಸ್ಯ ವೇತ್ತಾ
ಶ್ರೋತಾ ಚ ಶಬ್ದಸ್ಯ ಹರೇ ತ್ವಮೇಕಃ ।
ಸ್ಪ್ರಷ್ಟಾ ಭವಾನ್ ಸರ್ವಗತೋಽಖಿಲಸ್ಯ
ಘ್ರಾತಾ ಚ ಗಂಧಸ್ಯ ಪೃಥಕ್ಶರೀರೀ ॥ ೧೮ ॥

---

೧೩–೧೫. ಮತ್ತು ಆ ಶರೀರದೊಳಗೆ ನಕ್ಷತ್ರ, ಗ್ರಹ, ತಾರೆಗಳಿಂದ ತುಂಬಿರುವ ಆಕಾಶವನ್ನೂ ಕಂಡರು. ಅವನ ಶರೀರದೊಳಗೆ ಮೇಲೆ ಕೆಳಗೆ ಅಡ್ಡ ಭಾಗಗಳು ಕಾಣಿಸಲಿಲ್ಲ. ಅವರು ಅನಂತನೂ, ಅನಾದಿಯೂ ಆದ ಆ ಸ್ವಾಮಿಯನ್ನು ಸ್ತುತಿಸಿ ಎಲ್ಲರೂ ಭಯಭಕ್ತಿಗಳಿಂದ ಕೂಡಿ ಆಶ್ಚರ್ಯಗೊಂಡರು.

೧೬. ವಸಂತ, ಕಾಮ, ಅಪ್ಸರೆಯರು ಹೇಳುತ್ತಾರೆ:—ಸ್ವಾಮಿ! ನಾವು ನಿನ್ನ ಆದಿ, ಮಧ್ಯ, ಅಂತ್ಯವನ್ನು ನೋಡಲಾರೆವು. ಅವ್ಯಾಕೃತರೂಪನೂ, ಜಗದಾತ್ಮನೂ, ಶಾಶ್ವತನೂ ಆದ ನಿನ್ನನ್ನು ವಂದಿಸುವೆವು.

೧೭. ಅಚ್ಯುತ! ನೀನು ಭೂಮಿ, ಆಕಾಶ, ವಾಯು, ಜಲ, ಅಗ್ನಿ, ಶಬ್ದ ಸ್ವರೂಪನಾಗಿರುವೆ. ನಿನ್ನಿಂದಲೇ ಈ ಜಗತ್ತು ಉಂಟಾಗುವುದು. ಸ್ವಾಮಿ! ನೀನು ಭೇದಾದಿರೂಪನಾಗಿರುವೆ.

೧೮–೧೯. ಹರಿಯೆ! ನೀನೊಬ್ಬನೇ ಪರಮಾತ್ಮರೂಪವನ್ನು ನೋಡುವವನೂ, ತಿಳಿಯುವವನೂ, ಶಬ್ದವನ್ನು ಕೇಳುವವನೂ, ಸಮಸ್ತವನ್ನೂ ಸ್ಪರ್ಶಿಸುವವನೂ, ಸರ್ವಾಂತರ್ಯಾಮಿಯೂ, ಗಂಧವನ್ನು ಆಘ್ರಾಣಿಸುವವನೂ, ಪೃಥ

ಸುರೇಷು ಸರ್ವೇಷು ನ ಸೋಽಸ್ತಿ ಕಶ್ಚಿ
ನ್ಮನುಷ್ಯಲೋಕೇಷು ನ ಸೋಽಸ್ತಿ ಕಶ್ಚಿತ್ ।
ಪಶ್ವಾದಿವರ್ಗೇಷು ನ ಸೋಽಸ್ತಿ ಕಶ್ಚಿ
ದ್ಯೋ ನಾಂಽಶಭೂತಸ್ತವ ದೇವದೇವ ॥ ೧೯ ॥
ಬ್ರಹ್ಮಾಂಬುಧೀಂದ್ರಪ್ರಮುಖಾನಿ ಸೌಮ್ಯ
ಶಕ್ರಾದಿ ರೂಪಾಣಿ ತವೋತ್ತಮಾನಿ ।
ಸಮುದ್ರರೂಪಂ ತವ ಧೈರ್ಯವತ್ಸು
ತೇಜಃ ಸ್ವರೂಪೇಷು ರವಿಸ್ತಥಾಽಗ್ನಿಃ ॥ ೨೦ ॥
ಕ್ಷಮಾ ಧನೇಷು ಕ್ಷಿತಿರೂಪಮುಗ್ರ್ಯಂ
ಶೀಘ್ರೇಷು ಶೀಘ್ರೋ ಬಲವತ್ಸು ವಾಯುಃ ।
ಮನುಷ್ಯರೂಪಂ ತವ ರಾಜವೇಷೋ
ಮೂಢೇಷು ಸರ್ವೇಶ್ವರ ಪಾದಪೋಽಸಿ ॥ ೨೧ ॥
ಸರ್ವಾನಯೇಷ್ವಚ್ಯುತ ದಾನವಸ್ತ್ವಂ
ಸನತ್ಸುಜಾತಶ್ಚ ವಿವೇಕವತ್ಸು ।
ರಸಸ್ವರೂಪೇಣ ಜಲಸ್ಥಿತೋಽಸಿ
ಗಂಧಸ್ವರೂಪಂ ಭವತೋ ಧರಿತ್ರ್ಯಾಂ ॥ ೨೨ ॥
ದೃಶ್ಯಸ್ವರೂಪಶ್ಚ ಹುತಾಶನಸ್ತ್ವಂ
ಸ್ಪರ್ಶಸ್ವರೂಪಂ ಭವತಃ ಸಮೀರೇ ।
ಶಬ್ದಾದಿಕಂ ತೇ ನಭಸಿ ಸ್ವರೂಪಂ
ಮಂತವ್ಯರೂಪೋ ಮನಸಿ ಪ್ರಭೋ ತ್ವಂ ॥ ೨೩ ॥

---

ಗಾತ್ಮನೂ ಆಗಿರುವೆ. ಸಕಲ ದೇವತೆಗಳಲ್ಲಿಯೂ, ಮನುಷ್ಯಲೋಕಗಳಲ್ಲಿಯೂ, ಪಶ್ವಾದಿವರ್ಗಗಳಲ್ಲಿಯೂ ನಿನ್ನ ಅಂಶವಿಲ್ಲದಿರುವುದು ಯಾವುದೂ ಇಲ್ಲ.

೨೦–೨೨. ಸಾಧುವೆ! ಬ್ರಹ್ಮ, ಸಮುದ್ರ, ಇಂದ್ರ ಮೊದಲಾದ ರೂಪಗಳನ್ನು ಹೊಂದುವ ನೀನು ಧೈರ್ಯವಂತರಲ್ಲಿ ಸಮುದ್ರನೂ, ತೇಜೋರೂಪಗಳಲ್ಲಿ ಸೂರ್ಯಾಗ್ನಿಗಳೂ, ಕ್ಷಮೆಯುಳ್ಳವರಲ್ಲಿ ಭೂಮಿರೂಪನೂ, ಶೀಘ್ರಗಾಮಿಗಳಲ್ಲಿ ಶೀಘ್ರನೂ, ಬಲಿಷ್ಠರಲ್ಲಿ ವಾಯುವೂ, ಮನುಷ್ಯರಲ್ಲಿ ರಾಜರೂಪನೂ, ಮೂಢರಲ್ಲಿ ವೃಕ್ಷರೂಪನೂ, ಸಮಸ್ತ ದುರ್ವಿನೀತರಲ್ಲಿ ದಾನವನೂ, ವಿವೇಕಿಗಳಲ್ಲಿ ಸನತ್ಸುಜಾತನೂ ಆಗಿರುವೆಯಲ್ಲದೆ ರಸಸ್ವರೂಪದಿಂದ ನೀರಿನಲ್ಲಿಯೂ, ಗಂಧಸ್ವರೂಪದಿಂದ ಭೂಮಿಯಲ್ಲಿಯೂ ಇರುವೆ.

೨೩–೨೮. ನೀನು ಅಗ್ನಿಯಲ್ಲಿ ದೃಶ್ಯನೂ, ಗಾಳಿಯಲ್ಲಿ ಸ್ಪೃಶ್ಯನೂ, ಆಕಾಶದಲ್ಲಿ ಶಬ್ದರೂಪನೂ, ಮನಸ್ಸಿನಲ್ಲಿ ಜ್ಞೇಯನೂ, ಬುದ್ಧಿಯಲ್ಲಿ ಜ್ಞಾನರೂಪನೂ,

ಬೋಧಸ್ವರೂಪಶ್ಚ ಮತೌ ತ್ವಮೇಕಃ
ಸರ್ವತ್ರ ಸರ್ವೇಶ್ವರ ಸರ್ವಭೂತ ।
ಪಶ್ಯಾಮಿ ತೇ ನಾಭಿಸರೋಜಮಧ್ಯೇ
ಬ್ರಹ್ಮಾಣಮೀಶಂ ಚ ಹರಂ ಭೃಕುಟ್ಯಾಂ ॥ ೨೪ ॥
ತವಾಶ್ವಿನೌ ಕರ್ಣಗತೌ ಸಮಸ್ತಾ
ಸ್ತವಾಸ್ಥಿತಾ ಬಾಹುಷು ಲೋಕಪಾಲಾಃ ।
ಘ್ರಾಣೋಽನಿಲೋ ನೇತ್ರಗತೌ ರವೀಂದೂ
ಜಿಹ್ವಾ ಚ ತೇ ನಾಥ ಸರಸ್ವತೀಯಂ ॥ ೨೫ ॥
ಪಾದೌ ಧರಿತ್ರೀ ಜಠರಂ ಸಮಸ್ತಾಂ
ಲ್ಲೋಕಾನ್ಹೃಷೀಕೇಶ ವಿಲೋಕಯಾಮಃ ।
ಜಂಘೇ ವಯಂ ಪಾದತಲಾಂಗುಲೀಷು
ಪಿಶಾಚಯಕ್ಷೋರಗಸಿದ್ಧಸಂಘಾಃ ॥ ೨೬ ॥
ಪುಂಸ್ತ್ವೇ ಪ್ರಜಾನಾಂ ಪತಿರೋಷ್ಠಯುಗ್ಮೇ
ಪ್ರತಿಷ್ಠಿತಾಸ್ತೇ ಕ್ರತವಃ ಸಮಸ್ತಾಃ ।
ಸರ್ವೇ ವಯಂ ತೇ ದಶನೇಷು ದೇವ
ದಂಷ್ಟ್ರಾಸು ದೇವಾ ಹ್ಯಭವಂಶ್ಚ ದಂತಾಃ ॥ ೨೭ ॥
ರೋಮಾಣ್ಯಶೇಷಾಸ್ತವ ದೇವಸಂಘಾ
ವಿದ್ಯಾಧರಾ ನಾಥ ತವಾಂಘ್ರಿರೇಖಾಃ ।
ಸಾಂಗಾಃ ಸಮಸ್ತಾಸ್ತವ ದೇವ ವೇದಾಃ
ಸಮಾಸ್ಥಿತಾಃ ಸಂಧಿಷು ಬಾಹುಭೂತಾಃ ॥ ೨೮ ॥

---

ಎಲ್ಲೆಡೆಯಲ್ಲಿಯೂ ಸಕಲಭೂತರೂಪನೂ ಆಗಿರುವೆ. ನಿನ್ನ ನಾಭಿಯಲ್ಲಿ ಬ್ರಹ್ಮನನ್ನೂ, ಹುಬ್ಬುಗಂಟಿನಲ್ಲಿ ಈಶ್ವರನನ್ನೂ, ಕಿವಿಯಲ್ಲಿ ಅಶ್ವಿನೀದೇವತೆಗಳನ್ನೂ ನೋಡುವೆವು. ತೋಳುಗಳಲ್ಲಿ ಲೋಕಪಾಲಕರೂ, ಮೂಗಿನಲ್ಲಿ ಅನಿಲನೂ, ಕಣ್ಣುಗಳಲ್ಲಿ ಸೂರ್ಯಚಂದ್ರರೂ, ನಾಲಿಗೆಯಲ್ಲಿ ಸರಸ್ವತಿಯೂ, ಪಾದಗಳಲ್ಲಿ ಭೂಮಿಯೂ, ಹೊಟ್ಟೆಯಲ್ಲಿ ಸಕಲಲೋಕಗಳೂ ಕಾಣಿಸುವುವು. ಮೊಣಕಾಲುಗಳಲ್ಲಿ ನಾವೂ, ಪಾದದ ಕೆಳಗೆ ಮತ್ತು ಬೆರಳುಗಳಲ್ಲಿ ಪಿಶಾಚ, ಯಕ್ಷ, ಉರಗ, ಸಿದ್ಧರೂ, ಪುಂಸ್ತ್ವದಲ್ಲಿ ಪ್ರಜಾಪತಿಯೂ, ಎರಡು ತುಟಿಗಳಲ್ಲಿ ಸಮಸ್ತಯಜ್ಞಗಳೂ, ಹಲ್ಲುಗಳಲ್ಲಿ ನಾವೆಲ್ಲರೂ, ಕೋರೆದಾಡೆಗಳಲ್ಲಿ ಸಮಸ್ತ ದಿವಿಜರೂ, ಸಮಸ್ತರೋಮಗಳಲ್ಲಿ ದೇವತೆಗಳೂ, ಪಾದರೇಖೆಗಳಲ್ಲಿ ವಿದ್ಯಾಧರರೂ, ಸಂಧಿಗಳಲ್ಲಿ ಸಕಲವೇದಗಳೂ ನೆಲಸಿರುವುವು.

ವರಾಹಭೂತಂ ಧರಣೀಧರಸ್ತೇ
ನೃಸಿಂಹರೂಪಂ ಚ ಸದಾ ಕರಾಲಂ ।
ಪಶ್ಯಾಮ ತೇ ವಾಜಿಶಿರಸ್ತಥೋಚ್ಚೈ
ಸ್ತ್ರಿವಿಕ್ರಮೋ ಯಚ್ಚ ತದಾಽಪ್ರಮೇಯಂ ॥ ೨೯ ॥
ಅಮೀ ಸಮುದ್ರಾಸ್ತವ ದೇವ ದೇಹೇ
ಮೌರ್ವಾಲಯಾಃ ಶೈಲಧರಾಸ್ತಥಾಽಮೀ ।
ಇಮಾಶ್ಚ ಗಂಗಾಪ್ರಮುಖಾಃ ಸ್ರವಂತ್ಯೋ
ದ್ವೀಪಾಣ್ಯಶೇಷಾಣಿ ವನಾದಿದೇಶಾಃ ॥ ೩೦ ॥
ಸ್ತುವಂತಿ ಚೇಮೇ ಮುನಯಸ್ತವೇಶ
ದೇಹೇ ಸ್ಥಿತಾಸ್ತ್ವನ್ಮಹಿಮಾನಮಗ್ರ್ಯಂ ।
ತ್ವಾಮೀಶಿತಾರಂ ಜಗತಾಮನಂತಂ
ಯಜಂತಿ ಯಜ್ಞೈಃ ಕಿಲ ಯಜ್ವಿನೋಽಮೀ ॥ ೩೧ ॥
ತ್ವತ್ತೋ ಹಿ ಸೌಮ್ಯಂ ಜಗತೀಹ ಕಿಂಚಿ
ತ್ತ್ವತ್ತೋ ನ ರೌದ್ರಂ ಚ ಸಮಸ್ತಮೂರ್ತೇ ।
ತ್ವತ್ತೋ ನ ಶೀತಂ ಚ ನ ಕೇಶವೋಷ್ಣಂ
ಸರ್ವಸ್ವರೂಪಾತಿಶಯೀ ತ್ವಮೇವ ॥ ೩೨ ॥
ಪ್ರಸೀದ ಸರ್ವೇಶ್ವರ ಸರ್ವಭೂತ
ಸನಾತನಾತ್ಮನ್ಪರಮೇಶ್ವರೇಶ ।
ತ್ವನ್ಮಾಯಯಾ ಮೋಹಿತಮಾನಸಾಭಿ
ರ್ಯತ್ತೇಽಪರಾದ್ಧಂ ತದಿದಂ ಕ್ಷಮಸ್ವ ॥ ೩೩ ॥

---

೨೯. ಸ್ವಾಮಿ! ಧರಣಿಯನ್ನು ಧರಿಸುವ ನಿನ್ನ ವರಾಹರೂಪವನ್ನೂ, ಕಠಿನವಾದ ನೃಸಿಂಹರೂಪವನ್ನೂ, ಉನ್ನತವಾದ ಹಯಗ್ರೀವ ರೂಪವನ್ನೂ, ಅಪ್ರಮೇಯವಾದ ತ್ರಿವಿಕ್ರಮರೂಪವನ್ನೂ ನೋಡುವೆವು.

೩೦. ನಿನ್ನ ಶರೀರದಲ್ಲಿ ವಡವಾಗ್ನಿಗೆ ಆಶ್ರಯವಾದ ಸಮುದ್ರಗಳೂ, ಈ ಬೆಟ್ಟಗಳೂ, ಗಂಗೆ ಮೊದಲಾದ ನದಿಗಳೂ, ಸಕಲದ್ವೀಪಗಳೂ, ವನಗಳೂ ಇವೆ.

೩೧. ನಾರಾಯಣ! ನಿನ್ನ ಶರೀರದಲ್ಲಿರುವ ಈ ಮುನಿಗಳು ನಿನ್ನ ಶ್ರೇಷ್ಠವಾದ ಮಾಹಾತ್ಮ್ಯವನ್ನು ಹೊಗಳುತ್ತಾರೆ. ಈ ಯಜಮಾನರೂ ಜಗದೊಡೆಯನೂ, ಅನಂತನೂ ಆದ ನಿನ್ನನ್ನು ಯಜ್ಞಗಳಿಂದ ಪೂಜಿಸುವರು.

೩೨-೩೩. ಕೇಶವ! ಈ ಜಗತ್ತಿನಲ್ಲಿ ನಿನಗಿಂತ ಸೌಮ್ಯವಾದುದೂ, ಭಯಂಕರವಾದುದೂ, ಶೀತವಾದುದೂ, ಉಷ್ಣವಾದುದೂ ಇಲ್ಲ. ನೀನೇ ಎಲ್ಲವನ್ನೂ ಅತಿಕ್ರಮಿಸಿರುವೆ. ಸರ್ವೇಶ್ವರನೂ, ಸಕಲಭೂತಸ್ವರೂಪನೂ, ಸನಾತ

ಕಿಂ ಮಾಽಪರಾದ್ಧಂ ತವ ದೇವದೇವ
ಯನ್ಮಾಯಯಾ ನೋ ಹೃದಯಂ ತಥಾಽಸಿ ।
ಮಾಯಾಽಭಿಶಂಕಿ ಪ್ರಣತಾರ್ತಿ ಹನ್ತ
ರ್ಮನೋ ಹಿ ನೋ ವಿಹ್ವಲತಾಮುಪೈತಿ ॥ ೩೪ ॥
ನ ತೇಽಪರಾದ್ಧಂ ಯದಿ ತೇಽಪರಾದ್ಧ
ಮಸ್ಮಾಭಿರುನ್ಮಾರ್ಗವಿವರ್ತಿನೀಭಿಃ ।
ತತ್ಕ್ಷಮ್ಯತಾಂ ಸೃಷ್ಟಿಕೃತಸ್ತವೈವ
ದೇವಾಽಪರಾಧಃ ಸೃಜತೋಽವಿವೇಕಂ ॥ ೩೫ ॥
ನಮೋ ನಮಸ್ತೇ ಗೋವಿಂದ ನಾರಾಯಣ ಜನಾರ್ದನ ।
ತ್ವನ್ನಾಮಸ್ಮರಣಾತ್ಪಾಪಮಶೇಷಂ ನಃ ಪ್ರಣಶ್ಯತು ॥ ೩೬ ॥
ನಮೋಽನಂತ ನಮಸ್ತುಭ್ಯಂ ವಿಶ್ವಾತ್ಮನ್ವಿಶ್ವಭಾವನ ।
ತ್ವನ್ನಾಮಸ್ಮರಣಾತ್ಪಾಪಮಶೇಷಂ ನಃ ಪ್ರಣಶ್ಯತು ॥ ೩೭ ॥
ವರೇಣ್ಯ ಯಜ್ಞಪುರುಷ ಪ್ರಜಾಪಾಲನ ವಾಮನ ।
ತ್ವನ್ನಾಮಸ್ಮರಣಾತ್ಪಾಪಮಶೇಷಂ ನಃ ಪ್ರಣಶ್ಯತು ॥ ೩೮ ॥

---

ನನೂ, ಪರಮೇಶ್ವರನೂ ಆದ ನಾರಾಯಣ! ಪ್ರಸನ್ನನಾಗು. ನಿನ್ನ ಮಾಯೆಯಿಂದ ಭ್ರಾಂತಿಗೊಂಡ ನಾವು ಮಾಡಿದ ಅಪರಾಧವನ್ನು ಕ್ಷಮಿಸು.

೩೪. ದೇವಾಧಿಪ! ನಾವು ನಿನ್ನ ಮಾಯೆಯಿಂದ ಮಾಡಿರುವುದು ಅಪರಾಧವೇನು? ನಮ್ಮ ಹೃದಯವೂ ನೀನೇ ಆಗಿರುವೆ. ನಮಸ್ಕಾರಮಾಡಿದವರ ಪೀಡೆಯನ್ನು ನಿವಾರಿಸುವ ವಿಷ್ಣುವೆ! ನಿನ್ನ ಮಾಯೆಯಿಂದ ಶಂಕೆಗೊಂಡ ನಮ್ಮ ಮನಸ್ಸು ವ್ಯಥೆಗೊಂಡಿದೆ.

೩೫. ನಾವು ನಿನಗೆ ಅಪರಾಧಮಾಡಲಿಲ್ಲ. ಉನ್ಮಾರ್ಗಗಾಮಿಗಳಾದ ನಾವು ಅಪರಾಧಮಾಡಿದ್ದರೆ ಅದನ್ನು ಕ್ಷಮಿಸು. ಅದು ಅವಿವೇಕವನ್ನು ಸೃಜಿಸಿದ ನಿನ್ನ ತಪ್ಪೇ ಆಗಿರುವುದು.

೩೬. ಗೋವಿಂದ! ನಾರಾಯಣ! ಜನಾರ್ದನ! ನಿನಗೆ ನಮಸ್ಕಾರವು. ನಿನ್ನ ನಾಮಸ್ಮರಣೆಯಿಂದ ನಮ್ಮ ಪಾಪವೆಲ್ಲ ಪರಿಹಾರವಾಗಲಿ.

೩೭. ಅನಂತನೂ, ವಿಶ್ವಾತ್ಮಕನೂ, ಜಗತ್ತನ್ನು ಸೃಜಿಸುವವನೂ ಆದ ನಾರಾಯಣ! ನಿನಗೆ ನಮಸ್ಕಾರವು. ನಿನ್ನ ನಾಮಸ್ಮರಣೆಯಿಂದ ನಮ್ಮ ಪಾಪವೆಲ್ಲ ನಾಶವಾಗಲಿ.

೩೮. ಶ್ರೇಷ್ಠನೂ, ಯಜ್ಞಪುರುಷನೂ, ಪ್ರಜೆಗಳನ್ನು ಕಾಪಾಡುವವನೂ, ವಾಮನನೂ ಆದ ನಾರಾಯಣ! ನಿನ್ನ ನಾಮಸ್ಮರಣೆಯಿಂದ ನಮ್ಮ ಪಾಪವೆಲ್ಲ ನೀಗಲಿ.

ನಮೋಽಸ್ತು ತೇಽಬ್ಜನಾಭಾಯ ಪ್ರಜಾಪತಿಕೃತೇ ಹರ ।
ತ್ವನ್ನಾಮಸ್ಮರಣಾತ್ಪಾಪಮಶೇಷಂ ನಃ ಪ್ರಣಶ್ಯತು ॥ ೩೯ ॥
ಸಂಸಾರಾರ್ಣವಪೋತಾಯ ನಮಸ್ತುಭ್ಯಮಧೋಕ್ಷಜ ।
ತ್ವನ್ನಾಮಸ್ಮರಣಾತ್ಪಾಪಮಶೇಷಂ ನಃ ಪ್ರಣಶ್ಯತು ॥ ೪೦ ॥
ನಮಃ ಪರಸ್ಮೈ ಶ್ರೀಶಾಯ ವಾಸುದೇವಾಯ ವೇಧಸೇ ।
ಸ್ವೇಚ್ಛಯಾ ಗುಣಯುಕ್ತಾಯ ಸರ್ವಸ್ಥಿತ್ಯಂತಕಾರಿಣೇ ॥ ೪೧ ॥
ಉಪಸಂಹರ ವಿಶ್ವಾತ್ಮನ್ರೂಪಮೇತತ್ಸನಾತನಂ ।
ವರ್ಧಮಾನಂ ನ ನೋ ದ್ರಷ್ಟುಂ ಸಮರ್ಥಂ ಚಕ್ಷುರೀಶ್ವರ ॥ ೪೨ ॥
ಪ್ರಲಯಾಗ್ನಿಸಹಸ್ರಸ್ಯ ಸಮಾದೀಪ್ತಿಸ್ತವಾಽಚ್ಯುತ ।
ಪ್ರಮಾಣೇನ ದಿಶೋ ಭೂಮಿರ್ಗಗನಂ ಚ ಸಮಾವೃತಂ ॥ ೪೩ ॥
ನ ವಿದ್ಮಃ ಕುತ್ರ ವರ್ತಾಮೋ ಭವಾನ್ನಾಥೋಪಲಕ್ಷ್ಯತೇ ।
ಸರ್ವಂ ಜಗದಿಹೈಕಸ್ಥಂ ಪಿಂಡಿತಂ ಲಕ್ಷಯಾಮಹೇ ॥ ೪೪ ॥
ಕಿಂ ವರ್ಣಯಾಮೋ ರೂಪಂ ತೇ ಕಿಂ ಪ್ರಮಾಣಮಿದಂ ಹರೇ ।
ಮಾಹಾತ್ಮ್ಯಂ ಕಿಂ ನು ತೇ ದೇವ ಯಜ್ಜಿಹ್ವಾಯಾ ನ ಗೋಚರೇ ॥ ೪೫ ॥

---

೩೯. ಪದ್ಮನಾಭನೂ, ಬ್ರಹ್ಮನನ್ನು ಸೃಷ್ಟಿಮಾಡಿದವನೂ ಆದ ಹರಿಯೆ! ನಿನ್ನ ನಾಮಸ್ಮರಣೆಯಿಂದ ನಮ್ಮ ಪಾಪವು ಪರಿಹಾರವಾಗಲಿ.

೪೦. ಸಂಸಾರವೆಂಬ ಸಮುದ್ರಕ್ಕೆ ದೋಣಿಯಂತಿರುವವನಾದ ಹರಿಯೆ! ನಿನ್ನ ನಾಮಸ್ಮರಣೆಯಿಂದ ನಮ್ಮ ಪಾಪವು ಪರಿಹಾರವಾಗಲಿ.

೪೧. ಲಕ್ಷ್ಮೀಪತಿಯೂ, ಸರ್ವಾಂತರ್ಯಾಮಿಯೂ, ಗುಣಸಹಿತನೂ, ಸೃಷ್ಟಿ, ಸ್ಥಿತಿ, ಲಯಗಳನ್ನು ಮಾಡುವವನೂ ಆದ ನಾರಾಯಣ! ನಿನಗೆ ನಮಸ್ಕಾರವು.

೪೨. ಈಶ್ವರ! ವೃದ್ಧಿಗೊಳ್ಳುತ್ತಿರುವ ಈ ರೂಪವನ್ನು ಅಡಗಿಸು. ನಮ್ಮ ಕಣ್ಣು ನೋಡಲು ಸಮರ್ಥವಲ್ಲ.

೪೩. ಅಚ್ಯುತ! ಪ್ರಳಯಕಾಲದ ಅಗ್ನಿಗೆ ಸಮವಾದ ನಿನ್ನ ತೇಜಸ್ಸು ಪ್ರಮಾಣದಿಂದ ದಿಕ್ಕುಗಳನ್ನೂ, ಭೂಮಿಯನ್ನೂ, ಆಕಾಶವನ್ನೂ ವ್ಯಾಪಿಸಿದೆ.

೪೪. ಸ್ವಾಮಿ! ನಾವು ಎಲ್ಲಿರುವೆವು? ಎಂಬುದನ್ನು ತಿಳಿಯುವುದಿಲ್ಲ. ನೀನು ಮಾತ್ರ ಕಾಣಿಸುತ್ತೀಯೆ. ಇಲ್ಲಿ ಸಮಸ್ತ ಪ್ರಪಂಚವೂ ಪಿಂಡಾಕಾರವಾಗಿರುವುದನ್ನು ನೋಡುತ್ತೇವೆ.

೪೫. ಹರಿಯೆ! ನಿನ್ನ ರೂಪವನ್ನು ಹೇಗೆ ವರ್ಣಿಸುವುದು? ಆ ರೂಪವು ಎಷ್ಟು ಗಾತ್ರವಾಗಿರುವುದು? ನಿನ್ನ ಮಾಹಾತ್ಮ್ಯವು ಎಂತಹದು? ಅದು ನಮ್ಮ ನಾಲಿಗೆಗೆ ಗೋಚರವಲ್ಲ.

ವಕ್ತಾರೋ ನಾಽಯುತೇನಾಽಪಿ ಬುದ್ಧೀನಾಮಯುತಾಯುತೈಃ ।
ಗುಣನಿರ್ವರ್ಣನಂ ನಾಥ ಕರ್ತುಂ ತವ ನ ಶಕ್ಯತೇ ॥ ೪೬ ॥
ತದೇತದ್ದರ್ಶಿತಂ ರೂಪಂ ಪ್ರಸಾದಃ ಪರಮಃ ಕೃತಃ ।
ಛಂದತೋ ಜಗತಾಮೀಶ ತದೇತದುಪಸಂಹರ ॥ ೪೭ ॥

ಮಾರ್ಕಂಡೇಯ ಉವಾಚ :—

ಇತ್ಯೇವಂ ಸಂಸ್ತುತಸ್ತಾಭಿರಪ್ಸರೋಭಿರ್ಜನಾರ್ದನಃ ।
ದಿವ್ಯಜ್ಞಾನೋಪಪನ್ನಾನಾಂ ತಾಸಾಂ ಪ್ರತ್ಯಕ್ಷಮೀಶ್ವರಃ ॥ ೪೮ ॥
ವಿವೇಶ ಸರ್ವಭೂತಾನಿ ಸ್ವೈರಂಶೈರ್ಭೂತಭಾವನಃ ।
ತಂ ದೃಷ್ಟ್ವಾ ಸರ್ವಭೂತೇಷು ಲೀಯಮಾನಮಧೋಕ್ಷಜಂ ॥ ೪೯ ॥
ವಿಸ್ಮಯಂ ಪರಮಂ ಚಕ್ರುಃ ಸಮಸ್ತಾ ದೇವಯೋಷಿತಃ ।
ಸ ಚ ಸರ್ವೇಶ್ವರಃ ಶೈಲಾನ್ಪಾದಪಾನ್ ಸಾಗರಾನ್ಭುವಂ ॥ ೫೦ ॥
ಜಲಮಗ್ನಿಂ ತಥಾ ವಾಯುಮಾಕಾಶಂ ಚ ವಿವೇಶ ಹ ।
ಕಾಲೇ ದಿಕ್ಷ್ವಥ ಸರ್ವಾತ್ಮಾ ಹ್ಯಾತ್ಮನಶ್ಚಾಽನ್ಯಥಾಽಪಿ ಚ ॥ ೫೧ ॥
ಆತ್ಮರೂಪಸ್ಥಿತಂ ತೇನ ಮಹಿಮ್ನಾ ಭಾವಯನ್ ಜಗತ್ ।
ದೇವದಾನವರಕ್ಷಾಂಸಿ ಯಕ್ಷವಿದ್ಯಾಧರೋರಗಾಃ ॥ ೫೨ ॥
ಮನುಷ್ಯಪಶುಕೀಟಾದಿ ಮೃಗಪಕ್ಷ್ಯಂತರಿಕ್ಷಗಾಃ ।
ಯೇಽಂತರಿಕ್ಷೇ ತಥಾ ಭೂಮೌ ದಿವಿ ಯೇ ಚ ಜಲಾಶ್ರಯಾಃ ॥ ೫೩ ॥

---

೪೬. ಹತ್ತುಸಾವಿರ ಜನರು ಅನೇಕ ಬುದ್ಧಿಗಳಿಂದ ಹೇಳಿದರೂ ನಿನ್ನ ಗುಣಗಳನ್ನು ವರ್ಣಿಸಲು ಸಾಧ್ಯವಲ್ಲ.

೪೭. ಈಶ್ವರ! ನೀನು ನಮಗೆ ಈ ರೂಪವನ್ನು ತೋರಿಸಿ ಅತಿಶಯವಾಗಿ ಅನುಗ್ರಹಮಾಡಿರುವೆ. ಅದನ್ನು ನಿನ್ನಿಚ್ಛೆಯಂತೆ ಅಡಗಿಸಿಕೊ.

೪೮—೫೫. ಮಾರ್ಕಂಡೇಯನು ಹೇಳುತ್ತಾನೆ:—ಹೀಗೆ ಆ ಅಪ್ಸರಸ್ತ್ರೀಯರಿಂದ ಸ್ತೋತ್ರಮಾಡಲ್ಪಟ್ಟ ವಿಷ್ಣುವು ದಿವ್ಯಜ್ಞಾನಗಳಿಂದ ಕೂಡಿರುವ ಅವರ ಮುಂದೆ ತನ್ನ ಅಂಶಗಳಿಂದ ಸಕಲ ಭೂತಗಳನ್ನೂ ಪ್ರವೇಶಿಸಿದನು. ಸಮಸ್ತದೇವತಾಸ್ತ್ರೀಯರೂ ಸಮಸ್ತಭೂತಗಳಲ್ಲಿಯೂ ಅಡಗುತ್ತಿರುವ ವಿಷ್ಣುವನ್ನು ಕಂಡು ಅತ್ಯಾಶ್ಚರ್ಯಗೊಂಡರು. ಆ ಹರಿಯು ಪರ್ವತಗಳು, ಮರಗಳು, ಸಮುದ್ರಗಳು, ಭೂಮಿ, ಜಲ, ಅಗ್ನಿ, ವಾಯು, ಆಕಾಶ ಇವುಗಳನ್ನು ಹೊಕ್ಕನು. ಮತ್ತು ಅವನು ತನಗಿಂತ ವ್ಯತ್ಯಾಸವಾಗಿರುವ ವಸ್ತುಗಳನ್ನು ತನ್ನಂತೆಯೇ ನಿರ್ಮಿಸಿ ಕಾಲದಿಕ್ಕುಗಳನ್ನೂ ಪ್ರವೇಶಿಸಿದನು. ದೇವತೆಗಳು, ದಾನವರು, ರಾಕ್ಷಸರು, ಯಕ್ಷರು, ವಿದ್ಯಾಧರರು, ನಾಗಗಳು, ಮನುಷ್ಯರು, ಪಶುಗಳು, ಕೀಟಗಳು, ಮೃಗಗಳು, ಆಕಾಶ, ಭೂಮಿ, ದೇವಲೋಕ, ಜಲ

ತಾನ್ನಿವೇಶ ಸ ವಿಶ್ವಾತ್ಮಾ ಪುನಸ್ತದ್ರೂಪಮಾಸ್ಥಿತಃ ।
ನರೇಣ ಸಾರ್ಧಂ ಯತ್ರಾಭಿರ್ದೃಷ್ಟಪೂರ್ವಮರಿಂದಮ ॥ ೫೪ ॥
ತಾಃ ಪರಂ ವಿಸ್ಮಯಂ ಜಗ್ಮುಃ ಸರ್ವಾಸ್ತ್ರಿದಶಯೋಷಿತಃ ।
ಪ್ರಣೇಮುಃ ಸಾಧ್ವಸಾತ್ಪಾಂಡುವದನಾ ನೃಪಸತ್ತಮ ॥ ೫೫ ॥
ನಾರಾಯಣೋಽಪಿ ಭಗವಾನಾಹ ತಾಸ್ತ್ರಿದಶಾಂಗನಾಃ ॥ ೫೬ ॥

ನಾರಾಯಣ ಉವಾಚ:—

ನೀಯತಾಮುರ್ವಶೀ ಭದ್ರಾ ಯತ್ರಾಸೌ ತ್ರಿದಶೇಶ್ವರಃ ।
ಭವತೀನಾಂ ಹಿತಾರ್ಥಾಯ ಸರ್ವಭೂತೇಷ್ವಸಾವಿತಿ ॥ ೫೭ ॥
ಜ್ಞಾನಮುತ್ಪಾದಿತಂ ಭೂಯೋ ಲಯಂ ಭೂತೇಷು ಕುರ್ವತಾ ।
ತದ್ಗಚ್ಛಧ್ವಂ ಸಮುಸ್ತೋಽಯಂ ಭೂತಗ್ರಾಮೋ ಮದಂಶಕಃ ॥ ೫೮ ॥
ಅಹಮಧ್ಯಾತ್ಮಭೂತಸ್ಯ ವಾಸುದೇವಸ್ಯ ಯೋಗಿನಃ ।
ಅಸ್ಮಾತ್ಪರತರಂ ನಾಸ್ತಿ ಯೋಽನಂತಃ ಪರಿಪಠ್ಯತೇ ॥ ೫೯ ॥
ತಮಜಂ ಸರ್ವಭೂತೇಶಂ ಜಾನೀತ ಪರಮಂ ಪದಂ ।
ಅಹಂ ಭವತ್ಯೋ ದೇವಾಶ್ಚ ಮನುಷ್ಯಾಃ ಪಶವಶ್ಚ ಯೇ ।
ಏತತ್ಸರ್ವಮನಂತಸ್ಯ ವಾಸುದೇವಸ್ಯ ವೈ ಕೃತಂ ॥ ೬೦ ॥

---

ಗಳಲ್ಲಿರುವ ಇತರ ಪ್ರಾಣಿಗಳು ಇವುಗಳಲ್ಲಿ ಪ್ರವೇಶಿಸಿ ನರನೊಡನೆ ಅವುಗಳಂತೆಯೇ ಆದನು. ಆ ದೇವಸ್ತ್ರೀಯರು ಅಂತಹ ನಾರಾಯಣನನ್ನು ನೋಡಿ ಆಶ್ಚರ್ಯಗೊಂಡು ಭಯದಿಂದ ಶ್ವೇತಮುಖರಾಗಿ ವಂದಿಸಿದರು.

೫೬. ನಾರಾಯಣನೂ ಆ ದೇವತಾಸ್ತ್ರೀಯರನ್ನು ಕುರಿತು ಇಂತೆಂದನು.

೫೭–೫೮. ನಾರಾಯಣನು ಹೇಳುತ್ತಾನೆ:—ಎಲೆ ಮಂಗಳಕರರೆ ! ಈ ಉರ್ವಶಿಯನ್ನು 'ಇಂದ್ರನೆಡೆಗೆ ಕರೆದುಕೊಂಡು ಹೋಗಿರಿ. ನಾನು ನಿಮ್ಮ ಹಿತಕ್ಕಾಗಿ ಪ್ರಾಣಿಗಳಲ್ಲಿ ಅಡಗುತ್ತ ಸಕಲ ಪ್ರಾಣಿಗಳಲ್ಲಿ ನಾನು ಇರುವೆನೆಂಬ ಜ್ಞಾನವನ್ನು ಉಂಟುಮಾಡಿದ್ದೇನೆ. ಆದ್ದರಿಂದ ನನ್ನ ಅಂಶದ ಈ ಪ್ರಾಣಿಗಳೆಲ್ಲ ಹೋಗಲಿ.

೫೯. ನಾನು ಸರ್ವೋತ್ಕೃಷ್ಟನೂ, ಅನಂತನೂ, ಪರಮಾತ್ಮನೂ, ಯೋಗಿಯೂ ಆದ ವಾಸುದೇವನ ಅಂಶನಾಗಿರುವೆನು.

೬೦. ಆ ವಾಸುದೇವನು ಉತ್ಪತ್ತಿಶೂನ್ಯನೂ, ಸಮಸ್ತಭೂತಗಳಿಗೆ ಒಡೆಯನೂ, ಉತ್ತಮನೂ ಆಗಿರುವನೆಂದು ತಿಳಿಯಿರಿ. ನಾನು, ನೀವು, ದೇವತೆಗಳು, ಮನುಷ್ಯರು, ಪಶುಗಳು ಎಲ್ಲರೂ ಆ ವಾಸುದೇವನಿಂದಲೇ ಹುಟ್ಟಿದ್ದೇನೆ.

ಏವಂ ಜ್ಞಾತ್ವಾ ಸಮಂ ಸರ್ವಂ ಸದೇವಾಸುರಮಾನುಷಂ ।
ಸ ಪಶ್ವಾದಿಗುಣಂ ಚೈವ ದ್ರಷ್ಟವ್ಯಂ ತ್ರಿದಶಾಂಗನಾಃ ॥ ೬೧ ॥

ಮಾರ್ಕಂಡೇಯ ಉವಾಚ:—

ಇತ್ಯುಕ್ತಾಸ್ತೇನ ದೇವೇನ ಸಮುಸ್ತ್ರಾಸ್ತಾಃ ಸುರಸ್ತ್ರಿಯಃ ।
ಪ್ರಣಮ್ಯ ತೌ ಸಮದನಾಃ ಸವಸಂತಾಶ್ಚ ಪಾರ್ಥಿವ ॥ ೬೨ ॥
ಆದಾಯ ಚೋರ್ವಶೀಂ ಭೂಯೋ ದೇವರಾಜಮುಪಾಗತಾಃ ।
ಆಚಖ್ಯುಶ್ಚ ಯಥಾವೃತ್ತಂ ದೇವರಾಜಾಯ ತತ್ತಥಾ ॥ ೬೩ ॥

ಮಾರ್ಕಂಡೇಯ ಉವಾಚ:—

ತಥಾ ತ್ವಮಪಿ ರಾಜೇಂದ್ರ ಸರ್ವಭೂತೇಷು ಕೇಶವಂ ।
ಚಿಂತಯನ್ ಸಮತಾಂ ಗಚ್ಛ ಸಮತೈವ ಹಿ ಮುಕ್ತಯೇ ॥ ೬೪ ॥
ಜಾನನ್ನೇವಂ ವಿಶೇಷೇಣ ಭೂತೇಷು ಪರಮೇಶ್ವರಂ ।
ವಾಸುದೇವ ಕಥಂ ದೋಷಾಲ್ಲೋಭಾದೀನ್ನ ಪ್ರಹಾಸ್ಯಸಿ ॥ ೬೫ ॥
ಸರ್ವಭೂತಾನಿ ಗೋವಿಂದಾದ್ಯದಾ ನಾನ್ಯಾನಿ ಭೂಪತೇ ।
ತದಾ ವೈರಾದಯೋ ಭಾವಾಃ ಕ್ರಿಯತಾಂ ನ ತು ಪುತ್ರಕ ॥ ೬೬ ॥
ಇತಿ ಪಶ್ಯ ಜಗತ್ಸರ್ವಂ ವಾಸುದೇವಾತ್ಮಕಂ ನೃಪ ।
ಏತದೇವ ಹಿ ಕೃಷ್ಣೇನ ರೂಪಮಾವಿಷ್ಕೃತಂ ನೃಪ ॥ ೬೭ ॥

---

೬೧. ದೇವಾಂಗನೆಯರೆ! ನೀವು ಇದನ್ನರಿತು ದೇವ, ಅಸುರ, ಮನುಷ್ಯ, ಪಶುಗಳನ್ನು ಸಮವಾದುವೆಂದು ತಿಳಿಯಿರಿ.

೬೨–೬೩. ಮಾರ್ಕಂಡೇಯನು ಹೇಳುತ್ತಾನೆ:—ನಾರಾಯಣನು ಹೀಗೆ ಹೇಳಲು ಆ ಅಪ್ಸರೆಯರೂ, ಮನ್ಮಥವಸಂತರೂ ಆ ನರನಾರಾಯಣರನ್ನು ವಂದಿಸಿ ಊರ್ವಶಿಯನ್ನು ಕರೆದುಕೊಂಡು ಇಂದ್ರನ ಬಳಿಗೆ ಹೋಗಿ ಅವನಿಗೆ ನಡೆದ ವಿಷಯಗಳನ್ನೆಲ್ಲ ಹೇಳಿದರು.

೬೪. ಮಾರ್ಕಂಡೇಯನು ಹೇಳುತ್ತಾನೆ:—ಮಹಾರಾಜ! ನೀನೂ ಹಾಗೆಯೇ ಸಕಲ ಪ್ರಾಣಿಗಳಲ್ಲಿ ವಿಷ್ಣುವನ್ನು ಚಿಂತಿಸುತ್ತ ಸಾಮ್ಯಭಾವನೆಯನ್ನು ಹೊಂದು, ಇದೇ ಮುಕ್ತಿಗೆ ಸಾಧಕವಾದುದು.

೬೫. ಹೀಗೆ ಪ್ರಾಣಿಗಳಲ್ಲಿ ವಾಸುದೇವನಿರುವುದನ್ನು ತಿಳಿದು ಚಿಂತಿಸುತ್ತಿದ್ದರೂ ಲೋಭಮೋಹವೇ ಮೊದಲಾದ ದೋಷಗಳನ್ನು ಹೇಗೆ ಬಿಡುವುದಿಲ್ಲ?

೬೬. ಮಹಾರಾಜ! ಸಕಲ ಪ್ರಾಣಿಗಳು ಗೋವಿಂದನಿಗಿಂತ ಬೇರೆಯಲ್ಲದಿರುವುದರಿಂದ ದ್ವೇಷಾದಿಗಳನ್ನು ಮಾಡಕೂಡದು.

೬೭. ಜಗತ್ತನ್ನೆಲ್ಲ ವಾಸುದೇವರೂಪವಾದುದನ್ನಾಗಿ ತಿಳಿ. ಇದನ್ನೇ ಕೃಷ್ಣನು ಪ್ರಕಟಿಸಿರುವನು.

ಪರಮೇಶ್ವರೇತಿ ಯದ್ರೂಪಂ ತದೇತತ್ಕಥಿತಂ ತವ ।
ಜನ್ಮಾದಿಭಾವರಹಿತಂ ತದ್ವಿಷ್ಣೋಃ ಪರಮಂ ಪದಂ ॥ ೭೮ ॥
ಸಂಕ್ಷೇಪೇಣಾಽಥ ಭೂಪಾಲ ಶ್ರೂಯತಾಂ ಯದ್ವದಾಮಿ ತೇ ।
ಯನ್ಮತಂ ಪುರುಷಃ ಕೃತ್ವಾ ಪರಂ ನಿರ್ವಾಣಮೃಚ್ಛತಿ ॥ ೭೯ ॥
ಸರ್ವೋ ವಿಷ್ಣುಸಮಾಸೋ ಹಿ ಭಾವಾಭಾವೌ ಚ ತನ್ಮಯೌ ।
ಸದಸತ್ಸರ್ವಮಿಶೋಽಸೌ ಮಹಾದೇವಃ ಪರಂ ಪದಂ ॥ ೭೦ ॥

ಭವಜಲಧಿಗತಾನಾಂ ದ್ವಂದ್ವವಾತಾವಹಾನಾಂ
ಸುತದುಹಿತೃಕಲತ್ರತ್ರಾಣಭಾರಾರ್ದಿತಾನಾಂ ।
ವಿಷಮವಿಷಯತೋಯೇ ಮಜ್ಜತಾಮಪ್ಲವಾನಾಂ
ಭವತಿ ಶರಣಮೇಕೋ ವಿಷ್ಣುಪೋತೋ ನರಾಣಾಂ ॥೭೧॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ
ಪಂಚಮೇ ಅವಂತ್ಯಖಂಡೇ ತೃತೀಯೇ ರೇವಾಖಂಡೇ
"ಶ್ರೀಪತಿಮಾಹಾತ್ಮ್ಯವರ್ಣನಂ" ನಾಮ
ತ್ರಿನವತ್ಯುತ್ತರಶತತಮೋಽಧ್ಯಾಯಃ

---

೭೮. ನಾನು ನಿನಗೆ ಪರಮೇಶ್ವರಸ್ವರೂಪವೆಂದು ಹೇಳಿದ ರೂಪವೇ ವಿಷ್ಣುವಿನ ಜನ್ಮಾದಿಗಳಿಲ್ಲದ ಪರಮ ಸ್ಥಾನವಾಗಿರುವುದು.

೭೯. ಮಹಾರಾಜ! ನಾನು ನಿನಗೆ ಸಂಕ್ಷೇಪವಾಗಿ ಹೇಳುತ್ತಿರುವ ವಿಷಯವನ್ನು ಕೇಳು. ಇದರಂತೆ ಮನುಷ್ಯನು ಮಾಡಿದರೆ ಮೋಕ್ಷಕ್ಕೆ ತೆರಳುವನು.

೭೦. ಎಲ್ಲವೂ ವಿಷ್ಣುರೂಪವಾದುವು. ಭಾವಾಭಾವಗಳು ಅವನ ರೂಪವಾದುವೇ, ಸದಸತ್ತುಗಳೂ ಈ ಪರಮಾತ್ಮನೇ.

೭೧. ಸಂಸಾರಸಮುದ್ರದಲ್ಲಿರುವವರೂ, ಶೀತೋಷ್ಣವಾತಗಳಿಂದ ಹತರೂ, ಪುತ್ರ, ಪುತ್ರಿ, ಪತ್ನಿಯರ ರಕ್ಷಣೆಯ ಭಾರದಿಂದ ಪೀಡಿತರೂ, ವಿಷಮವಾದ ವಿಷಯವೆಂಬ ನೀರಿನಲ್ಲಿ ಮುಳುಗುವವರೂ, ದಾಟಲು ಸಾಮಗ್ರಿಗಳಿಲ್ಲದವರೂ ಆದ ಮಾನವರನ್ನು ವಿಷ್ಣುವೆಂಬ ದೋಣಿಯೊಂದೇ ರಕ್ಷಣೆ ಮಾಡತಕ್ಕುದು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ
ಶ್ರೀ ಸ್ಕಾಂದಮಹಾಪುರಾಣದ ಐದನೆಯ ಅವಂತ್ಯಖಂಡದ ಮೂರನೆಯ ರೇವಾಖಂಡದಲ್ಲಿ
"ಶ್ರೀಪತಿಮಾಹಾತ್ಮ್ಯವರ್ಣನ" ವೆಂಬ
ನೂರತೊಂಬತ್ತಮೂರನೆಯ ಅಧ್ಯಾಯವು ಮುಗಿದುದು

ಶ್ರೀಃ

## ಅಥ ಚತುರ್ನವತ್ಯುತ್ತರಶತತಮೋಽಧ್ಯಾಯಃ

### ಶ್ರೀಪತಿವಿವಾಹವರ್ಣನಂ

ಶ್ರೀ ಮಾರ್ಕಂಡೇಯ ಉವಾಚ :—

ತಚ್ಛ್ರುತ್ವಾಽನಂತದೇವೇನ ವಿಶ್ವರೂಪಮುದಾಹೃತಂ ।
ದೇವರಾಜಸ್ತಥಾ ದೇವಾಃ ಪರಂ ವಿಸ್ಮಯಮಾಗತಾಃ ॥ ೧ ॥
ದೃಷ್ಟ್ವಾ ಚಾಪ್ಸರಸಂ ಪುಣ್ಯಾಮುರ್ವಶೀಂ ಕಮಲಾನನಾಂ ।
ಸಂತ್ರಸ್ತೋ ವಿಸ್ಮಿತಶ್ಚಾಭೂದಿಂದ್ರೋ ರಾಜ್ಯಶ್ರಿಯಾ ವೃತಃ ॥ ೨ ॥
ನ ಕಿಂಚಿದುತ್ತರಂ ವಾಕ್ಯಮುಕ್ತ್ವಾಂಜೋಷಮಾಸ್ಥಿತಃ ।
ಇತಿ ವೃತ್ತಾಂತಭೂತಂ ಹಿ ನಾರಾಯಣವಿಚೇಷ್ಟಿತಂ ॥ ೩ ॥
ಭೃಗೋಃ ಖ್ಯಾತ್ಯಾಂ ಸಮುತ್ಪನ್ನಾ ಲಕ್ಷ್ಮೀಃ ಶ್ರುತ್ವಾ ತು ವೈ ನೃಪ ।
ವೈಶ್ವರೂಪಂ ಪರಂ ರೂಪಂ ವಿಸ್ಮಿತಾಽಚಿಂತಯತ್ತದಾ ॥ ೪ ॥
ಕೇನೋಪಾಯೇನ ಸಸ್ಯಾನ್ಮೇ ಭರ್ತಾ ನಾರಾಯಣಃ ಪ್ರಭುಃ ।
ವ್ರತೇನ ತಪಸಾ ವಾಽಪಿ ದಾನೇನ ನಿಯಮೇನ ಚ ॥ ೫ ॥
ವೃದ್ಧಾನಾಂ ಸೇವನೇನಾಽಥ ದೇವತಾರಾಧನೇನ ವಾ ।
ಇತಿ ಚಿಂತಾಪರಾಂ ಕನ್ಯಾಂ ಸತೀ ಜ್ಞಾತ್ವಾ ಯುಧಿಷ್ಠಿರ ॥ ೬ ॥

---

## ಕನ್ನಡದ ಅನುವಾದ

### ಶ್ರೀಪತಿವಿವಾಹವರ್ಣನ

೧. ಶ್ರೀ ಮಾರ್ಕಂಡೇಯನು ಹೇಳುತ್ತಾನೆ:—ವಿಷ್ಣುವು ಹೇಳಿದ ವಿಶ್ವರೂಪವನ್ನು ಇಂದ್ರನೂ, ದೇವತೆಗಳೂ ಕೇಳಿ ಅತ್ಯಂತವಾಗಿ ಆಶ್ಚರ್ಯಗೊಂಡರು.

೨. ರಾಜ್ಯಸಂಪತ್ತಿನಿಂದ ಕೂಡಿದ ದೇವೇಂದ್ರನು ಕಮಲವದನೆಯಾದ ಉರ್ವಶಿಯನ್ನು ನೋಡಿ ಭಯಗೊಂಡವನೂ, ಆಶ್ಚರ್ಯಗೊಂಡವನೂ ಆದನು.

೩. ನಾರಾಯಣನ ಕಾರ್ಯವನ್ನು ಕೇಳಿ ಯಾವ ಉತ್ತರವನ್ನೂ ಹೇಳದೆ ಸುಮ್ಮನಿದ್ದನು.

೪. ಈ ನಾರಾಯಣನ ಉತ್ತಮ ರೂಪವನ್ನು ಭೃಗೋತ್ಪಾತದಲ್ಲಿ ಹುಟ್ಟಿದ ಲಕ್ಷ್ಮಿಯು ಕೇಳಿ ಆಶ್ಚರ್ಯಗೊಂಡು ಹೀಗೆ ಆಲೋಚಿಸಿದಳು.

೫–೬. ವ್ರತ, ತಪಸ್ಸು, ದಾನ, ನಿಯಮ, ವೃದ್ಧಸೇವೆ, ದೇವಪೂಜೆ ಇವುಗಳಲ್ಲಿ ಯಾವುದನ್ನು ಮಾಡಿದರೆ ಆ ನಾರಾಯಣನು ನನಗೆ ಪತಿಯಾದಾನು ಎಂದು ಲಕ್ಷ್ಮಿಯು ಚಿಂತಾಕ್ರಾಂತಳಾಗಿರುವುದನ್ನು ತಿಳಿದು ಪಾರ್ವತಿಯು

ಪ್ರಾಹ ಪ್ರಾಪ್ತೋ ಮಯಾ ಭರ್ತಾ ಶಂಕರಸ್ತಪಸಾ ಕಿಲ ।
ಪ್ರಜಾಪತಿಶ್ಚ ಗಾಯತ್ರ್ಯಾ ಹ್ಯನ್ಯಾಭಿರಭಿವಾಂಛಿತಾಃ ॥ ೭ ॥
ತಪಸ್ಯೈವ ಹಿ ತೇ ಪ್ರಾಪ್ಯಸ್ತಸ್ಮಾತ್ತಚ್ಚರ ಸುವ್ರತೇ ।
ತಪಸ್ತ್ವಂ ಹಿ ಮಹಚ್ಚೋಗ್ರಂ ಸರ್ವವಾಂಛಿತದಾಯಕಂ ॥ ೮ ॥

ಮಾರ್ಕಂಡೇಯ ಉವಾಚ :—

ಸಾಗರಾಂತಂ ಸಮಾಸಾದ್ಯ ಲಕ್ಷ್ಮೀಃ ಪರಪುರಂಜಯ ।
ಚಚಾರ ವಿಪುಲಂ ಕಾಲಂ ತಪಃ ಪರಮದುಶ್ಚರಂ ॥ ೯ ॥
ಸ್ಥಾಣುವತ್ಸಂಸ್ಥಿತಾ ಸಾಽಭೂದ್ದಿವ್ಯಂ ವರ್ಷಸಹಸ್ರಕಂ ।
ತತ ಇಂದ್ರಾದಯೋ ದೇವಾಃ ಶಂಖಚಕ್ರಗದಾಧರಾಃ ॥ ೧೦ ॥
ಭೂತ್ವಾ ಜಗ್ಮುಸ್ತದರ್ಥಂ ತೇ ಸಾತು ಪೃಷ್ಟವತೀ ಸುರಾನ್ ।
ವಿಶ್ವರೂಪಂ ವೈಷ್ಣವಂ ಯತ್ತದ್ದರ್ಶಯತ ಮಾಚಿರಂ ॥ ೧೧ ॥
ವಿಲಕ್ಷಾ ವ್ರೀಡಿತಾ ದೇವಾ ಗತ್ವಾ ನಾರಾಯಣಂ ತದಾ ।
ಅಬ್ರುವನ್ವೈಶ್ವರೂಪಂ ನೋ ಶಕ್ತಾ ದರ್ಶಯಿತುಂ ವಯಂ ॥ ೧೨ ॥
ತತೋ ಯಥೇಷ್ಟಂ ತೇ ಜಗ್ಮುಃ ಸ ಚ ವಿಷ್ಣುರಚಿಂತಯತ್ ।
ಉಗ್ರರೂಪಾ ಸ್ಥಿತಾ ದೇವೀ ದೇಹಂ ದಹತಿ ಭಾರ್ಗವೀ ॥ ೧೩ ॥

---

ಇಂತೆಂದಳು. ನಾನು ಶಂಕರನನ್ನೂ, ಗಾಯತ್ರಿಯು ಬ್ರಹ್ಮನನ್ನೂ, ಇತರ ಹೆಂಗಸರು ತಮಗೆ ಇಷ್ಟರಾದವರನ್ನೂ ಪತಿಗಳನ್ನಾಗಿ ಪಡೆದಿರುವರು.

೮. ಲಕ್ಷ್ಮೀ! ನೀನು ತಪಸ್ಸಿನಿಂದಲೇ ಆ ವಿಷ್ಣುವನ್ನು ಪಡೆಯಲು ಸಮರ್ಥಳು. ಉಗ್ರವಾದ ತಪಸ್ಸು ಸಕಲೇಷ್ಟಾರ್ಥಗಳನ್ನು ಕೊಡುವುದು.

೯. ಮಾರ್ಕಂಡೇಯನು ಹೇಳುತ್ತಾನೆ:—ಶತ್ರುನಾಶಕನಾದ ದೊರೆಯೆ! ಲಕ್ಷ್ಮಿಯು ಸಮುದ್ರದ ಕೊನೆಯನ್ನು ಹೊಂದಿ ಬಹುಕಾಲದವರೆಗೆ ಅತಿದುರ್ಲಭವಾದ ತಪಸ್ಸನ್ನು ಮಾಡಿದಳು.

೧೦–೧೧. ಅವಳು ದಿವ್ಯ ಸಹಸ್ರ ವರ್ಷಗಳಕಾಲ ಸ್ಥಾಣುವಿನಂತೆ ಅಲ್ಲಾಡದೆ ಇದ್ದಳು. ಅನಂತರ ಇಂದ್ರಾದಿ ದೇವತೆಗಳು ಶಂಖಚಕ್ರಗದೆಗಳನ್ನು ಹಿಡಿದವರಾಗಿ ಆ ಲಕ್ಷ್ಮಿಗಾಗಿ ಅವಳೆಡೆಗೆ ಹೋದರು. ಅವಳು ಅವರನ್ನು ಕುರಿತು ವಿಷ್ಣುವಿನ ವಿಶ್ವರೂಪವನ್ನು ಕೂಡಲೆ ತೋರಿಸಿರಿ ಎಂದಳು.

೧೨. ಆಗ ನಾಚಿಕೆಗೊಂಡ ದೇವತೆಗಳು ನಾರಾಯಣನೆಡೆಗೆ ಹೋಗಿ ನಾವು ವಿಶ್ವರೂಪವನ್ನು ತೋರಿಸಲು ಶಕ್ತರಾಗಲಿಲ್ಲ, ಎಂದರು.

೧೩. ಅನಂತರ ಅವರು ತಮ್ಮ ಇಚ್ಛೆಯಂತೆ ಹೊರಟು ಹೋದರು. ಆಗ ವಿಷ್ಣುವು ಹೀಗೆ ಆಲೋಚಿಸಿದನು. '' ಲಕ್ಷ್ಮಿಯು ಉಗ್ರರೂಪವನ್ನು ತಾಳಿ ದೇಹವನ್ನು ಸುಡುತ್ತಿರುವಳು.

ತಾಂ ತಸ್ಮಾತ್ತತ್ರ ಗತ್ವಾಽಹಂ ವರಂ ದತ್ವಾ ತು ವಾಂಛಿತಂ ।
ಪುನಸ್ತಪಃ ಕರಿಷ್ಯಾಮಿ ದರ್ಶಯಿಷ್ಯಾಮಿ ವಾ ಪುನಃ ।
ವೈಷ್ಣವಂ ವಿಶ್ವರೂಪಂ ಯದ್ದುರ್ದರ್ಶಂ ದೇವದಾನವೈಃ ॥ ೧೪ ॥

ಮಾರ್ಕಂಡೇಯ ಉವಾಚ :—

ತತೋ ಗತ್ವಾ ಹೃಷೀಕೇಶಃ ಸಾಗರಾಂತಸ್ಥಿತಾಂ ಶ್ರಿಯಂ ।
ಪ್ರಾಹ ತುಷ್ಟೋಽಸ್ಮಿ ತೇ ದೇವಿ ವರಂ ವೃಣು ಯಥೇಪ್ಸಿತಂ ॥ ೧೫ ॥

ಶ್ರೀರುವಾಚ :—

ಯದಿ ತುಷ್ಟೋಽಸಿ ಮೇ ದೇವ ಪ್ರಪನ್ನಾಯಾ ಜನಾರ್ದನ ।
ತದಾ ದರ್ಶಯ ಯದ್ದೃಷ್ಟಮಪ್ಸರೋಭಿಸ್ತ್ವಾಽನಘ ॥ ೧೬ ॥
ವಿಶ್ವರೂಪಮನಂತಂ ಚ ಭೂತಭಾವನ ಕೇಶವ ।
ಗಂಧಮಾದನಮಾಸಾದ್ಯ ಕೃತಂ ಯಚ್ಚ ತಪಸ್ತ್ವಯಾ ॥ ೧೭ ॥
ತದ್ವದಸ್ವ ವಿಭೋ ವಿಷ್ಣೋ ನ ಮಿಥ್ಯಾ ಯದಿ ಕೇಶವ ।
ಶ್ರದ್ದಧಾಮಿ ನ ಚೈವಾಽಹಂ ರೂಪಸ್ಯಾಸ್ಯ ಕಥಂ ಚ ನ ॥ ೧೮ ॥
ಬಹುಭಿರ್ಯಕ್ಷರಕ್ಷೋಭಿರ್ಮಾಯಾಚಾರಿಪ್ರಚಾರಿಭಿಃ ।
ಛಂದಿತಾ ಮಮ ಜಾನದ್ಭಿರ್ಭಾವಮಂತರ್ಗತಂ ಹರೌ ॥ ೧೯ ॥
ಭೂತ್ವಾ ವಿಷ್ಣುಸ್ವರೂಪಾಸ್ತೇ ಚಕ್ರಿಣಶ್ಚ ಚತುರ್ಭುಜಾಃ ।
ಸುವ್ರೀಡಿತಾ ಗತಾಃ ಸರ್ವೇ ವಿಶ್ವರೂಪೋ ಸಹಾಯುತಃ ॥ ೨೦ ॥

---

೧೪. ಆದ್ದರಿಂದ ನಾನು ಅಲ್ಲಿಗೆ ಹೋಗಿ ಅವಳಿಗೆ ಇಷ್ಟವಾದವರವನ್ನಿತ್ತು ಮರಳಿ ತಪವನ್ನಾಚರಿಸುವೆನು. ದೇವದಾನವರಿಂದ ನೋಡಲಾಗದ ವಿಶ್ವರೂಪ ವನ್ನು ತೋರಿಸುವೆನು.''

೧೫. ಮಾರ್ಕಂಡೇಯನು ಹೇಳುತ್ತಾನೆ :—ಅನಂತರ ವಿಷ್ಣುವು ಸಮುದ್ರದ ಕೊನೆಯಲ್ಲಿರುವ ಲಕ್ಷ್ಮಿಯೆಡೆಗೆ ಹೋಗಿ ಇಂತೆಂದನು. ''ದೇವಿ! ನಾನು ನಿನ್ನಲ್ಲಿ ಸಂತುಷ್ಟನಾಗಿದ್ದೇನೆ. ಇಷ್ಟವಾದ ವರವನ್ನು ಕೇಳಿಕೊ.''

೧೬–೧೭. ಲಕ್ಷ್ಮಿಯು ಹೇಳುತ್ತಾಳೆ:—ದೇವ! ಮರೆಹೊಕ್ಕ ನನ್ನಲ್ಲಿ ನೀನು ಸಂತುಷ್ಟನಾಗಿದ್ದರೆ ಅಪ್ಸರೆಯರು ನೋಡಿದ, ಗಂಧಮಾದನ ಪರ್ವತದಲ್ಲಿ ತಪಸ್ಸನ್ನು ಮಾಡುತ್ತಿದ್ದ ನಿನ್ನ ವಿಶ್ವರೂಪವನ್ನು ತೋರಿಸು.

೧೮. ಕೇಶವ! ಅದು ಸುಳ್ಳಲ್ಲವಷ್ಟೆ, ಹೇಳು. ಈ ನಿನ್ನ ರೂಪವನ್ನು ನಾನು ನಂಬಲಾರೆ.

೧೯. ನನ್ನ ಮನೋಭಾವವನ್ನರಿತ ಅನೇಕ ಮಂದಿ ಯಕ್ಷರು, ರಾಕ್ಷಸರು, ಮಾಯಾಚಾರಿಗಳು ನನ್ನನ್ನು ವಶಮಾಡಿಕೊಳ್ಳಲು ಪ್ರಯತ್ನಿಸಿದರು.

೨೦. ವಿಷ್ಣುಸ್ವರೂಪವುಳ್ಳ ಅವರು ಚಕ್ರಧಾರಿಗಳೂ, ಚತುರ್ಭುಜರೂ ಆಗಿ ವಿಶ್ವರೂಪವನ್ನು ತೋರಿಸಲಾರದೆ ನಾಚಿಕೆಯಿಂದ ಹೊರಟುಹೋದರು.

ಮಾರ್ಕಂಡೇಯ ಉವಾಚ :—

ನಾರಾಯಣೋಽಥ ಭಗವಾಂಛಂಖಚಕ್ರಗದಾಭೃತಂ ।
ತಯಾ ತಥೋಕ್ತಸ್ತದ್ರೂಪಂ ಮುಕ್ತ್ವಾ ವೈ ಸುರಪೂಜಿತಂ ॥ ೨೧ ॥
ರೂಪಂ ಪರಂ ಯಥೋಕ್ತಂ ವೈ ವಿಶ್ವರೂಪಮದರ್ಶಯತ್ ।
ದರ್ಶಯಿತ್ವಾ ವಚಃ ಪ್ರಾಹ ಪಂಚರಾತ್ರವಿಧಾನತಃ ॥ ೨೨ ॥
ಯೋಽರ್ಚಯಿಷ್ಯತಿ ಮಾಂ ನಿತ್ಯಂ ಸ ಪೂಜ್ಯಃ ಸ ಚ ಪೂಜಿತಃ ।
ಧನಧಾನ್ಯಸಮಾಯುಕ್ತಃ ಸರ್ವಭೋಗಸಮನ್ವಿತಃ ॥ ೨೩ ॥
ಮೂಲಂ ಹಿ ಸರ್ವಧರ್ಮಾಣಾಂ ಬ್ರಹ್ಮಚರ್ಯಂ ಪರಂ ತಪಃ ।
ತೇನಾಽಹಂ ತತ್ರ ಸ್ಥಾಸ್ಯಾಮಿ ಮೂಲಶ್ರೀಪತಿಸಂಜ್ಞಿತಃ ॥ ೨೪ ॥
ಮೂಲಶ್ರೀಃ ಪ್ರೋಚ್ಯತೇ ಬ್ರಾಹ್ಮೀ ಬ್ರಹ್ಮಚರ್ಯಸ್ವರೂಪಿಣೀ ।
ಸರ್ವಯೋಗಮಯೀ ಪುಣ್ಯಾ ಸರ್ವಪಾಪಹರೀ ಶುಭಾ ॥ ೨೫ ॥
ಪತಿಸ್ತಸ್ಯಾಃ ಪ್ರಭುರಹಂ ವರದಃ ಪ್ರಾಣಿನಾಂ ಪ್ರಿಯೇ ।
ರೇವಾಜಲೇ ನರಃ ಸ್ನಾತ್ವಾ ಯೋಽರ್ಚಯೇನ್ಮಾಂ ಯತವ್ರತಃ ॥ ೨೬ ॥
ಮೂಲಶ್ರೀಪತಿನಾಮಾನಂ ವಾಂಛಿತಂ ಪ್ರಾಪ್ನುಯಾತ್ಫಲಂ ।
ದಾನಾನಿ ತತ್ರ ಯೋ ದದ್ಯಾನ್ಮಹಾದಾನಾನಿ ಚ ಪ್ರಿಯೇ ॥ ೨೭ ॥

---

೨೧–೨೩. ಮಾರ್ಕಂಡೇಯನು ಹೇಳುತ್ತಾನೆ:—ಬಳಿಕ ನಾರಾಯಣನು ಆ ಲಕ್ಷ್ಮಿಯು ಹಾಗೆ ಹೇಳಲು ಶಂಖಚಕ್ರಗದೆಗಳನ್ನು ಧರಿಸಿರುವುದೂ, ಸುರವಂದ್ಯವೂ ಆದ ಆ ರೂಪವನ್ನು ತ್ಯಜಿಸಿ ಉತ್ತಮವಾದ ವಿಶ್ವರೂಪವನ್ನು ತೋರಿಸಿ ಇಂತೆಂದನು. ''ನಿತ್ಯವೂ ಪಂಚರಾತ್ರ ವಿಧಾನದಿಂದ ನನ್ನನ್ನು ಪೂಜಿಸಿದವನು ಧನ, ಧಾನ್ಯ, ಭೋಗಗಳಿಂದ ಕೂಡಿದವನಾಗುವನು.

೨೪. ಬ್ರಹ್ಮಚರ್ಯೆಯು ಸಕಲ ಧರ್ಮಗಳಿಗೆ ಮೂಲವಾದುದು. ಅದು ಉತ್ತಮ ತಪಸ್ಸೆನಿಸಿಕೊಳ್ಳುವುದು. ನಾನು ಆ ಬ್ರಹ್ಮಚರ್ಯೆಯುಳ್ಳವನಾಗಿ ಗಂಧಮಾದನ ಪರ್ವತದಲ್ಲಿ ಮೂಲ ಶ್ರೀಪತಿಯೆಂಬ ಹೆಸರಿನಿಂದ ಇರುವೆನು.

೨೫. ಬ್ರಹ್ಮಚರ್ಯಸ್ವರೂಪಿಣಿಯೂ, ಸರ್ವಯೋಗಮಯಳೂ, ಸಕಲ ಪಾಪಹಾರಿಣಿಯೂ, ಪುಣ್ಯಕರಳೂ ಆದ ಬ್ರಾಹ್ಮಿಯು ಮೂಲ ಶ್ರೀಯೆನ್ನಿಸಿಕೊಳ್ಳುವಳು.

೨೬–೨೮. ಪ್ರಿಯಳೆ! ನಾನು ಅವಳಿಗೆ ಸ್ವಾಮಿಯೂ, ಪ್ರಾಣಿಗಳಿಗೆ ವರವನ್ನೀಯುವವನೂ ಆಗಿರುವೆನು. ನರ್ಮದಾನದಿಯ ನೀರಿನಲ್ಲಿ ಮಿಂದು ನಿಯಮದಿಂದ ಮೂಲ ಶ್ರೀಪತಿಯೆಂಬ ನನ್ನನ್ನು ಅರ್ಚಿಸುವ ಮಾನವನು ಇಷ್ಟವಾದ ಫಲವನ್ನು ಹೊಂದುವನು. ಅಲ್ಲಿ ಸಾಮಾನ್ಯ ದಾನಗಳನ್ನೂ, ಮಹಾದಾನಗಳನ್ನೂ ಕೊಡುವವನು ಬೇರೆ ಸ್ಥಳಕ್ಕಿಂತ ಸಾವಿರದಷ್ಟು ಹೆಚ್ಚು

ಸಹಸ್ರಗುಣಿತಂ ಪುಣ್ಯಮನ್ಯಸ್ಥಾನಾದವಾಪ್ಯತೇ ।
ದೃಷ್ಟಂ ತ್ವಯಾ ತತ್ರ ದೇಶೇ ಸಮ್ಯಕ್ಚೈವಾಽವಧಾರಿತಂ ।
ತದರ್ಚಿತ್ವಾ ಪರಾನ್ಕಾಮಾನಾಪ್ಸ್ಯಸಿ ತ್ವಂ ನ ಸಂಶಯಃ ॥ ೨೮ ॥
ವರಂ ವೃಣೀಷ್ವ ದೇವೇಶಿ ವಾಂಛಿತಂ ದುರ್ಲಭಂ ಸುರೈಃ ।
ದುರ್ಗಸಂಸಾರಕಾಂತಾರಪತಿತೈಃ ಪರಮೇಶ್ವರಿ ॥ ೨೯ ॥

ಶ್ರೀರುವಾಚ:—

ನಾರಾಯಣ ಜಗದ್ಧಾತರ್ನಾರಾಯಣ ಜಗತ್ಪತೇ ।
ನಾರಾಯಣ ಪರಬ್ರಹ್ಮ ನಾರಾಯಣ ಪರಾಯಣ ॥ ೩೦ ॥
ಪ್ರಸೀದ ಪಾಹಿ ಮಾಂ ಭಕ್ತ್ಯಾ ಸಮ್ಯಕ್ಸರ್ಗೇ ನಿಯೋಜಯ ।
ಪ್ರಿಯೋಽಸ್ಯಸಿ ಪ್ರಿಯಾಽಹಂ ತೇ ಯಥಾಸ್ಯಾಂ ತತ್ತಥಾ ಕುರು ॥ ೩೧ ॥
ಗೃಹಂ ಧರ್ಮಾರ್ಥಕಾಮಾನಾಂ ಕಾರಣಂ ದೇವ ಸಂಮತಂ ।
ತದಾಸ್ಥಾಯಾಶ್ರಮಂ ಪುಣ್ಯಂ ಮಾಂ ಶ್ರೇಯಸಿ ನಿಯೋಜಯ ॥ ೩೨ ॥

ನಾರಾಯಣ ಉವಾಚ:—

ನಾರಾಯಣಗಿರಾ ದೇವಿ ವಿಜ್ಞಪ್ತೋಽಸ್ಮಿ ಯತಸ್ತ್ವಯಾ ।
ನಾರಾಯಣಗಿರಿರ್ನಾಮ ತೇನ ಮೇಽತ್ರ ಭವಿಷ್ಯತಿ ॥ ೩೩ ॥

---

ಪುಣ್ಯವನ್ನು ಪಡೆಯುವನು. ನೀನು ಅಲ್ಲಿ ಅವನನ್ನು ನೋಡಿದೆಯಾ? ಚೆನ್ನಾಗಿ ಮನಸ್ಸಿನಲ್ಲಿ ನಿಶ್ಚಯಿಸಿರುವೆಯಾ? ಅವನನ್ನು ಪೂಜಿಸಿ ಉತ್ತಮವಾದ ಅಭಿಲಾಷೆಗಳನ್ನು ಹೊಂದುವೆ.

೨೯. ಪರಮೇಶ್ವರಿ! ದುರ್ಗಮವಾದ ಸಂಸಾರವೆಂಬ ವನದಲ್ಲಿ ಪತಿತರಾದ ಮಾನವರಿಂದಲೂ, ದೇವತೆಗಳಿಂದಲೂ ಹೊಂದಲಶಕ್ಯವಾದ ವರವನ್ನು ಕೇಳಿಕೊ.

೩೦–೩೧. ಶ್ರೀಯು ಹೇಳುತ್ತಾಳೆ:—ಜಗದುತ್ಪತ್ತಿಕಾರಣನೂ, ಜಗದೊಡೆಯನೂ, ಪರಬ್ರಹ್ಮನೂ ಆದ ನಾರಾಯಣ! ಪ್ರಸನ್ನನಾಗು. ಭಕ್ತಳಾದ ನನ್ನನ್ನು ಕಾಪಾಡು. ಸೃಷ್ಟಿಯಲ್ಲಿ ನೇಮಿಸು. ನೀನು ನನಗೆ ಪ್ರಿಯನಾಗಿರುವೆ. ನಾನು ನಿನ್ನ ಪ್ರಿಯಳಾಗುವಂತೆ ಮಾಡು.

೩೨. ಪತ್ನಿಯು ಧರ್ಮಾರ್ಥಕಾಮಗಳಿಗೆ ಕಾರಣಳು. ಆ ಪುಣ್ಯಕರವಾದ ಗೃಹಸ್ಥಾಶ್ರಮವನ್ನು ಹೊಂದಿ ನನಗೆ ಶ್ರೇಯಸ್ಸನ್ನುಂಟುಮಾಡು.

೩೩. ನಾರಾಯಣನು ಹೇಳುತ್ತಾನೆ:—ದೇವಿ! ನೀನು ನಾರಾಯಣನೆಂಬ ಶಬ್ದದಿಂದ ನನ್ನನ್ನು ವಿಜ್ಞಾಪಿಸಿರುವುದರಿಂದ ಇದು ನಾರಾಯಣಗಿರಿಯೆಂದು ಪ್ರಸಿದ್ಧವಾಗುವುದು.

ನಾರಾಯಣಸ್ಮೃತೌ ಯಾತಿ ದುರಿತಂ ಜನ್ಮಕೋಟಿಜಂ ।
ಯಸ್ಮಾದ್ಗಿರತಿ ತಸ್ಮಾಚ್ಚ ಗಿರಿರಿತ್ಯೇವ ಶಬ್ದಿತಂ ॥ ೩೪ ॥
ತಸ್ಮಾತ್ಸರ್ವಾಶ್ರಯೋ ದೇವಿ ಗಿರಿಃ ಪರ್ವತರಾಡ್ ಭವೇತ್ ।
ಸುರಾಽಸುರಮನುಷ್ಯಾಣಾಂ ಯಥಾಽಹಮಪಿ ಚಾಶ್ರಯಃ ॥ ೩೫ ॥
ಯ ಏತತ್ಪೂಜಯಿಷ್ಯಂತಿ ಮಂಡಲಸ್ಥಂ ಪರಂ ಮಮ ।
ನಾರಾಯಣಗಿರಿರ್ನಾಮ ದೇವರೂಪಂ ಶುಭೇಕ್ಷಣೇ ॥ ೩೬ ॥
ತೇ ದಿವ್ಯಜ್ಞಾನಸಂಪನ್ನಾ ದಿವ್ಯದೇಹವಿಚೇಷ್ಟಿತಾಃ ।
ದಿವ್ಯಂ ಲೋಕಮವಾಪ್ಸ್ಯಂತಿ ದಿವ್ಯಭೋಗಸಮನ್ವಿತಾಃ ॥ ೩೭ ॥

ಮಾರ್ಕಂಡೇಯ ಉವಾಚ:—

ತಯೋರೇವಂ ಸಂವದತೋರ್ದೇವಾ ಇಂದ್ರಪುರೋಗಮಾಃ ।
ಸಮಾಗತಾ ವನೋದ್ದೇಶಂ ಸಾಗರಾಂತೇ ಮಹರ್ಷಯಃ ॥ ೩೮ ॥
ತತೋ ಭೃಗುಂ ದೇವರಾಜೋ ನಾರಾಯಣವಿಚಿಂತಿತಂ ।
ವವ್ರೇ ಜ್ಞಾತ್ವಾ ತು ತತ್ಕನ್ಯಾಂ ಧರ್ಮಾತ್ಮಾ ಸ ದದೌ ಚ ತಾಂ ॥ ೩೯ ॥
ಧರ್ಮೋಽಪಿ ವಿಧಿವದ್ವತ್ಸ ವಿವಾಹಂ ಸಮಕಾರಯತ್ ।
ದೇವದೇವಸ್ಯ ರಾಜರ್ಷೇ ದೇವತಾರ್ಥೇ ಸಮಾಹಿತಃ ॥ ೪೦ ॥

---

೩೪. ನಾರಾಯಣಸ್ಮರಣೆಯಿಂದ ಅನೇಕ ಜನ್ಮಗಳ ಪಾಪವು ಪರಿಹಾರವಾಗುವುದು. ಅವನ ಮಾಹಾತ್ಮ್ಯವನ್ನು ಹೇಳುವುದರಿಂದ ಇದು ಗಿರಿಯೆನ್ನಿಸಿಕೊಳ್ಳುವುದು.

೩೫. ದೇವಿ! ಆದ್ದರಿಂದ ನಾನು ಸುರಾಸುರ ಮನುಷ್ಯರಿಗೆ ಆಶ್ರಯನಾಗಿರುವಂತೆ ಈ ಪರ್ವತವೂ ಸಮಸ್ತಕ್ಕೂ ಆಶ್ರಯವಾಗಿ ಪರ್ವತರಾಜನೆನ್ನಿಸಿಕೊಳ್ಳುವುದು.

೩೬–೩೭. ಸುಂದರಿಯೆ! ದೇವರೂಪವಾದ ಈ ನಾರಾಯಣ ಗಿರಿಯನ್ನು ಪೂಜಿಸುವವರು ದಿವ್ಯಜ್ಞಾನವುಳ್ಳವರೂ, ದಿವ್ಯ ದೇಹ ಮತ್ತು ಕಾರ್ಯವುಳ್ಳವರೂ, ದಿವ್ಯಭೋಗದಿಂದ ಕೂಡಿದವರೂ ಆಗಿ ದಿವ್ಯಲೋಕವನ್ನು ಹೊಂದುವರು.

೩೮. ಮಾರ್ಕಂಡೇಯನು ಹೇಳುತ್ತಾನೆ:—ಆ ಲಕ್ಷ್ಮೀನಾರಾಯಣರು ಹೀಗೆ ಸಮುದ್ರದ ನಡುವೆ ಮಾತನಾಡುತ್ತಿರಲು ಇಂದ್ರಾದಿ ದೇವತೆಗಳೂ, ಮಹರ್ಷಿಗಳೂ ಅಲ್ಲಿಗೆ ಬಂದರು.

೩೯–೪೦. ಅನಂತರ ಇಂದ್ರನು ನಾರಾಯಣನನ್ನು ಚಿಂತಿಸಿ ಭೃಗುವನ್ನು ಕರೆಯಿಸಿದನು. ಧರ್ಮಾತ್ಮನಾದ ಅವನು ಆ ಶ್ರೀದೇವಿಯನ್ನು ನಾರಾಯಣನಿಗೆ ಕೊಟ್ಟನು. ಧರ್ಮನೂ ದೇವತೆಗಳಿಗಾಗಿ ವಿಧಿಪೂರ್ವಕವಾಗಿ ನಾರಾಯಣನ ವಿವಾಹವನ್ನು ಮಾಡಿಸಿದನು.

ಯುಧಿಷ್ಠಿರ ಉವಾಚ :—

ಧರ್ಮೋ ವಿವಾಹಮಕರೋದ್ವಿಧಿವದ್ಯತ್ತ್ವಯೋದಿತಂ ।
ಕೋ ವಿಧಿಸ್ತತ್ರ ಕಾ ದತ್ತಾ ದಕ್ಷಿಣಾ ಭೃಗುಣಾಽಪಿ ಚ ॥ ೪೧ ॥
ವಿವಾಹಯಜ್ಞೇ ಸಮಭೂತ್ ಸ್ರುಕ್‌ಸ್ರುವಗ್ರಹಣೇ ಚ ಕಃ ।
ಋತ್ವಿಜಃ ಕೇ ಸದಸ್ಯಾಶ್ಚ ತಸ್ಯಾಸನ್ ದ್ವಿಜಸತ್ತಮ ॥ ೪೨ ॥
ಕಿಂ ತಸ್ಯಾಽವಭೃಥಂ ತ್ವಾಸೀತ್ತತ್ಸರ್ವಂ ವದ ವಿಸ್ತರಾತ್ ।
ತ್ವದ್ವಾಕ್ಯಾಮೃತಪಾನೇನ ತೃಪ್ತಿರ್ಮನ ನ ವಿದ್ಯತೇ ॥ ೪೩ ॥

ಮಾರ್ಕಂಡೇಯ ಉವಾಚ :—

ನಾರಾಯಣವಿವಾಹಸ್ಯ ಯಜ್ಞಸ್ಯ ಚ ಯುಧಿಷ್ಠಿರ ।
ತಪಸಸ್ತಸ್ಯ ದೇವಸ್ಯ ಸಮ್ಯಗಾಚರಣಸ್ಯ ಚ ॥ ೪೪ ॥
ವಕ್ತುಂ ಸಮರ್ಥೋ ನ ಗುಣಾನ್ ಬ್ರಹ್ಮಾಽಪಿ ಪರಮೇಶ್ವರಃ ।
ತಥಾಽಪ್ಯುದ್ದೇಶತೋ ವಕ್ಷ್ಯೇ ಶೃಣು ಭೂತ್ವಾ ಸಮಾಹಿತಃ ॥ ೪೫ ॥
ಬ್ರಹ್ಮಾ ಸಪ್ತರ್ಷಯಸ್ತತ್ರ ಸ್ರುಕ್ಸ್ರುವಗ್ರಹಣೇ ರತಾಃ ।
ಅಗ್ನೀನ್‌ಜುಹುವಿರೇ ರಾಜನ್ವೇದಿರ್ಧಾತ್ರೀ ಸಸಾಗರಾ ॥ ೪೬ ॥
ದದುಃ ಸಮುದ್ರಾ ರತ್ನಾನಿ ಬ್ರಹ್ಮರ್ಷಿಭ್ಯೋ ನೃಪೋತ್ತಮ ।
ಧನದೋಽಪಿ ದದೌ ವಿತ್ತಂ ಸರ್ವಬ್ರಾಹ್ಮಣವಾಂಛಿತಂ ॥ ೪೭ ॥

---

೪೧. ಯುಧಿಷ್ಠಿರನು ಹೇಳುತ್ತಾನೆ:—ಮುನಿಯೆ! ಧರ್ಮನು ವಿವಾಹವನ್ನು ಮಾಡಿದನೆಂದು ನೀನು ಹೇಳಿದೆ. ಆ ವಿವಾಹದ ವಿಧಿಯಾವುದು? ಆ ಸಮಯದಲ್ಲಿ ಭೃಗುವು ಏನನ್ನು ದಕ್ಷಿಣೆಯಾಗಿ ಕೊಟ್ಟನು?

೪೨. ದ್ವಿಜವರ್ಯನೆ! ವಿವಾಹಯಜ್ಞದಲ್ಲಿ ಸ್ರುಕ್ಸ್ರುವಗಳನ್ನು ಯಾರು ಹಿಡಿದರು? ಋತ್ವಿಜರೂ, ಸದಸ್ಯರೂ ಯಾರು?

೪೩. ಆ ವಿವಾಹದಲ್ಲಿ ಅವಭೃಥವು ಯಾವುದಾಯಿತು? ಅದನ್ನೆಲ್ಲ ನನಗೆ ವಿಸ್ತಾರವಾಗಿ ಹೇಳು. ನಿನ್ನ ವಾಕ್ಯವೆಂಬ ಅಮೃತಪಾನದಿಂದ ನನಗೆ ತೃಪ್ತಿಯುಂಟಾಗುವುದಿಲ್ಲ. ಇನ್ನೂ ಕೇಳಬೇಕೆಂದು ಆಸೆಯಾಗುತ್ತಿದೆ.

೪೪—೪೬. ಮಾರ್ಕಂಡೇಯನು ಹೇಳುತ್ತಾನೆ:—ನಾರಾಯಣನ ವಿವಾಹಯಜ್ಞವನ್ನೂ, ತಪಸ್ಸನ್ನೂ, ಸಾಧ್ವಾಚಾರವನ್ನೂ ಹೇಳಲು ಬ್ರಹ್ಮಮಹೇಶ್ವರರೂ ಸಮರ್ಥರಲ್ಲ. ಹಾಗಾದರೂ ಸಂಕ್ಷೇಪವಾಗಿ ಹೇಳುವೆನು. ಸಾವಧಾನ ಮನಸ್ಸಿನಿಂದ ಕೇಳು. ಬ್ರಹ್ಮನೂ, ಸಪ್ತರ್ಷಿಗಳೂ, ಸ್ರುಕ್ಸ್ರುವಗ್ರಹಣದಲ್ಲಿ ನಿರತರಾದರು. ಸಮುದ್ರಗಳಿಂದ ಸಹಿತಳಾದ ಭೂಮಿದೇವಿಯು ವೇದಿಕೆಯಾದಳು.

೪೭. ಸಮುದ್ರಗಳು ರತ್ನಗಳನ್ನು ಬ್ರಹ್ಮರ್ಷಿಗಳಿಗೆ ಕೊಟ್ಟವು. ಕುಬೇರನು ಸಮಸ್ತ ಬ್ರಾಹ್ಮಣರಿಗೂ ಅವರವರಿಗೆ ಇಷ್ಟವಾದ ದ್ರವ್ಯವನ್ನು ಕೊಟ್ಟನು.

ವಿಶ್ವಕರ್ಮಾಽಪಿ ದೇವಾನಾಂ ಬ್ರಹ್ಮರ್ಷೀಣಾಂ ಪರಂತಪ ।
ವೇಶ್ಮಾನಿ ಸುವಿಚಿತ್ರಾಣಿ ಸರ್ವರತ್ನಮಯಾನಿ ಚ ॥ ೪೮ ॥
ಕೃತ್ವಾ ಪ್ರದರ್ಶಯಾಮಾಸ ದೇವೇಂದ್ರಾಯ ಯಶಸ್ವಿನೇ ।
ಶತಕ್ರತುಸ್ತತೋ ವಿಪ್ರಾನ್ಕಾಪಿಷ್ಠಲಪುರೋಗಮಾನ್ ॥ ೪೯ ॥
ಶೌನಕಾದೀಂಶ್ಚ ಪಪ್ರಚ್ಛ ಬಾಷ್ಕಲಾನ್ಭಾಗಲಾನಪಿ ।
ಆತ್ರೇಯಾನಪಿ ರಾಜೇಂದ್ರ ವೃಣುಧ್ವಮಭಿವಾಂಛಿತಂ ॥ ೫೦ ॥
ದೃಷ್ಟ್ವಾ ತೇ ಚಿತ್ರರತ್ನಾನಿ ಪ್ರಾಹುಃ ಸರ್ವೇಶ್ವರೇಶ್ವರಂ ।
ದೇವಾನಾಂ ಚ ಋಷೀಣಾಂ ಚ ಸಂಗಮೋಽಯಂ ಸುಪುಣ್ಯಕೃತ್ ॥ ೫೧ ॥
ಅಸ್ಮಿನ್ಪುಣ್ಯೇ ಸುರೇಶಾನ ವಸ್ತುಂ ವಾಂಛಾಮಹೇ ಸದಾ ।
ಶತಕ್ರತುಃ ಪ್ರಾಹ ಪುನರ್ವಾಸೋ ವೋಽತ್ರ ಭವಿಷ್ಯತಿ ।
ಸತ್ಯಧರ್ಮರತಾ ಯೂಯಂ ಯಾವತ್ಕಾಲಂ ಭವಿಷ್ಯಥ ॥ ೫೨ ॥

ಮಾರ್ಕಂಡೇಯ ಉವಾಚ :—

ಪೃಷ್ಟಂ ಯದ್ರಾಜಶಾರ್ದೂಲ ಕೇ ಮಖೇ ಹೋತೃಣೋಽಭವನ್ ।
ತತ್ಪ್ರೋಚ್ಯಮಾನಮಧುನಾ ಶೃಣು ಭೂತ್ವಾ ಸಮಾಹಿತಃ ॥ ೫೩ ॥
ಸನತ್ಕುಮಾರಪ್ರಮುಖಾಃ ಸದಸ್ಯಾಸ್ತಸ್ಯ ಚಾಽಭವನ್ ।
ಔದ್ಗಾತ್ರಮತ್ರ್ಯಂಗಿರಸೌ ಮರೀಚಿಶ್ಚ ಚಕಾರ ಹ ॥ ೫೪ ॥

---

೪೮–೫೦. ಶತ್ರುಸಂತಾಪಕನಾದ ಎಲೈ ಮಹಾರಾಜನೆ! ವಿಶ್ವಕರ್ಮನು ದೇವತೆಗಳಿಗೂ, ಬ್ರಹ್ಮರ್ಷಿಗಳಿಗೂ ವಿಚಿತ್ರಕರಗಳೂ, ಸಮಸ್ತ ರತ್ನಮಯಗಳೂ ಆದ ಮನೆಗಳನ್ನು ನಿರ್ಮಿಸಿ ಕೀರ್ತಿವಂತನಾದ ಇಂದ್ರನಿಗೆ ತೋರಿದನು. ಅನಂತರ ಇಂದ್ರನು ಕಾಪಿಷ್ಠಲ, ಶೌನಕ, ಬಾಷ್ಕಲ, ಭಾಗಲ, ಆತ್ರೇಯ ಮೊದಲಾದ ಬ್ರಾಹ್ಮಣರನ್ನು ಕುರಿತು ನಿಮಗಿಷ್ಟವಾದುದನ್ನು ಕೇಳಿಕೊಳ್ಳಿರಿ ಎಂದನು.

೫೧. ಅವರು ವಿಚಿತ್ರರತ್ನಗಳನ್ನು ನೋಡಿ ಇಂದ್ರನನ್ನು ಕುರಿತು ಹೇಳಿದರು. "ಮಹೇಂದ್ರಾ! ಈ ದೇವರ್ಷಿಗಳ ಸಂಗಮವು ಪುಣ್ಯಕರವಾದುದು.

೫೨. ಸುರೇಶ್ವರ! ನಾವು ಪುಣ್ಯಕರವಾದ ಈ ಕ್ಷೇತ್ರದಲ್ಲಿ ಯಾವಾಗಲೂ ವಾಸಮಾಡಬಯಸುವೆವು" ಎಂದರು. ಇಂದ್ರನು "ನೀವು ಇಲ್ಲಿ ವಾಸಮಾಡಿರಿ. ಯಾವಾಗಲೂ ಸತ್ಯಧರ್ಮಗಳಲ್ಲಿ ನಿರತರಾಗಿರಿ" ಎಂದು ಹೇಳಿದನು.

೫೩. ಮಾರ್ಕಂಡೇಯನು ಹೇಳುತ್ತಾನೆ:—ಮಹಾರಾಜ! ನೀನು, "ಯಜ್ಞದಲ್ಲಿ ಯಾರು ಹೋತೃಗಳಾದರು" ಎಂದು ಕೇಳಿದೆಯಷ್ಟೆ. ಈಗ ನಾನು ಹೇಳುವುದನ್ನು ಸಾವಧಾನ ಮನಸ್ಸಿನಿಂದ ಕೇಳು.

೫೪. ಸನತ್ಕುಮಾರನೆ ಮೊದಲಾದ ಮುನಿಪುಂಗವರು ಸದಸ್ಯರಾದರು. ಅತ್ರಿ, ಅಂಗಿರಸ್ಸು, ಮರೀಚಿಗಳು ಉದ್ಗಾತೃಗಳಾದರು.

ಹೌತ್ರಂ ಧರ್ಮವಸಿಷ್ಠೌ ಚ ಬ್ರಹ್ಮತ್ವಂ ಸನಕೋ ಮುನಿಃ ।
ಷಟ್ತ್ರಿಂಶದ್ಗ್ರಾಮಸಾಹಸ್ರಂ ಪ್ರಾದಾತ್ತೇಭ್ಯಃ ಶತಕ್ರತುಃ ॥ ೫೫ ॥
ಲಕ್ಷ್ಮೀರ್ಭರ್ತ್ರಾ ಚ ಸಂಯುಕ್ತಾಽಭವತ್ತತ್ಕೃತವಾನ್ ಪ್ರಭುಃ ।
ಬ್ರಹ್ಮಣೋ ಜುಹ್ವತೋ ವಹ್ನಿಂ ಯಾವದ್ದೇಶಸ್ಥಿತೈಃ ಸುರೈಃ ॥ ೫೬ ॥
ದೃಷ್ಟಂ ಲಲಾಟಂ ದೇಶೋಽಸೌ ಲಲಾಟ ಇತಿ ಸಂಜ್ಞಿತಃ ।
ಸ ದೇಶಃ ಶ್ರೀಪತೇಃ ಕ್ಷೇತ್ರಂ ಪುಣ್ಯಂ ದೇವರ್ಷಿಸೇವಿತಂ ॥ ೫೭ ॥
ಸರ್ವಾಶ್ಚರ್ಯಮಯಂ ದಿವ್ಯಂ ದಿವ್ಯಸಿದ್ಧಿಸಮನ್ವಿತಂ ।
ಬ್ರಾಹ್ಮಣಾನಾಂ ತತಃ ಪಂಕ್ತಿಂ ನಿವೇಶಯಿತುಮುದ್ಯತಾ ॥ ೫೮ ॥
ಲಕ್ಷ್ಮೀಃ ಶ್ರೀಪತಿನಾಮಾನಮಾಹ ದೇವಂ ವಚಸ್ತದಾ ।

ಶ್ರೀರುವಾಚ:—

ಯ ಏತೇ ಬ್ರಾಹ್ಮಣಾಃ ಶಿಷ್ಯಾ ಭೃಗ್ವಾದೀನಾಂ ಯತವ್ರತಾಃ ॥ ೫೯ ॥
ತಾನ್ನಿವೇಶಯಿತುಮಿಚ್ಛಾಮಿ ತ್ವತ್ಪ್ರಸಾದಾದಧೋಕ್ಷಜ ।
ಮರೀಚ್ಯಾದಯಃ ಸುರೇಂದ್ರೇಣ ಸ್ಥಾಪಿತಾ ಗರುಡಧ್ವಜ ॥ ೬೦ ॥
ನೈಷ್ಠಿಕವ್ರತಿನೋ ವಿಪ್ರಾ ಬಹವೋಽತ್ರ ಯತವ್ರತಾಃ ।
ಪ್ರಾಜಾಪತ್ಯೇ ವ್ರತೇ ಬ್ರಾಹ್ಮೇ ಕೇಚಿದತ್ರ ವ್ಯವಸ್ಥಿತಾಃ ।
ತಾನಹಂ ಸ್ಥಾಪಯಿಷ್ಯಾಮಿ ತ್ವತ್ಪ್ರಸಾದಾದಧೋಕ್ಷಜ ॥ ೬೧ ॥

---

೫೫. ಧರ್ಮವಸಿಷ್ಠರು ಹೋತೃಗಳಾದರು. ಸನಕನು ಬ್ರಹ್ಮನಾದನು. ಇಂದ್ರನು ಅವರಿಗೆ ಮೂವತ್ತಾರು ಸಾವಿರ ಗ್ರಾಮಗಳನ್ನಿತ್ತನು.

೫೬–೬೦. ಲಕ್ಷ್ಮಿಯು ಪತಿಯನ್ನು ಪಡೆದಳು. ನಾರಾಯಣನು ತಾನು ಹೇಳಿದ್ದನ್ನೆಲ್ಲವನ್ನೂ ಮಾಡಿದನು. ಅಲ್ಲಿರುವ ಸುರರು ಅಗ್ನಿಯಲ್ಲಿ ಹೋಮಮಾಡುತ್ತಿರುವ ಬ್ರಹ್ಮನ ಲಲಾಟವನ್ನು ನೋಡಿದ್ದರಿಂದ ಆ ದೇಶವು ಲಲಾಟವೆಂದು ಹೆಸರನ್ನು ಪಡೆಯಿತು. ಲಕ್ಷ್ಮಿಯು ದೇವರ್ಷಿಗಳಿಂದ ಸೇವಿಸಲ್ಪಟ್ಟುದೂ, ಸಮಸ್ತಾಶ್ಚರ್ಯಕ್ಕೆ ಆಶ್ರಯವೂ, ದಿವ್ಯಸಿದ್ಧಿಯಿಂದ ಕೂಡಿರುವುದೂ ಆದ ಆ ಶ್ರೀಪತಿಕ್ಷೇತ್ರದಲ್ಲಿ ಬ್ರಾಹ್ಮಣರನ್ನು ಸ್ಥಾಪಿಸಲಿಚ್ಛಿಸಿ ನಾರಾಯಣನನ್ನು ಕುರಿತು ಇಂತೆಂದಳು.

ಶ್ರೀದೇವಿಯು ಹೇಳುತ್ತಾಳೆ:—ನಾರಾಯಣ! ನಿನ್ನ ಅನುಗ್ರಹದಿಂದ ಇಂದ್ರನು ಸ್ಥಾಪಿಸಿರುವ ನಿಯತವ್ರತರೂ, ಭೃಗ್ವಾದಿ ಮುನಿಗಳ ಶಿಷ್ಯರೂ ಆದ ಮರೀಚ್ಯಾದಿಗಳನ್ನು ಇಲ್ಲಿ ಸ್ಥಾಪಿಸಲು ಬಯಸುವೆನು.

೬೧. ಇಲ್ಲಿರುವ ಬಹುಮಂದಿ ವಿಪ್ರರು ನೈಷ್ಠಿಕವ್ರತಿಗಳೂ, ಕೆಲವರು ಬ್ರಾಹ್ಮಪ್ರಾಜಾಪತ್ಯ ವ್ರತಧಾರಿಗಳೂ ಆಗಿದ್ದಾರೆ. ಅವರನ್ನು ಇಲ್ಲಿ ಸ್ಥಾಪಿಸಲು ಇಚ್ಛಿಸುವೆನು.

ಮಾರ್ಕಂಡೇಯ ಉವಾಚ:—

ತತಃ ಕೌತೂಹಲಧರೋ ಭಗವಾನ್ ವೃಷಭಧ್ವಜಃ ।
ಪಪ್ರಚ್ಛ ವ್ರತಿನಃ ಸರ್ವಾನ್ವೃತ್ತಿಭೇದೇ ವ್ಯವಸ್ಥಿತಾನ್ ॥ ೬೨ ॥
ನಾರದೋಽಪಿ ಮಹಾದೇವಮುಪೇತ್ಯ ಚ ಸತೀಪತಿಂ ।
ಪ್ರಾಹ ಕೃಷ್ಣಾಜಿನಧರೋ ನೈಷ್ಠಿಕಾ ಬ್ರಾಹ್ಮಣಾ ಹ್ಯಮೀ ॥ ೬೩ ॥
ಅಮೀ ಕಾರ್ಯಾಃ ಸುವಸ್ತ್ರೇಣ ಛನ್ನಗುಹ್ಯಾ ದ್ವಿಜೋತ್ತಮಾಃ ।
ಪ್ರಾಜಾಪತ್ಯಾಶ್ಚತುರ್ವಿಂಶಸಹಸ್ರಾಣಿ ನರೇಶ್ವರ ॥ ೬೪ ॥
ಬ್ರಹ್ಮಚರ್ಯವ್ರತಸ್ಥಾನಾಂ ವ್ರತಬ್ರಹ್ಮವಿಚಾರಿಣಾಂ ।
ದ್ವಾದಶೈಷಾಂ ಸಹಸ್ರಾಣಿ ಸಂತಿ ವೈ ವೃಷಭಧ್ವಜ ॥ ೬೫ ॥
ನಾರದಸ್ಯ ವಚಃ ಶ್ರುತ್ವಾ ದೇವಾ ದೇವರ್ಷಯೋಽಪಿ ಚ ।
ಸಾಧು ಸಾಧ್ವಿತ್ಯಮನ್ಯಂತ ನೋಚುಃ ಕೇಚನ ಕಿಂಚನ ॥ ೬೬ ॥
ಸಮಾಹ್ವಯತ್ತತೋ ಲಕ್ಷ್ಮೀಸ್ತಾನ್ವಿಪ್ರಾನ್ ಭಕ್ತಿಸಂಯುತಾ ।
ಉವಾಚ ಚರಣಾನ್ ಗೃಹ್ಯ ಪ್ರಸಾದಃ ಕ್ರಿಯತಾಂ ಮಯಿ ॥ ೬೭ ॥
ಷಟ್ತ್ರಿಂಶಚ್ಚ ಸಹಸ್ರಾಣಿ ವೇಶ್ಮನಾಮತ್ರ ಸಂಸ್ಥಿತಿಃ ।
ವಿಶ್ವಕರ್ಮಕೃತಾನಾಂ ತು ತೇಷು ತಿಷ್ಠಂತು ವೋಽಖಿಲಾಃ ॥ ೬೮ ॥

೬೨. ಮಾರ್ಕಂಡೇಯನು ಹೇಳುತ್ತಾನೆ:—ಅನಂತರ ಕುತೂಹಲಿಯಾದ ಮಹಾದೇವನು ವೃತ್ತಿಗಳಿಲ್ಲದ ಆ ವ್ರತಿಗಳನ್ನು ಪ್ರಶ್ನಿಸಿದನು.

೬೩–೬೪. ಕೃಷ್ಣಾಜಿನವನ್ನು ಧರಿಸಿದ ನಾರದನು ಸತೀಪತಿಯಾದ ಶಂಕರನೆಡೆಗೆ ಹೋಗಿ ಇಂತೆಂದನು. "ಮಹೇಶ್ವರ! ಪ್ರಾಜಾಪತ್ಯವ್ರತವನ್ನು ಧರಿಸಿದ ಈ ಇಪ್ಪತ್ತನಾಲ್ಕುಸಾವಿರ ನೈಷ್ಠಿಕ ಬ್ರಾಹ್ಮಣರನ್ನು ಒಳ್ಳೆ ವಸ್ತ್ರವನ್ನು ಧರಿಸಿದವರನ್ನಾಗಿ ಮಾಡಬೇಕು.

೬೫. ಮಹೇಶ್ವರ! ಇವರಲ್ಲದೆ ಹನ್ನೆರಡುಸಾವಿರ ಮಂದಿ ಬ್ರಹ್ಮಚರ್ಯ ವ್ರತಧಾರಿಗಳಾದ ಬ್ರಾಹ್ಮಣರೂ ಇರುವರು."

೬೬. ದೇವತೆಗಳೂ, ದೇವರ್ಷಿಗಳೂ ನಾರದನ ಮಾತನ್ನು ಕೇಳಿ ಸರಿಯೆಂದರು. ಯಾರೂ ಏನನ್ನೂ ಹೇಳಲಿಲ್ಲ.

೬೭. ಅನಂತರ ಲಕ್ಷ್ಮಿಯು ಭಕ್ತಿಯುಳ್ಳವಳಾಗಿ ಆ ಬ್ರಾಹ್ಮಣರಿಗೆ ವಂದಿಸಿ ಇಂತೆಂದಳು. "ನನ್ನಲ್ಲಿ ಅನುಗ್ರಹಮಾಡಿರಿ.

೬೮. ಇಲ್ಲಿ ವಿಶ್ವಕರ್ಮನು ನಿರ್ಮಿಸಿದ ಮೂವತ್ತಾರುಸಾವಿರ ಮನೆಗಳಿವೆ. ನೀವೆಲ್ಲರೂ ಅವುಗಳಲ್ಲಿ ವಾಸಮಾಡಿರಿ."

ತೇ ತಥೇತಿ ಪ್ರತಿಜ್ಞಾಯ ಸ್ಥಿತಾಃ ಸಂಪ್ರೀತಮಾನಸಾಃ ।
ಧನಧಾನ್ಯಸಮೃದ್ಧಾಶ್ಚ ವಾಂಛಿತಪ್ರಾಪ್ತಿಲಕ್ಷಣಾಃ ।
ಸರ್ವಕಾಮಸಮೃದ್ಧಾಶ್ಚ ಹ್ಯನಾರಂಭೇಷು ಕರ್ಮಣಾಂ ॥ ೬೯ ॥
ಇತಿ ಸಂಸ್ಥಾಪ್ಯ ತಾನ್ವಿಪ್ರಾನ್ ಸಾ ಸ್ಥಿತಾ ಪರ್ಯಪಾಲಯತ್ ।
ಚತುರ್ಧಾ ತು ಸ್ಥಿತೋ ವಿಷ್ಣುಃ ಶ್ರಿಯಾ ದೇವ್ಯಾಃ ಪ್ರಿಯೇ ರತಃ ॥ ೭೦ ॥
ಏವಂ ವೈವಾಹಿಕಮಖೇ ನಿವೃತ್ತೇ ಋಷಯಸ್ತು ತಂ ।
ಊಚುಶ್ಚಾಽವಭೃಥಸ್ನಾನಂ ಕುತ್ರ ಕುರ್ಮೋ ಜನಾರ್ದನ ॥ ೭೧ ॥
ಇತಿ ಶ್ರುತ್ವಾ ತು ವಚನಂ ಶ್ರೀಪತಿಃ ಪಾದಪಂಕಜಾತ್ ।
ಮುಮೋಚ ಜಾಹ್ನವೀತೋಯಂ ರೇವಾಮಧ್ಯಗಮಂ ಶುಚಿ ॥ ೭೨ ॥
ಹರೇಃ ಪಾದೋದಕಂ ದೃಷ್ಟ್ವಾ ನಿಃಸೃತಂ ಮುನಯಸ್ತು ತೇ ।
ವಿಸ್ಮಿತಾಃ ಸಮಪದ್ಯಂತ ಜಾನಂತಸ್ತಸ್ಯ ಗೌರವಂ ॥ ೭೩ ॥
ರುದ್ರೇಣ ಸಹಿತಾಃ ಸರ್ವೇ ದೇವತಾ ಋಷಯಸ್ತಥಾ ।
ಸಂಕಥಾವಿಸ್ಮಿತಾಶ್ಚಕ್ರುರ್ವಿಧುನ್ವಂತಃ ಶಿರಾಂಸಿ ಚ ॥ ೭೪ ॥

ಋಷಯ ಊಚುಃ:—

ಬ್ರೂಹಿ ಶಂಭೋ ಕಿಮುತ್ಥಾಽಯಂ ಅಕಸ್ಮಾದ್ವಾರಿಸಂಭವಃ ।
ವಿಷ್ಣೋಃ ಪಾದಾಂಬುಜೋತ್ಥಶ್ಚ ಸಂಮೋಹಕರತಃ ಪರಃ ॥ ೭೫ ॥

---

೬೯–೭೦. ಆ ಬ್ರಾಹ್ಮಣರು ಲಕ್ಷ್ಮಿಯು ಹೇಳಿದ್ದನ್ನು ಒಪ್ಪಿ ಸಂತೋಷಗೊಂಡ ಮನಸ್ಸುಳ್ಳವರೂ, ಧನಧಾನ್ಯಸಮೃದ್ಧಿಯುಳ್ಳವರೂ, ಇಷ್ಟಾರ್ಥವನ್ನು ಹೊಂದುವವರೂ, ಕಾರ್ಯವಿಲ್ಲದೆ ಸಕಲೇಷ್ಟಾರ್ಥಗಳಿಂದ ಸಮೃದ್ಧರೂ ಆಗಿ ವಾಸಮಾಡುತ್ತಿದ್ದರು. ಆ ಲಕ್ಷ್ಮಿಯು ಹೀಗೆ ಆ ಬ್ರಾಹ್ಮಣರನ್ನು ಸ್ಥಾಪಿಸಿ ಕಾಪಾಡಿದಳು. ವಿಷ್ಣುವು ನಾಲ್ಕು ರೂಪಗಳಿಂದ ಆ ಲಕ್ಷ್ಮಿಗೆ ಪ್ರೀತಿಯನ್ನುಂಟುಮಾಡುತ್ತಿದ್ದನು.

೭೧. ಹೀಗೆ ವಿವಾಹಯಜ್ಞವು ಮುಗಿಯಲು ಋಷಿಗಳು, "ಜನಾರ್ದನ! ನಾವು ಅವಭೃಥಸ್ನಾನವನ್ನು ಎಲ್ಲಿ ಮಾಡಬೇಕು?" ಎಂದು ಕೇಳಿದರು.

೭೨. ವಿಷ್ಣುವು ಈ ಮಾತನ್ನು ಕೇಳಿ ತನ್ನ ಪಾದಾರವಿಂದದಿಂದ ಯಮುನಾ ನದಿಯ ಮಧ್ಯ ಪ್ರದೇಶವನ್ನು ಸೇರುವ ಶುದ್ಧವಾದ ಗಂಗಾಜಲವನ್ನು ಬಿಟ್ಟನು.

೭೩. ಆ ಮುನಿಗಳು ಹರಿಯ ಪಾದದಿಂದ ಹೊರಟ ಆ ನೀರನ್ನು ನೋಡಿ ಆ ವಿಷ್ಣುವಿನ ಮಾಹಾತ್ಮ್ಯವನ್ನು ತಿಳಿದು ಆಶ್ಚರ್ಯಗೊಂಡರು.

೭೪. ಆ ಎಲ್ಲ ದೇವತೆಗಳೂ, ಋಷಿಗಳೂ ರುದ್ರನೊಡನೆ ಆಶ್ಚರ್ಯದಿಂದ ತಲೆಗಳನ್ನು ತೂಗುತ್ತ ಹೀಗೆಂದರು.

೭೫. ಋಷಿಗಳು ಹೇಳುತ್ತಾರೆ:—ಶಂಕರ! ಇಲ್ಲಿ ಅಕಸ್ಮಾತ್ತಾಗಿ ವಿಷ್ಣುವಿನ ಪಾದದಿಂದ ಭ್ರಾಂತಿಯನ್ನುಂಟುಮಾಡುವ ನೀರು ಹೇಗುಂಟಾಯಿತು, ಹೇಳು.

ಈಶ್ವರ ಉವಾಚ :—

ಪಾದೋದಕಮಿದಂ ವಿಷ್ಣೋರಹಂ ಜಾನಾಮಿ ವೈ ಸುರಾಃ ।
ದಶಾಶ್ವಮೇಧಾಽವಭೃಥೈಃ ಸ್ನಾನಮತ್ರಾಽತಿರಿಚ್ಯತೇ ॥ ೭೬ ॥
ಯುಷ್ಮಾಭಿಃ ಶ್ರೀಪತಿಃ ಪೂಜ್ಯಃ ಸ್ನಾನಂ ಚಾಽವಭೃಥಃ ಕುತಃ ।
ಭವಿಷ್ಯತೀತಿ ತೇನಾಽಽಶು ಇದಂ ವೋಽರ್ಥೇ ವಿನಿರ್ಮಿತಂ ॥ ೭೭ ॥
ಸ್ನಾತ್ವಾಽತ್ರ ತ್ರಿದಶೇಶಾನಾ ಯತ್ಫಲಂ ಸಂಪ್ರಪದ್ಯತೇ ।
ವಕ್ತುಂ ನ ಕೇನಚಿದ್ಯಾತಿ ತತಃ ಕಿಮುತ್ತರಂ ವಚಃ ॥ ೭೮ ॥

ಮಾರ್ಕಂಡೇಯ ಉವಾಚ :—

ಏವಮುಕ್ತ್ವಾ ತು ತೇ ಸರ್ವೇ ಸ್ನಾನಂ ಕೃತ್ವಾ ಯಥಾಗತಂ ।
ಜಗ್ಮುರ್ದೇವಾ ಮಹೇಶಾನಪುರೋಗಾ ಭರತರ್ಷಭ ॥ ೭೯ ॥
ಬ್ರಾಹ್ಮಣಾಶ್ಚ ತತಃ ಸರ್ವೇ ಸ್ವವೇಶ್ಮಾನ್ಯೇವ ಭೇಜಿರೇ ।
ದೇವತೀರ್ಥೇ ಮಹಾರಾಜ ಸರ್ವಪಾಪಪ್ರಣಾಶನೇ ॥ ೮೦ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ
ಪಂಚಮೇ ಆವಂತ್ಯಖಂಡೇ ತೃತೀಯೇ ರೇವಾಖಂಡೇ
"ಶ್ರೀಪತಿವಿವಾಹವರ್ಣನಂ" ನಾಮ.
ಚತುರ್ನವತ್ಯುತ್ತರಶತತಮೋಽಧ್ಯಾಯಃ

---

೭೬. ಈಶ್ವರನು ಹೇಳುತ್ತಾನೆ:—ದೇವತೆಗಳೆ! ನಾನು ಇದನ್ನು ವಿಷ್ಣುವಿನ ಪಾದೋದಕವೆಂದರಿಯುವೆನು. ಇದರ ಸ್ನಾನವು ದಶಾಶ್ವಮೇಧಯಾಗಕ್ಕಿಂತ ಉತ್ತಮವಾದುದು.

೭೭. ನೀವು ಶ್ರೀಪತಿಯನ್ನು ಪೂಜಿಸಿರಿ. ನೀವು ಅವಭೃಥಸ್ನಾನವನ್ನು ಎಲ್ಲಿ ಮಾಡಬೇಕೆಂದು ಕೇಳಿದೀರಿ. ಇದನ್ನು ನಿಮಗಾಗಿ ನಿರ್ಮಿಸಿದ್ದೇನೆ.

೭೮. ದೇವೇಶ್ವರರೆ! ಇಲ್ಲಿ ಮಿಂದರೆ ಉಂಟಾಗುವ ಫಲವನ್ನು ಯಾರೂ ಹೇಳಲಾರರು.

೭೯. ಮಾರ್ಕಂಡೇಯನು ಹೇಳುತ್ತಾನೆ:—ಆ ಶಂಕರನೇ ಮೊದಲಾದ ಆ ದೇವತೆಗಳು ಹೀಗೆ ಹೇಳಿ ಅಲ್ಲಿ ಮಿಂದು ತಾವು ಬಂದಂತೆಯೇ ಹೊರಟುಹೋದರು.

೮೦. ಅನಂತರ ಆ ಬ್ರಾಹ್ಮಣರೆಲ್ಲ ಸಕಲ ಪಾಪಗಳನ್ನು ಪರಿಹರಿಸುವ ಆ ದೇವತೀರ್ಥದಲ್ಲಿರುವ ತಮ್ಮ ಮನೆಗಳಲ್ಲಿ ವಾಸಮಾಡತೊಡಗಿದರು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ
ಶ್ರೀ ಸ್ಕಾಂದಮಹಾಪುರಾಣದ ಐದನೆಯ ಆವಂತ್ಯಖಂಡದ ಮೂರನೆಯ ರೇವಾಖಂಡದಲ್ಲಿ
"ಶ್ರೀಪತಿವಿವಾಹವರ್ಣನ"ವೆಂಬ
ನೂರತೊಂಬತ್ತನಾಲ್ಕನೆಯ ಅಧ್ಯಾಯವು ಮುಗಿದುದು

ಶ್ರೀಃ

## ಅಥ ಪಂಚಸಪ್ತತ್ಯುತ್ತರಶತತಮೋಽಧ್ಯಾಯಃ

### ಶ್ರೀಪತಿಮಾಹಾತ್ಮ್ಯವರ್ಣನಂ

ಯುಧಿಷ್ಠಿರ ಉವಾಚ :—

ದೇವತೀರ್ಥೇ ತು ಕಿಂ ನಾಮ ಮಹಾತ್ಮ್ಯಂ ಸಮುದಾಹೃತಂ ।
ಫಲಂ ಕಿಂ ಸ್ನಾನದಾನಾದಿಕಾರಿಣಾಂ ಜಾಯತೇ ಮುನೇ ॥ ೧ ॥

ಮಾರ್ಕಂಡೇಯ ಉವಾಚ :—

ಪೃಥಿವ್ಯಾಂ ಯಾನಿ ತೀರ್ಥಾನಿ ದೇವೈರ್ಮುನಿಗಣೈರಪಿ ।
ಸೇವಿತಾನಿ ಮಹಾಬಾಹೋ ತಾನಿ ಧ್ಯಾತಾನಿ ವಿಷ್ಣುನಾ ॥ ೨ ॥
ಸಮಾಗತಾನ್ಯೇಕತಾಂ ವೈ ತತ್ರ ತೀರ್ಥೇ ಯುಧಿಷ್ಠಿರ ।
ತತ್ತೀರ್ಥಂ ವೈಷ್ಣವಂ ಪುಣ್ಯಂ ದೇವತೀರ್ಥಮಿತಿ ಶ್ರುತಂ ॥ ೩ ॥
ಕುರುಕ್ಷೇತ್ರಂ ಭುವಿ ಪರಮಂತರಿಕ್ಷೇ ತ್ರಿಪುಷ್ಕರಂ ।
ಪುರುಷೋತ್ತಮಂ ದಿವಿ ಪರಂ ದೇವತೀರ್ಥಂ ಪರಾತ್ಪರಂ ॥ ೪ ॥
ದೇವತೀರ್ಥಸಮಂ ನಾಸ್ತಿ ತೀರ್ಥಮತ್ರ ಪರತ್ರ ಚ ।
ಯತ್ಪ್ರಾಪ್ಯ ಮನುಜಸ್ತಪ್ಯೇನ್ನ ಕದಾಚಿದ್ಯುಧಿಷ್ಠಿರ ॥ ೫ ॥

---

### ಕನ್ನಡದ ಅನುವಾದ

#### ಶ್ರೀಪತಿಮಾಹಾತ್ಮ್ಯವರ್ಣನ

೧. ಯುಧಿಷ್ಠಿರನು ಹೇಳುತ್ತಾನೆ:—ಮುನಿಯೆ! ದೇವತೀರ್ಥದಲ್ಲಿ ಸ್ನಾನ ದಾನಾದಿಗಳನ್ನು ಮಾಡಿದವರಿಗೆ ಯಾವ ಫಲವು ಲಭಿಸುವುದು? ಅದರ ಮಾಹಾತ್ಮ್ಯವೇನು?

೨. ಮಾರ್ಕಂಡೇಯನು ಹೇಳುತ್ತಾನೆ:—ದೀರ್ಘಬಾಹುವೆ! ವಿಷ್ಣುವು ಭೂಮಿಯಲ್ಲಿ ದೇವಮುನಿಗಳಿಂದ ಸೇವಿತಗಳಾದ ಕ್ಷೇತ್ರಗಳನ್ನು ಕುರಿತು ಚಿಂತಿಸಿದನು.

೩. ಅವುಗಳೆಲ್ಲ ದೇವತೀರ್ಥಕ್ಕೆ ಬಂದಿರುವುದರಿಂದ ಅದು ಪುಣ್ಯಕರವಾದ ದೇವತೀರ್ಥವೆಂಬ ವಿಷ್ಣುತೀರ್ಥವಾಯಿತು.

೪. ಭೂಮಿಯಲ್ಲಿ ಕುರುಕ್ಷೇತ್ರವೂ, ಆಕಾಶದಲ್ಲಿ ತ್ರಿಪುಷ್ಕರವೂ, ಸ್ವರ್ಗದಲ್ಲಿ ಪುರುಷೋತ್ತಮತೀರ್ಥವೂ ಇರುವುವು. ಈ ದೇವತೀರ್ಥವು ಅವುಗಳಿಗಿಂತ ಉತ್ತಮವಾದುದು.

೫. ದೇವತೀರ್ಥಕ್ಕೆ ಸಮವಾದ ತೀರ್ಥವು ಈ ಲೋಕದಲ್ಲಿಯೂ, ಪರಲೋಕದಲ್ಲಿಯೂ ಇರುವುದಿಲ್ಲ. ಇದನ್ನು ಹೊಂದಿದ ಮನುಷ್ಯನು ಸಂತಾಪಗೊಳ್ಳುವುದಿಲ್ಲ.

ದೇವೈರುಕ್ತಾನಿ ತೀರ್ಥಾನಿ ಯೋಽತ್ರ ಸ್ನಾನಂ ಸಮಾಚರೇತ್ ।
ದೇವತೀರ್ಥೇ ಸ ಸರ್ವತ್ರ ಸ್ನಾತೋ ಭವತಿ ಮಾನವಃ ॥ ೬ ॥
ಏವಮಸ್ತ್ವಿತಿ ತೈರುಕ್ತಾ ದೇವಾ ಋಷಿಗಣಾ ಅಪಿ ।
ಸಂತುಷ್ಟಾಃ ಶ್ರೀಶಮಭ್ಯರ್ಚ್ಯ ಸ್ವಂ ಸ್ವಂ ಸ್ಥಾನಂ ತು ಭೇಜಿರೇ ॥ ೭ ॥
ಸೂರ್ಯಗ್ರಹೇಽತ್ರ ವೈ ಕ್ಷೇತ್ರೇ ಸ್ನಾತ್ವಾ ಯತ್ಫಲಮಶ್ನುತೇ ।
ಸ್ನಾತ್ವಾ ಶ್ರೀಶಂ ಸಮಭ್ಯರ್ಚ್ಯ ಸಮುಪೋಷ್ಯ ಯಥಾ ವಿಧಿ ॥ ೮ ॥
ಯದ್ದದಾತಿ ಹಿರಣ್ಯಾನಿ ದಾನಾನಿ ವಿಧಿವನ್ನೃಪ ।
ತದನಂತಫಲಂ ಸರ್ವಂ ಸೂರ್ಯಸ್ಯ ಗ್ರಹಣೇ ಯಥಾ ॥ ೯ ॥
ಭೂಮಿದಾನಂ ಧೇನುದಾನಂ ಸ್ವರ್ಣದಾನಮನಂತಕಂ ।
ವಜ್ರದಾನಮನಂತಂ ಚ ಫಲಂ ಪ್ರಾಹ ಶತಕ್ರತುಃ ॥ ೧೦ ॥
ಸೋಮೋ ವೈ ವಸ್ತ್ರದಾನೇನ ಮೌಕ್ತಿಕಾನಾಂ ಚ ಭಾರ್ಗವಃ ।
ಸುವರ್ಣಸ್ಯ ರವಿರ್ದಾನಂ ಧರ್ಮರಾಜೋ ಹ್ಯನಂತಕಂ ॥ ೧೧ ॥
ದೇವತೀರ್ಥೇ ತು ಯದ್ದಾನಂ ಶ್ರದ್ಧಾಯುಕ್ತೇನ ದೀಯತೇ ।
ತದನಂತಫಲಂ ಪ್ರಾಹ ಬೃಹಸ್ಪತಿರುದಾರಧೀಃ ॥ ೧೨ ॥
ದೇವತೀರ್ಥಂ ಭೃಗುಕ್ಷೇತ್ರೇ ಸರ್ವತೀರ್ಥಾಧಿಕಂ ನೃಪ ।
ದೇವತೀರ್ಥೇ ನರಃ ಸ್ನಾತ್ವಾ ಶ್ರೀಪತಿಂ ಯೋಽನುಪಶ್ಯತಿ ॥ ೧೩ ॥

---

೬. ಈ ದೇವತೀರ್ಥದಲ್ಲಿ ಮಿಂದ ಮಾನವನು ಸಕಲ ತೀರ್ಥಗಳಲ್ಲಿಯೂ ಮಿಂದವನಾಗುವನು.

೭. ಹೀಗೆಯೇ ಆಗಲೆಂದು ದೇವರ್ಷಿಗಳೂ, ದೇವತೆಗಳೂ ಹೇಳಿ ವಿಷ್ಣುವನ್ನರ್ಚಿಸಿ ಸಂತೋಷದಿಂದ ತಮ್ಮ ತಮ್ಮ ಸ್ಥಾನಗಳಿಗೆ ತೆರಳಿದರು.

೮-೯. ಇಲ್ಲಿ ಮಿಂದು ಉಪವಾಸಮಾಡಿ ವಿಧಿಯಂತೆ ಶ್ರೀಶನನ್ನು ಅರ್ಚಿಸಿ ಹಿರಣ್ಯದಾನವನ್ನಿತ್ತರೆ ಸೂರ್ಯಗ್ರಹಣದಲ್ಲಿ ಮಿಂದ ಫಲವು ದೊರೆಯುವುದು.

೧೦. ಭೂಮಿ, ಧೇನು, ಸ್ವರ್ಣ, ವಜ್ರ ಇವುಗಳನ್ನು ಇಲ್ಲಿ ದಾನಮಾಡಿದರೆ ಅನಂತಫಲವು ಲಭಿಸುವುದೆಂದು ಇಂದ್ರನು ಹೇಳಿರುವನು.

೧೧. ವಸ್ತ್ರದಾನದಿಂದ ಚಂದ್ರನೂ, ಮುತ್ತುಗಳ ದಾನದಿಂದ ಭಾರ್ಗವನೂ, ಸುವರ್ಣದಾನದಿಂದ ಸೂರ್ಯನೂ, ಧರ್ಮರಾಜನೂ ಅನಂತ ಫಲವುಂಟಾಗುವುದೆಂದು ಹೇಳಿದ್ದಾರೆ.

೧೨. ಶ್ರದ್ಧೆಯಿಂದ ದೇವತೀರ್ಥದಲ್ಲಿ ದಾನವನ್ನು ಮಾಡಿದರೆ ಅದು ಅನಂತಫಲವನ್ನು ಕೊಡುವುದೆಂದು ಬೃಹಸ್ಪತಿಯು ಹೇಳಿದ್ದಾನೆ.

೧೩-೧೯. ಭೃಗುಕ್ಷೇತ್ರದಲ್ಲಿರುವ ದೇವತೀರ್ಥವು ಎಲ್ಲ ತೀರ್ಥಗಳಿಗಿಂತಲೂ ಅಧಿಕವಾದುದು. ಚಂದ್ರಗ್ರಹಣಕಾಲದಲ್ಲಿ ದೇವತೀರ್ಥದಲ್ಲಿ ಮಿಂದು

ಸೋಽನುಗ್ರಹೇ ಕುಲಶತಂ ಸ ಸಮುದ್ಧೃತ್ಯ ನಾಕಭಾಕ್ ।
ದಾನಾನಿ ದ್ವಿಜಮುಖ್ಯೇಭ್ಯೋ ದೇವತೀರ್ಥೇ ನರಾಧಿಪ ॥ ೧೪ ॥
ಯೈರ್ದತ್ತಾನಿ ನರೈರ್ಭೋಗಭಾಗಿನಃ ಪ್ರೇತ್ಯ ಚೇಹ ತೇ ।
ದೇವತೀರ್ಥೇ ವಿಪ್ರಭೋಜ್ಯಂ ಹರಿಮುದ್ದಿಶ್ಯ ಯಶ್ಚರೇತ್ ॥ ೧೫ ॥
ಸ ಸರ್ವಾಹ್ಲಾದಮಾಪ್ನೋತಿ ಸ್ವರ್ಗಲೋಕೇ ಯುಧಿಷ್ಠಿರ ।
ದೇವತೀರ್ಥೇ ನರೋ ನಾರೀ ಸ್ನಾತ್ವಾ ನಿಯತಮಾನಸೌ ॥ ೧೬ ॥
ಉಪೋಷ್ಯೈಕಾದಶೀಂ ಭಕ್ತ್ಯಾ ಪೂಜಯೇದ್ಯಃ ಶ್ರಿಯಃ ಪತಿಂ ।
ರಾತ್ರೌ ಜಾಗರಣಂ ಕೃತ್ವಾ ಘೃತೇನೋದ್ಬೋಧ್ಯ ದೀಪಕಂ ॥ ೧೭ ॥
ದ್ವಾದಶ್ಯಾಂ ಪ್ರಾತರುತ್ಥಾಯ ತಥಾ ವೈ ನರ್ಮದಾಜಲೇ ।
ವಿಪ್ರದಾಂಪತ್ಯಮಭ್ಯರ್ಚ್ಯ ವಿಧಿವತ್ಕುರುನಂದನ ॥ ೧೮ ॥
ವಸ್ತ್ರಾಭರಣತಾಂಬೂಲಪುಷ್ಪಧೂಪವಿಲೇಪನೈಃ ।
ಅಕ್ಷಯೋ ವಿಷ್ಣುಲೋಕೇಽಸೌ ಮೋದತೇ ಚರಿತವ್ರತಃ ॥ ೧೯ ॥
ಯಃ ಸದೈಕಾದಶೀತಿಥೌ ಸ್ನಾತ್ವೋಪೋಷ್ಯಾರ್ಚಯೇದ್ಧರಿಂ ।
ರಾತ್ರೌ ಜಾಗರಣಂ ಕುರ್ಯಾದ್ವೇದಶಾಸ್ತ್ರವಿಧಾನತಃ ॥ ೨೦ ॥
ಧರ್ಮರಾಜಕೃತಾಂ ಪಾಪಾಂ ನ ಸ ಪಶ್ಯತಿ ಯಾತನಾಂ ।
ಪಂಚರಾತ್ರವಿಧಾನೇನ ಶ್ರೀಪತಿಂ ಯೋಽರ್ಚಯಿಷ್ಯತಿ ॥ ೨೧ ॥
ದೀಕ್ಷಾಮವಾಪ್ಯ ವಿಧಿವದ್ವೈಷ್ಣವೀಂ ಪಾಪನಾಶಿನೀಂ ।
ಸ್ವರ್ಗಮೋಕ್ಷಪ್ರದಾಂ ಪುಣ್ಯಾಂ ಭೋಗದಾಂ ವಿತ್ತದಾಮಥ ॥ ೨೨ ॥

---

ಶ್ರೀಪತಿಯನ್ನು ನೋಡಿದ ಮಾನವನು ನೂರು ಕುಲಗಳನ್ನು ಉದ್ಧರಿಸಿ ದೇವಲೋಕಕ್ಕೆ ತೆರಳುವನು. ಈ ದೇವತೀರ್ಥದಲ್ಲಿ ದ್ವಿಜವರ್ಯರಿಗೆ ದಾನಗಳನ್ನಿತ್ತವರು ಇಹಪರಗಳಲ್ಲಿ ಸುಖವನ್ನು ಅನುಭವಿಸುವರು. ಇಲ್ಲಿ ವಿಷ್ಣುವನ್ನುದ್ದೇಶಿಸಿ ಬ್ರಾಹ್ಮಣರಿಗೆ ಭೋಜನವನ್ನು ಮಾಡಿಸಿದವರು ಸ್ವರ್ಗಲೋಕದಲ್ಲಿ ಸಮಸ್ತ ಸಂತೋಷವನ್ನೂ ಹೊಂದುವರು. ಇಲ್ಲಿ ಏಕಾದಶೀ ದಿನ ಗಂಡಸಾಗಲಿ, ಹೆಂಗಸಾಗಲಿ ಮನಸ್ಸನ್ನು ನಿಗ್ರಹಿಸಿ ಮಿಂದು ಉಪವಾಸಮಾಡಿ ದೀಪವನ್ನು ಹೊತ್ತಿಸಿ ಶ್ರೀಪತಿಯನ್ನಾರಾಧಿಸಿ ರಾತ್ರಿ ಜಾಗರಣೆಮಾಡಿ ದ್ವಾದಶೀ ದಿನ ಬೆಳಗ್ಗೆ ನರ್ಮದಾ ಜಲದಲ್ಲಿ ಮಿಂದು ವಿಧಿಯಂತೆ ಬ್ರಾಹ್ಮಣ ದಂಪತಿಗಳನ್ನು ವಸ್ತ್ರ, ಆಭರಣ, ತಾಂಬೂಲ, ಪುಷ್ಪ, ಧೂಪ, ವಿಲೇಪನಗಳಿಂದ ಅರ್ಚಿಸಿದರೆ ಶಾಶ್ವತವಾಗಿ ವಿಷ್ಣುಲೋಕದಲ್ಲಿ ಆನಂದಿಸುವರು.

೨೦–೨೧. ಯಾವನಾಗಲೂ ಏಕಾದಶೀ ದಿನ ಮಿಂದು ಹರಿಯನ್ನರ್ಚಿಸಿ ವೇದಶಾಸ್ತ್ರವಿಧಿಯಂತೆ ರಾತ್ರಿ ಜಾಗರಣೆಮಾಡಿದವನು ಯಮಲೋಕದಲ್ಲಿ ನರಕ ಯಾತನೆಯನ್ನು ಅನುಭವಿಸುವುದಿಲ್ಲ. ಪಾಪವನ್ನು ಪರಿಹರಿಸುವುದೂ, ಸ್ವರ್ಗ

ರಾಜ್ಯದಾಂ ವಾ ಮಹಾಭಾಗ ಪುತ್ರದಾಂ ಭಾಗ್ಯದಾಮಥ ।
ಸುಕಲತ್ರಪ್ರದಾಂ ವಾಽಪಿ ವಿಷ್ಣೋರ್ಭಕ್ತಿಪ್ರದಾಮಿತಿ ॥ ೨೩ ॥
ತರಿಷ್ಯತಿ ಭವಾಂಭೋಧಿಂ ಸ ನರಃ ಕುರುನಂದನ ।
ಯೋಽರ್ಚಯಿಷ್ಯತಿ ತತ್ರೈವ ದೇವತೀರ್ಥೇ ಶ್ರಿಯಃ ಪತಿಂ ॥ ೨೪ ॥
ವಿಶ್ವರೂಪಮಥೋ ಸಮ್ಯಙ್ಮೂಲಶ್ರೀಪತಿಮೇವ ವಾ ।
ನಾರಾಯಣಗಿರಿಂ ವಾಽಪಿ ಗೃಹೇ ವೈಕಾದಶೀತಿಥೌ ॥ ೨೫ ॥
ಭಕ್ತಿಮಾಂಛ್ರದ್ಧಯಾ ಯುಕ್ತಃ ಕ್ಷೀರೈಸ್ತೀರ್ಥೋದಕೈರಪಿ ।
ಸುಸೂಕ್ಷ್ಮೈರಹತೈರ್ವಸ್ತ್ರೈರ್ಮಹಾಕೌಶೇಯಕೈರ್ನೃಪ ॥ ೨೬ ॥
ವಿಚಿತ್ರೈ ರ್ನೇತ್ರಜೈರ್ವಾಽಪಿ ಧೂಪೈರಗುರುಚಂದನೈಃ ।
ಗುಗ್ಗುಲೈರ್ಘೃತಮಿಶ್ರೈಶ್ಚ ನೈವೇದ್ಯೈರ್ವಿವಿಧೈರಪಿ ॥ ೨೭ ॥
ಪಾಯಸಾದ್ಯೈರ್ಮನುಷ್ಯೇಂದ್ರ ಪಯಸಾ ವಾ ಯುಧಿಷ್ಠಿರ ।
ಪಿಷ್ಟದೀಪೈಃ ಸುವಿಮಲೈರ್ವರ್ಧಮಾನೈರ್ಮನೋಹರೈಃ ॥ ೨೮ ॥
ಪೂಜಯಿತ್ವಾ ನರೋ ಯಾತಿ ಯಥಾ ತಚ್ಛೃಣು ಭಾರತ ।
ಶಂಖೀ ಚಕ್ರೀ ಗದೀ ಪದ್ಮೀ ಭೂತ್ವಾಽಸೌ ಗರುಡಧ್ವಜಃ ॥ ೨೯ ॥
ದೇವಲೋಕಾನತಿಕ್ರಮ್ಯ ವಿಷ್ಣುಲೋಕಂ ಪ್ರಪದ್ಯತೇ ।
ಯಸ್ತು ವೈ ಪರಯಾ ಭಕ್ತ್ಯಾ ಶ್ರೀಪತೇಃ ಪಾದಪಂಕಜಂ ॥ ೩೦ ॥
ಚತುರ್ಧಾಽಧಿಷ್ಠಿತಂ ಪಶ್ಯೇಚ್ಛ್ರಿಯಂ ತ್ರೈಲೋಕ್ಯಮಾತರಂ ।
ನೃತ್ಯಗೀತವಿನೋದೇನ ಮುಚ್ಯತೇ ಪಾತಕೈರ್ಧ್ರುವಂ ॥ ೩೧ ॥

---

ಮೋಕ್ಷಗಳನ್ನು ಕೊಡುವುದೂ, ಪುಣ್ಯಕರವೂ, ಭೋಗ, ವಿತ್ತ, ರಾಜ್ಯ, ಪುತ್ರ, ಭಾಗ್ಯ, ಕಲತ್ರ, ವಿಷ್ಣುಭಕ್ತಿ ಇವುಗಳನ್ನೀಯುವ ವೈಷ್ಣವ ದೀಕ್ಷೆಯನ್ನು ಹೊಂದಿ ಪಂಚರಾತ್ರವಿಧಿಯಿಂದ ಶ್ರೀಪತಿಯನ್ನು ಪೂಜಿಸುವವನು ಸಂಸಾರ ಸಾಗರವನ್ನು ದಾಟುವನು. ಏಕಾದಶೀ ದಿನ ಆ ದೇವತೀರ್ಥದಲ್ಲಿ ವಿಶ್ವರೂಪ ನಾದ ಶ್ರೀಪತಿಯನ್ನಾಗಲಿ, ಮೂಲ ಶ್ರೀಪತಿಯನ್ನಾಗಲಿ, ನಾರಾಯಣಗಿರಿ ಯನ್ನಾಗಲಿ, ಕ್ಷೀರ, ತೀರ್ಥಜಲ, ಸೂಕ್ಷ್ಮವಸ್ತ್ರ, ರೇಶ್ಮೆವಸ್ತ್ರ, ನಾರುಬಟ್ಟೆ, ಧೂಪ, ಅಗುರುಚಂದನ, ಗುಗ್ಗುಲು, ಅನೇಕ ಪ್ರಕಾರವಾದ ತುಪ್ಪದಿಂದ ಸಹಿತವಾದ ನೈವೇದ್ಯ, ಪಾಯಸ, ಹಾಲು, ಪಿಷ್ಟದೀಪ, ಶುದ್ಧವಾದ ಸರ್ಷಪ ಇವುಗಳಿಂದ ಭಕ್ತಿ ಶ್ರದ್ಧೆಗಳಿಂದ ಕೂಡಿ ಪೂಜಿಸಿದವನು ಹೇಗೆ ದೇವಲೋಕಕ್ಕೆ ಹೋಗುವನೆಂಬುದನ್ನು ಕೇಳು. ಅವನು ಶಂಖ, ಚಕ್ರ, ಗದಾ, ಪದ್ಮಗಳನ್ನು ಹಿಡಿದುಕೊಂಡು ದೇವಲೋಕಗಳನ್ನು ದಾಟಿ ವಿಷ್ಣುಲೋಕವನ್ನು ಸೇರುವನು. ನಾಲ್ಕು ವಿಧವಾದ ವಿಷ್ಣುವಿನ ಪಾದಪದ್ಮವನ್ನೂ, ಲೋಕಮಾತೆಯಾದ ಲಕ್ಷ್ಮೀ ದೇವಿಯನ್ನೂ ಅತಿಶಯ ಭಕ್ತಿಯಿಂದ ನೋಡಿ ನೃತ್ಯಗೀತಾದಿಗಳನ್ನು ಮಾಡು ವವನು ಪಾಪಮುಕ್ತನಾಗುವನು.

ನೀರಾಜನೇ ತು ದೇವಸ್ಯ ಪ್ರಾತರ್ಮಧ್ಯೇ ದಿನೇ ತಥಾ ।
ಸಾಯಂ ಚ ನಿಯತೋ ನಿತ್ಯಂ ಯಃ ಪಶ್ಯೇತ್ಪೂಜಯೇದ್ಧರಿಂ ॥ ೩೨ ॥
ಸ ತೀರ್ತ್ವಾ ಹ್ಯಾಪದಂ ದುರ್ಗಾಂ ನೈವಾರ್ತಿಂ ಸಮವಾಪ್ನುಯಾತ್ ।
ಆಯುಃಶ್ರೀವರ್ಧನಂ ಪುಂಸಾಂ ಚಕ್ಷುಷಾಮಪಿ ಪೂರಕಂ ॥ ೩೩ ॥
ಉಪಪಾಪಹರಂ ಚೈವ ಸದಾ ನೀರಾಜನಂ ಹರೇಃ ।
ತದಾ ನೀರಾಜನಾಕಾಲೇ ಯೋ ಹರೇಃ ಪಠತಿ ಸ್ತವಂ ॥ ೩೪ ॥
ಸ ಧನ್ಯೋ ದೇವದೇವಸ್ಯ ಪ್ರಸನ್ನೇನಾಂತರಾತ್ಮನಾ ।
ಹರೇರ್ನೀರಾಜನಾಶೇಷಂ ಪಾಣಿಭ್ಯಾಂ ಯಃ ಪ್ರಯಚ್ಛತಿ ॥ ೩೫ ॥
ಸಂಗೃಹ್ಯ ಚಕ್ಷುಷೀ ತೇನ ಯೋಜಯೇನ್ಮಾರ್ಜಯನ್ಮುಖಂ ।
ತಿಮಿರಾದೀನಕ್ಷಿರೋಗಾನ್ನಾಶಯೇದ್ದೀಪ್ತಿಮನ್ಮುಖಂ ॥ ೩೬ ॥
ಭವತ್ಯಶೇಷದುಷ್ಟಾನಾಂ ನಾಶಾಯಾಲಂ ನರೋತ್ತಮ ।
ದೀಪಪ್ರಜ್ವಲನಂ ಯಸ್ಯ ನಿತ್ಯಮಗ್ರೇ ಶ್ರಿಯಃಪತೇಃ ॥ ೩೭ ॥
ಸ್ನಾತ್ವಾ ರೇವಾಜಲೇ ಪುಣ್ಯೇ ಪ್ರದದ್ಯಾದಧಿಕಂ ವ್ರತೀ ।
ಸಪ್ತದ್ವೀಪವತೀ ತೇನ ಸಸಾಗರವನಾಪಗಾ ॥ ೩೮ ॥
ಪ್ರದಕ್ಷಿಣೀಕೃತಾ ಸ್ಯಾದ್ವೈ ಧರಣೀ ಶಂಕರೋಽಬ್ರವೀತ್ ।
ಇದಂ ಯಃ ಪಠ್ಯಮಾನಂ ತು ಶೃಣುಯಾತ್ಪಠತೇಽಪಿ ವಾ ॥ ೩೯ ॥

---

೩೨–೩೫. ಬೆಳಗ್ಗೆ, ಮಧ್ಯಾಹ್ನ, ಸಾಯಂಕಾಲಗಳಲ್ಲಿ ವಿಷ್ಣುವನ್ನು ದರ್ಶನ ಮಾಡಿ ಪೂಜಿಸುವವನು ದುರ್ಗಮವಾದ ಆಪತ್ತುಗಳನ್ನು ದಾಟುವನು. ದುಃಖ ಗೊಳ್ಳುವುದಿಲ್ಲ. ವಿಷ್ಣುವಿಗೆ ನೀರಾಜನವನ್ನು ಮಾಡಿದರೆ ಆಯುಸ್ಸು, ಸಂಪತ್ತು, ನೇತ್ರಾನಂದಗಳುಂಟಾಗುವುದು. ಉಪಪಾಪಗಳು ಪರಿಹಾರವಾಗುವುವು. ನೀರಾಜನವನ್ನು ಮಾಡುವಾಗ ವಿಷ್ಣುವಿನ ಸ್ತೋತ್ರವನ್ನು ಹೇಳುವವನೂ, ಪ್ರಸನ್ನವಾದ ಮನಸ್ಸಿನಿಂದ ನೀರಾಜನಶೇಷವನ್ನು ಕೊಡುವವನೂ ಧನ್ಯರು.

೩೬. ಮಂಗಳಾರತಿಯನ್ನು ತೆಗೆದುಕೊಂಡು ಮುಖಕ್ಕೆ ಉಜ್ಜಿಕೊಂಡರೆ ತಿಮಿರ ಮೊದಲಾದ ಕಣ್ಣಿನ ರೋಗಗಳು ಪರಿಹಾರವಾಗುವುವು. ಮುಖವು ಕಾಂತಿಯುಳ್ಳದಾಗುವುದು.

೩೭. ವಿಷ್ಣುವಿನ ಮುಂದೆ ನಿತ್ಯವೂ ದೀಪವನ್ನು ಹೊತ್ತಿಸಿದರೆ ಸಮಸ್ತ ದೋಷಗಳು ಪರಿಹಾರವಾಗುವುವು.

೩೮–೪೧. ಈ ನರ್ಮದೆಯ ನೀರಿನಲ್ಲಿ ಮಿಂದು ಅಧಿಕವಾಗಿ ದಾನಮಾಡುವವನು ಸಪ್ತದ್ವೀಪಗಳೂ, ಸಾಗರ, ವನ, ನದಿಗಳೂ ಇರುವ ಭೂಮಿಯನ್ನು ಪ್ರದಕ್ಷಿಣೆಮಾಡಿದವನಂತಾಗುವನೆಂದು ಶಂಕರನು ಹೇಳಿರುತ್ತಾನೆ. ಪಠಿಸುತ್ತಿರುವ ಈ ಆಖ್ಯಾನವನ್ನು ಕೇಳುವವನೂ, ತಾನೇ ಪಠಿಸುವವನೂ ಆದ ಮಾನವನು

ಸ್ಮರಣಂ ಸೋಽಂತಸಮಯೇ ವಿಪಾಪ್ಮಾ ಪ್ರಾಪ್ನುಯಾದ್ಧರೇಃ ।
ಇದಂ ಯಶಸ್ಯಮಾಯುಷ್ಯಂ ಸ್ವರ್ಗ್ಯಂ ಪಿತೃಗಣಪ್ರಿಯಂ ॥ ೪೦ ॥
ಮಾಹಾತ್ಮ್ಯಂ ಶ್ರಾವಯೇದ್ವಿಪ್ರಾಂಛ್ರೀಪತೇಃ ಶ್ರಾದ್ಧಕರ್ಮಣಿ ।
ಘೃತೇನ ಮಧುನಾ ತೇನ ತರ್ಪಿತಾಃ ಸ್ಯುಃ ಪಿತಾಮಹಾಃ ॥ ೪೧ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ
ಪಂಚಮೇ ಆವಂತ್ಯಖಂಡೇ ತೃತೀಯೇ ರೇವಾಖಂಡೇ
"ಶ್ರೀಪತಿಮಾಹಾತ್ಮ್ಯವರ್ಣನಂ" ನಾಮ
ಪಂಚನವತ್ಯುತ್ತರಶತತಮೋಽಧ್ಯಾಯಃ

---

ಪಾಪರಹಿತನಾಗಿ ಅವಸಾನಕಾಲದಲ್ಲಿ ಹರಿಯ ಸ್ಮರಣೆಮಾಡುವ ಶಕ್ತಿಯನ್ನು ಹೊಂದುವನು. ಕೀರ್ತಿ, ಆಯುಷ್ಯ, ಸ್ವರ್ಗ ಇವುಗಳನ್ನು ಕೊಡುವುದೂ, ಪಿತೃಗಳಿಗೆ ಪ್ರಿಯವೂ ಆದ ಈ ವಿಷ್ಣುವಿನ ಮಾಹಾತ್ಮ್ಯವನ್ನು ಶ್ರಾದ್ಧದಲ್ಲಿ ಕೇಳಿಸುವವನು ಪಿತಾಮಹರನ್ನು ಘೃತಮಧುಗಳಿಂದ ಸಂತೋಷಗೊಳಿಸುವನು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ
ಶ್ರೀ ಸ್ಕಾಂದಮಹಾಪುರಾಣದ ಐದನೆಯ ಆವಂತ್ಯಖಂಡದ ಮೂರನೆಯ ರೇವಾಖಂಡದಲ್ಲಿ
"ಶ್ರೀಪತಿಮಾಹಾತ್ಮ್ಯವರ್ಣನ"ವೆಂಬ
ನೂರತೊಂಬತ್ತೈದನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

## ಅಥ ಷಣ್ಣವತ್ಯುತ್ತರಶತತಮೋಽಧ್ಯಾಯಃ

### ಹಂಸತೀರ್ಥಮಾಹಾತ್ಮ್ಯವರ್ಣನಂ

ಶ್ರೀ ಮಾರ್ಕಂಡೇಯ ಉವಾಚ :—

ತತೋ ಗಚ್ಛೇದ್ಧರಾಧೀಶ ಹಂಸತೀರ್ಥಮನುತ್ತಮಂ ।
ಯತ್ರ ಹಂಸಸ್ತಪಸ್ತಪ್ತ್ವಾ ಬ್ರಹ್ಮವಾಹನತಾಂ ಗತಃ ॥ ೧ ॥
ಹಂಸತೀರ್ಥೇ ನರಃ ಸ್ನಾತ್ವಾ ದಾನಂ ದತ್ವಾ ಚ ಕಾಂಚನಂ ।
ಸರ್ವಪಾಪವಿನಿರ್ಮುಕ್ತೋ ಬ್ರಹ್ಮಲೋಕಂ ಸ ಗಚ್ಛತಿ ॥ ೨ ॥
ಹಂಸಯುಕ್ತೇನ ಯಾನೇನ ತರುಣಾದಿತ್ಯವರ್ಚಸಾ ।
ಸರ್ವಕಾಮಸಮೃದ್ಧೇನ ಸೇವ್ಯಮಾನೋಽಪ್ಸರೋಗಣೈಃ ॥ ೩ ॥
ತತ್ರ ಭುಕ್ತ್ವಾ ಯಥಾಕಾಮಂ ಸರ್ವಾನ್ ಭೋಗಾನ್ ಯಥೇಪ್ಸಿತಾನ್ ।
ಜಾತಿಸ್ಮರೋ ಹಿ ಜಾಯೇತ ಪುನರ್ಮಾನುಷ್ಯಮಾಗತಃ ॥ ೪ ॥
ಸನ್ಯಾಸೇನ ತ್ಯಜೇದ್ದೇಹಂ ಮೋಕ್ಷಮಾಪ್ನೋತಿ ಭಾರತ ॥ ೫ ॥

---

## ಕನ್ನಡದ ಅನುವಾದ

### ಹಂಸತೀರ್ಥಮಾಹಾತ್ಮ್ಯವರ್ಣನ

೧. ಶ್ರೀ ಮಾರ್ಕಂಡೇಯನು ಹೇಳುತ್ತಾನೆ:—ಮಹಾರಾಜ! ಅನಂತರ ಉತ್ತಮವಾದ ಹಂಸತೀರ್ಥಕ್ಕೆ ಹೋಗಬೇಕು. ಅಲ್ಲಿ ಹಂಸವು ತಪಸ್ಸನ್ನು ಮಾಡಿ ಬ್ರಹ್ಮನಿಗೆ ವಾಹನವಾಯಿತು.

೨-೩. ಹಂಸತೀರ್ಥದಲ್ಲಿ ಮಿಂದು ಸುವರ್ಣವನ್ನು ದಾನಮಾಡಿದವನು ಸರ್ವಪಾಪರಹಿತನಾಗಿ ಸೂರ್ಯನಂತೆ ತೇಜಸ್ಸುಳ್ಳ ಹಂಸವಾಹನದಲ್ಲಿ ಅಪ್ಸರೆಯರಿಂದ ಸೇವಿಸಲ್ಪಡುತ್ತ ಬ್ರಹ್ಮಲೋಕಕ್ಕೆ ತೆರಳುವನು.

೪. ಅಲ್ಲಿ ಸ್ವೇಚ್ಛೆಯಾಗಿ ಇಷ್ಟವಾದ ಸಕಲ ಭೋಗಗಳನ್ನು ಅನುಭವಿಸಿ ಮನುಷ್ಯನಾಗಿ ಹುಟ್ಟಿ ಪೂರ್ವಜನ್ಮಸ್ಮರಣೆಯುಳ್ಳವನಾಗುವನು.

೫. ಸನ್ಯಾಸವನ್ನು ಸ್ವೀಕರಿಸಿ ದೇಹತ್ಯಾಗಮಾಡಿದವನು ಮೋಕ್ಷವನ್ನು ಹೊಂದುವನು.

**ಏತತ್ತೇ ಕಥಿತಂ ಪಾರ್ಥ ಹಂಸತೀರ್ಥಸ್ಯ ಯತ್ಫಲಂ ।**
**ಸರ್ವಪಾಪಹರಂ ಪುಣ್ಯಂ ಸರ್ವದುಃಖವಿನಾಶನಂ ॥ ೬ ॥**

**ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ**
**ಪಂಚಮೇ ಆವಂತ್ಯಖಂಡೇ ತೃತೀಯೇ ರೇವಾಖಂಡೇ**
**"ಹಂಸತೀರ್ಥಮಾಹಾತ್ಮ್ಯವರ್ಣನಂ" ನಾಮ**
**ಷಣ್ಣವತ್ಯುತ್ತರಶತತಮೋಽಧ್ಯಾಯಃ**

---

೬. ಯುಧಿಷ್ಠಿರ! ನಾನು ನಿನಗೆ ಸಕಲಪಾಪಗಳನ್ನು ನಿವಾರಿಸುವುದೂ, ಪುಣ್ಯಕರವೂ, ಸಮಸ್ತದುಃಖನಾಶಕವೂ ಆದ ಹಂಸತೀರ್ಥದ ಫಲವನ್ನು ಹೇಳಿರುತ್ತೇನೆ.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ
ಶ್ರೀ ಸ್ಕಾಂದಮಹಾಪುರಾಣದ ಐದನೆಯ ಆವಂತ್ಯಖಂಡದ ಮೂರನೆಯ ರೇವಾಖಂಡದಲ್ಲಿ
"ಹಂಸತೀರ್ಥಮಹಾತ್ಮ್ಯವರ್ಣನ"ವೆಂಬ
ನೂರತೊಂಬತ್ತಾರನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

## ಅಥ ಸಪ್ತನವತ್ಯುತ್ತರಶತತಮೋಽಧ್ಯಾಯಃ

### ಮೂಲಸ್ಥಾನತೀರ್ಥಮಾಹಾತ್ಮ್ಯವರ್ಣನಂ

ಶ್ರೀ ಮಾರ್ಕಂಡೇಯ ಉವಾಚ:—

ತಸ್ಯೈವಾನಂತರಂ ಗಚ್ಛೇತ್ಸೂರ್ಯತೀರ್ಥಮನುತ್ತಮಂ ।
ಮೂಲಸ್ಥಾನಮಿತಿ ಖ್ಯಾತಂ ಪದ್ಮಜಸ್ಥಾಪಿತಂ ಶುಭಂ ॥ ೧ ॥
ಮೂಲಶ್ರೀಪತಿನಾ ದೇವೀ ಪ್ರೋಕ್ತಾ ಸ್ಥಾಪಯ ಭಾಸ್ಕರಂ ।
ಶ್ರುತ್ವಾ ದೇವೋದಿತಂ ದೇವೀ ಸ್ಥಾಪಯಾಮಾಸ ಭಾಸ್ಕರಂ ॥ ೨ ॥
ಪ್ರೋಚ್ಯತೇ ನರ್ಮದಾತೀರೇ ಮೂಲಸ್ಥಾನಾಖ್ಯಭಾಸ್ಕರಃ ॥ ೩ ॥
ತತ್ರ ತೀರ್ಥೇ ನರೋ ಯಸ್ತು ಸ್ನಾತ್ವಾ ನಿಯತಮಾನಸಃ ।
ಸಂತರ್ಪ್ಯ ಪಿತೃದೇವಾಂಶ್ಚ ಪಿಂಡೇನ ಸಲಿಲೇನ ಚ ॥ ೪ ॥
ಮೂಲಸ್ಥಾನಂ ತತಃ ಪಶ್ಯೇತ್ಸ ಗಚ್ಛೇತ್ಪರಮಾಂ ಗತಿಂ ।
ಗುಹ್ಯಾದ್ಗುಹ್ಯತರಸ್ತತ್ರ ವಿಶೇಷಸ್ತು ಶ್ರುತೋ ಮಯಾ ॥ ೫ ॥
ಸಮಾಗಮೋ ಮುನೀನಾಂ ತು ಶಂಕರಾಚ್ಛಶಿಶೇಖರಾತ್ ।
ಸದಾ ವೈ ಶುಕ್ಲಸಪ್ತಮ್ಯಾಂ ಮೂಲಮಾದಿತ್ಯವಾಸರಃ ॥ ೬ ॥

---

## ಕನ್ನಡದ ಅನುವಾದ

### ಮೂಲಸ್ಥಾನತೀರ್ಥಮಾಹಾತ್ಮ್ಯವರ್ಣನ

೧. ಶ್ರೀ ಮಾರ್ಕಂಡೇಯನು ಹೇಳುತ್ತಾನೆ:—ಅನಂತರ ಹಂಸತೀರ್ಥದ ಹತ್ತಿರವಿರುವುದೂ ಬ್ರಹ್ಮನು ಸ್ಥಾಪಿಸಿದುದೂ ಆದ ಮೂಲಸ್ಥಾನವೆಂದು ವಿಖ್ಯಾತವಾದ ಸೂರ್ಯತೀರ್ಥಕ್ಕೆ ಹೋಗಬೇಕು.

೨. ಮೂಲ ಶ್ರೀಪತಿಯು ಲಕ್ಷ್ಮಿಯನ್ನು ಕುರಿತು ಸೂರ್ಯನನ್ನು ಸ್ಥಾಪಿಸೆಂದು ಹೇಳಲು ಅವಳು ಸೂರ್ಯದೇವನನ್ನು ಪ್ರತಿಷ್ಠೆಮಾಡಿದಳು.

೩–೧೦. ನರ್ಮದಾತಟದಲ್ಲಿರುವ ಸೂರ್ಯನನ್ನು ಮೂಲಸ್ಥಾನನೆಂದು ಹೇಳುವರು. ಆ ತೀರ್ಥದಲ್ಲಿ ಜಿತೇಂದ್ರಿಯನಾಗಿ ಮಿಂದು ಪಿಂಡದಿಂದಲೂ, ನೀರಿನಿಂದಲೂ ಪಿತೃದೇವತೆಗಳಿಗೆ ತರ್ಪಣಗೈದು ಮೂಲಸ್ಥಾನ ಸೂರ್ಯನನ್ನು ದರ್ಶನಮಾಡಿದ ಮಾನವನು ಉತ್ತಮಗತಿಯನ್ನು ಪಡೆಯುವನು. ನಾನು ಅಲ್ಲಿ ಶಂಕರನು ಮುನಿಗಳೊಡನೆ ಸೇರಿದಾಗ ಅತಿ ಗುಹ್ಯವಾದ ಒಂದು ವಿಶೇಷವನ್ನು ಕೇಳಿದೆನು. ಯಾವಾಗಲೂ ಶುಕ್ಲಪಕ್ಷದ ಸಪ್ತಮಿಯ ಭಾನುವಾರದ ದಿನ

ತದಾ ರೇವಾಜಲಂ ಗತ್ವಾ ಸ್ನಾತ್ವಾ ಸಂತರ್ಪ್ಯ ದೇವತಾಃ ।
ಪಿತ್ರೂಂಶ್ಚ ಭರತಶ್ರೇಷ್ಠ ದತ್ವಾ ದಾನಂ ಸ್ವಶಕ್ತಿತಃ ॥ ೭ ॥
ಕರವೀರೈಸ್ತತೋ ಗತ್ವಾ ರಕ್ತಚಂದನವಾರಿಣಾ ।
ಸಂಸ್ಥಾಪ್ಯ ಭಾಸ್ಕರಂ ಭಕ್ತ್ಯಾ ಸಂಪೂಜ್ಯ ಚ ಯಥಾವಿಧಿ ॥ ೮ ॥
ತತಃ ಸಾಗುರುಕೈರ್ಧೂಪೈಃ ಕುಂದರೈಶ್ಚ ವಿಶೇಷತಃ ।
ಧೂಪಯೇದ್ದೇವದೇವೇಶಂ ದೀಪಾನ್ ಬೋಧ್ಯ ದಿಶೋ ದಶ ॥ ೯ ॥
ಉಪೋಷ್ಯ ಜಾಗರಂ ಕುರ್ಯಾದ್ಗೀತವಾದ್ಯಂ ವಿಶೇಷತಃ ।
ಏವಂ ಕೃತೇ ಮಹೀಪಾಲ ನ ಭವೇದುಗ್ರದುಃಖಭಾಕ್ ॥ ೧೦ ॥
ಸೂರ್ಯಲೋಕೇ ವಸೇತ್ತಾವದ್ಯಾವತ್ಕಲ್ಪಶತತ್ರಯಂ ।
ಗಂಧರ್ವೈರಪ್ಸರೋಭಿಶ್ಚ ಸೇವ್ಯಮಾನೋ ನೃಪೋತ್ತಮ ॥ ೧೧ ॥

**ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ ಪಂಚಮೇ ಆವಂತ್ಯಖಂಡೇ ತೃತೀಯೇ ರೇವಾಖಂಡೇ "ಮೂಲಸ್ಥಾನತೀರ್ಥಮಾಹಾತ್ಮ್ಯವರ್ಣನಂ" ನಾಮ ಸಪ್ತನವತ್ಯುತ್ತರಶತತಮೋಽಧ್ಯಾಯಃ**

---

ನರ್ಮದಾನದಿಗೆ ಹೋಗಿ ಮಿಂದು ದೇವಪಿತೃಗಳನ್ನು ತೃಪ್ತಿಗೊಳಿಸಿ ಶಕ್ತ್ಯನುಸಾರ ದಾನವನ್ನಿತ್ತು ಕಣಗಿಲೆ ಹೂವುಗಳಿಂದಲೂ, ರಕ್ತಚಂದನದ ನೀರಿನಿಂದಲೂ ಸೂರ್ಯನನ್ನು ವಿಧಿಯಂತೆ ಪೂಜಿಸಿ, ಅಗುರುಧೂಪವನ್ನಿತ್ತು ಸುತ್ತಲೂ ದೀಪಗಳನ್ನು ಹೊತ್ತಿಸಿ ಉಪವಾಸ ಮಾಡಿ, ಜಾಗರಣೆಯನ್ನೂ, ಗೀತಾವಾದ್ಯಗಳನ್ನೂ ಮಾಡಬೇಕು. ಮಹಾರಾಜ! ಹೀಗೆ ಮಾಡಿದರೆ ಮಾನವನು ದುಃಖವನ್ನು ಹೊಂದುವುದಿಲ್ಲ.

೧೧. ಗಂಧರ್ವಾಪ್ಸರೆಯರಿಂದ ಸೇವಿತನಾಗಿ ಮುನ್ನೂರು ಕಲ್ಪಗಳವರೆಗೆ ಸೂರ್ಯಲೋಕದಲ್ಲಿ ವಾಸಮಾಡುವನು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ ಶ್ರೀ ಸ್ಕಾಂದಮಹಾಪುರಾಣದ ಐದನೆಯ ಆವಂತ್ಯಖಂಡದ ಮೂರನೆಯ ರೇವಾಖಂಡದಲ್ಲಿ "ಮೂಲಸ್ಥಾನತೀರ್ಥಮಾಹಾತ್ಮ್ಯವರ್ಣನ"ವೆಂಬ ನೂರತೊಂಬತ್ತೇಳನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

## ಅಥಾಷ್ಟನವತ್ಯುತ್ತರಶತತಮೋಽಧ್ಯಾಯಃ

### ಶೂಲೇಶ್ವರತೀರ್ಥಮಾಹಾತ್ಮ್ಯವರ್ಣನಂ

ಶ್ರೀ ಮಾರ್ಕಂಡೇಯ ಉವಾಚ :—

ತತೋ ಗಚ್ಛೇನ್ಮಹೀಪಾಲ ಭದ್ರಕಾಲೀತಿ ಸಂಗಮಂ ।
ಶೂಲತೀರ್ಥಮಿತಿಖ್ಯಾತಂ ಸ್ವಯಂ ದೇವೇನ ನಿರ್ಮಿತಂ ॥ ೧ ॥
ಪಂಚಾಯತನಮಧ್ಯೇ ತು ತಿಷ್ಠತೇ ಪರಮೇಶ್ವರಃ ।
ಶೂಲಪಾಣಿರ್ಮಹಾದೇವಃ ಸರ್ವದೈವತಪೂಜಿತಃ ॥ ೨ ॥
ಸ ಸಂಗಮೋ ನೃಪಶ್ರೇಷ್ಠ ನಿತ್ಯಂ ದೇವೈರ್ನಿಷೇವಿತಃ ।
ದರ್ಶನಾತ್ತಸ್ಯ ತೀರ್ಥಸ್ಯ ಸ್ನಾನದಾನಾದ್ವಿಶೇಷತಃ ॥ ೩ ॥
ದೌರ್ಭಾಗ್ಯಂ ದುರ್ನಿಮಿತ್ತಂ ಚ ಹ್ಯಭಿಶಾಪೋ ನೃಪಗ್ರಹಃ ।
ಯದನ್ಯದ್ದುಷ್ಕೃತಂ ಕರ್ಮ ನಶ್ಯತೇ ಶಂಕರೋಽಬ್ರವೀತ್ ॥ ೪ ॥

ಯುಧಿಷ್ಠಿರ ಉವಾಚ :—

ಕಥಂ ಶೂಲೇಶ್ವರೀ ದೇವೀ ಕಥಂ ಶೂಲೇಶ್ವರೋ ಹರಃ ।
ಪ್ರಥಿತೋ ನರ್ಮದಾತೀರೇ ಏತದ್ವಿಸ್ತರತೋ ವದ ॥ ೫ ॥

---

## ಕನ್ನಡದ ಅನುವಾದ

### ಶೂಲೇಶ್ವರತೀರ್ಥಮಾಹಾತ್ಮ್ಯವರ್ಣನ

೧. ಮಾರ್ಕಂಡೇಯನು ಹೇಳುತ್ತಾನೆ:—ಮಹಾರಾಜ! ಅನಂತರ ಮಹೇಶ್ವರನು ನಿರ್ಮಿಸಿದ ಭದ್ರಕಾಳಿಯು ಸೇರುವ ಶೂಲತೀರ್ಥಕ್ಕೆ ಹೋಗಬೇಕು.

೨. ಅಲ್ಲಿ ಸಮಸ್ತ ದೇವತೆಗಳಿಂದಲೂ ಪೂಜಿತನಾದ ಶೂಲಪಾಣಿಯಾದ ಶಂಕರನು ಪಂಚಾಯತನದ ನಡುವೆ ಇರುವನು.

೩–೪. ನೃಪವರ್ಯನೆ! ಆ ಸಂಗಮವನ್ನು ನಿತ್ಯವೂ ದೇವತೆಗಳು ಸೇವಿಸುತ್ತಾರೆ. ಆ ತೀರ್ಥವನ್ನು ದರ್ಶನಮಾಡುವುದರಿಂದಲೂ, ವಿಶೇಷವಾಗಿ ಸ್ನಾನದಾನಗಳನ್ನು ಮಾಡುವುದರಿಂದಲೂ, ದೌರ್ಭಾಗ್ಯ, ದುರ್ನಿಮಿತ್ತ, ಅಭಿಶಾಪ, ನೃಪಗ್ರಹ, ಇತರ ದುಷ್ಕರ್ಮ ಇವುಗಳು ನಾಶವಾಗುವುವು ಎಂದು ಶಂಕರನು ಹೇಳಿದ್ದಾನೆ.

೫. ಯುಧಿಷ್ಠಿರನು ಹೇಳುತ್ತಾನೆ:—ಶೂಲೇಶ್ವರಿಯಾದ ದೇವಿಯೂ, ಶೂಲೇಶ್ವರನಾದ ಹರನೂ ನರ್ಮದಾತೀರದಲ್ಲಿ ಹೇಗೆ ಪ್ರಸಿದ್ಧರಾದರು? ಇದನ್ನು ವಿಸ್ತಾರವಾಗಿ ಹೇಳು.

ಮಾರ್ಕಂಡೇಯ ಉವಾಚ :–

ಬಭೂವ ಬ್ರಾಹ್ಮಣಃ ಕಶ್ಚಿನ್ಮಾಂಡವ್ಯ ಇತಿ ವಿಶ್ರುತಃ ।
ಧೃತಿಮಾನ್ ಸರ್ವಧರ್ಮಜ್ಞಃ ಸತ್ಯೇ ತಪಸಿ ಚ ಸ್ಥಿತಃ ॥ ೬ ॥
ಅಶೋಕಾಶ್ರಮಮಧ್ಯಸ್ಥೋ ವೃಕ್ಷಮೂಲೇ ಮಹಾತಪಾಃ ।
ಊರ್ಧ್ವಬಾಹುರ್ಮಹಾತೇಜಾಸ್ತಸ್ಥೌ ಮೌನವ್ರತಾನ್ವಿತಃ ॥ ೭ ॥
ತಸ್ಯ ಕಾಲೇನ ಮಹತಾ ತೀವ್ರೇ ತಪಸಿ ವರ್ತತಃ ।
ತಮಾಶ್ರಮಮನುಪ್ರಾಪ್ತಾ ದಸ್ಯವೋ ಲೋಪ್ತ್ರಹಾರಿಣಃ ॥ ೮ ॥
ಅನುಸರ್ಪ್ಯಮಾಣಾ ಬಹುಭಿಃ ಪುರುಷೈರ್ಭರತರ್ಷಭ ।
ತೇ ತಸ್ಯಾವಸಥೇ ಲೋಪ್ತ್ರಂ ನ್ಯದಧುಃ ಕುರುನಂದನ ॥ ೯ ॥
ನಿಧಾಯ ಚ ತದಾಲೀನಾಸ್ತತ್ರೈವಾಶ್ರಮಮಂಡಲೇ ।
ತೇಷು ಲೀನೇಷ್ವಥೋ ಶೀಘ್ರಂ ತತಸ್ತದ್ರಕ್ಷಿಣಾಂ ಬಲಂ ॥ ೧೦ ॥
ಆಜಗಾಮ ತತೋಽಪಶ್ಯಂಸ್ತಮೃಷಿಂ ತಸ್ಕರಾನುಗಾಃ ।
ತಮಪೃಚ್ಛಂಸ್ತದಾ ವೃತ್ತಂ ರಕ್ಷಿಣಸ್ತಂ ತಪೋಧನಂ ॥ ೧೧ ॥
ವದ ಕೇನ ಪಥಾ ಯಾತಾ ದಸ್ಯವೋ ದ್ವಿಜಸತ್ತಮ ।
ತೇನ ಗಚ್ಛಾಮಹೇ ಬ್ರಹ್ಮನ್ಯಥಾ ಶೀಘ್ರತರಂ ವಯಂ ॥ ೧೨ ॥
ತಥಾ ತು ವಚನಂ ತೇಷಾಂ ಬ್ರುವತಾಂ ಸ ತಪೋಧನಃ ।
ನ ಕಿಂಚಿದ್ವಚನಂ ರಾಜನ್ನವದತ್ಸಾಧ್ವಸಾಧು ವಾ ॥ ೧೩ ॥

---

೬–೭. ಮಾರ್ಕಂಡೇಯನು ಹೇಳುತ್ತಾನೆ:—ಸದ್ವೃತ್ತನೂ, ಸಮಸ್ತಧರ್ಮವನ್ನರಿತವನೂ, ಸತ್ಯತಪೋನಿರತನೂ ಆದ ಮಾಂಡವ್ಯನೆಂಬ ಓರ್ವ ಬ್ರಾಹ್ಮಣನಿದ್ದನು. ಅಶೋಕಾಶ್ರಮದ ನಡುವೆ ಮರದ ಬುಡದಲ್ಲಿ ಊರ್ಧ್ವಬಾಹುವೂ, ಅತಿ ತೇಜಸ್ವಿಯೂ, ಮೌನವ್ರತವುಳ್ಳವನೂ ಆದ ಅವನು ತಪವನ್ನಾಚರಿಸಿದನು.

೮. ಅವನು ಕಠಿನ ತಪಸ್ಸನ್ನಾಚರಿಸುತ್ತಿರಲು ಬಹುಕಾಲದ ಮೇಲೆ ಅವನ ಆಶ್ರಮಕ್ಕೆ ದ್ರವ್ಯವನ್ನು ಕದ್ದ ಕಳ್ಳರು ಬಂದರು.

೯–೧೧. ಮಹಾರಾಜ! ಅನೇಕ ಜನರಿಂದ ಹಿಂಬಾಲಿಸಲ್ಪಟ್ಟ ಆ ಕಳ್ಳರು ಆ ಮುನಿಯ ಆಶ್ರಮದಲ್ಲಿ ಕದ್ದ ವಸ್ತುಗಳನ್ನಿಟ್ಟು ಅಲ್ಲಿಯೇ ಅಡಗಿಕೊಂಡರು. ಅವರು ಹಾಗೆ ಅಡಗಿಕೊಳ್ಳಲು ರಾಜಪುರುಷರು ಬೇಗನೆ ಅಲ್ಲಿಗೆ ಬಂದು ಮುನಿಯನ್ನು ನೋಡಿ ನಡೆದ ವೃತ್ತಾಂತವನ್ನು ಹೀಗೆ ಕೇಳಿದರು.

೧೨. "ದ್ವಿಜವರ್ಯನೆ! ಕಳ್ಳರು ಯಾವ ದಾರಿಯಿಂದ ಹೋದರು? ಹೇಳು. ನಾವು ಆ ದಾರಿಯಿಂದ ಬೇಗನೆ ಹೋಗುವೆವು."

೧೩. ಆ ಮುನಿಯು ಹೀಗೆ ಹೇಳುತ್ತಿರುವ ಆ ರಾಜಪುರುಷರಿಗೆ ಒಳ್ಳೆಯದು ಅಥವಾ ಕೆಟ್ಟದು ಆದ ಯಾವ ಮಾತನ್ನೂ ಹೇಳಲಿಲ್ಲ.

ತತಸ್ತೇ ರಾಜಪುರುಷಾ ವಿಚಿನ್ವಂತಸ್ತಮಾಶ್ರಮಂ ।
ಸಂಯಮ್ಯೈನಂ ತತೋ ರಾಜ್ಞೇ ಸರ್ವಾನ್‌ದಸ್ಯೂನ್ನ್ಯವೇದಯನ್ ॥೧೪॥
ತಂ ರಾಜಾ ಸಹಿತೈಶ್ಚೋರೈರನ್ವಶಾದ್ವಧ್ಯತಾಮಿತಿ ।
ಸಂಬಧ್ಯ ತಂ ಚ ತೈ ರಾಜಂಛೂಲೇ ಪ್ರೋತೋ ಮಹಾತಪಾಃ ॥ ೧೫ ॥
ತತಸ್ತೇ ಶೂಲಮಾರೋಪ್ಯ ತಂ ಮುನಿಂ ರಕ್ಷಿಣಸ್ತದಾ ।
ಪ್ರತಿಜಗ್ಮುರ್ಮಹೀಪಾಲ ಧನಾನ್ಯಾದಾಯ ತಾನ್ಯಥ ॥ ೧೬ ॥
ಶೂಲಸ್ಥಃ ಸ ತು ಧರ್ಮಾತ್ಮಾ ಕಾಲೇನ ಮಹತಾ ತದಾ ।
ಧ್ಯಾಯನ್ದೇವಂ ತ್ರಿಲೋಕೇಶಂ ಶಂಕರಂ ತಮುಮಾಪತಿಂ ॥ ೧೭ ॥
ಬಹುಕಾಲಂ ಮಹೇಶಾನಂ ಮನಸಾಽಽಧ್ಯಾಯ ಸಂಸ್ಥಿತಃ ।
ನಿರಾಹಾರೋಽಪಿ ವಿಪ್ರರ್ಷಿರ್ಮರಣಂ ನಾಽಭ್ಯಪದ್ಯತ ॥ ೧೮ ॥
ಧಾರಯಾಮಾಸ ವಿಪ್ರಾಃಪ್ರಾಣಾನ್ಮೃಷಭಃ ಸಹೃದಾ ಹರಿಂ ।
ಶೂಲಾಗ್ರೇ ತಪ್ಯಮಾನೇನ ತಪಸ್ತೇನ ಕೃತಂ ತದಾ ॥ ೧೯ ॥
ಸಂತಾಪಂ ಪರಮಂ ಜಗ್ಮುಃ ಶ್ರುತ್ವೈತನ್ಮುನಯೋಽಖಿಲಾಃ ।
ತೇ ರಾತ್ರೌ ಶಕುನಾ ಭೂತ್ವಾ ಸಂನ್ಯವರ್ತಂತ ಭಾರತ ॥ ೨೦ ॥
ದರ್ಶಯಂತೋ ಮುನೇಃ ಶಕ್ತಿಂ ತಮಪೃಚ್ಛನ್ದ್ವಿಜೋತ್ತಮಂ ।
ಶ್ರೋತುಮಿಚ್ಛಾಮ ತೇ ಬ್ರಹ್ಮನ್ಕಿಂ ಪಾಪಂ ಕೃತವಾನಸಿ ॥ ೨೧ ॥

---

೧೪. ಅನಂತರ ಆ ರಾಜಪುರುಷರು ಅವನ ಆಶ್ರಮದಲ್ಲಿ ಹುಡುಕಿ ಅವನನ್ನೂ, ಇತರ ಕಳ್ಳರನ್ನೂ ಕಟ್ಟಿ ರಾಜನಿಗೆ ಒಪ್ಪಿಸಿದರು.

೧೫. ಆ ರಾಜನು ಮಾಂಡವ್ಯನನ್ನೂ, ಇತರ ಕಳ್ಳರನ್ನೂ ಕೊಲ್ಲಿರಿ ಎಂದು ಆಜ್ಞೆಮಾಡಿದನು. ರಾಜಪುರುಷರು ಆ ಮುನಿಯನ್ನು ಕಟ್ಟಿ ಶೂಲಕ್ಕೇರಿಸಿದರು.

೧೬. ಆ ರಾಜಪುರುಷರು ಹೀಗೆ ಮುನಿಯನ್ನು ಶೂಲಕ್ಕೇರಿಸಿ ಹಣಗಳನ್ನು ತೆಗೆದುಕೊಂಡು ಹೊರಟುಹೋದರು.

೧೭–೧೮. ಶೂಲದಲ್ಲಿರುವ ಧರ್ಮಾತ್ಮನಾದ ಆ ಮುನಿಯು ತ್ರಿಭುವನದೊಡೆಯನೂ, ಉಮಾಪತಿಯೂ ಆದ ಶಂಕರನನ್ನು ಬಹುಕಾಲದವರೆಗೆ ಧ್ಯಾನಿಸುತ್ತ ನಿರಾಹಾರನಾಗಿದ್ದರೂ ಮಡಿಯಲಿಲ್ಲ.

೧೯–೨೦. ವಿಪ್ರೋತ್ತಮನಾದ ಆ ಮುನಿಯು ಮನಸ್ಸಿನಲ್ಲಿ ಹರಿಯನ್ನು ಧ್ಯಾನಿಸುತ್ತ ಶೂಲಾಗ್ರದಲ್ಲಿ ತಪಸ್ಸನ್ನು ಮಾಡುತ್ತಿರಲು, ಸಮಸ್ತಮುನಿಗಳು ಅದನ್ನು ಕೇಳಿ ಅತ್ಯಂತ ದುಃಖಗೊಂಡು ರಾತ್ರಿವೇಳೆ ಪಕ್ಷಿಗಳಾಗಿ ಅಲ್ಲಿಗೈತಂದರು.

೨೧. ಅವರು ಮುನಿಯ ಶಕ್ತಿಯನ್ನು ನೋಡುತ್ತ, "ಬ್ರಾಹ್ಮಣ! ನೀನು ಏನು ಪಾಪವನ್ನು ಮಾಡಿರುವೆ? ಅದನ್ನು ಕೇಳಲಿಚ್ಛಿಸುವೆವು" ಎಂದು ಪ್ರಶ್ನಿಸಿದರು.

ಶ್ರೀ ಮಾರ್ಕಂಡೇಯ ಉವಾಚ:—

ತತಃ ಸ ಮುನಿಶಾರ್ದೂಲಸ್ತಾನುವಾಚ ತಪೋಧನಾನ್ ।
ದೋಷತಃ ಕಿಂ ಗಮಿಷ್ಯಾಮಿ ನ ಹಿ ಮೇಽನ್ಯೋಽಪರಾಧ್ಯತಿ ॥ ೨೨ ॥
ಏವಮುಕ್ತ್ವಾ ತತಃ ಸರ್ವಾನಾಚಚಕ್ಷೇ ತತೋ ಮುನಿಃ ।
ಮುನಯಶ್ಚ ತತೋ ರಾಜ್ಞೇ ದ್ವಿತೀಯೇಽಹ್ನಿ ನ್ಯವೇದಯನ್ ॥ ೨೩ ॥
ರಾಜಾ ತು ತಮೃಷಿಂ ಶ್ರುತ್ವಾ ನಿಷ್ಕ್ರಾಂತಃ ಸಹ ಬಂಧುಭಿಃ ।
ಪ್ರಸಾದಯಾಮಾಸ ತದಾ ಶೂಲಸ್ಥಮೃಷಿಸತ್ತಮಂ ॥ ೨೪ ॥

ರಾಜೋವಾಚ:—

ಯನ್ಮಯಾಽಪಕೃತಂ ತಾತ ತವಾಽಜ್ಞಾನವಶಾದ್ಬಹು ।
ಪ್ರಸಾದಯೇ ತ್ವಾಂ ತತ್ರಾಽಹಂ ನ ಮೇ ತ್ವಂ ಕ್ರೋದ್ಧುಮರ್ಹಸಿ ॥ ೨೫ ॥
ಏವಮುಕ್ತಸ್ತತೋ ರಾಜ್ಞಾ ಪ್ರಸಾದಮಕರೋನ್ಮುನಿಃ ।
ಕೃತಪ್ರಸಾದಂ ರಾಜಾ ತಂ ತತಃ ಸಮವತಾರಯತ್ ॥ ೨೬ ॥
ಅವತೀರ್ಯಮಾಣಸ್ತು ಮುನಿಃ ಶೂಲೇ ಮಾಂಸತ್ವಮಾಗತೇ ।
ಅತಿಸಂಪೀಡಿತೋ ವಿಪ್ರಃ ಶಂಕರಂ ಮನಸಾಽಗಮತ್ ॥ ೨೭ ॥

---

೨೨–೨೩. ಶ್ರೀ ಮಾರ್ಕಂಡೇಯನು ಹೇಳುತ್ತಾನೆ:—"ಅನಂತರ ಆ ಮುನಿವರ್ಯನು ಆ ಋಷಿಗಳನ್ನು ಕುರಿತು ನಾನು ನನ್ನ ತಪ್ಪಿನಿಂದ ಈ ವೇದನೆಯನ್ನು ಅನುಭವಿಸುವುದಿಲ್ಲ. ಬೇರೆಯವರು ತಪ್ಪನ್ನು ಮಾಡಿದರು ಶಿಕ್ಷೆಯು ಮಾತ್ರ ನನಗೆ" ಎಂದು ಹೇಳಲು, ಆ ಋಷಿಗಳು ಮಾರನೆ ದಿನ ಅವನ ಮಾತನ್ನು ರಾಜನಿಗೆ ತಿಳಿಸಿದರು.

೨೪. ದೊರೆಯು ಅವನು ಮುನಿಯೆಂದು ತಿಳಿದು, ಬಂಧುಗಳೊಡನೆ ಮನೆಯಿಂದ ಹೊರಟುಬಂದು ಶೂಲದಲ್ಲಿರುವ ಮಾಂಡವ್ಯನನ್ನು ಸಮಾಧಾನಗೊಳಿಸಿದನು.

೨೫. ರಾಜನು ಹೇಳುತ್ತಾನೆ:—ಮುನಿಯೆ! ನೀನು ಮುನಿಯೆಂದು ತಿಳಿಯದೆ ನಿನಗೆ ಬಹಳವಾಗಿ ಅಪಕಾರ ಮಾಡಿದ್ದೇನೆ. ಆ ವಿಷಯದಲ್ಲಿ ನಾನು ನಿನ್ನನ್ನು ಸಂತೋಷಗೊಳಿಸುತ್ತೇನೆ. ನೀನು ಕುಪಿತನಾಗಬೇಡ.

೨೬. ದೊರೆಯು ಹೀಗೆನ್ನಲು, ಮುನಿಯು ಪ್ರಸನ್ನನಾದನು. ರಾಜನು ಪ್ರಸನ್ನನಾದ ಅವನನ್ನು ಶೂಲದಿಂದ ಕೆಳಗಿಳಿಸಿದನು.

೨೭. ಶೂಲದಿಂದ ಮುನಿಯನ್ನು ಇಳಿಸುವಾಗ ಅವನ ಮಾಂಸವು ಶೂಲದಲ್ಲಿ ಅಂಟಿಕೊಳ್ಳಲು ಅತ್ಯಂತ ಪೀಡಿತನಾದ ಮುನಿಯು ಶಂಕರನನ್ನು ಧ್ಯಾನಮಾಡಿದನು.

ಸಂಧ್ಯಾತಃ ಶಂಕರಸ್ತೇನ ಬಹುಕಾಲೋಪವಾಸತಃ ।
ಪ್ರಾದುರ್ಭೂತೋ ಮಹಾದೇವಃ ಶೂಲಂ ತಸ್ಯ ತಥಾಽಚ್ಛಿನತ್ ॥ ೨೮ ॥
ಶೂಲಮೂಲಸ್ಥಿತಃ ಶಂಭುಸ್ತುಷ್ಟಃ ಪ್ರಾಹ ಪುನಃ ಪುನಃ ।
ಬ್ರೂಹಿ ಕಿಂ ಕ್ರಿಯತಾಂ ವಿಪ್ರ ಸತ್ವಸ್ಥಾನಪರಾಯಣ ॥ ೨೯ ॥
ಅದೇಯಮಪಿ ದಾಸ್ಯಾಮಿ ತುಷ್ಟೋಽಸ್ಮ್ಯದ್ಯೋಮಯಾ ಸಹ ।
ಕಿಂ ತು ಸತ್ಯವತಾಂ ಲೋಕೇ ಸಿದ್ಧಿರ್ನ ಸ್ಯಾಚ್ಚ ಭೂಯಸೀ ॥ ೩೦ ॥
ಸ್ವಕರ್ಮಣೋಽನುರೂಪಂ ಹಿ ಫಲಂ ಭುಂಜಂತಿ ಜಂತವಃ ।
ಶುಭೇನ ಕರ್ಮಣಾ ಭೂತಿರ್ದುಃಖಂ ಸ್ಯಾತ್ಪಾತಕೇನ ತು ॥ ೩೧ ॥
ಬಹುಭೇದಪ್ರಭಿನ್ನಂ ತು ಮನುಷ್ಯೇಷು ವಿಪಚ್ಯತೇ ।
ಕೇಷಾಂ ದರಿದ್ರಭಾವೇನ ಕೇಷಾಂ ಧನವಿಪತ್ತಿಜಂ ॥ ೩೨ ॥
ಸಂತತ್ಯಭಾವಜಂ ಕೇಷಾಂ ಕೇಷಾಂ ಚಿತ್ತದ್ವಿಪರ್ಯಯೇ ।
ತಥಾ ದುರ್ವೃತ್ತಿತಸ್ತೇಷಾಂ ಫಲಮಾವಿರ್ಭವೇನ್ನೃಣಾಂ ॥ ೩೩ ॥
ಕೇಷಾಂಚಿತ್ಪುತ್ರಮರಣೇ ವಿಯೋಗಾತ್ಪ್ರಿಯಮಿತ್ರಯೋಃ ।
ರಾಜಚೌರಾಗ್ನಿತಃ ಕೇಷಾಂ ದುಃಖಂ ಸ್ಯಾದ್ದೈವನಿರ್ಮಿತಂ ॥ ೩೪ ॥

---

೨೮. ಅನೇಕ ವರ್ಷಗಳಕಾಲ ಉಪವಾಸಮಾಡಿದ ಅವನು ಧ್ಯಾನಮಾಡಿದ ಕೂಡಲೆ ಶಂಕರನು ಪ್ರತ್ಯಕ್ಷನಾಗಿ ಶೂಲವನ್ನು ಕತ್ತರಿಸಿದನು.

೨೯. ಶೂಲದ ಬುಡದಲ್ಲಿರುವ ಶಂಕರನು ಸಂತುಷ್ಟನಾಗಿ ಹೀಗೆಂದನು. ಸಾತ್ವಿಕನಾದ ಮುನಿಯೆ! ನಿನಗೆ ಯಾವ ಶ್ರೇಯಸ್ಸನ್ನು ಮಾಡಲಿ ಹೇಳು.

೩೦. ಕೊಡಲನರ್ಹವಾದುದನ್ನೂ ಕೊಡುವೆನು. ಈಗ ನಾನು ಪಾರ್ವತಿಯೊಡನೆ ಸಂತುಷ್ಟನಾಗಿದ್ದೇನೆ. ಲೋಕದಲ್ಲಿ ಸತ್ಯವಂತರಿಗೆ ಅತಿಶಯವಾದ ಸಿದ್ಧಿಯುಂಟಾಗಲಾರದೆ?

೩೧. ಜಂತುಗಳು ತಮ್ಮ ಕರ್ಮಕ್ಕೆ ಅನುರೂಪವಾದ ಫಲವನ್ನು ಅನುಭವಿಸುವುವು. ಒಳ್ಳೆ ಕರ್ಮದಿಂದ ಐಶ್ವರ್ಯವೂ, ಪಾಪದಿಂದ ದುಃಖವೂ ಉಂಟಾಗುವುದು.

೩೨–೩೪. ಅನೇಕ ವಿಧವಾದ ದುಃಖವು ಮಾನವರನ್ನು ಪೀಡಿಸುವುದು. ಕೆಲವರಿಗೆ ದಾರಿದ್ರ್ಯದಿಂದಲೂ, ಕೆಲವರಿಗೆ ಧನನಾಶದಿಂದಲೂ, ಕೆಲವರಿಗೆ ಸಂತತಿಯಿಲ್ಲದಿರುವುದರಿಂದಲೂ, ಕೆಲವರಿಗೆ ಸಂತತಿಯಿಂದಲೂ, ಕೆಲವರಿಗೆ ದುಷ್ಟವ್ಯಾಪಾರದಿಂದಲೂ, ಕೆಲವರಿಗೆ ಪುತ್ರಮರಣದಿಂದಲೂ, ಕೆಲವರಿಗೆ ಪ್ರಿಯಮಿತ್ರರ ವಿಯೋಗದಿಂದಲೂ, ಕೆಲವರಿಗೆ ರಾಜಚೋರಾಗ್ನಿಗಳಿಂದಲೂ, ಕೆಲವರಿಗೆ ದೇವತೆಗಳಿಂದಲೂ ದುಃಖವುಂಟಾಗುವುದು.

ತಚ್ಛರೀರೇ ತು ಕೇಷಾಂಚಿತ್ಕರ್ಮಣಾ ಸಂಪ್ರದೃಶ್ಯತೇ ।
ಜರಾಶ್ಚ ವಿವಿಧಾಃ ಕೇಷಾಂ ದೃಶ್ಯಂತೇ ವ್ಯಾಧಯಸ್ತಥಾ ॥ ೩೫ ॥
ದೃಶ್ಯಂತೇ ಚಾಽಭಿಶಾಪಾಶ್ಚ ಪೂರ್ವಕರ್ಮಾನುಸಂಚಿತಾಃ ।
ಕಷ್ಟಾಃ ಕಷ್ಟತರಾವಸ್ಥಾ ಗತಾಃ ಕೇಚಿದನಾಗಸಃ ॥ ೩೬ ॥
ಪೂರ್ವಕರ್ಮವಿಪಾಕೇನ ಧರ್ಮೇಣ ತಪಸಿ ಸ್ಥಿತಾಃ ।
ದಾಂತಾಃ ಸ್ವದಾರನಿರತಾ ಭೂರಿದಾಃ ಪರಿಪೂಜಕಾಃ ॥ ೩೭ ॥
ಹ್ರೀಮಂತೋ ನಯಸಂಯುಕ್ತಾ ಅನ್ಯೇ ಬಹುಗುಣೈರ್ಯುತಾಃ ।
ದುರ್ಗಮಾಮಾಪದಂ ಪ್ರಾಪ್ಯ ನಿಜಕರ್ಮಸಮುದ್ಭವಾಂ ॥ ೩೮ ॥
ನ ಸಂಜ್ವರಂತಿ ಯೇ ಮರ್ತ್ಯಾ ಧರ್ಮನಿಂದಾಂ ನ ಕುರ್ವತೇ ।
ಇದಮೇವ ತಪೋ ಮತ್ವಾ ಕ್ಷಿಪಂತಿ ಸುವಿಚೇತಸಃ ॥ ೩೯ ॥
ಹಾ ಭ್ರಾತರ್ಮಾತಃ ಪುತ್ರೇತಿ ಕಷ್ಟೇಷು ನ ವದಂತಿ ಯೇ ।
ಸ್ಮರಂತಿ ಮಾಂ ಮಹೇಶಾನಮಥವಾ ಪುಷ್ಕರೇಕ್ಷಣಂ ॥ ೪೦ ॥
ದುಷ್ಕೃತಂ ಪೂರ್ವಜಂ ಭೋಕ್ತುಂ ಧ್ರುವಂ ತದುಪಶಾಮ್ಯತಿ ॥ ೪೧ ॥

ದಿನಾನಿ ಯಾವಂತಿ ವಸೇತ್ಸ ಕಷ್ಟೇ
ಯಥಾಕೃತಂ ಚಿಂತಯದ್ದೇವಮೀಶಂ ।
ತಾವಂತಿ ಸೌಖ್ಯಾನಿ ಕೃತಾನಿ ತೇನ
ಭವಂತಿ ವಿಪ್ರ ಶ್ರುತಿನೋದನೈಷಾ ॥ ೪೨ ॥

---

೩೫–೩೬. ಕೆಲವರಿಗೆ ಕರ್ಮವಶದಿಂದ ಶರೀರದಲ್ಲಿ ವಿವಿಧ ಜರಾವ್ಯಾಧಿಗಳು ಕಾಣಿಸುವುವು. ತಪ್ಪಿಲ್ಲದ ಕೆಲವು ಜನರಿಗೆ ಪೂರ್ವಕರ್ಮವಶದಿಂದ ಮಿಥ್ಯಾಪವಾದವೂ, ಕಷ್ಟಾವಸ್ಥೆಗಳೂ ಉಂಟಾಗುವುವು.

೩೭–೩೮. ಧರ್ಮತಪಸ್ಸುಗಳಲ್ಲಿ ನಿರತರೂ, ಇಂದ್ರಿಯನಿಗ್ರಹವುಳ್ಳವರೂ, ಸ್ವದಾರಸಮಾಸಕ್ತರೂ, ಅನೇಕವಾಗಿ ದಾನಮಾಡಿರುವವರೂ, ಪೂಜಿಸುವವರೂ, ಲಜ್ಜೆಯುಳ್ಳವರೂ, ನೀತಿವಂತರೂ, ಅತ್ಯಂತ ಗುಣಶಾಲಿಗಳೂ ಆದವರು ತಮ್ಮ ಕರ್ಮವಶದಿಂದ ದುರ್ಗಮವಾದ ಆಪತ್ತನ್ನು ಹೊಂದುವರು.

೩೯. ಅವರು ಅಂತಹ ಆಪತ್ತನ್ನು ಅನುಭವಿಸುತ್ತಿದ್ದರೂ ವ್ಯಥೆಗೊಳ್ಳುವುದಿಲ್ಲ. ಧರ್ಮವನ್ನು ನಿಂದಿಸುವುದೂ ಇಲ್ಲ. ಜ್ಞಾನಿಗಳಾದ ಅವರು ಇದೇ ತಪಸ್ಸೆಂದು ಭಾವಿಸಿ ಕಾಲವನ್ನು ಕಳೆಯುತ್ತಾರೆ.

೪೦–೪೧. ಪೂರ್ವಕರ್ಮಫಲವನ್ನು ಅನುಭವಿಸುತ್ತಿದ್ದರೂ ಅವರು ಅಣ್ಣ, ಅಮ್ಮ, ಪುತ್ರ ಎಂದು ಗೋಳಾಡದೆ ನನ್ನನ್ನಾಗಲಿ, ಕೃಷ್ಣನನ್ನಾಗಲಿ ಸ್ಮರಿಸಿದರೆ ಆ ದುಃಖವು ಶಾಂತವಾಗುವುದು.

೪೨. ಅವನು ಕಷ್ಟಗಳನ್ನು ಅನುಭವಿಸುತ್ತಿರುವಾಗ ಹರಿಯನ್ನು ಚಿಂತಿಸಿದರೆ ಅಷ್ಟು ದಿನಗಳೂ ಸೌಖ್ಯವಾಗಿರುವನೆಂದು ವೇದವು ಘೋಷಿಸುವುದು.

ಯಸ್ಮಾತ್ತ್ವಯಾ ಕಷ್ಟಗತೇನ ನಿತ್ಯಂ
ಸ್ಮೃತಶ್ಚಾಹಂ ಮನಸಾ ಪೂಜಿತಶ್ಚ ।
ಗೌರೀಸಹಾಯಸ್ತೇನ ಇಹಾಗತೋಽಸ್ಮಿ
ಬ್ರೂಹ್ಯದ್ಯ ಕೃತ್ಯಂ ಕ್ರಿಯತಾಂ ಕಿಂ ನು ವಿಪ್ರ ॥ ೪೩ ॥

ಮಾಂಡವ್ಯ ಉವಾಚ :—

ತುಷ್ಟೋ ಯದ್ಯುಮಯಾ ಸಾರ್ಧಂ ವರದೋ ಯದಿ ಶಂಕರ ।
ತದಾ ಮೇ ಶೂಲಸಂಸ್ಥಸ್ಯ ಸಂಶಯಂ ಪರಮಂ ವದ ॥ ೪೪ ॥
ನ ರುಜಾ ಮಮ ಕಾಽಪಿ ಸ್ಯಾಚ್ಛೂಲಸಂಪ್ರೋತಿತೇಽಗಕೇ ।
ಅಮೃತಸ್ರಾವಿ ತಚ್ಛೂಲಂ ಪ್ರಭಾವಾತ್ಕಸ್ಯ ಶಂಸ ಮೇ ॥ ೪೫ ॥

ಶ್ರೀ ಶೂಲಪಾಣಿರುವಾಚ :—

ಶೂಲಸ್ಥೇನ ತ್ವಯಾ ವಿಪ್ರ ಮನಸಾ ಚಿಂತಿತೋಽಸ್ಮಿ ಯತ್ ।
ಅನಯಾನಾಂ ನಿಹಂತಾಽಹಂ ದುಃಖಾನಾಂ ವಿನಿಬರ್ಹಣಃ ॥ ೪೬ ॥
ಧ್ಯಾತಮಾತ್ರೋ ಹ್ಯಹಂ ವಿಪ್ರ ಪಾತಾಲೇ ವಾಽಪಿ ಸಂಸ್ಥಿತಃ ।
ಶೂಲಮೂಲೇ ತ್ವಹಂ ಶಂಭುರಗ್ರೇ ದೇವೀ ಸ್ವಯಂ ಸ್ಥಿತಾ ।
ಜಗನ್ಮಾತಾಂಬಿಕಾ ದೇವೀ ತ್ವಾಮಮೃತೇನಾಽಸ್ನಪೂರಯತ್ ॥ ೪೭ ॥

---

೪೩. ಕಷ್ಟವನ್ನು ಅನುಭವಿಸುತ್ತಿರುವ ನೀನು ಮನಸ್ಸಿನಲ್ಲ ನನ್ನನ್ನು ಸ್ಮರಿಸಿದ್ದರಿಂದಲೂ, ಪೂಜಿಸಿದ್ದರಿಂದಲೂ ನಾನು ಗೌರಿಯೊಡನೆ ಇಲ್ಲಿಗೆ ಬಂದಿರುವೆನು. ಈಗ ಯಾವ ಕೆಲಸವನ್ನು ಮಾಡಲಿ, ಹೇಳು.

೪೪. ಮಾಂಡವ್ಯನು ಹೇಳುತ್ತಾನೆ:—ಶಂಕರ! ಶೂಲದಲ್ಲಿದ್ದ ನನ್ನ ವಿಷಯದಲ್ಲಿ ನೀನು ಸಂತುಷ್ಟನಾಗಿ ಪಾರ್ವತಿಯೊಡನೆ ವರವನ್ನು ಕೊಡುವುದಾದರೆ ನನಗೆ ದೊಡ್ಡ ಸಂಶಯವುಂಟಾಗಿದೆ. ಅದನ್ನು ನನಗೆ ಹೇಳು.

೪೫. ಶೂಲಕ್ಕೇರಿಸಲ್ಪಟ್ಟ ನನಗೆ ಯಾವ ಪ್ರಭಾವದಿಂದ ನೋವು ಉಂಟಾಗಲಿಲ್ಲ? ಆ ಶೂಲವು ಹೇಗೆ ಅಮೃತವನ್ನು ಸುರಿಸುವಂತಿದ್ದಿತು? ಅದನ್ನು ನನಗೆ ಹೇಳು.

೪೬. ಶ್ರೀ ಶೂಲಪಾಣಿಯು ಹೇಳುತ್ತಾನೆ:—ಶೂಲಕ್ಕೇರಿಸಲ್ಪಟ್ಟ ನೀನು ದುಷ್ಟಸಂಹಾರಕನೂ, ದುಃಖನಾಶಕನೂ ಆದ ನನ್ನನ್ನು ಮನಸ್ಸಿನಿಂದ ಧ್ಯಾನ ಮಾಡಿರುವೆ.

೪೭. ನೀನು ಧ್ಯಾನಮಾಡಿದ ಕೂಡಲೆ ಪಾತಾಳದಲ್ಲಿದ್ದರೂ ನಾನೂ ದೇವಿಯೂ ಶೂಲಮೂಲದಲ್ಲಿಯೂ ಅಗ್ರದಲ್ಲಿಯೂ ಸನ್ನಿಹಿತರಾದೆವು. ಜಗನ್ಮಾತೆಯಾದ ದೇವಿಯು ನಿನ್ನನ್ನು ಅಮೃತದಿಂದ ಅಭಿಷೇಕಮಾಡಿದಳು.

ಮಾಂಡವ್ಯ ಉವಾಚ:—

ಪೂರ್ವಮೇವ ಸ್ಥಿತೋ ಯಸ್ಮಾಚ್ಛೂಲಂ ವ್ಯಾಪ್ಯೋಮಯಾ ಸಹ ।
ಪ್ರಸಾದಪ್ರವಣೋ ಮಹ್ಯಮಿದಾನೀಂ ಚಾಽನಯಾ ಸಹ ॥ ೪೮ ॥
ಯಸ್ಯಾಃ ಸಂಸ್ಮರಣಾದೇವ ದೌರ್ಭಾಗ್ಯಂ ಪ್ರಲಯಂ ವ್ರಜೇತ್ ।
ನ ದೌರ್ಭಾಗ್ಯಾತ್ಪರಂ ಲೋಕೇ ದುಃಖಾದ್ದುಃಖತರಂ ಕಿಲ ॥ ೪೯ ॥
ಕಿಲ್ಯೈವಂ ಶ್ರೂಯತೇ ಗಾಥಾ ಪುರಾಣೇಷು ಸುರೋತ್ತಮ ।
ತ್ರೈಲೋಕ್ಯಂ ದಹತಸ್ತುಭ್ಯಂ ಸೌಭಾಗ್ಯಮೇಕತಾಂ ಗತಂ ॥ ೫೦ ॥
ವಿಷ್ಣೋರ್ವಕ್ಷಸ್ಥಲಂ ಪ್ರಾಪ್ಯ ತತ್ಸ್ಥಿತಂ ಚೇತಿ ನಃ ಶ್ರುತಂ ।
ಪೀತಂ ತದ್ವಕ್ಷಸಸ್ತ್ರಸ್ತದಕ್ಷೇಣ ಪರಮೇಷ್ಠಿನಾ ॥ ೫೧ ॥
ತಸ್ಮಾತ್ಸತೀತಿ ಸಂಜಜ್ಞ ಇಯಮಿಂದೀವರೇಕ್ಷಣಾ ।
ಯಜತಸ್ತಸ್ಯ ದೇವೇಶ ತವಮಾನಾವಖಂಡನಾತ್ ॥ ೫೨ ॥
ಜುಹಾವಾಽಗ್ನೌ ತು ಸಾದೇವೀ ಹ್ಯಾತ್ಮಾನಂ ಪ್ರಾಣಸಂಜ್ಞಿಕಂ ।
ಆತ್ಮಾನಂ ಭಸ್ಮಸಾತ್ಕೃತ್ವಾ ಪ್ರಾಲೇಯಾದ್ರೇಸ್ತತಃ ಸುತಾ ॥ ೫೩ ॥
ಮೇನಕಾಯಾಂ ಪ್ರಭೋ ಜಾತಾ ಸಾಂಪ್ರತಂ ಯಾತ್ಯುಮಾಽಭಿಧಾ ।
ಅನಾದಿನಿಧನಾ ದೇವೀ ಹ್ಯಪ್ರತರ್ಕ್ಯಾ ಸುರೇಶ್ವರ ॥ ೫೪ ॥

---

೪೮. ಮಾಂಡವ್ಯನು ಹೇಳುತ್ತಾನೆ:—ನೀನು ನನಗೆ ಅನುಗ್ರಹಮಾಡುವುದಕ್ಕಾಗಿಯೇ ಈ ಪಾರ್ವತಿಯೊಡನೆ ಮೊದಲೇ ಶೂಲವನ್ನು ವ್ಯಾಪಿಸಿ ನೆಲೆಸಿದೆ.

೪೯. ಈ ಪಾರ್ವತಿಯ ಸ್ಮರಣೆಯಿಂದಲೇ ದೌರ್ಭಾಗ್ಯವು ನೀಗುವುದು. ಲೋಕದಲ್ಲಿ ದೌರ್ಭಾಗ್ಯಕ್ಕಿಂತ ಅತಿಶಯ ದುಃಖವಿಲ್ಲ.

೫೦. ಸುರೋತ್ತಮ! ಪುರಾಣಗಳಲ್ಲಿ ಇಂತಹ ಕಥೆಯನ್ನು ಕೇಳಿರುತ್ತೇನೆ. ನೀನು ತ್ರಿಪುರವನ್ನು ದಹಿಸುವಾಗ ಸೌಭಾಗ್ಯವು ಒಂದೆಡೆ ಸೇರಿತು.

೫೧. ಆ ಸೌಭಾಗ್ಯವು ವಿಷ್ಣುವಿನ ಎದೆಯನ್ನು ಹೊಂದಿದ್ದಿತೆಂದು ನಾವು ಕೇಳಿದ್ದೇವೆ. ದಕ್ಷಬ್ರಹ್ಮನು ವಿಷ್ಣುವಿನ ಎದೆಯಿಂದ ಆ ಸೌಭಾಗ್ಯವನ್ನು ಕುಡಿದನು.

೫೨—೫೪. ಈ ಸುಂದರಿಯಾದ ಉಮೆಯು ಆ ದಕ್ಷನಿಂದ ಹುಟ್ಟಿ ಸತಿಯೆಂದು ವಿಖ್ಯಾತಳಾದಳು. ಆ ದಕ್ಷನು ಯಾಗಮಾಡುವಾಗ ನಿನ್ನ ಮಾನವನ್ನು ಖಂಡಿಸಿದಕಾರಣ ಅವಳು ಅಗ್ನಿಯಲ್ಲಿ ದೇಹವನ್ನು ಹೋಮಿಸಿ ಹಿಮಾಲಯನಿಂದ ಮೇನಕೆಯೆಂಬ ಪತ್ನಿಯಲ್ಲಿ ಜನಿಸಿ ಉಮೆಯೆಂಬ ಹೆಸರನ್ನಾಂತಳು. ಶಂಕರ! ಈ ದೇವಿಯು ಆದ್ಯಂತರಹಿತಳೂ, ಊಹಿಸಲಾಗದವಳೂ ಆಗಿರುವಳು.

ಯದಿ ತುಷ್ಟೋಽಸಿ ದೇವೇಶ ಹ್ಯುಮಾ ಮೇ ವರದಾ ಯದಿ ।
ಉಭಾವಪ್ಯತ್ರ ಸ್ವೇ ಸ್ಥಾನೇ ಸ್ಥಿತೌ ಶೂಲಾಗ್ರಮೂಲಯೋಃ ॥ ೫೫ ॥
ಅವತಾರೋ ಯತ್ರ ತತ್ರ ಸಂಸ್ಥಿತಿಂ ಸ್ವೇ ತತಃ ಕುರು ॥ ೫೬ ॥

ಶ್ರೀ ಮಾರ್ಕಂಡೇಯ ಉವಾಚ:—

ತೇನೈವಮುಕ್ತೇ ಸಹಸಾ ಕೃತ್ವಾ ಭೂಮಂಡಲಂ ದ್ವಿಧಾ ।
ನಿಃಸೃತೌ ಶೂಲಮೂಲಾಗ್ರಾಲ್ಲಿಂಗಾರ್ಚಾಪ್ರತಿರೂಪಿಣೌ ॥ ೫೭ ॥
ಪ್ರದ್ಯೋತಯದ್ದಿಶಃ ಸರ್ವಾ ಲಿಂಗಂ ಮೂಲೇ ಪ್ರದೃಶ್ಯತೇ ।
ವಾಮತಃ ಪ್ರತಿಮಾ ದೇವೀ ತದಾ ಶೂಲೇಶ್ವರೀ ಸ್ಥಿತಾ ॥ ೫೮ ॥
ವಿಲೋಭಯಂತೀ ಚ ಜಗದ್ಭಾತಿ ಪೂರಯತೀ ದಿಶಃ ।
ದೃಷ್ಟ್ವಾ ಕೃತಾಂಜಲಿಪುಟಃ ಸ್ತುತಿಂ ಚಕ್ರೇ ದ್ವಿಜೋತ್ತಮಃ ॥ ೫೯ ॥

ಮಾಂಡವ್ಯ ಉವಾಚ:—

ತ್ವಮಸ್ಯ ಜಗತೋ ಮಾತಾ ಜಗತ್ಸೌಭಾಗ್ಯದೇವತಾ ।
ನ ತ್ವಯಾ ರಹಿತಂ ಕಿಂಚಿದ್ಬ್ರಹ್ಮಾಂಡೇಽಸ್ತಿ ವರಾನನೇ ॥ ೬೦ ॥
ಪ್ರಸಾದಂ ಕುರು ಧರ್ಮಜ್ಞೇ ಮಮ ತ್ವಾಜ್ಞಪ್ತುಮರ್ಹಸಿ ।
ಈದೃಶೇನೈವ ರೂಪೇಣ ಕೇಷು ಸ್ಥಾನೇಷು ತಿಷ್ಠಸಿ ।
ಪ್ರಸಾದಪ್ರವಣಾ ಭೂತ್ವಾ ವದ ತಾನಿ ಮಹೇಶ್ವರಿ ॥ ೬೧ ॥

---

೫೫—೫೬. ಶಂಕರ! ನೀನು ಸಂತುಷ್ಟನಾಗಿದ್ದರೆ ಈ ಪಾರ್ವತಿಯು ವರವನ್ನೀಯುವುದಾದರೆ ನೀವಿಬ್ಬರೂ ಈ ಶೂಲದ ಬುಡದಲ್ಲಿಯೂ, ಮೇಲೂ ನೆಲಸಿರಿ. ಅಲ್ಲಿಂದಲೇ ನೀನು ಎಲ್ಲಿಯಾದರೂ ಅವತಾರಮಾಡು.

೫೭. ಶ್ರೀ ಮಾರ್ಕಂಡೇಯನು ಹೇಳುತ್ತಾನೆ:—ಆ ಮಾಂಡವ್ಯನು ಹೀಗೆ ನುಡಿಯಲು ಪಾರ್ವತೀಪರಮೇಶ್ವರರು ಕೂಡಲೆ ಭೂಮಂಡಲವನ್ನು ಎರಡು ವಿಧವಾಗಿ ವಿಭಾಗಿಸಿ ಶೂಲಮೂಲಾಗ್ರಗಳಿಂದ ಲಿಂಗರೂಪದಿಂದಲೂ, ಪ್ರತಿಮಾ ರೂಪದಿಂದಲೂ ಉದ್ಭವಿಸಿದರು.

೫೮—೫೯. ಲಿಂಗಮೂಲದಲ್ಲಿರುವ ಶಿವನು ಸಮಸ್ತ ದಿಕ್ಕುಗಳನ್ನು ಪ್ರಕಾಶಗೊಳಿಸಿದನು. ಎಡಭಾಗದಲ್ಲಿ ಶೂಲೇಶ್ವರಿಯು ಜಗತ್ತಿಗೆ ಆನಂದವನ್ನುಂಟು ಮಾಡುವವಳೂ, ದಿಕ್ಕುಗಳನ್ನು ಕಾಂತಿಯಿಂದ ತುಂಬುವಳೂ ಆಗಿ ಪ್ರಕಾಶಿಸಿದಳು. ಆ ಮಾಂಡವ್ಯನು ಅವಳನ್ನು ನೋಡಿ ಕೈಮುಗಿದುಕೊಂಡು ಸ್ತುತಿಸಿದನು.

೬೦. ಮಾಂಡವ್ಯನು ಹೇಳುತ್ತಾನೆ:—ಶಂಕರಿ! ನೀನು ಈ ಜಗತ್ತಿಗೆ ತಾಯಿಯೂ ಸೌಭಾಗ್ಯ ದೇವತೆಯೂ ಆಗಿರುವೆ. ಈ ಬ್ರಹ್ಮಾಂಡದಲ್ಲಿ ನೀನಿಲ್ಲದಿರುವ ಸ್ಥಳವು ಯಾವುದೂ ಇಲ್ಲ.

೬೧. ಧರ್ಮಜ್ಞಳೆ! ನೀನು ನನ್ನಲ್ಲಿ ಅನುಗ್ರಹಮಾಡಿ ಆಜ್ಞಾಪಿಸು.

ಶ್ರೀ ದೇವ್ಯುವಾಚ :—

ಸರ್ವಗಾ ಸರ್ವಭೂತೇಷು ದ್ರಷ್ಟವ್ಯಾ ಸರ್ವತೋ ಭುವಿ ।
ಸರ್ವಲೋಕೇಷು ಯತ್ಕಿಂಚಿದ್ವಿಹಿತಂ ನ ಮಯಾ ವಿನಾ ॥ ೬೨ ॥
ತಥಾಽಪಿ ಯೇಷು ಸ್ಥಾನೇಷು ದ್ರಷ್ಟವ್ಯಾ ಸಿದ್ಧಿಮಿಪ್ಸುಭಿಃ ।
ಸ್ಮರ್ತವ್ಯಾ ಭೂತಿಕಾಮೇನ ತಾನಿ ವಕ್ಷ್ಯಾಮಿ ತತ್ತ್ವತಃ ॥ ೬೩ ॥
ವಾರಾಣಸ್ಯಾಂ ವಿಶಾಲಾಕ್ಷೀ ನೈಮಿಷೇ ಲಿಂಗಧಾರಿಣೀ ।
ಪ್ರಯಾಗೇ ಲಲಿತಾ ದೇವೀ ಕಾಮುಕಾ ಗಂಧಮಾದನೇ ॥ ೬೪ ॥
ಮಾನಸೇ ಕುಮುದಾ ನಾಮ ವಿಶ್ವಕಾಯಾ ತಥಾಽಪರೇ ।
ಗೋಮಂತೇ ಗೋಮತೀನಾಮ ಮಂದರೇ ಕಾಮಚಾರಿಣೀ ॥ ೬೫ ॥
ಮದೋತ್ಕಟಾ ಚೈತ್ರರಥೇ ಹಯಂತೀ ಹಾಸ್ತಿನೇ ಪುರೇ ।
ಕಾನ್ಯಕುಬ್ಜೇ ಸ್ಥಿತಾ ಗೌರೀ ರಂಭಾ ಹ್ಯಮಲಪರ್ವತೇ ॥ ೬೬ ॥
ಏಕಾಮ್ರಕೇ ಕೀರ್ತಿಮತೀ ವಿಶ್ವಾಂ ವಿಶ್ವೇಶ್ವರೇ ವಿದುಃ ।
ಪುಷ್ಕರೇ ಪುರುಹೂತಾ ಚ ಕೇದಾರೇ ಮಾರ್ಗದಾಯಿನೀ ॥ ೬೭ ॥
ನಂದಾ ಹಿಮವತಃ ಪ್ರಸ್ಥೇ ಗೋಕರ್ಣೇ ಭದ್ರಕರ್ಣಿಕಾ ।
ಸ್ಥಾನೇಶ್ವರೇ ಭವಾನೀ ತು ಬಿಲ್ವಕೇ ಬಿಲ್ವಪತ್ರಿಕಾ ॥ ೬೮ ॥

---

ನೀನು ಈ ರೂಪದಿಂದ ಯಾವ ಯಾವ ಸ್ಥಳಗಳಲ್ಲಿರುವೆ? ಮಹೇಶ್ವರಿ! ಪ್ರಸನ್ನಳಾಗಿ ಅದನ್ನು ನನಗೆ ಹೇಳು.

೬೨. ಶ್ರೀ ದೇವಿಯು ಹೇಳುತ್ತಾಳೆ:—ಮುನಿಯೆ! ನಾನು ಭೂಮಿಯಲ್ಲಿ ಸಕಲ ಪ್ರಾಣಿಗಳಲ್ಲಿಯೂ ಅಂತರ್ಯಾಮಿಯಾಗಿರುವೆನು. ಸಕಲ ಲೋಕಗಳಲ್ಲಿ ನಾನಿಲ್ಲದೆ ಯಾವುದೂ ನೆಲಸಿರುವುದಿಲ್ಲ.

೬೩. ಹಾಗಾದರೂ ಸಿದ್ಧಿಯನ್ನು ಬಯಸುವವರು ನನ್ನನ್ನು ಯಾವ ಸ್ಥಳಗಳಲ್ಲಿ ನೋಡಬೇಕು. ಐಶ್ವರ್ಯವನ್ನು ಇಚ್ಛಿಸುವವನು ಎಲ್ಲಿ ಸ್ಮರಿಸಬೇಕು. ಎಂಬುದನ್ನು ಹೇಳುತ್ತೇನೆ.

೬೪–೯೧. ನಾನು ವಾರಾಣಸಿಯಲ್ಲಿ ವಿಶಾಲಾಕ್ಷಿಯೆಂದೂ, ನೈಮಿಷದಲ್ಲಿ ಲಿಂಗಧಾರಿಣಿಯೆಂದೂ, ಪ್ರಯಾಗದಲ್ಲಿ ಲಲಿತೆಯೆಂದೂ, ಗಂಧಮಾದನದಲ್ಲಿ ಕಾಮುಕಾ ಎಂದೂ, ಗೋಮಂತದಲ್ಲಿ ಗೋಮತೀ ಎಂದೂ, ಮಂದರದಲ್ಲಿ ಕಾಮಚಾರಿಣಿಯೆಂದೂ, ಚೈತ್ರರಥದಲ್ಲಿ ಮದೋತ್ಕಟೆಯೆಂದೂ, ಹಸ್ತಿನಾಪುರದಲ್ಲಿ ಹಯಂತೀ ಎಂದೂ, ಕಾನ್ಯಕುಬ್ಜದಲ್ಲಿ ಗೌರಿಯೆಂದೂ, ಅಮಲಪರ್ವತದಲ್ಲಿ ರಂಭೆಯೆಂದೂ, ಏಕಾಮ್ರಕದಲ್ಲಿ ಕೀರ್ತಿಮತಿಯೆಂದೂ, ವಿಶ್ವೇಶ್ವರದಲ್ಲಿ ವಿಶ್ವಾ ಎಂದೂ, ಪುಷ್ಕರದಲ್ಲಿ ಪುರುಹೂತಾ ಎಂದೂ, ಕೇದಾರದಲ್ಲಿ ಮಾರ್ಗದಾಯಿನಿಯೆಂದೂ, ಹಿಮವಂತನ ತಪ್ಪಲಿನಲ್ಲಿ ನಂದಾ ಎಂದೂ, ಗೋಕರ್ಣದಲ್ಲಿ ಭದ್ರಕರ್ಣಿಕೆಯೆಂದೂ, ಸ್ಥಾನೇಶ್ವರದಲ್ಲಿ ಭವಾನಿಯೆಂದೂ, ಬಿಲ್ವಕದಲ್ಲಿ ಬಿಲ್ವಪತ್ರಿಕೆ

ೀಶೈಲೇ ಮಾಧವೀನಾಮ ಭದ್ರೇ ಭದ್ರೇಶ್ವರೀತಿ ಚ ।
ಯಾ ವರಾಹಶೈಲೇ ತು ಕಮಲಾ ಕಮಲಾಲಯೇ ॥ ೬೯ ॥
ುದ್ರಕೋಟ್ಯಾಂ ತು ಕಲ್ಯಾಣೀ ಕಾಲೀ ಕಾಲಂಜರೇ ತಥಾ ।
ುಹಾಲಿಂಗೇ ತು ಕಪಿಲಾ ಮಾಕೋಟೇ ಮುಕುಟೇಶ್ವರೀ ॥ ೭೦ ॥
ಾಲಿಗ್ರಾಮೇ ಮಹಾದೇವೀ ಶಿವಲಿಂಗೇ ಜಲಪ್ರಿಯಾ ।
ಾಯಾಪುರ್ಯಾಂ ಕುಮಾರೀ ತು ಸಂತಾನೇ ಲಲಿತಾ ತಥಾ ॥ ೭೧ ॥
ುತ್ಪಲಾಕ್ಷೀ ಸಹಸ್ರಾಕ್ಷೇ ಹಿರಣ್ಯಾಕ್ಷೇ ಮಹೋತ್ಪಲಾ ।
ಯಾಯಾಂ ವಿಮಲಾನಾಮ ಮಂಗಲಾ ಪುರುಷೋತ್ತಮೇ ॥ ೭೨ ॥
ಪಾಶಾಯಾಮಮೋಘಾಕ್ಷೀ ಪಾಟಲಾ ಪುಂಡ್ರವರ್ಧನೇ ।
ಾರಾಯಣೀ ಸುಪಾರ್ಶ್ವೇ ತು ತ್ರಿಕೂಟೇ ಭದ್ರಸುಂದರೀ ॥ ೭೩ ॥
ಪುಲೇ ವಿಪುಲಾನಾಮ ಕಲ್ಯಾಣೀ ಮಲಯಾಚಲೇ ।
ಕೋಟವೀ ಕೋಟಿತೀರ್ಥೇಷು ಸುಗಂಧಾ ಗಂಧಮಾದನೇ ॥ ೭೪ ॥
ಗೋದಾಶ್ರಮೇ ತ್ರಿಸಂಧ್ಯಾ ತು ಗಂಗಾದ್ವಾರೇ ರತಿಪ್ರಿಯಾ ।
ಶಿವಚಂಡೇ ಸಭಾನಂದಾ ನಂದಿನೀ ದೇವಿಕಾತಟೇ ॥ ೭೫ ॥
ರುಕ್ಮಿಣೀ ದ್ವಾರವತ್ಯಾಂ ತು ರಾಧಾ ವೃಂದಾವನೇ ವನೇ ।
ದೇವಕೀ ಮಥುರಾಯಾಂ ತು ಪಾತಾಲೇ ಪರಮೇಶ್ವರೀ ॥ ೭೬ ॥

---

ಯೆಂದೂ, ಶ್ರೀ ಶೈಲದಲ್ಲಿ ಮಾಧವಿಯೆಂದೂ, ಭದ್ರದಲ್ಲಿ ಭದ್ರೇಶ್ವರಿಯೆಂದೂ, ವರಾಹಶೈಲದಲ್ಲಿ ಜಯೆಯೆಂದೂ, ಕಮಲಾಲಯದಲ್ಲಿ ಕಮಲಾ ಎಂದೂ, ರುದ್ರಕೋಟಿಯಲ್ಲಿ ಕಲ್ಯಾಣಿಯೆಂದೂ, ಕಾಲಂಜರದಲ್ಲಿ ಕಾಲೀ ಎಂದೂ, ಮಹಾಲಿಂಗದಲ್ಲಿ ಕಪಿಲಾ ಎಂದೂ, ಮಾಕೋಟದಲ್ಲಿ ಮುಕುಟೇಶ್ವರಿಯೆಂದೂ, ಶಾಲಿಗ್ರಾಮದಲ್ಲಿ ಮಹಾದೇವಿಯೆಂದೂ, ಶಿವಲಿಂಗದಲ್ಲಿ ಜಲಪ್ರಿಯೆಯೆಂದೂ, ಮಾಯಾಪುರಿಯಲ್ಲಿ ಕುಮಾರಿಯೆಂದೂ, ಸಂತಾನದಲ್ಲಿ ಲಲಿತಾ ಎಂದೂ, ಸಹಸ್ರಾಕ್ಷದಲ್ಲಿ ಉತ್ಪಲಾಕ್ಷಿಯೆಂದೂ, ಹಿರಣ್ಯಾಕ್ಷದಲ್ಲಿ ಮಹೋತ್ಪಲಾ ಎಂದೂ, ಗಯೆಯಲ್ಲಿ ವಿಮಲೆಯೆಂದೂ, ಪುರುಷೋತ್ತಮದಲ್ಲಿ ಮಂಗಲಾ ಎಂದೂ, ವಿಪಾಶೆಯಲ್ಲಿ ಅಮೋಘಾಕ್ಷಿಯೆಂದೂ, ಪುಂಡ್ರವರ್ಧನದಲ್ಲಿ ಪಾಟಲಾ ಎಂದೂ, ಸುಪಾರ್ಶ್ವದಲ್ಲಿ ನಾರಾಯಣಿಯೆಂದೂ, ತ್ರಿಕೂಟದಲ್ಲಿ ಭದ್ರಸುಂದರಿ ಯೆಂದೂ, ವಿಪುಲದಲ್ಲಿ ವಿಪುಲೆಯೆಂದೂ, ಮಲಯಾಚಲದಲ್ಲಿ ಕಲ್ಯಾಣಿಯೆಂದೂ, ಕೋಟಿತೀರ್ಥಗಳಲ್ಲಿ ಕೋಟವಿಯೆಂದೂ, ಗಂಧಮಾದನದಲ್ಲಿ ಸುಗಂಧೆಯೆಂದೂ, ಗೋದಾಶ್ರಮದಲ್ಲಿ ತ್ರಿಸಂಧ್ಯೆಯೆಂದೂ, ಗಂಗಾದ್ವಾರದಲ್ಲಿ ರತಿಪ್ರಿಯೆಯೆಂದೂ, ಶಿವಚಂಡದಲ್ಲಿ ಸಭಾನಂದೆಯೆಂದೂ, ದೇವಿಕಾತಟದಲ್ಲಿ ನಂದಿನಿಯೆಂದೂ, ದ್ವಾರವತಿಯಲ್ಲಿ ರುಕ್ಮಿಣಿಯೆಂದೂ, ವೃಂದಾವನದಲ್ಲಿ ರಾಧೆಯೆಂದೂ, ಮಥುರೆ

ಚಿತ್ರಕೂಟೇ ತಥಾ ಸೀತಾ ವಿಂಧ್ಯೇ ವಿಂಧ್ಯನಿವಾಸಿನೀ ।
ಸಹ್ಯಾದ್ರಾವೇಕವೀರಾ ತು ಹರಿಶ್ಚಂದ್ರೇ ತು ಚಂಡಿಕಾ ॥ ೭೭ ॥
ರಮಣಾ ರಾಮತೀರ್ಥೇ ತು ಯಮುನಾಯಾಂ ಮೃಗಾವತೀ ।
ಕರವೀರೇ ಮಹಾಲಕ್ಷ್ಮೀ ರೂಪಾದೇವೀ ವಿನಾಯಕೇ ॥ ೭೮ ॥
ಆರೋಗ್ಯಾ ವೈದ್ಯನಾಥೇ ತು ಮಹಾಕಾಲೇ ಮಹೇಶ್ವರೀ ।
ಅಭಯೇತ್ಯುಷ್ಣತೀರ್ಥೇ ತು ಮೃಗೀ ವಾ ವಿಂಧ್ಯಕಂದರೇ ॥ ೭೯ ॥
ಮಾಂಡವ್ಯೇ ಮಾಂಡುಕೀನಾಮ ಸ್ವಾಹಾ ಮಾಹೇಶ್ವರೇ ಪುರೇ ।
ಛಾಗಲಿಂಗೇ ಪ್ರಚಂಡಾ ತು ಚಂಡಿಕಾಽಮರಕಂಟಕೇ ॥ ೮೦ ॥
ಸೋಮೇಶ್ವರೇ ವರಾರೋಹಾ ಪ್ರಭಾಸೇ ಪುಷ್ಕರಾವತೀ ।
ವೇದಮಾತಾ ಸರಸ್ವತ್ಯಾಂ ಪಾರಾ ಪಾರಾತಟೇ ಮುನೇ ॥ ೮೧ ॥
ಮಹಾಲಯೇ ಮಹಾಭಾಗಾ ಪಯೋಷ್ಣ್ಯಾಂ ಪಿಂಗಲೇಶ್ವರೀ ।
ಸಿಂಹಿಕಾ ಕೃತಶೌಚೇ ತು ಕಾರ್ತಿಕೇ ಚೈವ ಶಾಂಕರೀ ॥ ೮೨ ॥
ಉತ್ಪಲಾವರ್ತಕೇ ಲೋಲಾ ಸುಭದ್ರಾ ಶೋಣಸಂಗಮೇ ।
ಮತಾ ಸಿದ್ಧವಟೇ ಲಕ್ಷ್ಮೀಸ್ತರಂಗಾ ಭಾರತಾಶ್ರಮೇ ॥ ೮೩ ॥
ಜಾಲಂಧರೇ ವಿಶ್ವಮುಖೀ ತಾರಾ ಕಿಷ್ಕಿಂಧಪರ್ವತೇ ।
ದೇವದಾರುವನೇ ಪುಷ್ಟಿರ್ಮೇಧಾ ಕಾಶ್ಮೀರಮಂಡಲೇ ॥ ೮೪ ॥

---

ಯಲ್ಲಿ ದೇವಕಿಯೆಂದೂ, ಪಾತಾಲದಲ್ಲಿ ಪರಮೇಶ್ವರಿಯೆಂದೂ, ಚಿತ್ರಕೂಟದಲ್ಲಿ ಸೀತೆಯೆಂದೂ, ವಿಂಧ್ಯದಲ್ಲಿ ವಿಂಧ್ಯವಾಸಿನಿಯೆಂದೂ, ಸಹ್ಯಾದ್ರಿಯಲ್ಲಿ ಏಕವೀರಾ ಎಂದೂ, ಹರಿಶ್ಚಂದ್ರನಲ್ಲಿ ಚಂಡಿಕೆಯೆಂದೂ, ರಾಮತೀರ್ಥದಲ್ಲಿ ರಮಣಾ ಎಂದೂ, ಯಮುನೆಯಲ್ಲಿ ಮೃಗಾವತಿಯೆಂದೂ, ಕರವೀರದಲ್ಲಿ ಮಹಾಲಕ್ಷ್ಮಿಯೆಂದೂ, ವಿನಾಯಕದಲ್ಲಿ ರೂಪಾದೇವಿಯೆಂದೂ, ವೈದ್ಯನಾಥದಲ್ಲಿ ಆರೋಗ್ಯಾ ಎಂದೂ, ಮಹಾಕಾಲದಲ್ಲಿ ಮಹೇಶ್ವರಿಯೆಂದೂ, ಉಷ್ಣತೀರ್ಥದಲ್ಲಿ ಅಭಯಾ ಎಂದೂ, ವಿಂಧ್ಯಕಂದರದಲ್ಲಿ ಮೃಗೀ ಎಂದೂ, ಮಾಂಡವ್ಯದಲ್ಲಿ ಮಾಂಡುಕಿಯೆಂದೂ, ಮಾಹೇಶ್ವರಪುರದಲ್ಲಿ ಸ್ವಾಹಾ ಎಂದೂ, ಛಾಗಲಿಂಗದಲ್ಲಿ ಪ್ರಚಂಡಾ ಎಂದೂ, ಸೋಮೇಶ್ವರದಲ್ಲಿ ವರಾರೋಹಾ ಎಂದೂ, ಪ್ರಭಾಸದಲ್ಲಿ ಪುಷ್ಕರಾವತಿಯೆಂದೂ, ಸರಸ್ವತಿಯಲ್ಲಿ ವೇದಮಾತೆಯೆಂದೂ, ಪಾರಾತಟದಲ್ಲಿ ಪಾರಾ ಎಂದೂ, ಮಹಾಲಯದಲ್ಲಿ ಮಹಾಭಾಗಾ ಎಂದೂ, ಪಯೋಷ್ಣಿಯಲ್ಲಿ ಪಿಂಗಲೇಶ್ವರಿ ಎಂದೂ, ಕೃತಶೌಚದಲ್ಲಿ ಸಿಂಹಿಕಾ ಎಂದೂ, ಕಾರ್ತಿಕದಲ್ಲಿ ಶಾಂಕರಿಯೆಂದೂ, ಉತ್ಪಲಾವರ್ತಕದಲ್ಲಿ ಲೋಲಾ ಎಂದೂ, ಶೋಣಸಂಗಮದಲ್ಲಿ ಸುಭದ್ರೆಯೆಂದೂ, ಸಿದ್ಧವಟದಲ್ಲಿ ಲಕ್ಷ್ಮಿಯೆಂದೂ, ಭಾರತಾಶ್ರಮದಲ್ಲಿ ತರಂಗಾ ಎಂದೂ, ಜಾಲಂಧರದಲ್ಲಿ ವಿಶ್ವಮುಖಿಯೆಂದೂ, ಕಿಷ್ಕಿಂಧಪರ್ವತದಲ್ಲಿ

ಭೀಮಾದೇವೀ ಹಿಮಾದ್ರೌ ತು ಪುಷ್ಟಿರ್ವಸ್ತ್ರೇಶ್ವರೇ ತಥಾ ।
ಕಪಾಲಮೋಚನೇ ಶುದ್ಧಿರ್ಮಾತಾ ಕಾಯಾವರೋಹಣೇ ॥ ೮೫ ॥
ಶಂಖೋದ್ಧಾರೇ ಧ್ವನಿರ್ನಾಮ ಧೃತಿಃ ಪಿಂಡಾರಕೇ ತಥಾ ।
ಕಾಲಾ ತು ಚಂದ್ರಭಾಗಾಯಾಮಚ್ಛೋದೇ ಶಕ್ತಿಧಾರಿಣೀ ॥ ೮೬ ॥
ವೇಣಾಯಾಮಮೃತಾನಾಮ ಬದರ್ಯಾಮುರ್ವಶೀ ತಥಾ ।
ಓಷಧೀ ಚೋತ್ತರಕುರೌ ಕುಶದ್ವೀಪೇ ಕುಶೋದಕಾ ॥ ೮೭ ॥
ಮನ್ಮಥಾ ಹೇಮಕೂಟೇ ತು ಕುಮುದೇ ಸತ್ಯವಾದಿನೀ ।
ಅಶ್ವತ್ಥೇ ವಂದಿನೀಕಾ ತು ನಿಧಿರ್ವೈಶ್ರವಣಾಲಯೇ ॥ ೮೮ ॥
ಗಾಯತ್ರೀ ವೇದವದನೇ ಪಾರ್ವತೀ ಶಿವಸನ್ನಿಧೌ ।
ದೇವಲೋಕೇ ತಥೇಂದ್ರಾಣೀ ಬ್ರಹ್ಮಾಸ್ಯೇ ತು ಸರಸ್ವತೀ ॥ ೮೯ ॥
ಸೂರ್ಯಬಿಂಬೇ ಪ್ರಭಾನಾಮ ಮಾತೄಣಾಂ ವೈಷ್ಣವೀ ಮತಾ ।
ಅರುಂಧತೀ ಸತೀನಾಂ ತು ರಾಮಾಸು ಚ ತಿಲೋತ್ತಮಾ ॥ ೯೦ ॥
ಚಿತ್ರೇ ಬ್ರಹ್ಮಕಲಾನಾಮ ಶಕ್ತಿಃ ಸರ್ವಶರೀರಿಣಾಂ ।
ಶೂಲೇಶ್ವರೀ ಭೃಗುಕ್ಷೇತ್ರೇ ಭೃಗೌ ಸೌಭಾಗ್ಯಸುಂದರೀ ॥ ೯೧ ॥

---

ತಾರಾ ಎಂದೂ, ದೇವದಾರುವನದಲ್ಲಿ ಪುಷ್ಟಿಯೆಂದೂ, ಕಾಶ್ಮೀರಮಂಡಲದಲ್ಲಿ ಮೇಧಾ ಎಂದೂ, ಹಿಮಾದ್ರಿಯಲ್ಲಿ ಭೀಮಾದೇವಿಯೆಂದೂ, ವಸ್ತ್ರೇಶ್ವರದಲ್ಲಿ ಪುಷ್ಟಿಯೆಂದೂ, ಕಪಾಲಮೋಚನದಲ್ಲಿ ಶುದ್ಧಿಯೆಂದೂ, ಕಾಯಾವರೋಹಣದಲ್ಲಿ ಮಾತೆಯೆಂದೂ, ಶಂಖೋದ್ಧಾರದಲ್ಲಿ ಧ್ವನಿಯೆಂದೂ, ಪಿಂಡಾರಕದಲ್ಲಿ ಧೃತಿಯೆಂದೂ, ಚಂದ್ರಭಾಗಾದಲ್ಲಿ ಕಾಲಾ ಎಂದೂ, ಅಚ್ಛೋದದಲ್ಲಿ ಶಕ್ತಿಧಾರಿಣಿಯೆಂದೂ, ವೇಣೆಯಲ್ಲಿ ಅಮೃತೆಯೆಂದೂ, ಬದರೀಕ್ಷೇತ್ರದಲ್ಲಿ ಊರ್ವಶಿಯೆಂದೂ, ಉತ್ತರಕುರುಕ್ಷೇತ್ರದಲ್ಲಿ ಓಷಧಿಯೆಂದೂ, ಕುಶದ್ವೀಪದಲ್ಲಿ ಕುಶೋದಕಾ ಎಂದೂ, ಹೇಮಕೂಟದಲ್ಲಿ ಮನ್ಮಥಾ ಎಂದೂ, ಕುಮುದದಲ್ಲಿ ಸತ್ಯವಾದಿನಿಯೆಂದೂ, ಅಶ್ವತ್ಥದಲ್ಲಿ ವಂದನೀಕಾ ಎಂದೂ, ಕುಬೇರಾಲಯದಲ್ಲಿ ನಿಧಿಯೆಂದೂ, ವೇದವದನದಲ್ಲಿ ಗಾಯತ್ರಿಯೆಂದೂ, ಶಿವನ ಬಳಿ ಪಾರ್ವತಿಯೆಂದೂ, ದೇವಲೋಕದಲ್ಲಿ ಇಂದ್ರಾಣಿಯೆಂದೂ, ಬ್ರಹ್ಮಾಸ್ಯದಲ್ಲಿ ಸರಸ್ವತಿಯೆಂದೂ, ಸೂರ್ಯಬಿಂಬದಲ್ಲಿ ಪ್ರಭೆಯೆಂದೂ, ಮಾತೃಗಳಲ್ಲಿ ವೈಷ್ಣವೀ ಎಂದೂ, ಸತಿಯರಲ್ಲಿ ಅರುಂಧತಿಯೆಂದೂ, ಸ್ತ್ರೀಯರಲ್ಲಿ ತಿಲೋತ್ತಮೆಯೆಂದೂ, ಚಿತ್ರದಲ್ಲಿ ಬ್ರಹ್ಮಕಲೆಯೆಂದೂ, ಸಕಲ ಪ್ರಾಣಿಗಳಲ್ಲಿ ಶಕ್ತಿಯೆಂದೂ, ಭೃಗುಕ್ಷೇತ್ರದಲ್ಲಿ ಶೂಲೇಶ್ವರಿಯೆಂದೂ, ಭೃಗುಸ್ಥಾನದಲ್ಲಿ ಸೌಭಾಗ್ಯಸುಂದರಿಯೆಂದೂ ಹೆಸರನ್ನಾಂತು ನೆಲೆಸಿರುವೆನು.

ಏತದುದ್ದೇಶತಃ ಪ್ರೋಕ್ತಂ ನಾಮ್ನಾಮಷ್ಟಶತಮುತ್ತಮಂ ।
ಅಷ್ಟೋತ್ತರಂ ಚ ತೀರ್ಥಾನಾಂ ಶತಮೇತದುದಾಹೃತಂ ॥ ೯೨ ॥
ಇದಮೇವ ಪರಂ ವಿಪ್ರ ಸರ್ವೇಷಾಂ ತು ಭವಿಷ್ಯತಿ ।
ಪಠತ್ಯಷ್ಟೋತ್ತರಶತಂ ನಾಮ್ನಾಂ ಯಃ ಶಿವಸನ್ನಿಧೌ ॥ ೯೩ ॥
ಸ ಮುಚ್ಯತೇ ನರಃ ಪಾಪೈಃ ಪ್ರಾಪ್ನೋತಿ ಸ್ತ್ರಿಯಮೀಪ್ಸಿತಾಂ ।
ಸ್ನಾತ್ವಾ ನಾರೀ ತೃತೀಯಾಯಾಂ ಮಾಂ ಸಮಭ್ಯರ್ಚ್ಯ ಭಕ್ತಿತಃ ॥ ೯೪ ॥
ನ ಸಾ ಸ್ಯಾದ್ದುಃಖಿನೀ ಜಾತು ಮತ್ಪ್ರಭಾವಾನ್ನರೋತ್ತಮ ।
ನಿತ್ಯಂ ಮದ್ದರ್ಶನೇ ನಾರೀ ನಿಯತಾ ಯಾ ಭವಿಷ್ಯತಿ ॥ ೯೫ ॥
ಪತಿಪುತ್ರಕೃತಂ ದುಃಖಂ ನ ಸಾ ಪ್ರಾಪ್ಸ್ಯತಿ ಕರ್ಹಿಚಿತ್ ।
ಮದಾಲಯೇ ತು ಯಾ ನಾರೀ ತುಲಾಪುರುಷಸಂಜ್ಞಿತಂ ॥ ೯೬ ॥
ಸಂಪೂಜ್ಯ ಮಂಡಯೇದ್ದೇವಾನ್ ಲೋಕಪಾಲಾಂಶ್ಚ ಸಾಗ್ನಿಕಾನ್ ।
ಸಪತ್ನೀಕಾನ್ದ್ವಿಜಾನ್ಪೂಜ್ಯ ವಾಸೋಭಿರ್ಭೂಷಣೈಸ್ತಥಾ ॥ ೯೭ ॥
ಭೂತೇಭ್ಯಸ್ತು ಬಲಿಂ ದದ್ಯಾದೃತ್ವಿಗ್ಭಿಃ ಸಹ ದೇಶಿಕಃ ।
ತತಃ ಪ್ರದಕ್ಷಿಣೀಕೃತ್ಯ ತುಲಾಮಿತ್ಯಭಿಮಂತ್ರಯೇತ್ ॥ ೯೮ ॥
ಶುಚಿ ರಕ್ತಾಂಬರೋ ವಾ ಸ್ಯಾದ್ಗೃಹೀತ್ವಾ ಕುಸುಮಾಂಜಲಿಂ ।
ನಮಸ್ತೇ ಸರ್ವದೇವಾನಾಂ ಶಕ್ತಿಸ್ತ್ವಂ ಪರಮಾ ಸ್ಥಿತಾ ॥ ೯೯ ॥
ಸಾಕ್ಷಿಭೂತಾ ಜಗದ್ಧಾತ್ರೀ ನಿರ್ಮಿತಾ ವಿಶ್ವಯೋನಿನಾ ।
ತ್ವಂ ತುಲೇ ಸರ್ವಭೂತಾನಾಂ ಪ್ರಮಾಣಮಿಹ ಕೀರ್ತಿತಾ ॥ ೧೦೦ ॥

---

೯೨. ಹೀಗೆ ಸಂಕ್ಷೇಪವಾಗಿ ನೂರೆಂಟು ಉತ್ತಮವಾದ ನಾಮಗಳನ್ನು ಹೇಳಿರುವೆನು. ಇವು ನೂರೆಂಟು ತೀರ್ಥಗಳೆನಿಸಿಕೊಳ್ಳುವುವು.

೯೩–೧೦೪. ಇದೇ ಎಲ್ಲವುಗಳಲ್ಲಿ ಉತ್ತಮವಾಗುವುದು. ಈ ನೂರೆಂಟು ನಾಮಗಳನ್ನು ಶಿವನ ಸಮೀಪದಲ್ಲಿ ಪಠಿಸಿದವನು ಪಾಪಮುಕ್ತನಾಗಿ ಇಷ್ಟಳಾದ ಸ್ತ್ರೀಯನ್ನು ಹೊಂದುವನು. ತದಿಗೆಯ ದಿನ ಮಿಂದು ಭಕ್ತಿಯಿಂದ ನನ್ನನ್ನು ಪೂಜಿಸಿದ ನಾರಿಯು ನನ್ನ ಪ್ರಭಾವದಿಂದ ಯಾವಾಗಲೂ ದುಃಖಗೊಳ್ಳುವುದಿಲ್ಲ. ಪ್ರತಿ ದಿನವೂ ನನ್ನನ್ನು ನೋಡುವ ಹೆಂಗಸು ಯಾವಾಗಲೂ ಪತಿಪುತ್ರರಿಂದುಂಟಾದ ದುಃಖವನ್ನು ಹೊಂದುವುದಿಲ್ಲ. ನನ್ನ ಆಲಯದಲ್ಲಿ ತುಲಾಪುರುಷನನ್ನು ಪೂಜಿಸಿ ದೇವತೆಗಳನ್ನೂ, ಲೋಕಪಾಲಕರನ್ನೂ ಅಲಂಕರಿಸಿ ಅಗ್ನಿಹೋತ್ರಿಗಳೂ, ಸಪತ್ನೀಕರೂ ಆದ ಬ್ರಾಹ್ಮಣರನ್ನು ವಸ್ತ್ರಭೂಷಣಗಳಿಂದ ಪೂಜಿಸಿ ಪುರೋಹಿತರೊಡನೆ ಭೂತಗಳಿಗೆ ಬಲಿಯನ್ನಿತ್ತು ಪ್ರದಕ್ಷಿಣೆಗೈದು ಬಿಳಿಯ ಅಥವಾ ಕೆಂಪು ಬಟ್ಟೆಯನ್ನುಟ್ಟು ಹೂವುಗಳನ್ನು ಹಿಡಿದುಕೊಂಡು ತುಲೆ

ಕರಾಭ್ಯಾಂ ಬದ್ಧಮುಷ್ಟಿಭ್ಯಾಮಾಸ್ತೇ ಪಶ್ಯನ್ನುಮಾಮುಖಂ ।
ತತೋಽಪರೇ ತುಲಾಭಾಗೇ ನ್ಯಸೇಯುರ್ದ್ವಿಜಪುಂಗವಾಃ ॥ ೧೦೧ ॥
ದ್ರವ್ಯಮಷ್ಟವಿಧಂ ತತ್ರ ಹ್ಯಾತ್ಮ ವಿತ್ತಾನುಸಾರತಃ ।
ಮದಂಶಭೂತಂ ವಿಪ್ರೇಂದ್ರ ಪೃಥಿವ್ಯಾಂ ಯದಧಿಷ್ಠಿತಂ ॥ ೧೦೨ ॥
ಸುವರ್ಣಂ ಚೈವ ನಿಷ್ಪಾವಾಂಸ್ತಥಾ ರಾಜಿಕುಸುಂಭಕಂ ।
ತೃಣರಾಜೇಂದುಲವಣಂ ಕುಂಕುಮಂ ಚ ತಥಾಷ್ಟಮಂ ॥ ೧೦೩ ॥
ಏಷಾಮೇಕೈತಮಂ ಕುರ್ಯಾದ್ಯಥಾವಿತ್ತಾನುಸಾರತಃ ।
ಸಾಮ್ಯಾದಭ್ಯಧಿಕಂ ಯಾವತ್ಕಾಂಚನಾದಿ ಭವೇದ್ದ್ವಿಜ ॥ ೧೦೪ ॥
ತಾವತ್ತಿಷ್ಠೇನ್ನರೋ ನಾರೀ ಪಶ್ಚಾದಿದಮುದೀರಯೇತ್ ।
ನಮೋ ನಮಸ್ತೇ ಲಲಿತೇ ತುಲಾಪುರುಷಸಂಜ್ಞಿತೇ ॥ ೧೦೫ ॥
ತ್ವಮುಮೇ ತಾರಯಸ್ವಾಸ್ಮಾನಸ್ಮಾತ್ಸಂಸಾರಕರ್ದಮಾತ್ ।
ತತೋಽವತೀರ್ಯ ಗುರವೇ ಪೂರ್ವಮರ್ಧಂ ನಿವೇದಯೇತ್ ॥ ೧೦೬ ॥
ಋತ್ವಿಗ್ಭ್ಯೋಽಪರಮರ್ಧಂ ಚ ದದ್ಯಾದುದಕಪೂರ್ವಕಂ ।
ತೇಭ್ಯೋ ಲಬ್ಧ್ವಾ ತತೋಽನುಜ್ಞಾಂ ದದ್ಯಾದನ್ಯೇಷು ಚಾರ್ಥಿಷು ॥ ೧೦೭ ॥

---

ಯನ್ನು 'ತುಲೆಯೆ! ನಿನಗೆ ನಮಸ್ಕಾರವು. ನೀನು ಸಕಲ ದೇವತೆಗಳ ಉತ್ತಮ ಶಕ್ತಿರೂಪಳಾಗಿರುವೆ. ಸಾಕ್ಷಿಭೂತಳೂ, ಜಗದ್ಧಾರಕಳೂ, ಸಕಲ ಭೂತಗಳಿಗೆ ಪ್ರಮಾಣಳೂ ಆದ ನಿನ್ನನ್ನು ಬ್ರಹ್ಮನು ಸೃಜಿಸಿದನು' ಎಂಬ ಮಂತ್ರದಿಂದ ಅರ್ಚಿಸಿ ಕೈ ಜೋಡಿಸಿಕೊಂಡು ಉಮಾಮುಖವನ್ನು ನೋಡುತ್ತ ನಿಲ್ಲಬೇಕು. ಅನಂತರ ಆ ತುಲೆಯ ಮತ್ತೊಂದು ಭಾಗದಲ್ಲಿ ಬ್ರಾಹ್ಮಣರು ತಮ್ಮ ವಿತ್ತವನ್ನನುಸರಿಸಿ ಭೂಮಿಯಲ್ಲಿರುವ ನನ್ನ ಅಂಶಭೂತವಾದ ಅಷ್ಟವಿಧದ್ರವ್ಯವನ್ನೂ, ಸುವರ್ಣ, ನಿಷ್ಪಾವ, ರಾಜಿಕುಸುಂಭಕ, ತೃಣರಾಜ, ಇಂದುಲವಣ, ಕುಂಕುಮ ಇವುಗಳನ್ನೂ, ಅಥವಾ ವಿತ್ತವನ್ನನುಸರಿಸಿ ಇವುಗಳಲ್ಲಿ ಒಂದನ್ನೂ ಇಡಬೇಕು. ಇವುಗಳಲ್ಲಿ ಕಾಂಚನಾದಿಗಳು ಅಧಿಕವಾದುವು.

೧೦೫–೧೦೭. ಅಷ್ಟರವರೆಗೆ ನಾರಿಯಾಗಲಿ, ಪುರುಷನಾಗಲಿ ಇದನ್ನು ಉಚ್ಚರಿಸಬೇಕು. "ತುಲಾಪುರುಷ ನಾಮಕಳಾದ ಲಲಿತೆಯೆ! ನಿನಗೆ ನಮಸ್ಕಾರವು. ಉಮಾರೂಪಳಾದ ನೀನು ನನ್ನನ್ನು ಈ ಸಂಸಾರವೆಂಬ ಕೆಸರಿನಿಂದ ದಾಟಿಸು". ಇದನ್ನು ಹೇಳಿದ ತರುವಾಯ ಅದರಿಂದಿಳಿದು ಗುರುವಿಗೆ ಆ ದ್ರವ್ಯಗಳಲ್ಲಿ ಮೊದಲಿನ ಅರ್ಧಭಾಗವನ್ನೂ, ಪುರೋಹಿತರಿಗೆ ಉಳಿದ ಅರ್ಧಭಾಗವನ್ನೂ ಉದಕಪೂರ್ವಕವಾಗಿ ಕೊಟ್ಟು ಅವರಿಂದ ಅನುಜ್ಞೆಯನ್ನು ತೆಗೆದುಕೊಂಡು ಇತರ ಅರ್ಥಿಗಳಿಗೆ ದಾನಮಾಡಬೇಕು.

ಸಪತ್ನೀಕಂ ಗುರುಂ ರಕ್ತವಾಸಸೀ ಪರಿಧಾಪಯೇತ್ ।
ಅನ್ಯಾಂಶ್ಚ ಋತ್ವಿಜಃ ಶಕ್ತ್ಯಾ ಗುರುಂ ಕೇಯೂರಕಂಕಣೈಃ ॥ ೧೦೮ ॥
ಶುಕ್ಲಾಂ ಗಾಂ ಕ್ಷೀರಿಣೀಂ ದದ್ಯಾಲ್ಲಲಿತಾ ಪ್ರಿಯತಾಮಿತಿ ।
ಅನೇನ ವಿಧಿನಾ ಯಾ ತು ಕುರ್ಯಾನ್ನಾರೀ ಮಮಾಲಯೇ ॥ ೧೦೯ ॥
ಮತ್ತುಲ್ಯಾ ಸಾ ಭವೇದ್ರಾಜ್ಞಾಂ ತೇಜಸಾ ಶ್ರೀರಿವಾಽಮಲಾ ।
ಸಾವಿತ್ರೀವ ಚ ಸೌಂದರ್ಯೇ ಜನ್ಮಾನಿ ದಶಪಂಚ ಚ ॥ ೧೧೦ ॥

ಶ್ರೀ ಮಾರ್ಕಂಡೇಯ ಉವಾಚ:—

ಏವಂ ನಿಶಮ್ಯ ವಚನಂ ಗೌರ್ಯಾ ದ್ವಿಜವರೋತ್ತಮಃ ।
ನಮಸ್ಕೃತ್ಯ ಜಗಾಮಾಶು ಧರ್ಮರಾಜನಿವೇಶನಂ ॥ ೧೧೧ ॥
ತದಾ ಪ್ರಭೃತಿ ತತ್ತೀರ್ಥಂ ಖ್ಯಾತಂ ಶೂಲೇಶ್ವರೇತಿ ಚ ।
ತಸ್ಮಿಂಸ್ತೀರ್ಥೇ ತು ಯಃ ಸ್ನಾತ್ವಾ ತರ್ಪಯೇತ್ಪಿತೃದೇವತಾಃ ॥ ೧೧೨ ॥
ಬ್ರಾಹ್ಮಣಾನನ್ನವಾಸೋಭಿಃ ಪಿಂಡೈಃ ಪಿತೃಪಿತಾಮಹಾನ್ ।
ಭಕ್ಷ್ಯೋಪಹಾರೈರ್ದೇವೇಶಮುಮಯಾ ಸಹ ಶಂಕರಂ ॥ ೧೧೩ ॥
ಧೂಪಗುಗ್ಗುಲದಾನೈಶ್ಚ ದೀಪದಾನೈಃ ಸುಭೋಧಿತೈಃ ।
ಸರ್ವಪಾಪವಿನಿರ್ಮುಕ್ತಃ ಸ ಗಚ್ಛೇಚ್ಛಿವಸನ್ನಿಧಿಂ ॥ ೧೧೪ ॥

---

೧೦೮–೧೧೦. ಪತ್ನೀಸಹಿತನಾದ ಗುರುವಿಗೆ ರಕ್ತವಸ್ತ್ರವನ್ನು ಹೊದ್ದಿಸಿ ಕೇಯೂರಕಂಕಣಗಳಿಂದ ಅಲಂಕರಿಸಬೇಕು. ಇತರ ಋತ್ವಿಜರಿಗೂ ಹೀಗೆಯೇ ಶಕ್ತ್ಯನುಸಾರ ದಾನಮಾಡಿ ಲಲಿತೆಯು ಸಂತೋಷಗೊಳ್ಳಲಿ ಎಂದು ಹಾಲನ್ನು ಕರೆಯುವ ಹಸುವನ್ನು ದಾನಮಾಡಬೇಕು. ನನ್ನ ಆಲಯದಲ್ಲಿ ಈ ವಿಧಿಯನ್ನಾಚರಿಸುವವಳು ಹದಿನೈದು ಜನ್ಮಗಳಲ್ಲಿ ರಾಜತೇಜಸ್ಸಿನಿಂದ ಕೂಡಿ ನನಗೆ ಸಮಾನಳೂ, ಲಕ್ಷ್ಮಿಯಂತೆ ಪರಿಶುದ್ಧಳೂ, ಸೌಂದರ್ಯವಿಷಯದಲ್ಲಿ ಸಾವಿತ್ರಿಯಂತೆಯೂ ಆಗುವಳು.

೧೧೧. ಶ್ರೀ ಮಾರ್ಕಂಡೇಯನು ಹೇಳುತ್ತಾನೆ:—ಮಾಂಡವ್ಯಮುನಿಯು ಗೌರಿಯ ಈ ಮಾತನ್ನು ಕೇಳಿ ನಮಸ್ಕರಿಸಿ ಬೇಗನೆ ಧರ್ಮರಾಜನ ಮನೆಗೆ ತೆರಳಿದನು.

೧೧೨–೧೧೪. ಅದು ಮೊದಲ್ಗೊಂಡು ಆ ತೀರ್ಥವು ಶೂಲೇಶ್ವರಿಯೆಂದು ಪ್ರಸಿದ್ಧವಾಯಿತು. ಆ ತೀರ್ಥದಲ್ಲಿ ಮಿಂದು ಪಿತೃದೇವತೆಗಳಿಗೆ ತರ್ಪಣಮಾಡಿ ಬ್ರಾಹ್ಮಣರನ್ನು ಅನ್ನವಸ್ತ್ರಗಳಿಂದಲೂ, ಪಿತೃಪಿತಾಮಹರನ್ನು ಪಿಂಡಗಳಿಂದಲೂ, ಉಮೆಯೊಡನೆ ಶಂಕರನನ್ನು ಅನ್ನೋಪಹಾರಗಳಿಂದಲೂ ಧೂಪ, ಗುಗ್ಗುಳು, ದೀಪದಾನಗಳಿಂದಲೂ ತೃಪ್ತಿಗೊಳಿಸಿದವನು ಸಮಸ್ತಪಾಪಮುಕ್ತನಾಗಿ ಶಿವಸಾನ್ನಿಧ್ಯವನ್ನು ಹೊಂದುವನು.

ತಸ್ಮಿಂಸ್ತೀರ್ಥೇ ತು ಯಃ ಕಶ್ಚಿದಭಿಯುಕ್ತೋ ನರೇಶ್ವರ ।
ಅಭಿಶಾಪೇ ತಥಾ ಸ್ನಾತಸ್ತ್ರಿದಿನಂ ಮುಚ್ಯತೇ ನರಃ ॥ ೧೧೫ ॥
ಕೃಷ್ಣಪಕ್ಷೇ ಚತುರ್ದಶ್ಯಾಂ ರಾತ್ರೌ ಜಾಗರ್ತಿ ಯೋ ನರಃ ।
ಉಪವಾಸಪರಃ ಶುದ್ಧಃ ಶಿವಂ ಸಂಪೂಜಯೇನ್ನರಃ ।
ಪ್ರಮುಚ್ಯ ಪಾಪಸಂಮೋಹಂ ರುದ್ರಲೋಕಂ ಸ ಗಚ್ಛತಿ ॥ ೧೧೬ ॥
ತ್ರಿನೇತ್ರಶ್ಚ ಚತುರ್ಬಾಹುಃ ಸಾಕ್ಷಾದ್ರುದ್ರ ಇವಾಪರಃ ।
ಕ್ರೀಡತೇ ದೇವಕನ್ಯಾಭಿರ್ಯಾವಚ್ಚಂದ್ರಾರ್ಕತಾರಕಂ ॥ ೧೧೭ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ
ಪಂಚಮೇ ಅವಂತ್ಯಖಂಡೇ ತೃತೀಯೇ ರೇವಾಖಂಡೇ
"ಶೂಲೇಶ್ವರತೀರ್ಥಮಾಹಾತ್ಮ್ಯವರ್ಣನಂ"
ನಾಮಾಷ್ಟನವತ್ಯುತ್ತರಶತತಮೋಽಧ್ಯಾಯಃ

---

೧೧೫. ಮಿಥ್ಯಾಪವಾದವನ್ನು ಹೊಂದಿದವನು ಆ ತೀರ್ಥದಲ್ಲಿ ಮೂರು ದಿನಗಳು ಮಿಂದರೆ ಅದರಿಂದ ಮುಕ್ತನಾಗುವನು.

೧೧೬. ಕೃಷ್ಣಪಕ್ಷಚತುರ್ದಶಿಯ ರಾತ್ರಿ ಜಾಗರಣೆ, ಉಪವಾಸಗಳನ್ನು ಮಾಡಿ ಶುದ್ಧನಾಗಿ ಶಿವನನ್ನು ಪೂಜಿಸಿದವನು ಪಾಪಮುಕ್ತನಾಗಿ ರುದ್ರಲೋಕಕ್ಕೆ ತೆರಳುವನು.

೧೧೭. ಅಲ್ಲಿ ರುದ್ರನಂತೆಯೆ ತ್ರಿನೇತ್ರನೂ, ಚತುರ್ಭುಜನೂ ಆಗಿ ಚಂದ್ರ ಸೂರ್ಯರಿರುವವರೆಗೆ ದೇವಕನ್ಯೆಯರೊಡನೆ ವಿನೋದಪಡುವನು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ
ಶ್ರೀ ಸ್ಕಾಂದಮಹಾಪುರಾಣದ ಐದನೆಯ ಅವಂತ್ಯಖಂಡದ ಮೂರನೆಯ ರೇವಾಖಂಡದಲ್ಲಿ
"ಶೂಲೇಶ್ವರತೀರ್ಥಮಾಹಾತ್ಮ್ಯವರ್ಣನ"ವೆಂಬ
ನೂರತೊಂಬತ್ತೆಂಟನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

## ಅಷ್ಟೈಕೋನದ್ವಿಶತತಮೋಽಧ್ಯಾಯಃ

### ಆಶ್ವಿನತೀರ್ಥಮಾಹಾತ್ಮ್ಯವರ್ಣನಂ

ಶ್ರೀ ಮಾರ್ಕಂಡೇಯ ಉವಾಚ :—

ತಸ್ಯೈವಾನಂತರಂ ರಾಜನ್ನಾಶ್ವಿನಂ ತೀರ್ಥಮುತ್ತಮಂ ।
ಕಾಮಿಕಂ ಸರ್ವತೀರ್ಥಾನಾಂ ಪ್ರಾಣಿನಾಂ ಸಿದ್ಧಿದಾಯಕಂ ॥ ೧ ॥
ತತ್ರ ತೀರ್ಥೇಽಶ್ವಿನೌ ದೇವೌ ಸುರೂಪೌ ಭಿಷಜಾಂ ವರೌ ।
ತಪಃ ಕೃತ್ವಾ ಸುವಿಪುಲಂ ಸಂಜಾತೌ ಯಜ್ಞಭಾಗಿನೌ ॥ ೨ ॥
ಸಮ್ಮತೌ ಸರ್ವದೇವಾನಾಮಾದಿತ್ಯತನಯಾವುಭೌ ।
ನಾಽಸತ್ಯೌ ಸತ್ಯಸಂಪನ್ನೌ ಸರ್ವದುಃಖಘ್ನಸತ್ತಮೌ ॥ ೩ ॥

ಯುಧಿಷ್ಠಿರ ಉವಾಚ :—

ಆದಿತ್ಯಸ್ಯ ಸುತೌ ತಾತ ನಾಽಸತ್ಯೌ ಯೇನ ಹೇತುನಾ ।
ಸಂಜಾತೌ ಶ್ರೋತುಮಿಚ್ಛಾಮಿ ನಿರ್ಣಯಂ ಪರಮಂ ದ್ವಿಜ ॥ ೪ ॥

ಮಾರ್ಕಂಡೇಯ ಉವಾಚ :—

ಪುರಾಣೇ ಭಾಸ್ಕರೇ ತಾತ ಏತದ್ವಿಸ್ತರತೋ ಮಯಾ ।
ಸಂಶ್ರುತಂ ದೇವದೇವಸ್ಯ ಮಾರ್ತಂಡಸ್ಯ ಮಹಾತ್ಮನಃ ॥ ೫ ॥

---

### ಕನ್ನಡದ ಅನುವಾದ

#### ಆಶ್ವಿನತೀರ್ಥಮಾಹಾತ್ಮ್ಯವರ್ಣನ

೧. ಶ್ರೀ ಮಾರ್ಕಂಡೇಯನು ಹೇಳುತ್ತಾನೆ:— ಆ ಶೂಲೇಶ್ವರತೀರ್ಥದ ಹತ್ತಿರದಲ್ಲಿ ಸಮಸ್ತತೀರ್ಥಗಳಲ್ಲಿ ಉತ್ತಮವೂ, ಪ್ರಾಣಿಗಳಿಗೆ ಇಷ್ಟಸಿದ್ಧಿಯನ್ನೀಯುವುದೂ ಆದ ಆಶ್ವಿನತೀರ್ಥವಿರುವುದು.

೨–೩. ಆ ತೀರ್ಥದಲ್ಲಿ ಸುಂದರವಾದ ಅಶ್ವಿನೀದೇವತೆಗಳು ಬಹಳ ತಪಸ್ಸನ್ನು ಮಾಡಿ ವೈದ್ಯಶ್ರೇಷ್ಠರೂ, ಯಜ್ಞಭಾಗಿಗಳೂ, ಸಮಸ್ತ ಸುರರಿಗೆ ಸಮ್ಮತರೂ, ಆದಿತ್ಯತನಯರೂ, ಸತ್ತ್ವದಿಂದ ಕೂಡಿದವರೂ, ಸಮಸ್ತದುಃಖಗಳನ್ನು ನಿವಾರಿಸುವುದರಲ್ಲಿ ಉತ್ತಮರೂ ಆದರು.

೪. ಯುಧಿಷ್ಠಿರನು ಹೇಳುತ್ತಾನೆ:— ತಾತ! ಅಶ್ವಿನೀದೇವತೆಗಳು ಎತಕ್ಕಾಗಿ ಆದಿತ್ಯನ ಮಕ್ಕಳಾಗಿ ಹುಟ್ಟಿದರು? ಇದನ್ನು ನಿಶ್ಚಯಿಸಿ ನನಗೆ ಹೇಳು.

೫. ಮಾರ್ಕಂಡೇಯನು ಹೇಳುತ್ತಾನೆ:—ಯುಧಿಷ್ಠಿರ! ನಾನು ಆದಿತ್ಯ ಪುರಾಣದಲ್ಲಿ ಸೂರ್ಯನ ಚರಿತೆಯನ್ನು ವಿಸ್ತಾರವಾಗಿ ಕೇಳಿದ್ದೇನೆ.

ತತ್ತೇ ಸಂಕ್ಷೇಪತಃ ಸರ್ವಂ ಭಕ್ತಿಯುಕ್ತಸ್ಯ ಭಾರತ ।
ಕಥಯಾಮಿ ನ ಸಂದೇಹೋ ವೃದ್ಧಭಾವೇನ ಕರ್ಶಿತಃ ॥ ೬ ॥
ಅತಿತೇಜೋ ರವೇರ್ದೃಷ್ಟ್ವಾ ರಾಜ್ಞೀ ದೇವೀ ನರೋತ್ತಮ ।
ಚಚಾರ ಮೇರುಕಾಂತಾರೇ ವಡವಾ ತಪ ಉಲ್ಬಣಂ ॥ ೭ ॥
ತತಃ ಕತಿಪಯಾಹಸ್ಯ ಕಾಲಸ್ಯ ಭಗವಾನ್ರವಿಃ ।
ದೃಷ್ಟ್ವಾ ತು ರೂಪಮುತ್ಸೃಜ್ಯ ಪರಮಂ ತೇಜ ಉಜ್ವಲಂ ॥ ೮ ॥
ಮನೋಭವವಶೀಭೂತೋ ಹಯೋ ಭೂತ್ವಾ ಲಘುಕ್ರಮಃ ।
ವಿಸ್ಫುರಂತೀ ಯಥಾ ಪ್ರಾಣಂ ಧಾವಮಾನಾ ಇತಸ್ತತಃ ॥ ೯ ॥
ಹೇಷಮಾಣಃ ಸ್ವರೇಣಾಽಸೌ ಮೈಥುನಾಯೋಪಚಕ್ರಮೇ ।
ಸಮ್ಮುಖೀ ತು ತತೋ ದೇವೀ ನಿವೃತ್ತಾ ಲಘುವಿಕ್ರಮಾ ॥ ೧೦ ॥
ಯಥಾ ತಥಾ ನಾಸಿಕಾಯಾಂ ಪ್ರವಿಷ್ಟಂ ಬೀಜಮುತ್ತಮಂ ।
ತತೋ ನಾಸಾಗತೇ ಬೀಜೇ ಸಂಜಾತೋ ಗರ್ಭ ಉತ್ತಮಃ ॥ ೧೧ ॥
ಜಾತೌ ಯತಃ ಸುತೌ ಪಾರ್ಥ ನಾಽಸತ್ಯೌ ವಿಶ್ರುತೌ ತತಃ ।
ಸುಸಮೌ ಸುವಿಭಕ್ತಾಂಗೌ ಬಿಂಬಾದ್ಬಿಂಬಮಿವೋದ್ಧೃತೌ ॥ ೧೨ ॥

---

೬. ಮುಪ್ಪಿನಿಂದ ಕೃಶನಾದ ನಾನು ಅದನ್ನು ಭಕ್ತಿಯುಳ್ಳ ನಿನಗೆ ಸಂಕ್ಷೇಪವಾಗಿ ಹೇಳುವೆನು.

೭. ವಡವಾದೇವಿಯು ಸೂರ್ಯನ ಅಪಾರವಾದ ತೇಜಸ್ಸನ್ನು ಕಂಡು ಮೇರುಪರ್ವತದ ಅರಣ್ಯದಲ್ಲಿ ಉಲ್ಬಣವಾದ ತಪಸ್ಸನ್ನು ಮಾಡಿದಳು.

೮–೧೦. ಅನಂತರ ಕೆಲ ಕಾಲವು ಕಳೆಯಲು ಪೂಜ್ಯನಾದ ಭಾಸ್ಕರನು ಅವಳನ್ನು ನೋಡಿ ತನ್ನ ಉಜ್ವಲವಾದ ತೇಜೋರೂಪವನ್ನು ತ್ಯಜಿಸಿ ಮನ್ಮಥ ಪರವಶನಾಗಿ ಶೀಘ್ರಗಾಮಿಯಾದ ಕುದುರೆಯ ರೂಪವನ್ನು ತಾಳಿ ಇಲ್ಲಿ ಅಲ್ಲಿ ತನ್ನ ಶಕ್ತಿಯನ್ನನುಸರಿಸಿ ಓಡಾಡುತ್ತಿರುವ ವಡವೆಯನ್ನು ಹಿಂಬಾಲಿಸಿ ಕೆನೆಯುತ್ತ ಮೈಥುನವನ್ನಾರಂಭಿಸಿದನು. ಅನಂತರ ವಡವಾದೇವಿಯು ಅಭಿಮುಖಳಾಗಿ ಶೀಘ್ರವಾಗಿ ಓಡಿದಳು.

೧೧. ರವಿಯ ವೀರ್ಯವು ಆ ವಡವೆಯ ಮೂಗನ್ನು ಪ್ರವೇಶಿಸಲು ಅವಳು ಗರ್ಭಿಣಿಯಾದಳು.

೧೨–೧೩. ಅನಂತರ ಅವಳಿಂದ, ನಿಜರೂಪ ಸಮಾನರೂ, ಸಮೀಚೀನವಾದ ಅವಯವಗಳುಳ್ಳವರೂ, ಬಿಂಬ ಪ್ರತಿಬಿಂಬದಂತಿರುವವರೂ, ಸಮಸ್ತ ದೇವತೆಗಳಿಗಿಂತ ಶ್ರೇಷ್ಠರೂ, ಸೌಂದರ್ಯ ಮತ್ತು ಐಶ್ವರ್ಯಗಳಿಂದ ಕೂಡಿ

ಅಧಿಕೌ ಸರ್ವದೇವಾನಾಂ ರೂಪೈಶ್ವರ್ಯಸಮನ್ವಿತೌ ।
ನರ್ಮದಾತಟಮಾಶ್ರಿತ್ಯ ಭೃಗುಕಚ್ಛೇ ಗತಾವುಭೌ ।
ಪರಾಂ ಸಿದ್ಧಿಮನುಪ್ರಾಪ್ತೌ ತಪಃ ಕೃತ್ವಾ ಸುದುಶ್ಚರಂ ॥ ೧೩ ॥
ತತ್ರ ತೀರ್ಥೇ ತು ಯಃ ಸ್ನಾತ್ವಾ ತರ್ಪಯೇತ್ಪಿತೃದೇವತಾಃ ।
ಸುರೂಪಃ ಸುಭಗಃ ಪಾರ್ಥ ಜಾಯತೇ ಯತ್ರ ತತ್ರ ಚ ॥ ೧೪ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ
ಪಂಚಮೇ ಆವಂತ್ಯಖಂಡೇ ತೃತೀಯೇ ರೇವಾಖಂಡೇ
"ಆಶ್ವಿನತೀರ್ಥಮಾಹಾತ್ಮ್ಯವರ್ಣನಂ"
ನಾಮ್ನೈಕೋನದ್ವಿಶತತಮೋಽಧ್ಯಾಯಃ

---

ದವರೂ ಆದ ಅಶ್ವಿನೀದೇವತೆಗಳು ಜನಿಸಿದರು. ಅವರು ನರ್ಮದಾತಟದಲ್ಲಿರುವ ಭೃಗುಕಚ್ಛದಲ್ಲಿ ದುಶ್ಚರವಾದ ತಪಸ್ಸನ್ನುಮಾಡಿ ಉತ್ತಮ ಸಿದ್ಧಿಯನ್ನು ಪಡೆದರು.

೧೪. ಯುಧಿಷ್ಠಿರ! ಆ ತೀರ್ಥದಲ್ಲಿ ಮಿಂದು ಪಿತೃದೇವತೆಗಳಿಗೆ ತರ್ಪಣ ಮಾಡಿದವನು ಎಲ್ಲಿಯಾದರೂ ಸುಂದರನೂ, ಸೌಭಾಗ್ಯವುಳ್ಳವನೂ ಆಗಿ ಜನಿಸುವನು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ
ಶ್ರೀ ಸ್ಕಾಂದಮಹಾಪುರಾಣದ ಐದನೆಯ ಆವಂತ್ಯಖಂಡದ ಮೂರನೆಯ ರೇವಾಖಂಡದಲ್ಲಿ
"ಆಶ್ವಿನತೀರ್ಥಮಾಹಾತ್ಮ್ಯವರ್ಣನ"ವೆಂಬ
ನೂರತೊಂಬತ್ತೊಂಬತ್ತನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

## ಅಥ ದ್ವಿಶತತಮೋಽಧ್ಯಾಯಃ

### ಸಾವಿತ್ರೀತೀರ್ಥಮಾಹಾತ್ಮ್ಯವರ್ಣನಂ

ಶ್ರೀ ಮಾರ್ಕಂಡೇಯ ಉವಾಚ:—

ತಸ್ಯೈವಾನಂತರಂ ಪಾರ್ಥ ಸಾವಿತ್ರೀತೀರ್ಥಮುತ್ತಮಂ ।
ಯತ್ರ ಸಿದ್ಧಾ ಮಹಾಭಾಗಾ ಸಾವಿತ್ರೀ ವೇದಮಾತೃಕಾ ॥ ೧ ॥

ಯುಧಿಷ್ಠಿರ ಉವಾಚ:—

ಸಾವಿತ್ರೀ ಕಾ ದ್ವಿಜಶ್ರೇಷ್ಠ ಕಥಂ ವಾಽಽರಾಧ್ಯತೇ ಬುಧೈಃ ।
ಪ್ರಸನ್ನಾ ವಾ ವರಂ ಕಂ ಚ ದದಾತಿ ಕಥಯಸ್ವ ಮೇ ॥ ೨ ॥

ಶ್ರೀ ಮಾರ್ಕಂಡೇಯ ಉವಾಚ:—

ಪದ್ಮಾ ಪದ್ಮಾಸನಸ್ಥೇನಾಽಧಿಷ್ಠಿತಾ ಪದ್ಮಯೋಗಿನೀ ।
ಸಾವಿತ್ರತೇಜಃಸದೃಶೀ ಸಾವಿತ್ರೀ ತೇನ ಚೋಚ್ಯತೇ ॥ ೩ ॥
ಪದ್ಮಾನನಾ ಪದ್ಮವರ್ಣಾ ಪದ್ಮಪತ್ರನಿಭೇಕ್ಷಣಾ ।
ಧ್ಯಾತವ್ಯಾ ಬ್ರಾಹ್ಮಣೈರ್ನಿತ್ಯಂ ಕ್ಷತ್ರವೈಶ್ಯೈರ್ಯಥಾವಿಧಿ ॥ ೪ ॥
ಬ್ರಹ್ಮಹತ್ಯಾಭಯಾತ್ತಾಸ್ಮಾ ಹಿ ನ ತು ಶೂದ್ರೈಃ ಕದಾಚನ ।
ಉಚ್ಚಾರಣಾದ್ಧಾರಣಾದ್ವಾ ನರಕೇ ಪತತಿ ಧ್ರುವಂ ॥ ೫ ॥

---

## ಕನ್ನಡದ ಅನುವಾದ

### ಸಾವಿತ್ರೀತೀರ್ಥಮಾಹಾತ್ಮ್ಯವರ್ಣನ

೧. ಶ್ರೀ ಮಾರ್ಕಂಡೇಯನು ಹೇಳುತ್ತಾನೆ:—ಯುಧಿಷ್ಠಿರ! ಆ ಅಶ್ವಿನ ತೀರ್ಥದ ಹತ್ತಿರ ಸಾವಿತ್ರೀತೀರ್ಥವಿರುವುದು. ಅಲ್ಲಿ ವೇದಮಾತೆಯಾದ ಸಾವಿತ್ರಿಯು ಸಿದ್ಧಿಯನ್ನು ಹೊಂದಿರುವಳು.

೨. ಯುಧಿಷ್ಠಿರನು ಹೇಳುತ್ತಾನೆ:—ದ್ವಿಜವರ್ಯನೆ! ಸಾವಿತ್ರಿ ಯಾರು? ಪಂಡಿತರು ಅವಳನ್ನು ಹೇಗೆ ಅರ್ಚಿಸುವರು? ಪ್ರಸನ್ನಳಾದ ಅವಳು ಯಾವ ವರವನ್ನು ಕೊಡುವಳು? ಇದನ್ನು ನನಗೆ ಹೇಳು.

೩. ಮಾರ್ಕಂಡೇಯನು ಹೇಳುತ್ತಾನೆ:—ಪದ್ಮಾಸನಾಸೀನನಾದ ಬ್ರಹ್ಮ ಸಹಿತಳೂ, ಸೂರ್ಯನ ತೇಜಸ್ಸಿಗೆ ಸಮಾನಳೂ ಆದ ಲಕ್ಷ್ಮಿಯು ಸಾವಿತ್ರಿಯೆನ್ನಿಸಿಕೊಳ್ಳುವಳು.

೪. ಪದ್ಮಮುಖಿಯೂ, ಪದ್ಮವರ್ಣಳೂ, ಕಮಲಾಕ್ಷಿಯೂ ಆದ ಸಾವಿತ್ರಿಯನ್ನು ಬ್ರಾಹ್ಮಣ, ಕ್ಷತ್ರಿಯ, ವೈಶ್ಯರು ವಿಧಿಯಂತೆ ಧ್ಯಾನಿಸಬೇಕು.

೫. ಬ್ರಹ್ಮಹತ್ಯೆಯು ಸಂಭವಿಸುವುದರಿಂದ ಶೂದ್ರನು ಆ ಸಾವಿತ್ರಿಯನ್ನು ಉಚ್ಚರಿಸಬಾರದು. ಅವನು ಅದನ್ನು ಉಚ್ಚರಿಸುವುದರಿಂದಲೂ, ಧರಿಸುವುದರಿಂದಲೂ ನಿಶ್ಚಯವಾಗಿಯೂ ನರಕದಲ್ಲಿ ಬೀಳುವನು.

ವೇದೋಚ್ಚಾರಣಮಾತ್ರೇಣ ಕ್ಷತ್ರಿಯೈರ್ಧರ್ಮಪಾಲಕೈಃ ।
ಜಿಹ್ವಾಚ್ಛೇದೋಽಸ್ಯ ಕರ್ತವ್ಯಃ ಶೂದ್ರಸ್ಯೇತಿ ವಿನಿಶ್ಚಯಃ ॥ ೬ ॥
ಬಾಲಾ ಬಾಲೇಂದುಸದೃಶೀ ರಕ್ತವಸ್ತ್ರಾಽನುಲೇಪನಾ ।
ಉಷಃಕಾಲೇ ತು ಧ್ಯಾತವ್ಯಾ ಸಂಧ್ಯಾಸಂಧಾನ ಉತ್ತಮೇ ॥ ೭ ॥
ಉತ್ತುಂಗಪೀವರಕುಚಾ ಸುಮುಖೀ ಶುಭದರ್ಶನಾ ।
ಸರ್ವಾಭರಣಸಂಪನ್ನಾ ಶ್ವೇತಮಾಲ್ಯಾಽನುಲೇಪನಾ ॥ ೮ ॥
ಶ್ವೇತವಸ್ತ್ರಪರಿಚ್ಛನ್ನಾ ಶ್ವೇತಯಜ್ಞೋಪವೀತಿನೀ ।
ಮಧ್ಯಾಹ್ನಸಂಧ್ಯಾ ಧ್ಯಾತವ್ಯಾ ತರುಣಾ ಭುಕ್ತಿಮುಕ್ತಿದಾ ॥ ೯ ॥
ಪ್ರದೋಷೇ ತು ಪುನಃ ಪಾರ್ಥ ಶ್ವೇತಾ ಪಾಂಡುರಮೂರ್ಧಜಾ ।
ಸ್ಮೃತಾ ತು ದುರ್ಗಕಾಂತಾರೇ ಮಾತೃವತ್ಪರಿರಕ್ಷತಿ ॥ ೧೦ ॥
ವಿಶೇಷೇಣ ತು ರಾಜೇಂದ್ರ ಸಾವಿತ್ರೀತೀರ್ಥಮುತ್ತಮಂ ।
ಸ್ನಾತ್ವಾಚಮ್ಯ ವಿಧಾನೇನ ಮನೋವಾಕ್ಕಾಯಕರ್ಮಭಿಃ ॥ ೧೧ ॥
ಪ್ರಾಣಾಯಾಮೈರ್ದಹೇದ್ದೋಷಾನ್ ಸಪ್ತಜನ್ಮಾರ್ಜಿತಾನ್ ಬಹೂನ್ ।
ಆಪೋಹಿಷ್ಠೇತಿ ಮಂತ್ರೇಣ ಪ್ರೋಕ್ಷಯೇದಾತ್ಮನಸ್ತನುಂ ॥ ೧೨ ॥

---

೬. ಶೂದ್ರನು ವೇದವನ್ನುಚ್ಚರಿಸಿದರೆ ಧರ್ಮಪಾಲಕರಾದ ಕ್ಷತ್ರಿಯರು ಅವನ ನಾಲಿಗೆಯನ್ನು ಕತ್ತರಿಸಬೇಕು.

೭–೧೦. ಬೆಳಗ್ಗೆ ಬಾಲಚಂದ್ರನಿಗೆ ಸಮಾನಳೂ, ರಕ್ತವಸ್ತ್ರಗಂಧಗಳನ್ನು ಧರಿಸಿದವಳೂ ಆದ ಆ ಸಾವಿತ್ರಿಯನ್ನು ಧ್ಯಾನಿಸಬೇಕು. ಸಂಧ್ಯಾಕಾಲದಲ್ಲಿ ಉನ್ನತ ಕುಚಗಳುಳ್ಳವಳೂ, ಸುಂದರವದನೆಯೂ, ಮಂಗಳಕರವಾದ ನೋಟ ವುಳ್ಳವಳೂ, ಸಮಸ್ತ ಭೂಷಣಗಳಿಂದ ಅಲಂಕೃತಳೂ, ಶ್ವೇತಮಾಲೆ ಗಂಧ ಗಳನ್ನು ಧರಿಸಿದವಳೂ, ಶ್ವೇತವಸ್ತ್ರವನ್ನುಟ್ಟು, ಶ್ವೇತಯಜ್ಞೋಪವೀತವನ್ನು ಧರಿಸಿದವಳೂ ಆದ ಆ ದೇವಿಯನ್ನೂ, ಮಧ್ಯಾಹ್ನದಲ್ಲಿ ತರುಣಿಯೂ, ಭುಕ್ತಿ ಮುಕ್ತಿಗಳನ್ನೀಯುವವಳೂ, ಪ್ರದೋಷಕಾಲದಲ್ಲಿ ಶ್ವೇತವರ್ಣಳೂ, ಶ್ವೇತ ವಾದ ತಲೆಗೂದಲುಳ್ಳವಳೂ ಆದವಳನ್ನಾಗಿ ಸ್ಮರಿಸಬೇಕು. ಹೀಗೆ ಮಾಡಿದರೆ ಆ ಸಾವಿತ್ರಿಯು ದುರ್ಗಮವಾದ ಕಾಡಿನಲ್ಲಿ ತಾಯಿಯಂತೆ ಸ್ಮರಿಸಿದವನನ್ನು ರಕ್ಷಿಸುವಳು.

೧೧–೧೩. ಮಹಾರಾಜ! ವಿಶೇಷವಾಗಿ ಉತ್ತಮವಾದ ಆ ಸಾವಿತ್ರೀ ತೀರ್ಥದಲ್ಲಿ ಮಿಂದು, ಆಚಮನಮಾಡಿ ಮನೋವಾಕ್ಕಾಯಕರ್ಮಗಳಿಂದಲೂ, ಪ್ರಾಣಾಯಾಮಗಳಿಂದಲೂ ಏಳುಜನ್ಮಗಳಲ್ಲಿ ಮಾಡಿದ ಪಾಪಗಳನ್ನು ನಿವಾರಿಸಿ ಕೊಳ್ಳಬೇಕು. ಒಂಬತ್ತು, ಆರು, ಮೂರು ಸಾರಿ ಆಪೋಹಿಷ್ಠೇತ್ಯಾದಿ ಮಂತ್ರ

ನವ ಷಟ್ ಚ ತಥಾ ತಿಸ್ರಸ್ತತ್ರ ತೀರ್ಥೇ ನೃಪೋತ್ತಮ ।
ಆಪೋಹಿಷ್ಠೇತಿ ತ್ರಿರಾವೃತ್ಯ ಪ್ರತಿಗ್ರಾಹ್ಯೈರ್ನ ಲಿಪ್ಯತೇ ॥ ೧೩ ॥
ಅಘಮರ್ಷಣಂ ತ್ರಿಚಂ ತೋಯೇ ಯಥಾ ವೇದಮಥಾಽಪಿ ವಾ ।
ಉಪಪಾಪೈರ್ನ ಲಿಪ್ಯೇತ ಪದ್ಮಪತ್ರಮಿವಾಂಭಸಾ ॥ ೧೪ ॥
ತ್ರ್ಯೈಪಂ ಹಿ ಕುರುತೇ ವಿಪ್ರ ಉಲ್ಲೇಖತ್ರಯಮಾಚರೇತ್ ।
ಚತುರ್ಥಂ ಕಾರಯೇದ್ಯಸ್ತು ಬ್ರಹ್ಮಹತ್ಯಾಂ ವ್ಯಪೋಹತಿ ॥ ೧೫ ॥
ದ್ರುಪದಾಖ್ಯಶ್ಚ ಯೋ ಮಂತ್ರೋ ವೇದೇ ವಾಜಸನೇಯಕೇ ।
ಅಂತರ್ಜಲೇ ಸಕೃಜ್ಜಪ್ತಃ ಸರ್ವಪಾಪಕ್ಷಯಂಕರಃ ॥ ೧೬ ॥
ಉದುತ್ಯಮಿತಿ ಮಂತ್ರೇಣ ಪೂಜಯಿತ್ವಾ ದಿವಾಕರಂ ।
ಗಾಯತ್ರೀಂ ಚ ಜಪೇದ್ದೇವೀಂ ಪವಿತ್ರಾಂ ವೇದಮಾತರಂ ॥ ೧೭ ॥
ಗಾಯತ್ರೀಂ ತು ಜಪೇದ್ದೇವೀಂ ಯಃ ಸಂಧ್ಯಾನಂತರಂ ದ್ವಿಜಃ ।
ಸರ್ವಪಾಪವಿನಿರ್ಮುಕ್ತೋ ಬ್ರಹ್ಮಲೋಕಂ ಸ ಗಚ್ಛತಿ ॥ ೧೮ ॥
ದಶಭಿರ್ಜನ್ಮಭಿರ್ಲಬ್ಧಂ ಶತೇನ ತು ಪುರಾ ಕೃತಂ ।
ತ್ರಿಯುಗಂ ತು ಸಹಸ್ರೇಣ ಗಾಯತ್ರೀ ಹಂತಿ ಕಿಲ್ಬಿಷಂ ॥ ೧೯ ॥

---

ದಿಂದ ತನ್ನ ಶರೀರವನ್ನು ಪ್ರೋಕ್ಷಣೆಮಾಡಿಕೊಳ್ಳಬೇಕು. ಹೀಗೆ ಮಾಡಿಕೊಳ್ಳು ವುದರಿಂದ ಪ್ರತಿಗ್ರಹ ದೋಷವು ಸಂಭವಿಸುವುದಿಲ್ಲ.

೧೪. ವೇದೋಕ್ತ ಕ್ರಮವನ್ನು ಅನುಸರಿಸಿ ಅಘಮರ್ಷಣ ಸೂಕ್ತವನ್ನು ಪಠಿಸಿ ಸ್ನಾನಮಾಡುವುದರಿಂದ ತಾವರೆ ಎಲೆಯಲ್ಲಿ ನೀರು ಅಂಟಿಕೊಳ್ಳದಿರುವಂತೆ ಉಪಪಾಪಗಳಿಂದ ಲಿಪ್ತನಾಗುವುದಿಲ್ಲ.

೧೫. ಮೂರು ಅಥವಾ ನಾಲ್ಕುಸಾರಿ ಆಚಮನ ಮಾಡುವುದರಿಂದ ಬ್ರಹ್ಮ ಹತ್ಯೆಯು ಪರಿಹಾರವಾಗುವುದು.

೧೬. ವಾಜಸೇನಯಕವೆಂಬ ವೇದಭಾಗದಲ್ಲಿ ಉಕ್ತವಾಗಿರುವ ದ್ರುಪದ ವೆಂಬ ಮಂತ್ರವನ್ನು ನೀರಿನ ನಡುವೆ ಒಂದುಸಾರಿ ಜಪಿಸಿದರೆ ಸಕಲಪಾಪಗಳೂ ಪರಿಹಾರವಾಗುವುವು.

೧೭. ಉದುತ್ಯಮಿತ್ಯಾದಿ ಮಂತ್ರದಿಂದ ಸೂರ್ಯನನ್ನು ಪೂಜಿಸಿ ವೇದ ಮಾತೆಯೂ, ಪವಿತ್ರವೂ ಆದ ಗಾಯತ್ರಿಯನ್ನು ಜಪಿಸಬೇಕು.

೧೮ ಸಂಧ್ಯಾವಂದನೆಯಾದ ತರುವಾಯ ಗಾಯತ್ರಿಯನ್ನು ಜಪಿಸಿದ ಮಾನವನು ಸಮಸ್ತ ಪಾಪಮುಕ್ತನಾಗಿ ಬ್ರಹ್ಮಲೋಕಕ್ಕೆ ತೆರಳುವನು.

೧೯. ಹತ್ತುಸಾರಿ ಗಾಯತ್ರಿಯನ್ನು ಜಪಿಸುವುದರಿಂದ ಆ ಜನ್ಮದಲ್ಲಿ ಮಾಡಿದ ಪಾಪವೂ, ನೂರುಸಾರಿ ಜಪಿಸುವುದರಿಂದ ಹಿಂದಿನ ಜನ್ಮಗಳ ಪಾಪವೂ, ಸಾವಿರ ಜಪದಿಂದ ಮೂರು ಯುಗಗಳ ಪಾಪವೂ ಪರಿಹಾರವಾಗುವುದು.

ಗಾಯತ್ರೀಸಾರಮಾತ್ರೋಽಪಿ ವರಂ ವಿಪ್ರಃ ಸುಯಂತ್ರಿತಃ ।
ನಾಯಂತ್ರಿತಶ್ಚತುರ್ವೇದೀ ಸರ್ವಾಶೀ ಸರ್ವವಿಕ್ರಯೀ ॥ ೨೦ ॥
ಸಂಧ್ಯಾಹೀನೋಽಶುಚಿರ್ನಿತ್ಯಮನರ್ಹಃ ಸರ್ವಕರ್ಮಸು ।
ಯದನ್ಯತ್ಕುರುತೇ ಕಿಂಚಿನ್ನ ತಸ್ಯ ಫಲಭಾಗ್ಭವೇತ್ ॥ ೨೧ ॥
ಸಂಧ್ಯಾಂ ನೋಪಾಸತೇ ಯಸ್ತು ಬ್ರಾಹ್ಮಣೋ ಮಂದಬುದ್ಧಿಮಾನ್ ।
ಸ ಜೀವನ್ನೇವ ಶೂದ್ರಃ ಸ್ಯಾನ್ಮೃತಃ ಶ್ವಾ ಸಂಪ್ರಜಾಯತೇ ॥ ೨೨ ॥
ಸಾವಿತ್ರೀತೀರ್ಥಮಾಸಾದ್ಯ ಸಾವಿತ್ರೀಂ ಯೋ ಜಪೇದ್ದ್ವಿಜಃ ।
ತ್ರೈವಿದ್ಯಂ ತು ಫಲಂ ತಸ್ಯ ಜಾಯತೇ ನಾಽತ್ರ ಸಂಶಯಃ ॥ ೨೩ ॥
ಪಿತೄನುದ್ದಿಶ್ಯ ಯಃ ಸ್ನಾತ್ವಾ ಪಿಂಡನಿರ್ವಪಣಂ ನೃಪ ।
ಕುರುತೇ ದ್ವಾದಶಾಬ್ದಾನಿ ತೃಪ್ಯಂತಿ ತತ್ಪಿತಾಮಹಾಃ ॥ ೨೪ ॥
ಸಾವಿತ್ರೀತೀರ್ಥಮಾಸಾದ್ಯ ಯಃ ಕುರ್ಯಾತ್ಪ್ರಾಣಸಂಕ್ಷಯಂ ।
ಬ್ರಹ್ಮಲೋಕೇ ವಸೇತ್ತಾವದ್ಯಾವದಾಭೂತಸಂಪ್ಲವಂ ॥ ೨೫ ॥
ಪೂರ್ಣೇ ಚೈವ ತತಃ ಕಾಲ ಇಹ ಮಾನುಷ್ಯತಾಂ ಗತಃ ।
ಚತುರ್ವೇದೋ ದ್ವಿಜೋ ರಾಜನ್ ಜಾಯತೇ ವಿಮಲೇ ಕುಲೇ ॥ ೨೬ ॥

---

೨೦–೨೧. ಜಿತೇಂದ್ರಿಯನಾಗಿ ಗಾಯತ್ರಿಯನ್ನು ಮಾತ್ರ ಜಪಿಸುವ ಬ್ರಾಹ್ಮಣನು ಉತ್ತಮನು. ಜಿತೇಂದ್ರಿಯನಲ್ಲದ ಚತುರ್ವೇದಿಯೂ, ಸರ್ವವನ್ನು ಭಕ್ಷಿಸುವವನೂ, ಸಮಸ್ತವನ್ನೂ ಮಾರುವವನೂ, ಸಂಧ್ಯಾವಂದನೆ ಮಾಡದವನೂ, ಅಶುದ್ಧನೂ ಆದ ಬ್ರಾಹ್ಮಣನು ಸಮಸ್ತ ಕಾರ್ಯಗಳಿಗೂ ಅನರ್ಹನು. ಅವನು ಬೇರೆ ಏನನ್ನು ಮಾಡಿದರೂ ಅದರ ಫಲವನ್ನು ಹೊಂದುವುದಿಲ್ಲ.

೨೨. ಸಂಧ್ಯಾವಂದನೆಮಾಡದ ಅಲ್ಪಮತಿಕನಾದ ಬ್ರಾಹ್ಮಣನು ಜೀವಿಸುವವನಾಗಿಯೇ ಶೂದ್ರನಾಗುವನು. ಮಡಿದ ತರುವಾಯ ನಾಯಿಯಾಗಿ ಜನಿಸುವನು.

೨೩. ಸಾವಿತ್ರೀತೀರ್ಥವನ್ನು ಹೊಂದಿ ಗಾಯತ್ರಿಯನ್ನು ಜಪಿಸಿದ ಮಾನವನಿಗೆ ತ್ರಿವೇದವನ್ನು ಪಾರಾಯಣಮಾಡಿದ ಫಲವು ದೊರೆಯುವುದು.

೨೪. ಪಿತೃಗಳನ್ನುದ್ದೇಶಿಸಿ ಅಲ್ಲಿ ಮಿಂದು ಪಿಂಡಪ್ರದಾನಮಾಡಿದವನ ಪಿತೃಗಳು ಹನ್ನೆರಡು ವರ್ಷಗಳಕಾಲ ತೃಪ್ತಿಗೊಳ್ಳುವರು.

೨೫. ಸಾವಿತ್ರೀತೀರ್ಥದಲ್ಲಿ ಮಡಿದವನು ಪ್ರಳಯಕಾಲದವರೆಗೆ ಬ್ರಹ್ಮಲೋಕದಲ್ಲಿ ವಾಸಮಾಡುವನು.

೨೬. ಬ್ರಹ್ಮಲೋಕವಾಸವು ಮುಗಿದ ತರುವಾಯ ಶುದ್ಧವಾದ ವಂಶದಲ್ಲಿ ಮನುಷ್ಯನಾಗಿ ಜನಿಸಿ ಚತುರ್ವೇದಿಯಾದ ಬ್ರಾಹ್ಮಣನಾಗುವನು.

ಧನಧಾನ್ಯಚಯೋಪೇತಃ ಪುತ್ರಪೌತ್ರಸಮನ್ವಿತಃ ।
ವ್ಯಾಧಿಶೋಕವಿನಿರ್ಮುಕ್ತೋ ಜೀವೇಚ್ಚ ಶರದಾಂ ಶತಂ ॥ ೨೭ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ
ಪಂಚಮೇ ಆವಂತ್ಯಖಂಡೇ ತೃತೀಯೇ ರೇವಾಖಂಡೇ
"ಸಾವಿತ್ರೀತೀರ್ಥಮಾಹಾತ್ಮ್ಯವರ್ಣನಂ"
ನಾಮ ದ್ವಿಶತತಮೋಽಧ್ಯಾಯಃ

---

೨೭. ಮತ್ತು ಧನಧಾನ್ಯಗಳಿಂದ ಕೂಡಿದವನೂ, ಪುತ್ರಪೌತ್ರರಿಂದ ಸಹಿತನೂ, ವ್ಯಾಧಿಶೋಕರಹಿತನೂ ಆಗಿ ನೂರುವರ್ಷಗಳಕಾಲ ಜೀವಿಸುವನು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ
ಶ್ರೀ ಸ್ಕಾಂದಮಹಾಪುರಾಣದ ಐದನೆಯ ಆವಂತ್ಯಖಂಡದ ಮೂರನೆಯ ರೇವಾಖಂಡದಲ್ಲಿ
"ಸಾವಿತ್ರೀತೀರ್ಥಮಾಹಾತ್ಮ್ಯವರ್ಣನ"ವೆಂಬ
ಇನ್ನೂರನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

## ಅಷ್ಟೈಕದ್ವಿಶತತಮೋಽಧ್ಯಾಯಃ

### ದೇವತೀರ್ಥಮಾಹಾತ್ಮ್ಯವರ್ಣನಂ

ಶ್ರೀ ಮಾರ್ಕಂಡೇಯ ಉವಾಚ :—

ತತೋ ಗಚ್ಛೇನ್ಮಹೀಪಾಲ ದೇವತೀರ್ಥಮನುತ್ತಮಂ ।
ಯತ್ರ ಸಿದ್ಧಾ ಮಹಾಭಾಗಾ ದೇವಾಃ ಸೇಂದ್ರಾ ಯುಧಿಷ್ಠಿರ ॥ ೧ ॥
ಸ್ನಾನಂ ದಾನಂ ಜಪೋ ಹೋಮಃ ಸ್ವಾಧ್ಯಾಯೋ ದೇವತಾರ್ಚನಂ ।
ತತ್ರ ತೀರ್ಥಪ್ರಭಾವೇನ ಕೃತಮಾನಂತ್ಯಮಶ್ನುತೇ ॥ ೨ ॥
ವಿಶೇಷಾದ್ಭಾದ್ರಪದೇ ತು ಕೃಷ್ಣಪಕ್ಷೇ ತ್ರಯೋದಶೀಂ ।
ಪ್ರಧಾನಂ ಸರ್ವತೀರ್ಥಾನಾಂ ದೇವೈರಧ್ಯಾಸಿತಂ ಪುರಾ ॥ ೩ ॥
ಸ್ನಾತ್ವಾ ತ್ರಯೋದಶೀದಿನೇ ಶ್ರಾದ್ಧಂ ಕೃತ್ವಾ ವಿಧಾನತಃ ।
ದೇವೈಃ ಸಂಸ್ಥಾಪಿತಂ ದೇವಂ ಸಂಪೂಜ್ಯ ವೃಷಭಧ್ವಜಂ ।
ಸರ್ವಪಾಪವಿನಿರ್ಮುಕ್ತೋ ರುದ್ರಲೋಕಮವಾಪ್ನುಯಾತ್ ॥ ೪ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ
ಪಂಚಮೇ ಆವಂತ್ಯಖಂಡೇ ತೃತೀಯೇ ರೇವಾಖಂಡೇ
"ದೇವತೀರ್ಥಮಾಹಾತ್ಮ್ಯವರ್ಣನಂ" ನಾಮೈಕದ್ವಿಶತತಮೋಽಧ್ಯಾಯಃ

---

## ಕನ್ನಡದ ಅನುವಾದ

### ದೇವತೀರ್ಥಮಾಹಾತ್ಮ್ಯವರ್ಣನ

೧. ಶ್ರೀ ಮಾರ್ಕಂಡೇಯನು ಹೇಳುತ್ತಾನೆ:—ಮಹಾರಾಜ! ಅನಂತರ ಉತ್ತಮವಾದ ದೇವತೀರ್ಥಕ್ಕೆ ಹೋಗಬೇಕು. ಅಲ್ಲಿ ಇಂದ್ರಾದಿ ದೇವತೆಗಳು ಸಿದ್ಧಿಯನ್ನು ಹೊಂದಿರುವರು.

೨. ಅಲ್ಲಿ ಮಾಡಿದ ಸ್ನಾನ, ದಾನ, ಜಪ, ಹೋಮ, ವೇದಾಧ್ಯಯನ, ದೇವಪೂಜೆ ಇವುಗಳು ಆ ತೀರ್ಥದ ಪ್ರಭಾವದಿಂದ ಅನಂತವಾಗುವುವು.

೩. ಭಾದ್ರಪದ ಕೃಷ್ಣಪಕ್ಷ ತ್ರಯೋದಶೀ ದಿನ ಸಮಸ್ತ ತೀರ್ಥಗಳಲ್ಲಿ ಉತ್ತಮವಾದ ಆ ತೀರ್ಥದಲ್ಲಿ ದೇವತೆಗಳು ಸನ್ನಿಹಿತರಾಗಿರುವರು.

೪. ಅಲ್ಲಿ ತ್ರಯೋದಶೀದಿನ ಮಿಂದು ವಿಧಿಯಂತೆ ಶ್ರಾದ್ಧಗೈದು ದೇವತೆಗಳು ಸ್ಥಾಪಿಸಿದ ಶಂಕರನನ್ನು ಪೂಜಿಸಿದವನು ಸಕಲ ಪಾಪಮುಕ್ತನಾಗಿ ರುದ್ರಲೋಕಕ್ಕೆ ತೆರಳುವನು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ
ಶ್ರೀ ಸ್ಕಾಂದಮಹಾಪುರಾಣದ ಐದನೆಯ ಆವಂತ್ಯಖಂಡದ ಮೂರನೆಯ ರೇವಾಖಂಡದಲ್ಲಿ
"ದೇವತೀರ್ಥಮಾಹಾತ್ಮ್ಯವರ್ಣನ"ವೆಂಬ
ಇನ್ನೂರೊಂದನೆಯ ಅಧ್ಯಾಯವು ಮುಗಿದುದು

॥ ಶ್ರೀಃ ।

# ಅಥ ದ್ವ್ಯಧಿಕದ್ವಿಶತತಮೋಽಧ್ಯಾಯಃ

### ಶಿಖಿತೀರ್ಥಮಾಹಾತ್ಮ್ಯವರ್ಣನಂ

ಶ್ರೀ ಮಾರ್ಕಂಡೇಯ ಉವಾಚ :—

ತಸ್ಯೈವಾನಂತರಂ ಚಾಽನ್ಯಚ್ಛಿಖಿತೀರ್ಥಮನುತ್ತಮಂ ।
ಪ್ರಧಾನಂ ಸರ್ವತೀರ್ಥಾನಾಂ ಪಂಚಾಯತನಮುತ್ತಮಂ ॥ ೧ ॥
ತತ್ರ ತೀರ್ಥೇ ತಪಸ್ತಪ್ತ್ವಾ ಶಿಖಾರ್ಥಂ ಹವ್ಯವಾಹನಃ ।
ಶಿಖಾಂ ಪ್ರಾಪ್ಯ ಶಿಖೀ ಭೂತ್ವಾ ಶಿಖಾಖ್ಯಂ ಸ್ಥಾಪಯನ್ ಶಿವಂ ॥ ೨ ॥
ಪ್ರತಿಪಚ್ಛುಕ್ಲಪಕ್ಷೇ ಯಾ ಭವೇದಾಶ್ವಯುಜೇ ನೃಪ ।
ತದಾ ತೀರ್ಥವರೇ ಗತ್ವಾ ಸ್ನಾತ್ವಾ ವೈ ನರ್ಮದಾಜಲೇ ॥ ೩ ॥
ದೇವಾನೃಷೀನ್ಪಿತೄಂಶ್ಚಾನ್ಯಾಂಸ್ತರ್ಪಯೇತ್ತಿಲವಾರಿಣಾ ।
ಹಿರಣ್ಯಂ ಬ್ರಾಹ್ಮಣೇ ದದ್ಯಾತ್ಸಂತರ್ಪ್ಯ ಚ ಹುತಾಶನಂ ॥ ೪ ॥
ಗಂಧಮಾಲ್ಯೈಸ್ತಥಾ ಧೂಪೈಸ್ತತಃ ಸಂಪೂಜಯೇಚ್ಛಿವಂ ।
ಅನೇನ ವಿಧಿನಾಽಭ್ಯರ್ಚ್ಯ ಶಿಖಿತೀರ್ಥೇ ಮಹೇಶ್ವರಂ ॥ ೫ ॥

---

## ಕನ್ನಡದ ಅನುವಾದ

### ಶಿಖಿತೀರ್ಥಮಾಹಾತ್ಮ್ಯವರ್ಣನ

೧. ಮಾರ್ಕಂಡೇಯನು ಹೇಳುತ್ತಾನೆ:—ಅನಂತರ ಆ ದೇವತೀರ್ಥದ ಸಮೀಪದಲ್ಲಿ ಸಕಲತೀರ್ಥಪ್ರಧಾನವಾಗಿ ಪಂಚಾಯತನವನ್ನೊಳಗೊಂಡ ಶಿಖಿತೀರ್ಥವಿರುವುದು.

೨. ಅಗ್ನಿಯು ಆ ತೀರ್ಥದಲ್ಲಿ ಶಿಖಾರ್ಥವಾಗಿ ತಪಸ್ಸನ್ನು ಮಾಡಿ ಶಿಖೆಯನ್ನು ಪಡೆದು ಶಿಖಾನಾಮಕನಾದ ಶಿವನನ್ನು ಸ್ಥಾಪಿಸಿದನು.

೩–೪. ಆಶ್ವಯುಜಮಾಸದ ಶುಕ್ಲಪಕ್ಷದ ಪಾಡ್ಯದದಿನ ನರ್ಮದಾನದಿಯಲ್ಲಿರುವ ಆ ತೀರ್ಥಕ್ಕೆ ಹೋಗಿ ದೇವರ್ಷಿಪಿತೃಗಳನ್ನೂ, ಇತರರನ್ನೂ ತಿಲತರ್ಪಣದಿಂದ ತೃಪ್ತಿಗೊಳಿಸಿ ಅಗ್ನಿಯನ್ನೂ ತೃಪ್ತಿಗೊಳಿಸಿ ಬ್ರಾಹ್ಮಣನಿಗೆ ಸುವರ್ಣವನ್ನು ದಾನಮಾಡಬೇಕು.

೫–೬. ಅನಂತರ ಗಂಧಮಾಲ್ಯ, ಧೂಪಗಳಿಂದ ಶಿವನನ್ನಾರಾಧಿಸಬೇಕು. ಈ ವಿಧಿಯಿಂದ ಶಿಖಿತೀರ್ಥದಲ್ಲಿ ನೆಲಸಿರುವ ಮಹೇಶ್ವರನನ್ನು ಪೂಜಿಸಿದವನು

ವಿಮಾನೇನಾಽರ್ಕವರ್ಣೇನ ಹ್ಯಪ್ಸರೋಗಣಸಂವೃತಃ ।
ಗೀಯಮಾನಸ್ತು ಗಂಧರ್ವೈಃ ರುದ್ರಲೋಕಂ ಸ ಗಚ್ಛತಿ ॥ ೬ ॥
ಶತ್ರುಕ್ಷಯಮವಾಪ್ನೋತಿ ತೇಜಸ್ವೀ ಜಾಯತೇ ಭುವಿ ॥ ೭ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ
ಪಂಚಮೇ ಆವಂತ್ಯಖಂಡೇ ತೃತೀಯೇ ರೇವಾಖಂಡೇ
"ಶಿಖಿತೀರ್ಥಮಾಹಾತ್ಮ್ಯವರ್ಣನಂ" ನಾಮ
ದ್ವ್ಯಧಿಕದ್ವಿಶತತಮೋಽಧ್ಯಾಯಃ

---

ಸೂರ್ಯವರ್ಣದ ವಿಮಾನವನ್ನೇರಿ ಅಪ್ಸರೆಯರಿಂದ ಕೂಡಿ ಗಂಧರ್ವರಿಂದ ಗಾನಮಾಡಲ್ಪಡುತ್ತ ರುದ್ರಲೋಕಕ್ಕೆ ತೆರಳುವನು.

೭. ಅಲ್ಲದೆ ಶತ್ರುಗಳನ್ನು ನಾಶಗೊಳಿಸಿ ಭೂಮಿಯಲ್ಲಿ ತೇಜೋವಂತನಾಗುವನು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ
ಶ್ರೀ ಸ್ಕಾಂದಮಹಾಪುರಾಣದ ಐದನೆಯ ಆವಂತ್ಯಖಂಡದ ಮೂರನೆಯ ರೇವಾಖಂಡದಲ್ಲಿ
"ಶಿಖಿತೀರ್ಥಮಾಹಾತ್ಮ್ಯವರ್ಣನ"ವೆಂಬ
ಇನ್ನೂರೆರಡನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

## ಅಥ ತ್ರ್ಯುತ್ತರದ್ವಿಶತತಮೋಽಧ್ಯಾಯಃ

### ಕೋಟಿತೀರ್ಥಮಾಹಾತ್ಮ್ಯವರ್ಣನಂ

ಶ್ರೀ ಮಾರ್ಕಂಡೇಯ ಉವಾಚ :—

ತತೋ ಗಚ್ಛೇದ್ಧರಾಧೀಶ ಕೋಟಿತೀರ್ಥಮನುತ್ತಮಂ ।
ಯತ್ರ ಸಿದ್ಧಾ ಮಹಾಭಾಗಾಃ ಕೋಟಿಸಂಖ್ಯಾ ಮಹರ್ಷಯಃ ॥ ೧ ॥
ತಪಃ ಕೃತ್ವಾ ಸುವಿಪುಲಮೃಷಿಭಿಃ ಸ್ಥಾಪಿತಃ ಶಿವಃ ।
ತಥಾ ಕೋಟೀಶ್ವರೀ ದೇವೀ ಚಾಮುಂಡಾ ಮಹಿಷಾರ್ದಿನೀ ॥ ೨ ॥
ಕೃಷ್ಣಪಕ್ಷೇ ಚತುರ್ದಶ್ಯಾಂ ಮಾಸಿ ಭಾದ್ರಪದೇ ನೃಪ ।
ತೀರ್ಥಕೋಟೀಃ ಸಮಾಹೂಯ ಮುನಿಭಿಃ ಸ್ಥಾಪಿತಃ ಶಿವಃ ॥ ೩ ॥
ತಸ್ಯಾಂ ತಿಥೌ ಚ ಹಸ್ತರ್ಕ್ಷಂ ಸರ್ವಪಾಪಪ್ರಣಾಶನಂ ।
ತತ್ರ ತೀರ್ಥೇ ತದಾ ಗತ್ವಾ ಸ್ನಾನಂ ಕೃತ್ವಾ ಸಮಾಹಿತಃ ॥ ೪ ॥
ನರಕಾದುದ್ಧರತ್ಯಾಶು ಪುರುಷಾನೇಕವಿಂಶತಿಂ ।
ತಿಲೋದಕಪ್ರದಾನೇನ ಕಿಮುತ ಶ್ರಾದ್ಧದೋ ನರಃ ॥ ೫ ॥

---

## ಕನ್ನಡದ ಅನುವಾದ

### ಕೋಟಿತೀರ್ಥಮಾಹಾತ್ಮ್ಯವರ್ಣನ

೧–೨. ಶ್ರೀ ಮಾರ್ಕಂಡೇಯನು ಹೇಳುತ್ತಾನೆ:—ಮಹಾರಾಜ! ಅನಂತರ ಉತ್ತಮವಾದ ಕೋಟಿತೀರ್ಥಕ್ಕೆ ಹೋಗಬೇಕು. ಅಲ್ಲಿ ಮಹಾತ್ಮರಾದ ಕೋಟಿ ಮಂದಿ ಮಹರ್ಷಿಗಳು ಮಹಾತಪವಂಗೈದು ಮಹೇಶ್ವರನನ್ನೂ, ಮಹಿಷನನ್ನು ಸಂಹರಿಸಿದ ಕೋಟೀಶ್ವರಿ ನಾಮಕಳಾದ ಚಾಮುಂಡೆಯನ್ನೂ ಪ್ರತಿಷ್ಠೆಮಾಡಿದ್ದಾರೆ.

೩. ಅಲ್ಲಿ ಭಾದ್ರಪದ ಕೃಷ್ಣಪಕ್ಷದ ಚತುರ್ದಶೀ ದಿನ ಆ ಮುನಿಗಳು ಕೋಟಿ ತೀರ್ಥಗಳನ್ನು ತಂದು ಶಿವನನ್ನು ಸ್ಥಾಪಿಸಿರುವನು.

೪–೫. ಆ ತಿಥಿಯು ಹಸ್ತಾನಕ್ಷತ್ರದಿಂದ ಕೂಡಿದರೆ ಸಮಸ್ತ ಪಾಪಗಳನ್ನೂ ಪರಿಹರಿಸುವುದು. ಈಗ ಆ ತೀರ್ಥಕ್ಕೆ ಹೋಗಿ ಸಾವಧಾನ ಮನಸ್ಸಿನಿಂದ ಪಿತೃಗಳಿಗೆ ತಿಲೋದಕದಿಂದ ತರ್ಪಣಮಾಡಿದವನು ತನ್ನ ಇಪ್ಪತ್ತೊಂದು ತಲೆಯ ಪಿತೃಗಳನ್ನು ಉದ್ಧರಿಸುವನು. ಶ್ರಾದ್ಧಮಾಡಿದವನ ವಿಷಯವಿನ್ನೇನು?

**ಸ್ನಾನಂ ದಾನಂ ಜಪೋ ಹೋಮಃ ಸ್ವಾಧ್ಯಾಯೋ ದೇವತಾರ್ಚನಂ ।**
**ತಸ್ಯ ತೀರ್ಥಸ್ಯ ಯೋಗೇನ ಸರ್ವಂ ಕೋಟಿಗುಣಂ ಭವೇತ್ ॥ ೬ ॥**

**ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ**
**ಪಂಚಮೇ ಆವಂತ್ಯಖಂಡೇ ತೃತೀಯೇ ರೇವಾಖಂಡೇ**
**"ಕೋಟಿತೀರ್ಥಮಾಹಾತ್ಮ್ಯವರ್ಣನಂ" ನಾಮ**
**ತ್ರ್ಯುತ್ತರದ್ವಿಶತತಮೋಽಧ್ಯಾಯಃ**

---

೬. ಸ್ನಾನ, ದಾನ, ಜಪ, ಹೋಮ, ವೇದಾಧ್ಯಯನ, ದೇವತಾಪೂಜೆ ಇವುಗಳು ಆ ತೀರ್ಥದ ಸಂಬಂಧದಿಂದ ಕೋಟಿಮಡಿಯಷ್ಟಾಗುವುವು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ
ಶ್ರೀ ಸ್ಕಾಂದಮಹಾಪುರಾಣದ ಐದನೆಯ ಆವಂತ್ಯಖಂಡದ ಮೂರನೆಯ ರೇವಾಖಂಡದಲ್ಲಿ
"ಕೋಟಿತೀರ್ಥಮಹಾತ್ಮ್ಯವರ್ಣನ"ವೆಂಬ
ಇನ್ನೂರಮೂರನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

# ಅಥ ಚತುರಧಿಕದ್ವಿಶತತಮೋಽಧ್ಯಾಯಃ

## ಪೈತಾಮಹತೀರ್ಥಮಾಹಾತ್ಮ್ಯವರ್ಣನಂ

ಶ್ರೀ ಮಾರ್ಕಂಡೇಯ ಉವಾಚ :—

ಭೃಗುತೀರ್ಥಂ ತತೋ ಗಚ್ಛೇತ್ತೀರ್ಥರಾಜಮನುತ್ತಮಂ ।
ಪೈತಾಮಹಂ ಮಹಾಪುಣ್ಯಂ ಸರ್ವಪಾತಕನಾಶನಂ ॥ ೧ ॥
ಬ್ರಹ್ಮಣಾ ತತ್ರ ತೀರ್ಥೇ ತು ಪುರಾ ವರ್ಷಶತತ್ರಯಂ ।
ಆರಾಧನಂ ಕೃತಂ ಶಂಭೋಃ ಕಸ್ಮಿಂಶ್ಚಿತ್ಕಾರಣಾಂತರೇ ॥ ೨ ॥

ಯುಧಿಷ್ಠಿರ ಉವಾಚ :—

ಕಿಮರ್ಥಂ ಮುನಿಶಾರ್ದೂಲ ಬ್ರಹ್ಮಾ ಲೋಕಪಿತಾಮಹಃ ।
ಆರಾಧಯದ್ದೇವದೇವಂ ಮಹಾಭಕ್ತ್ಯಾ ಮಹೇಶ್ವರಂ ॥ ೩ ॥
ಆರಾಧ್ಯಃ ಸರ್ವಭೂತಾನಾಂ ಜಗದ್ಭರ್ತಾ ಜಗದ್ಗುರುಃ ।
ಶ್ರೋತವ್ಯಂ ಶ್ರೋತುಮಿಚ್ಛಾಮಿ ಮಹದಾಶ್ಚರ್ಯಮುತ್ತಮಂ ॥ ೪ ॥
ಧರ್ಮಪುತ್ರವಚಃ ಶ್ರುತ್ವಾ ಮಾರ್ಕಂಡೇಯೋ ಮುನೀಶ್ವರಃ ।
ಕಥಯಾಮಾಸ ತದ್ವೃತ್ತಮಿತಿಹಾಸಂ ಪುರಾತನಂ ॥ ೫ ॥

---

### ಕನ್ನಡದ ಅನುವಾದ

#### ಪೈತಾಮಹತೀರ್ಥಮಾಹಾತ್ಮ್ಯವರ್ಣನ

೧. ಶ್ರೀ ಮಾರ್ಕಂಡೇಯನು ಹೇಳುತ್ತಾನೆ:—ಅನಂತರ ಬ್ರಹ್ಮಸಂಬಂಧಿಯೂ ಸಕಲ ಪಾಪನಾಶಕವೂ ಆದ ಭೃಗುತೀರ್ಥಕ್ಕೆ ಹೋಗಬೇಕು.

೨. ಹಿಂದೆ ಬ್ರಹ್ಮನು ಆ ತೀರ್ಥದಲ್ಲಿ ಯಾವುದೋ ಒಂದು ಕಾರಣದಿಂದ ಮೂರು ವರ್ಷಗಳಕಾಲ ಶಂಕರನನ್ನು ಆರಾಧಿಸಿದನು.

೩–೪. ಯುಧಿಷ್ಠಿರನು ಹೇಳುತ್ತಾನೆ :—ಮುನಿವರ್ಯನೆ! ಲೋಕ ಪಿತಾಮಹನೂ, ಸಕಲ ಪ್ರಾಣಿಗಳಿಗೆ ಪೂಜ್ಯನೂ, ಜಗದ್ರಕ್ಷಕನೂ, ಜಗದ್ಗುರುವೂ ಆದ ಬ್ರಹ್ಮನು ಮಹೇಶ್ವರನನ್ನು ಅತಿಶಯ ಭಕ್ತಿಯಿಂದ ಏಕೆ ಪೂಜಿಸಿದನು? ಶ್ರವಣಾರ್ಹವಾದ ಈ ಆಶ್ಚರ್ಯವನ್ನು ಕೇಳಬಯಸುವೆನು.

೫. ಮಾರ್ಕಂಡೇಯ ಮುನೀಶ್ವರನು ಧರ್ಮರಾಜನ ಆ ಮಾತನ್ನು ಕೇಳಿ ಬ್ರಹ್ಮನ ಆ ಇತಿಹಾಸವನ್ನು ಹೇಳಿದನು.

ಮಾರ್ಕಂಡೇಯ ಉವಾಚ :—

ಸ್ವಪುತ್ರಿಕಾಮಭಿಗಂತುಮಿಚ್ಛನ್ಪೂರ್ವಂ ಪಿತಾಮಹಃ ।
ಶಪ್ತಸ್ತು ದೇವದೇವೇನ ಕೋಪಾವಿಷ್ಟೇನ ಸತ್ತಮ ॥ ೬ ॥
ವೇದಾಸ್ತವ ವಿನಶ್ಯಂತಿ ಜ್ಞಾನಂ ಚ ಕಮಲಾಸನ ।
ಅಪೂಜ್ಯಃ ಸರ್ವಲೋಕಾನಾಂ ಭವಿಷ್ಯಸಿ ನ ಸಂಶಯಃ ॥ ೭ ॥
ಏವಂ ದತ್ತೇ ತತಃ ಶಾಪೇ ಬ್ರಹ್ಮಾ ಖೇದಾವೃತಸ್ತದಾ ।
ರೇವಾಯಾ ಉತ್ತರೇ ಕೂಲೇ ಸ್ನಾತ್ವಾ ವರ್ಷಶತತ್ರಯಂ ।
ತೋಷಯಾಮಾಸ ದೇವೇಶಂ ತುಷ್ಟಃ ಪ್ರೋವಾಚ ಶಂಕರಃ ॥ ೮ ॥
ಪೂಜ್ಯಸ್ತ್ವಂ ಭವಿತಾ ಲೋಕೇ ಪ್ರಾಪ್ತೇ ಪರ್ವಣಿ ಪರ್ವಣಿ ।
ಅಹಮತ್ರ ಚ ವತ್ಸ್ಯಾಮಿ ದೇವೈಶ್ಚ ಪಿತೃಭಿಃ ಸಹ ॥ ೯ ॥

ಶ್ರೀ ಮಾರ್ಕಂಡೇಯ ಉವಾಚ :—

ತದಾಪ್ರಭೃತಿ ತತ್ತೀರ್ಥಂ ಖ್ಯಾತಿಂ ಪ್ರಾಪ್ತಂ ಪಿತಾಮಹಾತ್ ।
ಸರ್ವಪಾಪಹರಂ ಪುಣ್ಯಂ ಸರ್ವತೀರ್ಥೇಷ್ವನುತ್ತಮಂ ॥ ೧೦ ॥
ತತ್ರ ಭಾದ್ರಪದೇ ಮಾಸಿ ಕೃಷ್ಣಪಕ್ಷೇ ವಿಶೇಷತಃ ।
ಅಮಾವಾಸ್ಯಾಂ ತು ಯಃ ಸ್ನಾತ್ವಾ ತರ್ಪಯೇತ್ಪಿತೃದೇವತಾಃ ॥ ೧೧ ॥

---

೬. ಮಾರ್ಕಂಡೇಯನು ಹೇಳುತ್ತಾನೆ:—ಹಿಂದೆ ಪಿತಾಮಹನು ತನ್ನ ಪುತ್ರಿಯಾದ ಸರಸ್ವತಿಯನ್ನು ಸೇರಬಯಸಲು ಕುಪಿತನಾದ ಶಂಕರನು ಹೀಗೆ ಶಪಿಸಿದನು.

೭. ಎಲೈ ಬ್ರಹ್ಮನೆ! ನಿನ್ನ ವೇದಗಳೂ, ಜ್ಞಾನವೂ ನಾಶವಾಗುವುವು. ನಿಶ್ಚಯವಾಗಿಯೂ ನೀನು ಸಕಲ ಲೋಕಗಳಿಗೆ ಅಪೂಜ್ಯನಾಗುವೆ.

೮. ಶಂಕರನು ಹೀಗೆ ಶಪಿಸಲು ಬ್ರಹ್ಮನು ಖಿನ್ನನಾಗಿ ನರ್ಮದಾನದಿಯ ಉತ್ತರದಡದಲ್ಲಿ ಮಿಂದು ಮುನ್ನೂರು ವರ್ಷಗಳ ಕಾಲ ಶಂಕರನನ್ನು ಸಂತೋಷಗೊಳಿಸಿದನು. ಸಂತುಷ್ಟನಾದ ಶಂಕರನು ಇಂತೆಂದನು.

೯. ನೀನು ಲೋಕದಲ್ಲಿ ಪ್ರತಿ ಪರ್ವಕಾಲದಲ್ಲಿಯೂ ಪೂಜ್ಯನಾಗುವೆ. ನಾನು ದೇವಪಿತೃಗಳೊಡನೆ ಇಲ್ಲಿ ವಾಸಮಾಡುವೆನು.

೧೦. ಶ್ರೀ ಮಾರ್ಕಂಡೇಯನು ಹೇಳುತ್ತಾನೆ:—ಅದು ಮೊದಲ್ಗೊಂಡು ಸಕಲ ಪಾಪನಾಶಕವೂ, ಪುಣ್ಯಕರವೂ, ಸಕಲ ತೀರ್ಥಗಳಲ್ಲಿ ಉತ್ತಮವೂ ಆದ ಆ ತೀರ್ಥವು ಪಿತಾಮಹತೀರ್ಥವೆಂದು ವಿಖ್ಯಾತವಾಯಿತು.

೧೧–೧೨. ಆ ತೀರ್ಥದಲ್ಲಿ ಭಾದ್ರಪದಮಾಸದ ಕೃಷ್ಣಪಕ್ಷದ ಅಮಾವಾಸ್ಯೆಯ ದಿನ ಮಿಂದು ಪಿತೃಗಳಿಗೆ ಪಿಂಡಪ್ರದಾನಮಾಡುವುದರಿಂದಲೂ, ತರ್ಪಣ

ಪಿಂಡದಾನೇನ ಚೈಕೇನ ತಿಲತೋಯೇನ ವಾ ನೃಪ ।
ತೃಪ್ಯಂತಿ ದ್ವಾದಶಾಬ್ದಾನಿ ಪಿತರೋ ನಾಽತ್ರ ಸಂಶಯಃ ॥ ೧೨ ॥
ಕನ್ಯಾಗತೇ ತು ಯಸ್ತತ್ರ ನಿತ್ಯಂ ಶ್ರಾದ್ಧಪ್ರದೋ ಭವೇತ್ ।
ಅವಾಪ್ಯ ತೃಪ್ತಿಂ ತತ್ಪೂರ್ವೇ ವಲ್ಗಂತಿ ಚ ಹಸಂತಿ ಚ ॥ ೧೩ ॥
ಸರ್ವೇಷು ಪಿತೃತೀರ್ಥೇಷು ಶ್ರಾದ್ಧಂ ಕೃತ್ವಾಽಸ್ತಿ ಯತ್ಫಲಂ ।
ತತ್ಫಲಂ ಸಮವಾಪ್ನೋತಿ ದರ್ಶೇ ತತ್ರ ನ ಸಂಶಯಃ ॥ ೧೪ ॥
ಪೈತಾಮಹೇ ನರಃ ಸ್ನಾತ್ವಾ ಪೂಜಯನ್ಪಾರ್ವತೀಪತಿಂ ।
ಮುಚ್ಯತೇ ನಾಽತ್ರ ಸಂದೇಹಃ ಪಾತಕೈಶ್ಚೋಪಪಾತಕೈಃ ॥ ೧೫ ॥
ತತ್ರ ತೀರ್ಥೇ ಮೃತಾನಾಂ ತು ನರಾಣಾಂ ಭಾವಿತಾತ್ಮನಾಂ ।
ಅನಿವರ್ತಿಕಾ ಗತೀ ರಾಜನ್ರುದ್ರಲೋಕಾದಸಂಶಯಂ ॥ ೧೬ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಽಶೀತಿಸಾಹಸ್ರ್ಯಾಂ ಸಂಹಿತಾಯಾಂ
ಪಂಚಮೇ ಅವಂತ್ಯಖಂಡೇ ತೃತೀಯೇ ರೇವಾಖಂಡೇ
"ಪೈತಾಮಹತೀರ್ಥಮಾಹಾತ್ಮ್ಯವರ್ಣನಂ" ನಾಮ
ಚತುರಧಿಕದ್ವಿಶತತಮೋಽಧ್ಯಾಯಃ

---

ಮಾಡುವುದರಿಂದಲೂ ಪಿತೃಗಳು ಹನ್ನೆರಡು ವರ್ಷಕಾಲ ನಿಶ್ಚಯವಾಗಿಯೂ ತೃಪ್ತಿಗೊಳ್ಳುವರು.

೧೩. ಸೂರ್ಯನು ಕನ್ಯಾರಾಶಿಯನ್ನು ಹೊಂದಲು ಶ್ರಾದ್ಧಮಾಡಿದವನ ಪಿತೃಗಳು ತೃಪ್ತರಾಗಿ ಅವನನ್ನು ಶ್ಲಾಘಿಸಿ ಹಸನ್ಮುಖರಾಗುವರು.

೧೪. ಅಮಾವಾಸ್ಯೆಯ ದಿನ ಅಲ್ಲಿ ಶ್ರಾದ್ಧಮಾಡಿದವನು ಸಮಸ್ತ ಪಿತೃತೀರ್ಥಗಳಲ್ಲಿ ಶ್ರಾದ್ಧಮಾಡಿದ ಫಲವನ್ನು ಪಡೆಯುವನು.

೧೫. ಪಿತಾಮಹತೀರ್ಥದಲ್ಲಿ ಮಿಂದು ಶಂಕರನನ್ನು ಪೂಜಿಸಿದವನು ಮಹಾಪಾತಕೋಪಪಾತಕಗಳಿಂದ ನಿಶ್ಚಯವಾಗಿಯೂ ಮುಕ್ತನಾಗುವನು.

೧೬. ಮಹಾರಾಜ! ಆ ತೀರ್ಥದಲ್ಲಿ ಮೃತರಾದ ಜ್ಞಾನಿಗಳಿಗೆ ರುದ್ರಲೋಕದಲ್ಲಿ ಪುನರಾವೃತ್ತಿಯಿಲ್ಲದ ಗತಿಯುಂಟಾಗುವುದು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ
ಶ್ರೀ ಸ್ಕಾಂದಮಹಾಪುರಾಣದ ಐದನೆಯ ಅವಂತ್ಯಖಂಡದ ಮೂರನೆಯ ರೇವಾಖಂಡದಲ್ಲಿ
"ಪೈತಾಮಹತೀರ್ಥಮಾಹಾತ್ಮ್ಯವರ್ಣನ"ವೆಂಬ
ಇನ್ನೂರನಾಲ್ಕನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

## ಅಥ ಪಂಚಾಶಾಧಿಕದ್ವಿಶತತಮೋಽಧ್ಯಾಯಃ

### ಕುರ್ಕುರೀತೀರ್ಥಮಾಹಾತ್ಮ್ಯವರ್ಣನಂ

ಶ್ರೀ ಮಾರ್ಕಂಡೇಯ ಉವಾಚ :—

ಗಚ್ಛೇತ್ತತಃ ಕ್ಷೋಣಿನಾಥ ತೀರ್ಥಂ ಪರಮಶೋಭನಂ ।
ಕುರ್ಕುರೀನಾಮ ವಿಖ್ಯಾತಂ ಸರ್ವಪಾಪಪ್ರಣಾಶನಂ ॥ ೧ ॥
ಯಂ ಯಂ ಪ್ರಾರ್ಥಯತೇ ಕಾಮಂ ಪಶುಪುತ್ರಧನಾದಿಕಂ ।
ತಂ ತಂ ದದಾತಿ ದೇವೇಶೀ ಕುರ್ಕುರೀ ತೀರ್ಥದೇವತಾ ॥ ೨ ॥
ಕ್ಷೇತ್ರಪಾಲೋ ವಸೇತ್ತತ್ರ ಡೌಂಢೇಶೋ ನಾಮ ನಾಮತಃ ।
ತಸ್ಯ ಚಾರಾಧನಂ ಕೃತ್ವಾ ನಾರೀ ವಾ ಪುರುಷೋಽಪಿ ವಾ ।
ವಂದನಾದಪಿ ರಾಜೇಂದ್ರ ದೌರ್ಭಾಗ್ಯಂ ನಾಶಮಾಪ್ನುಯಾತ್ ॥ ೩ ॥
ಅಪುತ್ರೋ ಲಭತೇ ಪುತ್ರಮಧನೋ ಧನಮುತ್ತಮಂ ॥ ೪ ॥

---

## ಕನ್ನಡದ ಅನುವಾದ

### ಕುರ್ಕುರೀತೀರ್ಥಮಾಹಾತ್ಮ್ಯವರ್ಣನ

೧. ಶ್ರೀ ಮಾರ್ಕಂಡೇಯನು ಹೇಳುತ್ತಾನೆ:—ಮಹಾರಾಜ! ಅನಂತರ ಸಕಲ ಪಾಪಗಳನ್ನೂ ನಿವಾರಿಸುವ ಕುರ್ಕುರಿಯೆಂಬ ತೀರ್ಥಕ್ಕೆ ಹೋಗಬೇಕು.

೨. ಅಲ್ಲಿ ಮನುಷ್ಯನು ಪಶು, ಪುತ್ರ, ಧನ ಮೊದಲಾದ ಯಾವ ಯಾವ ಇಷ್ಟಾರ್ಥಗಳನ್ನು ಬಯಸುವನೊ, ಅವುಗಳೆಲ್ಲವನ್ನೂ ಕುರ್ಕುರಿಯೆಂಬ ತೀರ್ಥದೇವತೆಯು ಕೊಡುವಳು.

೩. ಆ ತೀರ್ಥದಲ್ಲಿ ಡೌಂಢೇಶನೆಂಬ ಕ್ಷೇತ್ರಪಾಲಕನು ವಾಸಿಸುವನು. ನಾರಿಯಾಗಲಿ, ಪುರುಷನಾಗಲಿ ಅವನನ್ನು ವಂದಿಸಿದರೆ ದೌರ್ಭಾಗ್ಯವು ಪರಿಹಾರವಾಗುವುದು.

೪. ಪುತ್ರರಿಲ್ಲದವನು ಪುತ್ರನನ್ನೂ, ಧನವಿಲ್ಲದವನು ಉತ್ತಮವಾದ ಧನವನ್ನೂ ಪಡೆಯುವನು.

**ನಾರೀ ನರಸ್ತಥಾಪ್ಯೇವಂ ಲಭತೇ ಕಾಮಮುತ್ತಮಂ ।**
**ಸ್ಪರ್ಶನಾದ್ದರ್ಶನಾತ್ತಸ್ಯ ತೀರ್ಥಸ್ಯ ವಿಧಿಪೂರ್ವಕಂ ॥ ೫ ॥**

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ
ಪಂಚಮೇ ಅವಂತ್ಯಖಂಡೇ ತೃತೀಯೇ ರೇವಾಖಂಡೇ
"ಕುರ್ಕುರೀತೀರ್ಥಮಾಹಾತ್ಮ್ಯವರ್ಣನಂ"ನಾಮ
ಪಂಚಾಶಧಿಕದ್ವಿಶತತಮೋಽಧ್ಯಾಯಃ

---

೫. ನಾರಿಯಾಗಲಿ, ನರನಾಗಲಿ ವಿಧಿಯಂತೆ ಆ ತೀರ್ಥವನ್ನು ಮುಟ್ಟುವುದರಿಂದಾಗಲಿ, ದರ್ಶನಮಾಡುವುದರಿಂದಾಗಲಿ ಉತ್ತಮವಾದ ಇಷ್ಟಾರ್ಥವನ್ನು ಹೊಂದುವನು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ
ಶ್ರೀ ಸ್ಕಾಂದಮಹಾಪುರಾಣದ ಐದನೆಯ ಅವಂತ್ಯಖಂಡದ ಮೂರನೆಯ ರೇವಾಖಂಡದಲ್ಲಿ
"ಕುರ್ಕುರೀತೀರ್ಥಮಹಾತ್ಮ್ಯವರ್ಣನ"ವೆಂಬ
ಇನ್ನೂರೈದನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

## ಅಥ ಷಡುತ್ತರದ್ವಿಶತತಮೋಽಧ್ಯಾಯಃ

### ದಶಕನ್ಯಾತೀರ್ಥಮಾಹಾತ್ಮ್ಯವರ್ಣನಂ

ಶ್ರೀ ಮಾರ್ಕಂಡೇಯ ಉವಾಚ :—

ಗಚ್ಛೇತ್ತತಃ ಕ್ಷೋಣಿನಾಥ ತೀರ್ಥಂ ಪರಮಶೋಭನಂ ।
ಸರ್ವಪಾಪಹರಂ ಪುಣ್ಯಂ ದಶಕನ್ಯೇತಿ ವಿಶ್ರುತಂ ।
ಮಹಾದೇವಕೃತಂ ಪುಣ್ಯಂ ಸರ್ವಕಾಮಫಲಪ್ರದಂ ॥ ೧ ॥
ತತ್ರ ತೀರ್ಥೇ ಮಹಾದೇವೋ ದಶಾಃ ಕನ್ಯಾ ಗುಣಾನ್ವಿತಾಃ ।
ಬ್ರಹ್ಮಣೋ ವರಯಾಮಾಸ ಹ್ಯುದ್ವಾಹೇನ ಯುಯೋಜ ಹ ॥ ೨ ॥
ತದಾ ಪ್ರಭೃತಿ ತತ್ತೀರ್ಥಂ ದಶಕನ್ಯೇತಿ ವಿಶ್ರುತಂ ।
ಸರ್ವಪಾಪಹರಂ ಪುಣ್ಯಮಕ್ಷಯಂ ಕೀರ್ತಿತಂ ಫಲಂ ॥ ೩ ॥
ತತ್ರ ತೀರ್ಥೇ ತು ಯಃ ಕನ್ಯಾಂ ದದಾತಿ ಸಮಲಂಕೃತಾಂ ।
ಪ್ರಾಪ್ನೋತಿ ಪುರುಷೋ ದತ್ವಾ ಯಥಾ ಶಕ್ತ್ಯಾ ಸ್ವಲಂಕೃತಾಂ ॥ ೪ ॥
ತೇನ ದಾನೋತ್ಥಪುಣ್ಯೇನ ಪೂತಾತ್ಮಾನೋ ನರಾಧಿಪ ।
ವಸಂತಿ ರೋಮಸಂಖ್ಯಾನಿ ವರ್ಷಾಣಿ ಶಿವಸನ್ನಿಧೌ ॥ ೫ ॥

---

### ಕನ್ನಡದ ಅನುವಾದ

#### ದಶಕನ್ಯಾತೀರ್ಥಮಾಹಾತ್ಮ್ಯವರ್ಣನ

೧. ಶ್ರೀ ಮಾರ್ಕಂಡೇಯನು ಹೇಳುತ್ತಾನೆ:—ಮಹಾರಾಜ! ಅನಂತರ ಅತ್ಯಂತ ಮನೋಹರವೂ, ಸಮಸ್ತ ಪಾಪಗಳನ್ನು ನಿವಾರಿಸುವುದೂ, ಪುಣ್ಯಕರವೂ, ಮಹಾದೇವನು ನಿರ್ಮಿಸಿರುವುದೂ, ಸಕಲೇಷ್ಟಾರ್ಥಗಳನ್ನು ಕೊಡುವುದೂ ಆದ ದಶಕನ್ಯಾತೀರ್ಥಕ್ಕೆ ಹೋಗಬೇಕು.

೨. ಆ ತೀರ್ಥದಲ್ಲಿ ಶಂಕರನು ಹತ್ತುಮಂದಿ ಗುಣಶಾಲಿನಿಯರಾದ ಬ್ರಹ್ಮಕನ್ಯೆಯರನ್ನು ವಿವಾಹವಿಧಿಯಿಂದ ಮದುವೆಯಾದನು.

೩. ಅದು ಮೊದಲ್ಗೊಂಡು ಆ ತೀರ್ಥವು ಸಕಲ ಪಾಪಗಳನ್ನು ನಿವಾರಿಸುವುದೂ, ಅಕ್ಷಯ ಫಲವನ್ನೀಯುವುದೂ ಆದ ದಶಕನ್ಯಾತೀರ್ಥವೆಂದು ವಿಖ್ಯಾತವಾಯಿತು.

೪–೫. ಆ ತೀರ್ಥದಲ್ಲಿ ಶಕ್ತ್ಯನುಸಾರ ಅಲಂಕರಿಸಿ ಕನ್ಯೆಯನ್ನು ದಾನಮಾಡುವವನು ಆ ದಾನದ ಪುಣ್ಯದಿಂದ ಪವಿತ್ರನಾಗಿ ರೋಮಸಂಖ್ಯೆಯಷ್ಟು ವರ್ಷಕಾಲ ಶಿವಸನ್ನಿಧಿಯಲ್ಲಿ ವಾಸಮಾಡುವನು.

ತತಃ ಕಾಲೇನ ಮಹತಾ ತ್ವಿಹಲೋಕೇ ನರೇಶ್ವರ ।
ಮಾನುಷ್ಯಂ ಪ್ರಾಪ್ಯ ದುಷ್ಪ್ರಾಪ್ಯಂ ಧನಕೋಟಿಪತಿರ್ಭವೇತ್ ॥ ೬ ॥
ತತ್ರ ತೀರ್ಥೇ ತು ಯೋ ಭಕ್ತ್ಯಾ ಸ್ನಾತ್ವಾ ವಿಪ್ರಾಯ ಕಾಂಚನಂ ।
ಸಂಪ್ರಯಚ್ಛತಿ ಶಾಂತಾಯ ಸೋಽತ್ಯಂತಂ ಸುಖಮಶ್ನುತೇ ॥ ೭ ॥
ವಾಚಿಕಂ ಮಾನಸಂ ವಾಽಪಿ ಕರ್ಮಜಂ ಯತ್ಪುರಾ ಕೃತಂ ।
ತತ್ಸರ್ವಂ ವಿಲಯಂ ಯಾತಿ ಸ್ವರ್ಣದಾನೇನ ಭಾರತ ॥ ೮ ॥
ನರೋ ದತ್ವಾ ಸುವರ್ಣಂ ಚ ಅಪಿ ವಾಲಾಗ್ರಮಾತ್ರಕಂ ।
ತತ್ರ ತೀರ್ಥೇ ದಿವಂ ಯಾತಿ ಮೃತೋ ನಾಽಸ್ತ್ಯತ್ರ ಸಂಶಯಃ ॥ ೯ ॥
ತತ್ರ ವಿದ್ಯಾಧರೈಃ ಸಿದ್ಧೈರ್ವಿಮಾನವರಮಾಸ್ಥಿತಃ ।
ಪೂಜ್ಯಮಾನೋ ವಸೇತ್ತಾವದ್ಯಾವದಾಭೂತಸಂಪ್ಲವಂ ॥ ೧೦ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿ ಸಾಹಸ್ರ್ಯಾಂ ಸಂಹಿತಾಯಾಂ
ಪಂಚಮೇ ಆವಂತ್ಯಖಂಡೇ ತೃತೀಯೇ ರೇವಾಖಂಡೇ
"ದಶಕನ್ಯಾತೀರ್ಥಮಾಹಾತ್ಮ್ಯವರ್ಣನಂ" ನಾಮ
ಷಡುತ್ತರದ್ವಿಶತತಮೋಽಧ್ಯಾಯಃ

---

೬. ಅನಂತರ ಬಹುಕಾಲದಮೇಲೆ ಈ ಲೋಕದಲ್ಲಿ ಹೊಂದಲಶಕ್ಯವಾದ ಮನುಷ್ಯಜನ್ಮವನ್ನು ಪಡೆದು ಕೋಟಿ ಧನಗಳಿಗೆ ಒಡೆಯನಾಗುವನು.

೭. ಆ ತೀರ್ಥದಲ್ಲಿ ಭಕ್ತಿಯಿಂದ ಮಿಂದು ಶಾಂತನಾದ ಬ್ರಾಹ್ಮಣನಿಗೆ ಕಾಂಚನವನ್ನು ದಾನಮಾಡುವವನು ಅತಿಶಯಸುಖವನ್ನು ಹೊಂದುವನು.

೮. ಯುಧಿಷ್ಠಿರ! ಈ ಸುವರ್ಣದಾನದಿಂದ ಹಿಂದೆ ಮಾಡಿದ ವಾಚಿಕ, ಮಾನಸಿಕ ಕರ್ಮಜನ್ಯವಾದ ಪಾಪಗಳು ನಾಶವಾಗುವುವು.

೯. ಅಲ್ಲಿ ಬಾಲದ ತುದಿಯಷ್ಟು ಚಿನ್ನವನ್ನಾದರೂ ದಾನಮಾಡಿದವನು ಮೃತನಾದ ಬಳಿಕ ಸ್ವರ್ಗಕ್ಕೆ ತೆರಳುವನು, ಸಂದೇಹವಿಲ್ಲ.

೧೦. ಆ ಸ್ವರ್ಗದಲ್ಲಿಯೂ ಉತ್ತಮವಾದ ವಿಮಾನದಲ್ಲಿ ಕುಳಿತು ಪ್ರಳಯ ಕಾಲದವರೆಗೆ ಸಿದ್ಧವಿದ್ಯಾಧರರಿಂದ ಪೂಜಿಸಲ್ಪಡುತ್ತ ವಾಸಿಸುವನು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ
ಶ್ರೀ ಸ್ಕಾಂದಮಹಾಪುರಾಣದ ಐದನೆಯ ಆವಂತ್ಯಖಂಡದ ಮೂರನೆಯ ರೇವಾಖಂಡದಲ್ಲಿ
"ದಶಕನ್ಯಾತೀರ್ಥಮಾಹಾತ್ಮ್ಯವರ್ಣನ"ವೆಂಬ
ಇನ್ನೂರಾರನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

## ಅಥ ಸಪ್ತಾಽಧಿಕದ್ವಿಶತತಮೋಽಧ್ಯಾಯಃ

### ಸುವರ್ಣಬಿಂದುತೀರ್ಥಮಾಹಾತ್ಮ್ಯವರ್ಣನಂ

ಶ್ರೀ ಮಾರ್ಕಂಡೇಯ ಉವಾಚ :—

ತಸ್ಯಾಗ್ರೇ ಪಾವನಂ ತೀರ್ಥಂ ಸ್ವರ್ಣಬಿಂದ್ವಿತಿ ವಿಶ್ರುತಂ ।
ಯತ್ರ ಸ್ನಾತ್ವಾ ದಿವಂ ಯಾಂತಿ ಮೃತಾಶ್ಚ ನ ಪುನರ್ಭವಂ ॥ ೧ ॥
ತತ್ರ ತೀರ್ಥೇ ತು ಯಃ ಸ್ನಾತ್ವಾ ದತ್ತೇ ವಿಪ್ರಾಯ ಕಾಂಚನಂ ।
ತೇನ ಯತ್ತು ಫಲಂ ಪ್ರೋಕ್ತಂ ತಚ್ಛೃಣುಷ್ವ ಮಹೀಪತೇ ॥ ೨ ॥
ಸರ್ವೇಷಾಮೇವ ರತ್ನಾನಾಂ ಕಾಂಚನಂ ರತ್ನಮುತ್ತಮಂ ।
ಅಗ್ನಿತೇಜಃಸಮುದ್ಭೂತಂ ತೇನ ತತ್ಪರಮಂ ಭುವಿ ॥ ೩ ॥
ತೇನೈವ ದತ್ತಾ ಪೃಥಿವೀ ಸಶೈಲವನಕಾನನಾ ।
ಸಪತ್ತನಪುರಾ ಸರ್ವಾ ಕಾಂಚನಂ ಯಃ ಪ್ರಯಚ್ಛತಿ ॥ ೪ ॥
ವಾಚಿಕಂ ಮಾನಸಂ ಪಾಪಂ ಕರ್ಮಣಾ ಯತ್ಪುರಾಕೃತಂ ।
ತತ್ಸರ್ವಂ ನಶ್ಯತಿ ಕ್ಷಿಪ್ರಂ ಸ್ವರ್ಣದಾನೇನ ಭಾರತ ॥ ೫ ॥

---

## ಕನ್ನಡದ ಅನುವಾದ

### ಸುವರ್ಣಬಿಂದು ತೀರ್ಥಮಾಹಾತ್ಮ್ಯವರ್ಣನ

೧. ಶ್ರೀ ಮಾರ್ಕಂಡೇಯನು ಹೇಳುತ್ತಾನೆ:—ಅದರ ಮೇಲ್ಭಾಗದಲ್ಲಿ ಸ್ವರ್ಣಬಿಂದುವೆಂಬ ಪವಿತ್ರವಾದ ತೀರ್ಥವಿದೆ. ಅದರಲ್ಲಿ ಮಿಂದ ಮಾನವರು ಸ್ವರ್ಗಕ್ಕೆ ತೆರಳುವರು. ಅವರು ಮೃತರಾದ ಬಳಿಕ ಮರಳಿ ಹುಟ್ಟುವುದಿಲ್ಲ.

೨. ಮಹಾರಾಜ! ಆ ತೀರ್ಥದಲ್ಲಿ ಮಿಂದು ಬ್ರಾಹ್ಮಣನಿಗೆ ಸುವರ್ಣವನ್ನು ದಾನಮಾಡುವವನಿಗೆ ಯಾವ ಫಲವುಂಟಾಗುವುದೆಂಬುದನ್ನು ಕೇಳು.

೩. ಸುವರ್ಣವು ಅಗ್ನಿಯ ತೇಜಸ್ಸಿನಿಂದ ಉಂಟಾಗಿರುವುದರಿಂದ ಇದು ಭೂಮಿಯಲ್ಲಿ ಉತ್ತಮರತ್ನವೆನ್ನಿಸಿಕೊಳ್ಳುವುದು.

೪. ಚಿನ್ನವನ್ನು ದಾನಮಾಡಿದವನು ಪರ್ವತ, ವನ, ಪಟ್ಟಣಗಳಿಂದ ಸಹಿತವಾದ ಭೂಮಿಯನ್ನು ದಾನಮಾಡಿದವನಂತಾಗುವನು.

೫. ಇಲ್ಲಿ ಸ್ವರ್ಣದಾನದಿಂದ ಹಿಂದೆ ಮಾಡಿದ ಮಾನಸ, ವಾಚಿಕ, ಕರ್ಮಕೃತವಾದ ಪಾಪವೆಲ್ಲ ಬೇಗನೆ ಪರಿಹಾರವಾಗುವುದು.

ಸ್ವರ್ಣದಾನಂ ತು ಯೋ ದತ್ವಾ ಹ್ಯಪಿ ವಾಲಾಗ್ರಮಾತ್ರಕಂ ।
ತತ್ರ ತೀರ್ಥೇ ಮೃತೋ ಯಾತಿ ದಿವಂ ನಾಽಸ್ತ್ಯತ್ರಸಂಶಯಃ ॥ ೬ ॥
ತತ್ರ ವಿದ್ಯಾಧರೈಃ ಸಿದ್ಧೈರ್ವಿಮಾನವರಮಾಸ್ಥಿತಃ ।
ಪೂಜ್ಯಮಾನೋ ವಸೇತ್ತಾವದ್ಯಾವದಾಭೂತಸಂಪ್ಲವಂ ॥ ೭ ॥
ಪೂರ್ಣೇ ತತ್ರ ತತಃ ಕಾಲೇ ಪ್ರಾಪ್ಯ ಮಾನುಷ್ಯಮುತ್ತಮಂ ।
ಸುವರ್ಣಕೋಟಿಸಹಿತೇ ಗೃಹೇ ವೈ ಜಾಯತೇ ದ್ವಿಜಃ ॥ ೮ ॥
ಸರ್ವವ್ಯಾಧಿವಿನಿರ್ಮುಕ್ತಃ ಸರ್ವಲೋಕೇಷು ಪೂಜಿತಃ ।
ಜೀವೇದ್ವರ್ಷಶತಂ ಸಾಗ್ರಂ ರಾಜಸಂಸತ್ಸುವಿಶ್ರುತಃ ॥ ೯ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ
ಪಂಚಮೇ ಆವಂತ್ಯಖಂಡೇ ತೃತೀಯೇ ರೇವಾಖಂಡೇ
"ಸುವರ್ಣಬಿಂದುತೀರ್ಥಮಾಹಾತ್ಮ್ಯವರ್ಣನಂ" ನಾಮ
ಸಪ್ತಾಽಧಿಕದ್ವಿಶತತಮೋಽಧ್ಯಾಯಃ

---

೬. ಇಲ್ಲಿ ಬಾಲದ ತುದಿಯಷ್ಟು ಚಿನ್ನವನ್ನಾದರೂ ದಾನಮಾಡಿದವನು ಸಹ ಮಡಿದ ತರುವಾಯ ನಿಶ್ಚಯವಾಗಿಯೂ ಸ್ವರ್ಗಕ್ಕೇ ತೆರಳುವನು.

೭. ಅಲ್ಲಿ ವಿಮಾನದಲ್ಲಿ ಕುಳಿತು ವಿದ್ಯಾಧರ ಸಿದ್ಧರಿಂದ ಪೂಜಿಸಲ್ಪಡುತ್ತ ಪ್ರಳಯಕಾಲದವರೆಗೆ ವಾಸಮಾಡುವನು.

೮. ಅಲ್ಲಿಯ ವಾಸದ ಅವಧಿಯು ಮುಗಿದಕೂಡಲೆ ಮನುಷ್ಯಜನ್ಮವನ್ನು ಪಡೆದು ಬ್ರಾಹ್ಮಣನಾಗಿ ಕೋಟಿ ಸುವರ್ಣದಿಂದ ಸಹಿತವಾದ ಮನೆಯಲ್ಲಿ ಜನಿಸುವನು.

೯. ಮತ್ತು ಸಮಸ್ತ ವ್ಯಾಧಿರಹಿತನೂ, ಸರ್ವಲೋಕಪೂಜ್ಯನೂ, ರಾಜಸಭೆಯಲ್ಲಿ ಪ್ರಸಿದ್ಧನೂ ಆಗಿ ನೂರುವರ್ಷಕಾಲ ಜೀವಿಸುವನು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ
ಶ್ರೀ ಸ್ಕಾಂದಮಹಾಪುರಾಣದ ಐದನೆಯ ಆವಂತ್ಯಖಂಡದ ಮೂರನೆಯ ರೇವಾಖಂಡದಲ್ಲಿ
"ಸುವರ್ಣಬಿಂದುತೀರ್ಥಮಾಹಾತ್ಮ್ಯವರ್ಣನ"ವೆಂಬ
ಇನ್ನೂರೇಳನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

# ಅಥಾಷ್ಟದ್ವಿಶತತಮೋಽಧ್ಯಾಯಃ

## ಋಣಮೋಚನತೀರ್ಥಮಾಹಾತ್ಮ್ಯವರ್ಣನಂ

ಶ್ರೀ ಮಾರ್ಕಂಡೇಯ ಉವಾಚ :—

ಭೂಮಿಪಾಲ ತತೋ ಗಚ್ಛೇತೀರ್ಥಂ ಪರಮಶೋಭನಂ ।
ವಿಖ್ಯಾತಂ ತ್ರಿಷು ಲೋಕೇಷು ಪಿತ್ರೂಣಾಮೃಣಮೋಚನಂ ॥ ೧ ॥
ತತ್ರ ಸ್ನಾತ್ವಾ ವಿಧಾನೇನ ಸಂತರ್ಪ್ಯ ಪಿತೃದೇವತಾಃ ।
ಮನುಷ್ಯಶ್ಚ ನೃಪಶ್ರೇಷ್ಠ ದಾನಂ ದತ್ವಾಽನೃಣೋಭವೇತ್ ॥ ೨ ॥
ಇಚ್ಛಂತಿ ಪಿತರಃ ಸರ್ವೇ ಸ್ವಾರ್ಥಹೇತೋಃ ಸುತಂ ಯತಃ ।
ಪುನ್ನಾಮ್ನೋ ನರಕಾತ್ಪುತ್ರೋಽಸ್ಮಾನಯಂ ಮೋಚಯಿಷ್ಯತಿ ॥ ೩ ॥
ಪಿಂಡದಾನಂ ಜಲಂ ತಾತ ಋಣಮುತ್ತಮಮುಚ್ಯತೇ ।
ಪಿತ್ರೂಣಾಂ ತದ್ಧಿ ವೈ ಪ್ರೋಕ್ತಮೃಣಂ ದೈವಮತಃ ಪರಂ ॥ ೪ ॥
ಅಗ್ನಿಹೋತ್ರಂ ತಥಾ ಯಜ್ಞಾಃ ಪಶುಬಂಧಾಸ್ತಥೇಷ್ಟಯಃ ।
ಇತಿ ದೇವಋಣಂ ಪ್ರೋಕ್ತಂ ಶೃಣು ಮಾನುಷ್ಯಕಂ ತತಃ ॥ ೫ ॥
ಬ್ರಾಹ್ಮಣೇಷು ಚ ತೀರ್ಥೇಷು ದೇವಾಯತನಕರ್ಮಸು ।
ಪ್ರತಿಶ್ರುತ್ಯ ದದೇತ್ತತ್ತದ್ವ್ಯವಹಾರಃ ಕೃತೋ ಯಥಾ ॥ ೬ ॥

---

## ಕನ್ನಡದ ಅನುವಾದ

### ಋಣಮೋಚನತೀರ್ಥಮಾಹಾತ್ಮ್ಯವರ್ಣನ

೧. ಶ್ರೀ ಮಾರ್ಕಂಡೇಯನು ಹೇಳುತ್ತಾನೆ:—ಮಹಾರಾಜ! ಅನಂತರ ಮೂರು ಲೋಕಗಳಲ್ಲಿ ಪ್ರಸಿದ್ಧವೂ, ಪಿತೃಗಳ ಋಣವನ್ನು ಪರಿಹರಿಸುವುದೂ, ಅತಿಶುಭಕರವೂ ಆದ ಋಣಮೋಚನತೀರ್ಥಕ್ಕೆ ಹೋಗಬೇಕು.

೨. ನೃಪವರ್ಯನೆ! ಮಾನವನು ಅಲ್ಲಿ ವಿಧಿಯಂತೆ ಮಿಂದು ಪಿತೃದೇವತೆಗಳಿಗೆ ತರ್ಪಣಮಾಡಿದರೆ ಋಣರಹಿತನಾಗುವನು.

೩. ಪಿತೃಗಳೆಲ್ಲರೂ ಪುತ್ರನು ಪುನ್ನಾಮನರಕದಿಂದ ತಮ್ಮನ್ನು ಕಾಪಾಡುವನೆಂದು ತಿಳಿದು ತಮ್ಮ ಪ್ರಯೋಜನಕ್ಕಾಗಿ ಪುತ್ರನನ್ನು ಬಯಸುವರು.

೪–೬. ಪಿಂಡದಾನ, ಜಲತರ್ಪಣ ಇವುಗಳು ಪಿತೃಋಣವೆನ್ನಿಸಿಕೊಳ್ಳುವುವು. ಅಗ್ನಿಹೋತ್ರ, ಯಜ್ಞ, ಪಶುಬಂಧ ಇಷ್ಟಿಗಳು ದೇವಋಣವಾಗಿರುವುವು. ಬ್ರಾಹ್ಮಣರಿಗೂ, ತೀರ್ಥ, ದೇವಾಲಯಗಳಲ್ಲಿಯೂ ದಾನಮಾಡುವುದು ಮನುಷ್ಯಋಣವೆನ್ನಿಸಿಕೊಳ್ಳುವುದು.

ಋಣತ್ರಯಮಿದಂ ಪ್ರೋಕ್ತಂ ಪುತ್ರಾಣಾಂ ಧರ್ಮನಂದನ ।
ಸತ್ಪುತ್ರಾಸ್ತೇ ತು ರಾಜೇಂದ್ರ ಸ್ನಾತಾಯ ಋಣಮೋಚನೇ ॥ ೭ ॥
ಋಣತ್ರಯಾದ್ವಿಮುಚ್ಯಂತೇ ಹ್ಯಪುತ್ರಾಃ ಪುತ್ರಿಣಸ್ತಥಾ ।
ತಸ್ಮಾತ್ತೀರ್ಥವರಂ ಪ್ರಾಪ್ಯ ಪುತ್ರೇಣ ನಿಯತಾತ್ಮನಾ ।
ಪಿತೃಭ್ಯಸ್ತರ್ಪಣಂ ಕಾರ್ಯಂ ಪಿಂಡದಾನಂ ವಿಶೇಷತಃ ॥ ೮ ॥
ತತ್ರ ತೀರ್ಥೇ ಹುತಂ ದತ್ತಂ ಗುರವಸ್ತೋಷಿತಾ ಯದಿ ।
ಮೃತಾನಾಂ ಸಪ್ತಜನ್ಮಾನಿ ಫಲಮಕ್ಷಯಮಶ್ನುತೇ ॥ ೯ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ
ಪಂಚಮೇಆವಂತ್ಯಖಂಡೇ ತೃತೀಯೇ ರೇವಾಖಂಡೇ
"ಋಣಮೋಚನತೀರ್ಥಮಾಹಾತ್ಮ್ಯವರ್ಣನಂ"
ನಾಮಾಷ್ಟದ್ವಿಶತತಮೋಽಧ್ಯಾಯಃ

---

೭. ಧರ್ಮರಾಜ! ಇವುಗಳು ಪುತ್ರರಿಗೆ ಒದಗುವ ಋಣಗಳು. ಈ ಋಣವನ್ನು ಪರಿಹರಿಸುವವರೇ ಸತ್ಪುತ್ರರು.

೮. ಆದ್ದರಿಂದ ಪುತ್ರನು ಜಿತೇಂದ್ರಿಯನಾಗಿ ಪಿತೃಗಳಿಗೆ ಪಿಂಡಪ್ರದಾನವನ್ನೂ, ತರ್ಪಣವನ್ನೂ ಮಾಡಬೇಕು. ಆದ್ದರಿಂದ ಪುತ್ರವಂತರೂ, ಪುತ್ರರಿಲ್ಲದವರೂ ಋಣಮುಕ್ತರಾಗುವರು.

೯. ಆ ತೀರ್ಥದಲ್ಲಿ ಮಾಡಿದ ಹೋಮ, ದಾನ, ಗುರುತೋಷಣಗಳಿಂದ ಪಿತೃಗಳು ಏಳುಜನ್ಮಗಳಲ್ಲಿ ಅಕ್ಷಯಫಲವನ್ನು ಅನುಭವಿಸುವರು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ
ಶ್ರೀ ಸ್ಕಾಂದಮಹಾಪುರಾಣದ ಐದನೆಯ ಆವಂತ್ಯಖಂಡದ ಮೂರನೆಯ ರೇವಾಖಂಡದಲ್ಲಿ
"ಋಣಮೋಚನತೀರ್ಥಮಾಹಾತ್ಮ್ಯವರ್ಣನ"ವೆಂಬ
ಇನ್ನೂರೆಂಟನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

## ಅಥ ನವಾಽಧಿಕದ್ವಿಶತತಮೋಽಧ್ಯಾಯಃ

### ಭಾರಭೂತಿತೀರ್ಥಮಾಹಾತ್ಮ್ಯವರ್ಣನಂ

ಶ್ರೀ ಮಾರ್ಕಂಡೇಯ ಉವಾಚ :—

ತಸ್ಯೈವಾನಂತರಂ ಪಾರ್ಥ ಪುಷ್ಕಲೀತೀರ್ಥಮುತ್ತಮಂ ।
ತತ್ರ ತೀರ್ಥೇ ನರಃ ಸ್ನಾತ್ವಾ ಹ್ಯಶ್ವಮೇಧಫಲಂ ಲಭೇತ್ ॥ ೧ ॥
ಕ್ಷಮಾನಾಥಂ ತತೋ ಗಚ್ಛೇತ್ತೀರ್ಥಂ ತ್ರೈಲೋಕ್ಯವಿಶ್ರುತಂ ।
ದೇವದಾನವಗಂಧರ್ವೈರಪ್ಸರೋಭಿಶ್ಚ ಸೇವಿತಂ ॥ ೨ ॥
ತತ್ರ ತಿಷ್ಠತಿ ದೇವೇಶಃ ಸಾಕ್ಷಾದ್ರುದ್ರೋ ಮಹೇಶ್ವರಃ ।
ಭಾರೇಣ ಮಹತಾ ಜಾತೋ ಭಾರಭೂತಿರಿತಿ ಸ್ಮೃತಃ ॥ ೩ ॥

ಯುಧಿಷ್ಠಿರ ಉವಾಚ :—

ಭಾರಭೂತೀತಿ ವಿಖ್ಯಾತಂ ತೀರ್ಥಂ ಸರ್ವಗುಣಾನ್ವಿತಂ ।
ಶ್ರೋತುಮಿಚ್ಛಾಮಿ ವಿಪ್ರೇಂದ್ರ ಪರಂ ಕೌತೂಹಲಂ ಹಿ ಮೇ ॥ ೪ ॥

ಶ್ರೀ ಮಾರ್ಕಂಡೇಯ ಉವಾಚ :—

ಭಾರಭೂತಿಸಮುತ್ಪತ್ತಿಂ ಶೃಣು ಪಾಂಡವಸತ್ತಮ ।
ವಿಸ್ತರೇಣ ಯಥಾ ಪ್ರೋಕ್ತಾ ಪುರಾ ದೇವೇನ ಶಂಭುನಾ ॥ ೫ ॥

---

### ಕನ್ನಡದ ಅನುವಾದ

#### ಭಾರಭೂತಿತೀರ್ಥಮಾಹಾತ್ಮ್ಯವರ್ಣನ

೧. ಶ್ರೀ ಮಾರ್ಕಂಡೇಯನು ಹೇಳುತ್ತಾನೆ:—ಯುಧಿಷ್ಠಿರ! ಅದರ ಸಮೀಪದಲ್ಲಿ ಉತ್ತಮವಾದ ಪುಷ್ಕಲೀತೀರ್ಥವಿರುವುದು. ಆ ತೀರ್ಥದಲ್ಲಿ ಮಿಂದ ಮಾನವನು ಅಶ್ವಮೇಧಯಾಗದ ಫಲವನ್ನು ಹೊಂದುವನು.

೨. ಅನಂತರ ದೇವ, ದಾನವ, ಗಂಧರ್ವರಿಂದಲೂ, ಅಪ್ಸರೆಯರಿಂದಲೂ ಸೇವಿತವಾದ ಕ್ಷಮಾನಾಥತೀರ್ಥಕ್ಕೆ ಹೋಗಬೇಕು.

೩. ಅಲ್ಲಿ ದೇವೇಶನಾದ ಶಂಕರನು ನೆಲೆಸಿರುವನು. ಅವನು ಮಹಾಭಾರದಿಂದ ಹುಟ್ಟಿದ್ದರಿಂದ ಭಾರಭೂತಿಯೆಂದು ಹೆಸರನ್ನು ಪಡೆದಿರುವನು.

೪. ಯುಧಿಷ್ಠಿರನು ಹೇಳುತ್ತಾನೆ:–ವಿಪ್ರವರ್ಯನೆ! ಸಕಲ ಗುಣಗಳಿಂದ ಕೂಡಿರುವ ಭಾರಭೂತಿಯೆಂಬ ತೀರ್ಥವನ್ನು ಕುರಿತ ಆಖ್ಯಾನವನ್ನು ಕೇಳಲು ನನಗೆ ಅತ್ಯಂತ ಕುತೂಹಲವುಂಟಾಗಿದೆ.

೫. ಶ್ರೀ ಮಾರ್ಕಂಡೇಯನು ಹೇಳುತ್ತಾನೆ:—ಯುಧಿಷ್ಠಿರ! ಹಿಂದೆ ಶಂಕರನು ಹೇಳಿದಂತೆ ಭಾರಭೂತಿಯ ಉತ್ಪತ್ತಿಯನ್ನು ಹೇಳುವೆನು ; ಕೇಳು.

ಆಸೀತ್ಕೃತಯುಗೇ ವಿಪ್ರೋ ವೇದವೇದಾಂಗಪಾರಗಃ ।
ವಿಷ್ಣುಶರ್ಮೇತಿ ವಿಖ್ಯಾತಃ ಸರ್ವಶಾಸ್ತ್ರಾರ್ಥಪಾರಗಃ ॥ ೬ ॥
ಕ್ಷಮಾ ದಮೋ ದಯಾ ದಾನಂ ಸತ್ಯಂ ಶೌಚಂ ಧೃತಿಸ್ತಥಾ ।
ವಿದ್ಯಾ ವಿಜ್ಞಾನಮಾಸ್ತಿಕ್ಯಂ ಸರ್ವಂ ತಸ್ಮಿನ್ಪ್ರತಿಷ್ಠಿತಂ ॥ ೭ ॥
ಈದೃಗ್ಗುಣಾ ಹಿ ಯೇ ವಿಪ್ರಾ ಭವಂತಿ ನೃಪಸತ್ತಮ ।
ಪತಿತಾನ್ನರಕೇ ಘೋರೇ ತಾರಯಂತಿ ಪಿತ್ರೂಂಸ್ತು ತೇ ॥ ೮ ॥
ಇಂದ್ರಿಯಾಲ್ಲೋಲುಪಾ ವಿಪ್ರಾ ಯೇ ಭವಂತಿ ನೃಪೋತ್ತಮ ।
ಪತಂತಿ ನರಕೇ ಘೋರೇ ರೌರವೇ ಪಾಪಮೋಹಿತಾಃ ॥ ೯ ॥

ಯೇ ಕ್ಷಾಂತದಾಂತಾಃ ಶ್ರುತಿಪೂರ್ಣಕರ್ಣಾ
ಜಿತೇಂದ್ರಿಯಾಃ ಪ್ರಾಣಿವಧಾನ್ನಿವೃತ್ತಾಃ ।
ಪ್ರತಿಗ್ರಹೇ ಸಂಕುಚಿತಾಗ್ರಹಸ್ತಾ
ಸ್ತೇ ಬ್ರಾಹ್ಮಣಾಸ್ತಾರಯಿತುಂ ಸಮರ್ಥಾಃ ॥ ೧೦ ॥

ಏವಂ ಗುಣಗಣಾಕೀರ್ಣೋ ಬ್ರಾಹ್ಮಣೋ ನರ್ಮದಾತಟೇ ।
ವಸತೇ ಬ್ರಾಹ್ಮಣೈಃ ಸಾರ್ಧಂ ಶಿಲೋಂಛವೃತ್ತಿಜೀವಿಭಿಃ ॥ ೧೧ ॥
ತಾದೃಶಂ ಬ್ರಾಹ್ಮಣಂ ಜ್ಞಾತ್ವಾ ದೇವದೇವೋ ಮಹೇಶ್ವರಃ ।
ದ್ವಿಜರೂಪಧರೋ ಭೂತ್ವಾ ತಸ್ಯಾಶ್ರಮಮಗಾತ್ಸ್ವಯಂ ॥ ೧೨ ॥

---

೬. ಹಿಂದೆ ಕೃತಯುಗದಲ್ಲಿ ವೇದವೇದಾಂಗಪಾರಂಗತನೂ, ಸಕಲ ಶಾಸ್ತ್ರನಿಪುಣನೂ ಆದ ವಿಷ್ಣುಶರ್ಮನೆಂಬ ಬ್ರಾಹ್ಮಣನಿದ್ದನು.

೭. ಅವನಲ್ಲಿ ಕ್ಷಮಾ, ದಮ, ದಯೆ, ದಾನ, ಸತ್ಯ, ಶೌಚ, ಧೃತಿ, ವಿದ್ಯಾ, ವಿಜ್ಞಾನ, ಆಸ್ತಿಕ್ಯ ಇವುಗಳು ನೆಲೆಸಿದ್ದುವು.

೮–೯. ಇಂತಹ ಬ್ರಾಹ್ಮಣನು ಘೋರ ನರಕದಲ್ಲಿ ಪತಿತರಾದ ಪಿತೃಗಳನ್ನು ಉದ್ಧರಿಸುವರು. ಇಂದ್ರಿಯಲೋಲುಪರಾದ ಬ್ರಾಹ್ಮಣರು ಪಾಪಮೋಹಿತರಾಗಿ ಘೋರ ನರಕದಲ್ಲಿ ಬೀಳುವರು.

೧೦. ಕ್ಷಮಾದಮವುಳ್ಳವರೂ, ಶಾಸ್ತ್ರಶ್ರವಣವನ್ನು ಮಾಡಿದವರೂ, ಜಿತೇಂದ್ರಿಯರೂ, ಪ್ರಾಣಿಹಿಂಸೆಮಾಡದವರೂ, ದಾನವನ್ನು ತೆಗೆದುಕೊಳ್ಳುವುದರಲ್ಲಿ ಸಂಕೋಚವುಳ್ಳವರೂ ಆದ ಬ್ರಾಹ್ಮಣರು ನರಕವನ್ನು ದಾಟಿಸಲು ಶಕ್ತರು.

೧೧. ಇಂತಹ ಗುಣಗಳ ಸಮೂಹವುಳ್ಳ ಆ ಬ್ರಾಹ್ಮಣನು ನರ್ಮದಾ ನದಿಯ ತೀರದಲ್ಲಿ ಕಾಳಾರಿಸಿಕೊಂಡು ಜೀವಿಸುತ್ತಿದ್ದ ಬ್ರಾಹ್ಮಣರೊಡನೆ ವಾಸ ಮಾಡುತ್ತಿದ್ದನು.

೧೨. ದೇವತೆಗಳಿಗೊಡೆಯನಾದ ಶಂಕರನು ಅಂತಹ ಬ್ರಾಹ್ಮಣನನ್ನು ತಿಳಿದು ದ್ವಿಜರೂಪವನ್ನು ತಾಳಿ ಅವನ ಆಶ್ರಮಕ್ಕೆ ಹೋದನು.

ದೃಷ್ಟ್ವಾಂ ತಂ ಬ್ರಾಹ್ಮಣೈಃಸಾರ್ಧಮುಚ್ಚರಂತಂ ಪದಕ್ರಮಂ ।
ಅಭಿವಾದಯತೇ ವಿಪ್ರಂ ಸ್ವಾಗತೇನ ಚ ಪೂಜಿತಃ ॥ ೧೩ ॥
ಪ್ರೋವಾಚ ತಂ ಮುಹೂರ್ತೇನ ಬ್ರಾಹ್ಮಣೋ ವಿಸ್ಮಯಾನ್ವಿತಃ ।
ಕಿಮುಥ ತದ್ವಟೋ ಬ್ರೂಹಿ ಕಿಂ ಕರೋಮಿ ತವೇಪ್ಸಿತಂ ॥ ೧೪ ॥

ವಟುರುವಾಚ :—

ವಿದ್ಯಾರ್ಥಿನಮನುಪ್ರಾಪ್ತಂ ವಿದ್ಧಿ ಮಾಂ ದ್ವಿಜಸತ್ತಮ ।
ದದಾಸಿ ಯದಿ ಮೇ ವಿದ್ಯಾಂ ತತಃ ಸ್ಥಾಸ್ಯಾಮಿ ತೇ ಗೃಹೇ ॥ ೧೫ ॥

ಬ್ರಾಹ್ಮಣ ಉವಾಚ :—

ಸರ್ವೇಷಾಮೇವ ವಿಪ್ರಾಣಾಂ ವಟೋ ತ್ವಂ ಗೋತ್ರ ಉತ್ತಮೇ ।
ದಾನಾನಾಂ ಪರಮಂ ದಾನಂ ಕಥಂ ವಿದ್ಯಾ ಚ ದೀಯತೇ ॥ ೧೬ ॥
ಗುರುಶುಶ್ರೂಷಯಾ ವಿದ್ಯಾ ಪುಷ್ಕಲೇನ ಧನೇನ ವಾ ।
ಅಥವಾ ವಿದ್ಯಯಾ ವಿದ್ಯಾ ಭವತೀಹ ಫಲಪ್ರದಾ ॥ ೧೭ ॥

ವಟುರುವಾಚ :—

ಯಥಾಽನ್ಯೇ ಬಾಲಕಾಃ ಸ್ನಾತಾಃ ಶುಶ್ರೂಷಂತಿ ಹ್ಯಹರ್ನಿಶಂ ।
ತಥಾಽಹಂ ವಟುಭಿಃ ಸಾರ್ಧಂ ಶುಶ್ರೂಷಾಮಿ ನ ಸಂಶಯಃ ॥ ೧೮ ॥

---

೧೩. ಪದಕ್ರಮವನ್ನು ಬ್ರಾಹ್ಮಣರೊಡನೆ ಉಚ್ಚರಿಸುತ್ತಿರುವ ಆ ಬ್ರಾಹ್ಮಣನನ್ನು ನೋಡಿ ಆ ವಟುರೂಪಧರನಾದ ಶಂಕರನು ವಂದಿಸಿ ಅವನಿಂದ ಸ್ವಾಗತಪೂರ್ವಕ ಪೂಜಿಸಲ್ಪಟ್ಟನು.

೧೪. ಆ ಬ್ರಾಹ್ಮಣನು ಆಶ್ಚರ್ಯದಿಂದ ಸ್ವಲ್ಪಹೊತ್ತಿನಮೇಲೆ "ವಟುವೆ! ನಿನ್ನ ಇಷ್ಟಾರ್ಥವನ್ನು ತಿಳಿಸು. ಅದನ್ನು ಕೊಡುವೆನು" ಎಂದನು.

೧೫. ವಟುವು ಹೇಳುತ್ತಾನೆ:—ದ್ವಿಜವರ್ಯನೆ! ನಾನು ವಿದ್ಯಾರ್ಥಿಯಾಗಿ ಬಂದಿರುವೆನೆಂದು ತಿಳಿ. ನನಗೆ ನೀನು ವಿದ್ಯೆಯನ್ನು ದಾನಮಾಡುವುದಾದರೆ ನಿನ್ನ ಮನೆಯಲ್ಲಿಯೆ ವಾಸಮಾಡುವೆನು.

೧೬. ಬ್ರಾಹ್ಮಣನು ಹೇಳುತ್ತಾನೆ:—ವಟುವೆ! ನೀನು ಸಮಸ್ತ ಬ್ರಾಹ್ಮಣರಲ್ಲಿ ಉತ್ತಮ ಗೋತ್ರದವನಾಗಿರುವೆ. ವಿದ್ಯಾದಾನವು ದಾನಗಳಲ್ಲಿ ಉತ್ತಮವಾದುದು. ಆ ವಿದ್ಯೆಯನ್ನು ನಿನಗೆ ಹೇಗೆ ದಾನಮಾಡಲಿ.

೧೭. ಲೋಕದಲ್ಲಿ ವಿದ್ಯೆಯು ಗುರುಸೇವೆಯಿಂದಾಗಲಿ, ಅಧಿಕ ಧನದಿಂದಾಗಲಿ, ವಿದ್ಯಾವಿನಿಯಮದಿಂದಾಗಲಿ ಫಲವನ್ನೀಯುವುದು.

೧೮. ವಟುವು ಹೇಳುತ್ತಾನೆ:—ಬ್ರಾಹ್ಮಣೋತ್ತಮನೆ! ಸ್ನಾತಕರಾದ ಇತರ ಬಾಲಕರು ಹಗಲುರಾತ್ರಿ ಹೇಗೆ ನಿನ್ನನ್ನು ಸೇವಿಸುವರೊ, ಹಾಗೆಯೇ ನಾನು ವಟುಗಳೊಡನೆ ನಿನ್ನನ್ನು ನಿಶ್ಚಯವಾಗಿಯೂ ಸೇವಿಸುವೆನು.

ತಥೇತಿ ಚೋಕ್ತ್ವಾ ವಿಪ್ರೇಂದ್ರಃ ಪಾಠಯಂಸ್ತಾಂ ದಿನೇದಿನೇ ।
ವರ್ತತೇ ಸಹಶಿಷ್ಯೈಃ ಸ ಶಿಲೋಂಛಾನುಪಹಾರಯನ್ ॥ ೧೯ ॥
ತತಃ ಕತಿಪಯಾಽಹೋಭಿಃ ಪ್ರೋಕ್ತೋ ವಟುಭಿರೀಶ್ವರಃ ।
ಪಚನಾದ್ಯಂ ವಟೋ ಕರ್ಮ ಕುರು ಕ್ರಮತ ಆಗತಂ ॥ ೨೦ ॥
ತಥೇತಿ ಚೋಕ್ತೋ ದೇವೇಶೋ ಭಾರಗ್ರಾಮಮುಪಾಗತಃ ।
ಧ್ಯಾತ್ವಾ ವನಸ್ಪತೀಃ ಸರ್ವಾ ಇದಂ ವಚನಮಬ್ರವೀತ್ ॥ ೨೧ ॥
ಯಾವದಾಗಚ್ಛತೇ ವಿಪ್ರೋ ವಟುಭಿಃ ಸಹಮಂದಿರಂ ।
ಅದರ್ಶನಾಭಿಃ ಕರ್ತವ್ಯಂ ತಾವದನ್ನಂ ಸುಸಂಸ್ಕೃತಂ ॥ ೨೨ ॥
ಏವಮುಕ್ತ್ವಾ ತು ತಾಃ ಸರ್ವಾ ವಿಶ್ವರೂಪೋ ಮಹೇಶ್ವರಃ ।
ಕ್ರೀಡನಾರ್ಥಂ ಗತಸ್ತತ್ರ ವಟುವೇಷಧರಃ ಪೃಥಕ್ ॥ ೨೩ ॥
ದೃಷ್ಟ್ವಾ ಸಮಾಗತಂ ತತ್ರ ವಟುವೇಷಧರಂ ಪೃಥಕ್ ।
ಧಿಕ್ತ್ವಾಂ ಚ ಪರುಷಂ ವಾಕ್ಯಮೂಚುಸ್ತೇ ಗುರುಸನ್ನಿಧೌ ॥ ೨೪ ॥
ಕ್ಷುತ್ಕ್ಷಾಮಕಂಠಾಃ ಸರ್ವೇ ಚ ಗತ್ವಾ ತು ಕಿಲಮಂದಿರಂ ।
ತ್ವಯಾ ಸಿದ್ಧೇನ ಚಾಽನ್ನೇನ ತೃಪ್ತಿಂ ಯಾಸ್ಯಾಮಹೇ ವಯಂ ॥ ೨೫ ॥
ತದ್ವೃಥಾ ಚಿಂತಿತಂ ಸರ್ವಂ ತ್ವಯಾಗತ್ಯ ಕೃತಂ ದ್ವಿಜ ।
ಮಿಥ್ಯಾಪ್ರತಿಜ್ಞೇನ ಸತಾ ದುರನುಷ್ಠಿತಮದ್ಯ ತೇ ॥ ೨೬ ॥

---

೧೯. ಆ ಬ್ರಾಹ್ಮಣವರ್ಯನು ಹಾಗೆಯೇ ಆಗಲೆಂದು ಒಪ್ಪಿ ಪ್ರತಿದಿನವೂ ಓದಿಸುತ್ತ ಶಿಷ್ಯರೊಡನೆ ಕಾಳಾರಿಸುತ್ತ ಜೀವಿಸುತ್ತಿದ್ದನು.

೨೦. ಅನಂತರ ಕೆಲವು ದಿನಗಳಾದಮೇಲೆ ವಟುಗಳು ಈಶ್ವರನನ್ನು ಕುರಿತು ಸರದಿಯಿಂದ ಬಂದ ಅಡುಗೆ ಮೊದಲಾದ ಕಾರ್ಯಗಳನ್ನು ಮಾಡೆಂದರು.

೨೧. ಶಂಕರನು ಹಾಗೆಯೇ ಆಗಲೆಂದು ಒಪ್ಪಿ ಭಾರಗ್ರಾಮಕ್ಕೆ ಹೋಗಿ ಸಮಸ್ತ ವನಸ್ಪತಿಗಳನ್ನು ಧ್ಯಾನಿಸಿ ಇಂತೆಂದನು.

೨೨. ಬ್ರಾಹ್ಮಣನು ವಟುಗಳೊಡನೆ ಮನೆಗೆ ಬರುವಷ್ಟರಲ್ಲಿ ನೀವು ಅದೃಶ್ಯರಾಗಿ ಅಡುಗೆಯನ್ನು ಮಾಡಿ ಸಿದ್ಧಮಾಡಿರಿ.

೨೩. ವಿಶ್ವರೂಪನಾದ ಶಂಕರನು ಆ ವನಸ್ಪತಿಗಳನ್ನು ಕುರಿತು ಹೀಗೆಂದು ನುಡಿದು ವಟುವೇಷವನ್ನು ಧರಿಸಿ ಆಟಕ್ಕೆ ಹೊರಟುಹೋದನು.

೨೪. ಆಗ ಇತರ ವಟುಗಳು ವಟುವೇಷವನ್ನು ಧರಿಸಿಬಂದ ಶಂಕರರನ್ನು ಗುರುಸನ್ನಿಧಿಯಲ್ಲಿಯೆ ಕಠಿನಮಾತಿನಿಂದ ಧಿಕ್ಕರಿಸಿದರು.

೨೫. "ಹಸಿವಿನಿಂದ ಕೃಶವಾದ ಕಂಠಗಳುಳ್ಳ ನಾವು ಮನೆಗೆ ಹೋಗಿ ನೀನು ಸಿದ್ಧಮಾಡಿರುವ ಅನ್ನದಿಂದ ತೃಪ್ತಿಗೊಳ್ಳುವೆವಷ್ಟೆ.

೨೬. ಮಿಥ್ಯಾಪ್ರತಿಜ್ಞನಾದ ನೀನು ಇಲ್ಲಿಗೆ ಬಂದು ಆಲೋಚಿಸಿದ್ದನ್ನೆಲ್ಲ ವ್ಯರ್ಥಗೊಳಿಸಿ ದುಷ್ಕಾರ್ಯವನ್ನೆಸಗಿರುವೆ."

ವಟುರುವಾಚ :—

ಸಂತಾಪಮನುತಾಪಂ ವಾ ಭೋಜನಾರ್ಥಂ ದ್ವಿಜರ್ಷಭಾಃ ।
ಮಾಕುರುಧ್ವಂ ಯಥಾನ್ಯಾಯಂ ಸಿದ್ಧೇಽನ್ನೇ ಗೃಹಮೇಷ್ಯಥ ॥ ೨೭ ॥

ವಟುರುವಾಚ :—

ದಿನಶೇಷೇಣ ಚಾಸ್ಮಾಕಂ ಪಂಚತಾಂ ಚ ದಿನೇ ದಿನೇ ।
ನಿಷ್ಪತ್ತಿಂ ಯಾತಿ ವಾ ನೇತಿ ತದಸಿದ್ಧಮಶೇಷತಃ ॥ ೨೮ ॥
ಅಸಿದ್ಧಂ ಸಿದ್ಧಮಸ್ಮಾಕಂ ಯತ್ತ್ವಯಾ ಸಮುದಾಹೃತಂ ।
ದೃಷ್ಟ್ವಾಽನೃತಂ ಗತಾಸ್ತತ್ರ ತ್ವಾಂ ಬಧ್ವಾಂಭಸಿ ನಿಕ್ಷಿಪೇ ॥ ೨೯ ॥

ವಟುರುವಾಚ :—

ಭೋ ಭೋಃ ಶೃಣುಧ್ವಂ ಸರ್ವೇಽತ್ರ ಸೋಪಾಧ್ಯಾಯಾ ದ್ವಿಜೋತ್ತಮಾಃ ।
ಪ್ರತಿಜ್ಞಾಂ ಮಮ ದುರ್ಧರ್ಷಾಂ ಯಾಂ ಶ್ರುತ್ವಾ ವಿಸ್ಮಯೋ ಭವೇತ್ ॥
ಯದಿ ಸಿದ್ಧಮಿದಂ ಸರ್ವಮನ್ನಂ ಸ್ಯಾದಾಶ್ರಮೇ ಗುರೋಃ ।
ಯೂಯಂ ಬಧ್ವಾ ಮಯಾ ಸರ್ವೇ ಕ್ಷೇಪ್ತವ್ಯಾ ನರ್ಮದಾಂಭಸಿ॥ ೩೦ ॥
ಅಥವಾಽನ್ನಂ ನ ಸಿದ್ಧಂ ಸ್ಯಾದ್ಭವದ್ಭಿರ್ದೃಢಬಂಧನೈಃ ।
ಗುರೋಸ್ತು ಪಶ್ಯತೋ ಬಧ್ವಾ ಕ್ಷೇಪ್ತವ್ಯೋಽಹಂ ನರ್ಮದಾಹ್ರದೇ॥ ೩೧॥
ತಥೇತಿ ಕೃತ್ವಾ ತೇ ಸರ್ವೇ ಸಮಯಂ ಗುರುಸನ್ನಿಧೌ ।
ಸ್ನಾತ್ವಾ ಜಾಪ್ಯ ವಿಧಾನೇನ ಭೂತಗ್ರಾಮಂ ತತೋ ಯಯುಃ ॥ ೩೨ ॥

---

೨೭. ವಟುವು ಹೇಳುತ್ತಾನೆ:—ದ್ವಿಜವರ್ಯರೆ! ನೀವು ಭೋಜನಕ್ಕಾಗಿ ಸಂತಪಿಸಬೇಡಿರಿ. ಕ್ರಮದಂತೆಅನ್ನವುಸಿದ್ಧವಾಗಿರುವುದು. ಮನೆಗೆಹೋಗುವಿರಂತೆ!

೨೮–೨೯. ವಟುಗಳು ಹೇಳುತ್ತಾರೆ:—ನಾವು ದಿನವೆಲ್ಲ ಅಡುಗೆಮಾಡಿದರೂ ಸಿದ್ಧವಾಗುವುದೊ, ಇಲ್ಲವೊ ಎನ್ನುವಂತಿರುವ ಅಡುಗೆಯು ಸಿದ್ಧವಾಯಿತೆಂದು ಹೇಳುವೆ. ನಾವು ಅಲ್ಲಿಗೆ ಹೋಗಿ ನಿನ್ನ ಸುಳ್ಳು ಮಾತನ್ನರಿತು ನಿನ್ನನ್ನು ಕಟ್ಟಿ ನೀರಿನಲ್ಲಿ ಎಸೆಯುವೆವು.

೩೦. ವಟುವು ಹೇಳುತ್ತಾನೆ:—ಉಪಾಧ್ಯಾಯರಿಂದ ಸಹಿತರಾದ ವಟುಗಳೆ! ಮಾಡಲಾಗದ ನನ್ನ ಪ್ರತಿಜ್ಞೆಯನ್ನು ನೀವೆಲ್ಲ ಕೇಳಿರಿ. ಅದನ್ನು ಕೇಳಿದರೆ ನಿಮಗೆ ಆಶ್ಚರ್ಯವುಂಟಾದೀತು.

೩೧. ವಟುಗಳೆ! ಗುರುವಿನ ಆಶ್ರಮದಲ್ಲಿ ಅನ್ನವೆಲ್ಲ ಸಿದ್ಧವಾಗಿದ್ದರೆ ನಾನು ನಿಮ್ಮನ್ನೆಲ್ಲ ಕಟ್ಟಿ ನರ್ಮದಾಜಲದಲ್ಲಿ ಎಸೆಯುವೆನು.

೩೨. ಹಾಗೆ ಅನ್ನವು ಸಿದ್ಧವಾಗಿರದಿದ್ದರೆ ನೀವು ನನ್ನನ್ನು ಕಟ್ಟಿ ಗುರುವು ನೋಡುತ್ತಿರುವಾಗಲೆ ನರ್ಮದಾ ಮಡುವಿನಲ್ಲಿ ಎಸೆಯಿರಿ.

೩೩. ಅವರೆಲ್ಲರೂ ಗುರುವಿನ ಬಳಿ ಹಾಗೆಯೆ ಆಗಲೆಂದು ಪ್ರತಿಜ್ಞೆಮಾಡಿ ನರ್ಮದೆಯಲ್ಲಿ ಮಿಂದು ವಿಧಿಯಂತೆ ಜಪಿಸಿ ಭೂತಗ್ರಾಮಕ್ಕೆ ತೆರಳಿದರು.

ದೃಷ್ಟ್ವಾ ತೇ ವಿಸ್ಮಯಂ ಜಗ್ಮುರ್ವಿಸ್ತೃತೇ ಭಕ್ಷ್ಯಭೋಜನೇ ।
ಷಡ್ರಸೇನ ನೃಪಶ್ರೇಷ್ಠ ಭುಕ್ತ್ವಾ ಹುತ್ವಾ ಪೃಥಕ್ ಪೃಥಕ್ ॥ ೩೪ ॥
ತತಃ ಪ್ರೋವಾಚ ವಚನಂ ಹೃಷ್ಟಪುಷ್ಟೋ ದ್ವಿಜೋತ್ತಮಃ ।
ವರದೋಽಸ್ಮಿ ವರಂ ವತ್ಸ ವೃಣು ಯತ್ತವ ರೋಚತೇ ॥ ೩೫ ॥
ಸಾಂಗೋಪಾಂಗಾಸ್ತು ತೇ ವೇದಾಃ ಶಾಸ್ತ್ರಾಣಿ ವಿವಿಧಾನಿ ಚ ।
ಪ್ರತಿಭಾಸ್ಯಂತಿ ತೇ ವಿಪ್ರ ಮದೀಯೋಽಸ್ತು ವರಸ್ತ್ವಯಂ ॥ ೩೬ ॥
ಪ್ರಣಮ್ಯ ವಟುಭಿಃ ಸಾರ್ಧಂ ಸ ಚಿಕ್ರೀಡ ಯಥಾಸುಖಂ ।
ದ್ವಿತೀಯೇ ತು ತತಃ ಪ್ರಾಪ್ತೇ ದಿವಸೇ ನರ್ಮದಾಜಲೇ ॥ ೩೭ ॥
ಕ್ರೀಡನಾರ್ಥಂ ಗತಾಃ ಸರ್ವೇ ಸೋಪಾಧ್ಯಾಯಾ ಯುಧಿಷ್ಠಿರ ।
ತತಃ ಸ್ಮೃತ್ವಾ ಪಣಂ ಸರ್ವೇ ಭಾಷಯಿತ್ವಾ ವಿಧಾನತಃ ॥ ೩೮ ॥
ಉಪಾಧ್ಯಾಯಮುಥೋವಾಚ ನತ್ವಾ ದೇವಃ ಕೃತಾಂಜಲಿಃ ।
ಜಲೇ ಪ್ರಕ್ಷೇಪಯಾಮ್ಯದ್ಯ ನಿಷ್ಪ್ರತಿಜ್ಞಾನ್ ವಟೂನ್ ಪ್ರಭೋ ॥ ೩೯ ॥
ತದ್ದೇವಸ್ಯ ವಚಃ ಶ್ರುತ್ವಾ ನಷ್ಟಾಸ್ತೇ ವಟವೋ ನೃಪ ।
ಗುರೋಸ್ತು ಪಶ್ಯತೋ ರಾಜನ್ ಧಾವಮಾನಾ ದಿಶೋದಶ ॥ ೪೦ ॥
ವಾಯುವೇಗೇನ ದೇವೇನ ಲುಂಜಿತಾಸ್ತೇ ಸಮಂತತಃ ।
ಭಾರಂ ಬಧ್ವಾ ತು ಸರ್ವೇಷಾಂ ವಟೂನಾಂ ಚ ನರೇಶ್ವರ ॥ ೪೧ ॥

---

೩೪. ಅವರು ಅಲ್ಲಿ ಷಡ್ರಸಪೂರಿತವಾದ ಭಕ್ಷ್ಯಭೋಜ್ಯಗಳು ಸಿದ್ಧವಾಗಿರುವುದನ್ನು ಕಂಡು ಆಶ್ಚರ್ಯಗೊಂಡು ಪ್ರತ್ಯೇಕವಾಗಿ ಹೋಮಿಸಿ ಭುಂಜಿಸಿದರು.

೩೫. ಅನಂತರ ಉಪಾಧ್ಯಾಯನು ಸಂತೋಷಗೊಂಡು, "ಮಗು! ನಾನು ನಿನಗೆ ವರವನ್ನು ಕೊಡುವೆನು. ನಿನಗೆ ಇಷ್ಟವಾದುದನ್ನು ಕೇಳಿಕೊ.

೩೬. ನಿನಗೆ ಸಾಂಗೋಪಾಂಗವಾದ ವೇದಗಳೂ, ವಿವಿಧ ಶಾಸ್ತ್ರಗಳೂ ಭಾಸವಾಗುವುವು. ಇದು ನನ್ನ ವರವು" ಎಂದನು.

೩೭–೩೯. ಅವನು ಗುರುವಿಗೆ ವಂದಿಸಿ ವಟುಗಳೊಡನೆ ಸುಖವಾಗಿ ಆಟವಾಡಿದನು. ಮಾರನೆಯ ದಿನ ಅವರೆಲ್ಲರೂ ಉಪಾಧ್ಯಾಯರೊಡನೆ ಆಟವಾಡಲು ನರ್ಮದಾನದಿಗೆ ಹೋದರು. ಅನಂತರ ವಟುವಾಗಿರುವ ಶಂಕರನು ಪಣವನ್ನು ಸ್ಮರಿಸಿ ವಿಧಿಯಂತೆ ಮಾತನಾಡಿ ಉಪಾಧ್ಯಾಯನನ್ನು ವಂದಿಸಿ, "ಸ್ವಾಮಿ! ಪ್ರತಿಜ್ಞಾಭ್ರಷ್ಟರಾದ ಈ ವಟುಗಳನ್ನು ನೀರಿನಲ್ಲಿ ಎಸೆಯುವೆನು" ಎಂದನು.

೪೦. ಆ ವಟುಗಳು ಶಂಕರನ ಆ ಮಾತನ್ನು ಕೇಳಿ ಗುರುವು ನೋಡುತ್ತಿರುವಾಗಲೆ ದಿಕ್ಕು ದಿಕ್ಕುಗಳಿಗೂ ಓಡಿ ಅಡಗಿಹೋದರು.

೪೧–೪೫. ಶಾಪಾನುಗ್ರಹಶಕ್ತನಾದ ಶಂಕರನು ವಾಯುವೇಗದಿಂದ ಓಡಿ ಆ ವಟುಗಳಿಗೆ ಭಾರವನ್ನು ಕಟ್ಟಿ ಒಂದೆಡೆ ಸೇರಿಸಿ ನರ್ಮದಾನದಿಯ ಜಲದಲ್ಲಿ

ಶಾಪಾಽನುಗ್ರಹಕೋ ದೇವೋಽಕ್ಷಿಪತ್ತ್ರೋಯೋ ಯಥಾ ಗೃಹೇ ।
ತತೋ ನಿಷಾದನುಗಮುದ್ವೃಷ್ಟ್ವಾ ತಾನ್ನರ್ಮದಾಜಲೇ ॥ ೪೨ ॥
ಗುರುಣಾ ವಟುರುಕ್ತೋಽಥ ಕಿಮೇತತ್ಸಾಹಸಂ ಕೃತಂ ।
ಏತೇಷಾಂ ಮಾತೃಪಿತರೋ ಬಾಲಕಾನಾಂ ಗೃಹೇಽಂಗನಾಃ ॥ ೪೩ ॥
ಯದಿ ಪೃಚ್ಛಂತಿ ತೇ ಬಾಲಾನ್ ಕ್ವ ಗತಾನ್ಕಥಯಾಮ್ಯಹಂ ।
ಏವಂ ಸ್ಥಿತೇ ಮಹಾಭಾಗ ಯದಿ ಕಶ್ಚಿನ್ಮರಿಷ್ಯತಿ ॥ ೪೪ ॥
ತದಾ ಸ್ವಕೀಯಜೀವೇನ ತ್ವಂ ಯೋಜಯಿತುಮರ್ಹಸಿ ।
ಮೃತೇಷು ತೇಷು ವಿಪ್ರೇಷು ನ ಜೀವೇ ನಿಶ್ಚಯೋ ಮೃತಃ ॥ ೪೫ ॥
ಬ್ರಹ್ಮಹತ್ಯಾಶ್ಚ ತೇ ವಹ್ನ್ಯೋ ಭವಿಷ್ಯಂತಿ ಮೃತೇ ಮಯಿ ।
ದ್ವಿಜಬಂಧನಮಾತ್ರೇಣ ನರಕೋ ಭವತಿ ಧ್ರುವಂ ॥ ೪೬ ॥
ಮರಣಾದ್ಯಾಂ ಗತಿಂ ಯಾಸಿ ನ ತಾಂ ವೇದ್ಮಿ ದ್ವಿಜಾಽಧಮ ।
ಏವಮುಕ್ತಃ ಸ್ಮಿತಂ ಕೃತ್ವಾ ದೇವದೇವೋ ಮಹೇಶ್ವರಃ ॥ ೪೭ ॥
ಭಾರಭೂತೇಶ್ವರೇ ತೀರ್ಥೇ ಉಜ್ಜಹಾರ ಜಲಾದ್ದ್ವಿಜಾನ್ ।
ಮುಕ್ತ್ವಾ ಭಾರಂ ತು ದೇವೇನ ಛಾದಯಿತ್ವಾ ತು ತಾನ್ದ್ವಿಜಾನ್ ॥ ೪೮ ॥
ಲಿಂಗಂ ಪ್ರತಿಷ್ಠಿತಂ ತತ್ರ ಭಾರಭೂತೇತಿ ವಿಶ್ರುತಂ ।
ಮೃತಾಂಸ್ತಾನ್ವೈ ದ್ವಿಜಾನ್ ದೃಷ್ಟ್ವಾ ಬ್ರಹ್ಮಹತ್ಯಾ ನಿರಾಕೃತಾ ॥ ೪೯ ॥
ಗತಾನಿ ಪಂಚ ವೈ ದೃಷ್ಟ್ವಾ ಬ್ರಹ್ಮಹತ್ಯಾ ಶತಾನಿ ವೈ ।
ತತಃ ಸ ವಿಸ್ಮಯಾವಿಷ್ಟೋ ದೃಷ್ಟ್ವಾ ತಾನ್ ಬಾಲಕಾನ್ ಗುರುಃ ॥ ೫೦ ॥

---

ಎಸೆದನು. ಆಗ ಗುರುವು ಅದನ್ನು ಕಂಡು ವಿಷಣ್ಣನಾಗಿ ವಟುವನ್ನು ಕುರಿತು ಇಂತೆಂದನು. "ನೀನು ಎಂತಹ ಸಾಹಸದ ಕಾರ್ಯವನ್ನೆಸಗಿರುವೆ. ಈ ಬಾಲಕರ ಮನೆಯಲ್ಲಿರುವ ತಂದೆತಾಯಿಗಳು ನಮ್ಮ ಹುಡುಗರೆಲ್ಲೆಂದು ಕೇಳಿದರೆ ನಾನು ಏನನ್ನು ಹೇಳಲಿ. ಮಹಾತ್ಮನೆ! ಇವರಲ್ಲಿ ಯಾವನಾದರೂ ಮಡಿದರೆ ನೀನು ಅವರಿಗೆ ನಿನ್ನ ಪ್ರಾಣವನ್ನಿತ್ತು ಬದುಕಿಸಬೇಕಾಗುವುದು. ಆ ವಟುಗಳು ಮಡಿದರೆ ನಾನು ನಿಶ್ಚಯವಾಗಿಯೂ ಜೀವಿಸಲಾರೆನು.

೪೬. ನಾನು ಮೃತನಾದರೆ ನಿನಗೆ ಬ್ರಹ್ಮಹತ್ಯೆಯುಂಟಾಗುವುದು. ಬ್ರಾಹ್ಮಣನನ್ನು ಬಂಧಿಸಿದ್ದರಿಂದಲೇ ನರಕವು ಸಂಭವಿಸುವುದು.

೪೭–೫೧. ಮರಣದಿಂದ ಯಾವ ಗತಿಯುಂಟಾಗುವುದೆಂಬುದನ್ನು ನಾನರಿಯೆ." ಗುರುವು ಹೀಗೆನ್ನಲು ಮಹೇಶ್ವರನು ನಕ್ಕು ಭಾರಭೂತೇಶ್ವರ ತೀರ್ಥದಲ್ಲಿ ಭಾರವನ್ನು ಬಿಡಿಸಿ ನೀರಿನಿಂದ ಬ್ರಾಹ್ಮಣರನ್ನು ಮೇಲಕ್ಕೆತ್ತಿ ಅವರನ್ನು ಅಡಗಿಸಿ ಅವರು ಮೃತರಾದರೆಂದು ತೋರಿಸಿ ಭಾರಭೂತೇಶ್ವರಲಿಂಗವನ್ನು ಪ್ರತಿಷ್ಠೆಮಾಡಿ ಬ್ರಹ್ಮಹತ್ಯೆಯನ್ನು ನಿವಾರಿಸಿದನು. ಐನೂರು ಬ್ರಹ್ಮಹತ್ಯೆಗಳೂ

ನಾಽನ್ಯಸ್ಯ ಕಸ್ಯಚಿಚ್ಛಕ್ತಿರೇವಂ ಸ್ಯಾದೀಶ್ವರಂ ವಿನಾ ।
ಜ್ಞಾತ್ವಾ ತಂ ದೇವದೇವೇಶಂ ಪ್ರಣಾಮಮಕರೋದ್ದ್ವಿಜಃ ॥ ೫೧ ॥
ಅಜ್ಞಾನೇನ ಮಯಾ ಸರ್ವಂ ಯದುಕ್ತಂ ಪರಮೇಶ್ವರ ।
ಅಪ್ರಿಯಂ ಯತ್ಕೃತಂ ಸರ್ವಂ ಕ್ಷಂತವ್ಯಂ ತನ್ಮಮ ಪ್ರಭೋ ॥ ೫೨ ॥

ದೇವ ಉವಾಚ :—

ಭಗವನ್ ಗುರುರ್ಭವಾನ್ದೇವೋ ಭವಾನ್ಮಮ ಪಿತಾಮಹಃ ।
ವೇದಗರ್ಭ ನಮಸ್ತೇಽಸ್ತು ನಾಽಸ್ತಿ ಕಶ್ಚಿದ್ವ್ಯತಿಕ್ರಮಃ ॥ ೫೩ ॥
ಜನಿತಾ ಚೋಪನೇತಾ ಚ ಯಸ್ತು ವಿದ್ಯಾಂ ಪ್ರಯಚ್ಛತಿ ।
ಅನ್ನದಾತಾ ಭಯತ್ರಾತಾ ಪಂಚೈತೇ ಪಿತರಃ ಸ್ಮೃತಾಃ ॥ ೫೪ ॥
ಏವಮುಕ್ತ್ವಾ ಜಗನ್ನಾಥೋ ವಿಷ್ಣುಶರ್ಮಾಣಮಾನತಃ ।
ತತ್ರ ತೀರ್ಥೇ ಜಗಾಮಾಶು ಕೈಲಾಸಂ ಧರಣೀಧರಂ ॥ ೫೫ ॥
ತದಾಪ್ರಭೃತಿ ತತ್ತೀರ್ಥಂ ಭಾರಭೂತೀತಿ ವಿಶ್ರುತಂ ।
ವಿಖ್ಯಾತಂ ಸರ್ವಲೋಕೇಷು ಮಹಾಪಾತಕನಾಶನಂ ॥ ೫೬ ॥
ತತ್ರ ತೀರ್ಥೇ ಪುನರ್ವೃತ್ತಮಿತಿಹಾಸಂ ಬ್ರವೀಮಿ ತೇ ।
ಸರ್ವಪಾಪಹರಂ ದಿವ್ಯಮೇಕಾಗ್ರಸ್ತ್ವಂ ಶೃಣುಷ್ವ ತತ್ ॥ ೫೭ ॥

---

ಪರಿಹಾರವಾದುವು. ಅನಂತರ ಆ ಗುರುವು ಆ ಬಾಲಕರನ್ನು ನೋಡಿ ಆಶ್ಚರ್ಯಗೊಂಡು ಈಶ್ವರನನ್ನು ಬಿಟ್ಟು ಇತರರಿಗೆ ಅಂತಹ ಶಕ್ತಿಯಿರುವುದಿಲ್ಲವೆಂದರಿತು ಆ ಶಂಕರನನ್ನು ವಂದಿಸಿದನು.

೫೨. "ಸ್ವಾಮಿ! ನಾನು ತಿಳಿಯದೆ ಆಡಿದ ಮಾತನ್ನೂ, ಮಾಡಿದ ಅಹಿತವನ್ನೂ ಕ್ಷಮಿಸು" ಎಂದು ಹೇಳಿದನು.

೫೩. ಶಂಕರನು ಹೇಳುತ್ತಾನೆ:—ಪೂಜ್ಯನೆ! ನನಗೆ ಗುರುವಾದ ನೀನು ದೇವತೆಯೂ, ಪಿತಾಮಹನೂ ಆಗಿರುವೆ. ನಿನಗೆ ನಮಸ್ಕಾರವು. ಈಗ ಯಾವ ವ್ಯತಿಕ್ರಮವೂ ಆಗಲಿಲ್ಲ.

೫೪. ಜನ್ಮಕ್ಕೆ ಕಾರಣನೂ, ಉಪನಯನ ಮಾಡಿದವನೂ, ವಿದ್ಯೋಪದೇಶಕನೂ, ಅನ್ನವನ್ನು ದಾನಮಾಡಿದವನೂ, ಭಯದಿಂದ ರಕ್ಷಿಸಿದವನೂ ಎಂಬ ಈ ಐವರೂ ತಂದೆಗಳೆನ್ನಿಸಿಕೊಳ್ಳುವರು.

೫೫. ಜಗನ್ನಾಥನಾದ ಶಂಕರನು ಆ ತೀರ್ಥದಲ್ಲಿ ವಿಷ್ಣುಶರ್ಮನನ್ನು ಕುರಿತು ಹೀಗೆ ಹೇಳಿ ಕೂಡಲೆ ಕೈಲಾಸಪರ್ವತಕ್ಕೆ ತೆರಳಿದನು.

೫೬. ಅದು ಮೊದಲ್ಗೊಂಡು ಆ ತೀರ್ಥವು ಮೂರು ಲೋಕಗಳಲ್ಲಿಯೂ ಮಹಾಪಾತಕಗಳನ್ನು ನೀಗಿಸುವ ಭಾರಭೂತಿಯೆಂದು ಪ್ರಸಿದ್ಧವಾಯಿತು.

೫೭. ಆ ತೀರ್ಥದಲ್ಲಿ ನಡೆದ ಸಮಸ್ತಪಾಪಗಳನ್ನು ನಿವಾರಿಸುವ ಮತ್ತೊಂದು ಇತಿಹಾಸವನ್ನು ನಿನಗೆ ಹೇಳುವೆನು. ನೀನು ಅದನ್ನು ಒಮ್ಮನಸ್ಸಿನಿಂದ ಕೇಳು.

ಪುರಾ ಕೃತಯುಗಸ್ಯಾದೌ ವೈಶ್ಯಃ ಕಶ್ಚಿನ್ಮಹಾಮನಾಃ ।
ಸುಕೇಶ ಇತಿ ವಿಖ್ಯಾತಃ ತಸ್ಯ ಪುತ್ರೋsತಿಧಾರ್ಮಿಕಃ ॥ ೫೮ ॥
ಸೋಮಶರ್ಮೇತಿ ವಿಖ್ಯಾತೋ ಋಜುಃ ಪೃಥುಲಲೋಚನಃ ।
ಸ ಸಖಾಯಂ ವಣಿಕ್ಪುತ್ರಂ ಕಂಚಿಚ್ಚಕ್ರೇ ದರಿದ್ರಿಣಂ ॥ ೫೯ ॥
ಸಹದೇವಮಿತಿ ಖ್ಯಾತಂ ಸರ್ವಕರ್ಮಸು ಕೋವಿದಂ ।
ಏಕದಾ ತು ಸಮಂ ತೇನ ವ್ಯವಹಾರಮಚಿಂತಯತ್ ॥ ೬೦ ॥
ಸಖೇ ಸಮುದ್ರಯಾನೇನ ಗಚ್ಛಾವೋ ತರಣ್ಯೈಃ ಶುಭೈಃ ।
ಭಾಂಡಂ ಬಹುಸಮಾದಾಯ ಮದೀಯೇ ದ್ರವ್ಯಸಾಧನೇ ॥ ೬೧ ॥
ಪರಂ ತೀರಂ ಗಮಿಷ್ಯಾವ ಉತ್ಕರ್ಷಸ್ತ್ವಾವಯೋಃ ಸಮಃ ।
ಇತಿ ತೌ ಮಂತ್ರಯಿತ್ವಾ ತು ಮಂತ್ರವತ್ಸಮಭೀಪ್ಸಿತಂ ॥ ೬೨ ॥
ಸರ್ವಂ ಪ್ರಯಾಣಕಂ ಗೃಹ್ಯ ಹ್ಯಾರುರೋಢ ಲವಣೋದಧಿಂ ।
ತೌ ಗತ್ವಾ ತು ಪರಂ ಭಾಂಡಂ ವಿಕ್ರೀಯ ಪುರತಸ್ತದಾ ॥ ೬೩ ॥
ಪ್ರಾಪ್ತೌ ಬಹುಸುವರ್ಣಂ ಚ ರತ್ನಾನಿ ವಿವಿಧಾನಿ ಚ ।
ನಾವಂ ತಾಂ ಸಂಗತಾಂ ಕೃತ್ವಾ ಪಶ್ಚಾತ್ತಾವಾರುರೋಹತುಃ ॥ ೬೪ ॥
ನಾವಮಂತರ್ಜಲೇ ದೃಷ್ಟ್ವಾ ನಿಶೀಥೇ ಸ್ವರ್ಣಸಂಭೃತಾಂ ।
ದೃಷ್ಟ್ವಾ ತು ಸೋಮಶರ್ಮಾಣಮುತ್ಸಂಗೇ ಕೃತಮಸ್ತಕಂ ॥ ೬೫ ॥

---

೫೮–೬೦. ಹಿಂದೆ ಕೃತಯುಗದ ಆದಿಯಲ್ಲಿ ಸುಕೇಶನೆಂಬ ಒಬ್ಬ ವೈಶ್ಯನಿದ್ದನು. ಅವನಿಗೆ ಧಾರ್ಮಿಕನೂ, ವಿಶಾಲನೇತ್ರನೂ, ನಿಷ್ಕಪಟಿಯೂ ಆದ ಸೋಮಶರ್ಮನೆಂಬ ಪುತ್ರನಿದ್ದನು. ಅವನು ದರಿದ್ರನೂ, ಸಕಲ ಕಾರ್ಯನಿಪುಣನೂ ಆದ ಸಹದೇವನೆಂಬ ಓರ್ವ ವೈಶ್ಯಕುಮಾರನೊಡನೆ ಸ್ನೇಹಮಾಡಿದನು. ಒಂದಾನೊಂದು ದಿನ ಅವನೊಡನೆ ವ್ಯಾಪಾರಮಾಡಬೇಕೆಂದೂ ಆಲೋಚಿಸಿದನು.

೬೧–೬೪. ಆದರಂತೆ ಅವನು, "ಮಿತ್ರನೆ! ನನ್ನ ದ್ರವ್ಯಗಳಿಂದ ಬಹಳ ವಸ್ತುಗಳನ್ನು ತೆಗೆದುಕೊಂಡು ಸಮುದ್ರಯಾನದಿಂದ ಬೇರೆ ದಡಕ್ಕೆ ಹೋಗೋಣ. ಲಾಭವು ನಮ್ಮಿರ್ವರಿಗೂ ಸಮಾನವಾಗಿರಲಿ" ಎಂದು ಅವನೊಡನೆ ಆಲೋಚಿಸಿ ಆದರಂತೆ ತಮಗೆ ಇಷ್ಟವಾದ ಪ್ರಯಾಣವಸ್ತುಗಳನ್ನೆಲ್ಲ ತೆಗೆದುಕೊಂಡು ಲವಣ ಸಮುದ್ರದಲ್ಲಿ ಹೊರಟರು. ಮತ್ತೊಂದು ದಡವನ್ನು ಸೇರಿ ಅಲ್ಲಿಯ ಪಟ್ಟಣದಲ್ಲಿ ಅವುಗಳನ್ನು ಮಾರಿ ಬಹು ಸುವರ್ಣವನ್ನೂ, ವಿವಿಧ ರತ್ನಗಳನ್ನೂ ಪಡೆದು ಅವುಗಳನ್ನೆಲ್ಲ ಹಡಗಿನಲ್ಲಿಟ್ಟು ಆ ಹಡಗಿನಲ್ಲಿ ಕುಳಿತು ಹೊರಟರು.

೬೫–೬೬. ಸಹದೇವನು ಅರ್ಧರಾತ್ರಿಯ ವೇಳೆಯಲ್ಲಿ ನೀರಿನ ನಡುವೆ ಚಿನ್ನದಿಂದ ತುಂಬಿರುವ ನಾವೆಯನ್ನೂ, ತನ್ನ ತೊಡೆಯಲ್ಲಿ ತಲೆಯನ್ನಿಟ್ಟು ನಂಬಿಕೆ

ಶಯಾನಮತಿವಿಶ್ವಸ್ತಂ ಸಹದೇವೋ ವ್ಯಚಿಂತಯತ್ ।
ಏಷ ನಿದ್ರಾವಶಂ ಯಾತೋ ಮಯಿ ಪ್ರಾಣಾನ್ನಿಧಾಯ ವೈ ॥ ೬೬ ॥
ಅಸ್ಯಾಽಧೀನಮಿದಂ ಸರ್ವಂ ದ್ರವ್ಯರತ್ನಮಶೇಷತಃ ।
ಉತ್ಕರ್ಷಾರ್ಧಂ ತು ಮೇ ದದ್ಯಾತ್ತತ್ರಗತ್ವಾಥವಾ ನವಾ ॥ ೬೭ ॥
ಇತಿ ನಿಶ್ಚಿತ್ಯ ಮನಸಾ ಪಾಪಸ್ತಂ ಲವಣೋದಧೌ ।
ಚಿಕ್ಷೇಪ ಸೋಮಶರ್ಮಾಣಂ ಪಾಪಧ್ಯಾತೇನ ಚೇತಸಾ ॥ ೬೮ ॥
ಉತ್ತೀರ್ಯ ತರಣಾತ್ತಸ್ಮಾದ್ಗತ್ವಾ ಸಂಗೃಹ್ಯ ತದ್ಧನಂ ।
ತತಃ ಕತಿಪಯಾಽಹೋಭಿಃ ಸಂಯುಕ್ತಃ ಕಾಲಧರ್ಮಣಾ ॥ ೬೯ ॥
ಗತೋ ಯಮಪುರಂ ಘೋರಂ ಗೃಹೀತೋ ಯಮಕಿಂಕರೈಃ ।
ಸ ನೀತಸ್ತೇನ ಮಾರ್ಗೇಣ ಯತ್ರ ಸಂತಪತೇ ರವಿಃ ॥ ೭೦ ॥
ಕೃತ್ವಾ ದ್ವಾದಶಧಾತ್ಮಾನಂ ಸಂಪ್ರಾಪ್ತೇ ಪ್ರಲಯೇ ಯಥಾ ।
ಸುತೀಕ್ಷ್ಣಾಃ ಕಂಟಕಾ ಯತ್ರ ಯತ್ರ ಶ್ವಾನಃ ಸುದಾರುಣಾಃ ॥ ೭೧ ॥
ತೀಕ್ಷ್ಣದಂಷ್ಟ್ರಾ ಮಹಾವ್ಯಾಲಾ ವ್ಯಾಘ್ರಾ ಯತ್ರ ಮಹಾವೃಕಾಃ ।
ಸುತಪ್ತಾ ವಾಲುಕಾ ಯತ್ರ ಕ್ಷುಧಾ ತೃಷ್ಣಾ ತಮೋ ಮಹತ್ ॥ ೭೨ ॥

---

ಯಿಂದ ಮಲಗಿರುವ ಸೋಮಶರ್ಮನನ್ನೂ ಕಂಡು ಹೀಗೆ ಚಿಂತಿಸಿದನು. "ಈ ಸೋಮಶರ್ಮನು ತನ್ನ ಪ್ರಾಣಗಳನ್ನು ನನ್ನಲ್ಲಿಟ್ಟು ನಿದ್ರಿಸುತ್ತಿದ್ದಾನೆ.

೬೭. ಈ ದ್ರವ್ಯಗಳೆಲ್ಲ ಇವನ ಅಧೀನದಲ್ಲಿವೆ. ಪಟ್ಟಣಕ್ಕೆ ಹೋದಮೇಲೆ ಇವನು ಲಾಭದ ಅರ್ಧಭಾಗವನ್ನು ನನಗೆ ಕೊಡುವನೊ ಇಲ್ಲವೊ."

೬೮. ಪಾಪಿಯಾದ ಸಹದೇವನು ಹೀಗೆ ಆಲೋಚಿಸಿ ಪಾಪಮನಸ್ಸಿನಿಂದ ಸೋಮಶರ್ಮನನ್ನು ಲವಣಸಮುದ್ರದಲ್ಲಿ ಎಸೆದನು.

೬೯. ಅನಂತರ ಸಮುದ್ರವನ್ನು ದಾಟಿ ಆ ದ್ರವ್ಯವನ್ನು ತೆಗೆದುಕೊಂಡು ಕೆಲವು ಕಾಲದಮೇಲೆ ಮಡಿದೂ ಹೋದನು.

೭೦–೭೨. ಬಳಿಕ ಯಮದೂತರು ಯಮಲೋಕಕ್ಕೆ ಕರೆದೊಯ್ದರು. ಅಲ್ಲಿ ಅವರು, ಸೂರ್ಯನು ಹನ್ನೆರಡು ವಿಧವಾಗಿ ರೂಪವನ್ನು ತಾಳಿ ಪ್ರಳಯಕಾಲದಂತೆ ಸಂತಪಿಸುವ ಮಾರ್ಗದಿಂದ ಅವನನ್ನು ಕರೆದುಕೊಂಡುಹೋದರು. ಆ ದಾರಿಯಲ್ಲಿ ಹರಿತವಾದ ಮುಳ್ಳುಗಳೂ, ಭಯವನ್ನುಂಟುಮಾಡುವ ನಾಯಿಗಳೂ, ಹರಿತವಾದ ಹಲ್ಲುಗಳುಳ್ಳ ಹಾವುಗಳೂ, ಹುಲಿಗಳೂ, ದೊಡ್ಡ ತೋಳಗಳೂ, ಕಾದ ಮರಳೂ, ಹಸಿವು ಬಾಯಾರಿಕೆಗಳೂ, ಕಗ್ಗತ್ತಲೆಯೂ ತುಂಬಿದ್ದುವು.

ಪಾನೀಯಸ್ಯ ಕಥಾ ನಾಸ್ತಿ ನ ಛಾಯಾ ನಾಶ್ರಮಃ ಕ್ವಚಿತ್ ।
ಅನ್ನಂ ಪಾನೀಯಸಹಿತಂ ಯಾವತ್ತದ್ದೀಯತೇ ವಿಷಂ ॥ ೭೩ ॥
ಛಾಯಾಂ ಸಂಪ್ರಾರ್ಥಮಾನಾನಾಂ ಭೃಶಂ ಜ್ವಲತಿ ಪಾವಕಃ ।
ತೈರ್ದಹ್ಯಮಾನಾ ಬಹುಶೋ ವಿಲಪಂತಿ ಮುಹುರ್ಮುಹುಃ ॥ ೭೪ ॥
ಹಾ ಭ್ರಾತರ್ಮಾತಃ ಪುತ್ರೇತಿ ಪತಂತಿ ಪಥಿ ಮೂರ್ಛಿತಾಃ ।
ಇತ್ಥಂ ಭೂತೇನ ಮಾರ್ಗೇಣ ಸ ನೀತೋ ಯಮಕಿಂಕರೈಃ ॥ ೭೫ ॥
ಯತ್ರ ತಿಷ್ಠತಿ ದೇವೇಶಃ ಪ್ರಜಾಸಂಯಮನೋ ಯಮಃ ।
ತೇ ದ್ವಾರದೇಶೇ ತಂ ಮುಕ್ತ್ವಾಽಽಚಚಕ್ಷುರ್ಯಮಕಿಂಕರಾಃ ॥ ೭೬ ॥
ಬದ್ಧ್ವಾ ತಂ ಗಲಪಾಶೇನ ಹ್ಯಾಸೀನಂ ಮಿತ್ರಘಾತಿನಂ ।
ಅವಧಾರಯ ದೇವೇಶ ಬುದ್ಧ್ಯಶ್ವ ಯದನಂತರಂ ॥ ೭೭ ॥

ಯಮ ಉವಾಚ :—

ನ ತು ಪೂರ್ವಂ ಮುಖಂ ದೃಷ್ಟಂ ಮಯಾ ವಿಶ್ವಾಸಘಾತಿನಾಂ ।
ಯೇ ಮಿತ್ರದ್ರೋಹಿಣಃ ಪಾಪಾಸ್ತೇಷಾಂ ಕಿಂ ಶಾಸನಂ ಭವೇತ್ ॥ ೭೮ ॥
ಋಷಯೋಽತ್ರ ವಿಚಾರಾರ್ಥಂ ನಿಯುಕ್ತಾ ನಿಪುಣಾಃ ಸ್ಥಿತಾಃ ।
ತೇ ಯತ್ರ ಬ್ರುವತೇ ತತ್ರ ಕ್ಷಿಪಧ್ವಂ ಮಾ ವಿಚಾರ್ಯತಾಂ ॥ ೭೯ ॥

---

೭೩. ನೀರೂ, ನೆರಳೂ, ಆಶ್ರಮವೂ ಎಲ್ಲಿಯೂ ಇರಲಿಲ್ಲ. ನೀರಿನಿಂದ ಸಹಿತವಾದ ಅನ್ನದ ಬದಲಾಗಿ ವಿಷವನ್ನೇ ಪಾಪಿಗಳಿಗೆ ಕೊಡುತ್ತಿದ್ದರು.

೭೪. ನೆರಳನ್ನು ಬೇಡುವವರ ಮೇಲೆ ಅಗ್ನಿಯು ಅತ್ಯಂತವಾಗಿ ಕಾಯುತ್ತಿದ್ದಿತು. ಅದರಿಂದ ಸುಡಲ್ಪಡುತ್ತಿರುವ ಜೀವಿಗಳು ಬಹಳವಾಗಿ ಗೋಳಾಡುತ್ತಿದ್ದುವು.

೭೫. ಅವರು ಅಣ್ಣ, ಅಮ್ಮ, ಮಗು ಎಂದು ದಾರಿಯಲ್ಲಿ ಮೂರ್ಛೆಗೊಂಡು ಬೀಳುತ್ತಿದ್ದರು. ಯಮಕಿಂಕರರು ಇಂತಹ ದಾರಿಯಿಂದ ಅವನನ್ನು ಕರೆದುಕೊಂಡು ಹೋಗುತ್ತಿದ್ದರು.

೭೬–೭೭. ಆ ಯಮಭೃತ್ಯರು ಯಮನೆಡೆಗೆ ಅವನನ್ನು ಕರೆದುಕೊಂಡು ಹೋಗಿ ಕುತ್ತಿಗೆಗೆ ಹಗ್ಗವನ್ನು ಕಟ್ಟಿ ಬಾಗಿಲಿನಲ್ಲಿ ಕುಳ್ಳಿರಿಸಿ, "ಪ್ರಭೂ! ಇವನು ಮಿತ್ರನನ್ನು ಕೊಂದಿರುವನು. ಇವನಿಗೆ ಮುಂದೆ ಏನನ್ನು ಮಾಡಬೇಕೆಂಬುದನ್ನು ನಿಶ್ಚಯಿಸು" ಎಂದರು.

೭೮–೭೯. ಯಮನು ಹೇಳುತ್ತಾನೆ:—ನಾನು ಹಿಂದೆ ವಿಶ್ವಾಸಘಾತುಕರ ಮುಖವನ್ನು ನೋಡಲಿಲ್ಲ. ಮಿತ್ರದ್ರೋಹಿಗಳಾದ ಪಾಪಿಗಳಿಗೆ ಯಾವ ಶಿಕ್ಷೆಯು ವಿಹಿತವಾಗಿದೆಯೆಂಬುದನ್ನು ವಿಚಾರಿಸಲು ನಿಪುಣರಾದ ಋಷಿಗಳನ್ನು ನೇಮಿಸಿರುವೆನು. ಅವರು ಏನನ್ನು ಹೇಳುವರೊ, ಎಲ್ಲಿಗೆ ಒಯ್ದು ಹಾಕಿರೆಂದು ಹೇಳುವರೊ ಅಲ್ಲಿ ಇವನನ್ನು ಎಸೆಯಿರಿ. ವಿಚಾರಮಾಡಬೇಡಿರಿ.

ಇತ್ಯುಕ್ತಾಸ್ತೇ ತಮಾದಾಯ ಕಿಂಕರಾಃ ಶೀಘ್ರಗಾಮಿನಃ ।
ಮುನೀಶಾಂಸ್ತತ್ರ ತಾನೂಚುಸ್ತಂ ನಿವೇದ್ಯ ಯಮಾಜ್ಞಯಾ ॥ ೮೦ ॥
ದ್ವಿಜಾ ಅನೇನ ಮಿತ್ರಂ ಸ್ವಂ ಪ್ರಸುಪ್ತಂ ನಿಶಿ ಘಾತಿತಂ ।
ವಿಶ್ವಸ್ತಂ ಧನಲೋಭೇನ ಕೋ ದಂಡೋಽಸ್ಯ ಭವಿಷ್ಯತಿ ॥ ೮೧ ॥

ಮುನಯ ಊಚುಃ:—

ಅದೃಷ್ಟಪೂರ್ವಮಸ್ಮಾಭಿರ್ವದನಂ ಮಿತ್ರಘಾತಿನಾಂ ।
ಕೃತ್ವಾ ಪಟಾಂತರೇ ಹ್ಯೇನಂ ಶೃಣ್ವಂತು ಗತಿಮಸ್ಯ ತಾಂ ॥ ೮೨ ॥
ತೇ ಶಾಸ್ತ್ರಾಣಿ ವಿಚಾರ್ಯಾರ್ಥೇ ಋಷಯಶ್ಚ ಪರಸ್ಪರಂ ।
ಆಹೂಯ ಯಮದೂತಾಂಸ್ತಾನೂಚುರ್ಬ್ರಾಹ್ಮಣಪುಂಗವಾಃ ॥ ೮೩ ॥
ಆಲೋಕಿತಾನಿ ಶಾಸ್ತ್ರಾಣಿ ವೇದಾಃ ಸಾಂಗಾಃ ಸ್ಮೃತೀರಪಿ ।
ಪುರಾಣಾನಿ ಚ ಮೀಮಾಂಸಾ ದೃಷ್ಟಮಸ್ಮಾಭಿರತ್ರಚ ॥ ೮೪ ॥
ಬ್ರಹ್ಮಘ್ನೇ ಚ ಸುರಾಪೇ ಚ ಸ್ತೇಯೇ ಗುರ್ವಂಗನಾಗಮೇ ।
ನಿಷ್ಕೃತಿರ್ವಿಹಿತಾ ಶಾಸ್ತ್ರೇ ಕೃತಘ್ನೇ ನಾಽಸ್ತಿ ನಿಷ್ಕೃತಿಃ ॥ ೮೫ ॥
ಯೇ ಸ್ತ್ರೀಘ್ನಾಶ್ಚ ಗುರುಘ್ನಾಶ್ಚ ಯೇ ಬಾಲಬ್ರಹ್ಮಘಾತಿನಃ ।
ವಿಹಿತಾ ನಿಷ್ಕೃತಿಃ ಶಾಸ್ತ್ರೇ ಕೃತಘ್ನೇ ನಾಽಸ್ತಿ ನಿಷ್ಕೃತಿಃ ॥ ೮೬ ॥

---

೮೦. ಯಮನು ಹೀಗೆನ್ನಲು, ಆ ಭೃತ್ಯರು ಬೇಗನೆ ಅವನನ್ನು ಕರೆದು ಕೊಂಡುಹೋಗಿ ಯಮನ ಅಪ್ಪಣೆಯನ್ನು ಮುನಿಗಳಿಗೆ ತಿಳಿಸಿ ಇಂತೆಂದರು.

೮೧. "ಮುನಿಗಳೆ! ಇವನು ರಾತ್ರಿಯಲ್ಲಿ ನಂಬಿಕೆಯಿಂದ ಮಲಗಿರುವ ಮಿತ್ರನನ್ನು ದ್ರವ್ಯಾಶೆಯಿಂದ ಕೊಂದಿದ್ದಾನೆ. ಇವನಿಗೆ ಯಾವ ಶಿಕ್ಷೆಯು ವಿಹಿತವಾಗಿರುವುದು ?"

೮೨. ಮುನಿಗಳು ಹೇಳುತ್ತಾರೆ:—ನಾವು ಹಿಂದೆ ಮಿತ್ರರನ್ನು ಕೊಂದವರ ಮುಖವನ್ನು ನೋಡಲಿಲ್ಲ. ಇವನನ್ನು ತೆರೆಯ ಹಿಂದೆ ನಿಲ್ಲಿಸಿ ಇವನ ಗತಿಯನ್ನು ಕೇಳಿರಿ.

೮೩—೮೪. ಆ ಮುನಿವರ್ಯರು ಪರಸ್ಪರವಾಗಿ ಶಾಸ್ತ್ರಗಳನ್ನು ವಿಚಾರಿಸಿ ಯಮದೂತರನ್ನು ಕರೆದು ಇಂತೆಂದರು: "ನಾವು ಶಾಸ್ತ್ರ, ಸಾಂಗವೇದ, ಸ್ಮೃತಿ, ಪುರಾಣ, ಮೀಮಾಂಸಾಶಾಸ್ತ್ರ ಇವುಗಳನ್ನು ನೋಡಿದೆವು.

೮೫. ಶಾಸ್ತ್ರದಲ್ಲಿ ಬ್ರಹ್ಮಘ್ನ, ಸುರಾಪಾಯಿ, ಕಳ್ಳ, ಗುರುಪತ್ನಿಯನ್ನು ಸೇರಿದವನು ಇವರಿಗೆ ಪ್ರಾಯಶ್ಚಿತ್ತವು ವಿಹಿತವಾಗಿರುವುದು. ಕೃತಘ್ನನಿಗೆ ಪ್ರಾಯಶ್ಚಿತ್ತವು ವಿಹಿತವಾಗಿಲ್ಲ.

೮೬. ಸ್ತ್ರೀ, ಗುರು, ಬಾಲ, ಬ್ರಾಹ್ಮಣರನ್ನು ಕೊಂದವರಿಗೆ ಪ್ರಾಯಶ್ಚಿತ್ತವು ವಿಹಿತವಾಗಿದೆ. ಕೃತಘ್ನನಿಗೆ ವಿಹಿತವಾಗಿರುವುದಿಲ್ಲ.

ವಾಪೀಕೂಪತಡಾಗಾನಾಂ ಭೇತ್ತಾರೋ ಯೇ ಚ ಪಾಪಿನಃ ।
ಉದ್ಯಾನವಾಟಿಕಾನಾಂ ಚ ಛೇತ್ತಾರೋ ಯೇ ಚ ದುರ್ಜನಾಃ ॥ ೮೭ ॥
ದಾವಾಗ್ನಿದಾಹಕಾ ಯೇ ಚ ಸತತಂ ಯೇಽಸುಹಿಂಸಕಾಃ ।
ನ್ಯಾಸಾಽಪಹಾರಿಣೋ ಯೇ ಚ ಗರದಾಃ ಸ್ವಾಮಿವಂಚಕಾಃ ॥ ೮೮ ॥
ಮಾತಾಪಿತೃಗುರೂಣಾಂ ಚ ತ್ಯಾಗಿನೋ ದೋಷದಾಯಿನಃ ।
ಸ್ವಭರ್ತೃವಂಚನಪರಾ ಯಾ ಸ್ತ್ರೀ ಗರ್ಭಪ್ರಘಾತಿನೀ ॥ ೮೯ ॥
ವಿವೇಕರಹಿತಾ ಯಾ ಸ್ತ್ರೀ ಯಾಽಸ್ನಾತಾ ಭೋಜನೇ ರತಾ ।
ದ್ವಿಕಾಲಭೋಜನರತಾಸ್ತಥಾ ವೈಷ್ಣವವಾಸರೇ ॥ ೯೦ ॥
ತಾಸಾಂ ಸ್ತ್ರೀಣಾಂ ಗತಿರ್ದೃಷ್ಟಾ ನ ತು ವಿಶ್ವಾಸಘಾತಿನಾಂ ।
ವಿಶ್ವಾಸಘಾತಿನಾಂ ಪುಂಸಾಂ ಮಿತ್ರದ್ರೋಹಕೃತಾಂ ತಥಾ ॥ ೯೧ ॥
ತೇಷಾಂ ಗತಿರ್ನ ವೇದೇಷು ಪುರಾಣೇಷು ಚ ಕಾ ಕಥಾ ।
ಇತಿ ಸ್ಥಿತೇಷು ಪಾಪೇಷು ಗತಿರೇಷಾಂ ನ ವಿದ್ಯತೇ ॥ ೯೨ ॥
ನಾಽನ್ಯಾ ಗತಿರ್ಮಿತ್ರಹನನೇ ವಿಶ್ವಸ್ತಘ್ನೇ ಚ ನಃ ಶ್ರುತಂ ।
ಇತೋ ನೀತ್ವಾ ಯಮದೂತಾ ಏನಂ ವಿಶ್ವಸ್ತಘಾತಿನಂ ॥ ೯೩ ॥
ಕಲ್ಪಕೋಟಿಶತಂ ಸಾಗ್ರಂ ಪರ್ಯಾಯೇಣ ಪೃಥಕ್ ಪೃಥಕ್ ।
ನರಕೇಷು ಚ ಸರ್ವೇಷು ತ್ರಿಂಶತ್ಕೋಟಿಷು ಸಂಖ್ಯಯಾ ॥ ೯೪ ॥
ಕ್ಷಿಪ್ಯತಾಮೇಷ ಮಿತ್ರಘ್ನೋ ವಿಚಾರೋ ಮಾ ವಿಧೀಯತಾಂ ।
ಇತಿ ತೇ ವಚನಂ ಶ್ರುತ್ವಾ ಕಿಂಕರಾಸ್ತಂ ನಿಗೃಹ್ಯ ಚ ॥ ೯೫ ॥

---

೮೭–೯೨. ಬಾವಿ, ಕೊಳ, ಕೆರೆಗಳನ್ನು ಭೇದಿಸಿದ ಪಾಪಿಗಳು, ಉದ್ಯಾನವನ್ನು ಕೆಡಿಸಿದ ದುರ್ಜನರು, ದಾವಾಗ್ನಿದಾಹಕರು, ಪ್ರಾಣಿಹಿಂಸಕರು, ನ್ಯಾಸಾಪಹಾರಿಗಳು, ವಿಷವನ್ನು ಕೊಟ್ಟವರು, ಸ್ವಾಮಿವಂಚಕರು, ಮಾತೃ, ಪಿತೃ, ಗುರುಗಳನ್ನು ತ್ಯಜಿಸಿದವರು, ದೋಷವನ್ನುಂಟುಮಾಡಿದವರು ಇವರಿಗೂ, ತನ್ನ ಪತಿಗೆ ಮೋಸಮಾಡಿದವಳು, ಗರ್ಭವನ್ನು ಹಿಂಸಿಸಿದವಳು, ವಿವೇಕವಿಲ್ಲದವಳು, ಸ್ನಾನ ಮಾಡದೆ ಭೋಜನಮಾಡಿದವಳು, ವಿಷ್ಣುವಿನ ದಿನ (ಏಕಾದಶೀ ದಿನ) ಎರಡು ವೇಳೆ ಭುಜಿಸಿದವಳು ಇವರಿಗೂ ಪ್ರಾಯಶ್ಚಿತ್ತವಿದೆ. ವಿಶ್ವಾಸಘಾತುಕರೂ, ಮಿತ್ರದ್ರೋಹಿಗಳೂ ಆದವರಿಗೆ ವೇದಪುರಾಣಗಳಲ್ಲಿ ಗತಿಯು ವಿಹಿತವಾಗಿಲ್ಲ. ಹೀಗಿರಲು ಈ ಪಾಪಿಗೆ ಗತಿಯೇ ಇರುವುದಿಲ್ಲ.

೯೩–೯೭. ಮಿತ್ರನನ್ನು ಕೊಂದ ಈ ವಿಶ್ವಾಸಘಾತುಕನಿಗೆ ಬೇರೆ ಗತಿಯನ್ನು ನಾವು ಕೇಳದಿರುವುದರಿಂದ ಇವನನ್ನು ಇಲ್ಲಿಂದ ಕರೆದುಕೊಂಡುಹೋಗಿ ನೂರು ಕೋಟಿ ಕಲ್ಪಗಳಕಾಲ ಕ್ರಮವಾಗಿ ಮೂವತ್ತುಕೋಟಿ ನರಕಗಳಲ್ಲಿ ಎಸೆಯಿರಿ. ವಿಚಾರಮಾಡಬೇಡಿರಿ.'' ಆ ಭೃತ್ಯರು ಈ ಮಾತನ್ನು ಕೇಳಿ ಅವನನ್ನು ನಿಗ್ರಹಿಸಿ

ಯತ್ರ ತೇ ನರಕಾ ಘೋರಾಸ್ತತ್ರ ಕ್ಷೇಪ್ತುಂ ಗತಾಸ್ತತಃ ।
ತೇ ತಮಾದಾಯ ಹಿ ನರಕೇ ಘೋರೇ ರೌರವಸಂಜ್ಞಿತೇ ॥ ೯೬ ॥
ಚಿಕ್ಷಿಪುಸ್ತತ್ರ ಪಾಪಿಷ್ಠಂ ಕ್ಷಿಪ್ತೇ ರಾವೋಽಭವನ್ಮಹಾನ್ ।
ನರಕಸ್ಥಿತಭೂತೇಷು ಮೋಕ್ತವ್ಯೋ ನೈವ ಪಾಪಕೃತ್ ॥ ೯೭ ॥
ಅಸ್ಯ ಸಂಸ್ಪರ್ಶನಾದೇವ ಪೀಡಾ ಶತಗುಣಾ ಭವೇತ್ ।
ಯಥಾ ವ್ಯಥಾಽಸಿಕಾಷ್ಠೈಶ್ಚ ಸಮಿದ್ಧೈರ್ದಹನಾತ್ಮಕೈಃ ॥ ೯೮ ॥
ಭವತಿ ಸ್ಪರ್ಶನಾತ್ತಸ್ಯ ಕಿಮೇತೇನ ಮೃತಾಮುಲಂ ।
ಯಥಾ ದುರ್ಜನಸಂಸರ್ಗಾತ್ಸುಜನೋ ಯಾತಿ ಲಾಘವಂ ॥ ೯೯ ॥
ಸನ್ನಿಧಾನಾತ್ತಥಾಽಸ್ಯಾಶು ಕ್ಷತೇ ಕ್ಷಾರಾವಸೇಚನಂ ।
ಪ್ರಸಾದಃ ಕ್ರಿಯತಾಮಾಶು ನೀಯತಾಂ ನರಕೇಽನ್ಯತಃ ॥ ೧೦೦ ॥
ಏವಮುಕ್ತಾಸ್ತತಸ್ತೈಸ್ತು ಗತಾಸ್ತೇ ತ್ವಶುಚಿಂ ಪ್ರತಿ ।
ತತ್ರ ತೇ ನಾರಕಾಃ ಸಂತಿ ಪೂರ್ವವತ್ತೇಽಪಿ ಚುಕ್ರುಶುಃ ॥ ೧೦೧ ॥
ಏವಂ ತೇ ಕಿಂಕರಾಃ ಸರ್ವೇ ಪರ್ಯಟನ್ನರಕಮಂಡಲೇ ।
ನರಕೇಪಿ ಸ್ಥಿತಿಸ್ತಸ್ಯ ನಾಽಸ್ತಿ ಪಾಪಸ್ಯ ದುರ್ಮತೇಃ ॥ ೧೦೨ ॥
ಯದಾ ತದಾ ತು ತೇ ಸರ್ವೇ ತಂ ಗೃಹ್ಯ ಯಮಸನ್ನಿಧೌ ।
ಗತ್ವಾ ನಿವೇದ್ಯ ತತ್ಸರ್ವಂ ಯದುಕ್ತಂ ನಾರಕೈರ್ನರೈಃ ।
ನರಕೇ ನ ಸ್ಥಿತಿರ್ಯಸ್ಯ ತಸ್ಯ ಕಿಂ ಕ್ರಿಯತಾಂ ವದ ॥ ೧೦೩ ॥

---

ಕರೆದುಕೊಂಡುಹೋಗಿ ರೌರವವೆಂಬ ಘೋರನರಕಕ್ಕೆ ಎಸೆಯಲು, ಅಲ್ಲಿ ನರಕವಾಸಿಗಳಲ್ಲಿಯೆ ಈರೀತಿಯಾದ ಮಹಾಶಬ್ದವುಂಟಾಯಿತು. "ಈ ಪಾಪಿಯನ್ನು ಇಲ್ಲಿ ಬಿಡಬೇಡಿರಿ.

೯೮–೧೦೦. ಇವನ ಸ್ಪರ್ಶದಿಂದ ನಮಗೆ ಕತ್ತಿ ಮತ್ತು ಉರಿಯುವ ಬೆಂಕಿಗಳಿಂದಾಗುವ ವ್ಯಥೆಯು ಆಗುತ್ತಿದೆ? ಈ ವ್ಯಥೆಯು ಅದಕ್ಕಿಂತಲೂ ನೂರು ಮಡಿಯಷ್ಟು ಆಗುತ್ತಿದೆಯಲ್ಲ. ಇವನು ಯಾವ ಪಾಪವನ್ನು ಮಾಡಿದ್ದಾನೆ? ದುರ್ಜನರ ಸಹವಾಸದಿಂದ ಸಜ್ಜನನು ಹೇಗೋ ಹಾಗೆ ಲಾಘವವನ್ನು ಹೊಂದುತ್ತಿರುವೆವು. ಹುಣ್ಣಿಗೆ ಉಪ್ಪನ್ನು ಹಾಕಿದಂತಾಗಿದೆ. ನೀವು ನಮ್ಮಲ್ಲಿ ಅನುಗ್ರಹ ಮಾಡಿ ಇವನನ್ನು ಬೇರೆ ನರಕಕ್ಕೆ ಒಯ್ಯಿರಿ."

೧೦೧. ಅವರು ಹೀಗೆ ಕೂಗಿ ಹೇಳಲು, ಆ ಯಮಕಿಂಕರರು ಅವನನ್ನು ಅಶುದ್ಧವಾದ ಬೇರೊಂದು ನರಕಕ್ಕೆ ಕರೆದುಕೊಂಡುಹೋದರು. ಅಲ್ಲಿರುವ ನರಕವಾಸಿಗಳೂ ಹಿಂದಿನ ನಾರಕಿಗಳಂತೆಯೇ ಕಿರಿಚಿಕೊಂಡರು.

೧೦೨. ಹೀಗೆ ಆ ಯಮಕಿಂಕರರೆಲ್ಲರೂ ನರಕಗಳ ಸಮೂಹಗಳಲ್ಲಿ ಸಂಚರಿಸಿದರು. ದುರ್ಬುದ್ಧಿಯಾದ ಆ ಪಾಪಿಗೆ ನರಕದಲ್ಲಿಯೂ ಸ್ಥಾನವಿರಲಿಲ್ಲ.

೧೦೩. ಆಗ ಆ ದೂತರು ಅವನನ್ನು ಯಮನ ಬಳಿಗೆ ಕರೆದುಕೊಂಡು

ಯಮ ಉವಾಚ:—

ಪಾಪಿಷ್ಠ ಏಷ ವೈ ಯಾತು ಯೋನಿಂ ತಿರ್ಯಗ್ಜನ್ಮಿಷೇವಿತಾಂ ।
ಕಾಲಂ ಮುನಿಭಿರುದ್ದಿಷ್ಟಃ ತಿರ್ಯಗ್ಯೋನಿಂ ಪ್ರವೇಶ್ಯತಾಂ ॥ ೧೦೪ ॥
ಏವಮುಕ್ತೇ ತು ವಚನೇ ಪ್ರಜಾಸಂಯಮನೇನ ಚ ।
ಸ ಗತಃ ಕೃಮಿತಾಂ ಪಾಪೋ ವಿಷ್ಠಾಸು ಚ ಪೃಥಕ್ ಪೃಥಕ್ ॥ ೧೦೫ ॥
ತತೋಽಸೌ ದಂಶಮಶಕಾನ್ಪಿಪೀಲಿಕಸಮುದ್ಭವಾನ್ ।
ಯೂಕಾ ಮತ್ಕುಣಕಾಖ್ಯಾಂಶ್ಚ ಗತ್ವಾ ಪಕ್ಷಿತ್ವಮಾಗತಃ ॥ ೧೦೬ ॥
ಸ್ಥಾವರತ್ವಂ ಗತಃ ಪಶ್ಚಾತ್ಪಾಷಾಣತ್ವಂ ತತಃ ಪರಂ ।
ಸರೀಸೃಪಾನಜಗರವರಾಹಮೃಗಹಸ್ತಿನಃ ॥ ೧೦೭ ॥
ವೃಕಶ್ವಾನಖರೋಷ್ಟ್ರಾಂಶ್ಚ ಶೂಕರೀಂ ಗ್ರಾಮಜಾತಿಕಾಂ ।
ಯೋನಿಮಾಶ್ವತರೀಂ ಪ್ರಾಪ್ಯ ತಥಾ ಮಹಿಷಸಂಭವಾಂ ॥ ೧೦೮ ॥
ಏತಾಶ್ಚಾಽನ್ಯಾಶ್ಚ ಬಹ್ವೀರ್ವೈ ಪ್ರಾಪಯೋನೀಃ ಕ್ರಮೇಣ ವೈ ।
ಸ ತಾ ಯೋನೀರನುಪ್ರಾಪ್ಯ ಧುರ್ಯೋಽಭೂದ್ಭಾರವಾಹಕಃ ॥ ೧೦೯ ॥
ಸ ಗೃಹೇ ಪಾರ್ಥಿವೇಶಸ್ಯ ಧಾರ್ಮಿಕಸ್ಯ ಯಶಸ್ವಿನಃ ।
ಸ ದೃಷ್ಟ್ವಾ ಕಾರ್ತಿಕೀಂ ಪ್ರಾಪ್ತಾಮೇಕದಾ ನೃಪಸತ್ತಮಃ ॥ ೧೧೦ ॥
ಪುರೋಹಿತಂ ಸಮಾಹೂಯ ಬ್ರಾಹ್ಮಣಾಂಶ್ಚ ತಥಾ ಬಹೂನ್ ।
ನ ಗೃಹೇ ಕಾರ್ತಿಕೀಂ ಕುರ್ಯಾದೇತನ್ಮೇ ಬಹುಶಃ ಶ್ರುತಂ ॥ ೧೧೧ ॥

---

ಹೋಗಿ ನರಕವಾಸಿಗಳು ಹೇಳಿದ ಮಾತನ್ನು ತಿಳಿಸಿ, "ಇವನಿಗೆ ನರಕದಲ್ಲಿ ಸ್ಥಳವಿಲ್ಲ; ಏನನ್ನು ಮಾಡಬೇಕೆಂಬುದನ್ನು ಹೇಳು" ಎಂದರು.

೧೦೪. ಯಮನು ಹೇಳುತ್ತಾನೆ:—ಪಾಪಿಷ್ಠನಾದ ಇವನು ಮುನಿಗಳು ಹೇಳಿದ ಕಾಲದವರೆಗೆ ತಿರ್ಯಗ್ಯೋನಿಯನ್ನು ಸೇರಿ ಬಿದ್ದಿರಲಿ.

೧೦೫. ಯಮನು ಹೀಗೆ ನುಡಿಯಲು, ಆ ಪಾಪಿಯು ಮಲದಲ್ಲಿ ಪ್ರತ್ಯೇಕವಾಗಿ ಕ್ರಿಮಿತ್ವವನ್ನು ಹೊಂದಿದನು.

೧೦೬–೧೦೮. ಅನಂತರ ಅವನು ನೊಣ, ಸೊಳ್ಳೆ, ಇರುವೆ, ಹೇನು, ತಿಗಣೆ, ಪಕ್ಷಿಯ ಜನ್ಮಗಳನ್ನೆತ್ತಿ ಆಮೇಲೆ ಕಲ್ಲಾದನು. ತರುವಾಯ ಸರಿಯುವ ಪ್ರಾಣಿ, ಅಜಗರ, ವರಾಹ, ಮೃಗ, ಆನೆ, ತೋಳ, ನಾಯಿ, ಕತ್ತೆ, ಒಂಟೆ, ಗ್ರಾಮಸೂಕರ, ಹೇಸರಕತ್ತೆ, ಕೋಣಗಳ ಯೋನಿಗಳಲ್ಲಿ ಜನ್ಮವನ್ನು ತಾಳಿದನು.

೧೦೯–೧೧೧. ಹೀಗೆ ಅವನು ಈ ಯೋನಿಗಳನ್ನೂ, ಇತರ ಬಹುವಿಧ ಯೋನಿಗಳನ್ನೂ ಹೊಂದಿ ಕೊನೆಯಲ್ಲಿ ಎತ್ತಾಗಿ ಹುಟ್ಟಿ, ಒಬ್ಬ ಧಾರ್ಮಿಕನೂ, ಕೀರ್ತಿವಂತನೂ ಆದ ರಾಜನ ಮನೆಯನ್ನು ಸೇರಿದನು. ಆ ರಾಜನು ಒಂದಾನೊಂದು ದಿನ ಕಾರ್ತಿಕಮಾಸವು ಬರಲು ಪುರೋಹಿತರನ್ನೂ, ಬಹುಮಂದಿ

ಸಮೇತಾ ಕುತ್ರ ಯಾಸ್ಯಾಮ ಇತಿ ಬ್ರೂತ ದ್ವಿಜೋತ್ತಮಾಃ ।
ಯೋ ಗೃಹೇ ಕಾರ್ತಿಕೀಂ ಕುರ್ಯಾತ್ಸ್ನಾನದಾನಾದಿವರ್ಜಿತಃ ॥ ೧೧೨ ॥
ಸಂವತ್ಸರಕೃತಾತ್ಪುಣ್ಯಾತ್ಸ ಬಹಿರ್ಭವತಿ ಶ್ರುತಿಃ ।
ತಸ್ಮಾತ್ಸರ್ವಪ್ರಯತ್ನೇನ ತೀರ್ಥಂ ಸರ್ವಗುಣಾನ್ವಿತಂ ॥ ೧೧೩ ॥
ಸಹಿತಾಸ್ತತ್ರ ಗಚ್ಛಾಮಃ ಸ್ನಾತುಂ ದಾತುಂ ಚ ಶಕ್ತಿತಃ ।
ಏವಮುಕ್ತೇ ತು ವಚನೇ ಪಾರ್ಥಿವೇನ ದ್ವಿಜೋತ್ತಮಾಃ ॥ ೧೧೪ ॥
ಊಚುಃ ಶ್ರೇಷ್ಠಂ ನೃಪಶ್ರೇಷ್ಠ ರೇವಾಯಾ ಉತ್ತರೇ ತಟೇ ।
ಭಾರೇಶ್ವರೇತಿ ವಿಖ್ಯಾತಂ ಮುಕ್ತಿತೀರ್ಥಂ ನೃಪೋತ್ತಮ ॥ ೧೧೫ ॥
ತತ್ರ ಯಾಮೋ ವಯಂ ಸರ್ವೇ ಸರ್ವಪಾಪಕ್ಷಯಾವಹಂ ।
ಏವಮುಕ್ತಃ ಸ ನೃಪತಿರ್ಗೃಹೀತ್ವಾ ಪ್ರಚುರಂ ವಸು ॥ ೧೧೬ ॥
ಶಕಟಂ ಸಂಭೃತಂ ಕೃತ್ವಾ ತತ್ರ ಯುಕ್ತಃ ಸ ಧೂರ್ವಹಃ ।
ಯಃ ಕೃತ್ವಾ ಮಿತ್ರಹನನಂ ಗೋಯೋನಿಂ ಸಮುಪಾಗತಃ ॥ ೧೧೭ ॥
ಇತ್ಥಂ ಸ ನರ್ಮದಾತೀರೇ ಸಂಪ್ರಾಪ್ತಸ್ತೀರ್ಥಮುತ್ತಮಂ ।
ಗತ್ವಾ ಚತುರ್ದಶೀದಿನೇ ಹ್ಯುಪವಾಸಕೃತಕ್ಷಣಃ ॥ ೧೧೮ ॥
ಗತ್ವಾ ಸ ನರ್ಮದಾತೀರೇ ನಾಮ ರುದ್ರೇತ್ಯನುಸ್ಮರನ್ ।
ಶುಚಿಪ್ರದೇಶಾಚ್ಚ ಮೃದಂ ಮಂತ್ರೇಣಾನೇನ ಗೃಹ್ಯತಾಂ ॥ ೧೧೯ ॥

---

ಬ್ರಾಹ್ಮಣರನ್ನೂ ಕರೆಯಿಸಿ ಹೀಗೆಂದನು. "ನಾನು ಮನೆಯಲ್ಲಿ ಕಾರ್ತಿಕಿಯನಾಚರಿಸಬಾರದೆಂದು ಅನೇಕಬಾರಿ ಕೇಳಿದ್ದೇನೆ.

೧೧೨–೧೧೫. ದ್ವಿಜವರ್ಯರೆ! ನಾವೆಲ್ಲರೂ ಒಟ್ಟಿಗೆ ಎಲ್ಲಿಗೆ ಹೋಗೋಣ. ತೀರ್ಥಸ್ನಾನದಾನಗಳಿಲ್ಲದೆ ಮನೆಯಲ್ಲಿ ಕಾರ್ತಿಕಿಯನ್ನಾಚರಿಸಿದವನು ಒಂದು ವರ್ಷ ಮಾಡಿದ ಪುಣ್ಯವನ್ನು ಕಳೆದುಕೊಳ್ಳುವನು. ಆದುದರಿಂದ ನಾವೆಲ್ಲರೂ ಪ್ರಯತ್ನಿಸಿ ಒಟ್ಟಿಗೆ ಸೇರಿ ಶಕ್ತ್ಯನುಸಾರ ಸ್ನಾನದಾನಗಳನ್ನು ಮಾಡಲು ಸಕಲ ಗುಣಗಳಿಂದ ಕೂಡಿದ ತೀರ್ಥವೊಂದಕ್ಕೆ ಹೋಗೋಣ." ರಾಜನು ಹೀಗೆ ಹೇಳಲು, ಆ ಬ್ರಾಹ್ಮಣರೆಲ್ಲರೂ ಇಂತೆಂದರು. "ಮಹಾರಾಜ! ನರ್ಮದಾ ನದಿಯ ಉತ್ತರತೀರದಲ್ಲಿ ಭಾರೇಶ್ವರವೆಂಬ ಮುಕ್ತಿತೀರ್ಥವೊಂದಿರುವುದು.

೧೧೬–೧೧೭. ನಾವೆಲ್ಲರೂ ಸಕಲ ಪಾಪಗಳನ್ನು ನಿವಾರಿಸುವ ಆ ತೀರ್ಥಕ್ಕೆ ಹೋಗೋಣ." ಬ್ರಾಹ್ಮಣರು ಹೀಗೆ ಹೇಳಲು, ಆ ರಾಜನು ಬಹಳ ದ್ರವ್ಯವನ್ನು ತೆಗೆದುಕೊಂಡು ಗಾಡಿಗೆ ತುಂಬಿ, ಮಿತ್ರನನ್ನು ಕೊಂದು ಎತ್ತಾಗಿ ಹುಟ್ಟಿದ್ದ ಆ ಸಹದೇವನನ್ನು ಅದಕ್ಕೆ ಕಟ್ಟಿದನು.

೧೧೮–೧೧೯. ಹೀಗೆ ಅವನು ಆ ನರ್ಮದಾನದಿಯ ದಡಕ್ಕೆ ಹೋಗಿ ಚತುರ್ದಶೀ ದಿನ ಉಪವಾಸಮಾಡಿ ರುದ್ರನಾಮಗಳನ್ನು ಸ್ಮರಿಸುತ್ತ ಈ ಮಂತ್ರವನ್ನುಚ್ಚರಿಸಿ ಶುದ್ಧವಾದ ಸ್ಥಳದಿಂದ ಮೃತ್ತಿಗೆಯನ್ನು ತೆಗೆದುಕೊಂಡನು.

ಉದ್ಧೃತಾಽಸಿ ವರಾಹೇಣ ರುದ್ರೇಣ ಶತಬಾಹುನಾ ।
ಅಹಮಪ್ಯುದ್ಧರಿಷ್ಯಾಮಿ ಪ್ರಜಯಾ ಬಂಧನೇನ ಚ ॥ ೧೨೦ ॥
ಸ ಏವಂ ತಾಂ ಮೃದಂ ನೀತ್ವಾ ಮುಕ್ತ್ವಾ ತೀರೇ ತಥೋತ್ತರೇ ।
ದದರ್ಶ ಭಾಸ್ಕರಂ ಪಶ್ಚಾನ್ಮಂತ್ರೇಣಾಽನೇನ ಚಾಲಭೇತ್ ॥ ೧೨೧ ॥
ಅಶ್ವಕ್ರಾಂತೇ ರಥಕ್ರಾಂತೇ ವಿಷ್ಣುಕ್ರಾಂತೇ ವಸುಂಧರೇ ।
ಮೃತ್ತಿಕೇ ಹರ ಮೇ ಪಾಪಂ ಜನ್ಮಕೋಟಿಶತಾರ್ಜಿತಂ ॥ ೧೨೨ ॥
ತತ ಏವಂ ವಿಗಾಹ್ಯಾಪೋ ಮಂತ್ರಮೇತಮುದೀರಯೇತ್ ।
ತ್ವಂ ನರ್ಮದೇ ಪುಣ್ಯಜಲೇ ತವಾಂಭಃ ಶಂಕರೋದ್ಭವಂ ॥ ೧೨೩ ॥
ಸ್ನಾನಂ ಪ್ರಕುರ್ವತೋ ಮೇಽದ್ಯ ಪಾಪಂ ಹರತು ಚಾರ್ಜಿತಂ ।
ಸ ಸ್ನಾತ್ವಾಽನೇನ ವಿಧಿನಾ ಸಂತರ್ಪ್ಯ ಪಿತೃದೇವತಾಃ ॥ ೧೨೪ ॥
ಯಯೌ ದೇವಾಲಯಂ ಪಶ್ಚಾದುಪಹಾರೈಃ ಸಮನ್ವಿತಃ ।
ಭಕ್ತ್ಯಾ ಸಂಚಿಂತ್ಯ ಸಾನ್ನಿಧ್ಯೇ ಶಂಕರಂ ಲೋಕಶಂಕರಂ ॥ ೧೨೫ ॥
ಪುರಾಣೋಕ್ತವಿಧಾನೇನ ಪೂಜಾಂ ಸಮುಪಚಕ್ರಮೇ ।
ಪೂಜಾ ಚತುಷ್ಟಯಂ ದೇವಿ ಶಿವರಾತ್ರ್ಯಾಂ ನಿಗದ್ಯತೇ ॥ ೧೨೬ ॥

---

೧೨೦. "ನಿನ್ನನ್ನು ವರಾಹನೂ, ಶತಬಾಹುವಾದ ರುದ್ರನೂ ಉದ್ಧರಿಸಿರುವರು. ನಾನೂ ಪ್ರಜಾಬಂಧನದಿಂದ ನಿನ್ನನ್ನು ಉದ್ಧರಿಸುವೆನು."

೧೨೧. ಅವನು ಹೀಗೆ ಆ ಮೃತ್ತಿಕೆಯನ್ನು ತೆಗೆದುಕೊಂಡು ಹೋಗಿ ನರ್ಮದಾ ನದಿಯ ಉತ್ತರತಟದಲ್ಲಿರಿಸಿ ಸೂರ್ಯನನ್ನು ಸಂದರ್ಶಿಸಿ, ಈ ಮಂತ್ರದಿಂದ ಆ ಮೃತ್ತಿಕೆಯನ್ನು ಹಚ್ಚಿಕೊಂಡನು.

೧೨೨. "ಅಶ್ವ, ರಥ, ವಿಷ್ಣು ಇವರಿಂದ ದಾಟಲ್ಪಟ್ಟ ಮೃತ್ತಿಕಾರೂಪಳಾದ ಭೂದೇವಿಯೆ! ನೀನು ಅನೇಕಕೋಟಿ ಜನ್ಮಗಳಲ್ಲಿ ಮಾಡಿದ ನನ್ನ ಪಾಪವನ್ನು ನೀಗಿಸು."

೧೨೩–೧೨೬. ಅನಂತರ ಅವನು ನೀರಿನಲ್ಲಿ ಇಳಿದು, 'ನರ್ಮದೆಯೆ! ನೀನು ಪವಿತ್ರವಾದ ನೀರುಳ್ಳವಳಾಗಿರುವೆ. ನಿನ್ನ ನೀರು ಶಂಕರನಿಂದ ಹುಟ್ಟಿರುವುದು. ಇದು ಸ್ನಾನವನ್ನು ಮಾಡುತ್ತಿರುವ ನನ್ನ ಪಾಪವನ್ನು ಪರಿಹರಿಸಲಿ' ಎಂದು ಮಂತ್ರವನ್ನುಚ್ಚರಿಸಿ ಮಿಂದು, ಪಿತೃದೇವತೆಗಳಿಗೆ ತರ್ಪಣಮಾಡಿ ಪೂಜಾಸಾಮಗ್ರಿಗಳೊಡನೆ ದೇವಾಲಯಕ್ಕೆ ಹೋದನು. ಅಲ್ಲಿ ಭಕ್ತಿಯಿಂದ ಶಂಕರನ ಸಾನ್ನಿಧ್ಯವನ್ನು ಚಿಂತಿಸಿ ಪುರಾಣೋಕ್ತವಿಧಿಯಿಂದ ಪೂಜೆಯನ್ನಾರಂಭಿಸಿದನು. ಶಿವರಾತ್ರಿಯಲ್ಲಿ ನಾಲ್ಕು ಪೂಜೆಗಳು ವಿಹಿತವಾಗಿರುವುವು.

ಸಂಸ್ನಾಪ್ಯ ಪ್ರಥಮೇ ಯಾಮೇ ಪಂಚಗವ್ಯೇನ ಶಂಕರಂ ।
ಘೃತೇನ ಪೂರಣಂ ಪಶ್ಚಾತ್ಕೃತಂ ನೃಪವರೇಣ ತು ॥ ೧೨೭ ॥
ಧೂಪದೀಪೌ ನಿವೇದ್ಯಾದ್ಯಂ ಸಂಕಲ್ಪ್ಯ ಚ ಯಥಾವಿಧಿ ।
ಅರ್ಘ್ಯೇಣಾನೇನ ದೇವೇಶಂ ಮಂತ್ರೇಣಾನೇನ ಶಂಕರಂ ॥ ೧೨೮ ॥
ನಮಸ್ತೇ ದೇವದೇವೇಶ ಶಂಭೋ ಪರಮಕಾರಣ ।
ಗೃಹಾಣಾರ್ಘ್ಯಮಿಮಂ ದೇವ ಸಂಸಾರಾಘಮಪಾಕುರು ॥ ೧೨೯ ॥
ವಿತ್ತಾನುರೂಪತೋ ದತ್ತಂ ಸುವರ್ಣಂ ಮಂತ್ರಕಲ್ಪಿತಂ ।
ಅಗ್ನಿರ್ಹಿ ದೇವಾಃ ಸರ್ವೇ ಸುವರ್ಣಂ ಚ ಹುತಾಶನಾತ್ ॥ ೧೩೦ ॥
ಅತಃ ಸುವರ್ಣದಾನೇನ ಪ್ರೀತಾಃ ಸ್ಯುಃ ಸರ್ವದೇವತಾಃ ।
ತದರ್ಘ್ಯಂ ಸರ್ವದಾ ದಾತುಃ ಪ್ರೀತೋ ಭವತು ಶಂಕರಃ ॥ ೧೩೧ ॥
ಅನೇನ ವಿಧಿನಾ ತೇನ ಪೂಜಿತಃ ಪ್ರಥಮೇ ಶಿವಃ ।
ಯಾಮೇ ದ್ವಿತೀಯೇ ತು ಪುನಃ ಪೂರ್ವೋಕ್ತವಿಧಿನಾ ಚರೇತ್ ॥ ೧೩೨ ॥
ಸ್ನಾಪಯಾಮಾಸ ದುಗ್ಧೇನ ಗವ್ಯೇನ ತ್ರಿಪುರಾಂತಕಂ ।
ತಂದುಲೈಃ ಪೂರಣಂ ಪಶ್ಚಾತ್ಕೃತಂ ಲಿಂಗಸ್ಯ ಶೂಲಿನಃ ॥ ೧೩೩ ॥
ಕೃತ್ವಾ ವಿಧಾನಂ ಪೂರ್ವೋಕ್ತಂ ದತ್ತಂ ವಸ್ತ್ರಯುಗಂ ಸಿತಂ ।
ಶ್ವೇತವಸ್ತ್ರಯುಗಂ ಯಸ್ಮಾಚ್ಛಂಕರಸ್ಯಾತಿವಲ್ಲಭಂ ॥ ೧೩೪ ॥

---

೧೨೭. ಆ ರಾಜನು ಮೊದಲು ಶಂಕರನನ್ನು ಪಂಚಗವ್ಯದಿಂದ ಅಭಿಷೇಕ ಮಾಡಿ ಅನಂತರ ಘೃತದಿಂದ ಪೂರ್ತಿಮಾಡಿದನು.

೧೨೮–೧೨೯. ವಿಧಿಯಂತೆ ಧೂಪದೀಪಗಳನ್ನು ನಿವೇದಿಸಿ "ಕರುಣಾಳುವೂ, ದೇವೇಶನೂ ಆದ ಶಂಕರ! ನಿನಗೆ ನಮಸ್ಕಾರವು. ಅರ್ಘ್ಯವನ್ನು ಸ್ವೀಕರಿಸಿ ಸಂಸಾರವೆಂಬ ನನ್ನ ಪಾಪವನ್ನು ಪರಿಹರಿಸು" ಎಂದು ಅರ್ಘ್ಯವನ್ನಿತ್ತನು.

೧೩೦. ದ್ರವ್ಯಾನುಸಾರವಾಗಿ ಮಂತ್ರಕಲ್ಪಿತವಾದ ಸುವರ್ಣವನ್ನು ದಾನ ಮಾಡಿದನು. ಸಮಸ್ತದೇವತೆಗಳೂ ಅಗ್ನಿರೂಪರಾಗಿರುವರು.

೧೩೧. ಆದುದರಿಂದ ಸುವರ್ಣದಾನದಿಂದ ಸಮಸ್ತದೇವತೆಗಳೂ ಸಂತುಷ್ಟರಾಗುವರು. ಅಂತಹ ಅರ್ಘ್ಯವನ್ನು ಕೊಡುವವನಲ್ಲಿ ಶಂಕರನು ಯಾವಾಗಲೂ ಸಂತುಷ್ಟನಾಗುವನು.

೧೩೨. ಪ್ರಥಮಯಾಮದಲ್ಲಿ ಅವನು ಈ ವಿಧಿಯಿಂದ ಶಿವನನ್ನು ಪೂಜಿಸಿದನು. ಎರಡನೆ ಯಾಮದಲ್ಲಿಯೂ ಪೂರ್ವೋಕ್ತಕ್ರಮದಿಂದಲೇ ಪೂಜಿಸಿದನು.

೧೩೩. ತ್ರಿಪುರನಾಶಕನಾದ ಶಂಕರನನ್ನು ಆಕಳ ಹಾಲಿನಿಂದ ಅಭಿಷೇಕ ಮಾಡಿ ಲಿಂಗವನ್ನು ಅಕ್ಕಿಯಿಂದ ಪೂರ್ತಿಮಾಡಿದನು.

೧೩೪. ಪೂರ್ವೋಕ್ತವಿಧಿಯನ್ನಾಚರಿಸಿ ಶ್ವೇತವಸ್ತ್ರಯುಗ್ಮವನ್ನು ಅರ್ಪಿಸಿದನು. ಶ್ವೇತವಸ್ತ್ರವು ಶಂಕರನಿಗೆ ಅತಿ ಪ್ರಿಯವಾದುದು.

ಪ್ರೀತೋ ಭವತಿ ವೈ ಶಂಭುರ್ದತ್ತೇನ ಶ್ವೇತವಾಸಸಾ ।
ಯಾಮಂ ತೃತೀಯಂ ಸಂಪ್ರಾಪ್ತಂ ದೃಷ್ಟ್ವಾ ನೃಪತಿಸತ್ತಮಃ ॥ ೧೩೫ ॥
ದೇವಂ ಸಂಸ್ನಾಪ್ಯ ಮಧುನಾ ಪೂರಣಂ ಚಕ್ರಿವಾಂಸ್ತಿಲೈಃ ।
ತಿಲದ್ರೋಣಪ್ರದಾನಂ ಚ ಕುರ್ಯಾರ್ನ್ಮಂತ್ರಮುದೀರಯನ್ ॥ ೧೩೬ ॥
ತಿಲಾಃ ಶ್ವೇತಾಸ್ತಿಲಾಃ ಕೃಷ್ಣಾಃ ಸರ್ವಪಾಪಹರಾಸ್ತಿಲಾಃ ।
ತಿಲದ್ರೋಣಪ್ರದಾನೇನ ಸಂಸಾರಶ್ಛಿದ್ಯತಾಂ ಮಮ ॥ ೧೩೭ ॥
ಅನೇನ ವಿಧಿನಾ ರಾಜಾ ಯಾಮಿನೀಯಾಮಪೂಜನಂ ।
ಅತಿವಾಹ್ಯ ವಿನೋದೇನ ಬ್ರಹ್ಮಘೋಷೇಣ ಜಾಗರಂ ॥ ೧೩೮ ॥
ಚಕಾರ ಪೂಜನಂ ಶಂಭೋರ್ಬಹುಪುಣ್ಯಪ್ರಸಾಧಕಂ ।
ಯೇ ಜಾಗರೇ ತ್ರಿನೇತ್ರಸ್ಯ ಶಿವರಾತ್ರ್ಯಾಂ ಶಿವಸ್ಥಿತಾಃ ॥ ೧೩೯ ॥
ತೇ ಯಾಂ ಗತಿಂ ಗತಾಃ ಪಾರ್ಥ ನ ತಾಂ ಯಜ್ವಂತಿ ಯಜ್ವಿನಃ ।
ಪಾಪಾನಿ ಯಾನಿ ಕಾನಿ ಸ್ಯುಃ ಕೋಟಿಜನ್ಮಾರ್ಜಿತಾನ್ಯಪಿ ॥ ೧೪೦ ॥
ಹರಕೇಶವಯೋಃ ಸ್ನಾಂತಿ ಜಾಗರೇ ಯಾಂತಿ ಸಂಕ್ಷಯಂ ।
ಯಾವಂತೋ ನಿಮಿಷಾ ನೃಣಾಂ ಭವಂತಿ ನಿಶಿ ಜಾಗ್ರತಾಂ ॥ ೧೪೧ ॥
ನಿಮಿಷೇ ನಿಮಿಷೇ ರಾಜನ್ನಶ್ವಮೇಧಫಲಂ ಧ್ರುವಂ ।
ಉಪವಾಸಪರಾಣಾಂ ಚ ದೇವಾಯತನವಾಸಿನಾಂ ॥ ೧೪೨ ॥

---

೧೩೫–೧೩೭. ಶ್ವೇತವಸ್ತ್ರವನ್ನರ್ಪಿಸುವುದರಿಂದ ಶಂಕರನು ಪ್ರೀತನಾಗುವನು. ಆ ಮಹಾರಾಜನು ಮೂರನೆಯಾಮವು ಪ್ರಾಪ್ತವಾದುದನ್ನು ನೋಡಿ ಶಂಕರನನ್ನು ಜೇನುತುಪ್ಪದಿಂದ ಅಭಿಷೇಕಮಾಡಿ ಎಳ್ಳಿನಿಂದ ಪೂರ್ತಿಮಾಡಿದನು. ತಿಲವನ್ನು, "ಶ್ವೇತ ಮತ್ತು ಕೃಷ್ಣವರ್ಣದ ಎಳ್ಳುಗಳು ಪಾಪವನ್ನು ನಿವಾರಿಸುವುವು. ಈ ತಿಲವನ್ನು ಅರ್ಪಿಸುವುದರಿಂದ ನನ್ನ ಸಂಸಾರವು ನೀಗಲಿ" ಎಂಬ ಮಂತ್ರವನ್ನುಚ್ಚರಿಸಿ ಕೊಟ್ಟನು.

೧೩೮–೧೪೩. ರಾಜನು ಈ ವಿಧಿಯಿಂದ ರಾತ್ರಿಯ ಯಾಮಪೂಜೆಯನ್ನು ಪೂರಯಿಸಿ ವೇದಘೋಷದ ವಿನೋದದಿಂದ ಜಾಗರಣೆಗೈದು ಅತಿ ಪುಣ್ಯವನ್ನು ಉಂಟುಮಾಡುವ ಶಂಕರನ ಪೂಜೆಯನ್ನು ಮಾಡಿದನು. ಶಿವರಾತ್ರಿಯ ದಿನ ಜಾಗರಣೆಮಾಡಿದವನು ಪಡೆಯುವ ಗತಿಯನ್ನು ಯಾಗಮಾಡುವವರೂ ಹೊಂದುವುದಿಲ್ಲ. ಕೋಟಿಜನ್ಮಗಳಲ್ಲೆಸಗಿದ ಪಾಪಗಳು ಹರಿಹರರಕ್ಷೇತ್ರದಲ್ಲಿ ಮಿಂದು ಜಾಗರಣೆಮಾಡುವುದರಿಂದ ನೀಗುವುವು. ರಾತ್ರಿ ಜಾಗರಣೆಮಾಡುವಾಗ ಎಷ್ಟು ನಿಮಿಷಗಳು ಕಳೆಯುವುವೋ, ಜಾಗರಣೆಯ ಒಂದೊಂದು ನಿಮಿಷಗಳಲ್ಲಿಯೂ ಅಶ್ವಮೇಧಯಾಗದ ಫಲವು ದೊರೆಯುವುದು. ದೇವಾಲಯದಲ್ಲಿ ಉಪವಾಸ ಮಾಡುವವರು, ಧರ್ಮಾಖ್ಯಾನವನ್ನು ಕೇಳುವವರು, ಹರಿಹರರನ್ನು ಧ್ಯಾನಿಸು

ಶೃಣ್ವತಾಂ ಧರ್ಮನಾಖ್ಯಾನಂ ಧ್ಯಾಯತಾಂ ಹರಕೇಶವೌ ।
ನ ತಾಂ ಬಹುಸುವರ್ಣೇನ ಕ್ರತುನಾ ಗತಿಮಾಪ್ನುಯುಃ ॥ ೧೪೩ ॥
ಶಿವರಾತ್ರಿಸ್ತಿಥಿಃ ಪುಣ್ಯಾ ಕಾರ್ತಿಕೀ ಚ ವಿಶೇಷತಃ ।
ರೇವಾಯಾ ಉತ್ತರಂ ಕೂಲಂ ತೀರಂ ಭಾರೇಶ್ವರೇತಿ ಚ ॥ ೧೪೪ ॥
ಜಾಗೃತಶ್ಚಾಽತಿದುಃಖೇನ ಕಥಂ ಪಾಪಂ ನ ಹಾಸ್ಯತಿ ।
ಇತ್ಥಂ ಸ ಜಾಗರಂ ಕೃತ್ವಾ ಶಿವರಾತ್ರ್ಯಾಂ ನರೇಶ್ವರಃ ॥ ೧೪೫ ॥
ಪ್ರಭಾತೇ ವಿಮಲೇ ಗತ್ವಾ ನರ್ಮದಾತೀರಮುತ್ತಮಂ ।
ಸ್ನಾಪಿತಾಸ್ತೇನ ತೇ ಸರ್ವೇ ವಾಹನಾನಿ ಗಜಾದಯಃ ॥ ೧೪೬ ॥
ಯೈಸ್ತು ವಾಹ್ಯೈರ್ಗತಸ್ತೀರ್ಥಂ ಸ್ನಾತೋಽಹಂ ಸ್ನಾಪಯಾಮಿ ತಾನ್ ।
ತತ್ರ ಮಧ್ಯಸ್ಥಿತಃ ಸ್ನಾತಸ್ತಿರ್ಯಕ್ತ್ವಾನ್ನಿರ್ಗತೋ ವಣಿಕ್ ॥ ೧೪೭ ॥
ದಾನಂ ದದೌ ತಾನುದ್ದಿಶ್ಯ ಕಿಂಚಿಚ್ಛಕ್ತ್ಯಾಽನುರೂಪತಃ ।
ತೇನ ವಾಹಕೃತಾದ್ದೋಷಾನ್ಮುಕ್ತೋ ಭವತಿ ಮಾನವಃ ॥ ೧೪೮ ॥
ಅನ್ಯಥಾಽಸೌ ಕೃತೋ ಲಾಭಃ ಕೃತೋ ವ್ರಜತಿ ತಾನ್ ಪ್ರತಿ ।
ಸಂಸ್ನಾಪ್ಯ ತಂ ತತೋ ರಾಜಾ ಸ್ವಯಂ ಸ್ನಾತ್ವಾ ವಿಧಾನತಃ ॥ ೧೪೯ ॥
ಸಂತರ್ಪ್ಯ ಪಿತೃದೇವಾಂಶ್ಚ ಕೃತ್ವಾ ಶ್ರಾದ್ಧಂ ಯಥಾವಿಧಿ ।
ಕೃತ್ವಾ ಪಿಂಡಾನ್ ಪಿತೃಭ್ಯಶ್ಚ ವೃಷಮುತ್ಸೃಜ್ಯ ಲಕ್ಷಣಂ ॥ ೧೫೦ ॥

---

ವವರು—ಇವರಿಗುಂಟಾಗುವ ಗತಿಯು ಅನೇಕ ಸುವರ್ಣದಾನಮಾಡುವುದ ರಿಂದಲೂ ಲಭಿಸುವುದಿಲ್ಲ.

೧೪೪–೧೪೭. ಶಿವರಾತ್ರಿಯೂ, ಕಾರ್ತಿಕಮಾಸದ ಚತುರ್ದಶಿಯೂ ಅತಿ ಪುಣ್ಯಕರವಾದುವು. ಆ ದಿನ ನರ್ಮದಾತೀರದಲ್ಲಿರುವ ಭಾರೇಶ್ವರಕ್ಕೆ ಹೋಗಿ ಕಷ್ಟಪಟ್ಟು ಜಾಗರಣೆಮಾಡುವವನ ಪಾಪಗಳು ಪರಿಹೃತಗಳಾಗದಿರುವುದೆಂತು? ಹೀಗೆ ಆ ರಾಜನು ಶಿವರಾತ್ರಿಯ ದಿನ ಜಾಗರಣೆಮಾಡಿ ಬೆಳಗ್ಗೆ ಉತ್ತಮವಾದ ನರ್ಮದಾತೀರಕ್ಕೆ ಹೋಗಿ ಅಲ್ಲಿ ಮಿಂದು ತನ್ನ ವಾಹನಕ್ಕೆ ಕಟ್ಟಿರುವ ಆನೆ ಮೊದಲಾದುವುಗಳನ್ನು ಸ್ನಾನಮಾಡಿಸಿದನು. ಒಡನೆಯೆ ಅವುಗಳ ಮಧ್ಯದಲ್ಲಿ ಎತ್ತಾಗಿರುವ ಆ ವರ್ತಕನೂ ಆ ಎತ್ತಿನ ಜನ್ಮದಿಂದ ಮುಕ್ತನಾದನು.

೧೪೮. ರಾಜನು ಆ ವಾಹನಗಳನ್ನುದ್ದೇಶಿಸಿ ಶಕ್ತ್ಯನುಸಾರ ದಾನಮಾಡಿದನು. ಮಾನವನು ಹೀಗೆ ಮಾಡಿದರೆ ವಾಹನವಾಗಿ ಮಾಡಿದ ಪಾಪದಿಂದ ಮುಕ್ತನಾಗುವನು.

೧೪೯–೧೫೫. ಹಾಗೆ ಮಾಡದಿದ್ದರೆ ಅವನು ಸಂಪಾದಿಸಿದ ಪುಣ್ಯವು ಆ ವಾಹನಗಳಾದ ಪ್ರಾಣಿಗಳಿಗೆ ಸಲ್ಲುವುದು. ಆ ರಾಜನು ಹೀಗೆ ಅವುಗಳನ್ನು ಸ್ನಾನಮಾಡಿಸಿ ತಾನೂ ಮಿಂದು ಪಿತೃಗಳಿಗೆ ತರ್ಪಣಮಾಡಿ ವಿಧಿಯಂತೆ ಶ್ರಾದ್ಧ

ಗತ್ವಾ ದೇವಾಲಯಂ ಪಶ್ಚಾದ್ದೇವಂ ತೀರ್ಥೋದಕೇನ ಚ ।
ಸಂಸ್ನಾಪ್ಯ ಪಂಚಗವ್ಯೇನ ತತಃ ಪಂಚಾಮೃತೇನ ಚ ॥ ೧೩೦ ॥
ಸರ್ವೌಷಧಿಜಲೇನೈವ ತತಃ ಶುದ್ಧೋದಕೇನ ಚ ।
ಚಂದನೇನ ಸುಗಂಧೇನ ಸಮಾಲಭ್ಯ ಚ ಶಂಕರಂ ॥ ೧೩೧ ॥
ಕುಂಕುಮೈಶ್ಚ ಸಕರ್ಪೂರೈರ್ಗಂಧೈಶ್ಚ ವಿವಿಧೈಸ್ತಥಾ ।
ಪುಷ್ಪೌಘೈಶ್ಚ ಸುಗಂಧಾಢ್ಯೈಶ್ಚತುರ್ಥಂ ಲಿಂಗಪೂರಣಂ ॥ ೧೩೨ ॥
ಕೃತಂ ನೃಪವರೇಣಾಽತ್ರ ಕುರ್ವತಾ ವಿಧಿಪೂರ್ವಕಂ ।
ಗೋದಾನಂ ಚ ಕೃತಂ ಪಶ್ಚಾದ್ವಿಧಿದೃಷ್ಟೇನ ಕರ್ಮಣಾ ॥ ೧೩೩ ॥
ಧೇನುಕೇ ರುದ್ರರೂಪಾಽಸಿ ರುದ್ರೇಣಪರಿನಿರ್ಮಿತಾ ।
ಅಸ್ಮಿನ್ನಗಾಧೇ ಸಂಸಾರೇ ಪತಂತಂ ಮಾಂ ಸಮುದ್ಧರ ॥ ೧೩೪ ॥
ಧೇನುಂ ಸ್ವಲಂಕೃತಾಂ ದದ್ಯಾದನೇನ ವಿಧಿನಾ ತತಃ ।
ಕ್ಷಮಾಪ್ಯ ದೇವದೇವೇಶಂ ಬ್ರಾಹ್ಮಣಾನ್ ಭೋಜಯೇದ್ಬಹೂನ್ ॥ ೧೩೫ ॥
ಷಡ್ವಿಧೈರ್ಭೋಜನೈರ್ಭಕ್ಷ್ಯೈರ್ವಾಸೋಭಿಸ್ತಾನ್ ಸಮರ್ಚಯೇತ್ ।
ದಕ್ಷಿಣಾಭಿರ್ವಿಚಿತ್ರಾಭಿಃ ಪೂಜಯಿತ್ವಾ ಕ್ಷಮಾಪಯೇತ್ ॥ ೧೩೬ ॥
ಸ ಸ್ವಯಂ ಬುಭುಜೇ ಪಶ್ಚಾತ್ಪರಿವಾರಸಮನ್ವಿತಃ ।
ತಾಮೇವ ರಜನೀಂ ತತ್ರ ನ್ಯವಸಜ್ಜಗತೀಪತಿಃ ॥ ೧೩೭ ॥

---

ಗೈದು ಪಿಂಡಪ್ರದಾನಮಾಡಿ ಶುಭಲಕ್ಷಣವುಳ್ಳ ವೃಷಭವನ್ನು ವಿಸರ್ಜಿಸಿ, ದೇವಾಲಯಕ್ಕೆ ಹೋಗಿ ಶಂಕರನನ್ನು ತೀರ್ಥಜಲ, ಪಂಚಗವ್ಯ, ಪಂಚಾಮೃತ, ಸಮಸ್ತೌಷಧಿಜಲ, ಶುದ್ಧೋದಕ ಇವುಗಳಿಂದ ಅಭಿಷೇಕಮಾಡಿ ಸುಗಂಧವಾದ ಗಂಧವನ್ನು ಲೇಪಿಸಿ ಕುಂಕುಮ, ಕರ್ಪೂರ, ಗಂಧ, ಹೂವುಗಳ ಸಮೂಹ ಇವುಗಳಿಂದ ಲಿಂಗಪೂರಣಮಾಡಿ ವಿಧಿಯಂತೆ ಆಕಳನ್ನು, "ಧೇನುವೆ! ನೀನು ರುದ್ರರೂಪಳೂ, ರುದ್ರನಿಂದ ನಿರ್ಮಿತಳೂ ಆಗಿರುವೆ. ಅಗಾಧವಾದ ಈ ಸಂಸಾರದಲ್ಲಿ ಬೀಳುತ್ತಿರುವ ನನ್ನನ್ನು ಉದ್ಧರಿಸು" ಎಂಬ ಮಂತ್ರದಿಂದ ದಾನಮಾಡಿದನು.

೧೩೫–೧೩೬. ಅಲ್ಲಿ ಮಾನವನು ಈ ವಿಧಿಯಿಂದ ಅಲಂಕೃತವಾದ ಧೇನುವನ್ನು ದಾನಮಾಡಿ ಶಂಕರನನ್ನು ಕ್ಷಮೆಬೇಡಿ ಬಹುಮಂದಿ ಬ್ರಾಹ್ಮಣರನ್ನು ಆರು ವಿಧಗಳಾದ ಭಕ್ಷ್ಯಭೋಜ್ಯಗಳಿಂದ ಭೋಜನಮಾಡಿಸಿ ಪೂಜಿಸಿ ದಕ್ಷಿಣೆಗಳನ್ನಿತ್ತು ಕ್ಷಮೆಬೇಡಬೇಕು.

೧೩೭. ಆ ರಾಜನು ಹೀಗೆ ಮಾಡಿ ಪರಿವಾರದೊಡನೆ ತಾನೂ ಭುಂಜಿಸಿ ಆ ರಾತ್ರಿ ಅಲ್ಲಿ ವಾಸಮಾಡಿದನು.

ತಸ್ಯ ತತ್ರೋಷಿತಸ್ಯೈವಂ ನಿಶೀಥೇಽಥ ನರೇಶ್ವರ ।
ಆಕಾಶೇ ಸೋಽತಿ ಶುಶ್ರಾವ ದಿವ್ಯವಾಣೀಸಮೀರಿತಂ ॥ ೧೫೯ ॥

ವಾಗುವಾಚ :—

ರಾಜನ್ ಸಮಂತತೋ ಲೋಕೇ ಫಲಂ ಭವತಿ ಸಾಂಪ್ರತಂ ।
ಸಂಸಾರಸಾಗರೇಽಹ್ಯತ್ರ ಪತಿತಾನಾಂ ದುರಾತ್ಮನಾಂ ॥ ೧೬೦ ॥
ಯದಿ ಸನ್ನಿಧಿಮಾತ್ರೇಣ ಫಲಂ ತತ್ರೋಚ್ಯತೇ ಕಥಂ ।
ಯದಿ ಶಂತನುವಂಶಸ್ಯ ತತ್ರೋನ್ಮಾದಕರಂ ಭವೇತ್ ॥ ೧೬೧ ॥
ಯ ಏಷ ತ್ವದ್ಗೃಹೇ ವೋಢಾ ಹ್ಯತಿಭಾರಧುರಂಧರಃ ।
ಅನೇನ ಮಿತ್ರಹನನಂ ಪಾಪಂ ವಿಶ್ವಾಸಘಾತನಂ ॥ ೧೬೨ ॥
ಕೃತಂ ಜನ್ಮಸಹಸ್ರಾಣಾಮತೀತೇ ಪರಿಜನ್ಮನಿ ।
ಗತೇನ ಪಾಪ್ಮನಾತ್ಮಾನಂ ನರಕೇಷು ಚ ಸಂಸ್ಥಿತಿಃ ॥ ೧೬೩ ॥
ತತೋ ಯೋನಿಸಹಸ್ರೇಷು ಗತಿಸ್ತಿರ್ಯಕ್ಷ್ವು ಚೈವ ಹಿ ।
ಗೋಯೋನಿಂ ಸಮನುಪ್ರಾಪ್ತಸ್ತ್ವದ್ಗೃಹೇ ಸ ಸುದುರ್ಮತಿಃ ॥ ೧೬೪ ॥
ಸ್ನಾಪಿತಶ್ಚ ತ್ವಯಾ ತೀರ್ಥೇ ಹ್ಯಸ್ಮಿನ್ಪರ್ವಸಮಾಗಮೇ ।
ದೃಷ್ಟ್ವಾ ಪೂಜಾಂ ತ್ವಯಾ ಕ್ಲೃಪ್ತಾಂ ಕೃತಾ ಜಾಗರಣಕ್ರಿಯಾ ॥ ೧೬೫ ॥
ತೇನ ನಿಷ್ಕಲ್ಮಷೋ ಜಾತೋ ಮುಕ್ತ್ವಾ ದೇಹಂ ತವಾಗ್ರತಃ ।
ಸ್ವರ್ಗಂ ಪ್ರತಿ ವಿಮಾನಸ್ಥಃ ಸೋಽದ್ಯ ರಾಜನ್ ಗಮಿಷ್ಯತಿ ॥ ೧೬೬ ॥

---

೧೫೯. ಅವನು ಅಲ್ಲಿ ವಾಸಮಾಡುತ್ತಿರಲು ಅರ್ಧರಾತ್ರಿಯ ವೇಳೆಯಲ್ಲಿ ಆಕಾಶದಲ್ಲಿ ದಿವ್ಯವಾಣಿಯು ಕೇಳಿಸಿತು.

೧೬೦–೧೬೧. ವಾಣಿಯು ಹೇಳುತ್ತದೆ:—ದೊರೆಯೆ! ಈಗ ಇಲ್ಲಿ ಶಂತನು ವಂಶದಲ್ಲಿ ಜನಿಸಿದ ನಿನ್ನ ಸಾನ್ನಿಧ್ಯದಿಂದಲೇ ಸಂಸಾರಸಾಗರದಲ್ಲಿ ಪತಿತರಾದ ದುರಾತ್ಮರಿಗೆ ಫಲವುಂಟಾಗುವುದೆಂದು ಏನು ಹೇಳಲಿ. ಇದು ಎಲ್ಲರಿಗೂ ಉನ್ಮಾದಕರವಾದೀತು.

೧೬೨–೧೬೪. ನಿನ್ನ ಮನೆಯಲ್ಲಿ ಅತಿ ಭಾರವನ್ನು ಹೊರುವ ಈ ವೃಷಭವು ವಿಶ್ವಾಸಘಾತುಕತನದಿಂದ ಮಿತ್ರನನ್ನು ಕೊಂದು ಅನೇಕ ಸಾವಿರ ಜನ್ಮಗಳಲ್ಲಿ ನರಕವಾಸಮಾಡಿ ಅನಂತರ ಸಹಸ್ರಾರು ತಿರ್ಯಗ್ಯೋನಿಯನ್ನು ಹೊಂದಿ ಕೊನೆಯಲ್ಲಿ ವೃಷಭವಾಗಿ ನಿನ್ನ ಮನೆಯನ್ನು ಸೇರಿರುವುದು.

೧೬೫. ಇದು ಪರ್ವಕಾಲದಲ್ಲಿ ಈ ತೀರ್ಥದಲ್ಲಿ ನಿನ್ನಿಂದ ಸ್ನಾನಮಾಡಿಸಲ್ಪಟ್ಟುದಾಗಿ ನೀನು ಮಾಡಿದ ಪೂಜೆಯನ್ನು ನೋಡಿ ಜಾಗರಣೆಮಾಡಿತು.

೧೬೬. ಅದರಿಂದ ಪಾಪರಹಿತವಾಗಿ ನಿನ್ನಮುಂದೆ ದೇಹವನ್ನು ತ್ಯಜಿಸಿ ವಿಮಾನವನ್ನೇರಿ ಈಗ ಸ್ವರ್ಗಕ್ಕೆ ಹೋಗುವುದು.

ಶ್ರೀ ಮಾರ್ಕಂಡೇಯ ಉವಾಚ :—

ಏವಮುಕ್ತೇ ನಿಪತಿತೋ ಧುರ್ಯಃ ಪ್ರಾಣೈರ್ವ್ಯಯುಜ್ಯತ ।
ವಿಮಾನವರಮಾರೂಢಸ್ತತ್ಕ್ಷಣಾತ್ಸಮದೃಶ್ಯತ ॥ ೧೬೭ ॥
ಸ ತಂ ಪ್ರಣಮ್ಯ ರಾಜೇಂದ್ರಮುವಾಚ ಪ್ರಹಸನ್ನಿವ ॥ ೧೬೮ ॥

ವೃಷ ಉವಾಚ :—

ಭೋ ಭೋ ನೃಪವರಶ್ರೇಷ್ಠ ತೀರ್ಥಮಾಹಾತ್ಮ್ಯಮುತ್ತಮಂ ।
ಯತ್ರ ಚಾಸ್ಮದ್ವಿಧಸ್ತೀರ್ಥೇ ಮುಚ್ಯತೇ ಪಾತಕೈರ್ನರಃ ।
ಮಯಾ ಜ್ಞಾತಮಶೇಷೇಣ ಮತ್ಸಮೋ ನಾಽಸ್ತಿ ಪಾತಕೀ ॥ ೧೬೯ ॥
ಅತಃ ಪರಂ ಕಿಂ ತು ಕುರ್ಯಾಂ ಪರಂ ತೀರ್ಥಾನುಕೀರ್ತನಂ ।
ಭವಾನ್ಮಾತಾ ಭವಾನ್ಭ್ರಾತಾ ಭವಾಂಶ್ಚೈವ ಪಿತಾಮಹಃ ॥ ೧೭೦ ॥
ಕ್ಷಂತವ್ಯಂ ಪ್ರಣತೋಽಸ್ಮ್ಯದ್ಯ ಯಸ್ಮಿಂಸ್ತೀರ್ಥೇ ಹಿ ಮಾದೃಶಾಃ ।
ಗತಿಮೀದೃಗ್ವಿಧಾಂ ಯಾಂತಿ ನ ಜಾನೇ ತವಕಾ ಗತಿಃ ॥ ೧೭೧ ॥
ಸಮಾರಾಧ್ಯ ಮಹೇಶಾನಂ ಸಂಪೂಜ್ಯ ಚ ಯಥಾವಿಧಿ ।
ಕಾ ಗತಿಸ್ತವ ಸಂಭಾಷ್ಯಾ ದೇಹ್ಯನುಜ್ಞಾಂ ಮಮ ಪ್ರಭೋ ॥ ೧೭೨ ॥
ತ್ವರಯಂತಿ ಚ ಮಾಂ ಹ್ಯೇತೇ ದಿವಿಸ್ಥಾಃ ಪ್ರಣಯಾದ್ಗಣಾಃ ।
ಸ್ವಸ್ತ್ಯಸ್ತು ತೇ ಗಮಿಷ್ಯಾಮೀತ್ಯುಕ್ತ್ವಾ ಸೋಽಂತರ್ದಧೇ ಕ್ಷಣಾತ್ ॥ ೧೭೩ ॥

---

೧೬೭. ಶ್ರೀ ಮಾರ್ಕಂಡೇಯನು ಹೇಳುತ್ತಾನೆ :—ಆಕಾಶವಾಣಿಯು ಹೀಗೆ ನುಡಿಯಲು, ಆ ವೃಷಭವು ಕೆಳಗೆ ಬಿದ್ದು ಮೃತವಾಗಿ ಕೂಡಲೆ ವಿಮಾನದಲ್ಲಿ ಕುಳಿತಿರುವುದು ಕಾಣಿಸಿತು.

೧೬೮. ಆ ವೃಷಭವು ಆ ರಾಜನನ್ನು ವಂದಿಸಿ ನಗುತ್ತ ಇಂತೆಂದಿತು.

೧೬೯. ವೃಷಭವು ಹೇಳುತ್ತದೆ :—"ಎಲೈ ನೃಪವರ್ಯನೆ! ನನ್ನಂತಹ ಮಾನವನು ಈ ತೀರ್ಥದಲ್ಲಿ ಪಾಪಮುಕ್ತನಾದುದನ್ನು ನೋಡಿ ನಾನು ಈ ತೀರ್ಥದ ಉತ್ತಮವಾದ ಅಶೇಷಮಾಹಾತ್ಮ್ಯೆಯನ್ನು ಅರಿತೆನು. ನನಗೆ ಸರಿಯಾದ ಪಾತಕಿಯು ಯಾರೂ ಇರುವುದಿಲ್ಲ.

೧೭೦–೧೭೨. ಇದಕ್ಕಿಂತಲೂ ಹೆಚ್ಚಾಗಿ ಈ ತೀರ್ಥಮಾಹಾತ್ಮ್ಯವನ್ನು ಏನೆಂದು ಹೇಳಲಿ. ನೀನು ನನಗೆ ತಾಯಿಯೂ, ಸಹೋದರನೂ, ಪಿತಾಮಹನೂ ಆಗಿರುವೆ. ಕ್ಷಮಿಸು. ನಿನ್ನನ್ನು ವಂದಿಸುವೆನು. ಈ ತೀರ್ಥದಲ್ಲಿ ನನ್ನಂತಹವರೇ ಇಂತಹ ಗತಿಯನ್ನು ಪಡೆದಮೇಲೆ ಈಶ್ವರನನ್ನು ವಿಧಿಯಂತೆ ಪೂಜಿಸಿದ ನಿನಗೆ ಯಾವ ಗತಿಯುಂಟಾಗುವುದೆಂದು ಹೇಳಲಿ. ನನಗೆ ಅಪ್ಪಣೆಯನ್ನು ಕೊಡು.

೧೭೩. ಆಕಾಶದಲ್ಲಿರುವ ಈ ಗಣಗಳು ನನ್ನನ್ನು ಪ್ರೀತಿಯಿಂದ ತ್ವರೆಗೊಳಿಸುತ್ತಿದ್ದಾರೆ. ನಿನಗೆ ಮಂಗಳವಾಗಲಿ. ನಾನು ಹೋಗುವೆನು." ಹೀಗೆ ಹೇಳಿ ಅವನು ಕ್ಷಣಕಾಲದಲ್ಲಿಯೇ ಅಂತರ್ಧಾನವಾಗಿಹೋದನು.

ಶ್ರೀ ಮಾರ್ಕಂಡೇಯ ಉವಾಚ:—
ಗತೇ ಚಾದರ್ಶನಂ ತತ್ರ ಸ ರಾಜಾ ವಿಸ್ಮಯಾನ್ವಿತಃ ।
ತೀರ್ಥಮಾಹಾತ್ಮ್ಯಮತುಲಂ ವರ್ಣಯನ್ ಸ್ವಪುರಂ ಗತಃ ॥ ೧೭೪ ॥
ಇತ್ಥಂ ಭೂತಂ ಹಿ ತತ್ತೀರ್ಥಂ ನರ್ಮದಾಯಾಂ ವ್ಯವಸ್ಥಿತಂ ।
ಸರ್ವಪಾಪಕ್ಷಯಕರಂ ಸರ್ವದುಃಖಘ್ನಮುತ್ತಮಂ ॥ ೧೭೫ ॥
ಉಪಪಾಪಾನಿ ನಶ್ಯಂತಿ ಸ್ನಾನಮಾತ್ರೇಣ ಭಾರತ ।
ಕಾರ್ತಿಕಸ್ಯ ಚತುರ್ದಶ್ಯಾಮುಪವಾಸಪರಾಯಣಃ ॥ ೧೭೬ ॥
ಚತುರ್ಧಾ ಪೂರಯೇಲ್ಲಿಂಗಂ ತಸ್ಯ ಪುಣ್ಯಫಲಂ ಶೃಣು ।
ಬ್ರಹ್ಮಹತ್ಯಾ ಸುರಾಪಾನಂ ಸ್ತೇಯಂ ಗುರ್ವಂಗನಾಗಮಃ ॥ ೧೭೭ ॥
ಮಹಾಪಾಪಾನಿ ಚತ್ವಾರಿ ಚತುರ್ಭಿರ್ಯಾಂತಿ ಸಂಕ್ಷಯಂ ।
ಸೋಽಶ್ವಮೇಧಸ್ಯ ಯಜ್ಞಸ್ಯ ಲಭತೇ ಫಲಮುತ್ತಮಂ ॥ ೧೭೮ ॥
ಕಾರ್ತಿಕೇ ಶುಕ್ಲಪಕ್ಷಸ್ಯ ಚತುರ್ದಶ್ಯಾಮುಪೋಷಿತಃ ।
ಸ್ವರ್ಣದಾನಾಚ್ಚ ತತ್ತೀರ್ಥೇ ಯಜ್ಞಸ್ಯ ಲಭತೇ ಫಲಂ ॥ ೧೭೯ ॥
ಅಷ್ಟಮ್ಯಾಂ ವಾ ಚತುರ್ದಶ್ಯಾಂ ವೈಶಾಖೇ ಮಾಸಿ ಪೂರ್ವವತ್ ।
ದೀಪಂ ಪಿಷ್ಟಮಯಂ ಕೃತ್ವಾ ಪಿತೄನ್ ಸರ್ವಾನ್ ವಿಮೋಕ್ಷಯೇತ್ ॥

---

೧೭೪. ಶ್ರೀ ಮಾರ್ಕಂಡೇಯನು ಹೇಳುತ್ತಾನೆ:— ಅವನು ಕಾಣದೆ ಹೋಗಲು ಆ ರಾಜನು ಆಶ್ಚರ್ಯದಿಂದ ಅತುಲವಾದ ಆ ತೀರ್ಥದ ಮಾಹಾತ್ಮ್ಯವನ್ನು ವರ್ಣಿಸುತ್ತ ತನ್ನ ಪಟ್ಟಣಕ್ಕೆ ಹಿಂತಿರುಗಿದನು.

೧೭೫. ನರ್ಮದಾನದಿಯಲ್ಲಿ ಸಕಲ ಪಾಪಗಳನ್ನು ನಾಶಗೊಳಿಸುವುದೂ, ಸಮಸ್ತ ದುಃಖಪರಿಹಾರಕವೂ ಆದ ಇಂತಹ ಉತ್ತಮತೀರ್ಥವಿರುವುದು.

೧೭೬–೧೭೮. ಯುಧಿಷ್ಠಿರ! ಅಲ್ಲಿ ಸ್ನಾನಮಾಡುವುದರಿಂದಲೇ ಉಪಪಾಪಗಳು ಪರಿಹಾರವಾಗುವುವು. ಕಾರ್ತಿಕ ಚತುರ್ದಶಿಯ ದಿನ ಉಪವಾಸಮಾಡಿ ನಾಲ್ಕುವಿಧವಾಗಿ ಲಿಂಗವನ್ನು ಪೂರಣಮಾಡಿದವನಿಗೆ ಉಂಟಾಗುವ ಫಲವನ್ನು ಕೇಳು. ಆ ನಾಲ್ಕುಬಗೆಯ ಲಿಂಗಪೂರಣದಿಂದ ಬ್ರಹ್ಮಹತ್ಯೆ, ಸುರಾಪಾನ, ಸ್ತೇಯ, ಗುರುಪತ್ನೀಗಮನ ಈ ನಾಲ್ಕು ಮಹಾಪಾಪಗಳು ನಾಶವಾಗುವುವು. ಅವನು ಅಶ್ವಮೇಧಯಜ್ಞದ ಉತ್ತಮವಾದ ಫಲವನ್ನು ಪಡೆಯುವನು.

೧೭೯. ಆ ತೀರ್ಥದಲ್ಲಿ ಕಾರ್ತಿಕ ಶುಕ್ಲಪಕ್ಷದ ಚತುರ್ದಶೀ ದಿನ ಉಪವಾಸಮಾಡಿ ಸುವರ್ಣದಾನ ಮಾಡಿದವನು ಯಜ್ಞದ ಫಲವನ್ನು ಹೊಂದುವನು.

೧೮೦. ವೈಶಾಖಮಾಸದ ಅಷ್ಟಮೀ ಚತುರ್ದಶೀ ದಿನಗಳಲ್ಲಿ ಹಿಂದಿನಂತೆ ಹಿಟ್ಟಿನಲ್ಲಿ ದೀಪವನ್ನು ಹೊತ್ತಿಸಿದವನ ಪಿತೃಗಳೆಲ್ಲ ಮುಕ್ತರಾಗುವರು.

ತತ್ರ ಯದ್ದೀಯತೇ ದಾನಮಪಿ ವಾಲಾಗ್ರಮಾತ್ರಕತಕಂ ।
ತದಕ್ಷಯಫಲಂ ಸರ್ವಮೇವಮಾಹ ಮಹೇಶ್ವರಃ ॥ ೧೮೧ ॥
ಭಾರಭೂತ್ಯಾಂ ಮೃತಾನಾಂ ತು ನರಾಣಾಂ ಭಾವಿತಾತ್ಮನಾಂ ।
ಅನಿವರ್ತಿಕಾ ಗತೀ ರಾಜಂಛಿವಲೋಕಾನ್ನಿರಂತರಂ ॥ ೧೮೨ ॥
ಅಥವಾ ಲೋಕವೃತ್ಯರ್ಥಂ ಮರ್ತ್ಯಲೋಕಂ ಜಿಗೀಷತಿ ।
ಸಾಂಗವೇದಜ್ಞವಿಪ್ರಾಣಾಂ ಜಾಯತೇ ವಿಮಲೇ ಕುಲೇ ॥ ೧೮೩ ॥
ಧನಧಾನ್ಯಸಮಾಯುಕ್ತೋ ವೇದವಿದ್ಯಾಸಮನ್ವಿತಃ ।
ಸರ್ವವ್ಯಾಧಿವಿನಿರ್ಮುಕ್ತೋ ಜೀವೇಚ್ಚ ಶರದಾಂ ಶತಂ ॥ ೧೮೪ ॥
ಪುನಸ್ತತ್ತೀರ್ಥಮಾಸಾದ್ಯ ಹ್ಯಕ್ಷಯಂ ಪದಮಾಪ್ನುಯಾತ್ ॥ ೧೮೫ ॥
ಏತತ್ಪುಣ್ಯಂ ಪಾಪಹರಂ ಕಥಿತಂ ತೇ ನೃಪೋತ್ತಮ ।
ಭಾರತೇದಂ ಮಹಾಖ್ಯಾನಂ ಶೃಣು ಚೈವ ತತಃ ಪರಂ ॥ ೧೮೬ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ
ಪಂಚಮೇ ಆವಂತ್ಯಖಂಡೇ ತೃತೀಯೇ ರೇವಾಖಂಡೇ
"ಭಾರಭೂತಿತೀರ್ಥಮಾಹಾತ್ಮ್ಯವರ್ಣನಂ" ನಾಮ
ನವಾಽಧಿಕದ್ವಿಶತತಮೋಽಧ್ಯಾಯಃ

---

೧೮೧. ಅಲ್ಲಿ ಬಾಲದಕೊನೆಯಷ್ಟು ಅಲ್ಪವಾಗಿ ದಾನಮಾಡಿದರೂ ಅಕ್ಷಯ ಫಲವನ್ನು ನೀಡುವುದೆಂದು ಮಹೇಶ್ವರನು ಹೇಳಿರುತ್ತಾನೆ.

೧೮೨. ಭಾರಭೂತಿತೀರ್ಥದಲ್ಲಿ ಮೃತರಾದ ಜ್ಞಾನಿಗಳಾದ ಮಾನವರಿಗೆ ಪುನರಾವೃತ್ತಿಯಿಲ್ಲದ ಗತಿಯುಂಟಾಗುವುದು.

೧೮೩. ಅಥವಾ ಲೋಕವ್ಯಾಪಾರಕ್ಕಾಗಿ ಭೂಲೋಕಕ್ಕೆ ಹೋಗಿ ಸಾಂಗ ವೇದವನ್ನು ಅಧ್ಯಯನಮಾಡಿದ ಶುದ್ಧವಾದ ಬ್ರಾಹ್ಮಣರ ವಂಶದಲ್ಲಿ ಹುಟ್ಟುವನು.

೧೮೪. ಅಲ್ಲಿ ಧನಧಾನ್ಯಗಳಿಂದ ಕೂಡಿದವನೂ, ವೇದವಿದ್ಯಾಸಂಪನ್ನನೂ, ಸಮಸ್ತ ವ್ಯಾಧಿರಹಿತನೂ ಆಗಿ ನೂರು ವರ್ಷಗಳಕಾಲ ಜೀವಿಸುವನು.

೧೮೫. ಮರಳಿ ಆ ತೀರ್ಥವನ್ನು ಹೊಂದಿ ಶಾಶ್ವತವಾದ ಸ್ಥಾನಭಾಗ್ಯವನ್ನು ಪಡೆಯುವನು.

೧೮೬. ಯುಧಿಷ್ಠಿರ! ಪುಣ್ಯಕರವೂ, ಪಾಪನಾಶಕವೂ ಆದ ಈ ಮಹಾಖ್ಯಾನವನ್ನು ನಿನಗೆ ಹೇಳಿರುವೆನು. ಆಮೇಲಿನ ಕಥೆಯನ್ನು ಕೇಳು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ
ಶ್ರೀ ಸ್ಕಾಂದಮಹಾಪುರಾಣದ ಐದನೆಯ ಆವಂತ್ಯಖಂಡದ ಮೂರನೆಯ ರೇವಾಖಂಡದಲ್ಲಿ
"ಭಾರಭೂತಿತೀರ್ಥಮಾಹಾತ್ಮ್ಯವರ್ಣನ"ವೆಂಬ
ಇನ್ನೂರೊಂಬತ್ತನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

# ಅಥ ದಶೋತ್ತರದ್ವಿಶತತಮೋಽಧ್ಯಾಯಃ

## ಪುಂಖಿಲತೀರ್ಥಮಾಹಾತ್ಮ್ಯವರ್ಣನಂ

ಶ್ರೀ ಮಾರ್ಕಂಡೇಯ ಉವಾಚ :—

ತಸ್ಯೈವಾನಂತರಂ ತಾತ ಪುಂಖಿಲಂ ತೀರ್ಥಮುತ್ತಮಂ ।
ತತ್ರ ತೀರ್ಥೇ ಪುರಾ ಪುಂಖಃ ಪಾರ್ಥ ಸಿದ್ಧಿಮುಪಾಗತಃ ॥ ೧ ॥
ಜಾಮದಗ್ನ್ಯೋ ಮಹಾತೇಜಾಃ ಕ್ಷತ್ರಿಯಾಂತಕರಃ ಪ್ರಭುಃ ।
ತಪಃ ಕೃತ್ವಾ ಸುವಿಪುಲಂ ನರ್ಮದೋತ್ತರತೀರಭಾಕ್ ॥ ೨ ॥
ತತಃ ಪ್ರಭೃತಿ ವಿಖ್ಯಾತಂ ಪುಂಖತೀರ್ಥಂ ನರೇಶ್ವರ ।
ತತ್ರ ತೀರ್ಥೇ ತು ಯಃ ಸ್ನಾತ್ವಾ ಹ್ಯಾರಾಧ್ಯ ಪರಮೇಶ್ವರಂ ॥ ೩ ॥
ಇಹಲೋಕೇ ಬಲೈರ್ಯುಕ್ತಃ ಪರೇ ಮೋಕ್ಷಮವಾಪ್ನುಯಾತ್ ।
ದೇವಾನ್ ಪಿತೄನ್ ಸಮಭ್ಯರ್ಚ್ಯ ಪಿತೄಣಾಮನೃಣೀ ಭವೇತ್ ॥ ೪ ॥
ತತ್ರ ತೀರ್ಥೇ ನರೋ ಯಸ್ತು ಪ್ರಾಣತ್ಯಾಗಂ ಕರೋತಿ ವೈ ।
ಅನಿವರ್ತಿಕಾ ಗತಿಸ್ತಸ್ಯ ರುದ್ರಲೋಕಾದಸಂಶಯಂ ॥ ೫ ॥
ತತ್ರ ತೀರ್ಥೇ ನರಃ ಸ್ನಾತ್ವಾ ಹಯಮೇಧಫಲಂ ಲಭೇತ್ ॥ ೬ ॥

---

### ಕನ್ನಡದ ಅನುವಾದ

#### ಪುಂಖಿಲತೀರ್ಥಮಾಹಾತ್ಮ್ಯವರ್ಣನ

೧–೨. ಶ್ರೀ ಮಾರ್ಕಂಡೇಯನು ಹೇಳುತ್ತಾನೆ :—ಯುಧಿಷ್ಠಿರ! ಅನಂತರ ಆ ತೀರ್ಥದ ಬಳಿಯಲ್ಲಿಯೆ ಪುಂಖಿಲತೀರ್ಥವಿರುವುದು. ಆ ತೀರ್ಥದಲ್ಲಿ ಹಿಂದೆ ಜಮದಗ್ನಿಯ ಮಗನೂ, ಕ್ಷತ್ರಿಯಾಂತಕನೂ ಆದ ಪುಂಖನು ನರ್ಮದಾನದಿಯ ಉತ್ತರ ದಡದಲ್ಲಿ ವಾಸಿಸುತ್ತ ಬಹುವಾಗಿ ತಪವಂಗೈದು ಸಿದ್ಧಿಯನ್ನು ಹೊಂದಿರುವನು.

೩–೪. ಅದು ಮೊದಲ್ಗೊಂಡು ಆ ತೀರ್ಥವು ಪುಂಖತೀರ್ಥವೆಂದು ಹೆಸರನ್ನು ಪಡೆಯಿತು. ಆ ತೀರ್ಥದಲ್ಲಿ ಮಿಂದು ಶಂಕರನನ್ನು ಪೂಜಿಸಿದವನು ಈ ಲೋಕದಲ್ಲಿ ಬಲಿಷ್ಠನಾಗಿ ಪರಲೋಕದಲ್ಲಿ ಮೋಕ್ಷವನ್ನು ಹೊಂದುವನು. ದೇವಪಿತೃಗಳನ್ನು ಪೂಜಿಸಿದರೆ ಪಿತೃಋಣದಿಂದ ಮುಕ್ತನಾಗುವನು.

೫. ಆ ತೀರ್ಥದಲ್ಲಿ ಮಡಿದ ಮಾನವನಿಗೆ ರುದ್ರಲೋಕದಲ್ಲಿ ಪುನರಾವೃತ್ತಿಯಿಲ್ಲದ ಗತಿಯುಂಟಾಗುವುದು.

೬. ಆ ತೀರ್ಥದಲ್ಲಿ ಮಿಂದ ಮನುಷ್ಯನು ಅಶ್ವಮೇಧಯಾಗದ ಫಲವನ್ನು ಪಡೆಯುವನು.

ತತ್ರ ತೀರ್ಥೇ ನರೋ ಯಸ್ತು ಬ್ರಾಹ್ಮಣಾನ್ ಭೋಜಯೇನ್ನೃಪ ।
ಏಕಸ್ಮಿನ್ ಭೋಜಿತೇ ವಿಪ್ರೇ ಕೋಟಿರ್ಭವತಿ ಭೋಜಿತಾ ॥ ೭ ॥
ತತ್ರ ತೀರ್ಥೇ ತು ಯಃ ಕಶ್ಚಿತ್ಪೂಜಯೇದ್ವೃಷಭಧ್ವಜಂ ।
ವಾಜಪೇಯಸ್ಯ ಯಜ್ಞಸ್ಯ ಫಲಂ ಪ್ರಾಪ್ನೋತ್ಯಸಂಶಯಂ ॥ ೮ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ
ಪಂಚಮೇ ಆವಂತ್ಯಖಂಡೇ ತೃತೀಯೇ ರೇವಾಖಂಡೇ
"ಪುಂಖಿಲತೀರ್ಥಮಾಹಾತ್ಮ್ಯವರ್ಣನಂ"ನಾಮ
ದಶೋತ್ತರದ್ವಿಶತತಮೋಽಧ್ಯಾಯಃ

---

೭. ಅಲ್ಲಿ ಬ್ರಾಹ್ಮಣರನ್ನು ಭೋಜನಮಾಡಿಸಿದರೆ ಒಬ್ಬೊಬ್ಬ ಬ್ರಾಹ್ಮಣನ ಭೋಜನದಿಂದ ಕೋಟಿ ಮಂದಿ ಬ್ರಾಹ್ಮಣರನ್ನು ಭೋಜನಮಾಡಿಸಿದಂತಾಗುವುದು.

೮. ಆ ತೀರ್ಥದಲ್ಲಿ ಶಂಕರನನ್ನು ಪೂಜಿಸಿದವನು ನಿಶ್ಚಯವಾಗಿಯೂ ವಾಜಪೇಯಯಜ್ಞದ ಫಲವನ್ನು ಪಡೆಯುವನು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ
ಶ್ರೀ ಸ್ಕಾಂದಮಹಾಪುರಾಣದ ಐದನೆಯ ಆವಂತ್ಯಖಂಡದ ಮೂರನೆಯ ರೇವಾಖಂಡದಲ್ಲಿ
"ಪುಂಖಿಲತೀರ್ಥಮಾಹಾತ್ಮ್ಯವರ್ಣನ"ವೆಂಬ
ಇನ್ನೂರಹತ್ತನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

# ಅಥೈಕಾದಶೋತ್ತರದ್ವಿಶತತಮೋಽಧ್ಯಾಯಃ

## ಮುಂಡಿತೀರ್ಥಮಾಹಾತ್ಮ್ಯವರ್ಣನಂ

ಶ್ರೀ ಮಾರ್ಕಂಡೇಯ ಉವಾಚ:—

ಆಶ್ಚರ್ಯಭೂತಂ ಲೋಕಸ್ಯ ದೇವದೇವೇನ ಯತ್ಕೃತಂ ।
ತತ್ತೇ ಸರ್ವಂ ಪ್ರವಕ್ಷ್ಯಾಮಿ ನರ್ಮದಾತಟವಾಸಿನಾಂ ॥ ೧ ॥
ದ್ವಿಜಾನ್ ಸುಕೃಪಣಾನ್ದೇವಃ ಕುಷ್ಠೀ ಭೂತ್ವಾ ಯಯಾಚ ಹ ।
ಶ್ರಾದ್ಧಕಾಲೇ ತು ಸಂಪ್ರಾಪ್ತೇ ರಕ್ತಗಂಧಾನುಲೇಪನಃ ॥ ೨ ॥
ಸ್ರವದ್ಬುದ್ಬುದಗಾತ್ರಸ್ತು ಮಕ್ಷಿಕಾಕೃಮಿಸಂವೃತಃ ।
ದುಶ್ಚರ್ಮಾ ದುರ್ಮುಖೋ ಗಂಧೀ ಪ್ರಸ್ಖಲಂಶ್ಚ ಪದೇ ಪದೇ ॥ ೩ ॥
ಬ್ರಾಹ್ಮಣಾವಸಥಂ ಗತ್ವಾ ಸ್ಖಲನ್ದ್ವಾರೇಽಬ್ರವೀದಿದಂ ।
ಭೋ ಭೋ ಗೃಹಪತೇ ತ್ವದ್ಯ ಬ್ರಾಹ್ಮಣೈಃ ಸಹಭೋಜನಂ ॥ ೪ ॥
ತ್ವದ್ಗೃಹೇ ಕರ್ತುಮಿಚ್ಛಾಮಿ ಹ್ಯೇಭಿಃ ಸಹ ಸುಸಂಸ್ಕೃತಂ ।
ತತಸ್ತಂ ಬ್ರಾಹ್ಮಣಂ ದೃಷ್ಟ್ವಾ ಯಜಮಾನಸಮನ್ವಿತಾಃ ॥ ೫ ॥
ಸ್ರವಂತಂ ಸರ್ವಗಾತ್ರೇಷು ಧಿಗ್ಧಿಗಿತ್ಯೇವಮಬ್ರುವನ್ ।
ನಿರ್ಗಚ್ಛಸ್ವಾಶು ದುರ್ಗಂಧ ಗೃಹಾಚ್ಛೀಘ್ರಂ ದ್ವಿಜಾಧಮ ॥ ೬ ॥

---

## ಕನ್ನಡದ ಅನುವಾದ

### ಮುಂಡಿತೀರ್ಥಮಾಹಾತ್ಮ್ಯವರ್ಣನ

೧. ಶ್ರೀ ಮಾರ್ಕಂಡೇಯನು ಹೇಳುತ್ತಾನೆ:—ಪ್ರಪಂಚಕ್ಕೆ ಆಶ್ಚರ್ಯವನ್ನುಂಟುಮಾಡುವ ಈ ನರ್ಮದಾತಟದಲ್ಲಿ ವಾಸಿಸುವ ಜನರ ಮಧ್ಯದಲ್ಲಿ ಶಂಕರನು ಮಾಡಿದ ಕಾರ್ಯವನ್ನೆಲ್ಲ ನಿನಗೆ ಹೇಳುವೆನು.

೨–೬. ಆ ಶಂಕರನು ಕುಷ್ಠರೋಗವುಳ್ಳವನಾಗಿ ಕೃಪಣರಾದ ಬ್ರಾಹ್ಮಣರನ್ನು ಬೇಡಿದನು. ಅವನು ಶ್ರಾದ್ಧಕಾಲದಲ್ಲಿ ರಕ್ತಗಂಧಲೇಪನವುಳ್ಳವನೂ, ಸುರಿಯುತ್ತಿರುವ ಗುಳ್ಳೆಗಳುಳ್ಳ ಶರೀರವುಳ್ಳವನೂ, ನೊಣ ಕ್ರಿಮಿಗಳಿಂದ ಕೂಡಿರುವವನೂ, ಕೆಟ್ಟ ಚರ್ಮವುಳ್ಳವನೂ, ದುರ್ಮುಖನೂ, ದುರ್ಗಂಧವುಳ್ಳವನೂ, ಪ್ರತಿ ಹೆಜ್ಜೆಯಲ್ಲಿಯೂ ಜಾರುತ್ತಿರುವವನೂ ಆಗಿ ಬ್ರಾಹ್ಮಣನೊರ್ವನ ಮನೆಗೆ ಹೋಗಿ ಬಾಗಿಲಿನಲ್ಲಿ ಜಾರಿ ಬೀಳುತ್ತ ಇಂತೆಂದನು. "ಎಲೈ ಮನೆಯ ಯಜಮಾನನೆ! ನಾನು ಈ ದಿನ ನಿನ್ನ ಮನೆಯಲ್ಲಿ ಈ ಬ್ರಾಹ್ಮಣರೊಡನೆ ಸುಸಂಸ್ಕೃತವಾದ ಅನ್ನವನ್ನು ಭುಂಜಿಸಲು ಬಯಸುವೆನು." ಬ್ರಾಹ್ಮಣರು ಯಜಮಾನನೊಡನೆ ಕೀವು ಸುರಿಯುತ್ತಿರುವ ಆ ಬ್ರಾಹ್ಮಣನನ್ನು ನೋಡಿ, "ಛಿ! ದುರ್ಗಂಧನಾದ ದ್ವಿಜಾಧಮ! ನೀನು ಬೇಗನೆ ಈ ಮನೆಯಿಂದ ಹೊರಡು.

ಅಭೋಜ್ಯಮೇತತ್ಸರ್ವೇಷಾಂ ದರ್ಶನಾತ್ತವ ಸತ್ಕೃತಂ ।
ಏವಮೇವ ತಥೇತ್ಯುಕ್ತ್ವಾ ದೇವದೇವೋ ಮಹೇಶ್ವರಃ ॥ ೭ ॥
ಜಗಾಮಾಕಾಶಮಮಲಂ ದೃಶ್ಯಮಾನೋ ದ್ವಿಜೋತ್ತಮೈಃ ।
ಗತೇ ಚಾದರ್ಶನಂ ದೇವೇ ಸ್ನಾತ್ವಾಽಭ್ಯುಕ್ಷ್ಯ ಸಮಂತತಃ ॥ ೮ ॥
ಭುಂಜತೇಸ್ಮ ದ್ವಿಜಾ ರಾಜನ್ಯಾವತ್ಪಾತ್ರೇ ಪೃಥಕ್ ಪೃಥಕ್ ।
ಯತ್ರ ಯತ್ರ ಚ ಪಶ್ಯಂತಿ ತತ್ರ ತತ್ರ ಕೃಮಿರ್ಬಹು ॥ ೯ ॥
ದೃಷ್ಟ್ವಾ ವಿಸ್ಮಯಮಾಪನ್ನಾಃ ಸರ್ವೇ ಕಿಮಿತಿ ಚಾಬ್ರುವನ್ ।
ತತಃ ಕಶ್ಚಿದುವಾಚೇದಂ ಬ್ರಾಹ್ಮಣೋ ಗುಣವಾನಜಃ ॥ ೧೦ ॥
ಯೋಗೀಂದ್ರಃ ಶಂಕಯಾ ತತ್ರ ಬಹುವಿಪ್ರಸಮಾಗಮೇ ।
ಯೋಽತ್ರ ಪೂರ್ವಂ ಸಮಾಯಾತಃ ಸ ಯೋಗೀ ಪರಮೇಶ್ವರಃ ॥ ೧೧ ॥
ತಸ್ಯೇದಂ ಕ್ರೀಡಿತಂ ಮನ್ಯೇ ಭರ್ತ್ಸಿತಸ್ಯ ವಿಪಾಕಜಂ ।
ಫಲಂ ಭವತಿ ನಾಽನ್ಯಸ್ಯ ಹ್ಯತಿಥೇಃ ಶಾಸ್ತ್ರನಿಶ್ಚಯಾತ್ ॥ ೧೨ ॥
ಸಂಪೂಜ್ಯಃ ಪರಮಾತ್ಮಾ ವೈ ಹ್ಯತಿಥಿಶ್ಚ ವಿಶೇಷತಃ ।
ಶ್ರಾದ್ಧಕಾಲೇ ತು ಸಂಪ್ರಾಪ್ತಮತಿಥಿಂ ಯೋ ನ ಪೂಜಯೇತ್ ॥ ೧೩ ॥
ಪಿಶಾಚಾ ರಾಕ್ಷಸಾಸ್ತಸ್ಯ ತದ್ವಿಲುಂಪಂತ್ಯಸಂಶಯಂ ।
ರೂಪಾನ್ವಿತಂ ವಿರೂಪಂ ವಾ ಮಲಿನಂ ಮಲಿನಾಂಬರಂ ॥ ೧೪ ॥

---

೭–೯. ನಿನ್ನ ದರ್ಶನದಿಂದ ಈ ಅನ್ನವನ್ನು ಯಾರೂ ತಿನ್ನಬಾರದು ” ಎಂದು ಹೇಳಿದರು. ಶಂಕರನು ಹಾಗೆಯೇ ಆಗಲೆಂದು ಹೇಳಿ ಬ್ರಾಹ್ಮಣರು ನೋಡುತ್ತಿರುವಾಗಲೆ ಆಕಾಶಕ್ಕೆ ತೆರಳಿದನು. ಅವನು ಅದೃಶ್ಯನಾಗಲು ಬ್ರಾಹ್ಮಣರು ಮಿಂದು ಪ್ರೋಕ್ಷಣೆಮಾಡಿಕೊಂಡು ಪ್ರತ್ಯೇಕವಾಗಿ ಪಾತ್ರೆಯಲ್ಲಿ ಭುಂಜಿಸಲುದ್ಯುಕ್ತವಾಗಲು ಅವರು ಎಲ್ಲೆಡೆಯಲ್ಲಿಯೂ ಬಹಳ ಕ್ರಿಮಿಗಳನ್ನು ಕಂಡರು.

೧೦–೧೧. ಅವರು ಆಶ್ಚರ್ಯಗೊಂಡು ಇದೇನೆಂದು ಕೇಳಿದರು. ಅನಂತರ ಗುಣವಂತನೂ, ಯೋಗೀಂದ್ರನೂ ಆದ ಒಬ್ಬ ಬ್ರಾಹ್ಮಣನು ಶಂಕಿಸಿ ಅನೇಕ ಬ್ರಾಹ್ಮಣರ ಆ ಸಭೆಯಲ್ಲಿ ಇಂತೆಂದನು. “ ಇಲ್ಲಿಗೆ ಹಿಂದೆ ಬಂದವನು ಯೋಗಿಯಾದ ಪರಮೇಶ್ವರನು.

೧೨. ಅವನನ್ನು ಧಿಕ್ಕಾರಮಾಡಿರುವುದರಿಂದ ಹೀಗಾಗಿರುವುದೆಂದು ತಿಳಿಯುತ್ತೇನೆ. ಬೇರೆ ಅತಿಥಿಯಿಂದ ಇಂತಹ ಫಲವಾಗುವುದಿಲ್ಲವೆಂದು ಶಾಸ್ತ್ರ ನಿರ್ಣಯವಿರುವುದು.

೧೩–೧೪. ಪರಮಾತ್ಮನನ್ನೂ, ಅತಿಥಿಯನ್ನೂ ವಿಶೇಷವಾಗಿ ಪೂಜಿಸಬೇಕು. ಶ್ರಾದ್ಧಕಾಲದಲ್ಲಿ ಬಂದ ಅತಿಥಿಯನ್ನು ಪೂಜಿಸದಿದ್ದರೆ ಪಿಶಾಚಗಳೂ,

ಯೋಗೀಂದ್ರಂ ಶ್ವಪಚಂ ವಾಽಪಿ ಅತಿಥಿಂ ನ ವಿಚಾರಯೇತ್ ।
ತಚ್ಛ್ರುತ್ವಾ ವಚನಂ ತಸ್ಯ ಯಜಮಾನಪುರೋಗಮಾಃ ॥ ೧೫ ॥
ಬ್ರಾಹ್ಮಣಾ ದ್ವಿಜಮನ್ವೇಷ್ಟುಂ ಧಾವಿತಾಃ ಸರ್ವತೋ ದಿಶಂ ।
ತಾವತ್ಕಥಂಚಿತ್ಕೇನಾಽಪಿ ಗಹನಂ ವನಮಾಶ್ರಿತಃ ॥ ೧೬ ॥
ದೃಷ್ಟೋ ದೃಷ್ಟ ಇತಿಪ್ರೋಕ್ತಂ ತೇನ ತೇ ಸರ್ವ ಆಗತಾಃ ।
ತತಃ ಪಶ್ಯಂತಿ ತಂ ವಿಪ್ರಂ ಸ್ಥಾಣುವನ್ನಿಶ್ಚಲಂ ಸ್ಥಿತಂ ॥ ೧೭ ॥
ಕ್ರಂದತೇ ನ ಚಲತಿ ಸ್ಪಂದತೇ ನ ಚ ಪಶ್ಯತಿ ।
ಜಲ್ಪಂತಿ ಕರುಣಂ ಕೇಚಿತ್ ಸ್ತುವಂತಿ ಚ ತಥಾಽಪರೇ ॥ ೧೮ ॥
ವಾಗ್ಭಿಃ ಸತತಮಿಷ್ಟಾಭಿಃ ಸ್ತೂಯಮಾನಸ್ತ್ರಿಲೋಚನಃ ।
ಕ್ಷುಧಾರ್ದಿತಾನಾಂ ದೇವೇಶ ಬ್ರಾಹ್ಮಣಾನಾಂ ವಿಶೇಷತಃ ।
ವಿನಷ್ಟಮನ್ನಂ ಸರ್ವೇಷಾಂ ಪುನಃ ಸಂಸ್ಕರ್ತುಮರ್ಹಸಿ ॥ ೧೯ ॥
ಶ್ರುತ್ವಾ ತು ವಚನಂ ತೇಷಾಂ ಬ್ರಾಹ್ಮಣಾನಾಂ ಯುಧಿಷ್ಠಿರ ।
ಪರಯಾ ಕೃಪಯಾ ದೇವಃ ಪ್ರಸನ್ನಸ್ತಾನುವಾಚ ಹ ॥ ೨೦ ॥
ಮಯಾ ಪ್ರಸನ್ನೇನ ಮಹಾನುಭಾವಾ
ಸ್ತದೇವ ವೋಽನ್ನಂ ವಿಹಿತಂ ಸುಧೇವ ।
ಭುಂಜಂತು ವಿಪ್ರಾಃ ಸಹಬಂಧುಭೃತ್ಯೈ
ರರ್ಚಂತು ನಿತ್ಯಂ ಮಮ ಮಂಡಲಂ ಚ ॥ ೨೧ ॥

---

ರಾಕ್ಷಸರೂ ಆ ಶ್ರಾದ್ಧವನ್ನು ನಿಶ್ಚಯವಾಗಿಯೂ ಹಾಳುಮಾಡುವರು. ಅತಿಥಿಯು ಸುಂದರನಾಗಲಿ, ಕುರೂಪಿಯಾಗಲಿ, ಮಲಿನನಾಗಲಿ, ಮಲಿನವಸ್ತ್ರನಾಗಲಿ, ಯೋಗೀಂದ್ರನಾಗಲಿ, ಶ್ವಪಚನಾಗಲಿ, ಅವನನ್ನು ಕುರಿತು ವಿಚಾರಮಾಡಬಾರದು.'' ಯಜಮಾನನೇ ಮೊದಲಾದ ಬ್ರಾಹ್ಮಣರು ಆ ಬ್ರಾಹ್ಮಣನ ಆ ಮಾತನ್ನು ಕೇಳಿ ಅತಿಥಿಯಾಗಿ ಬಂದ ಬ್ರಾಹ್ಮಣನನ್ನು ಹುಡುಕಲು ಸಮಸ್ತ ದಿಕ್ಕುಗಳಿಗೂ ಓಡಿದರು. ಅಷ್ಟರಲ್ಲಿ ಗಹನವಾದ ಅರಣ್ಯದಲ್ಲಿ ಒಬ್ಬ ಬ್ರಾಹ್ಮಣನು, ''ನೋಡಿದೆನು, ಅತಿಥಿಯನ್ನು ನೋಡಿದೆನು'' ಎಂದು ಕೂಗಿಕೊಂಡನು. ಎಲ್ಲರೂ ಅಲ್ಲಿಗೆ ಬಂದು ಸ್ಥಾಣುವಿನಂತೆ ನಿಶ್ಚಲನೂ, ಮಾತಾಡದವನೂ ಆದ ಆ ಬ್ರಾಹ್ಮಣನನ್ನು ಕಂಡರು. ಅವರಲ್ಲಿ ಕೆಲವರು ದೈನ್ಯದಿಂದ ಮಾತಾಡಿದರು. ಕೆಲವರು ಸ್ತುತಿಸಿದರು.

೧೯–೨೦. ''ಶಂಕರ! ನಷ್ಟವಾದ ನಮ್ಮ ಅನ್ನವನ್ನು ಸಂಸ್ಕೃತವನ್ನಾಗಿ ಮಾಡು'' ಎಂದು ಪ್ರಿಯವಚನಗಳಿಂದ ಸ್ತುತಿಸುವ ಹಸಿವುಗೊಂಡ ಆ ಬ್ರಾಹ್ಮಣರ ಮಾತನ್ನು ಕೇಳಿ ಪರಮ ದಯೆಯಿಂದ ನಗುತ್ತ ಹೀಗೆಂದನು.

೨೧. ''ಮಹಾನುಭಾವರಾದ ಬ್ರಾಹ್ಮಣರೆ! ಪ್ರಸನ್ನನಾದ ನಾನು ನಿಮ್ಮ

ತತಶ್ಚಾಯತನಂ ಪಾರ್ಥ ದೇವದೇವಸ್ಯ ಶೂಲಿನಃ ।
ಮುಂಡಿನಾಮೇತಿ ವಿಖ್ಯಾತಂ ಸರ್ವಪಾಪಹರಂ ಶುಭಂ ।
ಕಾರ್ತಿಕ್ಯಾಂ ತು ವಿಶೇಷೇಣ ಗಯಾತೀರ್ಥೇನ ತತ್ಸಮಂ ॥ ೨೨ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಽಶೀತಿಸಾಹಸ್ರ್ಯಾಂ ಸಂಹಿತಾಯಾಂ
ಪಂಚಮೇ ಆವಂತ್ಯಖಂಡೇ ತೃತೀಯೇ ರೇವಾಖಂಡೇ
"ಮುಂಡಿತೀರ್ಥಮಾಹಾತ್ಮ್ಯವರ್ಣನಂ"
ನಾಮೈಕಾದಶೋತ್ತರದ್ವಿಶತತಮೋಽಧ್ಯಾಯಃ

---

ಅನ್ನವನ್ನು ಅಮೃತದಂತೆ ಮಾಡಿದ್ದೇನೆ. ನೀವು ಬಂಧುಭೃತ್ಯರೊಡನೆ ಭುಂಜಿಸಿರಿ. ನನ್ನ ಲಿಂಗವನ್ನೂ ಅರ್ಚಿಸಿರಿ.

೨೨. ಯುಧಿಷ್ಠಿರ! ಅನಂತರ ಸಕಲ ಪಾಪವನ್ನು ಪರಿಹರಿಸುವ ಶಂಕರನ ದೇವಾಲಯವು ಮುಂಡಿಯೆಂಬ ಹೆಸರಿನಿಂದ ಪ್ರಸಿದ್ಧವಾಯಿತು. ಕಾರ್ತಿಕ ಶುದ್ಧ ಚತುರ್ದಶಿಯ ದಿನ ಅದು ಗಯಾತೀರ್ಥಕ್ಕೆ ಸಮವಾಗುವುದು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ
ಶ್ರೀ ಸ್ಕಾಂದಮಹಾಪುರಾಣದ ಐದನೆಯ ಆವಂತ್ಯಖಂಡದ ಮೂರನೆಯ ರೇವಾಖಂಡದಲ್ಲಿ
"ಮುಂಡಿತೀರ್ಥಮಾಹಾತ್ಮ್ಯವರ್ಣನ"ವೆಂಬ
ಇನ್ನೂರಹನ್ನೊಂದನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

## ಅಥ ದ್ವಾದಶೋತ್ತರದ್ವಿಶತತಮೋಽಧ್ಯಾಯಃ

### ಏಕಶಾಲಡಿಂಡಿಮೇಶ್ವರತೀರ್ಥಮಾಹಾತ್ಮ್ಯವರ್ಣನಂ

ಶ್ರೀ ಮಾರ್ಕಂಡೇಯ ಉವಾಚ :—

ಅಥಾಽನ್ಯತ್ಸಂಪ್ರವಕ್ಷ್ಯಾಮಿ ದೇವಸ್ಯ ಚರಿತಂ ಮಹತ್ ।
ಶ್ರುತಮಾತ್ರೇಣ ಯೇನಾಽಽಶು ಸರ್ವಪಾಪೈಃ ಪ್ರಮುಚ್ಯತೇ ॥ ೧ ॥
ಭಿಕ್ಷುರೂಪಂ ಪರಂ ಕೃತ್ವಾ ದೇವದೇವೋ ಮಹೇಶ್ವರಃ ।
ಏಕಶಾಲಾಂ ಗತೋ ಗ್ರಾಮಂ ಭಿಕ್ಷಾರ್ಥೀ ಕ್ಷುತ್ಪಿಪಾಸಿತಃ ॥ ೨ ॥
ಅಕ್ಷಸೂತ್ರೋದ್ಯತಕರೋ ಭಸ್ಮಗುಂಠಿತವಿಗ್ರಹಃ ।
ಸ್ಫುರತ್ತ್ರಿಶೂಲೋ ವಿಶ್ವೇಶೋ ಜಟಾಕುಂಡಲಭೂಷಿತಃ ॥ ೩ ॥
ಕೃತ್ತಿವಾಸಾ ಮಹಾಕಾಯೋ ಮಹಾಽಹಿಕೃತಭೂಷಣಃ ।
ವಾದಯನ್ವೈ ಡಮರುಕಂ ಡಿಂಡಿಮಪ್ರತಿಮಂ ಶುಭಂ ॥ ೪ ॥
ಕಪಾಲಪಾಣಿರ್ಭಗವಾನ್ಬಾಲಕೈರ್ಬಹುಭಿರ್ವೃತಃ ।
ಕ್ವಚಿದ್ಗಾಯನ್ಹಸಂಶ್ಚೈವ ನೃತ್ಯನ್ವಾದ್ಯನ್ ಕ್ವಚಿತ್ಕ್ವಚಿತ್ ॥ ೫ ॥
ಯತ್ರ ಯತ್ರ ಗೃಹೇ ದೇವೋ ಲೀಲಯಾ ಡಿಂಡಿಮಂ ನ್ಯಸೇತ್ ।
ಭಾರಾಕ್ರಾಂತಂ ಗೃಹಂ ಪಾರ್ಥ ತತ್ರ ತತ್ರ ವಿನಶ್ಯತಿ ॥ ೬ ॥

---

### ಕನ್ನಡದ ಅನುವಾದ

#### ಏಕಶಾಲಡಿಂಡಿಮೇಶ್ವರತೀರ್ಥಮಾಹಾತ್ಮ್ಯವರ್ಣನ

೧. ಶ್ರೀ ಮಾರ್ಕಂಡೇಯನು ಹೇಳುತ್ತಾನೆ:—ಅನಂತರ ಶಂಕರನ ಮತ್ತೊಂದು ಮಹಾಚರಿತ್ರೆಯನ್ನು ನಿನಗೆ ಹೇಳುವೆನು. ಮಾನವನು ಅದನ್ನು ಕೇಳುವುದರಿಂದಲೇ ಸಕಲ ಪಾಪಮುಕ್ತನಾಗುವನು.

೨. ದೇವದೇವನಾದ ಮಹೇಶ್ವರನು ಭಿಕ್ಷುರೂಪವನ್ನು ತಾಳಿ ಹಸಿವು ಬಾಯಾರಿಕೆಗಳಿಂದ ಪೀಡಿತನಾಗಿ ಭಿಕ್ಷೆಗಾಗಿ ಏಕಶಾಲಗ್ರಾಮಕ್ಕೆ ಹೋದನು.

೩–೬. ಅವನು ಜಪಮಾಲೆಯನ್ನು ಹಿಡಿದವನೂ, ಭಸ್ಮಲಿಪ್ತನೂ, ಪ್ರಕಾಶಮಾನವಾದ ತ್ರಿಶೂಲವುಳ್ಳವನೂ, ಜಟಾಕುಂಡಲಗಳಿಂದ ಅಲಂಕಾರಗೊಂಡವನೂ, ಚರ್ಮವನ್ನು ಹೊದ್ದವನೂ, ದೊಡ್ಡ ಶರೀರವುಳ್ಳವನೂ, ದೊಡ್ಡ ಸರ್ಪದಿಂದ ಅಲಂಕೃತನೂ, ಡಿಂಡಿಮದಂತಿರುವ ಡಮರುವನ್ನು ಬಾರಿಸುವವನೂ, ಕಪಾಲಪಾಣಿಯೂ, ಅನೇಕ ಬಾಲಕರಿಂದ ಸುತ್ತುವರಿಯಲ್ಪಟ್ಟವನೂ, ಒಂದೆಡೆಯಲ್ಲಿ ಹಾಡುವವನೂ, ಒಂದೆಡೆಯಲ್ಲಿ ನಗುವವನೂ, ಒಂದೆಡೆಯಲ್ಲಿ ಕುಣಿಯುವವನೂ, ಒಂದೆಡೆಯಲ್ಲಿ ವಾದ್ಯಮಾಡುವವನೂ ಆಗಿ ಯಾವ ಯಾವ ಮನೆ

ಏವಂ ಸಂಪ್ರಚರನ್ದೇವೋ ವೇಷ್ಟಿತೋ ಬಹುಭಿರ್ಜನೈಃ ।
ದೃಶ್ಯಾಽದೃಶ್ಯೇನ ರೂಪೇಣ ನಿರ್ಜಗಾಮ ಬಹಿಃ ಪ್ರಭುಃ ॥ ೭ ॥
ಇತಶ್ಚೇತಶ್ಚ ಧಾವಂತಂ ನ ಪಶ್ಯಂತಿ ಯದಾ ಜನಾಃ ।
ವಿಸ್ಮಿತಾಸ್ತೇ ಸ್ಥಿತಾಃ ಶಂಭುರ್ಭವಿಷ್ಯತಿ ತತೋಽಸ್ತುವನ್ ॥ ೮ ॥
ತೇಷಾಂ ತು ಸ್ತುವತಾಂ ಭಕ್ತ್ಯಾ ಶಂಕರಂ ಜಗತಾಂ ಪತಿಂ ।
ಡಿಂಡಿರೂಪೋಹಿ ಭಗವಾಂಸ್ತದಾಽಸೌ ಪ್ರತ್ಯದೃಶ್ಯತ ॥ ೯ ॥
ತದಾ ಪ್ರಭೃತಿ ದೇವೇಶೋ ಡಿಂಡಿಮೇಶ್ವರ ಉಚ್ಯತೇ ।
ದರ್ಶನಾತ್ಸ್ಪರ್ಶನಾದ್ರಾಜನ್ ಸರ್ವಪಾಪೈಃ ಪ್ರಮುಚ್ಯತೇ ॥ ೧೦ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ
ಪಂಚಮೇ ಆವಂತ್ಯಖಂಡೇ ತೃತೀಯೇ ರೇವಾಖಂಡೇ
"ಏಕಶಾಲಡಿಂಡಿಮೇಶ್ವರತೀರ್ಥಮಾಹಾತ್ಮ್ಯವರ್ಣನಂ"ನಾಮ
ದ್ವಾದಶೋತ್ತರದ್ವಿಶತತಮೋಽಧ್ಯಾಯಃ

---

ಯಲ್ಲಿ ಡಿಂಡಿಮವನ್ನು ಇಡುವನೊ, ಆ ಮನೆಯು ಭಾರದಿಂದ ಪ್ರಾಪ್ತವಾಗಿ ನಾಶವಾಗುತ್ತಿದ್ದಿತು.

೭. ಹೀಗೆ ಸಂಚರಿಸುತ್ತಿರುವ ಆ ಶಂಕರನನ್ನು ಬಹು ಜನಗಳು ಸುತ್ತಿಕೊಳ್ಳಲು ಅವನು ದೃಶ್ಯಾದೃಶ್ಯರೂಪದಿಂದ ಹೊರಹೊರಟನು.

೮. ಇತ್ತ ಅತ್ತ ಓಡುತ್ತಿರುವ ಅವನನ್ನು ಆ ಬ್ರಾಹ್ಮಣರು ನೋಡಿ ವಿಸ್ಮಯಗೊಂಡು ಸ್ತುತಿಸಿದರು.

೯. ಅವರು ಭಕ್ತಿಯಿಂದ ಡಿಂಡಿರೂಪನಾದ ಶಂಕರನನ್ನು ಸ್ತುತಿಸುತ್ತಿರಲು ಶಂಕರನು ಡಿಂಡಿರೂಪನಾಗಿಯೆ ಕಾಣಿಸಿಕೊಂಡನು.

೧೦. ಅದು ಮೊದಲ್ಗೊಂಡು ಆ ಶಂಕರನು ಡಿಂಡಿಮೇಶ್ವರನೆಂದು ಹೇಳಿಸಿಕೊಳ್ಳುವನು. ನರನು ಅವನ ದರ್ಶನಸ್ಪರ್ಶಗಳನ್ನು ಮಾಡುವುದರಿಂದ ಸಕಲ ಪಾಪಮುಕ್ತನಾಗುವನು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ
ಶ್ರೀ ಸ್ಕಾಂದಮಹಾಪುರಾಣದ ಐದನೆಯ ಆವಂತ್ಯಖಂಡದ ಮೂರನೆಯ ರೇವಾಖಂಡದಲ್ಲಿ
"ಏಕಶಾಲಡಿಂಡಿಮೇಶ್ವರತೀರ್ಥಮಾಹಾತ್ಮ್ಯವರ್ಣನ"ವೆಂಬ
ಇನ್ನೂರಹನ್ನೆರಡನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

## ಅಥ ತ್ರಯೋದಶೋತ್ತರದ್ವಿಶತತಮೋಽಧ್ಯಾಯಃ

### ಆಮಲೇಶ್ವರತೀರ್ಥಮಾಹಾತ್ಮ್ಯವರ್ಣನಂ

ಶ್ರೀ ಮಾರ್ಕಂಡೇಯ ಉವಾಚ :—

ಪುನರನ್ಯತ್ಪ್ರವಕ್ಷ್ಯಾಮಿ ದೇವಸ್ಯಚರಿತಂ ಮಹತ್ ।
ಶ್ರುತಮಾತ್ರೇಣ ಯೇನೈವ ಮುಚ್ಯತೇ ಸರ್ವಪಾತಕೈಃ ॥ ೧ ॥
ಅಬಾಲೋ ಬಾಲರೂಪೇಣ ಗ್ರಾಮಣ್ಯೈರ್ಬಾಲಕೈಃ ಸಹ ।
ಆಮಲೈಃ ಕ್ರೀಡತೇ ಶಂಭುಸ್ತತ್ತೇ ವಕ್ಷ್ಯಾಮಿ ಭಾರತ ॥ ೨ ॥
ಸರ್ವೈಸ್ತೈರಾಮಲಾಃ ಕ್ಷಿಪ್ತಾ ಯೇ ತೇ ದೇವೇನ ಪಾಂಡವ ।
ಆನೀತಾಸ್ತತ್ಕ್ಷಣಾದೇವ ತತಃ ಪಶ್ಚಾತ್ಕ್ಷಿಪೇದ್ಧರಃ ॥ ೩ ॥
ಯಾವದ್ಗತ್ವಾ ದಿಶೋ ದಿಗ್ಭ್ಯ ಆಗಚ್ಛಂತಿ ಪೃಥಕ್ ಪೃಥಕ್ ।
ತಾವತ್ತಮಾಮಲಂ ಭೂತಂ ಪಶ್ಯಂತಿ ಪರಮೇಶ್ವರಂ ॥ ೪ ॥
ತೃತೀಯೇ ಚೈವ ಯತ್ಕರ್ಮ ದೇವದೇವಸ್ಯ ಧೀಮತಃ ।
ಸ್ಥಾನಾನಾಂ ಪರಮಂ ಸ್ಥಾನಮಾಮಲೇಶ್ವರಮುತ್ತಮಂ ॥ ೫ ॥

---

## ಕನ್ನಡದ ಅನುವಾದ

### ಆಮಲೇಶ್ವರತೀರ್ಥಮಾಹಾತ್ಮ್ಯವರ್ಣನ

೧. ಶ್ರೀ ಮಾರ್ಕಂಡೇಯನು ಹೇಳುತ್ತಾನೆ:—ಮರಳಿ ಶಂಕರನ ಇನ್ನೊಂದು ಮಹಾಚರಿತ್ರೆಯನ್ನು ಹೇಳುವೆನು. ಇದನ್ನು ಕೇಳುವುದರಿಂದಲೇ ನರನು ಸಕಲ ಪಾಪಮುಕ್ತನಾಗುವನು.

೨. ಯುಧಿಷ್ಠಿರ! ಬಾಲಕನಲ್ಲದಿದ್ದರೂ ಆ ಶಂಕರನು ಹಳ್ಳಿಯ ಬಾಲಕರೊಡಗೂಡಿ ನೆಲ್ಲಿಯ ಕಾಯಿಗಳಿಂದ ಆಟವಾಡುತ್ತಿದ್ದನು. ಅದನ್ನು ನಿನಗೆ ಹೇಳುವೆನು.

೩. ಶಂಕರನು ಆ ಬಾಲಕರು ಎಸೆದ ನೆಲ್ಲಿಯ ಕಾಯಿಗಳನ್ನು ಒಡನೊಡನೆಯೆ ತಂದು ತಂದು ಮರಳಿ ಎಸೆದನು.

೪—೫. ಆ ಬಾಲಕರು ಒಬ್ಬೊಬ್ಬರೂ ಒದೊಂದು ದಿಕ್ಕಿಗೆ ಹೋಗಿ ಆ ನೆಲ್ಲಿಯ ಕಾಯಿಗಳನ್ನು ಆರಿಸಿ ತಂದು ಮೂರನೆಯ ಸಾರಿ ಎಸೆಯಬೇಕೆಂದಿರುವಷ್ಟರಲ್ಲಿ ಶಂಕರನು ತಾನೇ ನೆಲ್ಲಿಯಕಾಯಿಯಾಗಿರುವುದನ್ನು ಅವರು ಕಂಡರು.

**ತೇನ ಪೂಜಿತಮಾತ್ರೇಣ ಪ್ರಾಪ್ಯತೇ ಪರಮಂ ಪದಂ ॥ ೬ ॥**

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ
ಪಂಚಮೇ ಆವಂತ್ಯಖಂಡೇ ತೃತೀಯೇ ರೇವಾಖಂಡೇ
"ಆಮಲೇಶ್ವರತೀರ್ಥಮಾಹಾತ್ಮ್ಯವರ್ಣನಂ" ನಾಮ
ತ್ರಯೋದಶೋತ್ತರದ್ವಿಶತತಮೋಽಧ್ಯಾಯಃ

---

ದೇವದೇವನಾದ ಆ ಧೀಮಂತ ಮಹೇಶ್ವರನ ಈ ಲೀಲೆಯಿಂದ ಆ ಆಮಲೇಶ ಕ್ಷೇತ್ರವು ಆವಿರ್ಭವಿಸಿತು. ಈ ಆಮಲೇಶ್ವರಕ್ಷೇತ್ರವು ಕ್ಷೇತ್ರಗಳಲ್ಲಿ ಉತ್ತಮ ಸ್ಥಾನವನ್ನು ಪಡೆಯಿತು. ಇಲ್ಲಿ ಆಮಲೇಶ್ವರನನ್ನು ಪೂಜಿಸುವುದರಿಂದ ಪರಮ ಪದವಿಯು ಲಭಿಸುತ್ತದೆ.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ
ಶ್ರೀ ಸ್ಕಾಂದಮಹಾಪುರಾಣದ ಐದನೆಯ ಆವಂತ್ಯಖಂಡದ ಮೂರನೆಯ ರೇವಾಖಂಡದಲ್ಲಿ
"ಆಮಲೇಶ್ವರತೀರ್ಥಮಾಹಾತ್ಮ್ಯವರ್ಣನ"ವೆಂಬ
ಇನ್ನೂರಹದಿಮೂರನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

## ಅಥ ಚತುರ್ದಶೋತ್ತರದ್ವಿಶತತಮೋಽಧ್ಯಾಯಃ

### ಶ್ರೀಕಪಾಲತೀರ್ಥಮಾಹಾತ್ಮ್ಯವರ್ಣನಂ

ಶ್ರೀ ಮಾರ್ಕಂಡೇಯ ಉವಾಚ:—

ಚತುರ್ಥಂ ಸಂಪ್ರವಕ್ಷ್ಯಾಮಿ ದೇವಸ್ಯ ಚರಿತಂ ಮಹತ್ ।
ಶ್ರುತಮಾತ್ರೇಣ ಯೇನೈವ ಸರ್ವಪಾಪೈಃ ಪ್ರಮುಚ್ಯತೇ ॥ ೧ ॥
ಕಪಾಲೀ ಕಾಂಥಿಕೋ ಭೂತ್ವಾ ಯಥಾ ಸ ವ್ಯಚರನ್ಮಹೀಂ ।
ಪಿಶಾಚೈ ರಾಕ್ಷಸೈರ್ಭೂತೈರ್ಡಾಕಿನೀಯೋಗಿನೀವೃತಃ ॥ ೨ ॥
ಭೈರವಂ ರೂಪಮಾಸ್ಥಾಯ ಪ್ರೇತಾಸನಪರಿಗ್ರಹಃ ।
ತ್ರೈಲೋಕ್ಯಸ್ಯಾಭಯಂ ದತ್ವಾ ಚಚಾರ ವಿಪುಲಂ ತಪಃ ॥ ೩ ॥
ಆಷಾಢೀ ತು ಕೃತಾ ತತ್ರ ಹ್ಯಾಷಾಢೀನಾಮ ವಿಶ್ರುತಂ ।
ಕಂಥಾ ಮುಕ್ತಾ ತತೋಽನ್ಯತ್ರ ದೇವೇನ ಪರಮೇಷ್ಠಿನಾ ॥ ೪ ॥
ತದಾ ಪ್ರಭೃತಿ ರಾಜೇಂದ್ರ ಸ ಕಂಥೇಶ್ವರ ಉಚ್ಯತೇ ।
ತಸ್ಯ ದರ್ಶನಮಾತ್ರೇಣ ಹ್ಯಶ್ವಮೇಧಫಲಂ ಲಭೇತ್ ॥ ೫ ॥
ದೇವೋ ಮಾರ್ಗೇ ಪುನಸ್ತತ್ರ ಭ್ರಮತೇ ಚ ಯದೃಚ್ಛಯಾ ।
ವಿಕ್ರೀಣಾತಿ ಬಲಾಕಾರೋ ದೃಷ್ಟ್ವಾ ಚೋಕ್ತೋ ಹರೇಣ ತು ॥ ೬ ॥

---

### ಕನ್ನಡದ ಅನುವಾದ

### ಶ್ರೀಕಪಾಲತೀರ್ಥಮಾಹಾತ್ಮ್ಯವರ್ಣನ

೧. ಶ್ರೀ ಮಾರ್ಕಂಡೇಯನು ಹೇಳುತ್ತಾನೆ:—ಯುಧಿಷ್ಠಿರ! ಈಗ ಶಂಕರನ ನಾಲ್ಕನೆಯ ಮಹಾಚರಿತ್ರೆಯನ್ನು ಹೇಳುವೆನು. ಇದನ್ನು ಕೇಳುವುದರಿಂದಲೇ ಮಾನವನು ಸಕಲ ಪಾಪಗಳಿಂದಲೂ ಮುಕ್ತನಾಗುವನು.

೨. ಶಂಕರನು ಚಿಂದಿಬಟ್ಟೆಯನ್ನು ಧರಿಸಿ ಪಿಶಾಚ, ರಾಕ್ಷಸ, ಭೂತ, ಡಾಕಿನೀ ಗಣಸಹಿತನಾಗಿ ಭೂಮಿಯಲ್ಲಿ ಸಂಚರಿಸಿದನು.

೩. ಅವನು ಭಯಂಕರ ರೂಪವನ್ನು ತಾಳಿ ಪ್ರೇತದಮೇಲೆ ಕುಳಿತು ಮೂರು ಲೋಕಗಳಿಗೂ ಅಭಯವನ್ನಿತ್ತು ಮಹಾ ತಪವನ್ನಾಚರಿಸಿದನು.

೪–೫. ಅವನು ದಂಡವನ್ನು ಧರಿಸಿದ್ದರಿಂದ ಆಷಾಢಿಯೆಂಬ ನಾಮದಿಂದ ಪ್ರಸಿದ್ಧನಾದನು. ಇನ್ನೊಂದೆಡೆಯಲ್ಲಿ ಕಂಥೆಯನ್ನು ತ್ಯಜಿಸಿದ್ದರಿಂದ ಕಂಥೇಶ್ವರನೆನ್ನಿಸಿಕೊಳ್ಳುವನು. ಅವನನ್ನು ನೋಡುವುದರಿಂದಲೇ ಅಶ್ವಮೇಧಯಾಗದ ಫಲವು ದೊರೆಯುವುದು.

೬. ಆ ಶಂಕರನು ದಾರಿಯಲ್ಲಿ ಸ್ವೇಚ್ಛೆಯಾಗಿ ಸಂಚರಿಸುತ್ತ ಚಿಟ್ಟೆಹರಳ ಬೀಜವನ್ನು ಮಾರುತ್ತಿರುವ ವರ್ತಕನನ್ನು ಕುರಿತು ಹೀಗೆಂದನು.

ಯದಿ ಭದ್ರ ನಚೇತ್ಕೋಪಂ ಕರೋಷಿ ಮಯಿ ಸಾಂಪ್ರತಂ ।
ಬಲಾಭಿರ್ಭರ ಮೇ ಲಿಂಗಂ ದದಾಮಿ ಬಹು ತೇ ಧನಂ ॥ ೭ ॥
ಏವಮುಕ್ತೋಽಥ ದೇವೇನ ಸವಣಿಗ್ಲೋಭಮೋಹಿತಃ ।
ಯೋಜಯಾಮಾಸ ಬಲಕಾ ಲಂಗೇ ಚೋತ್ತಮಮಧ್ಯಮಾನ್ ॥ ೮ ॥
ತಾವದ್ಯಾವತ್ಕ್ಷಯಂ ಸರ್ವೇ ಗತಾಃ ಕಾಲೇ ಸುಸಂಚಿತಾಃ ।
ಸ್ಥಿತಂ ಸಮುನ್ನತಂ ಲಿಂಗಂ ದೃಷ್ಟ್ವಾ ಶೋಕಮುಪಾಗತಂ ॥ ೯ ॥
ಕೃತ್ವಾ ತು ಖಂಡಖಂಡಾನಿ ಸ ದೇವಃ ಪರಮೇಶ್ವರಃ ।
ಉವಾಚ ಪ್ರಹಸನ್ ವಾಕ್ಯಂ ತಂ ದೃಷ್ಟ್ವಾ ಗತ ಸಾಧ್ವಸಂ ॥ ೧೦ ॥
ನ ಚ ಮೇ ಪೂರಿತಂ ಲಿಂಗಂ ಯಾಸ್ಯಾಮಿ ಯದಿ ಮನ್ಯಸೇ ।
ದದಾಮಿ ತತ್ರ ವಿತ್ತಂ ತೇ ಯದಿ ಲಿಂಗಂ ಪ್ರಪೂರಿತಂ ॥ ೧೧ ॥

ವಣಿಗುವಾಚ :—

ಅಧನ್ಯೋ ಕೃತಪುಣ್ಯೋಽಹಂ ನಿಗ್ರಾಹ್ಯಃ ಪರಮೇಶ್ವರ ।
ತವ ಪ್ರಿಯಮಕುರ್ವಾಣಃ ಶೋಚಿಷ್ಯೇ ಶಾಶ್ವತೀಃ ಸಮಾಃ ॥ ೧೨ ॥
ಏತಚ್ಛ್ರುತ್ವಾ ವಚಸ್ತಸ್ಯ ವಣಿಕ್ಪುತ್ರಸ್ಯ ಭಾರತ ।
ಅಸಂಕ್ಷಯಂ ಧನಂ ದತ್ವಾ ಸ್ಥಿತಸ್ತತ್ರ ಮಹೇಶ್ವರಃ ॥ ೧೩ ॥

---

೭. "ಮಂಗಳಕರನೆ! ನೀನು ಈಗ ನನ್ನಲ್ಲಿ ಕೋಪಿಸಕೊಳ್ಳದಿದ್ದರೆ ಈ ಬೀಜಗಳಿಂದ ನನ್ನ ಲಿಂಗವನ್ನು ಪೂರ್ತಿಮಾಡು. ನಿನಗೆ ಬಹಳ ಹಣವನ್ನು ಕೊಡುವೆನು."

೮. ಶಂಕರನು ಹೀಗೆ ಹೇಳಲು, ವರ್ತಕನು ಲೋಭದಿಂದ ಉತ್ತಮ ಮಧ್ಯಮವಾದ ಬೀಜಗಳನ್ನು ಆ ಲಿಂಗಪೂರಣದಲ್ಲಿ ನೇಮಿಸಿದನು.

೯–೧೦. ಅಷ್ಟರಲ್ಲಿ ಬಹುಕಾಲದಿಂದ ಸಂಗ್ರಹಿಸಲ್ಪಟ್ಟ ಅವೆಲ್ಲವೂ ನಾಶವಾದುವು. ವೈಶ್ಯನು ಉನ್ನತವಾಗಿ ನಿಂತಿರುವ ಲಿಂಗವನ್ನು ಕಂಡು ದುಃಖಗೊಂಡನು. ಆ ಶಂಕರನು ಆ ಲಿಂಗವನ್ನು ತುಂಡು ತುಂಡಾಗಿ ಮಾಡಿ ನಗುತ್ತ ಭಯವಿಲ್ಲದ ಆ ವರ್ತಕನನ್ನು ಕಂಡು ಇಂತೆಂದನು.

೧೧. "ನೀನು ನನ್ನ ಲಿಂಗವನ್ನು ಪೂರಣಮಾಡದೆ ಇರುವುದರಿಂದ ನೀನು ಒಪ್ಪಿದರೆ ಹೊರಟುಹೋಗುವೆನು. ನೀನು ಲಿಂಗವನ್ನು ಪೂರಣಮಾಡಿದ್ದರೆ ದ್ರವ್ಯವನ್ನು ಕೊಡುತ್ತಿದ್ದೆನು."

೧೨. ವರ್ತಕನು ಹೇಳುತ್ತಾನೆ:—ಪರಮೇಶ್ವರ! ಅಧನ್ಯನೂ, ಪುಣ್ಯ ಮಾಡದವನೂ ಆದ ನನ್ನನ್ನು ನಿಗ್ರಹಿಸು. ನಿನಗೆ ಪ್ರಿಯವನ್ನು ಮಾಡದ ನಾನು ಶಾಶ್ವತ ಸಂವತ್ಸರಗಳ ಕಾಲ ದುಃಖಿಸುವೆನು.

೧೩. ಮಹೇಶ್ವರನು ವಣಿಕ್ಪುತ್ರನ ಆ ಮಾತನ್ನು ಕೇಳಿ ಅವನಿಗೆ ನಾಶವಿಲ್ಲದ ಧನವನ್ನಿತ್ತು ಅಲ್ಲಿಯೇ ನೆಲೆಸಿದನು.

ತದಾ ಪ್ರಭೃತಿ ರಾಜೇಂದ್ರ ಬಲಾಕೈರಿವ ಭೂಷಿತಂ ।
ಪ್ರತ್ಯಯಾರ್ಥಂ ಸ್ಥಿತಂ ಲಿಂಗಂ ಲೋಕಾನುಗ್ರಹಕಾಮ್ಯಯಾ ॥ ೧೪ ॥
ದೇವೇನ ರಚಿತಂ ಪಾರ್ಥ ಕ್ರೀಡಯಾ ಸುಪ್ರತಿಷ್ಠಿತಂ ।
ದೇವಮಾರ್ಗಮಿತಿ ಖ್ಯಾತಂ ತ್ರಿಷು ಲೋಕೇಷು ವಿಶ್ರುತಂ ।
ಪಶ್ಯನ್ಪೂಜಯನ್ಸ್ವಾಽಪಿ ಸರ್ವಪಾಪೈಃ ಪ್ರಮುಚ್ಯತೇ ॥ ೧೫ ॥
ದೇವಮಾರ್ಗೇ ತು ಯೋ ಗತ್ವಾ ಪೂಜಯೇದ್ಬಲಾಕೇಶ್ವರಂ ।
ಪಂಚಾಯತನಮಾಸಾದ್ಯ ರುದ್ರಲೋಕಂ ಸ ಗಚ್ಛತಿ ॥ ೧೬ ॥
ದೇವಮಾರ್ಗೇ ಮೃತಾನಾಂ ತು ನರಾಣಾಂ ಭಾವಿತಾತ್ಮನಾಂ ।
ನ ಭವೇತ್ಪುನರಾವೃತ್ತೀ ರುದ್ರಲೋಕಾತ್ಕದಾಚನ ॥ ೧೭ ॥
ದೇವಮಾರ್ಗಸ್ಯ ಮಾಹಾತ್ಮ್ಯಂ ಭಕ್ತ್ಯಾ ಶ್ರುತ್ವಾ ನರೋತ್ತಮ ।
ಮುಚ್ಯತೇ ಸರ್ವಪಾಪೇಭ್ಯೋ ನಾತ್ರಕಾರ್ಯಾ ವಿಚಾರಣಾ ॥ ೧೮ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ
ಪಂಚಮೇ ಆವಂತ್ಯಖಂಡೇ ತೃತೀಯೇ ರೇವಾಖಂಡೇ
"ಶ್ರೀ ಕಪಾಲತೀರ್ಥಮಾಹಾತ್ಮ್ಯವರ್ಣನಂ" ನಾಮ
ಚತುರ್ದಶೋತ್ತರದ್ವಿಶತತಮೋಽಧ್ಯಾಯಃ

---

೧೪. ಮಹಾರಾಜ! ಶಂಕರನು ಅದು ಮೊದಲ್ಗೊಂಡು ಜನರಿಗೆ ಅನುಗ್ರಹ ಮಾಡಲು ನಂಬಿಕೆಗಾಗಿ ಬಲಾಕಗಳಿಂದ ಅಲಂಕಾರ ಮಾಡಲ್ಪಟ್ಟಂತೆಯೇ ಇದ್ದನು.

೧೫. ಮಹೇಶ್ವರನು ಕ್ರೀಡಾರ್ಥವಾಗಿ ನಿರ್ಮಿಸಿ ಪ್ರತಿಷ್ಠೆಮಾಡಿದ ಆ ಲಿಂಗವು ಮೂರು ಲೋಕಗಳಲ್ಲಿ ದೇವಮಾರ್ಗವೆಂದು ಪ್ರಸಿದ್ಧವಾಯಿತು. ಅದನ್ನು ದರ್ಶನಮಾಡಿ ಪೂಜಿಸಿದವನು ಸಕಲಪಾಪಗಳಿಂದಲೂ ಮುಕ್ತನಾಗುವನು.

೧೬. ದೇವಮಾರ್ಗಕ್ಕೆ ಹೋಗಿ ಪಂಚಾಯತನ ರೂಪದಿಂದಿರುವ ಬಲಾಕೇಶ್ವರನನ್ನು ಪೂಜಿಸಿದವನು ರುದ್ರಲೋಕಕ್ಕೆ ತೆರಳುವನು.

೧೭. ದೇವಮಾರ್ಗದಲ್ಲಿ ಮೃತರಾದ ಭಕ್ತಿಯುಳ್ಳ ಮಾನವರಿಗೆ ರುದ್ರಲೋಕದಲ್ಲಿ ಪುನರಾವೃತ್ತಿಯಿಲ್ಲದ ಗತಿಯುಂಟಾಗುವುದು.

೧೮. ದೇವಮಾರ್ಗದ ಮಾಹಾತ್ಮ್ಯವನ್ನು ಭಕ್ತಿಯಿಂದ ಕೇಳಿದ ಮಾನವನು ಸಮಸ್ತಪಾಪಮುಕ್ತನಾಗುವನು. ಈ ವಿಷಯದಲ್ಲಿ ವಿಚಾರಮಾಡಕೂಡದು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ
ಶ್ರೀ ಸ್ಕಾಂದಮಹಾಪುರಾಣದ ಐದನೆಯ ಆವಂತ್ಯಖಂಡದ ಮೂರನೆಯ ರೇವಾಖಂಡದಲ್ಲಿ
"ಶ್ರೀಕಪಾಲತೀರ್ಥಮಾಹಾತ್ಮ್ಯವರ್ಣನ"ವೆಂಬ
ಇನ್ನೂರಹದಿನಾಲ್ಕನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

## ಅಥ ಪಂಚದಶೋತ್ತರದ್ವಿಶತತಮೋಽಧ್ಯಾಯಃ

### ಶೃಂಗಿತೀರ್ಥಮಾಹಾತ್ಮ್ಯವರ್ಣನಂ

ಶ್ರೀ ಮಾರ್ಕಂಡೇಯ ಉವಾಚ :—

ಶೃಂಗಿತೀರ್ಥಂ ತತೋ ಗಚ್ಛೇನ್ಮೋಕ್ಷದಂ ಸರ್ವದೇಹಿನಾಂ ।
ಮೃತಾನಾಂ ತತ್ರ ರಾಜೇಂದ್ರ ಮೋಕ್ಷಪ್ರಾಪ್ತಿರ್ನ ಸಂಶಯಃ ॥ ೧ ॥
ತತ್ರೈವ ಪಿಂಡದಾನೇನ ಪಿತೄಣಾಮನೃಣೋ ಭವೇತ್ ।
ತೇನ ಪುಣ್ಯೇನ ಪೂತಾತ್ಮಾ ಲಭೇದ್ಗಾಣೇಶ್ವರೀಂ ಗತಿಂ ॥ ೨ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ
ಪಂಚಮೇ ಆವಂತ್ಯಖಂಡೇ ತೃತೀಯೇ ರೇವಾಖಂಡೇ
"ಶೃಂಗಿತೀರ್ಥಮಾಹಾತ್ಮ್ಯವರ್ಣನಂ" ನಾಮ
ಪಂಚದಶೋತ್ತರದ್ವಿಶತತಮೋಽಧ್ಯಾಯಃ

---

## ಕನ್ನಡದ ಅನುವಾದ

### ಶೃಂಗಿತೀರ್ಥಮಾಹಾತ್ಮ್ಯವರ್ಣನ

೧. ಶ್ರೀ ಮಾರ್ಕಂಡೇಯನು ಹೇಳುತ್ತಾನೆ :—ಅನಂತರ ಸಕಲಪ್ರಾಣಿಗಳಿಗೆ ಮೋಕ್ಷವನ್ನು ಕೊಡುವ ಶೃಂಗಿತೀರ್ಥಕ್ಕೆ ಹೋಗಬೇಕು. ಅಲ್ಲಿ ಮೃತರಾದವರಿಗೆ ನಿಶ್ಚಯವಾಗಿಯೂ ಮೋಕ್ಷವು ಲಭಿಸುವುದು.

೨. ಅಲ್ಲಿ ಪಿಂಡಪ್ರದಾನಮಾಡುವುದರಿಂದ ಪಿತೃಋಣವು ಪರಿಹಾರವಾಗುವುದು. ಆ ಪುಣ್ಯದಿಂದ ಮಾನವನು ಗಾಣೇಶ್ವರೀಗತಿಯನ್ನು ಪಡೆಯುವನು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ
ಶ್ರೀ ಸ್ಕಾಂದಮಹಾಪುರಾಣದ ಐದನೆಯ ಆವಂತ್ಯಖಂಡದ ಮೂರನೆಯ ರೇವಾಖಂಡದಲ್ಲಿ
"ಶೃಂಗಿತೀರ್ಥಮಾಹಾತ್ಮ್ಯವರ್ಣನ" ವೆಂಬ
ಇನ್ನೂರಹದಿನೈದನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

## ಅಥ ಷೋಡಶೋತ್ತರದ್ವಿಶತತಮೋಽಧ್ಯಾಯಃ

### ಆಷಾಢೀತೀರ್ಥಮಾಹಾತ್ಮ್ಯವರ್ಣನಂ

ಶ್ರೀ ಮಾರ್ಕಂಡೇಯ ಉವಾಚ :—

ಆಷಾಢೀತೀರ್ಥಮಾಗಚ್ಛೇತ್ತತೋ ಭೂಪಾಲನಂದನ ।
ಕಾಮಿಕಂ ರೂಪಮಾಸ್ಥಾಯ ಸ್ಥಿತೋ ಯತ್ರ ಮಹೇಶ್ವರಃ ॥ ೧ ॥
ಚಾತುರ್ಯುಗಮಿದಂ ತೀರ್ಥಂ ಸರ್ವತೀರ್ಥೇಷ್ವನುತ್ತಮಂ ।
ತತ್ರ ಸ್ನಾತ್ವಾ ನರೋ ರಾಜನ್ರುದ್ರಸ್ಯಾನುಚರೋ ಭವೇತ್ ॥ ೨ ॥
ತತ್ರ ತೀರ್ಥೇ ತು ಯಃ ಕಶ್ಚಿತ್ಕುರುತೇ ಪ್ರಾಣಮೋಕ್ಷಣಂ ।
ಅನಿವರ್ತಿಕಾ ಗತಿಸ್ತಸ್ಯ ರುದ್ರಲೋಕಾದಸಂಶಯಃ ॥ ೩ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ
ಪಂಚಮೇ ಅವಂತ್ಯಖಂಡೇ ತೃತೀಯೇ ರೇವಾಖಂಡೇ
" ಆಷಾಢೀತೀರ್ಥಮಾಹಾತ್ಮ್ಯವರ್ಣನಂ "ನಾಮ
ಷೋಡಶೋತ್ತರದ್ವಿಶತತಮೋಽಧ್ಯಾಯಃ

---

## ಕನ್ನಡದ ಅನುವಾದ

### ಆಷಾಢೀತೀರ್ಥಮಾಹಾತ್ಮ್ಯವರ್ಣನ

೧. ಶ್ರೀ ಮಾರ್ಕಂಡೇಯನು ಹೇಳುತ್ತಾನೆ:—ಮಹಾರಾಜ! ಅನಂತರ ಆಷಾಢೀತೀರ್ಥಕ್ಕೆ ಹೋಗಬೇಕು. ಅಲ್ಲಿ ಶಂಕರನು ಸ್ವೇಚ್ಛಾರೂಪವನ್ನು ತಾಳಿ ನೆಲೆಸಿರುವನು.

೨. ಈ ತೀರ್ಥವು ನಾಲ್ಕು ಯುಗಗಳಲ್ಲಿರುವುದೂ, ಎಲ್ಲ ತೀರ್ಥಗಳಲ್ಲಿ ಉತ್ತಮವೂ ಆಗಿರುವುದು. ಅಲ್ಲಿ ಮಿಂದ ಮಾನವನು ಶಿವನ ಸೇವಕನಾಗುವನು.

೩. ಆ ತೀರ್ಥದಲ್ಲಿ ಮಡಿದ ಮಾನವನಿಗೆ ರುದ್ರಲೋಕದಲ್ಲಿ ಪುನರಾವೃತ್ತಿಯಿಲ್ಲದ ಗತಿಯುಂಟಾಗುವುದು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ
ಶ್ರೀ ಸ್ಕಾಂದಮಹಾಪುರಾಣದ ಐದನೆಯ ಅವಂತ್ಯಖಂಡದ ಮೂರನೆಯ ರೇವಾಖಂಡದಲ್ಲಿ
" ಆಷಾಢೀತೀರ್ಥಮಾಹಾತ್ಮ್ಯವರ್ಣನ " ವೆಂಬ
ಇನ್ನೂರಹದಿನಾರನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

## ಅಥ ಸಪ್ತದಶೋತ್ತರದ್ವಿಶತತಮೋಽಧ್ಯಾಯಃ

### ಏರಂಡೀತೀರ್ಥಮಾಹಾತ್ಮ್ಯವರ್ಣನಂ

ಶ್ರೀಮಾರ್ಕಂಡೇಯ ಉವಾಚ:—

ಏರಂಡೀಸಂಗಮಂ ಗಚ್ಛೇತ್ಸುರಾಸುರನಮಸ್ಕೃತಂ ।
ತತ್ತು ತೀರ್ಥಂ ಮಹಾಪುಣ್ಯಂ ಮಹಾಪಾತಕನಾಶನಂ ॥ ೧ ॥
ಉಪವಾಸಪರೋ ಭೂತ್ವಾ ನಿಯತೇಂದ್ರಿಯಮಾನಸಃ ।
ತತ್ರ ಸ್ನಾತ್ವಾ ವಿಧಾನೇನ ಮುಚ್ಯತೇ ಬ್ರಹ್ಮಹತ್ಯಯಾ ॥ ೨ ॥
ತತ್ರ ತೀರ್ಥೇ ತು ಯೋ ಭಕ್ತ್ಯಾ ಪ್ರಾಣತ್ಯಾಗಪರೋ ಭವೇತ್ ।
ಅನಿವರ್ತಿಕಾ ಗತಿಸ್ತಸ್ಯ ರುದ್ರಲೋಕಾದಸಂಶಯಂ ॥ ೩ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ
ಪಂಚಮೇ ಆವಂತ್ಯಖಂಡೇ ತೃತೀಯೇ ರೇವಾಖಂಡೇ
"ಏರಂಡೀತೀರ್ಥಮಾಹಾತ್ಮ್ಯವರ್ಣನಂ" ನಾಮ
ಸಪ್ತದಶೋತ್ತರದ್ವಿಶತತಮೋಽಧ್ಯಾಯಃ

---

### ಕನ್ನಡದ ಅನುವಾದ

#### ಏರಂಡೀತೀರ್ಥಮಾಹಾತ್ಮ್ಯವರ್ಣನ

೧. ಶ್ರೀ ಮಾರ್ಕಂಡೇಯನು ಹೇಳುತ್ತಾನೆ:—ದೇವದಾನವರಿಂದ ವಂದಿತವಾದ ಏರಂಡೀಸಂಗಮಕ್ಕೆ ಹೋಗಬೇಕು. ಆ ತೀರ್ಥವು ಅತಿ ಪುಣ್ಯಕರವೂ, ಮಹಾಪಾಪಗಳನ್ನು ನಾಶಗೊಳಿಸುವುದೂ ಆಗಿರುವುದು.

೨. ಅಲ್ಲಿ ಉಪವಾಸಮಾಡಿ ಜಿತೇಂದ್ರಿಯನಾಗಿ ವಿಧಿಯಿಂದ ಮಿಂದವನು ಬ್ರಹ್ಮಹತ್ಯೆಯಿಂದ ಮುಕ್ತನಾಗುವನು.

೩. ಆ ತೀರ್ಥದಲ್ಲಿ ಭಕ್ತಿಯಿಂದ ಮಡಿದವನಿಗೆ ರುದ್ರಲೋಕದಲ್ಲಿ ಪುನರಾವೃತ್ತಿಯಿಲ್ಲದ ಗತಿಯುಂಟಾಗುವುದು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ
ಶ್ರೀ ಸ್ಕಾಂದಮಹಾಪುರಾಣದ ಐದನೆಯ ಆವಂತ್ಯಖಂಡದ ಮೂರನೆಯ ರೇವಾಖಂಡದಲ್ಲಿ
"ಏರಂಡೀತೀರ್ಥಮಾಹಾತ್ಮ್ಯವರ್ಣನ" ವೆಂಬ
ಇನ್ನೂರಹದಿನೇಳನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

# ಅಥಾಷ್ಟಾದಶಾಽಧಿಕದ್ವಿಶತತಮೋಽಧ್ಯಾಯಃ

### ಜಾಮದಗ್ನ್ಯತೀರ್ಥಮಾಹಾತ್ಮ್ಯವರ್ಣನಂ

ಶ್ರೀ ಮಾರ್ಕಂಡೇಯ ಉವಾಚ:—

ತತೋ ಗಚ್ಛೇದ್ಧರಾಧೀಶ ತೀರ್ಥಂ ಪರಮಶೋಭನಂ ।
ಜಮದಗ್ನಿರಿತಿ ಖ್ಯಾತಂ ಯತ್ರ ಸಿದ್ಧೋ ಜನಾರ್ದನಃ ॥ ೧ ॥

ಯುಧಿಷ್ಠಿರ ಉವಾಚ:—

ಕಥಂ ಸಿದ್ಧೋ ದ್ವಿಜಶ್ರೇಷ್ಠ ವಾಸುದೇವೋ ಜಗದ್ಗುರುಃ ।
ಮಾನುಷಂ ರೂಪಮಾಸ್ಥಾಯ ಲೋಕಾನಾಂ ಹಿತಕಾಮ್ಯಯಾ ॥ ೨ ॥
ಏತತ್ಸರ್ವಂ ಯಥಾನ್ಯಾಯಂ ದೇವದೇವಸ್ಯ ಚಕ್ರಿಣಃ ।
ಚರಿತಂ ಶ್ರೋತುಮಿಚ್ಛಾಮಿ ಕಥ್ಯಮಾನಂ ತ್ವಯಾಽನಘ ॥ ೩ ॥

ಶ್ರೀ ಮಾರ್ಕಂಡೇಯ ಉವಾಚ:—

ಆಸೀತ್ಪೂರ್ವಂ ಮಹಾರಾಜ ಹೈಹಯಾಧಿಪತಿರ್ನೃಪಾನ್ ।
ಕಾರ್ತವೀರ್ಯ ಇತಿ ಖ್ಯಾತೋ ರಾಜಾ ಬಾಹುಸಹಸ್ರವಾನ್ ॥ ೪ ॥
ಹಸ್ತ್ಯಶ್ವರಥಸಂಪನ್ನಃ ಸರ್ವಶಸ್ತ್ರಭೃತಾಂ ವರಃ ।
ವೇದವಿದ್ಯಾವ್ರತಸ್ನಾತಃ ಸರ್ವಭೂತಾಽಭಯಪ್ರದಃ ॥ ೫ ॥

---

## ಕನ್ನಡದ ಅನುವಾದ

### ಜಾಮದಗ್ನ್ಯತೀರ್ಥಮಾಹಾತ್ಮ್ಯವರ್ಣನ

೧. ಶ್ರೀ ಮಾರ್ಕಂಡೇಯನು ಹೇಳುತ್ತಾನೆ:—ಮಹಾರಾಜ! ಅನಂತರ ಜನಾರ್ದನನು ಸಿದ್ಧಿಯನ್ನು ಪಡೆದಿರುವ ಅತಿಮಂಗಳಕರವಾದ ಜಮದಗ್ನಿ ತೀರ್ಥಕ್ಕೆ ಹೋಗಬೇಕು.

೨. ಯುಧಿಷ್ಠಿರನು ಹೇಳುತ್ತಾನೆ:—ಜಗದ್ಗುರುವಾದ ವಾಸುದೇವನು ಲೋಕಗಳಿಗೆ ಹಿತವನ್ನುಂಟುಮಾಡಲು ಮನುಷ್ಯರೂಪವನ್ನು ಹೊಂದಿ ಹೇಗೆ ಸಿದ್ಧಿಯನ್ನು ಪಡೆದನು ?

೩. ದೇವದೇವನಾದ ವಿಷ್ಣುವಿನ ಈ ಚರಿತ್ರೆಯನ್ನು ನಿನ್ನಿಂದ ಕೇಳ ಬಯಸುವೆನು.

೪-೬. ಶ್ರೀ ಮಾರ್ಕಂಡೇಯನು ಹೇಳುತ್ತಾನೆ:—ಹಿಂದೆ ಹೈಹಯದೇಶದ ಅರಸನೂ, ಸಾವಿರ ತೋಳುಗಳುಳ್ಳವನೂ, ಆನೆ ಕುದುರೆ ರಥಗಳಿಂದ ಕೂಡಿರುವವನೂ, ಸಕಲ ಧನುರ್ಧರರಲ್ಲಿ ಉತ್ತಮನೂ, ವೇದವಿದ್ಯಾವ್ರತಸಂಪನ್ನನೂ,

ಮಾಹಿಷ್ಮತ್ಯಾಃ ಪತಿಃ ಶ್ರೀಮಾನ್ರಾಜಾ ಹ್ಯಕ್ಷೌಹಿಣೀಪತಿಃ ।
ಸ ಕದಾಚಿನ್ಮೃಗಾನ್ಹಂತುಂ ನಿರ್ಜಗಾಮ ಮಹಾಬಲಃ ॥ ೬ ॥
ಬಹುಭಿರ್ದಿವಸೈಃ ಪ್ರಾಪ್ತೋ ಭೃಗುಕಚ್ಛಮನುತ್ತಮಂ ।
ಜಮದಗ್ನಿರ್ಮಹಾತೇಜಾ ಯತ್ರ ತಿಷ್ಠತಿ ತಾಪಸಃ ॥ ೭ ॥
ರೇಣುಕಾಸಹಿತಃ ಶ್ರೀಮಾನ್ ಸರ್ವಭೂತಾಽಭಯಪ್ರದಃ ।
ತಸ್ಯ ಪುತ್ರೋಽಭವದ್ರಾಮಃ ಸಾಕ್ಷಾನ್ನಾರಾಯಣಃ ಪ್ರಭುಃ ॥ ೮ ॥
ಸರ್ವಕ್ಷತ್ರಗುಣೈರ್ಯುಕ್ತೋ ಬ್ರಹ್ಮವಿದ್ಬ್ರಾಹ್ಮಣೋತ್ತಮಃ ।
ತೋಷಯನ್ಪರಯಾ ಭಕ್ತ್ಯಾ ಪಿತರೌ ಪರಮಾರ್ಥವತ್ ॥ ೯ ॥
ತಂ ತದಾ ಚಾರ್ಜುನಂ ದೃಷ್ಟ್ವಾ ಜಮದಗ್ನಿಃ ಪ್ರತಾಪವಾನ್ ।
ಚರಂತಂ ಮೃಗಯಾಂ ಗತ್ವಾ ಹ್ಯಾತಿಥ್ಯೇನ ನ್ಯಮಂತ್ರಯತ್ ॥ ೧೦ ॥
ತಥೇತಿ ಚೋಕ್ತ್ವಾ ಸ ನೃಪಃ ಸಭೃತ್ಯಬಲವಾಹನಃ ।
ಜಗಾಮ ಚಾಶ್ರಮಂ ಪುಣ್ಯಮೃಷೇಸ್ತಸ್ಯ ಮಹಾತ್ಮನಃ ॥ ೧೧ ॥
ತತ್ಕ್ಷಣಾದೇವ ಸಂಪನ್ನಂ ಶ್ರಿಯಾ ಪರಮಯಾ ವೃತಂ ।
ವಿಸ್ಮಯಂ ಪರಮಂ ತತ್ರ ದೃಷ್ಟ್ವಾ ರಾಜಾ ಜಗಾಮ ಹ ॥ ೧೨ ॥

---

ಸಕಲಪ್ರಜೆಗಳಿಗೆ ಅಭಯದಾತೃವೂ, ಅಕ್ಷೌಹಿಣಿಗೆ ಒಡೆಯನೂ ಆದ ಕಾರ್ತವೀರ್ಯನೆಂಬುವನಿದ್ದನು. ಅವನು ಒಂದಾನೊಂದು ದಿನ ಮೃಗಗಳ ಬೇಟೆಗಾಗಿ ಹೊರಗೆ ಹೊರಟನು.

೭–೯. ಅವನು ಅನೇಕ ದಿವಸಗಳ ಮೇಲೆ ಉತ್ತಮವಾದ ಭೃಗುಕಚ್ಛಕ್ಕೆ ಬಂದನು. ಅಲ್ಲಿ ರೇಣುಕಾಪತಿಯೂ, ಸಕಲಪ್ರಾಣಿಗಳಿಗೆ ಅಭಯವನ್ನು ಕೊಡುವವನೂ ಆದ ಜಮದಗ್ನಿಯೆಂಬ ತಾಪಸನೋರ್ವನಿದ್ದನು. ಅವನಿಗೆ ಸಾಕ್ಷಾನ್ನಾರಾಯಣನೂ, ಸಮಸ್ತ ಕ್ಷತ್ರಿಯಗುಣಗಳಿಂದ ಕೂಡಿದವನೂ, ಬ್ರಹ್ಮಜ್ಞಾನಿಯೂ, ಬ್ರಾಹ್ಮಣೋತ್ತಮನೂ ಆದ ರಾಮನೆಂಬ ಸುತನಿದ್ದನು. ಆ ರಾಮನು ತಂದೆ ತಾಯಿಗಳನ್ನು ಅತಿ ಭಕ್ತಿಯಿಂದ ಸಂತೋಷಗೊಳಿಸುತ್ತಿದ್ದನು.

೧೦. ಪ್ರತಾಪಶಾಲಿಯಾದ ಜಮದಗ್ನಿಯು ಬೇಟೆಯನ್ನಾಡುತ್ತಿರುವ ಕಾರ್ತವೀರ್ಯಾರ್ಜುನನನ್ನು ಕಂಡು ಅತಿಥಿಸತ್ಕಾರಕ್ಕಾಗಿ ನಿಮಂತ್ರಿಸಿದನು.

೧೧. ಆ ರಾಜನು ಹಾಗೆಯೇ ಆಗಲೆಂದು ಒಪ್ಪಿ ಭೃತ್ಯಬಲವಾಹನಗಳೊಡನೆ ಮಹಾತ್ಮನಾದ ಆ ಜಮದಗ್ನಿಮುನಿಯ ಆಶ್ರಮಕ್ಕೆ ಹೋದನು.

೧೨. ಅವನು ಆಶ್ರಮಕ್ಕೆ ಹೋದಕೂಡಲೆ ಆ ಆಶ್ರಮವು ಅತ್ಯಂತ ಸಂಪತ್ತಿನಿಂದ ಕೂಡಿದ್ದಿತು. ರಾಜನು ಅದನ್ನು ಕಂಡು ಅತ್ಯಂತ ಆಶ್ಚರ್ಯಗೊಂಡನು.

ಗತಮಾತ್ರಸ್ತು ಸಿದ್ಧೇನ ಪರಮಾನ್ನೇನ ಭೋಜಿತಃ ।
ಸಭೃತ್ಯಬಲವಾನ್ರಾಜಾ ಬ್ರಾಹ್ಮಣೇನ ಯದೃಚ್ಛಯಾ ।
ಕಿಮೇತದಿತಿ ಪಪ್ರಚ್ಛ ಕಾರಣಂ ಶಕ್ತಿಮೇವ ಚ ॥ ೧೩ ॥
ಕಾಮಧೇನೋಃ ಪ್ರಭಾವಂ ತಂ ಜ್ಞಾತ್ವಾ ಪ್ರಾಹ ತತೋ ದ್ವಿಜಂ ।
ದಕ್ಷಿಣಾಂ ದೇಹಿ ಮೇ ವಿಪ್ರ ಕಲ್ಮಾಷೀಂ ಧೇನುಮುತ್ತಮಾಂ ॥ ೧೪ ॥
ಶತಂ ಶತಸಹಸ್ರಾಣಾಮಯುತಂ ನಿಯುತಂ ಪರಂ ।
ಭೂಷಿತಾನಾಂ ಚ ಧೇನೂನಾಂ ದದಾಮಿ ತವ ಚಾರ್ಬುದಂ ॥ ೧೫ ॥

ಜಮದಗ್ನಿರುವಾಚ :—

ಅಯುತೈಃ ಪ್ರಯುತೈರ್ನಾಽಹಂ ಶತಕೋಟಿಭಿರುತ್ತಮಾಂ ।
ಕಾಮಧೇನುಮಿಮಾಂ ತಾತ ನ ದದ್ಮಿ ಪ್ರತಿಗಮ್ಯತಾಂ ॥ ೧೬ ॥
ಏವಮುಕ್ತಃ ಸ ರಾಜೇಂದ್ರಸ್ತೇನ ವಿಪ್ರೇಣ ಭಾರತ ।
ಕ್ರೋಧಸಂರಕ್ತನಯನ ಇದಂ ವಚನಮಬ್ರವೀತ್ ॥ ೧೭ ॥
ಯಸ್ಯೇದೃಶಃ ಕಾಮಚಾರೋ ಮಯ್ಯಪಿ ದ್ವಿಜಪಾಂಸನ ।
ಅಹಂ ತೇ ಪಶ್ಯತಸ್ತಸ್ಮಾನ್ನಯಾಮಿ ಸುರಭಿಂ ಗೃಹಾತ್ ॥ ೧೮ ॥

---

೧೩. ಆಶ್ರಮವನ್ನು ಸೇರಿದಕೂಡಲೆ ಋಷಿಯು ಭೃತ್ಯಬಲಗಳಿಂದ ಕೂಡಿದ ಆ ದೊರೆಗೆ ಪರಮಾನ್ನಭೋಜನವನ್ನು ಮಾಡಿಸಿದ ಬಳಿಕ ಆ ದೊರೆಯು, "ಇದು ಯಾವ ಶಕ್ತಿಯಿಂದಾಯಿತು?" ಎಂದು ಆ ಮುನಿಯನ್ನು ಕೇಳಿದನು.

೧೪. ಅವನು ಅದು ಕಾಮಧೇನುವಿನ ಪ್ರಭಾವದಿಂದಾಗಿದೆಯೆಂದರಿತು ಹೀಗೆಂದನು. "ಬ್ರಾಹ್ಮಣ! ಉತ್ತಮವಾದ ಈ ಕಾಮಧೇನುವನ್ನು ನನಗೆ ದಕ್ಷಿಣೆಯಾಗಿ ಕೊಡು.

೧೫. ನಿನಗೆ ನಾನು ನೂರು, ಸಾವಿರ, ಹತ್ತುಸಾವಿರ, ಲಕ್ಷ, ಅರ್ಬುದ ಸಂಖ್ಯೆಯ ಸಾಲಂಕೃತವಾದ ಗೋವುಗಳನ್ನು ಕೊಡುವೆನು."

೧೬. ಜಮದಗ್ನಿಯು ಹೇಳುತ್ತಾನೆ:—ಮಹಾರಾಜ! ನೀನು ಆಯುತ, ಪ್ರಯುತ, ಅಥವಾ ನೂರುಕೋಟಿ ಧೇನುಗಳನ್ನಿತ್ತರೂ ನಾನು ಈ ಕಾಮಧೇನುವನ್ನು ಕೊಡಲಾರೆ! ಹಿಂದಿರುಗು.

೧೭. ಜಮದಗ್ನಿಯು ಹೀಗೆನ್ನಲು, ರಾಜನು ಕೋಪದಿಂದ ಕೆಂಪೇರಿದ ಕಣ್ಣುಗಳುಳ್ಳವನಾಗಿ ಇಂತೆಂದನು.

೧೮. "ದ್ವಿಜಾಧಮಾ! ನೀನು ನನ್ನಲ್ಲಿಯೂ ಹೀಗೆ ಸ್ವೇಚ್ಛೆಯಾಗಿ ವರ್ತಿಸುವೆಯಾ? ನೀನು ನೋಡುತ್ತಿರುವಾಗಲೆ ನಿನ್ನ ಮನೆಯಿಂದ ಈ ಕಾಮಧೇನುವನ್ನು ಒಯ್ಯುವೆನು."

ದ್ವಿಜ ಉವಾಚ :—

ಕಃ ಕ್ರೀಡತಿ ಸರೋಷೇಣ ನಿರ್ಭಯೋ ಹಿ ಮಹಾಽಹಿನಾ ।
ಮೃತ್ಯುದೃಷ್ಟ್ಯೋಽಂತರೇಣಾಽಪಿ ಮಮ ಧೇನುಂ ನಯೇತ ಯಃ ॥ ೧೯ ॥
ಏವಮುಕ್ತ್ವಾ ಮಹಾದಂಡಂ ಬ್ರಹ್ಮದಂಡಮಿವಾಽಪರಂ ।
ಗೃಹೀತ್ವಾ ಪರಮಕ್ರುದ್ಧೋ ಜಮದಗ್ನಿರುವಾಚ ಹ ॥ ೨೦ ॥
ಯಸ್ಯಾಽಸ್ತಿ ಶಕ್ತಿಸ್ತೇಜೋ ವಾ ಕ್ಷತ್ರಿಯಸ್ಯ ಕುಲಾಧಮಃ ।
ಧೇನುಂ ನಯತು ಸೋ ಸದ್ಯಃ ಕ್ಷೀಣಾಯುಃ ಸಪರಿಚ್ಛದಃ ॥ ೨೧ ॥
ಏತಚ್ಛ್ರುತ್ವಾ ವಚಃ ಕ್ರೂರಂ ಹೈಹಯಃ ಶತಶೋ ವೃತಃ ।
ಧಾವಮಾನಃ ಕ್ಷಿತಿತಲೇ ಬ್ರಹ್ಮದಂಡಹತೋಽಪತತ್ ॥ ೨೨ ॥
ಹುಂಕೃತೇನ ತತೋ ಧೇನ್ವಾಃ ಖಡ್ಗಪಾಶಾಽಸಿಪಾಣಯಃ ।
ನಿರ್ಗಚ್ಛಂತಃ ಪ್ರದೃಶ್ಯಂತೇ ಕಲ್ಮಷಾಯಾಃ ಸಹಸ್ರಶಃ ॥ ೨೩ ॥
ನಾಸಾಪುಟಾಗ್ರಾದ್ರೋಮಾಗ್ರಾತ್ಕಿರಾತಾ ಮಾಗಧಾ ಗುದಾತ್ ।
ರಂಧ್ರಾಂತರೇಷು ಚೋತ್ಪನ್ನಾಃ ಶತಶೋಽಥ ಸಹಸ್ರಶಃ ॥ ೨೪ ॥
ಏವಮನ್ಯೋನ್ಯಮಾಹತ್ಯ ಹೈಹಯಃಷ್ಟಂಕಣಾನ್ದಹನ್ ।
ವಿನಾಶಂ ಸಹ ವಿಪ್ರೇಣ ಗತಾ ಹ್ಯರ್ಜುನತೇಜಸಾ ॥ ೨೫ ॥

---

೧೯. ಬ್ರಾಹ್ಮಣನು ಹೇಳುತ್ತಾನೆ:—ಯಾವನು ನಿರ್ಭಯನಾಗಿ ಕುಪಿತವಾದ ಹಾವಿನೊಡನೆ ಆಟವಾಡುವನು? ಮೃತ್ಯುವಿನ ದೃಷ್ಟಿಗೆ ವಿಷಯನಾದವನನ್ನು ಬಿಟ್ಟು ಬೇರಾವನು ನನ್ನ ಧೇನುವನ್ನು ತೆಗೆದುಕೊಂಡು ಹೋಗುವನು?

೨೦. ಜಮದಗ್ನಿಯು ಹೀಗೆ ಹೇಳಿ ಬ್ರಹ್ಮದಂಡದಂತಿರುವ ಮಹಾದಂಡವನ್ನು ಹಿಡಿದುಕೊಂಡು ಅತ್ಯಂತಕೋಪದಿಂದ ಇಂತೆಂದನು.

೨೧. "ಯಾವ ಕ್ಷತ್ರಿಯನಿಗೆ ಶಕ್ತಿಯಿದೆ? ನೀಚನೂ, ಕ್ಷೀಣಾಯುಷ್ಯವುಳ್ಳವನೂ ಆದ ಅವನು ಸೈನ್ಯದೊಡನೆ ನನ್ನ ಈ ಧೇನುವನ್ನು ಒಯ್ಯಲಿ."

೨೨. ಹೈಹಯನು ಈ ಕ್ರೂರವಾಕ್ಯವನ್ನು ಕೇಳಿ ನೂರಾರು ಮಂದಿಯೊಡನೆ ಓಡುತ್ತ ಬ್ರಹ್ಮದಂಡದಿಂದ ಹತನಾಗಿ ಕೆಳಗೆ ಬಿದ್ದನು.

೨೩. ಅನಂತರ ಆ ಕಾಮಧೇನುವಿನ ಹುಂಕಾರದಿಂದ ಸಾವಿರಾರು ಮಂದಿ ಖಡ್ಗಪಾಶಗಳನ್ನು ಹಿಡಿದ ಯೋಧರು ಹೊರಡುತ್ತಿರುವುದು ಕಾಣಿಸಿತು.

೨೪. ಮೂಗಿನ ಹೊಳ್ಳೆಗಳಿಂದಲೂ, ರೋಮದ ತುದಿಗಳಿಂದಲೂ, ಗುದದಿಂದಲೂ, ಇತರ ರಂಧ್ರಗಳಿಂದಲೂ ಸಾವಿರಾರು ಮಂದಿ ಕಿರಾತರೂ, ಮಾಗಧರೂ ಹುಟ್ಟಿದರು.

೨೫. ಅವರೂ, ಕಾರ್ತವೀರ್ಯಾರ್ಜುನನೂ ಪರಸ್ಪರವಾಗಿ ಯುದ್ಧಮಾಡುತ್ತಿರಲು ಅವರೆಲ್ಲರೂ ಆ ಕಾರ್ತವೀರ್ಯಾರ್ಜುನನ ಬಲದಿಂದ ಬ್ರಾಹ್ಮಣನೊಡನೆ ವಿನಷ್ಟರಾದರು.

ಕಾರ್ತವೀರ್ಯೋ ಜಯಂ ಲಬ್ಧ್ವಾ ಸಂಖ್ಯೇ ಹತ್ವಾ ದ್ವಿಜೋತ್ತಮಂ ।
ಜಗಾಮ ಸ್ವಾಂ ಪುರೀಂ ಹೃಷ್ಟಃ ಕೃತಾಂತವಶಮೋಹಿತಃ ॥ ೨೬ ॥
ತತಸ್ತ್ವರಾನ್ವಿತಃ ಪ್ರಾಪ್ತಃ ಪಶ್ಚಾದ್ರಾಮೋ ಗತೇ ರಿಪೌ ।
ಆಕಂದ್ರಮಾನಾಂ ಜನನೀಂ ದದರ್ಶ ಪಿತುರಂತಿಕೇ ॥ ೨೭ ॥

ರಾಮ ಉವಾಚ :—

ಕೇನೇದಮಾತ್ಮನಾಶಾಯ ಹ್ಯಜ್ಞಾನಾತ್ಸಾಹಸಂ ಕೃತಂ ।
ಮಮ ತಾತಂ ಜಿಘಾಂಸುರ್ಯೋ ದ್ರಷ್ಟುಂ ಮೃತ್ಯುಮಿಹೇಚ್ಛತಿ ॥ ೨೮ ॥
ತತಃ ಸಾ ರಾಮವಾಕ್ಯೇನ ಗತಸತ್ವೇವ ವಿಹ್ವಲಾ ।
ಉದರಂ ಕರಯುಗ್ಮೇನ ತಾಡಯಂತೀ ಹ್ಯುವಾಚ ತಂ ॥ ೨೯ ॥
ಅರ್ಜುನೇನ ನೃಶಂಸೇನ ಕ್ಷತ್ರಿಯೈರಪರೈಃ ಸಹ ।
ಇಹಾಗತ್ಯ ಪಿತಾ ತೇನ ನಿಹತೋ ಬಾಹುಶಾಲಿನಾ ॥ ೩೦ ॥
ತಂ ಪಶ್ಯ ನಿಹತಂ ತಾತಂ ಗತಾಸುಂ ಗತಚೇತಸಂ ।
ಸಂಸ್ಕೃತ್ಯ ವಿಧಿವತ್ಪುತ್ರ ತರ್ಪಯಸ್ವ ಯಥಾತಥಂ ॥ ೩೧ ॥
ಏತಚ್ಛ್ರುತ್ವಾ ಸ ವಚನಂ ಜನನೀಮಭಿವಾದ್ಯ ತಾಂ ।
ಪ್ರತಿಜ್ಞಾಮಕರೋದ್ಯಾಂ ತಾಂ ಶೃಣುಷ್ವ ಚ ನರಾಧಿಪ ॥ ೩೨ ॥

---

೨೬. ಕಾರ್ತವೀರ್ಯನು ಯುದ್ಧದಲ್ಲಿ ಜಯವನ್ನು ಪಡೆದು, ಬ್ರಾಹ್ಮಣನನ್ನು ಕೊಂದು ಯಮವಶವನ್ನೈದಿ ಮೋಹಗೊಂಡು ತನ್ನ ಪಟ್ಟಣಕ್ಕೆ ಹೋದನು.

೨೭. ಅವನು ಹೊರಟುಹೋದಬಳಿಕ ರಾಮನು ವೇಗದಿಂದ ಆಶ್ರಮಕ್ಕೆ ಬಂದು ತಂದೆಯ ಬಳಿ ಅಳುತ್ತಿರುವ ತಾಯಿಯನ್ನು ಕಂಡನು.

೨೮. ರಾಮನು ಹೇಳುತ್ತಾನೆ:—ಯಾವನು ತನ್ನ ನಾಶಕ್ಕಾಗಿ ಅಜ್ಞಾನದಿಂದ ಈ ಸಾಹಸಕಾರ್ಯವನ್ನು ಮಾಡಿದನು? ಯಾವನು ನನ್ನ ತಂದೆಯನ್ನು ಕೊಂದು ಮೃತ್ಯುವನ್ನು ನೋಡಬಯಸುವನು?

೨೯. ಬಳಿಕ ಆ ರೇಣುಕೆಯು ರಾಮನ ಮಾತಿನಿಂದ ಸತ್ವವಿಲ್ಲದವಳಂತೆ ವ್ಯಥೆಗೊಂಡು ಎರಡು ಕೈಗಳಿಂದಲೂ ಹೊಟ್ಟೆಯನ್ನು ಹೊಡೆದುಕೊಳ್ಳುತ್ತ ಅವನನ್ನು ಕುರಿತು ಇಂತೆಂದಳು.

೩೦. "ಘಾತುಕನಾದ ಕಾರ್ತವೀರ್ಯಾರ್ಜುನನು ಇತರ ಕ್ಷತ್ರಿಯರೊಡನೆ ಇಲ್ಲಿಗೈತಂದು ನಿನ್ನ ತಂದೆಯನ್ನು ಕೊಂದನು.

೩೧. ಜ್ಞಾನಪ್ರಾಣಗಳಿಲ್ಲದೆ ಬಿದ್ದಿರುವ ತಂದೆಯನ್ನು ನೋಡು. ಮಗು! ಇವನನ್ನು ವಿಧಿಯಂತೆ ಸಂಸ್ಕರಿಸಿ ತರ್ಪಣಮಾಡು."

೩೨. ಆ ಪರಶುರಾಮನು ಇದನ್ನು ಕೇಳಿ ಆ ತಾಯಿಯನ್ನು ವಂದಿಸಿ ಆವ ಪ್ರತಿಜ್ಞೆಯನ್ನು ಮಾಡಿದನೆಂಬುದನ್ನು ಕೇಳು.

ತ್ರಿಃಸಪ್ತಕೃತ್ವಃ ಪೃಥಿವೀಂ ನಿಃಕ್ಷತ್ರಿಯ ಕುಲಾನ್ವಯಾಂ ।
ಸ್ನಾತ್ವಾ ಚ ತೇಷಾಮಸೃಜಾ ತರ್ಪಯಿಷ್ಯಾಮಿ ತೇ ಪತಿಂ ॥ ೩೩ ॥
ತಸ್ಯಾಃಪಿ ಪರಶುನಾ ಬಾಹೂನ್ಕಾರ್ತವೀರ್ಯಸ್ಯ ದುರ್ಮತೇಃ ।
ಛಿತ್ವಾ ಪಾಸ್ಯಾಮಿ ರುಧಿರಮಿತಿ ಸತ್ಯಂ ಶೃಣುಷ್ವ ಮೇ ॥ ೩೪ ॥
ಏವಂ ಪ್ರತಿಜ್ಞಾಂ ಕೃತ್ವಾಽಸೌ ಜಾಮದಗ್ನ್ಯಃ ಪ್ರತಾಪವಾನ್ ।
ಕ್ರೋಧೇನ ಮಹತಾವಿಷ್ಟೋ ಸಂಸ್ಕೃತ್ಯ ಪಿತರಂ ತತಃ ॥ ೩೫ ॥
ಮಾಹಿಷ್ಮತೀಂ ಪುರೀಂ ರಾಮೋ ಜಗಾಮ ಕ್ರೋಧಮೂರ್ಛಿತಃ ।
ಛಿತ್ವಾ ಬಾಹುವನಂ ತಸ್ಯ ಹತ್ವಾ ತಂ ಕ್ಷತ್ರಿಯಾಧಮಂ ॥ ೩೬ ॥
ಜಗಾಮ ಕ್ಷತ್ರಿಯಾಂತಾಯ ಪೃಥಿವೀಮವಲೋಕಯನ್ ।
ಸಪ್ತದ್ವೀಪಾರ್ಣವಯುತಾಂ ಸಶೈಲವನಕಾನನಾಂ ॥ ೩೭ ॥
ಪೂರ್ವತಃ ಪಶ್ಚಿಮಾಮಾಶಾಂ ದಕ್ಷಿಣೋತ್ತರತಃ ಕುರೂನ್ ।
ಸಮಂತಪಂಚಕೇ ಪಂಚ ಚಕಾರ ರುಧಿರಹ್ರದಾನ್ ॥ ೩೮ ॥
ಸ ತೇಷು ರುಧಿರಾಂಭಸ್ಸು ಹ್ರದೇಷು ಕ್ರೋಧಮೂರ್ಛಿತಃ ।
ಪಿತೄನ್ ಸಂತರ್ಪಯಾಮಾಸ ರುಧಿರೇಣೇತಿ ನಃ ಶ್ರುತಂ ॥ ೩೯ ॥
ಅಥರ್ಚೀಕಾದಯೋಽಪೇತ್ಯ ಪಿತರೋ ಬ್ರಾಹ್ಮಣರ್ಷಭಂ ।
ತಂ ಕ್ಷಮಸ್ವೇತಿ ಜಗದುಸ್ತತಃ ಸ ವಿರರಾಮ ಹ ॥ ೪೦ ॥

---

೩೩. "ತಾಯೆ! ಕೇಳು; ನಾನು ಇಪ್ಪತ್ತೊಂದುಸಾರಿ ಈ ಭೂಮಿಯಲ್ಲಿಯೇ ಕ್ಷತ್ರಿಯರ ಕುಲವಿಲ್ಲದಂತೆ ಮಾಡಿ ಮಿಂದು ಅವರ ರಕ್ತದಿಂದ ನಿನ್ನ ಪತಿಗೆ ತರ್ಪಣಮಾಡುವೆನು.

೩೪. ಈ ಕೊಡಲಿಯಿಂದ ದುಷ್ಟ ಕಾರ್ತವೀರ್ಯನ ತೋಳುಗಳನ್ನು ಕತ್ತರಿಸಿ ರಕ್ತವನ್ನು ಹೀರುವೆನು; ನನ್ನ ಪ್ರತಿಜ್ಞೆಯನ್ನು ಕೇಳು."

೩೫–೩೮. ಜಾಮದಗ್ನ್ಯನು ಹೀಗೆ ಕೋಪಾವಿಷ್ಟನಾಗಿ ಪ್ರತಿಜ್ಞೆಯನ್ನು ಮಾಡಿ ತಂದೆಯನ್ನು ಸಂಸ್ಕರಿಸಿ ಮಾಹಿಷ್ಮತೀಪುರಿಗೆ ಹೋಗಿ ಕಾರ್ತವೀರ್ಯನ ಬಾಹುಗಳೆಂಬ ವನವನ್ನು ಕತ್ತರಿಸಿ, ಅವನನ್ನು ಕೊಂದು, ಕ್ಷತ್ರಿಯರ ವಧೆಗಾಗಿ ಸಪ್ತದ್ವೀಪ ಸಮುದ್ರಗಳಿಂದ ಕೂಡಿದ ಭೂಮಿಯನ್ನು ಸುತ್ತುತ್ತ ಪೂರ್ವ ಪಶ್ಚಿಮ ದಕ್ಷಿಣೋತ್ತರ ದಿಕ್ಕುಗಳಲ್ಲಿರುವ ಕ್ಷತ್ರಿಯರನ್ನು ಕೊಂದು ಸಮಂತ ಪಂಚಕದಲ್ಲಿ ಐದು ರಕ್ತದ ಸರೋವರಗಳನ್ನು ನಿರ್ಮಿಸಿದನು.

೩೯–೪೦. ಅವನು ಕೋಪದಿಂದ ಆ ಸರೋವರದ ರಕ್ತೋದಕಗಳಿಂದ ಪಿತೃಗಳಿಗೆ ತರ್ಪಣಮಾಡಿದನು. ಅನಂತರ ಋಚೀಕಾದಿ ಆತನ ಪಿತೃಗಳು ಅಲ್ಲಿಗೆ ಬಂದು ಆ ಬ್ರಾಹ್ಮಣೋತ್ತಮನನ್ನು ಕ್ಷಮೆಗೊಳ್ಳೆಂದರು. ಅನಂತರ ಅವನು ಸುಮ್ಮನಾದನು.

ತೇಷಾಂ ಸಮೀಪೇ ಯೋ ದೇಶೋ ಹ್ರದಾನಾಂ ರುಧಿರಾಂಭಸಾ ।
ಸಮಂತಪಂಚಕಮಿತಿ ಪುಣ್ಯಂ ತತ್ಪರಿಕೀರ್ತಿತಂ ॥ ೪೧ ॥
ನಿವರ್ತ್ಯ ಕರ್ಮಣಸ್ತಸ್ಮಾತ್ಪಿತೄನ್ಪ್ರೋವಾಚ ಪಾಂಡವ ।
ರಾಮಃ ಪರಮಧರ್ಮಾತ್ಮಾ ಯದಿದಂ ರುಧಿರಂ ಮಯಾ ॥ ೪೨ ॥
ಕ್ಷಿಪ್ತಂ ಪಂಚಸು ತೀರ್ಥೇಷು ತದ್ಭೂಯಾತ್ತೀರ್ಥಮುತ್ತಮಂ ।
ತಥೇತ್ಯುಕ್ತ್ವಾ ತು ತೇ ಸರ್ವೇ ಪಿತರೋಽದೃಶ್ಯತಾಂ ಗತಾಃ ॥ ೪೩ ॥
ಏವಂ ರಾಮಸ್ಯ ಸಂಸರ್ಗೋ ದೇವಮಾರ್ಗೇ ಯುಧಿಷ್ಠಿರ ।
ಸರ್ವಪಾಪಕ್ಷಯಕರೋ ದರ್ಶನಾತ್ಸ್ಪರ್ಶನಾನ್ನೃಣಾಂ ॥ ೪೪ ॥
ರೇಣುಕಾಪ್ರತ್ಯಯಾರ್ಥಾಯ ಅದ್ಯಾಪಿ ಪಿತೃದೇವತಾಃ ।
ದೃಶ್ಯಂತೇ ದೇವಮಾರ್ಗಸ್ಥಾಃ ಸರ್ವಪಾಪಕ್ಷಯಂಕರಾಃ ॥ ೪೫ ॥
ತತ್ರ ತೀರ್ಥೇ ತು ರಾಜೇಂದ್ರ ನರ್ಮದೋದಧಿಸಂಗಮೇ ।
ಸ್ನಾನಂ ಕೃತ್ವಾ ವಿಧಾನೇನ ಮುಚ್ಯಂತೇ ಪಾತಕೈರ್ನರಾಃ ॥ ೪೬ ॥
ಕುಶಾಗ್ರೇಣಾಽಪಿ ಕೌಂತೇಯ ನ ಸ್ಪ್ರಷ್ಟವ್ಯೋ ಮಹೋದಧಿಃ ।
ಅನೇನ ತತ್ರ ಮಂತ್ರೇಣ ಸ್ನಾತವ್ಯಂ ನೃಪಸತ್ತಮ ॥ ೪೭ ॥
ನಮಸ್ತೇ ವಿಷ್ಣುರೂಪಾಯ ನಮಸ್ತುಭ್ಯಮಪಾಂಪತೇ ।
ಸಾನ್ನಿಧ್ಯಂ ಕುರು ದೇವೇಶ ಸಾಗರೇ ಲವಣಾಂಭಸಿ ॥ ೪೮ ॥

॥ ಇತಿ ಸ್ಪರ್ಶನಮಂತ್ರಃ ॥

---

೪೧. ಅವರ ಹತ್ತಿರ ಆ ರುಧಿರೋದಕ ಸರೋವರಗಳು ಪುಣ್ಯಕರವಾದ ಸಮಂತಪಂಚಕವೆಂದು ಪ್ರಸಿದ್ಧಿಗೊಂಡವು.

೪೨-೪೩. ಯುಧಿಷ್ಠಿರ! ಆ ರಾಮನು ಆ ಕರ್ಮವನ್ನು ತ್ಯಜಿಸಿ, "ನಾನು ರಕ್ತವನ್ನು ತುಂಬಿಸಿರುವ ಈ ತೀರ್ಥಗಳು ಉತ್ತಮತೀರ್ಥಗಳೆಂದು ಹೇಳಿರಿ" ಎಂದು ಕೇಳಿದನು. ಪಿತೃಗಳು ಹಾಗೆಯೇ ಆಗಲೆಂದು ಹೇಳಿ ಅದೃಶ್ಯರಾದರು.

೪೪. ಹೀಗೆ ದೇವಮಾರ್ಗದಲ್ಲಿರುವ ರಾಮನ ಪಂಚಸರೋವರಗಳು ದರ್ಶನಸ್ಪರ್ಶಗಳಿಂದ ಮಾನವರ ಸಕಲ ಪಾಪಗಳನ್ನೂ ನಿವಾರಿಸುವುವು.

೪೫. ಈಗಲೂ ಸಕಲ ಪಾಪಗಳನ್ನೂ ನೀಗಿಸುವ ಪಿತೃದೇವತೆಗಳು ಆ ರೇಣುಕೆಯ ನಂಬಿಕೆಗಾಗಿ ದೇವಮಾರ್ಗದಲ್ಲಿ ಕಾಣಿಸುವರು.

೪೬. ಮಹಾರಾಜ! ನರ್ಮದಾ ಮತ್ತು ಸಮುದ್ರಗಳು ಸೇರಿರುವ ಆ ತೀರ್ಥದಲ್ಲಿ ವಿಧಿಯಂತೆ ಮಿಂದರೆ ಮಾನವರು ಪಾಪಮುಕ್ತರಾಗುವರು.

೪೭. ಸಮುದ್ರವನ್ನು ದರ್ಭೆಯ ಕೊನೆಯಿಂದಲೂ ಮುಟ್ಟಬಾರದು. ಈ ಮಂತ್ರದಿಂದ ಮಾತ್ರ ಅಲ್ಲಿ ಸ್ನಾನಮಾಡಬೇಕು.

೪೮. "ವಿಷ್ಣುರೂಪವಾದ ಸಮುದ್ರವೆ! ನಿನಗೆ ನಮಸ್ಕಾರವು. ಈ ಸಮುದ್ರದಲ್ಲಿ ನೀನು ಸನ್ನಿಹಿತನಾಗು." (ಇದು ಸ್ಪರ್ಶಮಂತ್ರವಾಗಿರುವುದು).

ಅಗ್ನಿಶ್ಚ ತೇಜೋ ಮೃಡಯಾಚ ದೇಹೇ
ರೇತೋಽಥ ವಿಷ್ಣುರಮೃತಸ್ಯ ನಾಭಿಃ ।
ಏತದ್ಬ್ರುವನ್ಪಾಂಡವ ಸತ್ಯವಾಕ್ಯಂ
ತತೋಽವಗಾಹೇತ ಪತಿಂ ನದೀನಾಂ ॥ ೪೯ ॥
ಪಂಚರತ್ನಸಮಾಯುಕ್ತಂ ಫಲಪುಷ್ಪಾಕ್ಷತೈರ್ಯುತಂ ।
ಮಂತ್ರೇಣಾಽನೇನ ರಾಜೇಂದ್ರ ದದ್ಯಾದರ್ಘ್ಯಂ ಮಹೋದಧೇಃ ॥ ೫೦ ॥
ಸರ್ವರತ್ನನಿಧಾನಸ್ತ್ವಂ ಸರ್ವರತ್ನಾಕರಾಕರಃ ।
ಸರ್ವಾಽಮರಪ್ರಧಾನೇಶ ಗೃಹಾಣಾಽರ್ಘ್ಯಂ ನಮೋಽಸ್ತುತೇ ॥ ೫೧ ॥
॥ ಇತ್ಯರ್ಘ್ಯಮಂತ್ರಃ ॥
ಆಜನ್ಮಜನಿತಾತ್ಪಾಪಾನ್ಮಾಮುದ್ಧರ ಮಹೋದಧೇ ।
ಯಾಹ್ಯರ್ಚಿತೋ ರತ್ನನಿಧೇ ಪರ್ವತಾನ್ಪಾರ್ವಣೋತ್ತಮ ॥ ೫೨ ॥
॥ ಇತಿ ವಿಸರ್ಜನಮಂತ್ರಃ ॥
ಕೋಽಪರಃ ಸಾಗರಾದ್ದೇವಾತ್ಸ್ವರ್ಗದ್ವಾರವಿಪಾಟನ ।
ತತ್ರ ಸಾಗರಪರ್ಯಂತಂ ಮಹಾತೀರ್ಥಮನುತ್ತಮಂ ॥ ೫೩ ॥
ಜಾಮದಗ್ನ್ಯೇನ ರಾಮೇಣ ತತ್ರ ದೇವಃ ಪ್ರತಿಷ್ಠಿತಃ ।
ಯತ್ರ ದೇವಾಃ ಸಗಂಧರ್ವಾ ಮುನಯಃ ಸಿದ್ಧಚಾರಣಾಃ ॥ ೫೪ ॥

---

೪೯. "ಅಗ್ನಿಶ್ಚ ತೇಜೋಮೃಡಯಾ ಚ ದೇಹೇ ರೇತೋಽಥ ವಿಷ್ಣುರಮೃತಸ್ಯನಾಭಿಃ" ಈ ಮಂತ್ರವನ್ನು ಹೇಳುತ್ತ ಸಮುದ್ರದಲ್ಲಿ ಸ್ನಾನಮಾಡಬೇಕು.

೫೦. ಮಹೋದಧಿಗೆ ಪಂಚರತ್ನಗಳಿಂದಲೂ, ಫಲಪುಷ್ಪಗಳಿಂದಲೂ, ಅಕ್ಷತೆಗಳಿಂದಲೂ ಕೂಡಿದ ಅರ್ಘ್ಯವನ್ನು ಈ ಮಂತ್ರವನ್ನುಚ್ಚರಿಸಿ ಕೊಡಬೇಕು.

೫೧. "ಸಕಲ ರತ್ನಗಳಿಗೆ ಆಶ್ರಯನೂ, ಸಮಸ್ತರತ್ನಾಕರಗಳಿಗೆ ನಿಧಿಯೂ, ಸಮಸ್ತ ದೇವತೆಗಳಲ್ಲಿ ಪ್ರಧಾನನೂ ಆದ ಸಮುದ್ರನೆ! ನಿನಗೆ ನಮಸ್ಕಾರವು. ಅರ್ಘ್ಯವನ್ನು ಸ್ವೀಕರಿಸು." (ಇದು ಅರ್ಘ್ಯಮಂತ್ರವು).

೫೨. ಮಹೋದಧಿಯೆ! ಹುಟ್ಟಿದ ಮೊದಲ್ಗೊಂಡು ಮಾಡಿದ ಪಾಪದಿಂದ ನನ್ನನ್ನು ಉದ್ಧರಿಸು. ನನ್ನಿಂದ ಅರ್ಚಿತನಾದ ನೀನು ಪರ್ವತದಿಂದ ತೆರಳು. (ಇದು ವಿಸರ್ಜನ ಮಂತ್ರವು.)

೫೩. ಸಮುದ್ರದೇವನಿಗಿಂತಲೂ ಸ್ವರ್ಗದ್ವಾರವನ್ನು ತೆರೆಯುವವರು ಬೇರೆ ಯಾರಿರುವರು? ಆ ಸಮುದ್ರದವರೆಗೆ ಇರುವ ತೀರ್ಥವು ಉತ್ತಮವಾದುದು.

೫೪–೫೭. ಅಲ್ಲಿ ಪರಶುರಾಮನು ಪರಮೇಶ್ವರನನ್ನು ಪ್ರತಿಷ್ಠೆಮಾಡಿರುವನು. ಅಲ್ಲಿ ದೇವತೆಗಳೂ, ಗಂಧರ್ವರೂ, ಮುನಿಗಳೂ, ಸಿದ್ಧಚಾರಣರೂ ವಿರೂಪಾಕ್ಷ

ಉಪಾಸತೇ ವಿರೂಪಾಕ್ಷಂ ಜಮದಗ್ನಿಮನುತ್ತಮಂ ।
ರೇಣುಕಾಂ ಚೈವ ಯೇ ದೇವೀಂ ಪಶ್ಯಂತಿ ಭುವಿ ಮಾನವಾಃ ॥ ೫೫ ॥
ಪ್ರಿಯವಾಸೇ ಶಿವೇ ಲೋಕೇ ವಸಂತಿ ಕಾಲಮೀಪ್ಸಿತಂ ।
ತತ್ರ ಸ್ನಾತ್ವಾ ನರೋ ರಾಜಂಸ್ತರ್ಪಯನ್ಪಿತೃದೇವತಾಃ ॥ ೫೬ ॥
ತಾರಯೇನ್ನರಕಾದ್ಘೋರಾತ್ಕುಲಾನಾಂ ಶತಮುತ್ತರಂ ।
ಸ್ನಾತ್ವಾ ದತ್ವಾಽತ್ರ ಸಹಿತಾಃ ಶ್ರುತ್ವಾ ವೈ ಭಕ್ತಿಪೂರ್ವಕಂ ॥ ೫೭ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ
ಪಂಚಮೇ ಆವಂತ್ಯಖಂಡೇ ತೃತೀಯೇ ರೇವಾಖಂಡೇ
"ಜಾಮದಗ್ನ್ಯತೀರ್ಥಮಾಹಾತ್ಮ್ಯವರ್ಣನಂ"
ನಾಮಾಷ್ಟಾದಶಾಧಿಕದ್ವಿಶತತಮೋಽಧ್ಯಾಯಃ

---

ನನ್ನೂ, ಜಮದಗ್ನಿಯನ್ನೂ ಸೇವಿಸುವರು. ಭೂಮಿಯಲ್ಲಿ ರೇಣುಕಾದೇವಿಯನ್ನು ದರ್ಶನಮಾಡಿದ ಮಾನವರು ಇಷ್ಟವಾದ ಕಾಲದವರೆಗೆ ಶಿವಲೋಕದಲ್ಲಿ ವಾಸಿಸುವರು. ಅಲ್ಲಿ ಮಿಂದು ಪಿತೃದೇವತೆಗಳಿಗೆ ದಾನಮಾಡಿದವರೂ, ಭಕ್ತಿಯಿಂದ ಶ್ರವಣಮಾಡಿದವರೂ, ತರ್ಪಣಮಾಡಿದವರೂ ನೂರು ಕುಲಗಳನ್ನು ಉದ್ಧರಿಸುವರು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ
ಶ್ರೀ ಸ್ಕಾಂದಮಹಾಪುರಾಣದ ಐದನೆಯ ಆವಂತ್ಯಖಂಡದ ಮೂರನೆಯ ರೇವಾಖಂಡದಲ್ಲಿ
"ಜಾಮದಗ್ನ್ಯತೀರ್ಥಮಾಹಾತ್ಮ್ಯವರ್ಣನ" ವೆಂಬ
ಇನ್ನೂರ ಹದಿನೆಂಟನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

# ಅಥೈಕೋನವಿಂಶದಧಿಕದ್ವಿಶತತಮೋಽಧ್ಯಾಯಃ

## ಕೋಟಿತೀರ್ಥಮಾಹಾತ್ಮ್ಯವರ್ಣನಂ

ಶ್ರೀ ಮಾರ್ಕಂಡೇಯ ಉವಾಚ :—

ನರ್ಮದಾದಕ್ಷಿಣೇ ಕೂಲೇ ತೀರ್ಥಂ ಕೋಟೀಶ್ವರಂ ಪರಂ ।
ಯತ್ರ ಸ್ನಾನಂ ಚ ದಾನಂ ಚ ಸರ್ವಂ ಕೋಟಿಗುಣಂ ಭವೇತ್ ॥ ೧ ॥
ತತ್ರ ದೇವಾಃ ಸಗಂಧರ್ವಾ ಋಷಯೋ ಯೇ ತಥಾಽಮಲಾಃ ।
ಕೋಟಿತೀರ್ಥೇ ಪರಾಂ ಸಿದ್ಧಿಂ ಸಂಪ್ರಾಪ್ತಾ ಭುವಿ ದುರ್ಲಭಾಂ ॥ ೨ ॥
ಸ್ಥಾಪಿತಶ್ಚ ಮಹಾದೇವಸ್ತತ್ರ ಕೋಟೀಶ್ವರೋ ನೃಪ ।
ತಂ ದೃಷ್ಟ್ವಾ ದೇವದೇವೇಶಂ ಸಿದ್ಧಿಂ ಪ್ರಾಪ್ನೋತ್ಯನುತ್ತಮಾಂ ॥ ೩ ॥
ತತ್ರ ತೀರ್ಥೇ ತು ಯತ್ಕಿಂಚಿಚ್ಛುಭಂ ವಾ ಯದಿ ವಾಽಶುಭಂ ।
ಕ್ರಿಯತೇ ತನ್ನೃಪಶ್ರೇಷ್ಠ ಸರ್ವಂ ಕೋಟಿಗುಣಂ ಭವೇತ್ ॥ ೪ ॥
ತತ್ರ ದಕ್ಷಿಣಮಾರ್ಗಸ್ಥಾ ಯೇಕೇಚಿನ್ಮುನಿಸತ್ತಮಾಃ ।
ಸಿದ್ಧಾ ಮೃತಾಃ ಪದಂ ಯಾಂತಿ ಪಿತೃಲೋಕಂ ಧ್ರುವಂ ಹಿ ತೇ ॥ ೫ ॥

---

## ಕನ್ನಡದ ಅನುವಾದ

### ಕೋಟಿತೀರ್ಥಮಾಹಾತ್ಮ್ಯವರ್ಣನ

೧. ಶ್ರೀ ಮಾರ್ಕಂಡೇಯನು ಹೇಳುತ್ತಾನೆ:—ನರ್ಮದಾನದಿಯ ದಕ್ಷಿಣ ತೀರದಲ್ಲಿ ಕೋಟೀಶ್ವರವೆಂಬ ಉತ್ತಮತೀರ್ಥವಿರುವುದು. ಅಲ್ಲಿ ಮಾಡಿದ ಸ್ನಾನದಾನಗಳು ಕೋಟಿಯಷ್ಟು ಹೆಚ್ಚಾಗುವುವು.

೨. ಅಲ್ಲಿ ದೇವತೆಗಳೂ, ಗಂಧರ್ವರೂ, ಶುದ್ಧರಾದ ಋಷಿಗಳೂ ಭೂದುರ್ಲಭವಾದ ಉತ್ತಮಸಿದ್ಧಿಯನ್ನು ಹೊಂದಿರುವರು.

೩. ಅವರು ಅಲ್ಲಿ ಸ್ಥಾಪಿಸಿರುವ ಕೋಟೀಶ್ವರನನ್ನು ದರ್ಶನಮಾಡಿದ ಮಾನವನು ಉತ್ತಮಸಿದ್ಧಿಯನ್ನು ಹೊಂದುವನು.

೪. ಆ ತೀರ್ಥದಲ್ಲೆಸಗಿದ ಶುಭಕರ್ಮವಾಗಲಿ, ಅಶುಭಕರ್ಮವಾಗಲಿ, ಎಲ್ಲವೂ ಕೋಟಿಯಷ್ಟು ಹೆಚ್ಚಾಗುವುವು.

೫. ಅಲ್ಲಿ ದಕ್ಷಿಣಮಾರ್ಗದಲ್ಲಿರುವ ಮುನಿವರ್ಯರು ಸಿದ್ಧಿಯನ್ನು ಪಡೆದು ಮಡಿದು ನಿಶ್ಚಯವಾಗಿಯೂ ಪಿತೃಲೋಕವನ್ನೈದುವರು.

**ಉತ್ತರಂ ನರ್ಮದಾಕೂಲಂ ಯೇ ಶ್ರೇಷ್ಠಾ ಮುನಿಪುಂಗವಾಃ ।**
**ದೇವಲೋಕಂ ಗತಾಃ ಪೂರ್ವಮಿತಿ ಶಾಸ್ತ್ರಸ್ಯ ನಿಶ್ಚಯಃ ॥ ೬ ॥**

**ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ**
**ಪಂಚಮೇ ಅವಂತ್ಯಖಂಡೇ ತೃತೀಯೇ ರೇವಾಖಂಡೇ**
**"ಕೋಟಿತೀರ್ಥಮಾಹಾತ್ಮ್ಯವರ್ಣನಂ"**
**ನಾಮೈಕೋನವಿಂಶದಧಿಕದ್ವಿಶತತಮೋಽಧ್ಯಾಯಃ**

---

೬. ನರ್ಮದಾನದಿಯ ಉತ್ತರದಡದಲ್ಲಿರುವ ಮುನಿವರ್ಯರು ಹಿಂದೆ ದೇವಲೋಕವನ್ನು ಸೇರಿದರೆಂದು ಶಾಸ್ತ್ರನಿರ್ಣಯವಿರುವುದು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ
ಶ್ರೀ ಸ್ಕಾಂದಮಹಾಪುರಾಣದ ಐದನೆಯ ಅವಂತ್ಯಖಂಡದ ಮೂರನೆಯ ರೇವಾಖಂಡದಲ್ಲಿ
"ಕೋಟಿತೀರ್ಥಮಾಹಾತ್ಮ್ಯವರ್ಣನ"ವೆಂಬ
ಇನ್ನೂರಹತ್ತೊಂಬತ್ತನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

# ಅಥ ವಿಂಶತ್ಯುತ್ತರದ್ವಿಶತತಮೋಽಧ್ಯಾಯಃ

## ಲೋಟಣೇಶ್ವರತೀರ್ಥಮಾಹಾತ್ಮ್ಯವರ್ಣನಂ

ಶ್ರೀ ಮಾರ್ಕಂಡೇಯ ಉವಾಚ :—

ತತೋ ಗಚ್ಛೇದ್ಧರಾಧೀಶ ಲೋಟಣೇಶ್ವರಮುತ್ತಮಂ ।
ಉತ್ತರೇ ನರ್ಮದಾಕೂಲೇ ಸರ್ವಪಾತಕನಾಶನಂ ॥ ೧ ॥
ತತ್ಕ್ಷಣಾದೇವ ತತ್ಸರ್ವಂ ಸಪ್ತಜನ್ಮಾರ್ಜಿತಂ ತ್ವಘಂ ।
ನಶ್ಯತೇ ದೇವದೇವಸ್ಯ ದರ್ಶನಾದೇವ ತನ್ನೃಪ ॥ ೨ ॥
ಬಾಲ್ಯಾತ್ಪ್ರಭೃತಿ ಯತ್ಪಾಪಂ ಯೌವನೇ ಚಾಽಪಿ ಯತ್ಕೃತಂ ।
ತತ್ಸರ್ವಂ ವಿಲಯಂ ಯಾತಿ ದೇವದೇವಸ್ಯ ದರ್ಶನಾತ್ ॥ ೩ ॥

ಯುಧಿಷ್ಠಿರ ಉವಾಚ :—

ಆಶ್ಚರ್ಯಭೂತಂ ಲೋಕೇಷು ನರ್ಮದಾಚರಿತಂ ಮಹತ್ ।
ತ್ವಯಾ ಮೈ ಕಥಿತಂ ವಿಪ್ರ ಸಕಲಂ ಪಾಪನಾಶನಂ ॥ ೪ ॥
ಯದೇಕಂ ಪರಮಂ ತೀರ್ಥಂ ಸರ್ವತೀರ್ಥಫಲಪ್ರದಂ ।
ಶ್ರೋತುಮಿಚ್ಛಾಮಿ ತತ್ಸರ್ವಂ ದಯಾಂ ಕೃತ್ವಾ ವದಾಽಶು ಮೇ ॥ ೫ ॥

---

## ಕನ್ನಡದ ಅನುವಾದ

### ಲೋಟಣೇಶ್ವರತೀರ್ಥಮಾಹಾತ್ಮ್ಯವರ್ಣನ

೧. ಶ್ರೀ ಮಾರ್ಕಂಡೇಯನು ಹೇಳುತ್ತಾನೆ:—ಮಹಾರಾಜ! ಅನಂತರ ನರ್ಮದಾನದಿಯ ಉತ್ತರದಡದಲ್ಲಿರುವ ಲೋಟಣೇಶ್ವರತೀರ್ಥಕ್ಕೆ ಹೋಗಬೇಕು.

೨. ಆ ಲೋಟಣೇಶ್ವರನ ದರ್ಶನದಿಂದಲೆ ಏಳು ಜನ್ಮಗಳಲ್ಲಿ ಸಂಪಾದಿಸಿದ ಪಾಪಗಳು ಕೂಡಲೆ ನಾಶವಾಗುವುವು.

೩. ಆ ದೇವದೇವನ ದರ್ಶನದಿಂದ ಬಾಲ್ಯಯೌವನಗಳಲ್ಲಿ ಸಗಿದ ಪಾಪಗಳು ನಾಶವಾಗುವುವು.

೪. ಯುಧಿಷ್ಠಿರನು ಹೇಳುತ್ತಾನೆ:—ದ್ವಿಜನೆ! ನೀನು ಲೋಕಗಳಲ್ಲಿ ಆಶ್ಚರ್ಯಕರವೂ, ಸಕಲ ಪಾಪನಾಶಕವೂ ಆದ ನರ್ಮದೆಯ ಚರಿತ್ರೆಯನ್ನು ಹೇಳಿರುವೆ.

೫. ಈಗ ಸಮಸ್ತ ತೀರ್ಥಗಳ ಫಲವನ್ನೀಯುವ ಉತ್ತಮವಾದ ತೀರ್ಥವನ್ನು ಕೇಳಬಯಸುವೆನು. ಅದನ್ನೆಲ್ಲ ದಯೆಮಾಡಿ ಬೇಗನೆ ನನಗೆ ಹೇಳು.

ಯೇ ಕೇಚಿದ್ದುರ್ಲಭಾಃ ಪ್ರಶ್ನಾಸ್ತ್ರಿಷು ಲೋಕೇಷು ಸತ್ತಮ ।
ತ್ವತ್ಪ್ರಸಾದೇನ ತೇ ಸರ್ವೇ ಶ್ರುತಾ ಮೇ ಸಹಬಾಂಧವೈಃ ॥ ೬ ॥
ಏತಮೇಕಂ ಪರಂ ಪ್ರಶ್ನಂ ಸರ್ವಪ್ರಶ್ನವಿದಾಂ ವರ ।
ಶ್ರುತ್ವಾಽಹಂ ತ್ವತ್ಪ್ರಸಾದೇನ ಯತ್ರ ಯಾಮಿ ಸ ಬಾಂಧವಃ ॥ ೭ ॥

ಶ್ರೀ ಮಾರ್ಕಂಡೇಯ ಉವಾಚ :—

ಸಾಧು ಸಾಧು ಮಹಾಪ್ರಾಜ್ಞ ಯಸ್ಯ ತೇ ಮತಿರೀದೃಶೀ ।
ದುರ್ಲಭಂ ತ್ರಿಷು ಲೋಕೇಷು ತಸ್ಯ ತೇನಾಸ್ತಿ ಕಿಂಚನ ॥ ೮ ॥
ಧರ್ಮಮರ್ಥಂ ಚ ಕಾಮಂ ಚ ಮೋಕ್ಷಂ ಚ ಭರತರ್ಷಭ ।
ಕಾಲೇ ಕಾಲೇ ಚ ಯೋ ವೇತ್ತಿ ಕರ್ತವ್ಯಸ್ತೇನ ಧೀಮತಾ ॥ ೯ ॥
ತಸ್ಮಾತ್ತೇ ಸಂಪ್ರವಕ್ಷ್ಯಾಮಿ ಪ್ರಶ್ನಸ್ಯಾಸ್ಯೋತ್ತರಂ ಶುಭಂ ।
ಯಚ್ಛ್ರುತ್ವಾ ಸರ್ವಪಾಪೇಭ್ಯೋ ಮುಚ್ಯಂತೇ ಭುವಿ ಮಾನವಾಃ ॥ ೧೦ ॥
ನರ್ಮದಾ ಸರಿತಾಂ ಶ್ರೇಷ್ಠಾ ಸರ್ವತೀರ್ಥಮಯೀ ಶುಭಾ ।
ವಿಶೇಷಃ ಕಥಿತಸ್ತಸ್ಯಾ ರೇವಾಸಾಗರಸಂಗಮೇ ॥ ೧೧ ॥
ಆಗಚ್ಛಂತೀಂ ನೃಪಶ್ರೇಷ್ಠ ದೃಷ್ಟ್ವಾ ರೇವಾಂ ಮಹೋದಧಿಃ ।
ಪ್ರಣಮ್ಯ ಚ ಪುನರ್ದೇವೀಂ ಸಂಗಮೇ ರೇವಯಾಸಹ ॥ ೧೨ ॥

---

೬. ನಾನು ಲೋಕಗಳಲ್ಲಿ ದುರ್ಲಭವಾದ ಪ್ರಶ್ನೆಗಳನ್ನೆಲ್ಲ ನಿನ್ನ ಅನುಗ್ರಹ ದಿಂದ ಬಂಧುಗಳೊಡನೆ ಕೇಳಿದೆನು.

೭. ಸಕಲ ಪ್ರಶ್ನೆಗಳನ್ನರಿತವರಲ್ಲಿ ಉತ್ತಮನಾದ ಮುನಿಯೆ! ಉತ್ತಮ ವಾದ ಈ ಒಂದು ಪ್ರಶ್ನೆಯನ್ನು ಕೇಳಿ ಬಂಧುಗಳೊಡನೆ ಅಲ್ಲಿಗೆ ಹೋಗುವೆನು.

೮. ಶ್ರೀ ಮಾರ್ಕಂಡೇಯನು ಹೇಳುತ್ತಾನೆ:—ಮಹಾ ಪ್ರಾಜ್ಞನಾದ ಧರ್ಮರಾಯನೆ! ಇಂತಹ ಧರ್ಮಬುದ್ಧಿಯುಳ್ಳ ನಿನಗೆ ಮೂರು ಲೋಕಗಳಲ್ಲಿ ದುರ್ಲಭವಾದುದು ಯಾವುದೂ ಇರುವುದಿಲ್ಲ.

೯. ಯುಧಿಷ್ಠಿರ! ಧರ್ಮಾರ್ಥ, ಕಾಮ, ಮೋಕ್ಷಗಳನ್ನು ಅರಿತವನು ಅವುಗಳನ್ನು ಆಯಾ ಕಾಲಗಳಲ್ಲಿ ಅನುಷ್ಠಾನ ಮಾಡಬೇಕು.

೧೦. ಆದುದರಿಂದ ನಿನ್ನ ಈ ಪ್ರಶ್ನೆಗೆ ಶುಭಕರವಾದ ಉತ್ತರವನ್ನು ಹೇಳು ವೆನು. ಇದನ್ನು ಕೇಳಿದ ಮಾನವರು ಸಕಲ ಪಾಪಗಳಿಂದ ಮುಕ್ತರಾಗುವರು.

೧೧. ನದಿಗಳಲ್ಲಿ ಉತ್ತಮವಾದ ನರ್ಮದಾನದಿಯು ಸಮಸ್ತ ತೀರ್ಥ ರೂಪವಾದುದು. ಅದರೆ ರೇವಾಸಾಗರಸಂಗಮದಲ್ಲಿ ವಿಶೇಷವು ಉಕ್ತವಾಗಿದೆ.

೧೨–೧೬. ಸಮುದ್ರರಾಜನು ರೇವಾಸಂಗಮದಲ್ಲಿ ಬರುತ್ತಿರುವ ನರ್ಮದೆ ಯನ್ನು ನೋಡಿ ನಮಸ್ಕರಿಸಿ ಇವಳು ಯಾರೆಂದು ಮನಸ್ಸಿನಲ್ಲಿ ಆಲೋಚಿಸಿ ಉತ್ತಮ ಲಿಂಗೋದ್ಭವಳಾದ ನರ್ಮದೆಯೆಂದು ಭಾವಿಸಿ ಹೊರಳಾಡುತ್ತ

ಸಂಚಿಂತ್ಯ ಮನಸಾ ಕೇಯಮಿತಿ ಮಾಂ ವೈ ಸರಿದ್ವರಾ ।
ಜ್ಞಾತ್ವಾ ಸಂಚಿಂತ್ಯ ಮನಸಾ ರೇವಾಂ ಲಿಂಗೋದ್ಭವಾಂ ಪರಾಂ ॥ ೧೩ ॥
ಉತಸ್ಥೌ ಸಂಮುಖಸ್ತಾತ ಗತೋ ರೇವಾಂ ಮಹೋದಧಿಃ ।
ಸಮುದ್ರೇ ನರ್ಮದಾ ಯತ್ರ ಪ್ರವಿಷ್ಟಾಽಸ್ತಿ ಮಹಾನದೀ ॥ ೧೪ ॥
ತತ್ರ ದೇವಾಧಿದೇವಸ್ಯ ಸಮುದ್ರೇ ಲಿಂಗಮುತ್ಥಿತಂ ।
ಲಿಂಗೋದ್ಭೂತಾ ಮಹಾಭಾಗಾ ನರ್ಮದಾ ಸರಿತಾಂ ವರಾ ॥ ೧೫ ॥
ಲಯಂ ಗತಾ ತತ್ರ ಲಿಂಗೇ ತೇನ ಪುಣ್ಯತಮಾ ಹಿ ಸಾ ।
ನರ್ಮದಾಯಾಂ ವಸನ್ನಿತ್ಯಂ ನರ್ಮದಾಂಬು ಪಿಬನ್ ಸದಾ ।
ದೀಕ್ಷಿತಃ ಸರ್ವಯಜ್ಞೇಷು ಸೋಮಪಾನಂ ದಿನೇ ದಿನೇ ॥ ೧೬ ॥
ಸಂಗಮೇ ತತ್ರ ಯಃ ಸ್ನಾತ್ವಾ ಲೋಟಣೇಶ್ವರಮರ್ಚಯೇತ್ ।
ಸೋಶ್ವಮೇಧಸ್ಯ ಯಜ್ಞಸ್ಯ ಫಲಂ ಪ್ರಾಪ್ನೋತಿ ಮಾನವಃ ॥ ೧೭ ॥
ಮಾನಸಂ ವಾಚಿಕಂ ಪಾಪಂ ಕರ್ಮಣಾ ಯತ್ಕೃತಂ ನೃಪ ।
ಲೋಟಣೇಶ್ವರಮಾಸಾದ್ಯ ಸರ್ವಂ ವಿಲಯತಾಂ ವ್ರಜೇತ್ ॥ ೧೮ ॥
ಕಾರ್ತಿಕ್ಯಾಂ ತು ವಿಶೇಷೇಣ ಕಥಿತಂ ಶಂಕರೇಣ ತು ।
ತಚ್ಛೃಣುಷ್ವ ನೃಪಶ್ರೇಷ್ಠ ಸರ್ವಪಾಪಾಽಪನೋದನಂ ॥ ೧೯ ॥
ಸಂಪ್ರಾಪ್ತಾಂ ಕಾರ್ತಿಕೀಂ ದೃಷ್ಟ್ವಾ ಗತ್ವಾ ತತ್ರ ನೃಪೋತ್ತಮ ।
ಚತುರ್ದಶ್ಯಾಮುಪೋಷ್ಯೈವ ಸ್ನಾತ್ವಾ ವೈ ನರ್ಮದಾಜಲೇ ॥ ೨೦ ॥

---

ಅಭಿಮುಖವಾಗಿ ಹೋದನು. ನರ್ಮದಾನದಿಯು ಪ್ರವೇಶಿಸಿದ ಸಮುದ್ರದ ಭಾಗದಲ್ಲಿ ಮಹೇಶ್ವರಲಿಂಗವು ಉದ್ಭವಿಸಿತು. ನದಿಗಳಲ್ಲಿ ಉತ್ತಮವಾದ ಲಿಂಗೋದ್ಭೂತವಾದ ನರ್ಮದಾನದಿಯು ಆ ಲಿಂಗದಲ್ಲಿ ಅಡಗಿಹೋದುದರಿಂದ ಅದು ಪುಣ್ಯಕರವಾದುದು. ನರ್ಮದಾನದಿಯಲ್ಲಿ ವಾಸಮಾಡುತ್ತ ಆ ನದಿಯ ನೀರನ್ನು ಕುಡಿಯುತ್ತಿರುವವನು ಸಮಸ್ತ ಯಜ್ಞಗಳಲ್ಲಿಯೂ ದೀಕ್ಷೆಗೊಂಡು ಪ್ರತಿದಿನವೂ ಸೋಮಪಾನಮಾಡಿದವನಂತಾಗುವನು.

೧೭. ಆ ಸಂಗಮದಲ್ಲಿ ಮಿಂದು ಲೋಟಣೇಶ್ವರನನ್ನರ್ಚಿಸಿದವನು ಅಶ್ವಮೇಧಯಾಗದ ಫಲವನ್ನು ಹೊಂದುವನು.

೧೮. ಆ ಲೋಟಣೇಶ್ವರದಲ್ಲಿ ವಾಚಿಕ, ಮಾನಸಿಕ, ಕಾಯಿಕ ಪಾಪಗಳು ಅಡಗಿಹೋಗುವುವು.

೧೯. ಶಂಕರನು ಕಾರ್ತಿಕ ಶುದ್ಧ ಚತುರ್ದಶೀ ದಿನ ಅಲ್ಲಿ ಸಕಲ ಪಾಪಗಳನ್ನು ಪರಿಹರಿಸುವ ಒಂದು ವಿಧಿಯನ್ನು ಹೇಳಿರುವನು ಅದನ್ನು ಕೇಳು.

೨೦–೨೧. ಕಾರ್ತಿಕ ಶುದ್ಧ ಚತುರ್ದಶಿಯು ಬರಲು ರೇವಾಸಾಗರ ಸಂಗಮಕ್ಕೆ ಹೋಗಿ ಮಿಂದು ಉಪವಾಸಮಾಡಿ ಪಿತೃಗಳಿಗೆ ತರ್ಪಣಗೈದು

ಸಂತರ್ಪ್ಯ ಪಿತೃದೇವಾಂಶ್ಚ ಶ್ರಾದ್ಧಂ ಕೃತ್ವಾ ಯಥಾವಿಧಿ ।
ರಾತ್ರೌ ಜಾಗರಣಂ ಕುರ್ಯಾತ್ಸಂಪೂಜ್ಯ ಲೋಟಣೇಶ್ವರಂ ॥ ೨೦ ॥
ಸಫಲಂ ಜೀವಿತಂ ತಸ್ಯ ಸಫಲಂ ತಸ್ಯ ಚೇಷ್ಟಿತಂ ।
ಪಂಗವಸ್ತೇ ನ ಸಂದೇಹೋ ಜನ್ಮ ತೇಷಾಂ ನಿರರ್ಥಕಂ ॥ ೨೨ ॥
ಏಕಾಗ್ರಮನಸಾ ಯೈಸ್ತು ನ ದೃಷ್ಟೋ ಲೋಟಣೇಶ್ವರಃ ।
ಪಿಶಾಚತ್ವಂ ವಿಯೋನಿತ್ವಂ ನ ಭವೇತ್ತಸ್ಯ ವೈ ಕುಲೇ ॥ ೨೩ ॥
ಸಂಗಮೇ ತತ್ರ ಯೋ ಗತ್ವಾ ಸ್ನಾನಂ ಕೃತ್ವಾ ಯಥಾವಿಧಿ ।
ಪುಣ್ಯೈಶ್ಚೈವ ತಥಾ ಕುರ್ಯಾದ್ಗೀತೈರ್ನೃತ್ಯೈಃ ಪ್ರಬೋಧನಂ ॥ ೨೪ ॥
ತತಃ ಪ್ರಭಾತಾಂ ರಜನೀಂ ದೃಷ್ಟ್ವಾ ನತ್ವಾ ಮಹೋದಧಿಂ ।
ಆಮಂತ್ರ್ಯ ಸ್ನಾನವಿಧಿನಾ ಸ್ನಾನಂ ತತ್ರ ತು ಕಾರಯೇತ್ ॥ ೨೫ ॥
ಓಂ ನಮೋ ವಿಷ್ಣುರೂಪಾಯ ತೀರ್ಥನಾಥಾಯ ತೇ ನಮಃ ।
ಸಾನ್ನಿಧ್ಯಂ ಕುರು ಮೇ ದೇವ ಸಮುದ್ರ ಲವಣಾಂಭಸಿ ॥ ೨೬ ॥

॥ ಇತ್ಯಾಮಂತ್ರಣಮಂತ್ರಃ ॥

ಅಗ್ನಿಶ್ಚ ತೇಜೋ ಮೃಡಯಾಚ ದೇಹೋ
ರೇತೋಧಾ ವಿಷ್ಣುರಮೃತಸ್ಯ ನಾಭಿಃ ।
ಏವಂ ಬ್ರುವನ್ ಪಾಂಡವ ಸತ್ಯವಾಕ್ಯಂ
ತತೋಽವಗಾಹೇತ ಪತಿಂ ನದೀನಾಂ ॥ ೨೭ ॥

॥ ಇತಿ ಸ್ನಾನಮಂತ್ರಃ ॥

---

ವಿಧಿಯಂತೆ ಶ್ರಾದ್ಧಮಾಡಿ ಲೋಟಣೇಶ್ವರನನ್ನು ಪೂಜಿಸಿ ರಾತ್ರಿ ಜಾಗರಣೆ ಮಾಡಬೇಕು. ಅವನ ಜೀವನವೂ, ಕಾರ್ಯವೂ ಸಫಲವಾಗುವುವು.

೨೨–೨೫. ಏಕಾಗ್ರಮನಸ್ಸಿನಿಂದ ಲೋಟಣೇಶ್ವರನನ್ನು ನೋಡದವರು ನಿಶ್ಚಯವಾಗಿಯೂ ಕುಂಟರು. ಅವರ ಜನ್ಮವು ನಿಷ್ಫಲವು. ಆ ಸಂಗಮಕ್ಕೆ ಹೋಗಿ ವಿಧಿಯಂತೆ ಮಿಂದವರ ಕುಲದಲ್ಲಿ ಪಿಶಾಚತ್ವವೂ, ಪ್ರೇತತ್ವವೂ ಉಂಟಾಗುವುದಿಲ್ಲ. ಬೆಳಗ್ಗೆ ಪುಣ್ಯಕರವಾದ ಗೀತ ನೃತ್ಯಗಳಿಂದ ಶಂಕರನನ್ನು ಎಚ್ಚರಿಸಬೇಕು. ಅನಂತರ ಸಾಗರವನ್ನು ನೋಡಿ ನಮಸ್ಕರಿಸಿ ಆಮಂತ್ರಣ ಮಾಡಿ ವಿಧಿಯಂತೆ ಸ್ನಾನಮಾಡಬೇಕು.

೨೬. "ವಿಷ್ಣುರೂಪನೂ, ತೀರ್ಥಸ್ವಾಮಿಯೂ ಆದ ಸಮುದ್ರರಾಜನೆ! ನಿನಗೆ ನಮಸ್ಕಾರವು. ನೀನು ಈ ಲವಣಸಮುದ್ರದಲ್ಲಿ ಸನ್ನಿಹಿತನಾಗು." (ಇದು ಆಮಂತ್ರಣ ಮಂತ್ರವು).

೨೭. "ಅಗ್ನಿಶ್ಚ ತೇಜೋ ಮೃಡಯಾಚ ದೇಹೋ ರೇತೋಧಾ ವಿಷ್ಣುರಮೃತಸ್ಯ ನಾಭಿಃ" ಈ ಮಂತ್ರವನ್ನು ಹೇಳುತ್ತ ಸಮುದ್ರದಲ್ಲಿ ಸ್ನಾನಮಾಡಬೇಕು.

ಆಜನ್ಮಶತಸಾಹಸ್ರಂ ಯತ್ಪಾಪಂ ಕೃತವಾನ್ನರಃ ।
ಸಕೃತ್ಸ್ನಾನಾದ್ವ್ಯಪೋಹೇತ ಪಾಪೌಘಂ ಲವಣಾಂಭಸಿ ॥ ೨೮ ॥
ಅನ್ಯಥಾ ಹಿ ಕುರುಶ್ರೇಷ್ಠ ದೇವಯೋನಿರಸೌ ವಿಭುಃ ।
ಕುಶಾಗ್ರೇಣಾಽಪಿ ವಿಬುಧೈರ್ನ ಸ್ಪ್ರಷ್ಟವ್ಯೋ ಮಹಾರ್ಣವಃ ॥ ೨೯ ॥
ಸರ್ವರತ್ನಪ್ರಧಾನಸ್ತ್ವಂ ಸರ್ವರತ್ನಾಕರಾಕರ ।
ಸರ್ವಾಽಮರಪ್ರಧಾನೇಶ ಗೃಹಾಣಾರ್ಘ್ಯಂ ನಮೋಽಸ್ತು ತೇ ॥ ೩೦ ॥
॥ ಇತಿ ಅರ್ಘ್ಯಮಂತ್ರಃ ॥
ಪಿತೃದೇವಮನುಷ್ಯಾಂಶ್ಚ ಸಂತರ್ಪ್ಯ ತದನಂತರಂ ।
ಉತ್ತೀರ್ಯ ತೀರೇ ತಸ್ಯೈವ ಪಂಚಭಿರ್ದ್ವಿಜಪುಂಗವೈಃ ॥ ೩೧ ॥
ಶ್ರಾದ್ಧಂ ಸಮಾಚರೇತ್ಪಶ್ಚಾಲ್ಲೋಕಪಾಲಾನುರೂಪಿಭಿಃ ।
ಕೃತ್ವಾಗ್ರೇ ಲೋಕಪಾಲಾಂಸ್ತು ಪ್ರತಿಷ್ಠಾಪ್ಯ ಯಥಾವಿಧಿ ॥ ೩೨ ॥
ಸಂಪೂಜ್ಯ ಚ ಯಥಾನ್ಯಾಯಂ ತಾನೇವ ಬ್ರಾಹ್ಮಣೈಃ ಸಹ ।
ಸುಕೃತಂ ದುಷ್ಕೃತಂ ಪಶ್ಚಾತ್ತೇಭ್ಯಃ ಸರ್ವಂ ನಿವೇದಯೇತ್ ॥ ೩೩ ॥
ಬಾಲ್ಯಾತ್ಪ್ರಭೃತಿ ಯತ್ಪಾಪಂ ಕೃತಂ ವಾರ್ಧಕಯೌವನೇ ।
ಪ್ರಖ್ಯಾಪಯಿತ್ವಾ ತೇಭ್ಯೋಽಗ್ರೇ ಲೋಕಪಾಲಾನ್ನಿಮಂತ್ರಯೇತ್ ॥ ೩೪ ॥

---

೨೮. ಆ ಲವಣಸಮುದ್ರದಲ್ಲಿ ಒಂದು ಸಾರಿ ಸ್ನಾನಮಾಡುವುದರಿಂದ ಮಾನವನು ನೂರುಸಾವಿರ ಜನ್ಮಗಳಲ್ಲಿ ಮಾಡಿದ ಪಾಪವು ಪರಿಹಾರವಾಗುವುದು.

೨೯. ದೇವತೆಗಳಿಗೂ ಕಾರಣವಾದ ಈ ಸಮುದ್ರವನ್ನು ಬೇರೆ ವಿಧದಿಂದ ದರ್ಭೆಯ ಕೊನೆಯಿಂದಲೂ ಮುಟ್ಟಕೂಡದು.

೩೦. "ನೀನು ಸಕಲರತ್ನಗಳಲ್ಲಿ ಪ್ರಧಾನನೂ, ಸಮಸ್ತ ರತ್ನಗಳಿಗೆ ಆಶ್ರಯನೂ, ಸಮಸ್ತ ದೇವತೆಗಳಿಗೆ ಮುಖ್ಯ ಪ್ರಭುವೂ ಆದ ನೀನು ಅರ್ಘ್ಯವನ್ನು ಸ್ವೀಕರಿಸು. ನಿನಗೆ ನಮಸ್ಕಾರವು." (ಇದು ಅರ್ಘ್ಯಮಂತ್ರವು).

೩೧–೩೨. ಅನಂತರ ಪಿತೃದೇವಮನುಷ್ಯರಿಗೆ ತರ್ಪಣಮಾಡಿ ಮೇಲಕ್ಕೆ ಬಂದು ಅದೇ ದಡದಲ್ಲಿ ವಿಧಿಯಂತೆ ಲೋಕಪಾಲಕರನ್ನು ಪ್ರತಿಷ್ಠೆಮಾಡಿ ಆ ಲೋಕಪಾಲಕರೂಪವಾದ ಐದು ಮಂದಿ ಬ್ರಾಹ್ಮಣರೊಡಗೂಡಿ ಶ್ರಾದ್ಧಗೈಯಬೇಕು.

೩೩. ಆ ಬ್ರಾಹ್ಮಣರೊಡನೆ ಆ ಲೋಕಪಾಲಕರನ್ನೇ ವಿಧಿಯಂತೆ ಪೂಜಿಸಿ ಪುಣ್ಯಪಾಪಗಳನ್ನೆಲ್ಲ ಅವರಿಗೆ ತಿಳಿಸಬೇಕು.

೩೪. ಬಾಲ್ಯ, ಯೌವನ, ವಾರ್ಧಕಗಳಲ್ಲಿ ಮಾಡಿದ ಪಾಪವನ್ನು ಅವರ ಮುಂದೆ ಪ್ರಕಟಿಸಿ ಲೋಕಪಾಲಕರನ್ನು ನಿಮಂತ್ರಣಮಾಡಬೇಕು.

ಬಾಲ್ಯಾತ್ಪ್ರಭೃತಿ ಯತ್ಕಿಂಚಿತ್ಕೃತಮಾಜನ್ಮತೋಽಶುಭಂ ।
ವಿಪ್ರೇಭ್ಯಃ ಕಥಿತಂ ಸರ್ವಂ ತತ್ಸಾನ್ನಿಧ್ಯಂ ಸ್ಥಿತೇಷು ಮೇ ॥ ೩೫ ॥
ಇತ್ಯುಕ್ತ್ವಾ ಸ ಲುಠೇತ್ಪಶ್ಚಾತ್ತೇಭ್ಯೋಽಗ್ರೇಣ ಚ ಸಂಮುಖಂ ।
ಅನುಮಾನ್ಯ ಚ ತಾನ್ಸಂಚ ಪಶ್ಚಾತ್ಸ್ನಾನಂ ಸಮಾಚರೇತ್ ॥ ೩೬ ॥
ಶ್ರಾದ್ಧಂ ಚ ಕಾರ್ಯಂ ವಿಧಿವತ್ಪಿತೃಭ್ಯೋ ನೃಪಸತ್ತಮ ।
ಏವಂ ಕೃತೇ ನೃಪ ಶ್ರೇಷ್ಠ ಸರ್ವಪಾಪಕ್ಷಯೋ ಭವೇತ್ ॥ ೩೭ ॥
ಜಿಜ್ಞಾಸಾರ್ಥಂ ತು ಯಃ ಕಶ್ಚಿದಾತ್ಮಾನಂ ಜ್ಞಾತುಮಿಚ್ಛತಿ ।
ಶುಭಾಽಶುಭಂ ಚ ಯತ್ಕರ್ಮ ತಸ್ಯ ನಿಷ್ಠಾಮಿಮಾಂ ಶೃಣು ॥ ೩೮ ॥
ಸ್ನಾತ್ವಾ ತತ್ರ ಮಹಾತೀರ್ಥೇ ಲುಠಮಾನೋ ವ್ರಜೇನ್ನರಃ ।
ಪಾಪಕರ್ಮಾನ್ಯತೋ ಯಾತಿ ಧರ್ಮಕರ್ಮಾ ವ್ರಜೇನ್ನದೀಂ ॥ ೩೯ ॥
ಪಾಪಕರ್ಮಾ ತತೋ ಜ್ಞಾತ್ವಾ ಪಾಪಂ ಮೇ ಪೂರ್ವಸಂಚಿತಂ ।
ಸ್ನಾತ್ವಾ ತೀರ್ಥವರೇ ತಸ್ಮಿನ್ದಾನಂ ದದ್ಯಾದ್ಯಥಾವಿಧಿ ॥ ೪೦ ॥
ಲೋಟಣೇಶ್ವರಮಭ್ಯರ್ಚ್ಯ ಸರ್ವಪಾಪೈಃ ಪ್ರಮುಚ್ಯತೇ ।
ಅವಕ್ರಗಮನಂ ಗತ್ವಾ ಮುಚ್ಯತೇ ಸರ್ವಪಾತಕೈಃ ॥ ೪೧ ॥

---

೩೫. "ಹುಟ್ಟಿದ ಮೊದಲ್ಗೊಂಡು ಮಾಡಿದ ಪಾಪವನ್ನು ಲೋಕಪಾಲಕರ ಸಾನ್ನಿಧ್ಯವುಳ್ಳ ಬ್ರಾಹ್ಮಣರಿಗೆ ಹೇಳಿರುತ್ತೇನೆ."

೩೬. ಹೀಗೆ ಹೇಳಿ ಆ ಲೋಕಪಾಲಕರ ಮುಂದೆ ಹೊರಳಾಡಬೇಕು. ಅವರನ್ನು ಒಪ್ಪಿಸಿ ಸ್ನಾನಮಾಡಬೇಕು.

೩೭. ಅನಂತರ ಪಿತೃಗಳಿಗೆ ವಿಧಿಯಂತೆ ಶ್ರಾದ್ಧಮಾಡಬೇಕು. ಮಹಾರಾಜ! ಹೀಗೆ ಮಾಡಿದರೆ ಸಮಸ್ತ ಪಾಪಗಳೂ ನಾಶವಾಗುವುವು.

೩೮. ಯಾವನಾದರೂ ತನ್ನ ಶುಭಾಶುಭ ಕರ್ಮವನ್ನು ತಿಳಿಯಬಯಸಿದರೆ ಅವನ ಕರ್ತವ್ಯವೇನೆಂಬುದನ್ನು ಹೇಳುತ್ತೇನೆ; ಕೇಳು.

೩೯. ನರನು ಆ ಮಹಾತೀರ್ಥದಲ್ಲಿ ಮಿಂದು ಹೊರಳಾಡುತ್ತ ಹೋಗುತ್ತಿದ್ದರೆ ಅವನು ಪುಣ್ಯಕರ್ಮವನ್ನು ಮಾಡಿದ್ದರೆ ನದಿಗೆ ಹೋಗುವನು. ಪಾಪಕರ್ಮವನ್ನಾಚರಿಸಿದ್ದರೆ ಬೇರೊಂದೆಡೆಗೆ ಹೋಗುವನು.

೪೦. ಅದರಿಂದ ಪಾಪಿಯು ತಾನು ಹಿಂದೆ ಮಾಡಿದ ಪಾಪವನ್ನರಿತು ಉತ್ತಮವಾದ ಆ ತೀರ್ಥದಲ್ಲಿ ಮಿಂದು ವಿಧಿಯಂತೆ ದಾನಮಾಡಬೇಕು.

೪೧. ಲೋಟಣೇಶ್ವರನ ಪೂಜೆಯಿಂದ ಸಮಸ್ತ ಪಾಪಗಳೂ ಪರಿಹಾರವಾಗುವುವು. ಋಜುಮಾರ್ಗದಿಂದ ನದಿಗೆ ಹೋದವನು ಸಮಸ್ತಪಾಪಗಳಿಂದಲೂ ಮುಕ್ತನಾಗುವನು.

ತಸ್ಮಾತ್ಸರ್ವಪ್ರಯತ್ನೇನ ಜ್ಞಾತ್ವೈವಂ ನೃಪಸತ್ತಮ ।
ಸ್ನಾತವ್ಯಂ ಮಾನವೈಸ್ತತ್ರ ಯತ್ರ ಸನ್ನಿಹಿತೋ ಹರಃ ॥ ೪೨ ॥
ಏವಂ ಸ್ನಾತ್ವಾ ವಿಧಾನೇನ ಬ್ರಾಹ್ಮಣಾನ್ವೇದಪಾರಗಾನ್ ।
ಪೂಜಯೇತ್ಪೃಥಿವೀಪಾಲ ಸರ್ವಪಾಪೋಪಶಾಂತಯೇ ॥ ೪೩ ॥
ಏವಂ ಗುಣವಿಶಿಷ್ಟಂ ಹಿ ತತ್ತೀರ್ಥಂ ನೃಪಸತ್ತಮ ।
ತಸ್ಯ ತೀರ್ಥಸ್ಯ ಮಾಹಾತ್ಮ್ಯಂ ಶೃಣುಷ್ವೈಕಮನಾ ನೃಪ ॥ ೪೪ ॥
ತತ್ರ ತೀರ್ಥೇ ನರಃ ಸ್ನಾತ್ವಾ ಸಂತರ್ಪ್ಯ ಪಿತೃದೇವತಾಃ ।
ಶ್ರಾದ್ಧಂ ಯಃ ಕುರುತೇ ತತ್ರ ಪಿತೄಣಾಂ ಭಕ್ತಿಭಾವಿತಃ ॥ ೪೫ ॥
ದಾನಂ ದದಾತಿ ವಿಪ್ರೇಭ್ಯೋ ಗೋಭೂತಿಲಹಿರಣ್ಯಕಂ ।
ಷಷ್ಟಿವರ್ಷಸಹಸ್ರಾಣಿ ಕೋಟಿವರ್ಷಶತಾನಿಚ ॥ ೪೬ ॥
ವಿಮಾನವರಮಾರೂಢಃ ಸ್ವರ್ಗಲೋಕೇ ಮಹೀಯತೇ ।
ನರ್ಮದಾ ಸರ್ವತೀರ್ಥೇಭ್ಯಃ ಸ್ನಾನೇ ದಾನೇ ಚ ಯತ್ಫಲಂ ॥ ೪೭ ॥
ತತ್ಫಲಂ ಸಮವಾಪ್ನೋತಿ ರೇವಾಸಾಗರಸಂಗಮೇ ।
ಸುವರ್ಣಂ ರಜತಂ ತಾಮ್ರಂ ಮಣಿಮೌಕ್ತಿಕಭೂಷಣಂ ॥ ೪೮ ॥
ಗೋವೃಷಂ ಚ ಮಹೀಂ ಧಾನ್ಯಂ ತತ್ರ ದತ್ವಾಽಕ್ಷಯಂ ಫಲಂ ।
ಶುಭಸ್ಯಾಽಪ್ಯಶುಭಸ್ಯಾಽಪಿ ತತ್ರ ತೀರ್ಥೇನ ಸಂಶಯಃ ॥ ೪೯ ॥

---

೪೨. ನೃಪವರ್ಯನೆ! ಆದುದರಿಂದ ಪ್ರಯತ್ನಿಸಿ ಇದನ್ನರಿತು ಶಂಕರನು ಸನ್ನಿಹಿತನಾಗಿರುವ ಆ ಕ್ಷೇತ್ರದಲ್ಲಿ ಸ್ನಾನಮಾಡಬೇಕು.

೪೩. ಮಹಾರಾಜ! ಸಕಲ ಪಾಪಗಳ ಪರಿಹಾರಕ್ಕಾಗಿ ಅಲ್ಲಿ ಹೀಗೆ ವಿಧಿಯಂತೆ ಮಿಂದು ವೇದಪಾರಂಗತರಾದ ಬ್ರಾಹ್ಮಣರನ್ನು ಪೂಜಿಸಬೇಕು.

೪೪. ಆ ತೀರ್ಥವು ಇಂತಹ ಗುಣವುಳ್ಳುದು. ಆ ತೀರ್ಥದ ಮಾಹಾತ್ಮ್ಯವನ್ನು ಒಮ್ಮನಸ್ಸಿನಿಂದ ಕೇಳು.

೪೫–೪೯. ಮಾನವನು ಆ ತೀರ್ಥದಲ್ಲಿ ಮಿಂದು ಪಿತೃದೇವತೆಗಳಿಗೆ ತರ್ಪಣಮಾಡಿ ಭಕ್ತಿಯಿಂದ ಶ್ರಾದ್ಧಮಾಡಿ ಬ್ರಾಹ್ಮಣರಿಗೆ ಗೋ, ಭೂ, ತಿಲ, ಹಿರಣ್ಯಗಳನ್ನು ದಾನಮಾಡಿದರೆ ನೂರುಕೋಟಿ ಅರುವತ್ತುಸಾವಿರ ವರ್ಷಗಳ ಕಾಲ ಉತ್ತಮವಾದ ವಿಮಾನವನ್ನೇರಿ ಸ್ವರ್ಗಲೋಕದಲ್ಲಿ ಪೂಜ್ಯನಾಗುವನು. ನರ್ಮದಾದಿ ಸಕಲ ತೀರ್ಥಗಳಲ್ಲಿ ಮಾಡಿದ ಸ್ನಾನದಾನಗಳಿಂದಾಗುವ ಫಲವನ್ನು ಮಾನವನು ರೇವಾಸಾಗರಸಂಗಮದಲ್ಲಿ ಹೊಂದುವನು. ಆ ತೀರ್ಥದಲ್ಲಿ ಸುವರ್ಣ, ರಜತ, ತಾಮ್ರ, ಮಣಿ, ಮುತ್ತು, ವೃಷಭ, ಭೂಮಿ, ಧಾನ್ಯಗಳನ್ನು ದಾನಮಾಡಿದರೆ ಅಕ್ಷಯಫಲವುಂಟಾಗುವುದು. ಅಲ್ಲಿ ಶುಭವಾಗಲಿ ಅಶುಭವಾಗಲಿ ಅಕ್ಷಯವಾಗುವುದು.

ತತ್ರ ತೀರ್ಥೇ ನರಃ ಕಶ್ಚಿತ್ಪ್ರಾಣತ್ಯಾಗಂ ಯುಧಿಷ್ಠಿರ ।
ಕರೋತಿ ಭಕ್ತ್ಯಾ ವಿಧಿವತ್ತಸ್ಯ ಪುಣ್ಯಫಲಂ ಶೃಣು ॥ ೫೦ ॥
ಕೋಟಿವರ್ಷಂ ತು ವರ್ಷಾಣಾಂ ಕ್ರೀಡಿತ್ವಾ ಶಿವಮಂದಿರೇ ।
ವೇದವೇದಾಂಗವಿದ್ವಿಪ್ರೋ ಜಾಯತೇ ವಿಮಲೇ ಕುಲೇ ॥ ೫೧ ॥
ಪುತ್ರಪೌತ್ರಸಮೃದ್ಧೋಽಸೌ ಧನಧಾನ್ಯಸಮನ್ವಿತಃ ।
ಸರ್ವವ್ಯಾಧಿವಿನಿರ್ಮುಕ್ತೋ ಜೀವೇಚ್ಚ ಶರದಾಂಶತಂ ॥ ೫೨ ॥
ಅಪಿ ದ್ವಾದಶಯಾತ್ರಾಸು ಸೋಮನಾಥೇ ಯದರ್ಚಿತೇ ।
ಕಾರ್ತಿಕ್ಯಾಂ ಕೃತ್ತಿಕಾಯೋಗೇ ತತ್ಪುಣ್ಯಂ ಲೋಟಣೇಶ್ವರೇ ॥ ೫೩ ॥
ಗಯಾ ಗಂಗಾ ಕುರುಕ್ಷೇತ್ರೇ ನೈಮಿಷೇ ಪುಷ್ಕರೇ ತಥಾ ।
ತತ್ಪುಣ್ಯಂ ಲಭತೇ ಪಾರ್ಥ ಲೋಟಣೇಶ್ವರದರ್ಶನಾತ್ ॥ ೫೪ ॥
ಯಃ ಶೃಣೋತಿ ನರೋ ಭಕ್ತ್ಯಾ ಪಠ್ಯಮಾನಮಿದಂ ಶುಭಂ ।
ಸರ್ವಪಾಪವಿನಿರ್ಮುಕ್ತೋ ರುದ್ರಲೋಕಂ ಸ ಗಚ್ಛತಿ ॥ ೫೫ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ
ಪಂಚಮೇ ಆವಂತ್ಯಖಂಡೇ ತೃತೀಯೇ ರೇವಾಖಂಡೇ
"ಲೋಟಣೇಶ್ವರತೀರ್ಥಮಾಹಾತ್ಮ್ಯವರ್ಣನಂ"ನಾಮ
ವಿಂಶತ್ಯುತ್ತರದ್ವಿಶತತಮೋಽಧ್ಯಾಯಃ

---

೫೦. ಯುಧಿಷ್ಠಿರ! ಆ ತೀರ್ಥದಲ್ಲಿ ವಿಧಿಯಂತೆ ಪ್ರಾಣವನ್ನು ತ್ಯಜಿಸಿದ ಮಾನವನಿಗೆ ಉಂಟಾಗುವ ಫಲವನ್ನು ಕೇಳು.

೫೧. ಕೋಟಿ ವರ್ಷಗಳಕಾಲ ಶಿವಾಲಯದಲ್ಲಿ ಕ್ರೀಡಿಸಿ ಶುದ್ಧವಾದ ವಂಶದಲ್ಲಿ ವೇದವೇದಾಂಗವನ್ನರಿತ ಬ್ರಾಹ್ಮಣನಾಗಿ ಜನಿಸುವನು.

೫೨. ಇವನು ಪುತ್ರಪೌತ್ರರಿಂದ ಸಮೃದ್ಧನೂ, ಧನಧಾನ್ಯಗಳಿಂದ ಕೂಡಿದವನೂ, ಸಕಲ ವ್ಯಾಧಿರಹಿತನೂ ಆಗಿ ನೂರು ವರ್ಷಕಾಲ ಜೀವಿಸುವನು.

೫೩. ಹನ್ನೆರಡುಸಾರಿ ಯಾತ್ರೆ ಮಾಡಿ ಸೋಮನಾಥನನ್ನು ಅರ್ಚಿಸಿದರೆ ಉಂಟಾಗುವ ಪುಣ್ಯವು ಕಾರ್ತಿಕಮಾಸದಲ್ಲಿ ಕೃತ್ತಿಕಾಯೋಗದಲ್ಲಿ ಲೋಟಣೇಶ್ವರದಲ್ಲಿ ಉಂಟಾಗುವುದು.

೫೪. ಯುಧಿಷ್ಠಿರ! ಲೋಟಣೇಶ್ವರನ ದರ್ಶನದಿಂದ ಗಯಾ, ಗಂಗಾ, ಕುರುಕ್ಷೇತ್ರ, ನೈಮಿಷ, ಪುಷ್ಕರಕ್ಷೇತ್ರಗಳಲ್ಲಿ ಲಭಿಸುವ ಫಲವು ದೊರೆಯುವುದು.

೫೫. ಹೇಳುತ್ತಿರುವ ಈ ಆಖ್ಯಾನವನ್ನು ಕೇಳುವ ಮನುಷ್ಯನು ಸಕಲ ಪಾಪಮುಕ್ತನಾಗಿ ರುದ್ರಲೋಕವನ್ನು ಸೇರುವನು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂಬ ಪ್ರಸಿದ್ಧವಾದ
ಶ್ರೀ ಸ್ಕಾಂದಮಹಾಪುರಾಣದ ಐದನೆಯ ಆವಂತ್ಯಖಂಡದ ಮೂರನೆಯ ರೇವಾಖಂಡದಲ್ಲಿ
"ಲೋಟಣೇಶ್ವರತೀರ್ಥಮಾಹಾತ್ಮ್ಯವರ್ಣನ"ವೆಂಬ
ಇನ್ನೂರಿಪ್ಪತ್ತನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

# ಅಥೈಕವಿಂಶದಧಿಕದ್ವಿಶತತಮೋಽಧ್ಯಾಯಃ

## ಹಂಸೇಶ್ವರತೀರ್ಥಮಾಹಾತ್ಮ್ಯವರ್ಣನಂ

ಶ್ರೀ ಮಾರ್ಕಂಡೇಯ ಉವಾಚ :—

ತತೋ ಗಚ್ಛೇತ್ತು ರಾಜೇಂದ್ರ ರೇವಾಯಾ ದಕ್ಷಿಣೇ ತಟೇ ।
ಕ್ರೋಶದ್ವಯಾಂತರೇ ತೀರ್ಥಂ ಮಾತೃತೀರ್ಥಾದನುತ್ತಮಂ ॥ ೧ ॥
ನಾಮ್ನಾ ಹಂಸೇಶ್ವರಂ ಪುಣ್ಯಂ ವೈಮನಸ್ಯವಿನಾಶನಂ ।
ಕಶ್ಯಪಸ್ಯ ಕುಲೇ ಜಾತೋ ಹಂಸೋ ದಾಕ್ಷಾಯಣೀಸುತಃ ॥ ೨ ॥
ಬ್ರಹ್ಮಣೋ ವಾಹನಂ ಜಾತಃ ಪುರಾ ತಪ್ತ್ವಾ ತಪೋ ಮಹತ್ ।
ಸೈಕದಾ ವಿಧಿನಿರ್ದೇಶಂ ವಿನಾ ವೈಯಗ್ರ್ಯಮಾಸ್ಥಿತಃ ॥ ೩ ॥
ಅಭಿಭೂತಃ ಶಿವಗಣೈಃ ಪ್ರಣನಾಶ ಯುಧಿಷ್ಠಿರ ।
ದಕ್ಷಯಜ್ಞಪ್ರಪಥನೇ ಕಾಂದಿಶೀಕೋ ವಿಧಿಂ ವಿನಾ ॥ ೪ ॥
ಬ್ರಹ್ಮಣಾ ಸಂಸ್ಮೃತೋಽಪ್ಯಾಶು ನಾಯಾತಿ ಸ ಯದಾ ಖಗಃ ।
ತದಾ ತಂ ಶಪ್ತವಾನ್ ಬ್ರಹ್ಮಾ ಪಾತಯಾಮಾಸ ವೈ ಪದಾತ್ ॥ ೫ ॥
ತತಃ ಸ ಶಪ್ತಮಾತ್ಮಾನಂ ಮತ್ವಾ ಹಂಸಸ್ತ್ವರಾನ್ವಿತಃ ।
ಪಿತಾಮಹಮುಪಾಗಮ್ಯ ಪ್ರಣಿಪತ್ಯೇದಮಬ್ರವೀತ್ ॥ ೬ ॥

---

## ಕನ್ನಡದ ಅನುವಾದ

### ಹಂಸೇಶ್ವರತೀರ್ಥಮಾಹಾತ್ಮ್ಯವರ್ಣನ

೧-೪. ಶ್ರೀ ಮಾರ್ಕಂಡೇಯನು ಹೇಳುತ್ತಾನೆ:—ಯುಧಿಷ್ಠಿರ! ಬಳಿಕ ರೇವಾನದಿಯ ದಕ್ಷಿಣದದಡದಲ್ಲಿ ನಾಲ್ಕುಮೈಲಿಗಳ ದೂರದಲ್ಲಿರುವ ಮಾತೃತೀರ್ಥಕ್ಕಿಂತ ಉತ್ತಮವಾದ ವೈಮನಸ್ಯವನ್ನು ನಾಶಗೊಳಿಸುವ ಹಂಸೇಶ್ವರತೀರ್ಥಕ್ಕೆ ಹೋಗಬೇಕು. ಹಿಂದೆ ಕಶ್ಯಪನ ವಂಶದಲ್ಲಿ ಜನಿಸಿದ ದಾಕ್ಷಾಯಣಿಯ ಮಗನಾದ ಹಂಸನು ಮಹಾ ತಪವನ್ನಾಚರಿಸಿ ಬ್ರಹ್ಮನಿಗೆ ವಾಹನವಾದನು. ಅವನು ಒಂದಾನೊಂದು ವೇಳೆ ಬ್ರಹ್ಮನ ಅಪ್ಪಣೆಯಿಲ್ಲದೆ ದಕ್ಷನ ಯಜ್ಞವಾಟಕ್ಕೆ ಹೋಗಿ ಶಿವಗಣಗಳಿಂದ ತಿರಸ್ಕೃತನಾಗಿ ಬ್ರಹ್ಮನನ್ನು ತ್ಯಜಿಸಿ ಭಯದಿಂದ ಅದೃಶ್ಯನಾದನು.

೫. ಆ ಹಂಸನು ಬ್ರಹ್ಮನು ಸ್ಮರಿಸಿದರೂ ಬಾರದಿರಲು ಆತನನ್ನು ಶಪಿಸಿ ಸ್ಥಾನಭ್ರಷ್ಟನನ್ನಾಗಿ ಮಾಡಿದನು.

೬. ಬಳಿಕ ಆ ಹಂಸನು ಬ್ರಹ್ಮನು ತನಗೆ ಶಾಪವನ್ನಿತ್ತುದನ್ನರಿತು ವೇಗದಿಂದ ಆ ಪಿತಾಮಹನೆಡೆಗೆ ಬಂದು ನಮಸ್ಕರಿಸಿ ಇಂತೆಂದನು.

ಹಂಸ ಉವಾಚ :—

ತಿರ್ಯಗ್ಯೋನಿಸಮುತ್ಪನ್ನಂ ಭವಾಂಛಪ್ತುಂ ನ ಚಾರ್ಹತಿ ।
ಸ್ವಭಾವ ಏವ ತಿರ್ಯಕ್ಷು ವಿವೇಕವಿಕಲಂ ಮನಃ ॥ ೭ ॥
ತಥಾಽಪಿ ದೇವ ಪಾಪೋಽಸ್ಮಿ ಯದಹಂ ಸ್ವಾಮಿನಂ ತ್ಯಜೇ ।
ಕಿಂ ತು ಧಾವದ್ಭಿರತ್ಯುಗ್ರೈರ್ಗಣೈಃ ಶಾರ್ವೈಃ ಪಿತಾಮಹ ।
ಸಹಸಾಽಹಂ ಭಯಾಕ್ರಾಂತಸ್ತ್ರಸ್ತಸ್ತ್ಯಕ್ತ್ವಾ ಪಲಾಯಿತಃ ॥ ೮ ॥
ಅದ್ಯಾಽಪಿ ಭಯಮೇವಾಽಹಂ ಪಶ್ಯನ್ನಸ್ಮಿ ವಿಭೋ ಪುರಃ ।
ತೇನ ಸ್ಮೃತೋಽಪಿ ಭವತಾ ನಾಽವ್ರಜಂ ಭವದಂತಿಕೇ ॥ ೯ ॥

ಮಾರ್ಕಂಡೇಯ ಉವಾಚ :—

ಇತಿ ಬ್ರುವನ್ನೇವ ಹಿ ಧಾತುರಗ್ರೇ
ಹಂಸಶ್ಚ ಸತ್ಯಕ್ಷಿಪೂಜ್ಯಃ ಸುದೀನಃ ।
ತಿರ್ಯಂಚಂ ಮಾಂ ಪಾಪಿನಂ ಮೂಢಬುದ್ಧಿಂ
ಪ್ರಭೋ ಪುರಃ ಪತಿತಂ ಪಾಹಿ ಪಾಹಿ ॥ ೧೦ ॥
ಏಕೋ ದೇವಸ್ತ್ವಂ ಹಿ ಸರ್ಗಸ್ಯ ಕರ್ತಾ
ನಾನಾವಿಧಂ ಸೃಷ್ಟಮೇತತ್ತ್ವಯೈವ ।
ಅಹಂ ಸೃಷ್ಟಸ್ತ್ವೀದೃಶೋ ಯತ್ತ್ವಯಾ ವೈ
ಸೋಽಯಂ ದೋಷೋ ಧಾತರದ್ಧಾ ತವೈವ ॥ ೧೧ ॥

---

೭. ಹಂಸನು ಹೇಳುತ್ತಾನೆ:—ನೀನು ತಿರ್ಯಗ್ಯೋನಿಯಲ್ಲಿ ಹುಟ್ಟಿದ ನನ್ನನ್ನು ಶಪಿಸಲರ್ಹನಲ್ಲ. ಪಕ್ಷಿಗಳ ಮನಸ್ಸು ವಿವೇಕವಿಲ್ಲದ್ದು. ಇದು ಅವುಗಳ ಸ್ವಭಾವವಾಗಿರುವುದು.

೮. ಸ್ವಾಮಿ! ಹಾಗಾದರೂ ಸ್ವಾಮಿಯನ್ನು ತ್ಯಜಿಸಿದ ನಾನು ಪಾಪಿಯಾಗಿರುವೆನು. ಆದರೂ ನಾನು ಬೆನ್ನಟ್ಟಿಬರುತ್ತಿದ್ದ ಭಯಂಕರರಾದ ಶಿವಗಣಗಳಿಂದ ಭಯಗೊಂಡು ನಿನ್ನನ್ನು ತ್ಯಜಿಸಿ ಓಡಿರುವೆನು.

೯. ಪ್ರಭುವೆ! ಈಗಲೂ ಮುಂದೆ ಭಯವನ್ನೇ ನೋಡುತ್ತಿರುವ ನಾನು, ನೀನು ಸ್ಮರಿಸಿದರೂ ನಿನ್ನ ಬಳಿಗೆ ಬರಲಿಲ್ಲ.

೧೦. ಶ್ರೀ ಮಾರ್ಕಂಡೇಯನು ಹೇಳುತ್ತಾನೆ:–ಹಂಸನು ಬ್ರಹ್ಮನ ಮುಂದೆ ದೈನ್ಯದಿಂದ "ಪಕ್ಷಿಯೂ, ಪಾಪಿಯೂ, ಮೂಢಬುದ್ಧಿಯುಳ್ಳವನೂ, ಮುಂದೆ ಬಿದ್ದಿರುವವನೂ ಆದ ನನ್ನನ್ನು ಕಾಪಾಡು" ಎಂದು ಹೇಳುತ್ತ ನಿಟ್ಟುಸಿರುಬಿಟ್ಟನು.

೧೧. "ಸೃಷ್ಟಿಸುವವನು ನೀನೊಬ್ಬನೇ. ನೀನೇ ನಾನಾ ವಿಧವಾದ ಈ ಪ್ರಪಂಚವನ್ನು ಸೃಷ್ಟಿಮಾಡಿರುವೆ. ಪಿತಾಮಹ! ಇಂತಹ ನನ್ನನ್ನು ಸೃಷ್ಟಿ ಮಾಡಿದ ತಪ್ಪು ನಿಶ್ಚಯವಾಗಿಯೂ ನಿನ್ನದೇ ಆಗಿರುವುದು.

ಶಾಪಸ್ಯ ವಾಽನುಗ್ರಹಸ್ಯಾಽಪಿ ಶಕ್ತ
ಸ್ತ್ವತ್ತೋ ನಾಽನ್ಯಃ ಶರಣಂ ಕಂ ವ್ರಜಾಮಿ ।
ಸೇವಾಧರ್ಮಾದ್ವಿಚ್ಯುತಂ ದಾಸಭೂತಂ
ಚಪೇಟೈರ್ಹತಂ ತಾತ ಮಾಂ ತ್ರಾಹಿ ಭಕ್ತಂ ॥ ೧೨ ॥
ವಿದ್ಯಾಽವಿದ್ಯೇ ತ್ವತ್ತ ಏವಾದಿರಾಸ್ತಾಂ
ಧರ್ಮಾಽಧರ್ಮೌ ಸದಸದ್ದ್ಯುರ್ನಿಶೇ ಚ ।
ನಾನಾಭಾವಾನ್ ಜಗತಸ್ತ್ವಂ ವಿಧತ್ಸೇ
ತಂ ತ್ವಾಮೇಕಂ ಶರಣಂ ವ್ಯೈ ಪ್ರಪದ್ಯೇ ॥ ೧೩ ॥
ಏಕೋಽಸಿ ಬಹುರೂಪೋಽಸಿ ನಾನಾಚಿತ್ರೈಕಕರ್ಮಕಃ ।
ನಿಷ್ಕರ್ಮಾಽಖಿಲಕರ್ಮಾಽಸಿ ತ್ವಾಮತಃ ಶರಣಂ ವ್ರಜೇ ॥ ೧೪ ॥
ನಮೋ ನಮೋ ವರೇಣ್ಯಾಯ ವರದಾಯ ನಮೋನಮಃ ।
ನಮೋ ಧಾತ್ರೇ ವಿಧಾತ್ರೇ ಚ ಶರಣಾಯ ನಮೋನಮಃ ॥ ೧೫ ॥
ಶಿಕ್ಷಾಕ್ಷರ ವಿಯುಕ್ತೇಯಂ ವಾಣೀ ಮೇ ಸ್ತೌತಿ ಕಿಂ ವಿಭೋ ।
ಕಾ ಶಕ್ತಿಃ ಕಿಂ ಪರಿಜ್ಞಾನಮಿದಮುಕ್ತಂ ಕ್ಷಮಸ್ವ ಮೇ ॥ ೧೬ ॥

---

೧೨. ನೀನು ಶಾಪಾನುಗ್ರಹಗಳಲ್ಲಿ ಸಮರ್ಥನಾಗಿರುವೆ. ನಿನ್ನ ಹೊರತು ಬೇರೆ ಯಾರನ್ನು ಮರೆಹೋಗಲಿ? ಸೇವಾಧರ್ಮಭ್ರಷ್ಟನೂ, ಸೇವಕನೂ, ಈಗಾಗಲೇ ಶಿವಗಣಗಳ ತಾಡನಗಳಿಂದ ಬೇಸತ್ತಿರುವವನೂ, ಭಕ್ತನೂ ಆದ ನನ್ನನ್ನು ಕಾಪಾಡು.

೧೩. ವಿದ್ಯಾವಿದ್ಯೆಗಳೂ, ಧರ್ಮಾಧರ್ಮಗಳೂ, ಒಳ್ಳೆಯದು ಕೆಟ್ಟದುಗಳೂ, ಹಗಲು ರಾತ್ರಿಗಳೂ ನಿನ್ನಿಂದಲೇ ಹುಟ್ಟಿರುವುವು. ನೀನು ಅನೇಕ ವಿಧವಾದ ಜಗತ್ತುಗಳನ್ನು ಸೃಷ್ಟಿಮಾಡಿರುವೆ. ನಿನ್ನೊಬ್ಬನನ್ನೇ ನಾನು ಮರೆಹೋಗುವೆನು.

೧೪. ಏಕರೂಪನೂ, ಬಹುರೂಪನೂ, ನಾನಾ ಕರ್ಮನೂ, ಏಕಕರ್ಮನೂ, ನಿಷ್ಕರ್ಮನೂ, ನಿಖಿಲಕರ್ಮನೂ ನೀನೇ ಆಗಿರುವೆ. ಆದುದರಿಂದ ನಿನ್ನನ್ನು ಮರೆಹೋಗುವೆನು.

೧೫. ಶ್ರೇಷ್ಠನೂ, ವರವನ್ನು ನೀಡುವವನೂ, ಸೃಷ್ಟಿಮಾಡುವವನೂ, ವಿಧಾತನೂ, ಶರಣಾಗತರನ್ನು ರಕ್ಷಿಸುವವನೂ ಆದ ಓ ಪಿತಾಮಹ! ನಿನಗೆ ನಮಸ್ಕಾರವು.

೧೬. ಪ್ರಭುವೆ! ಸುಶಿಕ್ಷಿತವಲ್ಲದ ಈ ನನ್ನ ವಾಣಿಯು ನಿನ್ನನ್ನು ಏನೆಂದು ಸ್ತುತಿಸೀತು! ನನಗೆ ಯಾವ ಶಕ್ತಿ ಮತ್ತು ಜ್ಞಾನಗಳು ತಾನೆ ಇವೆ? ನಾನು ಹೇಳಿದುದನ್ನು ನೀನು ಕ್ಷಮಿಸಬೇಕು.

ಮಾರ್ಕಂಡೇಯ ಉವಾಚ :—

ಏವಂ ವದತಿ ಹಂಸೇ ವೈ ಬ್ರಹ್ಮಾ ಪ್ರಾಹ ಪ್ರಸನ್ನಧೀಃ ।
ಶಿಕ್ಷಾ ದತ್ತಾ ತವೈವೇಯಂ ಮಾ ವಿಷಾದಂ ಕೃಥಾಃ ಖಗ ॥ ೧೭ ॥
ತಪಸಾ ಶೋಧಯಾತ್ಮಾನಂ ಯಥಾ ಶಾಪಾಂತಮಾಪ್ನುಯಾಃ ।
ರೇವಾಸೇವಾಂ ಕುರು ಸ್ನಾತ್ವಾ ಸ್ಥಾಪಯಿತ್ವಾ ಮಹೇಶ್ವರಂ ।
ಅಚಿರೇಣೈವ ಕಾಲೇನ ತತಃ ಸಂಸ್ಥಾನಮಾಪ್ಸ್ಯಸಿ ॥ ೧೮ ॥
ಯಚ್ಛೇಷ್ಟ್ವಾ ಬಹುಭಿರ್ಯಜ್ಞೈಃ ಸಮಾಪ್ತವರದಕ್ಷಿಣೈಃ ।
ಗೋಸ್ವರ್ಣಕೋಟಿದಾನೈಶ್ಚ ತತ್ಫಲಂ ಸ್ಥಾಪಿತೇ ಶಿವೇ ॥ ೧೯ ॥
ಬ್ರಹ್ಮಘ್ನೋ ವಾ ಸುರಾಪೋ ವಾ ಸ್ವರ್ಣಹೃದ್ಗುರುತಲ್ಪಗಃ ।
ರೇವಾತೀರೇ ಶಿವಂ ಸ್ಥಾಪ್ಯ ಮುಚ್ಯತೇ ಸರ್ವಪಾತಕೈಃ ॥ ೨೦ ॥
ತಸ್ಮಾದ್ಭರ್ಗಸರಿತ್ತೀರೇ ಸ್ಥಾಪಯಿತ್ವಾ ತ್ರಿಯಂಬಕಂ ।
ವಿಯುಕ್ತಃ ಸರ್ವದೋಷೈಸ್ತ್ವಂ ಯಾಸ್ಯಸೇ ಪದಮುತ್ತಮಂ ॥ ೨೧ ॥
ಏವಮುಕ್ತಃ ಸ ವಿಧಿನಾ ಹೃಷ್ಟತುಷ್ಟಃ ಖಗೋತ್ತಮಃ ।
ತಥೇತ್ಯುಕ್ತ್ವಾ ಜಗಾಮಾಶು ನರ್ಮದಾತೀರಮುತ್ತಮಂ ॥ ೨೨ ॥

---

೧೭. ಶ್ರೀ ಮಾರ್ಕಂಡೇಯನು ಹೇಳುತ್ತಾನೆ:—ಹಂಸನು ಹೀಗೆನ್ನಲು, ಬ್ರಹ್ಮನು ಪ್ರಸನ್ನನಾಗಿ, "ಹಂಸನೇ! ನಾನು ನಿನಗೆ ಶಿಕ್ಷೆಯನ್ನಿತ್ತಿರುವೆನು. ವ್ಯಥೆಗೊಳ್ಳಬೇಡ.

೧೮. ನೀನು ಶಾಪಾವಸಾನವನ್ನು ಹೊಂದಲು ದೇಹವನ್ನು ತಪಸ್ಸಿನಿಂದ ಶೋಧಿಸಿಕೊ. ಮಹೇಶ್ವರನನ್ನು ಸ್ಥಾಪಿಸಿ ರೇವಾಸಂಗಮದಲ್ಲಿ ಮಿಂದು ಆ ಸ್ವಾಮಿಯನ್ನು ಸೇವಿಸು. ಅದರಿಂದ ಸ್ವಲ್ಪಕಾಲದಲ್ಲಿಯೇ ಒಳ್ಳೆಯ ಸ್ಥಾನವನ್ನು ಹೊಂದುವೆ.

೧೯. ಶಿವನನ್ನು ಸ್ಥಾಪಿಸಿದರೆ ಬಹು ಯಜ್ಞಗಳನ್ನೆಸಗಿ ಉತ್ತಮ ದಕ್ಷಿಣೆಗಳು, ಕೋಟಿ ಗೋವುಗಳು, ಕೋಟಿ ಸ್ವರ್ಣಗಳು ಇವುಗಳನ್ನು ಕೊಡುವುದರಿಂದಾಗುವ ಫಲವು ಲಭಿಸುವುದು.

೨೦. ರೇವಾನದಿಯ ದಡದಲ್ಲಿ ಶಿವನನ್ನು ಸ್ಥಾಪಿಸಿದವನು ಬ್ರಹ್ಮಹತ್ಯೆ, ಸುರಾಪಾನ, ಸ್ವರ್ಣಸ್ತೇಯ, ಗುರುಪತ್ನೀಗಮನ ಇವುಗಳನ್ನು ಮಾಡಿದ್ದರೂ ಆ ಪಾಪಗಳಿಂದ ಮುಕ್ತನಾಗುವನು.

೨೧. ಆದುದರಿಂದ ಶಿವಸರೋವರದ ದಡದಲ್ಲಿ ಶಂಕರನನ್ನು ಸ್ಥಾಪಿಸಿ ಸಮಸ್ತ ದೋಷರಹಿತನಾಗಿ ಉತ್ತಮಪದವನ್ನು ಸೇರುವೆ.

೨೨. ಬ್ರಹ್ಮನು ಹೀಗೆ ಹೇಳಲು, ಹೃಷ್ಟತುಷ್ಟನಾದ ಹಂಸನು ಹಾಗೆಯೇ ಆಗಲೆಂದು ಹೇಳಿ ಕೂಡಲೆ ಉತ್ತಮವಾದ ನರ್ಮದಾತಟಕ್ಕೆ ಹೋದನು.

ತಪಸ್ತಪ್ತ್ವಾ ಕಿಯತ್ಕಾಲಂ ಸ್ಥಾಪಯಾಮಾಸ ಶಂಕರಂ ॥ ೨೩ ॥
ಸ್ವನಾಮ್ನಾ ಭರತಶ್ರೇಷ್ಠ ಹಂಸೇಶ್ವರಮನುತ್ತಮಂ ।
ಪೂಜಯಿತ್ವಾ ಪರಂ ಸ್ಥಾನಂ ಪ್ರಾಪ್ತವಾನ್ ಖಗಸತ್ತಮಃ ॥ ೨೪ ॥
ತತ್ರ ಹಂಸೇಶ್ವರೇ ತೀರ್ಥೇ ಗತ್ವಾ ಸ್ನಾತ್ವಾ ಯುಧಿಷ್ಠಿರ ।
ಪೂಜಯೇತ್ಪರಮೇಶಾನಂ ಸ ಪಾಪೈಃ ಪರಿಮುಚ್ಯತೇ ॥ ೨೫ ॥
ಸ್ತುವನ್ನೇಕಮನಾದೇವಂ ನ ದೈನ್ಯಂ ಪ್ರಾಪ್ನುಯಾತ್ಕ್ವಚಿತ್ ।
ಶ್ರಾದ್ಧಂ ದೀಪಪ್ರದಾನಂ ಚ ಬ್ರಾಹ್ಮಣಾನಾಂ ಚ ಭೋಜನಂ ।
ದತ್ವಾ ಶಕ್ತ್ಯಾ ನೃಪಶ್ರೇಷ್ಠ ಸ್ವರ್ಗಲೋಕೇ ಮಹೀಯತೇ ॥ ೨೬ ॥
ತ್ರಿಕಾಲಮೇಕಕಾಲಂ ವಾ ಯೋ ಭಕ್ತ್ಯಾ ಪೂಜಯೇಚ್ಛಿವಂ ।
ನವಪ್ರಸೂತಾಂ ಧೇನುಂ ಚ ದತ್ವಾ ಪಾರ್ಥ ದ್ವಿಜೋತ್ತಮೇ ।
ಷಷ್ಟಿವರ್ಷಸಹಸ್ರಾಣಿ ಶಿವಲೋಕೇ ಮಹೀಯತೇ ॥ ೨೭ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ
ಪಂಚಮೇ ಆವಂತ್ಯಖಂಡೇ ತೃತೀಯೇ ರೇವಾಖಂಡೇ
"ಹಂಸೇಶ್ವರತೀರ್ಥಮಾಹಾತ್ಮ್ಯವರ್ಣನಂ" ನಾಮ
ಏಕವಿಂಶದಧಿಕದ್ವಿಶತತಮೋಽಧ್ಯಾಯಃ

---

೨೩. ಅಲ್ಲಿ ಕೆಲವುಕಾಲ ತಪಸ್ಸನ್ನು ಮಾಡಿ ಶಂಕರನನ್ನು ಪ್ರತಿಷ್ಠೆಮಾಡಿದನು.

೨೪. ಯುಧಿಷ್ಠಿರ! ಅವನು ಸ್ವನಾಮದಿಂದ ಪ್ರಖ್ಯಾತಿಗೊಂಡ ಉತ್ತಮನಾದ ಹಂಸೇಶ್ವರನನ್ನು ಪೂಜಿಸಿ ಉತ್ತಮಪದವಿಯನ್ನು ಹೊಂದಿದನು.

೨೫. ಆ ಹಂಸೇಶ್ವರತೀರ್ಥಕ್ಕೆ ಹೋಗಿ ಮಿಂದು ಪರಮೇಶ್ವರನನ್ನು ಪೂಜಿಸಿದವನು ಪಾಪಮುಕ್ತನಾಗುವನು.

೨೬. ಒಮ್ಮನಸ್ಸಿನಿಂದ ಶಂಕರನನ್ನು ಸ್ತುತಿಸುವವನು ಒಂದೆಡೆಯಲ್ಲಿಯೂ ದೈನ್ಯವನ್ನು ಹೊಂದುವುದಿಲ್ಲ. ಅಲ್ಲಿ ಶಕ್ತ್ಯನುಸಾರ ಶ್ರಾದ್ಧ, ದೀಪ, ದಾನ, ಬ್ರಾಹ್ಮಣಭೋಜನಗಳನ್ನು ಮಾಡಿಸಿದವನು ಸ್ವರ್ಗಲೋಕದಲ್ಲಿ ಪೂಜ್ಯನಾಗುವನು.

೨೭. ಮೂರುಸಾರಿ ಅಥವಾ ಒಂದುಸಾರಿ ಭಕ್ತಿಯಿಂದ ಶಿವನನ್ನು ಪೂಜಿಸಿ ಉತ್ತಮಬ್ರಾಹ್ಮಣನಿಗೆ ಹೊಸದಾಗಿ ಈದ ಹಸುವನ್ನು ದಾನಮಾಡಿದವನು ಅರುವತ್ತುಸಾವಿರ ವರ್ಷಗಳಕಾಲ ಶಿವಲೋಕದಲ್ಲಿ ಪೂಜ್ಯನಾಗುವನು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧನಾದ
ಶ್ರೀ ಸ್ಕಾಂದಮಹಾಪುರಾಣದ ಐದನೆಯ ಆವಂತ್ಯಖಂಡದ ಮೂರನೆಯ ರೇವಾಖಂಡದಲ್ಲಿ
"ಹಂಸೇಶ್ವರತೀರ್ಥಮಾಹಾತ್ಮ್ಯವರ್ಣನ"ವೆಂಬ
ಇನ್ನೂರಿಪ್ಪತ್ತೊಂದನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

## ಅಥ ದ್ವಾವಿಂಶದಧಿಕದ್ವಿಶತತಮೋಽಧ್ಯಾಯಃ

### ತಿಲಾದೇಶ್ವರತೀರ್ಥಮಾಹಾತ್ಮ್ಯವರ್ಣನಂ

ಶ್ರೀ ಮಾರ್ಕಂಡೇಯ ಉವಾಚ:—

ತತಃ ಕ್ರೋಶಾಂತರೇ ಗಚ್ಛೇತ್ತಿಲಾದಂ ತೀರ್ಥಮುತ್ತಮಂ ।
ತಿಲಪ್ರಾಶನಕೃದ್ಯತ್ರ ಜಾಬಾಲಿಃ ಶುದ್ಧಿಮಾಪ್ತವಾನ್ ॥ ೧ ॥
ಪಿತೃಮಾತೃಪರಿತ್ಯಾಗೀ ಭ್ರಾತೃಭಾರ್ಯಾಭಿಲಾಷಕೃತ್ ।
ಪುತ್ರವಿಕ್ರಯಕೃತ್ಪಾಪಶ್ಚ ಲಕೃದ್ಗುರುಣಾಸಹ ॥ ೨ ॥
ಏವಂ ದೋಷಸಮಾವಿಷ್ಟೋ ಯತ್ರಯತ್ರಾಽಪಿ ಗಚ್ಛತಿ ।
ತತ್ರ ತತ್ರಾಽಪಿ ಧಿಕ್ಕಾರಂ ಲಭತೇ ಸತ್ಸು ಭಾರತ ।
ನ ಕೋಽಪಿ ಸಂಗತಿಂ ಧತ್ತೇ ತೇನ ಸಾರ್ಧಂ ಸಭಾಸ್ವಪಿ ॥ ೩ ॥
ಇತಿ ಲಜ್ಜಾನ್ವಿತೋ ವಿಪ್ರಃ ಕಾಲೇನ ಮಹತಾ ನೃಪ ।
ಚಿಂತಾಮವಾಪ ಮಹತೀಮಗತಿಜ್ಞೋ ಹಿ ಪಾವನೇ ॥ ೪ ॥
ಚಕಾರ ಸರ್ವತೀರ್ಥಾನಿ ರೇವಾಂ ಚಾಪ್ಯವಗಾಹಯತ್ ॥ ೫ ॥
ಅಣಿಮಾಪ್ಯಾಂತಮಾಸಾದ್ಯ ದಕ್ಷಿಣೇ ನರ್ಮದಾತಟೇ ।
ತಸ್ಥೌ ಯತ್ರ ವ್ರತೀ ಪಾರ್ಥ ಜಾಬಾಲಿಃ ಪ್ರಾಶಯಂಸ್ತಿಲಾನ್ ॥ ೬ ॥

---

## ಕನ್ನಡದ ಅನುವಾದ

### ತಿಲಾದೇಶ್ವರತೀರ್ಥಮಾಹಾತ್ಮ್ಯವರ್ಣನ

೧. ಶ್ರೀ ಮಾರ್ಕಂಡೇಯನು ಹೇಳುತ್ತಾನೆ:—ಅನಂತರ ಎರಡು ಮೈಲಿ ದೂರದಲ್ಲಿರುವ ತಿಲಾದವೆಂಬ ಉತ್ತಮತೀರ್ಥಕ್ಕೆ ಹೋಗಬೇಕು. ಅಲ್ಲಿ ತಿಲ ಪ್ರಾಶನಮಾಡಿದ ಜಾಬಾಲಿಯು ಶುದ್ಧನಾಗಿರುವನು.

೨-೩. ತಾಯಿ ತಂದೆಗಳನ್ನು ತ್ಯಜಿಸಿದವನೂ, ಸಹೋದರನ ಪತ್ನಿಯಲ್ಲಿ ಪ್ರೀತಿಯನ್ನು ಮಾಡಿದವನೂ, ಪುತ್ರನನ್ನು ವಿಕ್ರಯಿಸಿದವನೂ, ಗುರುವಿನೊಡನೆ ಛಲಮಾಡಿದವನೂ ಆಗಿ ಹೋದೆಡೆಯಲ್ಲೆಲ್ಲ ತಿರಸ್ಕಾರವನ್ನು ಹೊಂದುತ್ತಿದ್ದನು. ಸಜ್ಜನರು ಸಭೆಗಳಲ್ಲಿ ಅವನನ್ನು ಸೇರಿಸಿಕೊಳ್ಳುತ್ತಿರಲಿಲ್ಲ.

೪. ಹೀಗೆ ಲಜ್ಜೆಗೊಂಡ ಅವನು ಶುದ್ಧಿವಿಷಯದಲ್ಲಿ ದಾರಿಯನ್ನರಿಯದೆ ಬಹುಕಾಲದವರೆಗೆ ಅತ್ಯಂತ ಚಿಂತಾಕ್ರಾಂತನಾದನು.

೫. ಅವನು ಸಕಲತೀರ್ಥಗಳಲ್ಲಿಯೂ, ರೇವಾನದಿಯಲ್ಲಿಯೂ ಮಿಂದನು.

೬. ಆ ಜಾಬಾಲಿಯು ಅಣಿಮಾಪಿಯ ಕೊನೆಯನ್ನು ಹೊಂದಿ ನರ್ಮದಾ ನದಿಯ ದಕ್ಷಿಣದಡದಲ್ಲಿ ವ್ರತಿಯಾಗಿ ತಿಲವನ್ನು ತಿನ್ನುತ್ತ ತಪದಿಂದಿದ್ದನು.

ತಿಲೈರೇಕಾಶನಂ ಕುರ್ವಂಸ್ತಥೈವೈಕಾಂತರಾಶನಂ ।
ತ್ರ್ಯಹಷಟ್‌ದ್ವಾದಶಾಹಾಽಶೀ ಪಕ್ಷಮಾಸಾಽಶನಸ್ತಥಾ ॥ ೭ ॥
ಕೃಚ್ಛ್ರ ಚಾಂದ್ರಾಯಣಾದೀನಿ ವ್ರತಾನಿ ಚ ತಿಲೈರಪಿ ।
ತಿಲಾದತ್ವಮನುಪ್ರಾಪ್ತೋ ಹ್ಯಬ್ದದ್ವಾಸಪ್ತತಿಂ ಕ್ರಮಾತ್ ॥ ೮ ॥
ಕಾಲೇನ ಗಚ್ಛತಾ ತಸ್ಯ ಪ್ರಸನ್ನೋಽಭವದೀಶ್ವರಃ ।
ಪ್ರಾದಾದಿಹಾಮುತ್ರಿಕೀಂ ತು ಶುದ್ಧಿಂ ಸಾಲೋಕ್ಯಮಾತ್ಮಕಂ ॥ ೯ ॥
ತೇನ ಸ ಸ್ಥಾಪಿತೋ ದೇವಃ ಸ್ವನಾಮ್ನಾ ಭರತರ್ಷಭ ।
ತಿಲಾದೇಶ್ವರಸಂಜ್ಞಾಂ ಚ ಪ್ರಾಪ ಲೋಕಾದಪಿ ಪ್ರಭುಃ ॥ ೧೦ ॥
ತದಾ ಪ್ರಭೃತಿ ವಿಖ್ಯಾತಂ ತೀರ್ಥಂ ಪಾಪಪ್ರಣಾಶನಂ ।
ತತ್ರ ತೀರ್ಥೇ ನರಃ ಸ್ನಾತ್ವಾ ಚತುರ್ದಶ್ಯಷ್ಟಮೀಷು ಚ ॥ ೧೧ ॥
ಉಪವಾಸಪರಃ ಪಾರ್ಥ ತಥೈವ ಹರಿವಾಸರೇ ।
ತಿಲಹೋಮೀ ತಿಲೋದ್ವರ್ತೀ ತಿಲಸ್ನಾಯೀ ತಿಲೋದಕೀ ॥ ೧೨ ॥
ತಿಲದಾಚಾಚ ಭೋಕ್ತಾ ಚ ನಾನಾಪಾಪೈಃ ಪ್ರಮುಚ್ಯತೇ ।
ತಿಲೈರಾಪೂರಯೇಲ್ಲಿಂಗಂ ತಿಲತೈಲೇನ ದೀಪದಃ ।
ರುದ್ರಲೋಕಮವಾಪ್ನೋತಿ ಪುನಾತ್ಯಾಸಪ್ತಮಂ ಕುಲಂ ॥ ೧೩ ॥

---

೭–೮. ಅವನು ಎಳ್ಳಿನಿಂದ ದಿನಕ್ಕೆ ಒಂದು ಭೋಜನವನ್ನೂ, ಎರಡು, ಮೂರು, ಆರು, ಹನ್ನೆರಡು ದಿನಗಳಿಗೂ, ಪಕ್ಷ, ತಿಂಗಳುಗಳಿಗೂ ಒಂದು ಭೋಜನವನ್ನೂ ಮಾಡುತ್ತ, ಕೃಚ್ಛ್ರ ಚಾಂದ್ರಾಯಣಾದಿ ವ್ರತಗಳನ್ನಾಚರಿಸುತ್ತ ಎಪ್ಪತ್ತೆರಡು ವರ್ಷಕಾಲ ತಿಲಾದನಾದನು.

೯. ಹೀಗೆ ಕಾಲವು ಕಳೆಯುತ್ತಿರಲು ಈಶ್ವರನು ಅವನಲ್ಲಿ ಪ್ರಸನ್ನನಾಗಿ ಇಹಪರಲೋಕಗಳಲ್ಲಿ ಶುದ್ಧಿಯನ್ನೂ, ತನ್ನ ಸಾಲೋಕ್ಯವನ್ನೂ ಕೊಟ್ಟನು.

೧೦. ಅದರಿಂದ ಜಾಬಾಲಿಯು ತನ್ನ ಹೆಸರಿನಿಂದ ಶಂಕರನನ್ನು ಪ್ರತಿಷ್ಠೆ ಮಾಡಿದನು. ಜನರಿಂದ ಆ ಶಿವನು ತಿಲಾದೇಶ್ವರನೆಂಬ ಹೆಸರನ್ನು ಪಡೆದನು.

೧೧–೧೩. ಅದು ಮೊದಲ್ಗೊಂಡು ಪಾಪನಾಶಕವಾದ ಆ ತೀರ್ಥವು ವಿಖ್ಯಾತವಾಯಿತು. ಆ ತೀರ್ಥದಲ್ಲಿ ಚತುರ್ದಶೀ, ಅಷ್ಟಮೀ ಮತ್ತು ಹರಿದಿನಗಳಲ್ಲಿ ಮಿಂದು ಉಪವಾಸಮಾಡಿದ ನರನೂ, ತಿಲಹೋಮ, ತಿಲೋದ್ವರ್ತನ, ತಿಲಸ್ನಾನ, ತಿಲೋದಕ, ತಿಲದಾನಗಳನ್ನು ಮಾಡಿದವನೂ, ತಿಲಭೋಜನ ಮಾಡಿದವನೂ ಅನೇಕ ಪಾಪಗಳಿಂದ ಮುಕ್ತನಾಗುವನು. ತಿಲದಿಂದ ಲಿಂಗವನ್ನು ಪೂರ್ತಿಮಾಡಿದವನೂ, ತಿಲತೈಲದಿಂದ ದೀಪವನ್ನು ಹೊತ್ತಿಸಿದವನೂ ರುದ್ರಲೋಕಕ್ಕೆ ತೆರಳುವನು. ಮತ್ತು ಏಳು ಕುಲಗಳನ್ನು ಪವಿತ್ರಗೊಳಿಸುವನು.

ತಿಲಪಿಂಡಪ್ರದಾನೇನ ಶ್ರಾದ್ಧೇ ನೃಪತಿಸತ್ತಮ ।
ವಿಕರ್ಮಸ್ಥಾಶ್ಚ ಗಚ್ಛಂತಿ ಗತಿಮಿಷ್ಟಾಂ ಹಿ ಪೂರ್ವಜಾಃ ॥ ೧೪ ॥
ಸ್ವರ್ಗಲೋಕಸ್ಥಿತಾಃ ಶ್ರಾದ್ಧೈರ್ಬ್ರಾಹ್ಮಣಾನಾಂ ಚ ಭೋಜನೈಃ ।
ಅಕ್ಷಯಾಂ ತೃಪ್ತಿಮಾಸಾದ್ಯ ಮೋದಂತೇ ಶಾಶ್ವತೀಃ ಸಮಾಃ ॥ ೧೫ ॥
ಪಿತುಃ ಕುಲಂ ಮಾತೃಕುಲಂ ತಥಾ ಭಾರ್ಯಾಕುಲಂ ನೃಪ ।
ಕುಲತ್ರಯಂ ಸಮುದ್ಧೃತ್ಯ ಸ್ವರ್ಗಂ ನಯತಿ ವೈ ನರಃ ॥ ೧೬ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ
ಪಂಚಮೇ ಆವಂತ್ಯಖಂಡೇ ತೃತೀಯೇ ರೇವಾಖಂಡೇ
"ತಿಲೋದೇಶ್ವರತೀರ್ಥಮಾಹಾತ್ಮ್ಯವರ್ಣನಂ" ನಾಮ
ದ್ವಾವಿಂಶದಧಿಕದ್ವಿಶತತಮೋಽಧ್ಯಾಯಃ

---

೧೪. ನೃಪವರ್ಯನೆ! ಶ್ರಾದ್ಧದಲ್ಲಿ ತಿಲಪಿಂಡಪ್ರದಾನದಿಂದ ಕರ್ಮಭ್ರಷ್ಟರಾದ ಪೂರ್ವಿಕರು ಇಷ್ಟವಾದ ಗತಿಯನ್ನು ಪಡೆಯುವರು.

೧೫. ಶ್ರಾದ್ಧದಿಂದಲೂ, ಬ್ರಾಹ್ಮಣಭೋಜನ ಮಾಡಿಸುವುದರಿಂದಲೂ ಸ್ವರ್ಗಲೋಕದಲ್ಲಿರುವ ಪಿತೃಗಳು ಅಕ್ಷಯತೃಪ್ತಿಯನ್ನು ಪಡೆದು ಯಾವಾಗಲೂ ಆನಂದಪಡುವರು.

೧೬. ಹಾಗೆ ಮಾಡುವ ನರನು ಪಿತೃ, ಮಾತೃ, ಭಾರ್ಯಾ ಕುಲಗಳನ್ನು ಉದ್ಧರಿಸಿ ಅವರನ್ನು ಸ್ವರ್ಗಕ್ಕೆ ಒಯ್ಯುವನು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ
ಶ್ರೀ ಸ್ಕಾಂದಮಹಾಪುರಾಣದ ಐದನೆಯ ಆವಂತ್ಯಖಂಡದ ಮೂರನೆಯ ರೇವಾಖಂಡದಲ್ಲಿ
"ತಿಲಾದೇಶ್ವರತೀರ್ಥಮಾಹಾತ್ಮ್ಯವರ್ಣನ" ವೆಂಬ
ಇನ್ನೂರಿಪ್ಪತ್ತೆರಡನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

## ಅಥ ತ್ರಯೋವಿಂಶತ್ಯಧಿಕದ್ವಿಶತತಮೋಽಧ್ಯಾಯಃ

### ವಾಸವೇಶ್ವರತೀರ್ಥಮಾಹಾತ್ಮ್ಯವರ್ಣನಂ

ಶ್ರೀ ಮಾರ್ಕಂಡೇಯ ಉವಾಚ :—

ತತಃ ಕ್ರೋಶಾಂತರೇ ಪಾರ್ಥ ವಾಸವಂ ತೀರ್ಥಮುತ್ತಮಂ ।
ವಸುಭಿಃ ಸ್ಥಾಪಿತಂ ತತ್ರ ಸ್ಥಿತ್ವಾ ವೈ ದ್ವಾದಶಾಬ್ದಕಂ ॥ ೧ ॥
ಧರೋ ಧ್ರುವಶ್ಚ ಸೋಮಶ್ಚ ಆಪಶ್ಚೈವಾಽನಿಲೋಽನಲಃ ।
ಪ್ರತ್ಯೂಷಶ್ಚ ಪ್ರಭಾಸಶ್ಚ ವಸವೋಽಷ್ಟಾವಿಮೇ ಪುರಾ ॥ ೨ ॥
ಪಿತೃಶಾಪಪರಿಕ್ಲಿಷ್ಟಾ ಗರ್ಭವಾಸಾಯ ಭಾರತ ।
ನಾರ್ಮದಂ ತೀರ್ಥಮಾಸಾದ್ಯ ತಪಶ್ಚಕ್ರುರ್ಯತೇಂದ್ರಿಯಾಃ ॥ ೩ ॥
ಆರಾಧಯಂತಃ ಪರಮಂ ಭವಾನೀಪತಿಮವ್ಯಯಂ ।
ದ್ವಾದಶಾಬ್ದಾನಿ ರಾಜೇಂದ್ರ ತತಸ್ತುಷ್ಟೋ ಮಹೇಶ್ವರಃ ॥ ೪ ॥
ಪ್ರತ್ಯಕ್ಷಃ ಪ್ರದದೌ ತೇಭ್ಯಸ್ತ್ವಭೀಷ್ಟಂ ವರಮುತ್ತಮಂ ।
ತತಃ ಸ್ವನಾಮ್ನಾ ಸಂಸ್ಥಾಪ್ಯ ವಸವಸ್ತಂ ಮಹೇಶ್ವರಂ ।
ಜಗ್ಮುರಾಕಾಶಮಾವಿಶ್ಯ ಪ್ರಸನ್ನೇ ಸತಿ ಶಂಕರೇ ॥ ೫ ॥
ತತಃ ಪ್ರಭೃತಿ ವಿಖ್ಯಾತಂ ತೀರ್ಥಂ ತದ್ವಾಸವಾಹ್ವಯಂ ।
ತಸ್ಮಿಂಸ್ತೀರ್ಥೇ ಮಹಾರಾಜ ಯೋ ಭಕ್ತ್ಯಾ ಪೂಜಯೇಚ್ಛಿವಂ ।
ಯಥಾ ಲಬ್ಧೋಪಹಾರೈಶ್ಚ ದೀಪಂ ದದ್ಯಾತ್ಪ್ರಯತ್ನತಃ ॥ ೬ ॥

---

## ಕನ್ನಡದ ಅನುವಾದ

### ವಾಸವೇಶ್ವರತೀರ್ಥಮಾಹಾತ್ಮ್ಯವರ್ಣನ

೧—೩. ಶ್ರೀ ಮಾರ್ಕಂಡೇಯನು ಹೇಳುತ್ತಾನೆ :—ಅನಂತರ ಎರಡು ಮೈಲಿ ದೂರದಲ್ಲಿ ವಸುಗಳು ಸ್ಥಾಪಿಸಿದ ವಾಸವವೆಂಬ ಉತ್ತಮತೀರ್ಥವಿರುವುದು. ಅಲ್ಲಿ ಹಿಂದೆ ಧರ, ಧ್ರುವ, ಸೋಮ, ಆಪ, ಅನಿಲ, ಅನಲ, ಪ್ರತ್ಯೂಷ, ಪ್ರಭಾಸ ಎಂಬ ಅಷ್ಟವಸುಗಳು ಗರ್ಭವಾಸಕ್ಕಾಗಿ ಪಿತೃಶಾಪವನ್ನು ಹೊಂದಿ ಹನ್ನೆರಡು ವರ್ಷಕಾಲ ನರ್ಮದಾತೀರ್ಥವನ್ನು ಸೇರಿ ಜಿತೇಂದ್ರಿಯರಾಗಿ ತಪವನ್ನಾಚರಿಸಿದರು.

೪—೫. ಅವರು ಹನ್ನೆರಡು ವರ್ಷಕಾಲ ಭವಾನೀಪತಿಯಾದ ಶಂಕರನನ್ನು ಪೂಜಿಸುತ್ತಿರಲು, ಶಂಕರನು ಸಂತುಷ್ಟನಾಗಿ ಪ್ರತ್ಯಕ್ಷಗೊಂಡು ಅವರಿಗೆ ಇಷ್ಟವಾದ ವರವನ್ನಿತ್ತನು. ಅನಂತರ ಆ ವಸುಗಳು ತಮ್ಮ ಹೆಸರಿನಿಂದ ಶಂಕರನನ್ನು ಪ್ರತಿಷ್ಠೆಮಾಡಿ ಅವನು ಸಂತುಷ್ಟನಾಗಲು ಆಕಾಶಕ್ಕೆ ತೆರಳಿದರು.

೬—೭. ಅದು ಮೊದಲ್ಗೊಂಡು ಆ ತೀರ್ಥವು ವಾಸವವೆಂದು ವಿಖ್ಯಾತ

ಶುಕ್ಲಪಕ್ಷೇ ತದಾಷ್ಟಮ್ಯಾಂ ಪ್ರತ್ಯಹಂ ವಾಽಪಿ ಶಕ್ತಿತಃ ।
ಅಷ್ಟೌ ವರ್ಷಸಹಸ್ರಾಣಿ ಸ ವಸೇಚ್ಛಿವಸನ್ನಿಧೌ ॥ ೭ ॥
ತತಃ ಶಿವಾಲಯಂ ಯಾತಿ ಗರ್ಭವಾಸಂ ನ ಪಶ್ಯತಿ ।
ಪುಷ್ಪೈರ್ವಾ ಪಲ್ಲವೈರ್ವಾಽಪಿ ಫಲೈರ್ಧಾನ್ಯೈಸ್ತಥಾಽಪಿ ವಾ ॥ ೮ ॥
ಪೂಜಯೇದ್ದೇವಮೀಶಾನಂ ಸದೈನ್ಯಂ ನಾಪ್ನುಯಾತ್ಕ್ವಚಿತ್ ।
ಸರ್ವಶೋಕವಿನಿರ್ಮುಕ್ತಃ ಸ್ವರ್ಗಲೋಕೇ ಮಹೀಪತೇ ॥ ೯ ॥
ಏಕಾಹಮಪಿ ಕೌಂತೇಯ ಯೋ ವಸೇದ್ವಾಸವೇಶ್ವರೇ ।
ಪಾಪರಾಶಿಂ ವಿನಿರ್ಧೂಯ ಭಾನುವದ್ದಿವಿ ಮೋದತೇ ॥ ೧೦ ॥
ವಿಪ್ರಾಂಶ್ಚ ಭೋಜಯೇದ್ಭಕ್ತ್ಯಾ ದದ್ಯಾದ್ವಾಸಾಂಸಿ ದಕ್ಷಿಣಾಂ ॥ ೧೧ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ
ಪಂಚಮೇ ಆವಂತ್ಯಖಂಡೇ ತೃತೀಯೇ ರೇವಾಖಂಡೇ
"ವಾಸವೇಶ್ವರತೀರ್ಥಮಾಹಾತ್ಮ್ಯವರ್ಣನಂ" ನಾಮ
ತ್ರಯೋವಿಂಶತ್ಯಧಿಕದ್ವಿಶತತಮೋಽಧ್ಯಾಯಃ

---

ವಾಯಿತು. ಆ ತೀರ್ಥದಲ್ಲಿ ಶುಕ್ಲಪಕ್ಷದ ಅಷ್ಟಮೀ ದಿನ ಅಥವಾ ಪ್ರತಿದಿನವೂ ಶಿವನನ್ನು ದೊರಕಿದಷ್ಟು ಪೂಜಾದ್ರವ್ಯಗಳಿಂದ ಪೂಜಿಸಿ ದೀಪವನ್ನು ಹೊತ್ತಿಸಿದವನು ಎಂಟುಸಾವಿರ ವರ್ಷಗಳಕಾಲ ಶಿವನ ಸಮೀಪದಲ್ಲಿ ವಾಸಿಸುವನು.

೮–೯. ಶಿವಸನ್ನಿಧಿಯಲ್ಲಿ ವಾಸಿಸುವವನು ಗರ್ಭವಾಸವನ್ನು ಅನುಭವಿಸುವುದಿಲ್ಲ. ಪುಷ್ಪ, ಪಲ್ಲವ, ಫಲ ಅಥವಾ ಧಾನ್ಯಗಳಿಂದ ಈಶ್ವರನನ್ನು ಪೂಜಿಸಿದವನು ಒಂದೆಡೆಯಲ್ಲಿಯೂ ದೈನ್ಯವನ್ನು ಹೊಂದುವುದಿಲ್ಲ. ಸಮಸ್ತ ದುಃಖಮುಕ್ತನಾಗಿ ಸ್ವರ್ಗಲೋಕದಲ್ಲಿ ಪೂಜ್ಯನಾಗುತ್ತಾನೆ.

೧೦. ಯುಧಿಷ್ಠಿರ! ಒಂದು ದಿನವಾದರೂ ವಾಸವೇಶ್ವರತೀರ್ಥದಲ್ಲಿ ವಾಸಮಾಡಿದವನು ಪಾಪರಾಶಿಯನ್ನು ನಿವಾರಿಸಿಕೊಂಡು ಸೂರ್ಯನಂತೆ ಸ್ವರ್ಗಲೋಕದಲ್ಲಿ ಆನಂದಗೊಳ್ಳುವನು.

೧೧. ಭಕ್ತಿಯಿಂದ ಬ್ರಾಹ್ಮಣರಿಗೆ ಭೋಜನವನ್ನು ಮಾಡಿಸಿ ವಸ್ತ್ರ, ದಕ್ಷಿಣೆಗಳನ್ನು ಕೊಡಬೇಕು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ
ಶ್ರೀ ಸ್ಕಾಂದಮಹಾಪುರಾಣದ ಐದನೆಯ ಆವಂತ್ಯಖಂಡದ ಮೂರನೆಯ ರೇವಾಖಂಡದಲ್ಲಿ
"ವಾಸವೇಶ್ವರತೀರ್ಥಮಾಹಾತ್ಮ್ಯವರ್ಣನ"ವೆಂಬ
ಇನ್ನೂರಿಪ್ಪತ್ತಮೂರನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

# ಅಥ ಚತುರ್ವಿಂಶತ್ಯಧಿಕದ್ವಿಶತತಮೋಽಧ್ಯಾಯಃ

## ಕೋಟೀಶ್ವರತೀರ್ಥಮಾಹಾತ್ಮ್ಯವರ್ಣನಂ

ಶ್ರೀ ಮಾರ್ಕಂಡೇಯ ಉವಾಚ :—

ತತಃ ಕ್ರೋಶಾಂತರೇ ಪಾರ್ಥ ತೀರ್ಥಂ ಕೋಟೀಶ್ವರಂ ಪರಂ ।
ಯತ್ರ ಸ್ನಾನಂ ಚ ದಾನಂ ಚ ಜಪಹೋಮಾರ್ಚನಾದಿಕಂ ।
ಭಕ್ತ್ಯಾ ಕೃತಂ ನರೈಸ್ತತ್ರ ಸರ್ವಂ ಕೋಟಿಗುಣಂ ಭವೇತ್ ॥ ೧ ॥
ತತ್ರ ದೇವಾಃ ಸಗಂಧರ್ವಾ ಋಷಯಃ ಸಿದ್ಧಚಾರಣಾಃ ।
ಜಲಧಿಂ ಪ್ರತಿಗಚ್ಛಂತಿ ನರ್ಮದಾಂ ವೀಕ್ಷಿತುಂ ಕಿಲ ॥ ೨ ॥
ಮಿಲಿತಾಃ ಕೋಟಿಶೋ ರಾಜನ್ರೇವಾಸಾಗರಸಂಗಮೇ ।
ವಿನೋದಮತುಲಂ ದೃಷ್ಟ್ವಾ ರೇವಾರ್ಣವಸಮಾಗಮೇ ॥ ೩ ॥
ಸ್ನಾತ್ವಾ ಶಿವಂ ಚ ಸಂಸ್ಥಾಪ್ಯ ಪೂಜಯಿತ್ವಾ ಮಹೇಶ್ವರಂ ।
ಕೋಟೀಶ್ವರಾಭಿಧಾನಂ ತು ಸ್ವಸ್ವಭಕ್ತ್ಯಾ ವಿಧಾನತಃ ॥ ೪ ॥
ಕೋಟಿತೀರ್ಥೇ ಪರಾಂ ಸಿದ್ಧಿಂ ಸಂಪ್ರಾಪ್ತಾಃ ಸರ್ವತೋಷಣಾತ್ ।
ತೇನ ತತ್ಪುಣ್ಯಮತುಲಂ ಸರ್ವತೀರ್ಥೇಷು ಚೋತ್ತಮಂ ॥ ೫ ॥

---

## ಕನ್ನಡದ ಅನುವಾದ

### ಕೋಟೀಶ್ವರತೀರ್ಥಮಾಹಾತ್ಮ್ಯವರ್ಣನ

೧. ಶ್ರೀ ಮಾರ್ಕಂಡೇಯನು ಹೇಳುತ್ತಾನೆ:— ಅಯ್ಯಾ ಧರ್ಮರಾಜನೇ! ತರುವಾಯ ಆ ವಾಸವೇಶ್ವರಕ್ಕೆ ಎರಡು ಮೈಲಿಗಳ ದೂರದಲ್ಲಿ ಕೋಟೀಶ್ವರವೆಂಬ ತೀರ್ಥಶ್ರೇಷ್ಠವಿರುವುದು. ಆ ತೀರ್ಥದಲ್ಲಿ ಭಕ್ತಿಯಿಂದೆಸಗಿದ ಸ್ನಾನ, ದಾನ, ಜಪ, ಹೋಮ ಮತ್ತು ಶಿವಪೂಜಾದಿಗಳೆಲ್ಲವೂ ಕೋಟಿಗುಣದ್ದಾಗುವುದು.

೨. ಅಲ್ಲಿ ಗಂಧರ್ವರೊಡಗೂಡಿದ ದೇವತೆಗಳೂ, ಋಷಿಗಳೂ, ಸಿದ್ಧ ಚಾರಣರೂ ಪವಿತ್ರವಾದ ನರ್ಮದಾನದಿಯನ್ನು ಸಂದರ್ಶಿಸಲೋಸುಗ ಸಾಗರವನ್ನು ಕುರಿತು ಬಿಜಯಂಗೈಯುವರು.

೩–೫. ಧರ್ಮನಂದನ! ಆ ರೇವಾಸಾಗರ ಸಂಗಮದಲ್ಲಿ ದೇವತೆಗಳೆಲ್ಲರೂ ಕೋಟಿಗಟ್ಟಲೆಯಾಗಿ ನೆರೆದು ಆ ಸಂಗಮದ ಸೌಂದರ್ಯವನ್ನು ನೋಡಿ ವಿನೋದಪಟ್ಟುಕೊಂಡು, ಅಲ್ಲಿ ಮಿಂದು, ತಂತಮ್ಮ ಭಕ್ತ್ಯನುಗುಣವಾಗಿ ಶಂಕರನನ್ನು ಸ್ಥಾಪಿಸಿ, ಕೋಟೀಶ್ವರನಾಮಕನಾದ ಆತನನ್ನರ್ಚಿಸಿ, ಆ ಕೋಟಿತೀರ್ಥವಾಸಿಗಳೆಲ್ಲರನ್ನೂ ಸಂತೋಷಗೊಳಿಸಿ ಆ ಮೂಲಕ ಉತ್ಕೃಷ್ಟವಾದ ಸಿದ್ಧಿಯನ್ನು

**ತತ್ರ ತೀರ್ಥೇ ತು ಯತ್ಕಿಂಚಿಚ್ಛುಭಂ ವಾ ಯದಿ ವಾಽಶುಭಂ ।**
**ಕ್ರಿಯತೇ ನೃಪಶಾರ್ದೂಲ ಸರ್ವಂ ಕೋಟಿಗುಣಂ ಭವೇತ್ ॥ ೬ ॥**
**ತತ್ರ ತೀರ್ಥೇ ತು ಮಾರ್ಗಸ್ಥಾ ಯೇ ಕೇಚಿದೃಷಿಸತ್ತಮಾಃ ।**
**ಸಿದ್ಧಾಮೃತಪದಂ ಯಾಂತಿ ಪಿತೃಲೋಕಂ ತಥೋತ್ತಮಂ ॥ ೭ ॥**
**ಉತ್ತರೇ ನರ್ಮದಾತೀರೇ ದಕ್ಷಿಣೇ ಚಾಶ್ರಿತಾಶ್ಚ ಯೇ ।**
**ದೇವಲೋಕಂ ಗತಾಸ್ತತ್ರ ಇತಿ ಮೇ ನಿಶ್ಚಿತಾಮತಿಃ ॥ ೮ ॥**
**ಬಿಲ್ವಾರ್ಕಪುಷ್ಪೈರ್ಧತ್ತೂರಕುಶಕಾಶಪ್ರಸೂನಕೈಃ ।**
**ಋತೂದ್ಭವೈಸ್ತಥಾಽನ್ಯೈಶ್ಚ ಪೂಜಯಿತ್ವಾ ಮಹೇಶ್ವರಂ ॥ ೯ ॥**
**ನಾನೋಪಚಾರೈರ್ವಿಧಿವನ್ಮಂತ್ರಪೂರ್ವಂ ಯುಧಿಷ್ಠಿರ ।**
**ಧೂಪದೀಪಾಽರ್ಘ್ಯನೈವೇದ್ಯೈಸ್ತೋಷಯಿತ್ವಾ ಚ ಧೂರ್ಜಟಿಂ ॥ ೧೦ ॥**
**ಶಿವಲೋಕಮವಾಪ್ನೋತಿ ಯಾವದಿಂದ್ರಾಶ್ಚತುರ್ದಶ ।**
**ಪೌಷಕೃಷ್ಣಾಷ್ಟಮೀಯೋಗೇ ವಿಶೇಷಃ ಪೂಜನೇ ಸ್ಮೃತಃ ॥ ೧೧ ॥**

---

ಪಡೆದಿರುತ್ತಾರೆ. ಈ ಕಾರಣದಿಂದ ಸಮಸ್ತ ತೀರ್ಥಗಳಲ್ಲಿಯೂ ಈ ಕೋಟೀಶ್ವರ ತೀರ್ಥವು ಅನುಪಮ ಪುಣ್ಯಪ್ರದವಾದುದಾಗಿರುವುದು.

೬. ಎಲೈ ನೃಪಶಾರ್ದೂಲನೇ! ಆ ಕೋಟೀಶ್ವರತೀರ್ಥದಲ್ಲಿ ಶುಭವಾಗಲಿ, ಅಶುಭವಾಗಲಿ ಯಾವ ಕರ್ಮವನ್ನು ಮಾಡಿದರೂ ಅದು ಕೋಟಿಯಷ್ಟು ಫಲವನ್ನು ಕೊಡುತ್ತದೆ.

೭. ಆ ತೀರ್ಥಮಾರ್ಗದಲ್ಲಿರುವ ಋಷಿಸತ್ತಮರೂ, ಸಿದ್ಧರೂ, ಮುಕ್ತಿಯನ್ನು ಪಡೆಯುವುದು ಮಾತ್ರವಲ್ಲದೆ ಉತ್ತಮವಾದ ಪಿತೃಲೋಕವನ್ನೂ ಸೇರುತ್ತಾರೆ.

೮. ಅಂತೆಯೆ ನರ್ಮದೆಯ ದಕ್ಷಿಣೋತ್ತರತೀರಗಳಲ್ಲಿ ವಾಸಮಾಡಿಕೊಂಡಿರುವವರು ದೇವಲೋಕಕ್ಕೆ ತೆರಳುವರೆಂದು ನನ್ನ ನಿಶ್ಚಯವಾದ ಅಭಿಪ್ರಾಯವು.

೯–೧೧. ಮಹಾರಾಜ! ಬಿಲ್ವ, ಅರ್ಕಪುಷ್ಪ, ಧತ್ತೂರ, ಕುಶ, ಕಾಶ ಮತ್ತು ಇತರ ಸುಗಂಧ ಕುಸುಮಗಳಿಂದಲೂ, ವಿವಿಧೋಪಚಾರಗಳಿಂದಲೂ ಮಂತ್ರಪೂರ್ವಕವಾಗಿ ಶ್ರೀಮನ್ಮಹಾದೇವನನ್ನು ಪೂಜಿಸಿ, ಧೂಪ ದೀಪ ಅರ್ಘ್ಯ ನೈವೇದ್ಯಗಳಿಂದ ಆ ಧೂರ್ಜಟಿಯನ್ನು ಸಂತೋಷಗೊಳಿಸಿದ ಮಾನವರು ಹದಿನಾಲ್ಕುಮಂದಿ ದೇವೇಂದ್ರರಿರುವವರೆಗೂ ಶಿವಲೋಕದಲ್ಲಿ ಶಿವಸನ್ನಿಧಿಯಲ್ಲಿ ವಾಸವನ್ನು ಪಡೆಯುತ್ತಾರೆ. ಕೋಟೀಶ್ವರತೀರ್ಥದಲ್ಲಿ ಪುಷ್ಯ ಶುದ್ಧ ಅಷ್ಟಮಿಯು ಬಹು ಪುಣ್ಯಪ್ರದವಾದುದು. ಈ ದಿನ ಶಿವನನ್ನು ವಿಶೇಷವಾಗಿ ಪೂಜಿಸತಕ್ಕದು.

ನಿತ್ಯಂ ಚ ನೃಪತಿಶ್ರೇಷ್ಠ ಚತುರ್ದಶ್ಯಷ್ಟಮಿಷು ಚ ।
ಶಿವಮಭ್ಯರ್ಚ್ಯ ವಿಪ್ರಾಂಶ್ಚ ಭೋಜಯೇದ್ಭಕ್ತಿತೋ ವರಾನ್ ॥ ೧೨ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ
ಪಂಚಮೇ ಆವಂತ್ಯಖಂಡೇ ತೃತೀಯೇ ರೇವಾಖಂಡೇ
" ಕೋಟೀಶ್ವರತೀರ್ಥಮಾಹಾತ್ಮ್ಯವರ್ಣನಂ " ನಾಮ
ಚತುರ್ವಿಂಶತ್ಯಧಿಕದ್ವಿಶತತಮೋಽಧ್ಯಾಯಃ

---

೧೨. ಎಲೈ ನೃಪಶ್ರೇಷ್ಠನೇ! ಪ್ರತಿಪಕ್ಷದ ಅಷ್ಟಮಿ ಚತುರ್ದಶೀ ತಿಥಿಗಳಂದು ಆ ಕೋಟೀಶ್ವರನನ್ನು ಸತತವೂ ಪೂಜಿಸಿ ಶ್ರೇಷ್ಠರಾದ ವಿಪ್ರರನ್ನು ಭೋಜನಮಾಡಿಸಬೇಕು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ
ಶ್ರೀ ಸ್ಕಾಂದಮಹಾಪುರಾಣದ ಐದನೆಯ ಆವಂತ್ಯಖಂಡದ ಮೂರನೆಯ ರೇವಾಖಂಡದಲ್ಲಿ
" ಕೋಟೀಶ್ವರತೀರ್ಥಮಹಾತ್ಮ್ಯವರ್ಣನ "ವೆಂಬ
ಇನ್ನೂರಿಪ್ಪತ್ತನಾಲ್ಕನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

# ಅಥ ಪಂಚವಿಂಶತ್ಯಧಿಕದ್ವಿಶತತಮೋಽಧ್ಯಾಯಃ

## ಅಲಿಕೇಶ್ವರತೀರ್ಥಮಾಹಾತ್ಮ್ಯವರ್ಣನಂ

ಶ್ರೀ ಮಾರ್ಕಂಡೇಯ ಉವಾಚ :—

ತತಃ ಕ್ರೋಶಾಂತರೇ ಗಚ್ಛೇದಲಿಕಾತೀರ್ಥಮುತ್ತಮಂ ।
ಅಲಿಕಾ ನಾಮ ಗಂಧರ್ವೀ ಕುಶೀಲಾ ಕುಟಿಲಾಶಯಾ ॥ ೧ ॥
ಚಿತ್ರಸೇನಸ್ಯ ದೌಹಿತ್ರೀ ವಿದ್ಯಾನಂದಮೃಷಿಂ ಗತಾ ।
ವವ್ರೇ ತಂ ಸ್ವೀಕೃತಾ ತೇನ ದಶವರ್ಷಾಣಿ ತಂ ಶ್ರಿತಾ ॥ ೨ ॥
ಪತಿಂ ಜಘಾನ ತಂ ಸುಪ್ತಂ ಕಸ್ಮಿಂಶ್ಚಿತ್ಕಾರಣಾಂತರೇ ।
ಗತ್ವಾ ನಿವೇದಯಾಮಾಸ ಪಿತರಂ ರತ್ನವಲ್ಲಭಂ ॥ ೩ ॥
ಪಿತ್ರಾ ಮಾತ್ರಾ ಚ ಸಂತ್ಯಕ್ತಾ ಬಹುಭಿರ್ಭರ್ತ್ಸಿತಾ ನೃಪ ।
ಗರ್ಭಘ್ನೀ ತ್ವಂ ಪತಿಘ್ನೀ ತ್ವಮಿತಿ ದರ್ಶಯ ಮಾ ಮುಖಂ ॥ ೪ ॥
ಬ್ರಹ್ಮಘ್ನೀ ಯಾಹಿ ಪಾಪಿಷ್ಠೇ ಪರಿತ್ಯಕ್ತಾ ಗೃಹಾದ್ವ್ರಜ ॥ ೫ ॥

ಮಾರ್ಕಂಡೇಯ ಉವಾಚ :—

ಇತಿ ದುಃಖಾನ್ವಿತಾ ಮೂಢಾ ತಾಭ್ಯಾಂ ನಿರ್ಭರ್ತ್ಸಿತಾ ಸತೀ ।
ತನುಂ ತ್ಯಕ್ತುಂ ಮನಶ್ಚಕ್ರೇ ಪ್ರಾಪ್ಯ ತೀರ್ಥಾಂತರಂ ಕ್ವಚಿತ್ ॥ ೬ ॥

---

## ಕನ್ನಡದ ಅನುವಾದ

### ಅಲಿಕೇಶ್ವರತೀರ್ಥಮಾಹಾತ್ಮ್ಯವರ್ಣನ

೧–೨. ಶ್ರೀ ಮಾರ್ಕಂಡೇಯನು ಹೇಳುತ್ತಾನೆ :—ಅನಂತರ ಎರಡು ಮೈಲಿ ದೂರದಲ್ಲಿರುವ ಉತ್ತಮವಾದ ಅಲಿಕಾತೀರ್ಥಕ್ಕೆ ಹೋಗಬೇಕು. ದುಷ್ಟಸ್ವಭಾವದವಳೂ, ವಕ್ರವಾದ ಅಭಿಪ್ರಾಯವುಳ್ಳವಳೂ, ಚಿತ್ರಸೇನನ ಮೊಮ್ಮಗಳೂ ಆದ ಅಲಿಕೆಯೆಂಬ ಗಂಧರ್ವಾಂಗನೆಯು ವಿದ್ಯಾನಂದನೆಂಬ ಮುನಿಯನ್ನು ವರಿಸಿ ಹತ್ತುವರ್ಷಗಳಕಾಲ ಅವನೊಡನೆ ಸಂಸಾರ ಮಾಡುತ್ತಿದ್ದಳು.

೩. ಅವಳು ಯಾವುದೊ ಒಂದು ಕಾರಣದಿಂದ ಮಲಗಿರುವ ಪತಿಯನ್ನು ವಧಿಸಿ ತನ್ನ ತಂದೆಯಾದ ರತ್ನವಲ್ಲಭನಿಗೆ ಆ ವಿಷಯವನ್ನು ತಿಳಿಸಿದಳು.

೪–೫. "ಗರ್ಭಘಾತಿನಿಯೂ, ಪತಿಘಾತಿನಿಯೂ, ಬ್ರಹ್ಮಹತ್ಯೆಮಾಡಿದವಳೂ, ಪಾಪಿಷ್ಠೆಯೂ ಆದ ನೀನು ನಮಗೆ ಮುಖವನ್ನು ತೋರಿಸಬೇಡ, ಮನೆಯಿಂದ ಹೊರಡು" ಎಂದು ತಂದೆ, ತಾಯಿ ಮತ್ತು ಇತರ ಬಹುಜನರೂ ಗದರಿಸಿ ಅವಳನ್ನು ತ್ಯಜಿಸಿದರು.

೬. ಮಾರ್ಕಂಡೇಯನು ಹೇಳುತ್ತಾನೆ :—ಹೀಗೆ ಅವರಿಂದ ತಿರಸ್ಕೃತಳಾದ ಅವಳು ದುಃಖಗೊಂಡು ಯಾವುದಾದರೂ ಒಂದು ತೀರ್ಥವನ್ನು ಸೇರಿ ದೇಹವನ್ನು ತ್ಯಜಿಸಬೇಕೆಂದು ಆಲೋಚಿಸಿದಳು.

ಸಂಪೃಚ್ಛ್ಯಮಾನಾ ತೀರ್ಥಾನಿ ಬ್ರಾಹ್ಮಣೇಭ್ಯೋ ಯುಧಿಷ್ಠಿರ ।
ಶ್ರುತ್ವಾ ಪಾಪಹರಂ ತೀರ್ಥಂ ರೇವಾಸಾಗರಸಂಗಮೇ ॥ ೭ ॥
ತತ್ರ ಪಾರ್ಥ ತಪಶ್ಚಕ್ರೇ ನಿರಾಹಾರಾ ಜಿತವ್ರತಾ ।
ಕೃಚ್ಛ್ರಾತಿಕೃಚ್ಛ್ರಪಾರಾಕ ಮಹಾಸಾಂತಪನಾದಿಭಿಃ ॥ ೮ ॥
ಚಾಂದ್ರಾಯಣೈರ್ಬ್ರಹ್ಮಕೂರ್ಚೈಃ ಕರ್ಶಯಾಮಾಸ ವೈ ತನುಂ ।
ಏವಂ ವರ್ಷಶತಂ ಸಾರ್ಧಂ ವ್ಯತೀತಂ ತಪಸಾ ನೃಪ ॥ ೯ ॥
ತಸ್ಯಾ ವಿಶುದ್ಧಿಮಿಚ್ಛಂತ್ಯಾಃ ಶಿವಧ್ಯಾನಾರ್ಚನಾದಿಭಿಃ ।
ತತಃ ಕತಿಪಯಾಹೋಭಿಸ್ತಸ್ಯಾ ಜ್ಞಾತ್ವಾ ಹಠಂ ಪರಂ ।
ಪರಿತುಷ್ಟಃ ಶಿವಂ ಪ್ರಾಹ ಪಾರ್ವತ್ಯಾ ಪರಿನೋದಿತಃ ॥ ೧೦ ॥

**ಈಶ್ವರ ಉವಾಚ :—**

ಪುತ್ರಿ ಮಾ ಸಾಹಸಂ ಕಾರ್ಷೀಃ ಶುದ್ಧದೇಹಾಽಸಿ ಸಾಂಪ್ರತಂ ।
ತುಷ್ಟೋಽಹಂ ತಪಸಾ ತೇಽದ್ಯ ವರಂ ವರಯ ವಾಂಛಿತಂ ॥ ೧೧ ॥

**ಅಲಿಕೋವಾಚ :—**

ಯದಿ ತುಷ್ಟೋಽಸಿ ದೇವೇಶ ವರಾರ್ಹಾ ಯದ್ಯಹಂ ಮತಾ ।
ನಾನಾಪಾಪಾಗ್ನಿತಪ್ತಾಯಾ ದೇಹಿ ಶುದ್ಧಿಂ ಪರಾಂ ಮಮ ॥ ೧೨ ॥

---

೭–೯. ಯುಧಿಷ್ಠಿರ! ಅವಳು ಬ್ರಾಹ್ಮಣರಿಂದ ತೀರ್ಥವಿಷಯವನ್ನು ಕೇಳಿ ತಿಳಿದುಕೊಳ್ಳುತ್ತ ರೇವಾಸಾಗರಸಂಗಮವು ಪಾಪವನ್ನು ನಿವಾರಿಸುವ ತೀರ್ಥವೆಂದರಿತು ಅಲ್ಲಿ ನಿರಾಹಾರಳೂ, ವ್ರತವನ್ನು ಕೈಗೊಂಡವಳೂ ಆಗಿ ಕೃಚ್ಛ್ರ, ಅತಿಕೃಚ್ಛ್ರ, ಪಾರಾಕ, ಮಹಾಸಾಂತಪನ, ಚಾಂದ್ರಾಯಣ, ಬ್ರಹ್ಮಕೂರ್ಚ ಮೊದಲಾದುವುಗಳಿಂದ ಶರೀರವನ್ನು ಕೃಶಗೊಳಿಸಿದಳು. ಹೀಗೆ ಅವಳು ತಪಸ್ಸನ್ನು ಮಾಡುತ್ತಿರಲು ನೂರೈವತ್ತುವರ್ಷಗಳು ಕಳೆದುವು.

೧೦. ಅನಂತರ ಕೆಲವು ದಿವಸಗಳಲ್ಲಿ ಶಂಕರನು ತನ್ನ ಧ್ಯಾನಪೂಜಾದಿಗಳಿಂದ ವಿಶುದ್ಧಿಯನ್ನು ಬಯಸುವ ನಿರತಿಶಯವಾದ ಅವಳ ಹಠವನ್ನರಿತು ಪಾರ್ವತಿಯ ಪ್ರೇರಣೆಯಿಂದ ಸಂತುಷ್ಟನಾಗಿ ಅವಳನ್ನು ಕುರಿತು ಹೀಗೆಂದನು.

೧೧. ಈಶ್ವರನು ಹೇಳುತ್ತಾನೆ:—ಮಗಳೆ! ನೀನು ಸಾಹಸಕಾರ್ಯವನ್ನು ಮಾಡಬೇಡ. ಈಗ ನೀನು ಶುದ್ಧವಾದ ಶರೀರವುಳ್ಳವಳಾಗಿರುವೆ. ನಿನ್ನ ತಪಸ್ಸಿನಿಂದ ನಾನು ಸಂತುಷ್ಟನಾಗಿದ್ದೇನೆ. ಇಷ್ಟವಾದ ವರವನ್ನು ಕೇಳಿಕೊ.

೧೨. ಅಲಿಕೆಯು ಹೇಳುತ್ತಾಳೆ:—ಶಂಕರ! ನೀನು ಸಂತುಷ್ಟನಾಗಿದ್ದರೆ ನಾನು ನೀನು ಅನುಗ್ರಹಿಸುವ ವರಕ್ಕೆ ಅರ್ಹಳಾಗಿದ್ದರೆ ಅನೇಕ ಪಾಪಗಳೆಂಬ ಅಗ್ನಿಯಿಂದ ಸಂತಪ್ತಳಾದ ನನಗೆ ಉತ್ತಮವಾದ ಶುದ್ಧಿಯನ್ನು ನೀಡು.

ತ್ವಂ ಮೇ ನಾಥೋ ಹ್ಯನಾಥಾಯಾಸ್ತ್ವಮೇವ ಜಗತಾಂ ಗುರುಃ ।
ದೀನಾಽನಾಥಸಮುದ್ಧರ್ತಾ ಶರಣ್ಯಃ ಸರ್ವದೇಹಿನಾಂ ॥ ೧೩ ॥

ಈಶ್ವರ ಉವಾಚ :—

ತ್ವಂ ಭದ್ರೇ ಶುದ್ಧದೇಹಾಽಸಿ ಮಾ ಕಿಂಚಿದನುಶೋಚಿಥಾಃ ।
ಸ್ವನಾಮ್ನಾ ಸ್ಥಾಪಯಿತ್ವೇಹ ಮಾಂ ತತಃ ಸ್ವರ್ಗಮೇಷ್ಯಸಿ ॥ ೧೪ ॥
ಇತ್ಯುಕ್ತ್ವಾ ದೇವದೇವೇಶಸ್ತತ್ರೈವಾಂತರಧೀಯತ ।
ಅಲಿಕಾಽಪಿ ತತೋ ಭಕ್ತ್ಯಾ ಸ್ನಾತ್ವಾ ಸಂಸ್ಥಾಪ್ಯ ಶಂಕರಂ ॥ ೧೫ ॥
ದತ್ವಾ ದಾನಂ ಚ ವಿಪ್ರೇಭ್ಯೋ ಲೋಕಮಾಪ ಮಹೋತ್ಕಟಂ ।
ಪಿತರಂ ಚ ಸಮಾಸಾದ್ಯ ಮಾತರಂ ಚ ಯುಧಿಷ್ಠಿರ ॥ ೧೬ ॥
ತೈಶ್ಚ ಸನ್ಮಾನಿತಾ ಪ್ರೀತ್ಯಾ ಬಂಧುಭಿಃ ಸಾಲಿಕಾ ತತಃ ।
ವಿಮಾನವರಮಾರೂಢಾ ದಿವ್ಯಮಾಲಾನ್ವಿತಾ ನೃಪ ॥ ೧೭ ॥
ಗೌರೀಲೋಕಮನುಸ್ಪ್ರಾಪ್ತಾ ಸಖಿತ್ವೇಽದ್ಯಾಽಪಿ ಮೋದತೇ ।
ತತಃ ಪ್ರಭೃತಿ ತತ್ಪಾರ್ಥ ವಿಖ್ಯಾತಮಲಿಕೇಶ್ವರಂ ॥ ೧೮ ॥
ತತ್ರ ತೀರ್ಥೇ ತು ಯಾ ನಾರೀ ಪುರುಷೋ ವಾ ಯುಧಿಷ್ಠಿರ ।
ಸ್ನಾತ್ವಾ ಸಂಪೂಜಯೇದ್ಭಕ್ತ್ಯಾ ಮಹಾದೇವಮುಮಾಯುತಂ ॥ ೧೯ ॥

---

೧೩. ಜಗದ್ಗುರುವೂ, ದೀನಾನಾಥರನ್ನು ಉದ್ಧರಿಸುವವನೂ, ಸಕಲ ಪ್ರಾಣಿಗಳನ್ನು ರಕ್ಷಿಸುವವನೂ ಆದ ನೀನು ಅನಾಥಳಾದ ನನಗೆ ರಕ್ಷಕನಾಗಿರುವೆ.

೧೪. ಈಶ್ವರನು ಹೇಳುತ್ತಾನೆ:—ಮಂಗಳಕರಳೆ! ನೀನು ಶುದ್ಧಶರೀರಳಾಗಿರುವೆ. ಸ್ವಲ್ಪವೂ ದುಃಖಿಸಬೇಡ. ಇಲ್ಲಿ ನಿನ್ನ ಹೆಸರಿನಿಂದ ನನ್ನನ್ನು ಸ್ಥಾಪಿಸಿ ತರುವಾಯ ಸ್ವರ್ಗಕ್ಕೆ ತೆರಳುವೆ.

೧೫–೧೮. ಶಂಕರನು ಹೀಗೆ ಹೇಳಿ ಅಲ್ಲಿಯೇ ಅಂತರ್ಧಾನವಾದನು. ಅನಂತರ ಅಲಿಕೆಯು ಭಕ್ತಿಯಿಂದ ಅಲ್ಲಿಯ ತೀರ್ಥದಲ್ಲಿ ಮಿಂದು ಶಂಕರನನ್ನು ಸ್ಥಾಪಿಸಿ, ಬ್ರಾಹ್ಮಣರಿಗೆ ದಾನವನ್ನಿತ್ತು, ಉತ್ತಮ ಲೋಕವನ್ನು ಹೊಂದಿ ತಂದೆ ತಾಯಿಗಳನ್ನು ಸೇರಿ ಅವರಿಂದಲೂ, ಬಂಧುಗಳಿಂದಲೂ ಸನ್ಮಾನಿತಳಾಗಿ ಉತ್ತಮ ವಿಮಾನವನ್ನೇರಿ, ದಿವ್ಯಮಾಲೆಯನ್ನು ಧರಿಸಿ ಗೌರೀಲೋಕವನ್ನು ಸೇರಿ ಈಗಲೂ ಆ ದೇವಿಗೆ ಸಖಿಯಾಗಿ ಆನಂದಿಸುತ್ತಿರುವಳು. ಅದು ಮೊದಲ್ಗೊಂಡು ಆ ತೀರ್ಥವು ಅಲಿಕೇಶ್ವರವೆಂದು ವಿಖ್ಯಾತವಾಯಿತು.

೧೯–೨೧. ಆ ತೀರ್ಥದಲ್ಲಿ ಹೆಂಗಸಾಗಲಿ, ಗಂಡಸಾಗಲಿ ಮಿಂದು ಉಮಾಸಹಿತನಾದ ಶಂಕರನನ್ನು ಪೂಜಿಸಿದರೆ ಅವರು ವಿವಿಧ ಪಾಪಗಳಿಂದ ಮುಕ್ತರಾಗಿ

ಸ ಪಾಪೈರ್ವಿನಿರ್ಮುಕ್ತೋ ಲೋಕಮಾಪ್ನೋತಿ ಶಾಂಕರಂ ।
ಮಾನಸಂ ವಾಚಿಕಂ ಪಾಪಂ ಕಾಯಿಕಂ ಯತ್ಪುರಾಕೃತಂ ॥ ೨೦ ॥
ಸರ್ವಂ ತದ್ವಿಲಯಂ ಯಾತಿ ಭೋಜಯಿತ್ವಾ ದ್ವಿಜಾನ್ ಸದಾ ।
ದೀಪಂ ದತ್ವಾ ಚ ದೇವಾಗ್ರೇ ನ ರೋಗೈಃ ಪರಿಭೂಯತೇ ॥ ೨೧ ॥
ಧೂಪಪಾತ್ರಂ ವಿಮಾನಂ ಚ ಘಂಟಾಂ ಕಲಶಮೇವ ಚ ।
ದತ್ವಾ ದೇವಾಯ ರಾಜೇಂದ್ರ ಶಾಕ್ರಂ ಲೋಕಮವಾಪ್ನುಯಾತ್ ॥ ೨೨ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ
ಪಂಚಮೇ ಆವಂತ್ಯಖಂಡೇ ತೃತೀಯೇ ರೇವಾಖಂಡೇ
"ಅಲಿಕೇಶ್ವರತೀರ್ಥಮಾಹಾತ್ಮ್ಯವರ್ಣನಂ"
ನಾಮ ಪಂಚವಿಂಶತ್ಯಧಿಕದ್ವಿಶತತಮೋಽಧ್ಯಾಯಃ

---

ಶಿವಲೋಕವನ್ನು ಸೇರುವರು. ಯಾವಾಗಲೂ ಬ್ರಾಹ್ಮಣರನ್ನು ಭೋಜನಮಾಡಿಸಿದರೆ ಹಿಂದೆ ಮಾಡಿದ ಮಾನಸ, ವಾಚಿಕ, ಕಾಯಿಕರೂಪವಾದ ಪಾಪಗಳು ಪರಿಹಾರವಾಗುವುವು. ಶಂಕರನ ಸನ್ನಿಧಿಯಲ್ಲಿ ದೀಪದಾನಮಾಡಿದರೆ ನೀರೋಗಿಯಾಗುವನು.

೨೨. ಮಹಾರಾಜ! ಧೂಪಪಾತ್ರ, ವಿಮಾನ, ಘಂಟೆ, ಕಲಶಗಳನ್ನು ಶಂಕರನಿಗೆ ಕೊಟ್ಟವನು ಇಂದ್ರಲೋಕವನ್ನು ಸೇರುವನು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ
ಶ್ರೀ ಸ್ಕಾಂದಮಹಾಪುರಾಣದ ಐದನೆಯ ಆವಂತ್ಯಖಂಡದ ಮೂರನೆಯ ರೇವಾಖಂಡದಲ್ಲಿ
"ಅಲಿಕೇಶ್ವರತೀರ್ಥಮಾಹಾತ್ಮ್ಯವರ್ಣನ"ವೆಂಬ
ಇನ್ನೂರಿಪ್ಪತ್ತೈದನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

## ಅಥ ಷಡ್ವಿಂಶತ್ಯಧಿಕದ್ವಿಶತತಮೋಽಧ್ಯಾಯಃ

### ವಿಮಲೇಶ್ವರತೀರ್ಥಮಾಹಾತ್ಮ್ಯವರ್ಣನಂ

ಶ್ರೀ ಮಾರ್ಕಂಡೇಯ ಉವಾಚ:—

ತತಃ ಕ್ರೋಶಾಂತರೇ ಪುಣ್ಯಂ ತೀರ್ಥಂ ತದ್ವಿಮಲೇಶ್ವರಂ ।
ಯತ್ರ ಸ್ನಾನೇನ ದಾನೇನ ಜಪಹೋಮಾರ್ಚನಾದಿಭಿಃ ॥ ೧
ವಿಮಲೇಶ್ವರಮಾರಾಧ್ಯ ಯೋ ಯದಿಚ್ಛೇತ್ಸ ತಲ್ಲಭೇತ್ ।
ಸ್ವರ್ಗಲಾಭಾದಿಕಂ ವಾಽಪಿ ಪಾರ್ಥಿವಂ ವಾ ಯಥೇಪ್ಸಿತಂ ॥ ೨
ಪುರಾ ತ್ರಿಶಿರಸಂ ಹತ್ವಾ ತ್ವಷ್ಟುಃ ಪುತ್ರಂ ಶತಕ್ರತುಃ ।
ಯಸ್ಯ ತೀರ್ಥಸ್ಯ ಮಾಹಾತ್ಮ್ಯಾದ್ವೈಮಲ್ಯಂ ಪರಮಂ ಗತಃ ॥ ೩
ಯತ್ರ ವೇದನಿಧಿರ್ವಿಪ್ರೋ ಮಹತ್ತಪ್ತ್ವಾ ತಪಃ ಪುರಾ ।
ನಾನಾಕರ್ಮಮಲೈಃ ಕ್ಷೀಣೈರ್ವಿಮಲೋಽಭವದರ್ಕವತ್ ॥ ೪
ಮಹಾದೇವ ಪ್ರಸಾದೇನ ಸೋಮವತ್ಪ್ರಿಯದರ್ಶನಃ ।
ಪುರಾ ಭಾನುಮತೀಂ ಭಾನುಃ ಸುತಾಂ ಸ್ಮರಶರಾರ್ದಿತಃ ॥ ೫
ಚಕಮೇ ತೇನ ದೋಷೇಣ ಕುಷ್ಠರೋಗಾರ್ದಿತೋಽಭವತ್ ।
ಸಚಾಪ್ಯತ್ರ ತಪಸ್ತಪ್ತ್ವಾ ವಿಮಲತ್ವಮುಪಾಗತಃ ॥ ೬

---

### ಕನ್ನಡದ ಅನುವಾದ

#### ವಿಮಲೇಶ್ವರತೀರ್ಥಮಾಹಾತ್ಮ್ಯವರ್ಣನ

೧–೨. ಮಾರ್ಕಂಡೇಯನು ಹೇಳುತ್ತಾನೆ:—ಅನಂತರ ಎರಡು ಮೈಲಿಗ ದೂರದಲ್ಲಿ ವಿಮಲೇಶ್ವರವೆಂಬ ತೀರ್ಥವಿರುವುದು. ಅಲ್ಲಿ ಸ್ನಾನ, ದಾನ, ಜಪ ಹೋಮ, ಅರ್ಚನೆ ಮೊದಲಾದುವುಗಳಿಂದ ವಿಮಲೇಶ್ವರನನ್ನು ಪೂಜಿಸಿದರೆ ಇಷ್ಟ ವಾದ ಸ್ವರ್ಗಲಾಭಾದಿಗಳೂ, ಭೂಲೋಕದ ಇಷ್ಟಾರ್ಥಗಳೂ ದೊರೆಯುವುವು

೩. ಹಿಂದೆ ಇಂದ್ರನು ತ್ವಷ್ಟೃವಿನ ಸುತನಾದ ತ್ರಿಶಿರಸನನ್ನು ಕೊಂದ ಈ ತೀರ್ಥದ ಮಾಹಾತ್ಮ್ಯದಿಂದ ಶುದ್ಧನಾದನು.

೪–೧೦. ವೇದನಿಧಿಯೆಂಬ ಬ್ರಾಹ್ಮಣನು ಮಹಾ ತಪವನ್ನಾಚರಿಸಿ ದೋಷ ಗಳು ಪರಿಹಾರವಾದುದರಿಂದ ಸೂರ್ಯನಂತೆ ಶುದ್ಧನಾದನು. ಮತ್ತು ಮಹ ದೇವನ ಅನುಗ್ರಹದಿಂದ ಚಂದ್ರನಂತೆ ಸುಂದರನಾದನು. ಹಿಂದೆ ಮನ್ಮ ಬಾಣದಿಂದ ಪೀಡಿತನಾದ ಸೂರ್ಯನು ಭಾನುಮತಿಯೆಂಬ ತನ್ನ ಮಗಳನ ಕಾಮಿಸಿ ಆ ದೋಷದಿಂದ ಕುಷ್ಠರೋಗಪೀಡಿತನಾದನು. ಅವನೂ ಇಲ್ಲಿ ತಪಸ್ಸನ ಮಾಡಿ ಶುದ್ಧನಾದನು. ಮತ್ತು ಸಂತುಷ್ಟನಾದ ಮಹಾದೇವನಿಂದ ತನ

ಮಹಾದೇವೇನ ತುಷ್ಟೇನ ಸ್ವಸ್ಥಾನಂ ಮುದಿತೋಽಭಜತ್ ।
ತಥೈವ ಚ ಪುರಾ ಪಾರ್ಥ ವಿಭಾಂಡಕಸುತೋ ಮುನಿಃ ॥ ೭ ॥
ಯೋಗಿಸಂಗಂ ವನೇ ಪ್ರಾಪ್ಯ ಪುರೇ ಚ ನೃಪತೇಸ್ತಥಾ ।
ರಾಜಸಂಸರ್ಗದೋಷಾದ್ವೈ ಮಾಲಿನ್ಯಂ ಪರಮಾತ್ಮನಃ ॥ ೮ ॥
ವಿಚಾರಯನ್ನಭ್ಯುಪೇತ್ಯ ರೇವಾಸಾಗರಸಂಗಮಂ ।
ಶಾಂತಯಾ ಭಾರ್ಯಯಾ ಸಾರ್ಧಂ ತಪ್ತ್ವಾ ದ್ವಾದಶವತ್ಸರಾನ್ ॥ ೯ ॥
ಕೃಚ್ಛ್ರಚಾಂದ್ರಾಯಣೈರ್ದೇವಂ ತೋಷಯಂಸ್ತ್ರ್ಯಂಬಕಂ ಮುನಿಃ ।
ಮಹಾದೇವೇನ ತುಷ್ಟೇನ ಸೋಽಸಿ ವೈಮಲ್ಯ ಮಾಪ್ತವಾನ್ ॥ ೧೦ ॥
ಶರ್ವಾಣ್ಯಾ ಪ್ರೇರಿತಃ ಶರ್ವಃ ಪುರಾ ದಾರುವನೇ ನೃಪ ।
ಮೋಹನಾನ್ಮುನಿಪತ್ನೀನಾಂ ಸ್ವಂ ವೀಕ್ಷ್ಯ ವಿಮಲಂ ಕಿಲ ॥ ೧೧ ॥
ವಿಚಾರ್ಯ ಪರಮಸ್ಥಾನಂ ನರ್ಮದೋದಧಿಸಂಗಮಂ ।
ತತ್ರ ಸ್ಥಿತ್ವಾ ಮಹಾರಾಜ ತಪಸ್ತಪ್ತ್ವಾ ಸಹೋಮಯಾ ॥ ೧೨ ॥
ವಿಮಲೋಽಸೌ ಯತೋ ಜಾತಸ್ತೇನಾಽಸೌ ವಿಮಲೇಶ್ವರಃ ।
ತೇನ ನಾಮ್ನಾ ಸ್ವಯಂ ತಸ್ಥೌ ಲೋಕಾನಾಂ ಹಿತಕಾಮ್ಯಯಾ ॥ ೧೩ ॥
ತತಸ್ತಿಲೋತ್ತಮಾಂ ಸೃಷ್ಟ್ವಾ ಬ್ರಹ್ಮಾ ಲೋಕಪಿತಾಮಹಃ ।
ಪ್ರಜಾನಾಥೋಽಪಿ ತಾಂ ಸೃಷ್ಟಾಂ ದೃಷ್ಟ್ವಾಗ್ರೇ ಸುಮನೋಹರಾಂ ॥೧೪॥

---

ಸ್ಥಾನವನ್ನು ಸೇರಿ ಸಂತೋಷಿಸಿದನು. ಹಾಗೆಯೇ ಹಿಂದೆ ಕಾಡಿನಲ್ಲಿ ಋಷಿಗಳ ಸಹವಾಸದಲ್ಲಿದ್ದ ವಿಭಾಂಡಕನ ಮಗನಾದ ಋಷ್ಯಶೃಂಗಮುನಿಯು ಪಟ್ಟಣದಲ್ಲಿ ರಾಜನ ಸಂಬಂಧದಿಂದುಂಟಾದ ದೋಷದಿಂದ ತನ್ನ ದೋಷವನ್ನು ತಾನೇ ವಿಚಾರಿಸುತ್ತ ರೇವಾಸಾಗರಸಂಗಮಕ್ಕೆ ಬಂದು ಶಾಂತೆಯೆಂಬ ತನ್ನ ಪತ್ನಿಯೊಡನೆ ಹನ್ನೆರಡು ವರ್ಷಗಳ ತಪವನ್ನಾಚರಿಸಿ ಕೃಚ್ಛ್ರಚಾಂದ್ರಾಯಣಾದಿಗಳಿಂದ ಶಂಕರನನ್ನು ಸಂತೋಷಗೊಳಿಸುತ್ತ ಸಂತುಷ್ಟನಾದ ಶಂಕರನ ಅನುಗ್ರಹದಿಂದ ಶುದ್ಧಿಯನ್ನೈದಿದನು.

೧೧–೧೩. ಹಿಂದೆ ದಾರುವನದಲ್ಲಿ ಶಂಕರನು ಪಾರ್ವತಿಯ ಪ್ರೇರಣೆಯಿಂದ ಮುನಿಪತ್ನಿಯರನ್ನು ಮೋಹಗೊಳಿಸಿದ್ದರಿಂದ ಪಾಪಲಿಪ್ತನಾಗಿ ರೇವಾಸಾಗರಸಂಗಮವು ಉತ್ತಮಸ್ಥಾನವೆಂದರಿತು ಅಲ್ಲಿ ಉಮೆಯೊಡನೆ ತಪಸ್ಸನ್ನು ಮಾಡಿ ಶುದ್ಧನಾದನು. ಆದುದರಿಂದ ಅವನು ವಿಮಲೇಶ್ವರನೆಂದು ವಿಖ್ಯಾತನಾಗಿ ಆ ಹೆಸರಿನಿಂದ ಲೋಕಗಳಿಗೆ ಹಿತವನ್ನುಂಟುಮಾಡಲು ಅಲ್ಲಿ ನೆಲೆಸಿದನು.

೧೪–೧೬. ಲೋಕಪಿತಾಮಹನಾದ ಬ್ರಹ್ಮನು ತಿಲೋತ್ತಮೆಯನ್ನು ಸೃಜಿಸಿ ಪ್ರಜಾನಾಥನಾದಾಗ್ಯೂ ಮುಂದಿರುವ ಸುಂದರಿಯಾದ ಅವಳನ್ನು ನೋಡಿ ಮುಂದಣ ಯೋಗಬಲಾಕ್ರಾಂತನಾಗಿ ಅವಳಲ್ಲಿ ಕಾಮುಕನಾದನು.

ಭಾವಿಯೋಗಬಲಾಕ್ರಾಂತಃ ಸ ತಸ್ಯಾಮಭಿಕೋಽಭವತ್ ।
ತೇನ ವೀಕ್ಷ್ಯ ಸದೋಷತ್ವಂ ರೇವಾತೀರದ್ವಯಂ ಶ್ರಿತಃ ॥ ೧೫ ॥
ತೀರ್ಥಾನ್ಯನುಸರನ್ಮೌನೀ ತ್ರಿಸ್ನಾಯೀ ಸಂಸ್ಮರಂಛಿವಂ ।
ರೇವಾರ್ಣವಸಮಾಯೋಗೇ ಸ್ನಾತ್ವಾ ಸಂಪೂಜ್ಯ ಶಂಕರಂ ।
ಕಾಲೇನಾಲ್ಪೇನ ರಾಜರ್ಷೇ ಬ್ರಹ್ಮಾಪ್ಯಮಲತಾಂ ಗತಃ ॥ ೧೬ ॥
ಏವಮನ್ಯೇಽಪಿ ಬಹುಶೋ ದೇವರ್ಷಿನೃಪಸತ್ತಮಾಃ ।
ತ್ಯಕ್ತ್ವಾ ದೋಷಮಲಂ ತತ್ರ ವಿಮಲಾ ಬಹವೋಽಭವನ್ ॥ ೧೭ ॥
ತಥಾ ತ್ವಮಪಿ ರಾಜೇಂದ್ರ ತತ್ರ ಸ್ನಾತ್ವಾ ಶಿವಾರ್ಚನಾತ್ ।
ಅಮಲೋಽಪಿ ವಿಶೇಷೇಣ ವೈಮಲ್ಯಂ ಪ್ರಾಪ್ಸ್ಯಸೇ ಪರಂ ॥ ೧೮ ॥
ತತ್ರ ಸ್ನಾತ್ವಾ ನರೋ ನಾರೀ ಪೂಜಯಿತ್ವಾ ಮಹೇಶ್ವರಂ ।
ಪಾಪದೋಷವಿನಿರ್ಮುಕ್ತೋ ಬ್ರಹ್ಮಲೋಕೇ ಮಹೀಯತೇ ॥ ೧೯ ॥
ತತ್ರೋಪವಾಸಂ ಯಃ ಕೃತ್ವಾ ಪಶ್ಯೇತ ವಿಮಲೇಶ್ವರಂ ।
ಅಷ್ಟಮ್ಯಾಂ ಚ ಚತುರ್ದಶ್ಯಾಂ ಸರ್ವಪರ್ವಸು ಪಾರ್ಥಿವ ॥ ೨೦ ॥
ಸಪ್ತಜನ್ಮಕೃತಂ ಪಾಪಂ ಹಿತ್ವಾ ಯಾತಿ ಶಿವಾಲಯಂ ।
ಶ್ರಾದ್ಧಂ ಕೃತ್ವಾ ವಿಧಾನೇನ ಪಿತೄಣಾಮನೃಣೀ ಭವೇತ್ ।
ಬ್ರಾಹ್ಮಣಾನ್ ಭೋಜಯೇಚ್ಛಕ್ತ್ಯಾ ತೇಭ್ಯೋ ದದ್ಯಾಚ್ಚ ದಕ್ಷಿಣಾಂ ॥೨೧॥

---

ಆದರಿಂದ ತಾನು ದೋಷಿಯಾಗಿರುವೆನೆಂದರಿತು ತೀರ್ಥಗಳನ್ನರಸುತ್ತ ನರ್ಮದೆಯ ಎರಡೂ ದಡಗಳನ್ನು ಸೇರಿ ತ್ರಿಕಾಲಸ್ನಾನಮಾಡುತ್ತ ಶಂಕರನನ್ನು ಪೂಜಿಸಿ ಸ್ವಲ್ಪ ಕಾಲದಲ್ಲಿಯೇ ಶುದ್ಧನಾದನು.

೧೭. ಹೀಗೆಯೇ ಇತರ ಬಹುಮಂದಿ ದೇವತೆಗಳೂ, ರಾಜವರ್ಯರೂ ಅಲ್ಲಿ ದೋಷವನ್ನು ತ್ಯಜಿಸಿ ಶುದ್ಧರಾದರು.

೧೮. ಮಹಾರಾಜ! ಹಾಗೆಯೇ ನೀನು ಅಲ್ಲಿ ಮಿಂದು ಶಿವನನ್ನು ಪೂಜಿಸುವುದರಿಂದ ನಿರ್ಮಲನಾದಾಗ್ಯೂ ಅತ್ಯಂತ ನಿರ್ಮಲನಾಗುವೆ.

೧೯. ಅಲ್ಲಿ ಮಿಂದ ನರನೂ, ನಾರಿಯೂ, ಮಹೇಶ್ವರನನ್ನು ಪೂಜಿಸಿ ಪಾಪದೋಷಮುಕ್ತನಾಗಿ ಬ್ರಹ್ಮಲೋಕದಲ್ಲಿ ಪೂಜ್ಯನಾಗುವನು.

೨೦–೨೧. ಮಹಾರಾಜ! ಅಷ್ಟಮೀ, ಚತುರ್ದಶೀ, ಮತ್ತು ಸಕಲ ಪರ್ವಕಾಲಗಳಲ್ಲಿ ಅಲ್ಲಿ ಉಪವಾಸಮಾಡಿ ವಿಮಲೇಶ್ವರನನ್ನು ದರ್ಶನಗೈದವನು ಏಳು ಜನ್ಮಗಳಲ್ಲೆಸಗಿದ ಪಾಪವನ್ನು ನೀಗಿಸಿಕೊಂಡು ಶಿವಾಲಯವನ್ನು ಸೇರುವನು. ವಿಧಿಯಿಂದ ಪಿತೃಗಳಿಗೆ ಶ್ರಾದ್ಧಗೈದು ಋಣಮುಕ್ತನಾಗುವನು. ಬ್ರಾಹ್ಮಣರಿಗೆ ಭೋಜನಮಾಡಿಸಿ ಶಕ್ತ್ಯನುಸಾರ ಅವರಿಗೆ ದಕ್ಷಿಣೆಯನ್ನು ಕೊಡಬೇಕು.

ಯದ್ಯದಿಷ್ಟತಮಂ ಲೋಕೇ ಯಚ್ಚೈವಾತ್ಮಹಿತಂ ಗೃಹೇ ।
ತತ್ತದ್ಗುಣವತೇ ದೇಯಂ ತತ್ತೈವಾಕ್ಷಯಮಿಚ್ಛತಾ ।
ಸ್ವರ್ಣಧಾನ್ಯಾನಿ ವಾಸಾಂಸಿ ಛತ್ರೋಪಾನತ್ಕಮಂಡಲುಂ ॥ ೨೨ ॥
ಗೃಹಂ ದೇವಸ್ಯ ವೈ ಶಕ್ತ್ಯಾ ಕೃತ್ವಾ ಸ್ಯಾದ್ಭುವಿ ಭೂಪತಿಃ ।
ಗೀತನೃತ್ಯಕಥಾಭಿಶ್ಚ ತೋಷಯೇತ್ಪರಮೇಶ್ವರಂ ॥ ೨೩ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ
ಪಂಚಮೇ ಅವಂತ್ಯಖಂಡೇ ತೃತೀಯೇ ರೇವಾಖಂಡೇ
"ವಿಮಲೇಶ್ವರತೀರ್ಥಮಾಹಾತ್ಮ್ಯವರ್ಣನಂ" ನಾಮ
ಷಡ್ವಿಂಶತ್ಯಧಿಕದ್ವಿಶತತಮೋಽಧ್ಯಾಯಃ

---

೨೨. ಅಕ್ಷಯಫಲವನ್ನು ಬಯಸುವವನು ಲೋಕದಲ್ಲಿ ಅತಿ ಪ್ರಿಯವೂ, ಮನೆಯಲ್ಲಿ ತನಗೆ ಹಿತವೂ ಆದುದನ್ನೂ, ಸುವರ್ಣ, ಧಾನ್ಯ, ವಸ್ತ್ರ, ಕೊಡೆ, ಪಾದರಕ್ಷೆ, ಕಮಂಡಲು ಇವುಗಳನ್ನೂ ದಾನಮಾಡಬೇಕು.

೨೩. ಶಕ್ತ್ಯನುಸಾರ ಶಂಕರನಿಗೆ ಗೃಹವನ್ನು ನಿರ್ಮಿಸಿ ಗೀತ, ನೃತ್ಯ, ಕಥೆಗಳಿಂದ ಅವನನ್ನು ಆನಂದಗೊಳಿಸಿದವನು ರಾಜನಾಗುವನು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ
ಶ್ರೀ ಸ್ಕಾಂದಮಹಾಪುರಾಣದ ಐದನೆಯ ಅವಂತ್ಯಖಂಡದ ಮೂರನೆಯ ರೇವಾಖಂಡದಲ್ಲಿ
"ವಿಮಲೇಶ್ವರತೀರ್ಥಮಾಹಾತ್ಮ್ಯವರ್ಣನ"ವೆಂಬ
ಇನ್ನೂರಿಪ್ಪತ್ತಾರನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

## ಅಥ ಸಪ್ತವಿಂಶತ್ಯಧಿಕದ್ವಿಶತತಮೋಽಧ್ಯಾಯಃ

### ತೀರ್ಥಯಾತ್ರಾದಿವಿಧಾನವಿಶೇಷಕಥನಂ

ಶ್ರೀಮಾರ್ಕಂಡೇಯ ಉವಾಚ :—

ಏತಾನಿ ತವ ಸಂಕ್ಷೇಪಾತ್ಪ್ರಾಧಾನ್ಯಾತ್ಕಥಿತಾನಿ ಚ ।
ನ ಶಕ್ತ್ಯೋ ವಿಸ್ತರಾದ್ವಕ್ತುಂ ಸಂಖ್ಯಾಂ ತೀರ್ಥೇಷು ಪಾಂಡವ ॥ ೧ ॥
ಏಷಾ ಪವಿತ್ರಾ ವಿಮಲಾ ನದೀ ತ್ರೈಲೋಕ್ಯವಿಶ್ರುತಾ ।
ನರ್ಮದಾ ಸರಿತಾಂ ಶ್ರೇಷ್ಠಾ ಮಹಾದೇವಸ್ಯ ವಲ್ಲಭಾ ॥ ೨ ॥
ಮನಸಾ ಸಂಸ್ಮರೇದ್ಯಸ್ತು ನರ್ಮದಾಂ ಸತತಂ ನೃಪ ।
ಚಾಂದ್ರಾಯಣಶತಸ್ಯಾಶು ಲಭತೇ ಫಲಮುತ್ತಮಂ ॥ ೩ ॥
ಅಶ್ರದ್ದಧಾನಾಃ ಪುರುಷಾ ನಾಸ್ತಿಕಾಶ್ಚಾಽತ್ರ ಯೇ ಸ್ಥಿತಾಃ ।
ಪತಂತಿ ನರಕೇ ಘೋರೇ ಪ್ರಾಹೈವಂ ಪರಮೇಶ್ವರಃ ॥ ೪ ॥
ನರ್ಮದಾಂ ಸೇವತೇ ನಿತ್ಯಂ ಸ್ವಯಂ ದೇವೋ ಮಹೇಶ್ವರಃ ।
ತೇನ ಪುಣ್ಯಾ ನದೀ ಜ್ಞೇಯಾ ಬ್ರಹ್ಮಹತ್ಯಾಽಪಹಾರಿಣೀ ॥ ೫ ॥

---

### ಕನ್ನಡದ ಅನುವಾದ

#### ತೀರ್ಥಯಾತ್ರಾದಿವಿಧಾನವಿಶೇಷಕಥನ

೧. ಮಾರ್ಕಂಡೇಯನು ಹೇಳುತ್ತಾನೆ:—ಯುಧಿಷ್ಠಿರ! ನಾನು ನಿನಗೆ ಸಂಕ್ಷೇಪವಾಗಿ ಪ್ರಧಾನತೀರ್ಥಗಳನ್ನು ಹೇಳಿದ್ದೇನೆ. ಇವುಗಳನ್ನು ವಿಸ್ತಾರವಾಗಿ ಹೇಳಲು ಶಕ್ತನಲ್ಲ.

೨. ಪವಿತ್ರವೂ, ತ್ರಿಲೋಕವಿಶ್ರುತವೂ, ನದಿಗಳಲ್ಲಿ ಶ್ರೇಷ್ಠವೂ ಆದ ನರ್ಮದಾನದಿಯು ಶಂಕರನಿಗೆ ಪ್ರಿಯವಾದುದು.

೩. ಮಹಾರಾಜ! ನರ್ಮದಾನದಿಯನ್ನು ಯಾವಾಗಲೂ ಮನಸ್ಸಿನಿಂದ ಸ್ಮರಿಸುವವನು ನೂರು ಚಾಂದ್ರಾಯಣವ್ರತಗಳ ಫಲವನ್ನು ಜಾಗ್ರತೆಯಾಗಿ ಪಡೆಯುವನು.

೪. ಇಲ್ಲಿ ವಾಸಮಾಡುವ ಜನರು ಶ್ರದ್ಧೆಯಿಲ್ಲದವರೂ, ನಾಸ್ತಿಕರೂ ಆದರೆ ಘೋರ ನರಕದಲ್ಲಿ ಬೀಳುವರೆಂದು ಶಂಕರನು ಹೇಳಿರುತ್ತಾನೆ.

೫. ಈ ನರ್ಮದಾನದಿಯನ್ನು ಶಂಕರನು ತಾನೇ ನಿತ್ಯವೂ ಸೇವಿಸುತ್ತಾನೆ. ಆದುದರಿಂದ ಇದನ್ನು ಬ್ರಹ್ಮಹತ್ಯೆಯನ್ನು ನಿವಾರಿಸುವ ಪುಣ್ಯನದಿಯೆಂದು ತಿಳಿಯಬೇಕು.

ಇಯಂ ಮಾಹೇಶ್ವರೀ ಗಂಗಾ ಮಹೇಶ್ವರತನೂದ್ಭವಾ ।
ಪ್ರೋಕ್ತಾ ದಕ್ಷಿಣಗಂಗೇತಿ ಭಾರತಸ್ಯ ಯುಧಿಷ್ಠಿರ ॥ ೬ ॥
ಜಾಹ್ನವೀ ವೈಷ್ಣವೀ ಗಂಗಾ ಬ್ರಾಹ್ಮೀ ಗಂಗಾ ಸರಸ್ವತೀ ।
ಇಯಂ ಮಾಹೇಶ್ವರೀ ಗಂಗಾ ರೇವಾ ನಾಸ್ತ್ಯತ್ರ ಸಂಶಯಃ ॥ ೭ ॥
ಯಥಾ ಹಿ ಪುರುಷೋ ದೇವಸ್ತ್ರೈಮೂರ್ತತ್ವಮುಪಾಶ್ರಿತಃ ।
ಬ್ರಹ್ಮವಿಷ್ಣುಮಹೇಶಾಖ್ಯಂ ನ ಭೇದಸ್ತತ್ರ ವೈ ಯಥಾ ।
ತಥಾ ಸರಿತ್ರಯೇ ಪಾರ್ಥ ಭೇದಂ ಮನಸಿ ಮಾ ಕೃಥಾಃ ॥ ೮ ॥
ಕೋಟಿಶೋ ಹ್ಯತ್ರ ತೀರ್ಥಾನಿ ಲಕ್ಷಶಶ್ಚಾಽಪಿ ಭಾರತ ।
ತಥಾ ಸಹಸ್ರಶೋ ರೇವಾ ತೀರದ್ವಯುಗತಾನಿ ತು ॥ ೯ ॥
ವೃಕ್ಷಾಂತರಿಕ್ಷಸಂಸ್ಥಾನಿ ಜಲಸ್ಥಲಗತಾನಿ ಚ ।
ಕಃ ಶಕ್ತಸ್ತಾನಿ ನಿರ್ಣೇತುಂ ವಾಗೀಶೋ ವಾ ಮಹೇಶ್ವರಃ ॥ ೧೦ ॥
ಸ್ಮರಣಾಜ್ಜನ್ಮಜನಿತಂ ದರ್ಶನಾಚ್ಚ ತ್ರಿಜನ್ಮಜಂ ।
ಸಪ್ತಜನ್ಮಕೃತಂ ನಶ್ಯೇತ್ಪಾಪಂ ರೇವಾವಗಾಹನಾತ್ ॥ ೧೧ ॥
ದೇವಕಾರ್ಯಂ ಕೃತಂ ತೇನ ಹ್ಯಗ್ನಯೋ ವಿಧಿವದ್ಧುತಾಃ ।
ವೇಧಾ ಅಧೀತಾಶ್ಚತ್ವಾರೋ ಯೇನ ರೇವಾವಗಾಹಿತಾ ॥ ೧೨ ॥

---

೬. ಶಂಕರನ ಶರೀರದಲ್ಲಿ ಹುಟ್ಟಿದ ಈ ನರ್ಮದಾನದಿಯು ದಕ್ಷಿಣ ಗಂಗೆಯೆನ್ನಿಸಿಕೊಳ್ಳುವುದು.

೭. ಜಾಹ್ನವಿಯು ವೈಷ್ಣವಗಂಗೆಯೂ, ಸರಸ್ವತಿಯು ಬ್ರಾಹ್ಮೀಗಂಗೆಯೂ, ನರ್ಮದೆಯು ಮಾಹೇಶ್ವರೀ ಗಂಗೆಯೂ ಆಗಿರುವುದು. ಈ ವಿಷಯದಲ್ಲಿ ಸಂದೇಹವಿಲ್ಲ.

೮. ಪರಬ್ರಹ್ಮನು ತ್ರಿಮೂರ್ತಿಗಳ ಸ್ವರೂಪವನ್ನು ಹೊಂದಿ ಬ್ರಹ್ಮ, ವಿಷ್ಣು, ಮಹೇಶ್ವರರೆಂಬ ಹೆಸರುಗಳನ್ನು ಪಡೆದುದರಿಂದ ಅವರಲ್ಲಿ ಭೇದವಿಲ್ಲದಿರುವಂತೆ ಗಂಗಾ ಯಮುನಾ ಸರಸ್ವತೀ ನದಿಗಳಲ್ಲಿ ಭೇದವನ್ನು ಎಣಿಸಬೇಡ.

೯–೧೦. ನರ್ಮದಾನದಿಯ ಎರಡು ದಡಗಳಲ್ಲಿ ವೃಕ್ಷ, ಅಂತರಿಕ್ಷ, ಜಲ, ಸ್ಥಳಗಳಲ್ಲಿರುವ ಕೋಟ್ಯಂತರ ತೀರ್ಥಗಳನ್ನು ಬೃಹಸ್ಪತಿಯೂ ನಿರ್ಣಯಿಸಲು ಸಮರ್ಥನಲ್ಲ.

೧೧. ನರ್ಮದಾಸಾಗರಸಂಗಮವನ್ನು ಸ್ಮರಣೆಮಾಡುವುದರಿಂದ ಆ ಜನ್ಮದ ಪಾಪವೂ, ದರ್ಶನದಿಂದ ಮೂರು ಜನ್ಮಗಳ ಪಾಪವೂ, ಸ್ನಾನದಿಂದ ಏಳು ಜನ್ಮಗಳ ಪಾಪವೂ ನೀಗುವುದು.

೧೨. ನರ್ಮದೆಯಲ್ಲಿ ಮಿಂದವನು ದೇವಕಾರ್ಯವನ್ನು ಮಾಡಿದವನೂ, ಅಗ್ನಿಯಲ್ಲಿ ವಿಧಿಯಂತೆ ಹೋಮಿಸಿದವನೂ ನಾಲ್ಕು ವೇದಗಳನ್ನು ಅಧ್ಯಯನ ಮಾಡಿದವನೂ ಆಗುವನು.

ಪ್ರಾಧಾನ್ಯಾಚ್ಚಾಪಿ ಸಂಕ್ಷೇಪಾತ್ತೀರ್ಥಾನ್ಯುಕ್ತಾನಿ ತೇ ಮಯಾ ।
ನ ಶಕ್ಯೋ ವಿಸ್ತರಃ ಪಾರ್ಥ ಶ್ರೋತುಂ ವಕ್ತುಂ ಚ ನೈ ಮಯಾ ॥ ೧೩ ॥

ಯುಧಿಷ್ಠಿರ ಉವಾಚ :—

ವಿಧಾನಂ ಚ ಯಮಾಂಶ್ಚೈವ ನಿಯಮಾಂಶ್ಚ ವದಸ್ವ ಮೇ ।
ಪ್ರಾಯಶ್ಚಿತ್ತಾರ್ಥಗಮನೇ ಕೋ ವಿಧಿಸ್ತಂ ವದಸ್ವ ಮೇ ॥ ೧೪ ॥

ಶ್ರೀ ಮಾರ್ಕಂಡೇಯ ಉವಾಚ :—

ಸಾಧು ಪೃಷ್ಟಂ ಮಹಾರಾಜ ಯಚ್ಛ್ರೇಯಃ ಪಾರಲೌಕಿಕಂ ।
ಶೃಣುಷ್ವಾವಹಿತೋ ಭೂತ್ವಾ ಯಥಾಜ್ಞಾನಂ ವದಾಮಿ ತೇ ॥ ೧೫ ॥
ಅಧ್ರುವೇಣ ಶರೀರೇಣ ಧ್ರುವಂ ಕರ್ಮ ಸಮಾಚರೇತ್ ।
ಅವಶ್ಯಮೇವ ಯಾಸ್ಯಂತಿ ಪ್ರಾಣಾಃ ಪ್ರಾಘೂರ್ಣಿಕಾ ಇವ ॥ ೧೬ ॥
ದಾನಂ ವಿತ್ತಾದೃತಂ ವಾಚಃ ಕೀರ್ತಿಧರ್ಮೌ ತಥಾ ಯುಷಃ ।
ಪರೋಪಕರಣಂ ಕಾಯಾದಸಾರಾತ್ಸಾರಮುದ್ಧರೇತ್ ॥ ೧೭ ॥

ಅಸ್ಮಿನ್ಮಹಾಮೋಹಮಯೇ ಕಟಾಹೇ
ಸೂರ್ಯಾಗ್ನಿನಾ ರಾತ್ರಿದಿವೇಂಧನೇನ ।
ಮಾಸರ್ತುದರ್ವೀ ಪರಿಘಟ್ಟನೇನ
ಭೂತಾನಿ ಕಾಲಃ ಪಚತೀತಿ ವಾರ್ತಾ ॥ ೧೮ ॥

---

೧೩. ನಾನು ಮುಖ್ಯವಾದ ತೀರ್ಥಗಳನ್ನು ಹೇಳಿರುತ್ತೇನೆ. ಇವುಗಳನ್ನು ವಿಸ್ತಾರವಾಗಿ ಹೇಳುವುದಕ್ಕೂ, ಕೇಳುವುದಕ್ಕೂ ಸಾಧ್ಯವಿಲ್ಲ.

೧೪. ಯುಧಿಷ್ಠಿರನು ಹೇಳುತ್ತಾನೆ:—ಪ್ರಾಯಶ್ಚಿತ್ತಕ್ಕಾಗಿ ಆ ತೀರ್ಥಗಳಿಗೆ ಹೋಗಲು ವಿಧಿ, ಯಮ, ನಿಯಮಗಳನ್ನು ನನಗೆ ಹೇಳು.

೧೫. ಶ್ರೀ ಮಾರ್ಕಂಡೇಯನು ಹೇಳುತ್ತಾನೆ:—ಮಹಾರಾಜ! ನೀನು ಪರಲೋಕದ ಶ್ರೇಯಸ್ಸನ್ನು ಚೆನ್ನಾಗಿ ಪ್ರಶ್ನಿಸಿರುವೆ. ಅದನ್ನು ಸಾವಧಾನ ಮನಸ್ಸಿನಿಂದ ಕೇಳು. ನನಗೆ ತಿಳಿದಷ್ಟನ್ನು ಹೇಳುತ್ತೇನೆ.

೧೬. ಅಸ್ಥಿರವಾದ ಈ ದೇಹದಿಂದ ಸ್ಥಿರವಾದ ಕಾರ್ಯವನ್ನೆಸಗಬೇಕು. ಪ್ರಾಣಗಳು ಅತಿಥಿಗಳಂತೆ ನಿಶ್ಚಯವಾಗಿಯೂ ಹೊರಟುಹೋಗುವುವು.

೧೭. ದ್ರವ್ಯದಿಂದ ದಾನವನ್ನೂ, ಮಾತಿನಿಂದ ಸತ್ಯವನ್ನೂ, ಆಯುಸ್ಸಿನಿಂದ ಕೀರ್ತಿ ಧರ್ಮಗಳನ್ನೂ, ಶರೀರದಿಂದ ಪರೋಪಕಾರವನ್ನೂ ಹೀಗೆ ಅಸಾರವಾದುಗಳಿಂದ ಸಾರವಾದವುಗಳನ್ನು ಸಂಪಾದಿಸಬೇಕು.

೧೮. ಕಾಲವು ಮಹಾಮೋಹವೆಂಬ ಬಾಣಲೆಯಲ್ಲಿ ಸೂರ್ಯನೆಂಬ ಅಗ್ನಿಯಿಂದಲೂ, ಹಗಲು ರಾತ್ರಿಯೆಂಬ ಕಟ್ಟಿಗೆಯಿಂದಲೂ, ಮಾಸ ಋತುಗಳೆಂಬ ಸಟ್ಟುಗದ ಘಟ್ಟನದಿಂದಲೂ ಪ್ರಾಣಿಗಳನ್ನು ಬೇಯಿಸುವುದೆಂದು ಸಮಾಚಾರವಿದೆಯಷ್ಟೆ!

ಜ್ಞಾತ್ವಾ ಶಾಸ್ತ್ರವಿಧಾನೋಕ್ತಂ ಕರ್ಮ ಕರ್ತುಮಿಹಾರ್ಹಸಿ ।
ನಾಽಯಂ ಲೋಕೋಽಸ್ತಿ ನ ಪರೋ ನ ಸುಖಂ ಸಂಶಯಾತ್ಮನಃ ॥ ೧೯ ॥
ಮಂತ್ರೇ ತೀರ್ಥೇ ದ್ವಿಜೇ ದೇವೇ ದೈವಜ್ಞೇ ಭೇಷಜೇ ಗುರೌ ।
ಯಾದೃಶೀ ಭಾವನಾ ಯಸ್ಯ ಸಿದ್ಧಿರ್ಭವತಿ ತಾದೃಶೀ ॥ ೨೦ ॥
ಅಶ್ರದ್ಧಯಾ ಹುತಂ ದತ್ತಂ ತಪಸ್ತಪ್ತಂ ಕೃತಂ ಚ ಯತ್ ।
ಅಸದಿತ್ಯುಚ್ಯತೇ ಪಾರ್ಥ ನಚ ತತ್ಪ್ರೇತ್ಯ ನೋ ಇಹ ॥ ೨೧ ॥
ಯಃ ಶಾಸ್ತ್ರವಿಧಿಮುತ್ಸೃಜ್ಯ ವರ್ತತೇ ಕಾಮಕಾರತಃ ।
ನ ಸ ಸಿದ್ಧಿಮವಾಪ್ನೋತಿ ನ ಸುಖಂ ನ ಪರಾಂಗತಿಂ ॥ ೨೨ ॥
ಸಂತೀಹ ವಿವಿಧೋಪಾಯಾ ನೃಣಾಂ ದೇಹವಿಶೋಧನಾಃ ।
ತೀರ್ಥಸೇವಾಸಮಂ ನಾಸ್ತಿ ಸ್ವಶರೀರಸ್ಯ ಶೋಧನಂ ॥ ೨೩ ॥
ಕೃಚ್ಛ್ರಚಾಂದ್ರಾಯಣಾದ್ಯೈರ್ವಾ ದ್ವಿತೀಯಂ ತೀರ್ಥಸೇವಯಾ ।
ಯದಾತೀರ್ಥಂ ಸಮುದ್ದಿಶ್ಯ ಪ್ರಯಾತಿ ಪುರುಷೋ ನೃಪ ।
ತದಾ ದೇವಾಶ್ಚ ಪಿತರಸ್ತಂ ವ್ರಜಂತ್ಯನುಖೇಚರಾಃ ॥ ೨೪ ॥
ಪರಮಾನೋದಪೂರ್ಣಾಸ್ತೇ ಪ್ರಯಾಂತ್ಯಸ್ಯಾಽನುಯಾಯಿನಃ ।
ಕೃತ್ವಾಽಭ್ಯುದಯಿಕಂ ಶ್ರಾದ್ಧಂ ಸಮಾಪೃಚ್ಛ್ಯ ತು ದೇವತಾಂ ॥ ೨೫ ॥

---

೧೯. ಈ ಲೋಕದಲ್ಲಿ ಶಾಸ್ತ್ರವಿಧಿಯಿಂದ ಉಕ್ತವಾಗಿರುವ ಕರ್ಮವನ್ನರಿತು ಅದನ್ನೇ ಮಾಡಲರ್ಹನಾಗಿರುವೆ. ಸಂಶಯಗ್ರಸ್ತನಾದವನಿಗೆ ಇಹಪರಲೋಕಗಳಾಗಲಿ, ಸುಖವಾಗಲಿ ಇರುವುದಿಲ್ಲ.

೨೦. ಮಂತ್ರ, ತೀರ್ಥ, ಬ್ರಾಹ್ಮಣ, ದೇವತೆ, ಜೋಯಿಸ, ಔಷಧ, ಗುರು ಇವರಲ್ಲಿ ಎಂತಹ ಭಾವನೆಯಿರುವುದೊ, ಅಂತಹ ಸಿದ್ಧಿಯೇ ಉಂಟಾಗುವುದು.

೨೧. ಯುಧಿಷ್ಠಿರ! ಶ್ರದ್ಧೆಯಿಲ್ಲದೆ ಮಾಡಿದ ಹೋಮ, ದಾನ, ತಪಸ್ಸು, ಕಾರ್ಯ ಇವುಗಳು ಅಸತ್ ಎನ್ನಿಸಿಕೊಳ್ಳುವುವು. ಇದರಿಂದ ಇಹಪರಲೋಕಗಳಲ್ಲಿ ಫಲವುಂಟಾಗುವುದಿಲ್ಲ.

೨೨. ಶಾಸ್ತ್ರವಿಧಿಯನ್ನು ತ್ಯಜಿಸಿ ಸ್ವೇಚ್ಛೆಯಾಗಿ ವರ್ತಿಸುವವನು ಸಿದ್ಧಿ, ಸುಖ, ಉತ್ತಮಗತಿಗಳನ್ನು ಪಡೆಯುವುದಿಲ್ಲ.

೨೩. ಮಾನವನಿಗೆ ಈ ಲೋಕದಲ್ಲಿ ದೇಹವನ್ನು ಶೋಧಿಸುವುದಕ್ಕೆ ವಿವಿಧೋಪಾಯಗಳಿವೆ. ಆದರೆ ತೀರ್ಥಸೇವೆಗೆ ಸಮವಾದ ಉಪಾಯವಿಲ್ಲ.

೨೪. ಮಾನವನು ಕೃಚ್ಛ್ರಚಾಂದ್ರಾಯಣಾದಿಗಳಿಂದಾಗಲಿ, ತೀರ್ಥಸೇವೆಯಿಂದಾಗಲಿ, ಎರಡನೆಯದಾದ ತೀರ್ಥಯಾತ್ರೆಯನ್ನುದ್ದೇಶಿಸಿ ಹೋಗುವಾಗಲಾಗಲಿ ಆಕಾಶದಲ್ಲಿ ಸಂಚರಿಸುವ ದೇವತೆಗಳು ಅವನನ್ನು ಅನುಸರಿಸುವರು.

೨೫–೨೮. ಅವರು ಅತ್ಯಂತ ಸಂತೋಷದಿಂದ ಅವನನ್ನು ಹಿಂಬಾಲಿಸುತ್ತಾರೆ.

ಇಷ್ಟಬಂಧೂಂಶ್ಚ ವಿಷ್ಣುಂ ಚ ಶಂಕರಂ ಸಗಣೇಶ್ವರಂ ।
ವ್ರಜೇದ್ದ್ವಿಜಾಽಭ್ಯನುಜ್ಞಾತೋ ಗೃಹೀತ್ವಾ ನಿಯಮಾನಪಿ ॥ ೨೬ ॥
ಏಕಾಽಶನಂ ಬ್ರಹ್ಮಚರ್ಯಂ ಭೂಶಯ್ಯಾಂ ಸತ್ಯವಾದಿತಾಂ ।
ವರ್ಜನಂ ಚ ಪರಾನ್ನಸ್ಯ ಪ್ರತಿಗ್ರಹವಿವರ್ಜನಂ ॥ ೨೭ ॥
ವರ್ಜಯಿತ್ವಾ ತಥಾ ದ್ರೋಹವಂಚನಾದಿ ನೃಪೋತ್ತಮ ।
ಸಾಧುವೇಷಂ ಸಮಾಸ್ಥಾಯ ವಿನಯೇನ ವಿಭೂಷಿತಃ ॥ ೨೮ ॥
ದಂಭಾಽಹಂಕಾರಮುಕ್ತೋ ಯಃ ಸ ತೀರ್ಥಫಲಮಶ್ನುತೇ ।
ಯಸ್ಯ ಹಸ್ತೌ ಚ ಪಾದೌ ಚ ಮನಶ್ಚೈವ ಸುಸಂಯತಂ ॥ ೨೯ ॥
ವಿದ್ಯಾ ತಪಶ್ಚ ಕೀರ್ತಿಶ್ಚ ಸ ತೀರ್ಥಫಲಮಶ್ನುತೇ ।
ಅಕ್ರೋಧನಶ್ಚ ರಾಜೇಂದ್ರ ಸತ್ಯಶೀಲೋ ದೃಢವ್ರತಃ ॥ ೩೦ ॥
ಆತ್ಮೋಪಮಶ್ಚ ಭೂತೇಷು ಸ ತೀರ್ಥಫಲಮಶ್ನುತೇ ।
ಮುಂಡನಂ ಚೋಪವಾಸಶ್ಚ ಸರ್ವತೀರ್ಥೇಷ್ವಯಂ ವಿಧಿಃ ॥ ೩೧ ॥
ವರ್ಜಯಿತ್ವಾ ಕುರುಕ್ಷೇತ್ರಂ ವಿಶಾಲಾಂ ವಿರಜಾಂ ಗಯಾಂ ।
ಸ್ನಾನಂ ಸುರಾರ್ಚನಂ ಚೈವ ಶ್ರಾದ್ಧೇ ವೈ ಪಿಂಡಪಾತನಂ ॥ ೩೨ ॥
ವಿಪ್ರಾಣಾಂ ಭೋಜನಂ ಶಕ್ತ್ಯಾ ಸರ್ವತೀರ್ಥೇಷ್ವಯಂ ವಿಧಿಃ ।
ಪ್ರಾಯಶ್ಚಿತ್ತನಿಮಿತ್ತಂ ಚ ಯೋ ವ್ರಜೇದ್ಯತಮಾನಸಃ ॥ ೩೩ ॥

---

ತೀರ್ಥಯಾತ್ರಿಕನು ಆಭ್ಯುದಯಿಕ ಶ್ರಾದ್ಧವನ್ನು ಮಾಡಿ ದೇವತೆಯ ಅಪ್ಪಣೆಯನ್ನು ಪಡೆದು ಇಷ್ಟಬಂಧುಗಳನ್ನೂ, ವಿಷ್ಣು, ಶಂಕರ, ಗಣೇಶರನ್ನೂ, ಬ್ರಾಹ್ಮಣರನ್ನೂ ಕೇಳಿಕೊಂಡು ಏಕಾಶನ, ಬ್ರಹ್ಮಚರ್ಯ, ಭೂಶಯನ, ಸತ್ಯವಾದಿತ್ವ, ಪರಾನ್ನತ್ಯಾಗ, ಪ್ರತಿಗ್ರಹವರ್ಜನರೂಪವಾದ ನಿಯಮಗಳನ್ನು ಸ್ವೀಕರಿಸಿ, ದ್ರೋಹ, ವಂಚನೆ ಮೊದಲಾದುವುಗಳನ್ನು ತ್ಯಜಿಸಿ ಸಾಧುವೇಷವನ್ನು ಧರಿಸಿ, ವಿನೀತನಾಗಿ ತೀರ್ಥಕ್ಕೆ ಹೋಗಬೇಕು.

೨೯–೪೦. ದಂಭಾಹಂಕಾರವಿಲ್ಲದವನು ಯಾರೋ ಅವನೇ ತೀರ್ಥಫಲವನ್ನು ಅನುಭವಿಸುವನು. ಹಸ್ತ, ಪಾದ, ಮನಸ್ಸುಗಳನ್ನು ಜಯಿಸಿದವನೂ, ವಿದ್ಯಾ, ತಪಸ್ಸು, ಕೀರ್ತಿಗಳುಳ್ಳವನೂ ತೀರ್ಥಫಲವನ್ನು ಪಡೆಯುವನು. ಕೋಪವಿಲ್ಲದವನೂ, ಸತ್ಯವಂತನೂ, ದೃಢನಿಯಮವುಳ್ಳವನೂ, ಪ್ರಾಣಿಗಳನ್ನು ತನ್ನಂತೆಯೇ ಕಾಣುವವನೂ ತೀರ್ಥಫಲವನ್ನು ಹೊಂದುವನು. ಕುರುಕ್ಷೇತ್ರ, ವಿರಜಾ, ಗಯಾ ಇವುಗಳನ್ನು ಬಿಟ್ಟು ಇತರ ಎಲ್ಲ ತೀರ್ಥಗಳಲ್ಲಿಯೂ ವಪನ, ಉಪವಾಸ, ಸ್ನಾನ, ದೇವಪೂಜಾ, ಶ್ರಾದ್ಧದಲ್ಲಿ ಪಿಂಡಪ್ರದಾನ, ಶಕ್ತ್ಯನುಸಾರ ಬ್ರಾಹ್ಮಣಭೋಜನ ಇವುಗಳನ್ನು ಆಚರಿಸಬೇಕು. ಜಿತೇಂದ್ರಿಯನಾಗಿ ಪ್ರಾಯಶ್ಚಿತ್ತಕ್ಕೋಸ್ಕರ

ತಸ್ಯಾಽಪಿ ಚ ವಿಧಿಂ ವಕ್ಷ್ಯೇ ಶೃಣು ಪಾರ್ಥ ಸಮಾಹಿತಃ ।
ಏಕಾಶನಂ ಬ್ರಹ್ಮಚರ್ಯಮಕ್ಷಾರಲವಣಾಶನಂ ॥ ೩೪ ॥
ಸ್ನಾತ್ವಾ ತೀರ್ಥಾಭಿಗಮನಂ ಹವಿಷ್ಯೈಕಾನ್ನಭೋಜನಂ ।
ವರ್ಜಯೇತ್ಪತಿತಾಲಾಪಂ ಬಹುಭಾಷಣಮೇವ ಚ ॥ ೩೫ ॥
ಪರೀವಾದಂ ಪರಾನ್ನಂ ಚ ನೀಚಸಂಗಂ ವಿವರ್ಜಯೇತ್ ।
ವ್ರಜೇಚ್ಚ ನಿರುಪಾನತ್ಕೋ ವಸಾನೋ ವಾಸಸೀ ಶುಚಿಃ ॥ ೩೬ ॥
ಸಂಕಲ್ಪಂ ಮನಸಾ ಕೃತ್ವಾ ಬ್ರಾಹ್ಮಣಾನುಜ್ಞಯಾ ವ್ರಜೇತ್ ।
ತೀರ್ಥೇ ಗತ್ವಾ ತಥಾ ಸ್ನಾತ್ವಾ ಕೃತ್ವಾ ಚೈವ ಸುರಾರ್ಚನಂ ॥ ೩೭ ॥
ದುಷ್ಕರ್ಮತೋ ವಿಮುಕ್ತಃ ಸ್ಯಾದನುತಾಪೀ ಭವೇದ್ಯದಿ ।
ವೇದೇ ತೀರ್ಥೇ ಚ ದೇವೇ ಚ ದೈವಜ್ಞೇ ಚೌಷಧೇ ಗುರೌ ॥ ೩೮ ॥
ಯಾದೃಶೀ ಭಾವನಾ ಯಸ್ಯ ಸಿದ್ಧಿರ್ಭವತಿ ತಾದೃಶೀ ।
ಉಕ್ತತೀರ್ಥಫಲಾನಾಂ ಚ ಪುರಾಣೇಷು ಸ್ಮೃತಿಷ್ವಪಿ ॥ ೩೯ ॥
ಅರ್ಥವಾದಭವಾಂ ಶಂಕಾಂ ವಿಹಾಯ ಭರತರ್ಷಭ ।
ಕೃತ್ವಾ ವಿಚಾರಂ ಶಾಸ್ತ್ರೋಕ್ತಂ ಪರಿಕಲ್ಪ್ಯ ಯಥೋಚಿತಂ ॥ ೪೦ ॥
ಕಾಯೇನ ಕೃಚ್ಛ್ರಚರಣೇ ಹ್ಯಶಕ್ತಾನಾಂ ವಿಶುದ್ಧಯೇ ।
ಜ್ಞಾತ್ವಾ ತೀರ್ಥವಿಶೇಷಂ ಹಿ ಪ್ರಾಯಶ್ಚಿತ್ತಂ ಸಮಾಚರೇತ್ ॥ ೪೧ ॥

---

ತೀರ್ಥಕ್ಕೆ ಹೋಗುವವನು ಆಚರಿಸತಕ್ಕ ವಿಧಿಯನ್ನು ಹೇಳುವೆನು ಕೇಳು. ಏಕಾಶನ, ಬ್ರಹ್ಮಚರ್ಯ, ಉಪ್ಪಿಲ್ಲದ ಊಟ, ಸ್ನಾನವಾದ ಅನಂತರ ತೀರ್ಥಸೇವೆ, ಹವಿಷ್ಯಾನ್ನಭೋಜನ, ಪತಿತಾಲಾಪತ್ಯಾಗ, ಬಹುವಾದ ಮಾತು, ಅಪವಾದ, ಪರಾನ್ನ, ನೀಚಸಂಗ ಇವುಗಳ ತ್ಯಾಗ ಇವೇ ಮೊದಲಾದುವುಗಳನ್ನು ಮಾಡಬೇಕು. ಪಾದರಕ್ಷೆಯನ್ನು ಧರಿಸದೆ ಶುದ್ಧನಾಗಿ ಎರಡು ಬಟ್ಟೆಗಳನ್ನು ಉಟ್ಟು ಮನಸ್ಸಿನಲ್ಲಿ ಸಂಕಲ್ಪಮಾಡಿ ಬ್ರಾಹ್ಮಣರ ಅನುಜ್ಞೆಯಿಂದ ತೀರ್ಥಕ್ಕೆ ಹೋಗಬೇಕು. ತೀರ್ಥಕ್ಕೆ ಹೋಗಿ ಮಿಂದು, ದೇವಪೂಜೆಮಾಡಿ ಪಶ್ಚಾತ್ತಾಪವುಳ್ಳವನಾದರೆ ದುಷ್ಕಾರ್ಯವನ್ನೆಸಗಿದ ಪಾಪದಿಂದ ಮುಕ್ತನಾಗುವನು. ವೇದ, ತೀರ್ಥ, ದೇವತೆ, ಜೋಯಿಸ, ಔಷಧ, ಗುರು ಇವರಲ್ಲಿ ಎಂತಹ ಭಾವನೆಯಿರುವುದೊ, ಅಂತಹ ಸಿದ್ಧಿಯೇ ಉಂಟಾಗುವುದು. ಪುರಾಣ ಸ್ಮೃತಿಗಳಲ್ಲಿ ಉಕ್ತವಾದ ಫಲಗಳ ಬಗ್ಗೆ ಅರ್ಥವಾದದ ಶಂಕೆಯನ್ನು ತ್ಯಜಿಸಿ ಶಾಸ್ತ್ರವಿಚಾರವನ್ನು ಮಾಡಿ ಅದರಂತೆ ಆಚರಿಸಬೇಕು.

೪೧. ಶುದ್ಧಿಗಾಗಿ ಶರೀರದಿಂದ ಕೃಚ್ಛ್ರವನ್ನಾಚರಿಸಲಶಕ್ತನು ಉತ್ತಮ ತೀರ್ಥವನ್ನರಿತು ಪ್ರಾಯಶ್ಚಿತ್ತವನ್ನು ಆಚರಿಸಬೇಕು.

ತಚ್ಛೃಣುಷ್ವ ಮಹಾರಾಜ ನರ್ಮದಾಯಾಂ ಯಥೋಚಿತಂ ।
ಚತುರ್ವಿಂಶತಿಸಂಖ್ಯೇಭ್ಯೋ ಯೋಜನೇಭ್ಯೋ ವ್ರಜೇನ್ನರಃ ॥ ೪೨ ॥
ಚತುರ್ವಿಂಶತಿಕೃಚ್ಛ್ರಾಣಾಂ ಫಲಮಾಪ್ನೋತಿ ಶೋಭನಂ ।
ಅತ ಊರ್ಧ್ವಂ ಯೋಜನೇಷು ಪಾದಕೃಚ್ಛ್ರ ಉದಾಹೃತಃ ॥ ೪೩ ॥
ತನ್ಮಧ್ಯೇ ಚ ಮಹಾರಾಜ ಯೋ ವ್ರಜೇಚ್ಛುದ್ಧಿಕಾಂಕ್ಷಯಾ ।
ಯೋಜನೇ ಯೋಜನೇ ತಸ್ಯ ಪ್ರಾಯಶ್ಚಿತ್ತಂ ವಿದುರ್ಬುಧಾಃ ॥ ೪೪ ॥
ಪ್ರಣವಾಖ್ಯೇ ಮಹಾರಾಜ ತಥಾ ರೇವೋರಿಸಂಗಮೇ ।
ಭೃಗುಕ್ಷೇತ್ರೇ ತಥಾ ಗತ್ವಾ ಫಲಂ ತದ್ದ್ವಿಗುಣಂ ಸ್ಮೃತಂ ॥ ೪೫ ॥
ಸಂಗಮೇ ದೇವನದ್ಯಾಶ್ಚ ಶೂಲಭೇದೇ ನೃಪೋತ್ತಮ ।
ದ್ವಿಗುಣಂ ಪಾದಹೀನಂ ಸ್ಯಾತ್ಕರಜಾಸಂಗಮೇ ತಥಾ ॥ ೪೬ ॥
ಏರಂಡೀಸಂಗಮೇ ತದ್ವತ್ಕಪಿಲಾಯಾಶ್ಚ ಸಂಗಮೇ ।
ಕೇಚಿತ್ತ್ರಿಗುಣಿತಂ ಪ್ರಾಹುಃ ಕುಬ್ಜಾರೇವೋತ್ಥಸಂಗಮೇ ॥ ೪೭ ॥
ಓಂಕಾರೇ ಚ ಮಹಾರಾಜ ತದಪಿ ಸ್ಯಾತ್ಸಮಂಜಸಂ ।
ಸಂಗಮೇಷು ತಥಾನ್ಯಾಸಾಂ ನದೀನಾಂ ರೇವಯಾ ಸಹ ॥ ೪೮ ॥
ಪ್ರಾಹುಸ್ತೇ ಸಾರ್ಧಕೃಚ್ಛ್ರಂ ವೈ ಫಲಂ ಪೂರ್ವಂ ಯುಧಿಷ್ಠಿರ ।
ತ್ರಿಗುಣಂ ಕೃಚ್ಛ್ರಮಾಪ್ನೋತಿ ರೇವಾಸಾಗರಸಂಗಮೇ ॥ ೪೯ ॥

---

೪೨–೪೩. ಅದರ ಕ್ರಮವನ್ನು ಕೇಳು. ನರ್ಮದೆಯಲ್ಲಿ ಇಪ್ಪತ್ತನಾಲ್ಕು ಯೋಜನಗಳು ನಡೆದರೆ ಇಪ್ಪತ್ತನಾಲ್ಕು ಕೃಚ್ಛ್ರಗಳ ಫಲವನ್ನು ಪಡೆಯುವನು. ಅದರಮೇಲೆ ಒಂದೊಂದು ಯೋಜನದಲ್ಲಿ ಪಾದಕೃಚ್ಛ್ರಫಲವುಂಟಾಗುವುದು.

೪೪. ಶುದ್ಧಿಯ ಅಪೇಕ್ಷೆಯಿಂದ ಆ ನರ್ಮದೆಯ ನಡುವೆ ಸಂಚರಿಸಿದರೆ ಪ್ರತಿ ಯೋಜನದಲ್ಲಿಯೂ ಪ್ರಾಯಶ್ಚಿತ್ತವು ಸಂಚರಿಸುವುದೆಂದು ಪ್ರಾಜ್ಞರು ತಿಳಿಯುತ್ತಾರೆ.

೪೫. ಮಹಾರಾಜ! ಓಂಕಾರಕ್ಷೇತ್ರ, ರೇವೋರಿಸಂಗಮ, ಭೃಗುಕ್ಷೇತ್ರ ಇವುಗಳಲ್ಲಿ ನಡೆದರೆ ಇಮ್ಮಡಿಯಾದ ಫಲವುಂಟಾಗುವುದು.

೪೬. ಗಂಗಾಸಂಗಮ, ಶೂಲಭೇದಗಳಲ್ಲಿ ಇಮ್ಮಡಿಯಾದ ಫಲವೂ, ಕರಜಾ ಸಂಗಮದಲ್ಲಿ ಮುಕ್ಕಾಲು ಫಲವೂ ಸಂಭವಿಸುವುದು.

೪೭. ಕೆಲವರು ಏರಂಡೀಸಂಗಮ, ಕಪಿಲಾಸಂಗಮ, ಕುಬ್ಜಾರೇವಾ ಸಂಗಮಗಳಲ್ಲಿ ಮುಮ್ಮಡಿಯಾದ ಫಲವು ಲಭಿಸುವುದೆಂದು ಹೇಳುತ್ತಾರೆ.

೪೮–೪೯. ಓಂಕಾರಕ್ಷೇತ್ರದಲ್ಲಿ ಸಮಫಲವೂ, ನರ್ಮದೆಯೊಡನೆ ಇತರ ನದಿಗಳು ಸಂಗಮವಾಗುವೆಡೆಯಲ್ಲಿ ಒಂದೂವರೆ ಕೃಚ್ಛ್ರಫಲವೂ, ರೇವಾಸಾಗರ ಸಂಗಮದಲ್ಲಿ ಮುಮ್ಮಡಿಯಾದ ಕೃಚ್ಛ್ರಫಲವೂ ದೊರೆಯುವುದು.

ಕೃಚ್ಛ್ರಂ ಚತುರ್ಗುಣಂ ಪ್ರೋಕ್ತಂ ಶುಕ್ಲತೀರ್ಥೇ ಯುಧಿಷ್ಠಿರ ।
ಯೋಜನೇ ಯೋಜನೇ ಗತ್ವಾ ಚತುರ್ವಿಂಶತಿ ಯೋಜನಂ ।
ತತ್ರ ತತ್ರ ವಸೇದ್ಯಸ್ತು ಸುಚಿರಂ ನೃವರೋತ್ತಮ ॥ ೫೦ ॥
ರೇವಾಸೇವಾಸಮಾಚಾರಃ ಸಂಯುಕ್ತಶ್ಶುದ್ಧಬುದ್ಧಿಮಾನ್ ।
ದಂಭಾಹಂಕಾರರಹಿತಃ ಶುದ್ಧ್ಯರ್ಥಂ ಸ ವಿಮುಚ್ಯತೇ ॥ ೫೧ ॥
ಇತಿ ತೇ ಕಥಿತಂ ಪಾರ್ಥ ಪ್ರಾಯಶ್ಚಿತ್ತಾರ್ಥಲಕ್ಷಣಂ ।
ರೇವಾಯಾತ್ರಾವಿಧಾನಂ ಚ ಗುಹ್ಯಮೇತದ್ಯುಧಿಷ್ಠಿರ ॥ ೫೨ ॥

ಯುಧಿಷ್ಠಿರ ಉವಾಚ:—

ಯೋಜನಸ್ಯ ಪ್ರಮಾಣಂ ಮೇ ವದ ತ್ವಂ ಮುನಿಸತ್ತಮ ।
ಯಜ್ಜ್ಞಾತ್ವಾ ನಿಶ್ಚಿತಂ ಮೇ ಸ್ಯಾನ್ಮನಶ್ಶುದ್ಧೇಸ್ತು ಕಾರಣಂ ॥ ೫೩ ॥

ಮಾರ್ಕಂಡೇಯ ಉವಾಚ:—

ಶೃಣು ಪಾಂಡವ ವಕ್ಷ್ಯಾಮಿ ಪ್ರಮಾಣಂ ಯೋಜನಸ್ಯ ಯತ್ ।
ತಥಾ ಯಾತ್ರಾವಿಶೇಷೇಣ ವಿಶೇಷಂ ಕೃಚ್ಛ್ರಸಂಭವಂ ॥ ೫೪ ॥
ತಿರ್ಯಗ್ಯವೋದರಾಣ್ಯಷ್ಟಾವೂರ್ಧ್ವಾ ವಾ ವ್ರೀಹಯಸ್ತ್ರಯಃ ।
ಪ್ರಮಾಣಮಂಗುಲಸ್ಯಾಹುರ್ವಿತಸ್ತಿರ್ದ್ವಾದಶಾಂಗುಲಾ ॥ ೫೫ ॥

---

೫೦–೫೧. ಶುಕ್ಲತೀರ್ಥದಲ್ಲಿ ನಾಲ್ಕರಷ್ಟು ಕೃಚ್ಛ್ರಫಲವು ದೊರೆಯುವುದು. ಮಾನವನು ಪ್ರಾಯಶ್ಚಿತ್ತಕ್ಕಾಗಿ ಶುದ್ಧಬುದ್ಧಿಯುಳ್ಳವನೂ, ದಂಭಾಹಂಕಾರವಿಲ್ಲದವನೂ, ನರ್ಮದಾಸೇವೆಯಲ್ಲಿ ನಿರತನೂ ಆಗಿ ಚತುರ್ವಿಂಶತಿ ಯೋಜನಗಳಲ್ಲಿ ಪ್ರತಿಯೋಜನದಲ್ಲಿಯೂ ಬಹುಕಾಲ ವಾಸಮಾಡಿದರೆ ಪಾಪಮುಕ್ತನಾಗುವನು.

೫೨. ಯುಧಿಷ್ಠಿರ! ಹೀಗೆ ನಿನಗೆ ಪ್ರಾಯಶ್ಚಿತ್ತದ ಕ್ರಮವನ್ನೂ, ರಹಸ್ಯವಾದ ರೇವಾಯಾತ್ರಾವಿಧಾನವನ್ನೂ ಹೇಳಿರುವೆನು.

೫೩. ಯುಧಿಷ್ಠಿರನು ಹೇಳುತ್ತಾನೆ:—ಮುನಿವರ್ಯನೆ! ನೀನು ನನಗೆ ಯೋಜನದ ಪ್ರಮಾಣವನ್ನು ಹೇಳು. ಇದನ್ನರಿತು ನನ್ನ ಮನಸ್ಸು ಶುದ್ಧಿಗೆ ಕಾರಣವಾಗುವುದು.

೫೪. ಮಾರ್ಕಂಡೇಯನು ಹೇಳುತ್ತಾನೆ:—ಯುಧಿಷ್ಠಿರ! ಯೋಜನದ ಪ್ರಮಾಣವನ್ನೂ, ಯಾತ್ರಾವಿಶೇಷದಿಂದ ಕೃಚ್ಛ್ರದ ವಿಶೇಷವನ್ನೂ ನಿನಗೆ ಹೇಳುವೆನು ಕೇಳು.

೫೫–೫೬. ಎಂಟು ಬತ್ತದ ಅಗಲ, ಮೂರು ಬತ್ತದ ಉದ್ದದ ಪ್ರಮಾಣದಿಂದ ಅಂಗುಲವಾಗುವುದು. ಹನ್ನೆರಡು ಅಂಗುಲ ಪ್ರಮಾಣದಿಂದ ವಿತಸ್ತಿಯೂ,

ವಿತಸ್ತಿದ್ವಿತಯಂ ಹಸ್ತಶ್ಚತುರ್ಹಸ್ತಂ ಧನುಃ ಸ್ಮೃತಂ ।
ಸ ಏವ ದಂಡೋ ಗದಿತೋ ವಿಶೇಷಜ್ಞೈರ್ಯುಧಿಷ್ಠಿರ ॥ ೫೬ ॥
ಧನುಸ್ಸಹಸ್ರೇ ದ್ವೇ ಕ್ರೋಶಶ್ಚತುಃಕ್ರೋಶಂ ಚ ಯೋಜನಂ ।
ಏತದ್ಯೋಜನಮಾನಂ ತೇ ಕಥಿತಂ ಭರತರ್ಷಭ ॥ ೫೭ ॥
ಯೇನ ಯಾತ್ರಾಂ ವ್ರಜನ್ ವೇತ್ತಿ ಫಲಮಾನಂ ನಿಜಾರ್ಜಿತಂ ।
ಉಕ್ತಂ ಕೃಚ್ಛ್ರಫಲಂ ತೀರ್ಥೇ ಜಲರೂಪೇ ನೃಪೋತ್ತಮ ॥ ೫೮ ॥
ಯಥಾ ವಿಶೇಷಂ ತೇ ವಚ್ಮಿ ಪೂರ್ವೋಕ್ತೇ ತತ್ರ ತತ್ರ ಚ ।
ತನ್ಮೇ ಶೃಣು ಮಹೀಪಾಲ ಶ್ರದ್ದಧಾನಾಯ ಕಥ್ಯತೇ ॥ ೫೯ ॥
ಯಸ್ಮಿಂಸ್ತೀರ್ಥೇ ಹಿ ಯತ್ಪ್ರೋಕ್ತಂ ಫಲಂ ಕೃಚ್ಛ್ರಾದಿಕಂ ನೃಪ ।
ತತ್ರಾಪ್ಯುಪೋಷಣಾತ್ಕೃಚ್ಛ್ರಫಲಂ ಪ್ರಾಪ್ನೋತ್ಯಥಾಧಿಕಂ ॥ ೬೦ ॥
ದಿನಜಾಪ್ಯಾಚ್ಚ ಲಭತೇ ಫಲಂ ಕೃಚ್ಛ್ರಸ್ಯ ಶಕ್ತಿತಃ ।
ತತ್ರ ವಿಖ್ಯಾತದೇವೇಶಂ ಸ್ನಾತ್ವಾ ದೃಷ್ಟ್ವಾಽಭಿಪೂಜ್ಯ ಚ ॥ ೬೧ ॥
ಪ್ರಣಮ್ಯ ಲಭತೇ ಪಾರ್ಥ ಫಲಂ ಕೃಚ್ಛ್ರಭವಂ ಸುಧೀಃ ।
ತೀರ್ಥೇ ಮುಖ್ಯಫಲಂ ಸ್ನಾನಾದ್ದ್ವಿತೀಯಂ ಚಾಽಪ್ಯುಪೋಷಣಾತ್ ॥ ೬೨ ॥

---

ಎರಡು ವಿತಸ್ತಿಯಿಂದ ಹಸ್ತವೂ, ನಾಲ್ಕು ಹಸ್ತದಿಂದ ಧನುಸ್ಸೂ ಆಗುವುದು. ವಿಶೇಷವನ್ನರಿತವರು ಅದನ್ನೆ ದಂಡವೆನ್ನುವರು.

೫೭. ಎರಡು ಸಾವಿರ ಧನುಸ್ಸುಗಳಿಂದ ಕ್ರೋಶವೂ, ನಾಲ್ಕು ಕ್ರೋಶಗಳಿಂದ ಯೋಜನವೂ ಆಗುವುದು. ಯುಧಿಷ್ಠಿರ! ಹೀಗೆ ನಿನಗೆ ಯೋಜನದ ಪರಿಮಾಣವನ್ನು ಹೇಳಿರುವೆನು.

೫೮. ಇದರಿಂದ ತೀರ್ಥಯಾತ್ರೆ ಮಾಡುವವನು ತನ್ನ ಫಲದ ಪರಿಮಾಣವನ್ನೂ ಜಲರೂಪವಾದ ತೀರ್ಥದಲ್ಲಿ ಉಕ್ತವಾದ ಕೃಚ್ಛ್ರಫಲವನ್ನೂ ಅರಿಯುವನು.

೫೯. ಯುಧಿಷ್ಠಿರ! ಹಿಂದೆ ಹೇಳಿದ್ದರಲ್ಲಿ ಇನ್ನೂ ವಿಶೇಷವನ್ನು ನಿನಗೆ ಹೇಳುವೆನು. ಶ್ರದ್ಧೆಯಿಂದ ಅದನ್ನು ನನ್ನಿಂದ ಕೇಳು.

೬೦. ಯಾವ ತೀರ್ಥದಲ್ಲಿ ಕೃಚ್ಛ್ರಾದಿಫಲವನ್ನು ಹೇಳಿರುವೆನೊ, ನರನು ಅಲ್ಲಿ ಉಪವಾಸ ಮಾಡುವುದರಿಂದ ಅಧಿಕವಾದ ಕೃಚ್ಛ್ರಫಲವನ್ನು ಪಡೆಯುವನು.

೬೧–೬೫. ಆ ತೀರ್ಥದಲ್ಲಿ ಒಂದು ದಿನ ಶಕ್ತ್ಯನುಸಾರ ಜಪಮಾಡುವುದರಿಂದ ಕೃಚ್ಛ್ರಫಲವನ್ನು ಪಡೆಯುವನು. ಅಲ್ಲಿ ಪ್ರಾಜ್ಞನು ಮಿಂದು ಪ್ರಸಿದ್ಧನಾದ ದೇವೇಶನನ್ನು ದರ್ಶನಮಾಡಿ ಪೂಜಾವಂದನೆಗಳನ್ನು ಮಾಡುವುದರಿಂದ ಕೃಚ್ಛ್ರಫಲವನ್ನು ಹೊಂದುವನು. ತೀರ್ಥದಲ್ಲಿ ಮುಖ್ಯ ಫಲವು ಸ್ನಾನ

ತೃತೀಯಂ ಖ್ಯಾತದೇವಸ್ಯ ದರ್ಶನಾಭ್ಯರ್ಚನಾದಿಭಿಃ ।
ಚತುರ್ಥಂ ಜಾಪ್ಯಯೋಗೇನ ದೇಹಶಕ್ತ್ಯಾ ತ್ವಹರ್ನಿಶಂ ॥ ೬೩ ॥
ಪಂಚಮಂ ಸರ್ವತೀರ್ಥೇಷು ಕಲ್ಪನೀಯಂ ಹಿ ದೂರತಃ ।
ತೀರಸ್ಥೋ ಯೋಜನಾದರ್ವಾಗ್ದಶಾಂಶಂ ಲಭತೇ ಫಲಂ ॥ ೬೪ ॥
ಉಕ್ತತೀರ್ಥಫಲಾತ್ಪಾರ್ಥ ನಾತ್ರ ಕಾರ್ಯಾ ವಿಚಾರಣಾ ॥ ೬೫ ॥
ಉಪವಾಸೇನ ಸಹಿತಂ ಮಹಾನದ್ಯಾಂ ಹಿ ಮಜ್ಜನಂ ।
ಅಪ್ಯರ್ವಾಗ್ಯೋಜನಾತ್ಪಾರ್ಥ ದದ್ಯಾತ್ಕೃಚ್ಛ್ರಫಲಂ ನೃಣಾಂ ॥ ೬೬ ॥
ಷಡ್ಯೋಜನವಹಾ ಕುಲ್ಯಾ ನದ್ಯೋಽಲ್ಪಾ ದ್ವಾದಶೈವ ಚ ।
ಚತುರ್ವಿಂಶತಿಗಾ ನದ್ಯೋ ಮಹಾನದ್ಯಸ್ತತೋಽಧಿಕಾಃ ॥ ೬೭ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ
ಪಂಚಮೇ ಆವಂತ್ಯಖಂಡೇ ತೃತೀಯೇ ರೇವಾಖಂಡೇ
"ತೀರ್ಥಯಾತ್ರಾದಿವಿಧಾನವಿಶೇಷಕಥನಂ" ನಾಮ
ಸಪ್ತವಿಂಶತ್ಯಧಿಕದ್ವಿಶತತಮೋಽಧ್ಯಾಯಃ

---

ದಿಂದಲೂ, ಎರಡನೆಯ ಫಲವು ಉಪವಾಸದಿಂದಲೂ, ಮೂರನೆಯ ಫಲವು ಪ್ರಸಿದ್ಧ ದೇವತೆಯ ದರ್ಶನ ಪೂಜಾದಿಗಳಿಂದಲೂ, ನಾಲ್ಕನೆಯ ಫಲವು ದೇಹ ಶಕ್ತಿಯಿಂದ ಹಗಲು ರಾತ್ರಿ ಜಪಿಸುವುದರಿಂದಲೂ, ಐದನೆಯದಾದ ಹಿಂದೆ ಹೇಳಿದ ತೀರ್ಥಫಲದ ಹತ್ತನೆಯ ಭಾಗದ ಫಲವು ಒಂದು ಯೋಜನದೊಳಗೆ ದಡದಲ್ಲಿ ವಾಸಿಸುವುದರಿಂದಲೂ ಉಂಟಾಗುವುದು. ಈ ವಿಷಯದಲ್ಲಿ ವಿಚಾರ ಮಾಡಕೂಡದು.

೬೬. ಮಹಾನದಿಯಲ್ಲಿ ಒಂದು ಯೋಜನದೊಳಗೆ ಉಪವಾಸಮಾಡಿ ಸ್ನಾನ ಗೈಯುವುದರಿಂದ ಮಾನವರಿಗೆ ಕೃಚ್ಛ್ರಫಲವು ದೊರೆಯುವುದು.

೬೭. ಆರು ಯೋಜನ ದೂರ ಹರಿಯುವುದು ಕಾಲುವೆಯೂ, ಹನ್ನೆರಡು ಯೋಜನ ದೂರ ಹರಿಯುವುದು ಅಲ್ಪನದಿಯೂ, ಇಪ್ಪತ್ತನಾಲ್ಕುಯೋಜನ ದೂರ ಹರಿಯುವುದು ನದಿಯೂ, ಅದಕ್ಕಿಂತ ದೂರ ಹರಿಯುವುದು ಮಹಾ ನದಿಯೂ ಆಗುವುದು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ
ಶ್ರೀ ಸ್ಕಾಂದಮಹಾಪುರಾಣದ ಐದನೆಯ ಆವಂತ್ಯಖಂಡದ ಮೂರನೆಯ ರೇವಾಖಂಡದಲ್ಲಿ
"ತೀರ್ಥಯಾತ್ರಾದಿವಿಧಾನವಿಶೇಷಕಥನ"ವೆಂಬ
ಇನ್ನೂರಿಪ್ಪತ್ತೇಳನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

## ಅಥಾಷ್ಟಾವಿಂಶತ್ಯಧಿಕದ್ವಿಶತತಮೋಽಧ್ಯಾಯಃ

### ಪರಾರ್ಥತೀರ್ಥಯಾತ್ರಾಫಲಕಥನಂ

ಯುಧಿಷ್ಠಿರ ಉವಾಚ :—

ಪರಾರ್ಥಂ ತೀರ್ಥಯಾತ್ರಾಯಾಂ ಗಚ್ಛತಸ್ತಸ್ಯ ಕಿಂ ಫಲಂ ।
ಕಿಯನ್ಮಾತ್ರಂ ಮುನಿಶ್ರೇಷ್ಠ ತನ್ಮೇ ಬ್ರೂಹಿ ಕೃಪಾನಿಧೇ ॥ ೧ ॥

ಮಾರ್ಕಂಡೇಯ ಉವಾಚ :—

ಪರಾರ್ಥಂ ಗಚ್ಛತಸ್ತನ್ಮೇ ವದತ ಶೃಣು ಪಾರ್ಥಿವ ।
ಯಥಾ ಯಾವತ್ಫಲಂ ತಸ್ಯ ಯಾತ್ರಾದಿ ವಿಹಿತಂ ಭವೇತ್ ॥ ೨ ॥
ಉತ್ತಮೇನೇಹ ವರ್ಣೇನ ದ್ರವ್ಯಲೋಭಾದಿನಾ ನೃಪ ।
ನಾಧಮಸ್ಯ ಕ್ವಚಿತ್ಕಾರ್ಯಂ ತೀರ್ಥಯಾತ್ರಾದಿಸೇವನಂ ॥ ೩ ॥
ಧರ್ಮಕರ್ಮ ಮಹಾರಾಜ ಸ್ವಯಂ ವಿದ್ವಾನ್ಸಮಾಚರೇತ್ ।
ಶರೀರಸ್ಯಾಥವಾ ಶಕ್ತ್ಯಾ ಅನ್ಯದ್ವಾ ಕಾರ್ಯಯೋಗತಃ ॥ ೪ ॥

---

### ಕನ್ನಡದ ಅನುವಾದ

#### ಪರಾರ್ಥತೀರ್ಥಯಾತ್ರಾಫಲಕಥನ

೧. ಯುಧಿಷ್ಠಿರನು ಹೇಳುತ್ತಾನೆ:—ದಯಾಳುವಾದ ಮುನಿಯೆ! ಇನ್ನೊಬ್ಬರಿಗಾಗಿ ತೀರ್ಥಯಾತ್ರೆಗೆ ಹೋಗುವವನಿಗೆ ಯಾವ ಫಲವು ಎಷ್ಟು ಮಟ್ಟಿಗೆ ಸಂಭವಿಸುವುದು? ಅದನ್ನು ನನಗೆ ಹೇಳು.

೨. ಮಾರ್ಕಂಡೇಯನು ಹೇಳುತ್ತಾನೆ:—ಅಯ್ಯಾ ನೃಪನೆ! ಪರರಿಗಾಗಿ ತೀರ್ಥಯಾತ್ರೆಯನ್ನು ಮಾಡುವವನಿಗೆ ಎಷ್ಟು ಫಲವು ಸಂಭವಿಸುವುದೆಂಬುದನ್ನು ಹೇಳುವೆನು ಕೇಳು.

೩. ಉತ್ತಮಜಾತಿಯುವನು ಒಂದೆಡೆಯಲ್ಲಿಯೂ ಧನಲೋಭದಿಂದ ಅಧಮನಿಗಾಗಿ ತೀರ್ಥಯಾತ್ರಾದಿಗಳನ್ನು ಮಾಡಕೂಡದು.

೪. ಮಹಾರಾಜ! ವಿದ್ವಾಂಸನು ದೇಹಶಕ್ತಿಯಿಂದಾಗಲಿ, ಇತರ ಕಾರ್ಯಗಳಿಂದಾಗಲಿ ತಾನಾಗಿಯೇ ತನಗಾಗಿ ಧರ್ಮಕಾರ್ಯವನ್ನಾಚರಿಸಬೇಕು.

ಧರ್ಮಕರ್ಮ ಸದಾಪ್ರಾಯಸ್ಸವರ್ಣೇನೈವ ಕಾರಯೇತ್ ।
ಪುತ್ರಪೌತ್ರಾದಿಕೈರ್ವಾಪಿ ಜ್ಞಾತಿಭಿರ್ಗೋತ್ರಸಂಭವೈಃ ॥ ೫ ॥
ಶ್ರೇಷ್ಠಂ ಹಿ ವಿಹಿತಂ ಪ್ರಾಹುರ್ಧರ್ಮಕರ್ಮ ಯುಧಿಷ್ಠಿರ ।
ತೈರೇವ ಕಾರಯೇತ್ತಸ್ಮಾನ್ನೋತ್ತಮೈರ್ನಾಧಮೈರಪಿ ॥ ೬ ॥
ಅಧಮೇನ ಕೃತಂ ಸಮ್ಯಜ್ ನ ಭವೇದಿತಿ ಮೇ ಮತಿಃ ।
ಉತ್ತಮಶ್ಚಾಧಮಾರ್ಥೇ ನೈ ಕುರ್ವನ್ ದುರ್ಗತಿಮಾಪ್ನುಯಾತ್ ॥ ೭ ॥
ನ ಶೂದ್ರಾಯ ಮತಿಂ ದದ್ಯಾನ್ನೋಚ್ಛಿಷ್ಟಂ ನ ಹವಿಷ್ಕೃತಂ ।
ನ ಚಾಸ್ಯೋಪದಿಶೇದ್ಧರ್ಮಂ ನ ಚಾಸ್ಯ ವ್ರತಮಾದಿಶೇತ್ ॥ ೮ ॥
ಜಪಸ್ತಪಸ್ತೀರ್ಥಯಾತ್ರಾ ಪ್ರವ್ರಜ್ಯಾ ಮಂತ್ರಸಾಧನಂ ।
ದೇವತಾರಾಧನಂ ದೀಕ್ಷಾ ಸ್ತ್ರೀಶೂದ್ರಪತನಾನಿ ಷಟ್ ॥ ೯ ॥
ಪತಿಪತ್ನೀ ಪತತ್ಯೇವ ವಿಧವಾ ಸರ್ವಮಾಚರೇತ್ ।
ಸಭರ್ತೃಕಾ ಶಕೇ ಪತ್ಯೌ ಸರ್ವಂ ಕುರ್ಯಾದನುಜ್ಞಯಾ ॥ ೧೦ ॥
ಗತ್ವಾ ಪರಾರ್ಥಂ ತೀರ್ಥಾದೌ ಷೋಡಶಾಂಶಫಲಂ ಲಭೇತ್ ।
ಗಚ್ಛತಶ್ಚ ಪ್ರಸಂಗೇನ ತೀರ್ಥಮರ್ಧಫಲಂ ಸ್ಮೃತಂ ॥ ೧೧ ॥

---

೫. ಯಾವಾಗಲೂ ಧರ್ಮವನ್ನು ತನ್ನ ಜಾತಿಯ ಪುತ್ರಪೌತ್ರಾದಿಗಳಿಂದಲೂ, ಗೋತ್ರದವರಿಂದಲೂ ಮಾಡಿಸಬೇಕು.

೬. ತಾವೇ ಮಾಡುವ ಧರ್ಮಕಾರ್ಯವು ಶ್ರೇಷ್ಠವಾದುದು. ಉತ್ತಮಾಧಮರಿಂದ ಅದನ್ನು ಮಾಡಿಸಬಾರದು.

೭. ಅಧಮನಿಂದ ಮಾಡಿಸಿದ ಧರ್ಮಕಾರ್ಯವು ಸರಿಯಾಗುವುದಿಲ್ಲವೆಂದು ನಾನು ತಿಳಿಯುತ್ತೇನೆ. ಉತ್ತಮನು ಅಧಮನಿಗಾಗಿ ಧರ್ಮಕಾರ್ಯವನ್ನೆಸಗಿದರೆ ದುರ್ಗತಿಯನ್ನು ಹೊಂದುವನು.

೮. ಶೂದ್ರನಿಗೆ ಜ್ಞಾನೋಪದೇಶ ಮಾಡಬಾರದು. ಹವಿಸ್ಸಿನ ಉಚ್ಛಿಷ್ಟವನ್ನೂ ಕೊಡಬಾರದು. ಅವನಿಗೆ ಧರ್ಮವ್ರತಗಳನ್ನೂ ಉಪದೇಶಮಾಡಬಾರದು.

೯. ಜಪ, ತಪಸ್ಸು, ತೀರ್ಥಯಾತ್ರೆ, ಸಂನ್ಯಾಸ, ಮಂತ್ರಸಾಧನ, ದೇವಪೂಜೆ, ದೀಕ್ಷೆ ಈ ಆರು ಸ್ತ್ರೀ ಶೂದ್ರರಿಗೆ ಪಾತಿತ್ಯವನ್ನುಂಟುಮಾಡತಕ್ಕುವು.

೧೦. ಸುಮಂಗಲಿಯು ತಾನೇ ಇವುಗಳನ್ನಾಚರಿಸಿದರೆ ಪತಿತಳಾಗುವಳು. ವಿಧವೆಯು ಇವುಗಳನ್ನೆಲ್ಲ ಆಚರಿಸಬೇಕು. ಸುಮಂಗಲಿಯು, ಗಂಡನು ಅಶಕ್ತನಾಗಿದ್ದರೆ ಅವನ ಅನುಜ್ಞೆಯಿಂದ ಎಲ್ಲವನ್ನೂ ಆಚರಿಸಬಹುದು.

೧೧. ಇನ್ನೊಬ್ಬರಿಗಾಗಿ ತೀರ್ಥಯಾತ್ರೆಯನ್ನು ಮಾಡಿದವನಿಗೆ ಹದಿನಾರನೆ

ಅನುಸಂಗೇನ ತೀರ್ಥಸ್ಯ ಸ್ನಾನೇ ಸ್ನಾಲಫಲಂ ವಿದುಃ ।
ನೈವ ಯಾತ್ರಾಫಲಂ ತಜ್ಜ್ಞಾಃ ಶಾಸ್ತ್ರೋಕ್ತಂ ಕಲ್ಮಷಾಪಹಂ ॥ ೧೨ ॥
ಪಿತ್ರರ್ಥಂ ಚ ಪಿತೃವ್ಯಸ್ಯ ಮಾತುರ್ಮಾತಾ ಮಹಸ್ಯ ಚ ।
ಮಾತುಲಸ್ಯ ತಥಾ ಭ್ರಾತುಃ ಶ್ವಶುರಸ್ಯ ಸುತಸ್ಯ ಚ ॥ ೧೩ ॥
ಪೋಷಕಾರ್ಥಾದಯೋಃಶ್ಚಾಽಪಿ ಮಾತಾಮಹ್ಯಾ ಗುರೋಸ್ತಥಾ ।
ಸ್ವಸುರ್ಮಾತೃಷ್ವಸುಃ ಪೈತ್ರ್ಯಾ ಆಚಾರ್ಯಾಧ್ಯಾಪಕಸ್ಯ ಚ ॥ ೧೪ ॥
ಇತ್ಯಾದ್ಯರ್ಥೇ ನರಃ ಸ್ನಾತ್ವಾ ಸ್ವಯಮಷ್ಟಾಂಶಮಾಪ್ನುಯಾತ್ ।
ಸಾಕ್ಷಾತ್ಪಿತ್ರೋಃ ಪ್ರಕುರ್ವಾಣಶ್ಚತುರ್ಥಾಂಶಮವಾಪ್ನುಯಾತ್ ॥ ೧೫ ॥
ಪತಿಪತ್ನ್ಯೋರ್ನಿಥಶ್ಚಾರ್ಧಂ ಫಲಂ ಪ್ರಾಹುರ್ಮನೀಷಿಣಃ ।
ಭಾಗಿನೇಯಸ್ಯ ಶಿಷ್ಯಸ್ಯ ಭ್ರಾತೃವ್ಯಸ್ಯ ಸುತಸ್ಯ ಚ ।
ಷಟ್ತ್ರಿಪಂಚ ಚತುರ್ಭಾಗಾನ್ಫಲಮಾಪ್ನೋತಿ ವೈ ನರಃ ॥ ೧೬ ॥
ಇತಿ ತೇ ಕಥಿತಂ ಪಾರ್ಥ ಪಾರಂಪರ್ಯಕ್ರಮಾಗತಂ ।
ಕರ್ತವ್ಯಂ ಜ್ಞಾತಿವರ್ಗಸ್ಯ ಪರಾರ್ಥೇ ಧರ್ಮಸಾಧನಂ ॥ ೧೭ ॥

---

ಒಂದುಭಾಗ ತೀರ್ಥಯಾತ್ರಾಫಲವು ದೊರೆಯುವುದು. ಇತರ ಕಾರ್ಯಗಳ ನಿಮಿತ್ತದಿಂದ ತೀರ್ಥಕ್ಕೆ ಹೋಗುವವನಿಗೆ ಅರ್ಧಫಲವು ಲಭಿಸುವುದು.

೧೨. ಆನುಷಂಗಿಕವಾಗಿ ತೀರ್ಥದಲ್ಲಿ ಮಿಂದರೆ ಸ್ನಾನಮಾಡಿದ ಫಲವು ಲಭಿಸುವುದು. ಅದರಿಂದ ಶಾಸ್ತ್ರೋಕ್ತವಾದ ಕಲ್ಮಷವನ್ನು ನಿವಾರಿಸುವ ಯಾತ್ರಾಫಲವು ದೊರೆಯುವುದಿಲ್ಲ.

೧೩–೧೫. ತಂದೆ, ತಂದೆಯ ಸಹೋದರ, ತಾಯಿ, ಮಾತಾಮಹ, ಸೋದರಮಾವ, ಸಹೋದರ, ಮಾವ, ಮಗ, ಪೋಷಕ, ದ್ರವ್ಯದಾತ, ಮಾತಾಮಹಿ, ಗುರು, ಸಹೋದರಿ, ತಾಯಿಯ ಸಹೋದರಿ, ಸೋದರತ್ತೆ, ಆಚಾರ್ಯ, ಅಧ್ಯಾಪಕ ಇವರಿಗಾಗಿ ಮಿಂದ ಮಾನವರಿಗೆ ಅಷ್ಟಾಂಶ ಫಲವು ದೊರೆಯುವುದು. ಸಾಕ್ಷಾತ್ ತಂದೆ ತಾಯಿಗಳಿಗಾಗಿ ಸ್ನಾನಮಾಡಿದರೆ ನಾಲ್ಕನೆಯ ಒಂದಂಶದ ಫಲವು ಲಭಿಸುವುದು.

೧೬. ಪತಿಗಾಗಿ ಪತ್ನಿಯು ಸ್ನಾನಮಾಡಿದರೆ, ಅಥವಾ ಪತ್ನಿಗಾಗಿ ಪತಿಯು ಮಿಂದರೆ ಅರ್ಧಭಾಗದ ಫಲವು ದೊರೆಯುವುದು. ಸೋದರಳಿಯ, ಶಿಷ್ಯ, ಸಹೋದರನ ಮಗ, ಪುತ್ರ ಇವರಿಗಾಗಿ ಮಿಂದರೆ ಕ್ರಮವಾಗಿ ಆರು, ಮೂರು, ಐದು ಮತ್ತು ನಾಲ್ಕನೆಯ ಒಂದು ಭಾಗದ ಫಲವು ದೊರೆಯುವುದು.

೧೭. ಯುಧಿಷ್ಠಿರ! ಹೀಗೆ ಪಾರಂಪರ್ಯಕ್ರಮದಿಂದ ಬಂದ ಬಂಧುಗಳಿಗಾಗಿ ಮಾಡುವ ಧರ್ಮಸಾಧನವನ್ನು ನಿನಗೆ ಹೇಳಿರುತ್ತೇನೆ.

ವರ್ಷಾಋತುಸಮಾಯೋಗೇ ಸರ್ವಾ ನದ್ಯೋ ರಜಸ್ವಲಾಃ ।
ಮುಕ್ತ್ವಾ ಸರಸ್ವತೀಂ ಗಂಗಾಂ ನರ್ಮದಾಂ ಯಮುನಾ ನದೀಂ ॥ ೧೮ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ
ಪಂಚಮೇ ಆವಂತ್ಯಖಂಡೇ ತೃತೀಯೇ ರೇವಾಖಂಡೇ
"ಪರಾರ್ಥತೀರ್ಥಯಾತ್ರಾಫಲಕಥನಂ"
ನಾಮಾಷ್ಟಾವಿಂಶತ್ಯಧಿಕದ್ವಿಶತತಮೋಽಧ್ಯಾಯಃ

---

೧೮. ಸರಸ್ವತೀ, ಗಂಗೆ, ನರ್ಮದಾ, ಯಮುನಾನದಿಗಳ ಹೊರತು ಉಳಿದ ಎಲ್ಲ ನದಿಗಳೂ ವರ್ಷಾಕಾಲದ ಆರಂಭದಲ್ಲಿ ರಜಸ್ವಲಾದೋಷವನ್ನು ಹೊಂದಿರುವುವು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ
ಶ್ರೀ ಸ್ಕಾಂದಮಹಾಪುರಾಣದ ಐದನೆಯ ಆವಂತ್ಯಖಂಡದ ಮೂರನೆಯ ರೇವಾಖಂಡದಲ್ಲಿ
"ಪರಾರ್ಥತೀರ್ಥಯಾತ್ರಾಫಲಕಥನ"ವೆಂಬ
ಇನ್ನೂರಿಪ್ಪತ್ತೆಂಟನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

# ಅಷ್ಟೈಕೋನತ್ರಿಂಶದಧಿಕದ್ವಿಶತತಮೋಽಧ್ಯಾಯಃ

## ರೇವಾಖಂಡಪಠನ–ಶ್ರವಣ–ದಾನಾದಿಫಲಶ್ರುತಿವರ್ಣನಂ

**ಶ್ರೀ ಮಾರ್ಕಂಡೇಯ ಉವಾಚ :—**

**ಏವಂ ತೇ ಕಥಿತಂ ರಾಜನ್ ಪುರಾಣಂ ಧರ್ಮಸಂಹಿತಂ ।**
**ಶಿವಪ್ರೀತ್ಯಾ ಯಥಾ ಪ್ರೋಕ್ತಂ ವಾಯುನಾ ದೇವಸಂಸದಿ ॥ ೧ ॥**
**ಷಷ್ಟಿತೀರ್ಥಸಹಸ್ರಾಣಿ ಷಷ್ಟಿಕೋಟ್ಯಸ್ತಥೈವ ಚ ।**
**ಆದಿಮಧ್ಯಾವಸಾನೇಷು ನರ್ಮದಾಯಾಂ ಪದೇಪದೇ ॥ ೨ ॥**
**ಮಯಾ ದ್ವಾದಶಸಾಹಸ್ರೀ ಸಂಹಿತಾ ಯಾ ಶ್ರುತಾ ಪುರಾ ।**
**ದೇವದೇವಸ್ಯ ಗದತಃ ಸಾಂಪ್ರತಂ ಕಥಿತಾ ತವ ॥ ೩ ॥**
**ಪೃಷ್ಟಸ್ತ್ವಯಾಽಹಂ ಭೂಪಾಲ ಪರ್ವತೇಽಮರಕಂಟಕೇ ।**
**ಸ್ಥಿತಃ ಸಂಕ್ಷೇಪತಃ ಸರ್ವಂ ಮಯಾ ತತ್ಕಥಿತಂ ತವ ॥ ೪ ॥**
**ನರ್ಮದಾಚರಿತಂ ಪುಣ್ಯಂ ಶೃಣು ತಸ್ಯಾಽಸ್ತಿ ಯತ್ಫಲಂ ।**
**ಯತ್ಫಲಂ ಸರ್ವವೇದೈಃ ಸ್ಯಾತ್ಸಷಡಂಗಪದಕ್ರಮೈಃ ॥ ೫ ॥**
**ಪಠಿತೈಶ್ಚ ಶ್ರುತೈರ್ವಾಽಪಿ ತಸ್ಮಾದ್ಬಹುತರಂ ಭವೇತ್ ।**
**ಸತ್ರಯಾಜೀಫಲಂ ಯತ್ರ ಲಭತೇ ದ್ವಾದಶಾಬ್ದಿಕಂ ॥ ೬ ॥**

---

### ಕನ್ನಡದ ಅನುವಾದ

#### ರೇವಾಖಂಡಪಠನ–ಶ್ರವಣ–ದಾನಾದಿಫಲಶ್ರುತಿವರ್ಣನ

೧. ಶ್ರೀ ಮಾರ್ಕಂಡೇಯನು ಹೇಳುತ್ತಾನೆ:—ಯುಧಿಷ್ಠಿರ! ದೇವಸಭೆಯಲ್ಲಿ ವಾಯುದೇವನು ಶಿವನಲ್ಲಿರುವ ಪ್ರೀತಿಯಿಂದ ಹೇಳಿದ ಧರ್ಮಸಂಹಿತವಾದ ಈ ಪುರಾಣವನ್ನು ನಿನಗೆ ಈ ರೀತಿ ಹೇಳಿರುವೆನು.

೨. ನರ್ಮದಾನದಿಯ ಆದಿಮಧ್ಯಾವಸಾನಗಳಲ್ಲಿ ಅರುವತ್ತುಕೋಟಿ ಅರುವತ್ತುಸಾವಿರ ತೀರ್ಥಗಳಿರುವುವು.

೩. ನಾನು ಹಿಂದೆ ಶಂಕರನಿಂದ ಕೇಳಿದ ಹನ್ನೆರಡುಸಾವಿರ ಗ್ರಂಥವುಳ್ಳ ಈ ಪುರಾಣವನ್ನು ಈಗ ನಿನಗೆ ಹೇಳಿರುತ್ತೇನೆ.

೪. ನೀನು ಅಮರಕಂಟಕಪರ್ವತದಲ್ಲಿ ನನ್ನನ್ನು ಪ್ರಶ್ನೆಮಾಡಿರುವೆ. ಆದನ್ನು ನಾನು ನಿನಗೆ ಸಂಕ್ಷೇಪವಾಗಿ ಹೇಳಿದ್ದೇನೆ.

೫–೧೩. ಪುಣ್ಯಕರವಾದ ನರ್ಮದಾಚರಿತೆಯನ್ನು ಶ್ರವಣಮಾಡುವುದರಿಂದ ಷಡಂಗಪದಕ್ರಮಗಳಿಂದ ಸಹಿತವಾದ ವೇದಗಳನ್ನು ಪಠಿಸುವುದರಿಂದ ಅಥವಾ ಶ್ರವಣಮಾಡುವುದರಿಂದುಂಟಾಗುವ ಫಲಕ್ಕಿಂತ ಅಧಿಕಫಲವು ಲಭಿಸುವುದು. ಹನ್ನೆರಡುವರ್ಷಕಾಲ ಸತ್ರಯಾಗವನ್ನು ಮಾಡುವುದರಿಂದ ದೊರಕುವ

ಚರಿತೇ ತು ಶ್ರುತೇ ದೇವ್ಯಾ ಲಭತೇ ತಾದೃಶಂ ಫಲಂ ।
ಸರ್ವತೀರ್ಥೇಷು ಯತ್ಪುಣ್ಯಂ ಸ್ನಾತ್ವಾ ಸಾಗರಮಾದಿತಃ ॥ ೭ ॥
ಸಕೃತ್ಸ್ನಾತ್ವಾ ಕಥಾ ಶ್ರುತ್ವಾ ನರ್ಮದಾಯಾಂ ಫಲಂ ಹಿ ತತ್ ।
ಆದಿಮಧ್ಯಾವಸಾನೇನ ನರ್ಮದಾ ಚರಿತಂ ಶುಭಂ ॥ ೮ ॥
ಯಃ ಶೃಣೋತಿ ನರೋ ಭಕ್ತ್ಯಾ ತಸ್ಯ ಪುಣ್ಯಫಲಂ ಶೃಣು ।
ಸಪ್ರಾಪ್ಯ ಶಿವಸಂಸ್ಥಾನಂ ರುದ್ರಕನ್ಯಾಸಮಾವೃತಃ ॥ ೯ ॥
ರುದ್ರಸ್ಯಾನುಚರೋ ಭೂತ್ವಾ ತೇನೈವ ಸಹ ಮೋದತೇ ।
ಏತದ್ಧರ್ಮಮುಪಾಖ್ಯಾನಂ ಸರ್ವಶಾಸ್ತ್ರೇಷು ಸತ್ತಮ ॥ ೧೦ ॥
ದೇಶೇ ವಾ ಮಂಡಲೇ ವಾಽಪಿ ಗ್ರಾಮೇ ವಾ ನಗರೇಽಪಿವಾ ।
ಗೃಹೇ ವಾ ತಿಷ್ಠತೇ ಯಸ್ಯ ಚಾತುರ್ವರ್ಣ್ಯಸ್ಯ ಭಾರತ ॥ ೧೧ ॥
ಸ ಬ್ರಹ್ಮಾ ಸ ಶಿವಃ ಸಾಕ್ಷಾತ್ಸ ಚ ದೇವೋ ಜನಾರ್ದನಃ ।
ತ್ರಿವಿಧಂ ಕಾರಣಂ ಲೋಕೇ ಧರ್ಮಪಂಥಾನಮುತ್ತಮಂ ॥ ೧೨ ॥
ದೇವತಾನಾಂ ಗುರುಂ ಶಾಸ್ತ್ರಂ ಪರಮಂ ಸಿದ್ಧಿ ಕಾರಣಂ ।
ಶ್ರುತ್ವೇಶ್ವರಮುಖತ್ಪಾರ್ಥ ಮಯಾಽಪಿ ತವ ಕೀರ್ತಿತಂ ॥ ೧೩ ॥
ದಕ್ಷಿಣೇ ಚೋತ್ತರೇ ಕೂಲೇ ಯಾನಿ ತೀರ್ಥಾನಿ ಕಾನಿಚಿತ್ ।
ಪ್ರಧಾನತಃ ಸುಪುಣ್ಯಾನಿ ಕಥಿತಾನಿ ವಿಶೇಷತಃ ॥ ೧೪ ॥

---

ಫಲವು ನರ್ಮದಾಚರಿತ್ರೆಯನ್ನು ಶ್ರವಣಮಾಡುವುದರಿಂದ ದೊರೆಯುವುದು. ಸಮುದ್ರಾದಿ ಸಕಲ ತೀರ್ಥಗಳಲ್ಲಿ ಸ್ನಾನಮಾಡುವುದರಿಂದುಂಟಾಗುವ ಫಲವು ನರ್ಮದಾನದಿಯಲ್ಲಿ ಒಂದು ಸಾರಿ ಸ್ನಾನಮಾಡುವುದರಿಂದ ಅಥವಾ ಅದರ ಚರಿತ್ರೆಯನ್ನು ಕೇಳುವುದರಿಂದ ಲಭಿಸುವುದು. ಶುಭಕರವಾದ ನರ್ಮದಾ ಚರಿತ್ರೆಯನ್ನುಆದಿಮಧ್ಯಾವಸಾನಗಳಲ್ಲಿ ಭಕ್ತಿಯಿಂದ ಕೇಳುವ ಮಾನವನಿಗಾಗುವ ಫಲವನ್ನು ಕೇಳು. ಅವನು ನರ್ಮದೆಯೊಡನೆ ರುದ್ರನ ಸ್ಥಾನವನ್ನು ಹೊಂದಿ ಆ ಶಿವನಿಗೆ ಸೇವಕನಾಗಿ ಅವನೊಡನೆ ಆನಂದಿಸುವನು. ಸಮಸ್ತ ಶಾಸ್ತ್ರಗಳಲ್ಲಿ ಉತ್ತಮವಾದ ಈ ಉಪಾಖ್ಯಾನವು ಬ್ರಾಹ್ಮಣಾದಿ ನಾಲ್ಕು ಜಾತಿಯಲ್ಲಿ ಜನಿಸಿದ ಯಾವನ ದೇಶದಲ್ಲಿ, ಸಂಸ್ಥಾನದಲ್ಲಿ, ಗ್ರಾಮದಲ್ಲಿ, ಪಟ್ಟಣದಲ್ಲಿ ಅಥವಾ ಗ್ರಾಮದಲ್ಲಿ ಇರುವುದೊ, ಅವನು ಬ್ರಹ್ಮವಿಷ್ಣು ಮಹೇಶ್ವರರೂಪನಾಗಿರುವನು. ಲೋಕದಲ್ಲಿ ಧರ್ಮದ ದಾರಿಗಳಾದ ದೇವತೆ, ಗುರು, ಶಾಸ್ತ್ರ ಇವುಗಳು ಉತ್ತಮ ಸಿದ್ಧಿಗೆ ಕಾರಣವಾದುವು. ನಾನು ಈಶ್ವರನ ಮುಖದಿಂದ ಕೇಳಿದ್ದನ್ನು ನಿನಗೆ ಹೇಳಿದ್ದೇನೆ.

೧೪. ನರ್ಮದಾನದಿಯ ದಕ್ಷಿಣೋತ್ತರ ತೀರಗಳಲ್ಲಿರುವ ಪುಣ್ಯಕರಗಳಾದ ಮುಖ್ಯತೀರ್ಥಗಳನ್ನು ಹೇಳಿರುತ್ತೇನೆ.

ಸ್ಪರ್ಶನಾದ್ದರ್ಶನಾತ್ತೇಷಾಂ ಕೀರ್ತನಾಚ್ಛ್ರವಣಾತ್ತಥಾ ।
ಮುಚ್ಯತೇ ಸರ್ವಪಾಪೇಭ್ಯೋ ರುದ್ರಲೋಕಂ ಸ ಗಚ್ಛತಿ ॥ ೧೫ ॥
ಇದಂ ಯಃ ಶೃಣುಯಾನ್ನಿತ್ಯಂ ಪುರಾಣಂ ಶಿವಭಾಷಿತಂ ।
ಬ್ರಾಹ್ಮಣೋ ವೇದವಿದ್ವಾನ್ ಕ್ಷತ್ರಿಯೋ ವಿಜಯೀ ಭವೇತ್ ॥ ೧೬ ॥
ಧನಭಾಗೀ ಭವೇದ್ವೈಶ್ಯಃ ಶೂದ್ರೋ ವೈ ಧರ್ಮಭಾಗ್ಭವೇತ್ ।
ಸೌಭಾಗ್ಯಂ ಸಂತತಿಂ ಸ್ವರ್ಗಂ ನಾರೀ ಶ್ರುತ್ವಾಪ್ನುಯಾದ್ಧನಂ ॥ ೧೭ ॥
ಬ್ರಹ್ಮಘ್ನಶ್ಚ ಸುರಾಪಶ್ಚ ಸ್ತೇಯೀ ಚ ಗುರುತಲ್ಪಗಃ ।
ಮಾಹಾತ್ಮ್ಯಂ ನರ್ಮದಾಯಾಸ್ತು ಶ್ರುತ್ವಾ ಪಾಪಬಹಿಷ್ಕೃತಾಃ ॥ ೧೮ ॥
ಪಾಪಭೇದೀ ಕೃತಘ್ನಶ್ಚ ಸ್ವಾಮಿವಿಶ್ವಾಸಘಾತಕಃ ।
ಗೋಘ್ನಶ್ಚ ಗರದಶ್ಚೈವ ಕನ್ಯಾವಿಕ್ರಯಕಾರಕಃ ॥ ೧೯ ॥
ಏತೇ ಶ್ರುತ್ವೈವ ಪಾಪೇಭ್ಯೋ ಮುಚ್ಯಂತೇ ನಾತ್ರ ಸಂಶಯಃ ।
ಯೇಪುನರ್ಭಾವಿತಾತ್ಮಾನಃ ಶೃಣ್ವಂತಿ ಸತತಂ ನೃಪ ॥ ೨೦ ॥
ಪೂಜಯಂತ ಇದಂ ದೇವಾ ಪೂಜಿತಾ ಗುರವಶ್ಚ ತೈಃ ।
ನರ್ಮದಾ ಪೂಜಿತಾ ತೇನ ಭಗವಾಂಶ್ಚ ಮಹೇಶ್ವರಃ ॥ ೨೧ ॥
ತಸ್ಮಾತ್ಸರ್ವಪ್ರಯತ್ನೇನ ಗಂಧಪುಷ್ಪವಿಭೂಷಣೈಃ ।
ಪೂಜಿತಂ ಪರಯಾ ಭಕ್ತ್ಯಾ ಶಾಸ್ತ್ರಮೇತತ್ಫಲಪ್ರದಂ ॥ ೨೨ ॥

---

೧೫. ಆ ತೀರ್ಥಗಳ ಸ್ಪರ್ಶನ, ದರ್ಶನ, ಕೀರ್ತನ, ಶ್ರವಣ ಇವುಗಳಿಂದ ಮಾನವನು ಸಕಲ ಪಾಪಮುಕ್ತನಾಗಿ ರುದ್ರಲೋಕಕ್ಕೆ ಹೋಗುತ್ತಾನೆ.

೧೬–೧೭. ಶಿವನು ಅಪ್ಪಣೆಕೊಡಿಸಿದ ಈ ಪುರಾಣವನ್ನು ನಿತ್ಯವೂ ಕೇಳಿದ ಬ್ರಾಹ್ಮಣನು ವೇದವಿದ್ಯಾಪಾರಂಗತನೂ, ಕ್ಷತ್ರಿಯನು ಜಯಶಾಲಿಯೂ, ವೈಶ್ಯನು ಧನಿಕನೂ, ಶೂದ್ರನು ಧರ್ಮಿಷ್ಠನೂ ಆಗುವನು. ನಾರಿಯು ಸೌಭಾಗ್ಯ, ಸಂತತಿ, ಸ್ವರ್ಗ ಮತ್ತು ಧನಗಳನ್ನು ಪಡೆಯುವಳು.

೧೮. ಬ್ರಹ್ಮಘ್ನ, ಸುರಾಪಾನಮಾಡಿದವ, ಕಳ್ಳ, ಗುರುಪತ್ನಿಯ ಸಂಗ ಮಾಡಿದವ ಇವರೂ ನರ್ಮದೆಯ ಮಾಹಾತ್ಮ್ಯವನ್ನು ಕೇಳಿ ಪಾಪದೂರ ರಾಗುವರು.

೧೯–೨೧. ಪಾತಕಿ, ಕೃತಘ್ನ, ಸ್ವಾಮಿವಿಶ್ವಾಸಘಾತಕ, ಗೋಘ್ನ, ವಿಷಕೊಟ್ಟವ, ಕನ್ಯೆಯನ್ನು ವಿಕ್ರಯಿಸುವವನು—ಇವರು ಇದನ್ನು ಕೇಳುವುದ ರಿಂದಲೇ ನಿಶ್ಚಯವಾಗಿ ಪಾಪಮುಕ್ತರಾಗುವರು. ಭಕ್ತಿಯಿಂದ ಇದನ್ನು ಕೇಳುವವರೂ, ಪೂಜಿಸುವವರೂ, ದೇವ, ಗುರು, ನರ್ಮದಾ, ಮಹೇಶ್ವರರನ್ನು ಪೂಜಿಸಿದಂತವರಾಗುವರು.

೨೨. ಆದುದರಿಂದ ಅತಿಶಯಭಕ್ತಿಯಿಂದ ಗಂಧ, ಪುಷ್ಪ, ಭೂಷಣಗಳಿಂದ ಈಶ್ವರನನ್ನು ಪೂಜಿಸಿದರೆ ಈ ಶಾಸ್ತ್ರವು ಫಲವನ್ನೀಯುವುದು.

ಲೇಖಾಪಯಿತ್ವಾ ಸಕಲಂ ನರ್ಮದಾಚರಿತಂ ಶುಭಂ ।
ಉತ್ತಮಂ ಸರ್ವಶಾಸ್ತ್ರೇಭ್ಯೋ ಯೋ ದದಾತಿ ದ್ವಿಜನ್ಮನೇ ॥ ೨೩ ॥
ನರ್ಮದಾತೀರ್ಥೇಷು ಸ್ನಾನೇ ದಾನೇ ಚ ಯತ್ಫಲಂ ।
ತತ್ಫಲಂ ಸಮವಾಪ್ನೋತಿ ಸನರೋ ನಾऽತ್ರ ಸಂಶಯಃ ॥ ೨೪ ॥
ಏತತ್ಪುರಾಣಂ ರುದ್ರೋಕ್ತಂ ಮಹಾಪುಣ್ಯಫಲಪ್ರದಂ ।
ಸ್ವರ್ಗದಂ ಪುತ್ರದಂ ಧನ್ಯಂ ಯಶಸ್ಯಂ ಕೀರ್ತಿವರ್ಧನಂ ॥ ೨೫ ॥
ಸರ್ವಪಾಪಹರಂ ಪಾರ್ಥ ದುಃಖದುಃಸ್ವಪ್ನನಾಶನಂ ।
ಪಠತಾಂ ಶೃಣ್ವತಾಂ ರಾಜನ್ ಸರ್ವಕಾಮಾರ್ಥಸಿದ್ಧಿದಂ ॥ ೨೬ ॥
ಶಾಂತಿರಸ್ತು ಶಿವಂ ಚಾಸ್ತು ಲೋಕಾಃ ಸಂತು ನಿರಾಮಯಾಃ ।
ಗೋಬ್ರಾಹ್ಮಣೇಭ್ಯಃ ಸ್ವಸ್ತ್ಯಸ್ತು ಧರ್ಮಂ ಧರ್ಮಾತ್ಮಜಾಶ್ರಯಃ ॥ ೨೭ ॥
ನರಕಾಂತಕರೀ ರೇವಾ ಸತೀರ್ಥಾ ವಿಶ್ವಪಾವನೀ ।
ನರ್ಮದಾ ಧರ್ಮದಾಚಾಸ್ತು ಶರ್ಮದಾ ಪಾರ್ಥ ತೇ ಸದಾ ॥ ೨೮ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ
ಪಂಚಮೇ ಆವಂತ್ಯಖಂಡೇ ತೃತೀಯೇ ರೇವಾಖಂಡೇ
"ರೇವಾಖಂಡಪಠನ-ಶ್ರವಣ-ದಾನಾದಿಫಲಶ್ರುತಿವರ್ಣನಂ"
ನಾಮ್ನೈಕೋನತ್ರಿಂಶದಧಿಕದ್ವಿಶತತಮೋऽಧ್ಯಾಯಃ

---

೨೩-೨೪. ಶುಭಕರವೂ, ಸಕಲ ಶಾಸ್ತ್ರಗಳಿಗಿಂತಲೂ ಉತ್ತಮವೂ ಆದ ನರ್ಮದಾ ಚರಿತ್ರೆಯನ್ನು ಸಂಪೂರ್ಣವಾಗಿ ಬರೆಯಿಸಿ ಬ್ರಾಹ್ಮಣನಿಗೆ ದಾನ ಮಾಡಿದವನು ನರ್ಮದೆಯಲ್ಲಿರುವ ಸಕಲ ತೀರ್ಥಗಳಲ್ಲಿಯೂ ಸ್ನಾನದಾನಮಾಡುವುದರಿಂದುಂಟಾಗುವ ಫಲವನ್ನು ನಿಶ್ಚಯವಾಗಿಯೂ ಹೊಂದುವನು.

೨೫-೨೬. ರುದ್ರನೊರೆದ ಅತ್ಯಂತ ಪುಣ್ಯಫಲವನ್ನೀಯುವ ಈ ಪುರಾಣವು ಹೇಳುವವರಿಗೂ, ಕೇಳುವವರಿಗೂ ಸ್ವರ್ಗ, ಪುತ್ರ, ಧನ, ಯಶಸ್ಸುಗಳನ್ನು ಕೊಡುವುದೂ, ಕೀರ್ತಿಯನ್ನು ಹೆಚ್ಚಿಸುವುದೂ, ಸಕಲ ಪಾಪಗಳನ್ನು ನಿವಾರಿಸುವುದೂ, ದುಃಖ, ದುಸ್ಸ್ವಪ್ನಗಳನ್ನು ಪರಿಹರಿಸುವುದೂ, ಸಕಲೇಷ್ಟಾರ್ಥ ಸಿದ್ಧಿಯನ್ನೀಯುವುದೂ ಆಗಿರುವುದು.

೨೭. ಶಾಂತಿಯೂ, ಮಂಗಳವೂ ಆಗಲಿ. ಪ್ರಜೆಗಳು ರೋಗವಿಲ್ಲದವರಾಗಲಿ. ಗೋಬ್ರಾಹ್ಮಣರಿಗೆ ಮಂಗಳವಾಗಲಿ. ಧರ್ಮವುಂಟಾಗಲಿ.

೨೮. ತೀರ್ಥಗಳಿಂದ ಕೂಡಿದ ರೇವಾನದಿಯು ನಿನಗೆ ನರಕನಾಶಕವೂ, ಜಗತ್ಪಾವನವೂ, ಧರ್ಮಸುಖಗಳನ್ನೀಯುವುದೂ ಆಗಲಿ.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ
ಶ್ರೀ ಸ್ಕಾಂದಮಹಾಪುರಾಣದ ಐದನೆಯ ಆವಂತ್ಯಖಂಡದ ಮೂರನೆಯ ರೇವಾಖಂಡದಲ್ಲಿ
"ರೇವಾಖಂಡಪಠನ-ಶ್ರವಣ-ದಾನಾದಿಫಲಶ್ರುತಿವರ್ಣನ"ವೆಂಬ
ಇನ್ನೂರಿಪ್ಪತ್ತೊಂಬತ್ತನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

# ಅಥ ತ್ರಿಂಶದಧಿಕದ್ವಿಶತತಮೋಽಧ್ಯಾಯಃ

## ತೀರ್ಥಾವಲಿಕಥನಂ

**ಸೂತ ಉವಾಚ:—**

**ಇತ್ಯುಕ್ತ್ವೋಪರರಾಮಾಥ ಪಾಂಡೋಃ ಪುತ್ರಾಯ ವೈ ಮುನಿಃ ।**
**ಮೃಕಂಡತನಯೋ ಧೀಮಾನ್ ಸಪ್ತಕಲ್ಪಸ್ಮರಃ ಪರಃ ॥ ೧ ॥**
**ಮಾರ್ಕಂಡಮುನಿನಾ ಪ್ರೋಕ್ತಂ ಯಥಾ ಪಾರ್ಥಾಯ ಸತ್ತಮಾಃ ।**
**ತಥಾ ವಃ ಕಥಿತಂ ಸರ್ವಂ ರೇವಾಮಾಹಾತ್ಮ್ಯಮುತ್ತಮಂ ॥ ೨ ॥**
**ಇಯಂ ಪುಣ್ಯಾ ಸರಿಚ್ಛ್ರೇಷ್ಠಾ ರೇವಾ ವಿಶ್ವೈಕಪಾವನೀ ।**
**ರುದ್ರದೇಹಸಮುದ್ಭೂತಾ ಸರ್ವಭೂತಾಭಯಪ್ರದಾಃ ॥ ೩ ॥**
**ಓಂಕಾರಜಲಧಿಂ ಯಾವದುವಾಚ ಭೃಗುನಂದನಃ ।**
**ತೀರ್ಥಸಂಗಮಭೇದಾನ್ವೈ ಧರ್ಮಪುತ್ರಾಯ ಪೃಚ್ಛತೇ ॥ ೪ ॥**
**ಸಮಾಸೇನೈವ ಮುನಯಸ್ತಥಾಽಹಂ ಕಥಯಾಮಿ ವಃ ।**
**ಸಪ್ತ ಷಷ್ಟಿಸಹಸ್ರಾಣಿ ಷಷ್ಟಿಕೋಟ್ಯಸ್ತಥೈವ ಚ ॥ ೫ ॥**
**ಕಥಂ ಕೇನಾಽತ್ರ ಶಕ್ಯಂತೇ ವಕ್ತುಂ ವರ್ಷಶತೈರಪಿ ।**
**ತಥಾಪ್ಯತ್ರ ಮುನಿಶ್ರೇಷ್ಠಾಃ ಪ್ರೋಕ್ತಂ ಪಾರ್ಥಾಯ ವೈ ಯಥಾ ॥ ೬ ॥**

---

## ಕನ್ನಡದ ಅನುವಾದ

### ತೀರ್ಥಾವಲಿಕಥನ

೧. ಸೂತನು ಹೇಳುತ್ತಾನೆ:—ಮೃಕಂಡುಮುನಿಯ ಮಗನೂ, ಬುದ್ಧಿವಂತನೂ, ಸಪ್ತಕಲ್ಪಗಳ ಸ್ಮರಣೆಯುಳ್ಳವನೂ ಆದ ಮಾರ್ಕಂಡೇಯನು ಯುಧಿಷ್ಠಿರನಿಗೆ ಹೀಗೆ ಹೇಳಿ ಸುಮ್ಮನಾದನು.

೨. ಮುನಿವರ್ಯರೆ! ಮಾರ್ಕಂಡೇಯನು ಯುಧಿಷ್ಠಿರನಿಗೆ ಹೇಳಿದಂತೆಯೇ ನಿಮಗೆ ರೇವಾಮಾಹಾತ್ಮ್ಯವನ್ನೆಲ್ಲ ಹೇಳಿರುವೆನು.

೩. ಪುಣ್ಯಕರವೂ, ನದಿಗಳಲ್ಲಿ ಉತ್ತಮವೂ, ಪ್ರಪಂಚಪಾವನಿಯೂ, ರುದ್ರಶರೀರದಿಂದ ಹುಟ್ಟಿರುವುದೂ ಆದ ನರ್ಮದಾನದಿಯು ಸಕಲ ಪ್ರಾಣಿಗಳಿಗೆ ಅಭಯವನ್ನು ನೀಡುವುದು.

೪–೭. ಮುನಿಗಳೆ! ಮಾರ್ಕಂಡೇಯನು ಯುಧಿಷ್ಠಿರನಿಗೆ ಓಂಕಾರಕ್ಷೇತ್ರವನ್ನು ಆರಂಭಿಸಿ ಹೇಳಿದ ತೀರ್ಥಸಂಗಮ ಪ್ರಭೇದಗಳನ್ನು ನಿಮಗೆ ನಾನು ಸಂಕ್ಷೇಪವಾಗಿ ಹೇಳುತ್ತೇನೆ. ಅರುವತ್ತುಕೋಟಿ ಅರುವತ್ತೇಳುಸಾವಿರ ತೀರ್ಥಗಳನ್ನು ನೂರುವರ್ಷಗಳಿಂದಲೂ ಯಾರಿಗೆತಾನೆ ಹೇಳಲು ಸಾಧ್ಯವು. ಮುನಿ

ತೀರ್ಥಮೋಂಕಾರಮಾರಭ್ಯ ವಕ್ಷ್ಯೇ ತೀರ್ಥಾವಲಿಂ ಶುಭಾಂ ।
ಪ್ರೋಚ್ಯಮಾನಾಂ ಸಮಾಸೇನ ತಾಂ ಶೃಣುಧ್ವಂ ಮಹರ್ಷಯಃ ॥ ೭ ॥
ನತ್ವಾ ಸೋಮಂ ಮಹೇಶಾನಂ ನತ್ವಾ ಬ್ರಹ್ಮಾಚ್ಯುತಾವುಭೌ ।
ಸರಸ್ವತೀಂ ಗಣೇಶಾನಂ ವೇದವ್ಯಾಸಾಂಘ್ರಿಪಂಕಜಂ ॥ ೮ ॥
ಪೂರ್ವಾಚಾರ್ಯಾಂಸ್ತಥಾ ಸರ್ವಾನ್ ದೃಷ್ಟಾದೃಷ್ಟಾರ್ಥವೇದಿನಃ ।
ಪ್ರಣಮ್ಯ ನರ್ಮದಾಂ ದೇವೀಂ ವಕ್ಷ್ಯೇ ತೀರ್ಥಾವಲಿಂತ್ವಿಮಾಂ ॥ ೯ ॥
ಓಂ ನಮೋ ವಿಶ್ವರೂಪಾಯ ಓಂಕಾರಾಯಾಖಿಲಾತ್ಮನೇ ।
ಯಮಾರಭ್ಯ ಪ್ರವಕ್ಷ್ಯಾಮಿ ರೇವಾತೀರ್ಥಾವಲಿಂ ದ್ವಿಜಾಃ ॥ ೧೦ ॥
ಅಸ್ಮಿನ್ ಮಾರ್ಕಂಡಗದಿತೇ ರೇವಾತೀರ್ಥಕ್ರಮೇ ಶುಭೇ ।
ಪುರಾಣಸಂಹಿತಾಧ್ಯಾಯಾ ಮಾರ್ಕಂಡಾಶ್ರಮವರ್ಣನಂ ॥ ೧೧ ॥
ತತಃ ಪ್ರಶ್ನಾಧಿಕಾರಶ್ಚ ಪ್ರಶಂಸಾ ನರ್ಮದೋದ್ಭವಾ ।
ತಥಾ ಪಂಚದಶಾನಾಂ ಚ ಪ್ರವಾಹಾನಾಂ ಪ್ರಕೀರ್ತನಂ ॥ ೧೨ ॥
ನಾಮನಿರ್ವಚನಂ ತದ್ವತ್ತಥಾ ಕಲ್ಪಸಮುದ್ಭವಾಃ ।
ಏಕವಿಂಶತಿಕಲ್ಪಾನಾಂ ತದ್ವನ್ನಾಮಾನುಕೀರ್ತನಂ ॥ ೧೩ ॥
ಮಾರ್ಕಂಡೇಯಾನುಭೂತಾನಾಂ ಸಪ್ತಾನಾಂ ಲಕ್ಷಣಾನಿ ಚ ।
ಮಾಹಾತ್ಮ್ಯಂ ಚೈವ ರೇವಾಯಾಃ ಶಿವವಿಷ್ಣ್ವೋಸ್ತಥೈವಚ ॥ ೧೪ ॥

---

ವರ್ಯರೆ! ಹಾಗಾದರೂ ಯುಧಿಷ್ಠಿರನಿಗೆ ಮಾರ್ಕಂಡೇಯಮುನಿಯು ಹೇಳಿದಂತೆ ಓಂಕಾರಕ್ಷೇತ್ರವನ್ನಾರಂಭಿಸಿ ಮಂಗಳಕರವಾದ ತೀರ್ಥಸಮೂಹಗಳನ್ನು ಹೇಳುವೆನು. ಸಂಕ್ಷೇಪವಾಗಿ ಹೇಳುವೆನು. ಅದನ್ನು ಕೇಳಿರಿ.

೮–೯. ಉಮೆಯಿಂದ ಸಹಿತನಾದ ಶಂಕರ, ಬ್ರಹ್ಮ, ಅಚ್ಯುತ, ಸರಸ್ವತಿ, ಗಣೇಶ, ವೇದವ್ಯಾಸರ ಅಂಘ್ರಿಕಮಲ, ದೃಷ್ಟಾದೃಷ್ಟಾರ್ಥವನ್ನರಿತ ಪೂರ್ವಾಚಾರ್ಯರು, ನರ್ಮದಾದೇವಿ, ಈ ತೀರ್ಥಸಮೂಹ ಇವುಗಳನ್ನು ವಂದಿಸುವೆನು.

೧೦. ವಿಶ್ವರೂಪವೂ, ಅಖಿಲ ವಸ್ತುರೂಪವೂ ಆದ ಓಂಕಾರಕ್ಷೇತ್ರಕ್ಕೆ ನಮಸ್ಕಾರವು. ದ್ವಿಜರೆ! ಇದನ್ನರಿತು ರೇವಾತೀರ್ಥಗಳ ಸಮೂಹವನ್ನು ಹೇಳುವೆನು.

೧೧–೧೫. ಮಾರ್ಕಂಡೇಯನು ಹೇಳಿದ ಮಂಗಳಕರವಾದ ಈ ರೇವಾತೀರ್ಥಕ್ರಮದಲ್ಲಿ ಪುರಾಣಸಂಹಿತಾಧ್ಯಾಯಗಳು ಹೀಗಿರುವುವು. ಮಾರ್ಕಂಡಾಶ್ರಮವರ್ಣನ, ಅನಂತರ ಪ್ರಶ್ನಾಧಿಕಾರ, ನರ್ಮದಾಪ್ರಶಂಸಾ, ಹದಿನೈದು ಪ್ರವಾಹಗಳ ಕೀರ್ತನ, ನಾಮನಿರ್ವಚನ, ಕಲ್ಪಗಳ ಉತ್ಪತ್ತಿ, ಇಪ್ಪತ್ತೊಂದು ಕಲ್ಪಗಳ ವರ್ಣನೆ, ಅಂತೆಯೇ ಆ ಕಲ್ಪಗಳ ನಾಮಸಂಕೀರ್ತನ, ಮಾರ್ಕಂಡೇ

ಸಂಹಾರಲಕ್ಷಣಂ ತದ್ವದೋಂಕಾರಸ್ಯ ಚ ಸಂಭವಃ ।
ತಥೈವೋಂಕಾರಮಾಹಾತ್ಮ್ಯಮಮರಂಕಟಕೀರ್ತನಂ ॥ ೧೫ ॥
ಅಮರೇಶ್ವರತೀರ್ಥಂ ಚ ತಥಾ ದಾರುವನಂ ಮಹತ್ ।
ದಾರುಕೇಶ್ವರತೀರ್ಥಂ ಚ ತೀರ್ಥಂ ವೈ ಚರುಕೇಶ್ವರಂ ॥ ೧೬ ॥
ಚರುಕಾಸಂಗಮಸ್ತದ್ವದ್ವ್ಯತೀಪಾತೇಶ್ವರಂ ತಥಾ ।
ಪಾತಾಲೇಶ್ವರತೀರ್ಥಂ ಚ ಕೋಟಿಯಜ್ಞಾಹ್ವಯಂ ತಥಾ ॥ ೧೭ ॥
ವರುಣೇಶ್ವರತೀರ್ಥಂ ಚ ಲಿಂಗಾನ್ಯಷ್ಟೋತ್ತರಂ ಶತಂ ।
ಸಿದ್ಧೇಶ್ವರಂ ಯಮೇಶಂ ಚ ಬ್ರಹ್ಮೇಶ್ವರಮತಃ ಪರಂ ॥ ೧೮ ॥
ಸಾರಸ್ವತಂ ಚಾಷ್ಟರುದ್ರಂ ಸಾವಿತ್ರಂ ಸೋಮಸಂಜ್ಞಿತಂ ।
ಶಿವಖಾತಂ ಮಹಾತೀರ್ಥಂ ರುದ್ರಾವರ್ತಂ ದ್ವಿಜೋತ್ತಮಾಃ ॥ ೧೯ ॥
ಬ್ರಹ್ಮಾವರ್ತಂ ಪರಂ ತೀರ್ಥಂ ಸೂರ್ಯಾವರ್ತಮತಃಪರಂ ।
ಪಿಪ್ಪಲಾವರ್ತತೀರ್ಥಂ ಚ ಪಿಪ್ಪಲ್ಯಾಶ್ಚೈವ ಸಂಗಮಃ ॥ ೨೦ ॥
ಅಮರಕಂಟಮಾಹಾತ್ಮ್ಯಂ ಕಪಿಲಾಸಂಗಮಸ್ತಥಾ ।
ವಿಶಲ್ಯಾಸಂಭವಶ್ಚಾಽಪಿ ಭೃಗುತುಂಗಾದ್ರಿಕೀರ್ತನಂ ॥ ೨೧ ॥
ವಿಶಲ್ಯಾಸಂಗಮಃ ಪುಣ್ಯಃ ಕರಮರ್ದಾಸಮಾಗಮಃ ।
ಕರಮರ್ದೇಶ್ವರಂ ತೀರ್ಥಂ ಚಕ್ರತೀರ್ಥಮನುತ್ತಮಂ ॥ ೨೨ ॥
ಸಂಗಮೋ ನೀಲಗಂಗಾಯಾಃ ವಿಧ್ವಂಸಸ್ತ್ರಿಪುರಸ್ಯ ಚ ।
ಕೀರ್ತನಂ ತೀರ್ಥದಾನಾನಾಂ ಮಧುಕತೃತೀಯಾವ್ರತಂ ॥ ೨೩ ॥
ಅಪ್ಸರೇಶ್ವರತೀರ್ಥಂ ಚ ದೇಹಕ್ಷೇಪೇ ವಿಧಿಸ್ತತಃ ।
ತೀರ್ಥಂ ಜ್ವಾಲೇಶ್ವರಂ ನಾಮ ಜ್ವಾಲಾಯಾಃ ಸಂಗಮಸ್ತಥಾ ॥ ೨೪ ॥

---

ಯನು ನಿರೂಪಿಸಿದ ಸಂಹಾರಲಕ್ಷಣ, ಓಂಕಾರಕ್ಷೇತ್ರದ ಉತ್ಪತ್ತಿ, ಓಂಕಾರ ಮಾಹಾತ್ಮ್ಯ, ಅಮರಕಂಟಕ ಕ್ಷೇತ್ರಾನುಕೀರ್ತನ, ಇವುಗಳು ಉಕ್ತವಾಗಿವೆ.

೧೬–೧೦೬. ಹಾಗೆಯೇ ಅಮರೇಶ್ವರತೀರ್ಥ, ಕೋಟಿಯಜ್ಞತೀರ್ಥ, ವರುಣೇಶ್ವರತೀರ್ಥ, ಅಷ್ಟೋತ್ತರ ಶತಲಿಂಗಗಳು, ಸಿದ್ಧೇಶ್ವರ, ಯಮೇಶ, ಬ್ರಹ್ಮೇಶ್ವರ, ಸಾರಸ್ವತ, ಅಷ್ಟರುದ್ರ, ಸಾವಿತ್ರ, ಸೋಮತೀರ್ಥ, ಶಿವಖಾತ, ಮಹಾತೀರ್ಥ, ರುದ್ರಾವರ್ತ, ಬ್ರಹ್ಮಾವರ್ತ, ಸೂರ್ಯಾವರ್ತ, ಪಿಪ್ಪಲಾವರ್ತ, ಪಿಪ್ಪಲೀಸಂಗಮ, ಅಮರ ಕಂಟಕಮಾಹಾತ್ಮ್ಯ, ಕಪಿಲಾಸಂಗಮ, ವಿಶಲ್ಯಾ ಸಂಭವ, ಭೃಗುತುಂಗಾದ್ರಿಕೀರ್ತನ, ವಿಶಲ್ಯಾಸಂಗಮ, ಕರಮರ್ದಾಸಮಾಗಮ, ಕರಮರ್ದೇಶ್ವರತೀರ್ಥ, ಚಕ್ರತೀರ್ಥ, ನೀಲಗಂಗಾಸಂಗಮ, ತ್ರಿಪುರವಿಧ್ವಂಸ, ತೀರ್ಥದಾನಗಳ ಕೀರ್ತನ, ಮಧುಕತೃತೀಯಾವ್ರತ, ಅಪ್ಸರೇಶ್ವರತೀರ್ಥ,

ಶಕ್ರತೀರ್ಥಂ ಕುಶಾವರ್ತಂ ಹಂಸತೀರ್ಥಂ ತಥೈವ ಚ ।
ಅಂಬರೀಷಸ್ಯ ತೀರ್ಥಂ ಚ ಮಹಾಕಾಲೇಶ್ವರಂ ತಥಾ ॥ ೨೫ ॥
ಮಾತೃಕೇಶ್ವರತೀರ್ಥಂ ಚ ಭೃಗುತುಂಗಾನುವರ್ಣನಂ ।
ತತ್ರ ಭೈರವಮಾಹಾತ್ಮ್ಯಂ ಚಪಲೇಶ್ವರಕೀರ್ತನಂ ॥ ೨೬ ॥
ಚಂಡಪಾಣೇಶ್ಚ ಮಾಹಾತ್ಮ್ಯಂ ಕಾವೇರೀಸಂಗಮಸ್ತಥಾ ।
ಕುಬೇರೇಶ್ವರತೀರ್ಥಂ ಚ ವಾರಾಹೀಸಂಗಮಸ್ತಥಾ ॥ ೨೭ ॥
ಸಂಗಮಶ್ಚಂಡವೇಗಾಯಾಸ್ತೀರ್ಥಂ ಚಂಡೇಶ್ವರಂ ತಥಾ ।
ಏರಂಡೀಸಂಗಮಃ ಪುಣ್ಯ ಏರಂಡೇಶ್ವರಮುತ್ತಮಂ ॥ ೨೮ ॥
ಪಿತೃತೀರ್ಥಂ ಚ ತತ್ರೈವ ಓಂಕಾರಸ್ಯ ಚ ಸಂಭವಂ ।
ಮಾಹಾತ್ಮ್ಯಂ ಪಂಚಲಿಂಗಾನಾಮೋಂಕಾರಸ್ಯ ಮುನೀಶ್ವರಾಃ ॥ ೨೯ ॥
ಕೋಟಿತೀರ್ಥಸ್ಯ ಮಾಹಾತ್ಮ್ಯಂ ತೀರ್ಥಂ ಕಾಕಹ್ರದಂ ತಥಾ ।
ಜಂಬುಕೇಶ್ವರತೀರ್ಥಂ ಚ ಸಾರಸ್ವತಮತಃ ಪರಂ ॥ ೩೦ ॥
ಕಪಿಲಾಸಂಗಮಸ್ತದ್ವತ್ತೀರ್ಥಂ ಚ ಕಪಿಲೇಶ್ವರಂ ।
ದೈತ್ಯಸೂದನತೀರ್ಥಂ ಚಕ್ರತೀರ್ಥಂ ಚ ವಾಮನಂ ॥ ೩೧ ॥
ತೀರ್ಥಲಕ್ಷಂ ವಿದುಃ ಪೂರ್ವೇ ಕಪಿಲಾಯಾಸ್ತು ಸಂಗಮೇ ।
ಸ್ವರ್ಗಸ್ಯ ನರಕಸ್ಯಾಽಪಿ ಲಕ್ಷಣಂ ಮುನಿಭಾಷಿತಂ ॥ ೩೨ ॥
ವ್ಯವಸ್ಥಾನಂ ಶರೀರಸ್ಯ ಗೋಪ್ರದಾನಾನುವರ್ಣನಂ ।
ಅಶೋಕವನಿಕಾತೀರ್ಥಂ ಮತಂಗಾಶ್ರಮವರ್ಣನಂ ॥ ೩೩ ॥

---

ದೇಹಕ್ಷೇಪವಿಧಿ, ಜ್ವಾಲೇಶ್ವರತೀರ್ಥ, ಜ್ವಾಲಾಸಂಗಮ, ಶಕ್ರತೀರ್ಥ, ಕುಶಾವರ್ತ, ಹಂಸತೀರ್ಥ, ಅಂಬರೀಷತೀರ್ಥ, ಮಹಾಕಾಲೇಶ್ವರ, ಮಾತೃಕೇಶ್ವರ ತೀರ್ಥ, ಭೃಗುತುಂಗಾನುವರ್ಣನ, ಭೈರವೇಶ್ವರಮಾಹಾತ್ಮ್ಯ, ಚಪಲೇಶ್ವರ ಕೀರ್ತನ, ಚಂಡಪಾಣಿಮಾಹಾತ್ಮ್ಯ, ಕಾವೇರೀಸಂಗಮ, ಕುಬೇರೇಶ್ವರತೀರ್ಥ, ವಾರಾಹೀಸಂಗಮ, ಚಂಡವೇಗಾಸಂಗಮ, ಚಂಡೇಶ್ವರತೀರ್ಥ, ಏರಂಡೀ ಸಂಗಮ, ಏರಂಡೇಶ್ವರ, ಪಿತೃತೀರ್ಥ, ಓಂಕಾರಸಂಭವ, ಪಂಚಲಿಂಗ ಮಾಹಾತ್ಮ್ಯ, ಓಂಕಾರಮಾಹಾತ್ಮ್ಯ, ಕೋಟಿತೀರ್ಥಮಾಹಾತ್ಮ್ಯ, ಕಾಕಹ್ರದ, ಜಂಬುಕೇಶ್ವರತೀರ್ಥ, ಸಾರಸ್ವತ, ಕಪಿಲಾಸಂಗಮ, ಕಪಿಲೇಶ್ವರ, ದೈತ್ಯ ಸೂದನತೀರ್ಥ, ಚಕ್ರತೀರ್ಥ, ವಾಮನತೀರ್ಥ, ಕಪಿಲಾಸಂಗಮದಲ್ಲಿರುವ ಲಕ್ಷತೀರ್ಥ, ಮುನ್ಯುಕ್ತವಾದ ಸ್ವರ್ಗ ನರಕ ಲಕ್ಷಣಗಳು, ಶರೀರವ್ಯವಸ್ಥಾನ, ಗೋಪ್ರದಾನಾನುವರ್ಣನ, ಅಶೋಕವನಿಕಾತೀರ್ಥ, ಮತಂಗಾಶ್ರಮವರ್ಣನ,

ಅಶೋಕೇಶ್ವರತೀರ್ಥಂ ಚ ಮತಂಗೇಶ್ವರಮುತ್ತಮಂ ।
ತಥಾ ಮೃಗವನಂ ಪುಣ್ಯಂ ತತ್ರ ತೀರ್ಥಂ ಮನೋರಥಂ ॥ ೩೪ ॥
ಸಂಗಮೋಽಂಗಾರಗರ್ತಾಯಾಂ ಅಂಗಾರೇಶ್ವರಮುತ್ತಮಂ ।
ತಥಾ ಮೇಘವನಂ ತೀರ್ಥಂ ದೇವ್ಯಾ ನಾಮಾನುಕೀರ್ತನಂ ॥ ೩೫ ॥
ಸಂಗಮಶ್ಚಾಽಪಿ ಕುಬ್ಜಾಯಾಸ್ತೀರ್ಥಂ ಕುಬ್ಜೇಶ್ವರಂ ತಥಾ ।
ಬಿಲ್ವಾಮ್ರಕಂ ತಥಾ ತೀರ್ಥಂ ಪೂರ್ಣದ್ವೀಪಮತಃ ಪರಂ ॥ ೩೬ ॥
ತಥಾ ಹಿರಣ್ಯಗರ್ಭಾಯಾಃ ಸಂಗಮಃ ಪುಣ್ಯಕೀರ್ತನಃ ।
ದ್ವೀಪೇಶ್ವರಂ ನಾಮ ತೀರ್ಥಂ ಪುಣ್ಯಂ ಯಜ್ಞೇಶ್ವರಂ ತಥಾ ॥ ೩೭ ॥
ಮಾಂಡವ್ಯಾಶ್ರಮತೀರ್ಥಂ ಚ ವಿಶೋಕಾಸಂಗಮಸ್ತಥಾ ।
ವಾಗೀಶ್ವರಂ ನಾಮ ತೀರ್ಥಂ ಪುಣ್ಯೋ ವೈ ವಾಗುಸಂಗಮಃ ॥ ೩೮ ॥
ಸಹಸ್ರಾವರ್ತಕಂ ತತ್ರ ತೀರ್ಥಂ ಸೌಗಂಧಿಕಂ ತಥಾ ।
ಸಂಗಮಶ್ಚ ಸರಸ್ವತ್ಯಾ ಈಶಾನಂ ತೀರ್ಥಮುತ್ತಮಂ ॥ ೩೯ ॥
ದೇವತಾತ್ರಯತೀರ್ಥಂ ಚ ಶೂಲಖಾತಂ ತತಃ ಪರಂ ।
ಬ್ರಹ್ಮೋದಂ ಶಾಂಕರಂ ಸೌಮ್ಯಂ ಸಾರಸ್ವತಮತಃಪರಂ ॥ ೪೦ ॥
ಸಹಸ್ರಯಜ್ಞತೀರ್ಥಂ ಚ ಕಪಾಲಮೋಚನಂ ತಥಾ ।
ಆಗ್ನೇಯಮದಿತೀಶಂ ಚ ವಾರಾಹಂ ತೀರ್ಥಮುತ್ತಮಂ ॥ ೪೧ ॥
ತಥಾ ದೇವಪಥಂ ತೀರ್ಥಂ ತೀರ್ಥಂ ಯಜ್ಞಸಹಸ್ರಕಂ ।
ಶುಕ್ಲತೀರ್ಥಂ ದೀಪ್ತಿಕೇಶಂ ವಿಷ್ಣುತೀರ್ಥಂ ಚ ಯೋಧನಂ ॥ ೪೨ ॥
ನರ್ಮದೇಶ್ವರತೀರ್ಥಂ ಚ ವರುಣೇಶಂ ಚ ಮಾರುತಂ ।
ಯೋಗೇಶಂ ರೋಹಿಣೀತೀರ್ಥಂ ದಾರುತೀರ್ಥಂ ಚ ಸತ್ತಮಾಃ ॥ ೪೩ ॥

---

ಅಶೋಕೇಶ್ವರತೀರ್ಥ, ಮತಂಗೇಶ್ವರತೀರ್ಥ, ಮೃಗವನ, ಮನೋರಥತೀರ್ಥ, ಅಂಗಾರಗರ್ತಾಸಂಗಮ, ಅಂಗಾರೇಶ್ವರತೀರ್ಥ, ಮೇಘವನತೀರ್ಥ, ದೇವೀ ನಾಮಾನುಕೀರ್ತನ, ಕುಬ್ಜಾಸಂಗಮ, ಕುಬ್ಜೇಶ್ವರತೀರ್ಥ, ಬಿಲ್ವಾಮ್ರಕ ತೀರ್ಥ, ಪೂರ್ಣದ್ವೀಪತೀರ್ಥ, ಹಿರಣ್ಯಗರ್ಭಾಸಂಗಮ, ದ್ವೀಪೇಶ್ವರತೀರ್ಥ, ಯಜ್ಞೇಶ್ವರತೀರ್ಥ, ಮಾಂಡವ್ಯಾಶ್ರಮತೀರ್ಥ, ವಿಶೋಕಾಸಂಗಮ, ವಾಗೀಶ್ವರತೀರ್ಥ, ವಾಗುಸಂಗಮ, ಸಹಸ್ರಾವರ್ತಕತೀರ್ಥ, ಸೌಗಂಧಿಕತೀರ್ಥ, ಸರಸ್ವತೀಸಂಗಮ, ಈಶಾನತೀರ್ಥ, ದೇವತಾತ್ರಯತೀರ್ಥ, ಶೂಲಖಾತ, ಬ್ರಹ್ಮೋದ, ಶಾಂಕರ, ಸೌಮ್ಯ, ಸಾರಸ್ವತತೀರ್ಥಗಳು, ಸಹಸ್ರಯಜ್ಞತೀರ್ಥ, ಕಪಾಲಮೋಚನತೀರ್ಥ, ಆಗ್ನೇಯತೀರ್ಥ, ಅದಿತೀಶತೀರ್ಥ, ವಾರಾಹತೀರ್ಥ, ದೇವಪಥತೀರ್ಥ, ಯಜ್ಞಸಹಸ್ರಕ, ಶುಕ್ಲತೀರ್ಥ, ದೀಪ್ತಿಕೇಶ, ವಿಷ್ಣುತೀರ್ಥ, ಯೋಧನತೀರ್ಥ, ನರ್ಮದೇಶ್ವರತೀರ್ಥ, ವರುಣೇಶ, ಮಾರುತ, ಯೋಗೇಶ,

ಬ್ರಹ್ಮಾವರ್ತಂ ಚ ಪತ್ರೇಶಂ ವಾಹ್ನಂ ಸೌರಂ ಚ ಕೀರ್ತ್ಯತೇ ।
ಮೇಘನಾದಂ ದಾರುತೀರ್ಥಂ ದೇವತೀರ್ಥಂ ಗುಹಾಶ್ರಯಂ ॥ ೪೪ ॥
ನರ್ಮದೇಶ್ವರಸಂಜ್ಞಂ ತತ್ಕಪಿಲಾತೀರ್ಥಮುತ್ತಮಂ ।
ಕರಂಜೇಶಂ ಕುಂಡಲೇಶಂ ಪಿಪ್ಪಲಾದಮತಃ ಪರಂ ॥ ೪೫ ॥
ವಿಮಲೇಶ್ವರತೀರ್ಥಂ ಚ ಪುಷ್ಕರಿಣ್ಯಾಶ್ಚ ಸಂಗಮಃ ।
ಪ್ರಶಂಸಾ ಶೂಲಭೇದಸ್ಯ ತತ್ರೈವಾಂಧಕವಿಕ್ರಮಃ ॥ ೪೬ ॥
ದೇವಾಶ್ವಾಸನದಾನಂ ಚ ತಥೈವಾಂಧಕನಿಗ್ರಹಃ ।
ಶೂಲಭೇದಸ್ಯ ಚೋತ್ಪತ್ತಿಸ್ತಥಾ ಪಾತ್ರಪರೀಕ್ಷಣಂ ॥ ೪೭ ॥
ಪ್ರಶಂಸಾ ದಾನಧರ್ಮಸ್ಯ ಋಷಿಶೃಂಗಾನುಭಾವನಂ
ಸ್ವರ್ಗತಿಂ ದೀರ್ಘತಪಸೋ ಭಾನುಮತ್ಯಾಸ್ತಥೇಂಗಿತಂ ॥ ೪೮ ॥
ಶಬರಸ್ವರ್ಗಗಮನಂ ಮಾಹಾತ್ಮ್ಯಂ ಶೂಲಭೇದಜಂ ।
ಕಪಿಲೇಶ್ವರತೀರ್ಥಂ ಚ ಮೋಕ್ಷತೀರ್ಥಮತಃಪರಂ ॥ ೪೯ ॥
ಸಂಗಮೋ ಮೋಕ್ಷನದ್ಯಾಶ್ಚ ತೀರ್ಥಂ ಚ ವಿಮಲೇಶ್ವರಂ ।
ತಥೈವೋಲೂಕತೀರ್ಥಂ ಚ ಪುಷ್ಕರಿಣ್ಯಾಶ್ಚ ಸಂಗಮಃ ॥ ೫೦ ॥
ಆದಿತ್ಯೇಶ್ವರತೀರ್ಥಂ ಚ ತೀರ್ಥಂ ವೈ ಸಂಗಮೇಶ್ವರಂ ।
ಸಂಗಮೋ ಭೀಮಕುಲ್ಯಾಯಾಸ್ತೀರ್ಥಂ ಭೀಮೇಶ್ವರಂ ಶುಭಂ ॥ ೫೧ ॥
ಮಾರ್ಕಂಡೇಶ್ವರತೀರ್ಥಂ ಚ ತಥಾ ವೈ ಪಿಪ್ಪಲೇಶ್ವರಂ ।
ಕರೋಟೇಶ್ವರತೀರ್ಥಂ ಚ ತೀರ್ಥಮಿಂದ್ರೇಶ್ವರಂ ಶುಭಂ ॥ ೫೨ ॥
ಅಗಸ್ತ್ಯೇಶಂ ಕುಮಾರೇಶಂ ವ್ಯಾಸೇಶ್ವರಮನುತ್ತಮಂ ।
ವೈದ್ಯನಾಥಂ ಚ ಕೇದಾರಮಾನಂದೇಶ್ವರಸಂಜ್ಞಿತಂ ॥ ೫೩ ॥

---

ರೋಹಿಣೀತೀರ್ಥ, ದಾರುತೀರ್ಥ, ಬ್ರಹ್ಮಾವರ್ತ, ಪತ್ರೇಶ, ಅಹ್ನ ಸೌರತೀರ್ಥಗಳು, ಮೇಘನಾದ, ದಾರುತೀರ್ಥ, ದೇವತೀರ್ಥ, ಗುಹಾಶ್ರಯತೀರ್ಥ, ನರ್ಮದೇಶ್ವರ, ಕಪಿಲತೀರ್ಥ, ಕರಂಜೇಶ, ಕುಂಡಲೇಶ, ಪಿಪ್ಪಲಾದ, ವಿಮಲೇಶ್ವರ, ಪುಷ್ಕರಿಣೀಸಂಗಮ, ಶೂಲಭೇದಪ್ರಶಂಸಾ, ಅಂಧಕವಿಕ್ರಮ, ದೇವಾಶ್ವಾಸನದಾನ, ಅಂಧಕನಿಗ್ರಹ, ಶೂಲಭೇದೋತ್ಪತ್ತಿ, ಪಾತ್ರಪರೀಕ್ಷಣ, ದಾನಧರ್ಮಪ್ರಶಂಸಾ, ಋಷಿಶೃಂಗಾನುಭಾವನ, ದೀರ್ಘತಪಸ್ಸ್ವರ್ಗತಿ, ಭಾನುಮತಿಯ ಇಂಗಿತ, ಶಬರಸ್ವರ್ಗಗಮನ, ಶೂಲಭೇದಮಾಹಾತ್ಮ್ಯ, ಕಪಿಲೇಶ್ವರತೀರ್ಥ, ಮೋಕ್ಷತೀರ್ಥ, ಮೋಕ್ಷನದೀಸಂಗಮ, ವಿಮಲೇಶ್ವರತೀರ್ಥ, ಉಲೂಕತೀರ್ಥ, ಪುಷ್ಕರಿಣೀಸಂಗಮ, ಆದಿತ್ಯೇಶ್ವರತೀರ್ಥ, ಸಂಗಮೇಶ್ವರತೀರ್ಥ, ಭೀಮಕುಲ್ಯಾ ಸಂಗಮ, ಭೀಮೇಶ್ವರತೀರ್ಥ, ಮಾರ್ಕಂಡೇಶ್ವರತೀರ್ಥ, ಪಿಪ್ಪಲೇಶ್ವರ, ಕೋಟೀಶ್ವರತೀರ್ಥ, ಇಂದ್ರೇಶ್ವರ, ಅಗಸ್ತ್ಯೇಶ, ಕುಮಾರೇಶ, ವ್ಯಾಸೇಶ್ವರ, ವೈದ್ಯನಾಥ,

ಮಾತೃತೀರ್ಥಂ ಚ ಮುಂಡೇಶಂ ಚೌರಂ ಕಾಮೇಶ್ವರಂ ತಥಾ ।
ಸಂಗಮಶ್ಚಾನುದುಹ್ಯಾ ವೈ ತೀರ್ಥೇ ಭೀಮಾರ್ಜುನಾಹ್ವಯೇ ।
ತೀರ್ಥಂ ಧರ್ಮೇಶ್ವರಂ ನಾಮ ಲುಂಕೇಶ್ವರಮತಃ ಪರಂ ॥ ೫೪ ॥
ತತೋ ಧನದತೀರ್ಥಂ ಚ ಜಟೇಶಂ ಮಂಗಲೇಶ್ವರಂ ।
ಕಪಿಲೇಶ್ವರತೀರ್ಥಂ ಚ ಗೋಪಾರೇಶ್ವರಮುತ್ತಮಂ ॥ ೫೫ ॥
ಮಣಿನಾಗೇಶ್ವರಂ ನಾಮ ಮಣಿನದ್ಯಾಶ್ಚ ಸಂಗಮಃ ।
ತಿಲಕೇಶ್ವರತೀರ್ಥಂ ಚ ಗೌತಮೇಶಮತಃ ಪರಂ ॥ ೫೬ ॥
ತತ್ರೈವ ಮಾತೃತೀರ್ಥಂ ಚ ಮುನಿನೋಕ್ತಂ ಮುನೀಶ್ವರಾಃ ।
ಶಂಖಚೂಡಂ ಚ ಕೇದಾರಂ ಪಾರಾಶರಮತಃ ಪರಂ ॥ ೫೭ ॥
ಭೀಮೇಶ್ವರಂ ಚ ಚಂದ್ರೇಶಮಶ್ವವತ್ಯಾಶ್ಚ ಸಂಗಮಃ ।
ವಹ್ನೀಶ್ವರಂ ನಾರದೇಶಂ ವೈದ್ಯನಾಥಂ ಕಪೀಶ್ವರಂ ॥ ೫೮ ॥
ಕುಂಭೇಶ್ವರಂ ಚ ಮಾರ್ಕಂಡಂ ರಾಮೇಶಂ ಲಕ್ಷ್ಮಣೇಶ್ವರಂ ।
ಮೇಘೇಶ್ವರಂ ಮತ್ಸ್ಯಕೇಶಮಪ್ಸರಾಹ್ರದಸಂಜ್ಞಕಂ ॥ ೫೯ ॥
ದಧಿಸ್ಕಂದಂ ಮಧುಸ್ಕಂದಂ ನಂದಿಕೇಶಂ ಚ ವಾರುಣಂ ।
ಪಾವಕೇಶ್ವರತೀರ್ಥಂ ಚ ತತ್ರೈವ ಕಪಿಲೇಶ್ವರಂ ॥ ೬೦ ॥
ನಾರಾಯಣಾಹ್ವಯಂ ತೀರ್ಥಂ ಚಕ್ರತೀರ್ಥಮನುತ್ತಮಂ ।
ಚಂಡಾದಿತ್ಯಂ ಪರಂ ತೀರ್ಥಂ ಚಂಡಿಕಾತೀರ್ಥಮುತ್ತಮಂ ॥ ೬೧ ॥
ಯಮಹಾಸಾಹ್ವಯಂ ತೀರ್ಥಂ ತಥಾ ಗಂಗೇಶ್ವರಂ ಶುಭಂ ।
ನಂದಿಕೇಶ್ವರಸಂಜ್ಞಂ ಚ ನರನಾರಾಯಣಾಹ್ವಯಂ ॥ ೬೨ ॥
ನಲೇಶ್ವರಂ ಚ ಮಾರ್ಕಂಡಂ ಶುಕ್ಲತೀರ್ಥಮತಃ ಪರಂ ।
ವ್ಯಾಸೇಶ್ವರಂ ಪರಂ ತೀರ್ಥಂ ತತ್ರ ಸಿದ್ಧೇಶ್ವರಂ ತಥಾ ॥ ೬೩ ॥

---

ಕೇದಾರ, ಆನಂದೇಶ್ವರ, ಮಾತೃತೀರ್ಥ, ಮುಂಡೇಶ, ಚೌರೇಶ್ವರ, ಕಾಮೇಶ್ವರ, ಅನುಡುಹೀಸಂಗಮ, ಭೀಮಾರ್ಜುನತೀರ್ಥಗಳು, ಧರ್ಮೇಶ್ವರತೀರ್ಥ, ಲುಂಕೇಶ್ವರ, ಧನದತೀರ್ಥ, ಜಟೇಶ, ಮಂಗಲೇಶ್ವರ, ಕಪಿಲೇಶ್ವರತೀರ್ಥ, ಗೋಪಾರೇಶ್ವರ, ಮಣಿನಾಗೇಶ್ವರ, ಮಣಿನದೀಸಂಗಮ, ತಿಲಕೇಶ್ವರತೀರ್ಥ, ಗೌತಮೇಶ, ಮಾತೃತೀರ್ಥ, ಶಂಖಚೂಡ, ಕೇದಾರ, ಪಾರಾಶರ, ಭೀಮೇಶ್ವರ, ಚಂದ್ರೇಶ, ಅಶ್ವವತೀಸಂಗಮ, ವಹ್ನೀಶ್ವರ, ನಾರದೇಶ, ವೈದ್ಯನಾಥ, ಕಪೀಶ್ವರ, ಕುಂಭೇಶ್ವರ, ಮಾರ್ಕಂಡ, ರಾಮೇಶ, ಲಕ್ಷ್ಮಣೇಶ್ವರ, ಮೇಘೇಶ್ವರ, ಮತ್ಸ್ಯಕೇಶ, ಅಪ್ಸರಾಹ್ರದ, ದಧಿಸ್ಕಂದ, ಮಧುಸ್ಕಂದ, ನಂದಿಕೇಶ, ವಾರುಣ, ಪಾವಕೇಶ್ವರ, ಕಪಿಲೇಶ್ವರ, ನಾರಾಯಣತೀರ್ಥ, ಚಕ್ರತೀರ್ಥ, ಚಂಡಾದಿತ್ಯ, ಚಂಡಿಕಾತೀರ್ಥ, ಯಮತೀರ್ಥ, ಗಂಗೇಶ್ವರ, ನಂದಿಕೇಶ್ವರ, ನರನಾರಾಯಣತೀರ್ಥ, ನಲೇಶ್ವರ, ಮಾರ್ಕಂಡ, ಶುಕ್ಲತೀರ್ಥ, ವ್ಯಾಸೇಶ್ವರತೀರ್ಥ, ಸಿದ್ಧೇಶ್ವರ,

ಕೋಟಿತೀರ್ಥಂ ಪ್ರಭಾತೀರ್ಥಂ ವಾಸುಕೀಶ್ವರಮುತ್ತಮಂ ।
ಸಂಗಮಶ್ಚ ಕರಂಜಾಯಾ ಮಾರ್ಕಂಡೇಶ್ವರಮುತ್ತಮಂ ॥ ೬೪ ॥
ತೀರ್ಥಂ ಕೋಟೀಶ್ವರಂ ನಾಮ ತಥಾ ಸಂಕರ್ಷಣಾಹ್ವಯಂ ।
ಕನಕೇಶಂ ಮನ್ಮಥೇಶಂ ತೀರ್ಥಂ ಚೈವಾನಸೂಯಕಂ ॥ ೬೫ ॥
ಏರಂಡೀಸಂಗಮಃ ಪುಣ್ಯೋ ಮಾತೃತೀರ್ಥಂ ಚ ಶೋಭನಂ ।
ತೀರ್ಥಂ ಸ್ವರ್ಣಶಲಾಕಾಖ್ಯಂ ತಥಾ ಚೈವಾಂಬಿಕೇಶ್ವರಂ ॥ ೬೬ ॥
ಕರಂಜೇಶಂ ಭಾರತೇಶಂ ನಾಗೇಶಂ ಮುಕುಟೇಶ್ವರಂ ।
ಸೌಭಾಗ್ಯಸುಂದರೀತೀರ್ಥಂ ಧನದೇಶ್ವರಮುತ್ತಮಂ ॥ ೬೭ ॥
ರೋಹಿಣ್ಯಂ ಚಕ್ರತೀರ್ಥಂ ಚ ಉತ್ತರೇಶ್ವರಸಂಜ್ಞಿತಂ ।
ಭೋಗೇಶ್ವರಂ ಚ ಕೇದಾರಂ ನಿಷ್ಕಲಂಕಮತಃ ಪರಂ ॥ ೬೮ ॥
ಮಾರ್ಕಂಡಂ ಧೌತಪಾಪಂ ಚ ತೀರ್ಥಮಾಂಗಿರಸೇಶ್ವರಂ ।
ಕೋಟಿವೀಸಂಗಮಃ ಪುಣ್ಯಂ ಕೋಟಿತೀರ್ಥಂ ಚ ತತ್ರ ವೈ ॥ ೬೯ ॥
ಅಯೋನಿಜಂ ಪರಂ ತೀರ್ಥಮಂಗಾರೇಶ್ವರಮುತ್ತಮಂ ।
ಸ್ಕಾಂದಂ ಚ ನಾರ್ಮದಂ ಬ್ರಾಹ್ಮಂ ವಾಲ್ಮೀಕೇಶ್ವರಸಂಜ್ಞಿತಂ ॥ ೭೦ ॥
ಕೋಟಿತೀರ್ಥಂ ಕಪಾಲೇಶಂ ಪಾಂಡುತೀರ್ಥಂ ತ್ರಿಲೋಚನಂ ।
ಕಪಿಲೇಶಂ ಕಂಬುಕೇಶಂ ಪ್ರಭಾಸಂ ಕೋಹನೇಶ್ವರಂ ॥ ೭೧ ॥
ಇಂದ್ರೇಶಂ ವಾಲುಕೇಶಂ ಚ ದೇವೇಶಂ ಶಾಕ್ರಮೇವ ಚ ।
ನಾಗೇಶ್ವರಂ ಗೌತಮೇಶಮಹಲ್ಯಾತೀರ್ಥಮುತ್ತಮಂ ॥ ೭೨ ॥
ರಾಮೇಶ್ವರಂ ಮೋಕ್ಷತೀರ್ಥಂ ತಥಾ ಕುಶಲವೇಶ್ವರೌ ।
ನರ್ಮದೇಶಂ ಕಪರ್ದೀಶಂ ಸಾಗರೇಶಮತಃ ಪರಂ ॥ ೭೩ ॥

---

ಕೋಟಿತೀರ್ಥ, ಪ್ರಭಾತೀರ್ಥ, ವಾಸುಕೀಶ್ವರ, ಕರಂಜಾಸಂಗಮ, ಮಾರ್ಕಂಡೇಶ್ವರ, ಕೋಟೀಶ್ವರತೀರ್ಥ, ಸಂಕರ್ಷಣತೀರ್ಥ, ಕನಕೇಶ, ಮನ್ಮಥೇಶತೀರ್ಥ, ಅನಸೂಯಕತೀರ್ಥ, ಏರಂಡೀಸಂಗಮ, ಮಾತೃತೀರ್ಥ, ಸ್ವರ್ಣಶಲಾಕಾತೀರ್ಥ, ಅಂಬಿಕೇಶ್ವರ, ಕರಂಜೇಶ, ಭಾರತೇಶ, ನಾಗೇಶ, ಮುಕುಟೇಶ್ವರ, ಸೌಭಾಗ್ಯಸುಂದರೀತೀರ್ಥ, ಧನದೇಶ್ವರ, ರೋಹಿಣ್ಯ, ಚಕ್ರತೀರ್ಥ, ಉತ್ತರೇಶ್ವರ, ಭೋಗೇಶ್ವರ, ಕೇದಾರ, ನಿಷ್ಕಲಂಕ, ಮಾರ್ಕಂಡ, ಧೌತಪಾಪ, ಆಂಗಿರಸೇಶ್ವರತೀರ್ಥ, ಕೋಟಿವೀಸಂಗಮ, ಕೋಟಿತೀರ್ಥ, ಅಯೋನಿಜತೀರ್ಥ, ಅಂಗಾರೇಶ್ವರ, ಸ್ಕಾಂದ, ನಾರ್ಮದ, ಬ್ರಾಹ್ಮ, ವಲ್ಮೀಕೇಶ್ವರ, ಕೋಟಿತೀರ್ಥ, ಕಪಾಲೇಶ, ಪಾಂಡುತೀರ್ಥ, ತ್ರಿಲೋಚನ, ಕಪಿಲೇಶ, ಕಂಬುಕೇಶ, ಪ್ರಭಾಸ, ಕೋಹನೇಶ್ವರ, ಇಂದ್ರೇಶ, ವಾಲುಕೇಶ, ದೇವೇಶ, ಶಾಕ್ರತೀರ್ಥ, ನಾಗೇಶ್ವರ, ಗೌತಮೇಶ, ಅಹಲ್ಯಾತೀರ್ಥ, ರಾಮೇಶ್ವರ, ಮೋಕ್ಷತೀರ್ಥ, ಕುಶಲವೇಶ್ವರ

ಧೌರಾದಿತ್ಯಂ ಪರಂ ತೀರ್ಥಂ ತೀರ್ಥಂ ಚಾಪರಯೋನಿಜಂ ।
ಪಿಂಗಲೇಶ್ವರತೀರ್ಥಂ ಚ ಭೃಗ್ವೀಶ್ವರಮನುತ್ತಮಂ ॥ ೭೪ ॥
ದಶಾಶ್ವಮೇಧಿಕಂ ತೀರ್ಥಂ ಕೋಟಿತೀರ್ಥಂ ಚ ಸತ್ತಮಾಃ ।
ಮಾರ್ಕಂಡಂ ಬ್ರಹ್ಮತೀರ್ಥಂ ಚ ಆದಿವಾರಾಹಮುತ್ತಮಂ ॥ ೭೫ ॥
ಆಶಾಪೂರಾಭಿಧಂ ತೀರ್ಥಂ ಕೌಬೇರಂ ಮಾರುತಂ ತಥಾ ।
ವರುಣೇಶಂ ಯಮೇಶಂ ಚ ರಾಮೇಶಂ ಕರ್ಕಟೇಶ್ವರಂ ॥ ೭೬ ॥
ಶಕ್ರೇಶಂ ಸೋಮತೀರ್ಥಂ ಚ ನಂದಾಹ್ರದಮನುತ್ತಮಂ ।
ವೈಷ್ಣವಂ ಚಕ್ರತೀರ್ಥಂ ಚ ರಾಮಕೇಶವಸಂಜ್ಞಿತಂ ॥ ೭೭ ॥
ತಥೈವ ರುಕ್ಮಿಣೀತೀರ್ಥಂ ಶಿವತೀರ್ಥಮನುತ್ತಮಂ ।
ಜಯವಾರಾಹತೀರ್ಥಂ ಚ ತೀರ್ಥಮಸ್ಮಾಹಕಾಹ್ವಯಂ ॥ ೭೮ ॥
ಅಂಗಾರೇಶಂ ಚ ಸಿದ್ಧೇಶಂ ತಾಪೇಶ್ವರಮತಃ ಪರಂ ।
ಪುನಃ ಸಿದ್ಧೇಶ್ವರಂ ನಾಮ ತೀರ್ಥಂ ಚ ವರುಣೇಶ್ವರಂ ॥ ೭೯ ॥
ಪರಾಶರೇಶ್ವರಂ ಪುಣ್ಯಂ ಕುಸುಮೇಶಮನುತ್ತಮಂ ।
ಕುಂಡಲೇಶ್ವರತೀರ್ಥಂ ಚ ತಥಾ ಕಲಕಲೇಶ್ವರಂ ॥ ೮೦ ॥
ನ್ಯಂಕುವಾರಾಹಸಂಜ್ಞಂ ಚ ಅಂಕೋಲಂ ತೀರ್ಥಮುತ್ತಮಂ ।
ಶ್ವೇತವಾರಾಹತೀರ್ಥಂ ಚ ಭಾರ್ಗಲಂ ಸೌರಮುತ್ತಮಂ ॥ ೮೧ ॥
ಹುಂಕಾರಸ್ವಾಮಿತೀರ್ಥಂ ಚ ಶುಕ್ಲತೀರ್ಥಂ ಚ ಶೋಭನಂ ।
ಸಂಗಮೋ ಮಧುಮತ್ಯಾಶ್ಚ ತೀರ್ಥಂ ವೈ ಸಂಗಮೇಶ್ವರಂ ॥ ೮೨ ॥
ನರ್ಮದೇಶ್ವರಸಂಜ್ಞಂ ಚ ನದೀತ್ರಿತಯಸಂಗಮಃ ।
ಅನೇಕೇಶ್ವರತೀರ್ಥಂ ಚ ಶರ್ಭೇಶಂ ಮೋಕ್ಷಸಂಜ್ಞಿತಂ ॥ ೮೩ ॥

---

ತೀರ್ಥ, ನರ್ಮದೇಶ, ಕಪರ್ದೀಶ, ಸಾಗರೇಶ, ಧೌರಾದಿತ್ಯತೀರ್ಥ, ಅಪರ ಯೋನಿಜತೀರ್ಥ, ಪಿಂಗಲೇಶ್ವರತೀರ್ಥ, ಭೃಗ್ವೀಶ್ವರ, ದಶಾಶ್ವಮೇಧಿಕತೀರ್ಥ, ಕೋಟಿತೀರ್ಥ, ಮಾರ್ಕಂಡ, ಬ್ರಹ್ಮತೀರ್ಥ, ಆದಿವಾರಾಹತೀರ್ಥ, ಆಶಾಪೂರ ತೀರ್ಥ, ಕೌಬೇರ, ಮಾರುತ, ವರುಣೇಶ, ಯಮೇಶ, ರಾಮೇಶ, ಕರ್ಕಟೇಶ್ವರ, ಶಕ್ರೇಶ, ಸೋಮತೀರ್ಥ, ನಂದಾಹ್ರದ, ವೈಷ್ಣವ, ಚಕ್ರತೀರ್ಥ, ರಾಮಕೇಶವ ತೀರ್ಥ, ರುಕ್ಮಿಣೀತೀರ್ಥ, ಶಿವತೀರ್ಥ, ಜಯವಾರಾಹತೀರ್ಥ, ಅಸ್ಮಾಹಕ ತೀರ್ಥ, ಅಂಗಾರೇಶ, ಸಿದ್ಧೇಶ, ತಾಪೇಶ್ವರ, ಸಿದ್ಧೇಶ್ವರ, ವರುಣೇಶ್ವರ, ಪರಾಶರೇಶ್ವರ, ಕುಸುಮೇಶ, ಕುಂಡಲೇಶ್ವರತೀರ್ಥ, ಕಲಕಲೇಶ್ವರ, ನ್ಯಂಕು ವಾರಾಹತೀರ್ಥ, ಅಂಕೋಲ, ಶ್ವೇತವಾರಾಹತೀರ್ಥ, ಭಾರ್ಗಲ, ಸೌರ, ಹುಂಕಾರಸ್ವಾಮಿತೀರ್ಥ, ಶುಕ್ಲತೀರ್ಥ, ಮಧುಮತೀಸಂಗಮ, ಸಂಗಮೇಶ್ವರ, ನರ್ಮದೇಶ್ವರ, ನದೀತ್ರಿತಯಸಂಗಮ, ಅನೇಕೇಶ್ವರತೀರ್ಥ, ಶರ್ಭೇಶ, ಮೋಕ್ಷ

ಕಾವೇರೀಸಂಗಮಃ ಪುಣ್ಯಸ್ತೀರ್ಥಂ ಗೋಪೇಶ್ವರಾಹ್ವಯಂ ।
ಮಾರ್ಕಂಡೇಶಂ ಚ ನಾಗೇಶಮುದಂಬರ್ಯಾಶ್ಚ ಸಂಗಮಃ ॥ ೮೪ ॥
ಸಾಂಬಾದಿತ್ಯಾಹ್ವಯಂ ತೀರ್ಥಮುದಂಬರ್ಯಾಶ್ಚ ಸಂಗಮಃ ।
ಸಿದ್ಧೇಶ್ವರಂ ಚ ಮಾರ್ಕಂಡಂ ತಥಾ ಸಿದ್ಧೇಶ್ವರೀಕೃತಂ ॥ ೮೫ ॥
ಗೋಪೇಶಂ ಕಪಿಲೇಶಂ ಚ ವೈದ್ಯನಾಥಮನುತ್ತಮಂ ।
ಪಿಂಗಲೇಶ್ವರತೀರ್ಥಂ ಚ ಸೈಂಧವಾಯತನಂ ಮಹತ್ ॥ ೮೬ ॥
ಭೂತೀಶ್ವರಾಹ್ವಯಂ ತೀರ್ಥಂ ಗಂಗಾವಾಹಮತಃ ಪರಂ ।
ಗೌತಮೇಶ್ವರತೀರ್ಥಂ ಚ ದಶಾಶ್ವಮೇಧಿಕಂ ತಥಾ ॥ ೮೭ ॥
ಭೃಗುತೀರ್ಥಂ ತಥಾ ಪುಣ್ಯಂ ಖ್ಯಾತಾ ಸೌಭಾಗ್ಯಸುಂದರೀ ।
ವೃಷಖಾತಂ ಚ ತತ್ರೈವ ಕೇದಾರಂ ಧೂತಪಾತಕಂ ॥ ೮೮ ॥
ತೀರ್ಥಂ ಧೂತೇಶ್ವರೀಸಂಗಮೇರಂಡೀಸಂಜ್ಞಕಂ ತಥಾ ।
ತೀರ್ಥಂ ಚ ಕನಕೇಶ್ವರ್ಯಾ ಜ್ವಾಲೇಶ್ವರಂ ತತಃ ಪರಂ ॥ ೮೯ ॥
ಶಾಲಗ್ರಾಮಾಹ್ವಯಂ ತೀರ್ಥಂ ಸೋಮನಾಥಮನುತ್ತಮಂ ।
ತತ್ರೈವೋದೀರ್ಣವಾರಾಹಂ ತೀರ್ಥಂ ಚಂದ್ರಪ್ರಭಾಸಕಂ ॥ ೯೦ ॥
ದ್ವಾದಶಾದಿತ್ಯತೀರ್ಥಂ ಚ ತಥಾ ಸಿದ್ಧೇಶ್ವರಾಭಿಧಂ ।
ಕಪಿಲೇಶ್ವರತೀರ್ಥಂ ಚ ತಥಾತ್ರೈವಿಕ್ರಮಂ ಶುಭಂ ॥ ೯೧ ॥
ವಿಶ್ವರೂಪಾಹ್ವಯಂ ತೀರ್ಥಂ ನಾರಾಯಣಕೃತಂ ತಥಾ ।
ಮೂಲಶ್ರೀಪತಿತೀರ್ಥಂ ಚ ಚೌಲಶ್ರೀಪತಿಸಂಜ್ಞಕಂ ॥ ೯೨ ॥
ದೇವತೀರ್ಥಂ ಹಂಸತೀರ್ಥಂ ಪ್ರಭಾಸಂ ತೀರ್ಥಮುತ್ತಮಂ ।
ಮೂಲಸ್ಥಾನಂ ಚ ಕಂಠೇಶಮಟ್ಟಹಾಸಮತಃ ಪರಂ ॥ ೯೩ ॥

---

ತೀರ್ಥ, ಕಾವೇರಿಸಂಗಮ, ಗೋಪೇಶ್ವರತೀರ್ಥ, ಮಾರ್ಕಂಡೇಶ, ನಾಗೇಶ, ಉದಂಬರೀಸಂಗಮ, ಸಾಂಬಾದಿತ್ಯ, ಉದಂಬರೀಸಂಗಮ, ಸಿದ್ಧೇಶ್ವರ, ಮಾರ್ಕಂಡ, ಗೋಪೇಶ, ಕಪಿಲೇಶ, ವೈದ್ಯನಾಥ, ಪಿಂಗಲೇಶ್ವರ, ಸೈಂಧವಾಯತನ, ಭೂತೀಶ್ವರತೀರ್ಥ, ಗಂಗಾವಾಹತೀರ್ಥ, ಗೌತಮೇಶ್ವರತೀರ್ಥ, ದಶಾಶ್ವಮೇಧಿಕ, ಭೃಗುತೀರ್ಥ, ಸೌಭಾಗ್ಯಸುಂದರೀ, ವೃಷಖಾತ, ಧೂತಪಾತಕ, ಧೂತೇಶ್ವರೀಸಂಗಮ, ಏರಂಡೀತೀರ್ಥ, ಕನಕೇಶ್ವರೀ, ಜ್ವಾಲೇಶ್ವರ, ಶಾಲಗ್ರಾಮತೀರ್ಥ, ಸೋಮನಾಥ, ಉದೀರ್ಣವಾರಾಹ, ಚಂದ್ರಪ್ರಭಾಸಕ, ದ್ವಾದಶಾದಿತ್ಯತೀರ್ಥ, ಸಿದ್ಧೇಶ್ವರತೀರ್ಥ, ಕಪಿಲೇಶ್ವರತೀರ್ಥ, ತ್ರೈವಿಕ್ರಮತೀರ್ಥ, ನಾರಾಯಣ ರಚಿತವಾದ ವಿಶ್ವರೂಪತೀರ್ಥ, ಮೂಲಶ್ರೀಪತಿತೀರ್ಥ, ಚೌಲಶ್ರೀಪತಿತೀರ್ಥ, ದೇವತೀರ್ಥ, ಹಂಸತೀರ್ಥ, ಪ್ರಭಾಸ, ಮೂಲಸ್ಥಾನ, ಕಂಠೇಶ, ಅಟ್ಟಹಾಸ, ಭೂರ್ಭುವೇಶ್ವರತೀರ್ಥ, ಶೂಲೇಶ್ವರೀ, ಸಾರಸ್ವತ, ದಾರುಕೇಶ,

ಭೂರ್ಭುವನೇಶ್ವರತೀರ್ಥಂ ಚ ಖ್ಯಾತಾ ಶೂಲೇಶ್ವರೀ ತಥಾ ।
ಸಾರಸ್ವತಂ ದಾರುಕೇಶಮಶ್ವಿನೋಸ್ತೀರ್ಥಮುತ್ತಮಂ ॥ ೯೪ ॥
ಸಾವಿತ್ರೀತೀರ್ಥಮತುಲಂ ವಾಲಖಿಲ್ಯೇಶ್ವರಂ ತಥಾ ।
ನರ್ಮದೇಶಂ ಮಾತೃತೀರ್ಥಂ ದೇವತೀರ್ಥಮನುತ್ತಮಂ ॥ ೯೫ ॥
ಮಚ್ಛಕೇಶ್ವರತೀರ್ಥಂ ಚ ಶಿಖಿತೀರ್ಥಂ ಚ ಶೋಭನಂ ।
ಕೋಟಿತೀರ್ಥಂ ಮುನಿಶ್ರೇಷ್ಠಾಸ್ತತ್ರ ಕೋಟೀಶ್ವರೀ ನೃಪ ॥ ೯೬ ॥
ತೀರ್ಥಂ ಪೈತಾಮಹಂ ನಾಮ ಮಾಂಡವ್ಯೇಶ್ವರಸಂಜ್ಞಿತಂ ।
ತತ್ರ ನಾರಾಯಣೇಶಂ ಚ ಅಕ್ರೂರೇಶಮತಃ ಪರಂ ॥ ೯೭ ॥
ದೇವಖಾತಂ ಸಿದ್ಧರುದ್ರಂ ವೈದ್ಯನಾಥಮನುತ್ತಮಂ ।
ತತ್ರೈವ ಮಾತೃತೀರ್ಥಂ ಚ ಉತ್ತರೇಶಮತಃ ಪರಂ ॥ ೯೮ ॥
ತತ್ರೈವ ನರ್ಮದೇಶಂ ಚ ಮಾತೃತೀರ್ಥಂ ತಥಾ ಪುನಃ ।
ತಥಾ ಚ ಕುರರೀತೀರ್ಥಂ ಢೌಂಢೇಶಂ ದಶಕನ್ಯಕಂ ॥ ೯೯ ॥
ಸುವರ್ಣಬಿಂದುತೀರ್ಥಂ ಚ ಋಣಪಾಪಪ್ರಮೋಚನಂ ।
ಭಾರಭೂತೇಶ್ವರಂ ತೀರ್ಥಂ ತಥಾ ಮುಂಡೀಶ್ವರಂ ವಿದುಃ ॥ ೧೦೦ ॥
ಏಕಶಾಲಂ ಡಿಂಡಿಪಾಣಿಂ ತೀರ್ಥಂ ಚಾಪ್ಸರಸಂ ಪರಂ ।
ಮುನ್ಯಾಲಯಂ ಚ ಮಾರ್ಕಂಡಂ ಗಣಿತಾದೇವತಾಹ್ವಯಂ ॥ ೧೦೧ ॥
ಆಮಲೇಶ್ವರತೀರ್ಥಂ ಚ ತೀರ್ಥಂ ಕನ್ಯೇಶ್ವರಂ ತಥಾ ।
ಆಷಾಢೀತೀರ್ಥಮಿತ್ಯಾಹುಃ ಶೃಂಗಿತೀರ್ಥಂ ತತ್ರೈವ ಚ ॥ ೧೦೨ ॥
ಬಕೇಶ್ವರತೀರ್ಥಂ ಚ ಕಪಾಲೇಶಂ ತತ್ರೈವ ಚ ।
ಮಾರ್ಕಂಡಂ ಕಪಿಲೇಶಂ ಚ ಏರಂಡೀಸಂಗಮಸ್ತಥಾ ॥ ೧೦೩ ॥
ಏರಂಡೀದೇವತಾತೀರ್ಥಂ ರಾಮತೀರ್ಥಮತಃ ಪರಂ ।
ಜಮದಗ್ನೇಃ ಪರಂ ತೀರ್ಥಂ ರೇವಾಸಾಗರಸಂಗಮಃ ॥ ೧೦೪ ॥

---

ಅಶ್ವಿನತೀರ್ಥ, ಸಾವಿತ್ರೀತೀರ್ಥ, ವಾಲಖಿಲ್ಯೇಶ್ವರ, ನರ್ಮದೇಶ, ಮಾತೃತೀರ್ಥ, ದೇವತೀರ್ಥ, ಮಚ್ಛಕೇಶ್ವರತೀರ್ಥ, ಶಿಖಿತೀರ್ಥ, ಕೋಟಿತೀರ್ಥ, ಕೋಟೀಶ್ವರೀ, ಪಿತಾಮಹನ ಸಂಬಂಧಿಯಾದ ಮಾಂಡವೇಶ್ವರತೀರ್ಥ, ನಾರಾಯಣೇಶ, ಅಕ್ರೂರೇಶ, ದೇವಖಾತ, ಸಿದ್ಧರುದ್ರ, ವೈದ್ಯನಾಥ, ಮಾತೃತೀರ್ಥ, ಕುರರೀ ತೀರ್ಥ, ಢೌಂಡೇಶ, ದಶಕನ್ಯಕ, ಸುವರ್ಣಬಿಂದು, ಋಣಪಾಪಪ್ರಮೋಚನ ತೀರ್ಥ, ಭಾರಭೂತೇಶ್ವರ, ಮುಂಡೀಶ್ವರ, ಏಕಶಾಲ, ಡಿಂಡಿಪಾಣಿ, ಅಪ್ಸರ ಸ್ತೀರ್ಥ, ಮುನ್ಯಾಲಯ, ಮಾರ್ಕಂಡ, ಗಣಿತಾದೇವತಾ, ಆಮಲೇಶ್ವರ, ಕಂಥೇಶ್ವರ, ಆಷಾಢೀತೀರ್ಥ, ಶೃಂಗೀತೀರ್ಥ, ಬಕೇಶ್ವರತೀರ್ಥ, ಕಪಾಲೇಶ, ಮಾರ್ಕಂಡ, ಕಪಿಲೇಶ, ಏರಂಡೀಸಂಗಮ, ಏರಂಡೀದೇವತಾತೀರ್ಥ, ರಾಮ

ಲೋಟಿನೇಶ್ವರತೀರ್ಥಂ ತಲ್ಲುಂಕೇಶನಾಮಕಂ ತಥಾ ।
ವೃಷಖಾತಂ ತತ್ರಕುಂಡಂ ತಥೈವ ಋಷಿಸತ್ತಮಾಃ ॥ ೧೦೫ ॥
ತಥಾ ಹಂಸೇಶ್ವರಂ ನಾಮ ತಿಲಾದಂ ವಾಸವೇಶ್ವರಂ ।
ತಥಾ ಕೋಟೀಶ್ವರಂ ತೀರ್ಥಮಲಿಕಾತೀರ್ಥಮುತ್ತಮಂ ।
ವಿಮಲೇಶ್ವರತೀರ್ಥಂ ಚ ರೇವಾಸಾಗರಸಂಗಮೇ ॥ ೧೦೬ ॥
ಏವಂ ತೀರ್ಥಾವಲಿಃ ಪುಣ್ಯಾ ಮಯಾ ಪ್ರೋಕ್ತಾ ಮಹರ್ಷಯಃ ।
ತೀರ್ಥಮುಕ್ತಾವಲಿಃ ಪುಣ್ಯಾ ಗ್ರಥಿತಾ ತಟರಜ್ಜುನಾ ॥ ೧೦೭ ॥
ನರ್ಮದಾನೀರನಿರ್ಣಿಕ್ತಾ ಮಾರ್ಕಂಡೇಯಮುನಿನಿರ್ಮಿತಾ ।
ಮಂಡನಾಯೇಹ ಸಾಧೂನಾಂ ಸರ್ವಲೋಕಹಿತಾಯ ಚ ॥ ೧೦೮ ॥
ದುರಿತಧ್ವಾಂತಶಮನೀ ಧಾರ್ಯಾ ಧರ್ಮಾರ್ಥಿಭಿಃ ಸದಾ ।
ಅಹೋರಾತ್ರಕೃತಂ ಪಾಪಂ ಸಕೃಜ್ಜಪ್ತ್ವಾತು ನಾಶಯೇತ್ ॥ ೧೦೯ ॥
ತ್ರಿಕಾಲಂ ಜಪ್ತ್ವಾ ಮಾಸೋತ್ಥಂ ಶಿವಾಗ್ರೇ ಚ ತ್ರಿಮಾಸಿಕಂ ।
ಮಾಸಂ ಜಪ್ತ್ವಾಽಥ ವರ್ಷೋತ್ಥಂ ವರ್ಷಂ ಜಪ್ತ್ವಾ ಶತಾಬ್ದಿಕಂ ॥೧೧೦॥
ಶ್ರಾದ್ಧಕಾಲೇ ಚ ವಿಪ್ರಾಣಾಂ ಭುಂಜತಾಂ ಪುರತಃ ಸ್ಥಿತಃ ।
ಪಠಂಸ್ತೀರ್ಥಾವಲಿಂ ಪುಣ್ಯಾಂ ಗಯಾಶ್ರಾದ್ಧಪ್ರದೋ ಭವೇತ್ ॥ ೧೧೧ ॥

---

ತೀರ್ಥ, ಜಮದಗ್ನಿತೀರ್ಥ, ರೇವಾಸಾಗರಸಂಗಮ, ಲೋಟಣೇಶ್ವರತೀರ್ಥ, ಲುಂಕೇಶ, ವೃಷಖಾತಕುಂಡ, ಹಂಸೇಶ್ವರ, ತಿಲಾದ, ವಾಸವೇಶ್ವರ, ಕೋಟೀಶ್ವರ, ಅಲಿಕಾತೀರ್ಥ, ವಿಮಲೇಶ್ವರತೀರ್ಥ, ಇವುಗಳಿರುವುವು.

೧೦೭–೧೦೯. ಮಹರ್ಷಿಗಳೆ! ನಾನು ಹೀಗೆ ಪುಣ್ಯಕರವಾದ ತೀರ್ಥಸಮೂಹವನ್ನು ಹೇಳಿದ್ದೇನೆ. ಮಾರ್ಕಂಡೇಯಮುನಿಯು ಸಾಧುಗಳ ಅಲಂಕಾರಕ್ಕಾಗಿಯೂ, ಸಮಸ್ತ ಲೋಕಹಿತಕ್ಕಾಗಿಯೂ ನರ್ಮದಾತಟವೆಂಬ ದಾರದಿಂದ ರಚಿಸಿ ನರ್ಮದಾನೀರಿನಲ್ಲಿ ತೋಯಿಸಿದ ಈ ತೀರ್ಥಾವಲಿಯನ್ನು ನಿರ್ಮಿಸಿರುತ್ತಾನೆ. ಪಾಪಾಂಧಕಾರವನ್ನು ಪರಿಹರಿಸುವ ಈ ತೀರ್ಥಾವಳಿಯು ಧರ್ಮಾರ್ಥಿಗಳಿಗೆ ಧರಿಸಲರ್ಹವಾದುದು. ಇದನ್ನು ಒಂದುಸಾರಿ ಜಪಿಸುವುದರಿಂದ ಒಂದು ದಿನ ಮಾಡಿದ ಪಾಪವು ಪರಿಹಾರವಾಗುವುದು.

೧೧೦. ಶಿವನ ಮುಂದೆ ಇದನ್ನು ತ್ರಿಕಾಲ ಜಪಿಸುವುದರಿಂದ ಒಂದು ತಿಂಗಳ ಪಾಪವೂ, ಒಂದು ತಿಂಗಳು ಜಪಿಸುವುದರಿಂದ ಒಂದು ವರ್ಷದ ಪಾಪವೂ, ಒಂದುವರ್ಷ ಜಪಿಸುವುದರಿಂದ ನೂರು ವರ್ಷಗಳ ಪಾಪವೂ ಪರಿಹಾರವಾಗುವುದು.

೧೧೧. ಶ್ರಾದ್ಧಕಾಲದಲ್ಲಿ ಬ್ರಾಹ್ಮಣರು ಭೋಜನಮಾಡುತ್ತಿರುವಾಗ ಅವರ ಮುಂದೆ ಈ ಪುಣ್ಯಕರವಾದ ತೀರ್ಥಾವಲಿಯನ್ನು ಪಠಿಸಿದರೆ ಗಯಾಶ್ರಾದ್ಧದ ಫಲವುಂಟಾಗುವುದು.

ಪೂಜಾಕಾಲೇ ಚ ದೇವಾನಾಂ ಶ್ರದ್ಧಯಾ ಪುರತಃ ಪಠನ್ ।
ಪ್ರೀಣಯೇತ್ಸರ್ವದೇವಾಂಶ್ಚ ಪುನಾತಿ ಸಕಲಂ ಕುಲಂ ॥ ೧೧೨ ॥
ಏವಂ ತೀರ್ಥಾವಲಿಃ ಪುಣ್ಯಾ ರೇವಾತೀರದ್ವಯಾಶ್ರಿತಾ ।
ಮಯಾ ಪ್ರೋಕ್ತಾ ಮುನಿಶ್ರೇಷ್ಠಾಸ್ತಥೈವ ಶೃಣುತಾಽನಘಾಃ ॥ ೧೧೩ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ
ಪಂಚಮೇ ಆವಂತ್ಯಖಂಡೇ ತೃತೀಯೇ ರೇವಾಖಂಡೇ
"ತೀರ್ಥಾವಲಿಕಥನಂ" ನಾಮ ತ್ರಿಂಶದಧಿಕದ್ವಿಶತತಮೋಽಧ್ಯಾಯಃ

---

೧೧೨. ಪೂಜೆಯ ಕಾಲದಲ್ಲಿ ದೇವತೆಗಳ ಮುಂದೆ ಶ್ರದ್ಧೆಯಿಂದ ಇದನ್ನು ಪಠಿಸಿದರೆ ಸಮಸ್ತ ದೇವತೆಗಳು ಸಂತೋಷಗೊಳ್ಳುವರು. ಸಮಸ್ತ ಕುಲಗಳೂ ಪವಿತ್ರವಾಗುವುವು.

೧೧೩. ಮುನಿವರ್ಯರೆ! ನಾನು ಹೀಗೆ ನರ್ಮದಾನದಿಯ ಎರಡು ದಡಗಳಲ್ಲಿರುವ ಪವಿತ್ರವಾದ ತೀರ್ಥಾವಲಿಯನ್ನು ಹೇಳಿದ್ದೇನೆ. ಅದನ್ನು ಹಾಗೆಯೇ ಕೇಳಿರಿ.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ
ಶ್ರೀ ಸ್ಕಾಂದಮಹಾಪುರಾಣದ ಐದನೆಯ ಆವಂತ್ಯಖಂಡದ ಮೂರನೆಯ ರೇವಾಖಂಡದಲ್ಲಿ
"ತೀರ್ಥಾವಲಿಕಥನ"ವೆಂಬ
ಇನ್ನೂರಮೂವತ್ತನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

# ಅಷ್ಟೈಕತ್ರಿಂಶದಧಿಕದ್ವಿಶತತಮೋಽಧ್ಯಾಯಃ

## ತೀರ್ಥಸಂಖ್ಯಾಪರಿಗಣನವರ್ಣನಂ

ಶ್ರೀ ಸೂತ ಉವಾಚ :—

ತಥೈವ ತೀರ್ಥಸ್ತಬಕಾನ್ ವಕ್ಷ್ಯೇಽಹಮೃಷಿಸತ್ತಮಾಃ ।
ಯೈಸ್ತು ತೀರ್ಥಾವಲೀಗುಂಫಃ ಪೂರ್ವೋಕ್ತೈರೇಕತಃ ಕೃತಃ ॥ ೧ ॥
ವಿಭಕ್ತೋ ಭಕ್ತಲೋಕಾನಾಮಾನಂದಪ್ರಥನಃ ಶುಭಃ ।
ಮೃಕಂಡುತನಯಃ ಪೂರ್ವಂ ಪ್ರಾಹ ಪಾರ್ಥಾಯ ಪೃಚ್ಛತೇ ॥ ೨ ॥
ಯಥಾ ತಥಾಽಹಂ ವಕ್ಷ್ಯಾಮಿ ತೀರ್ಥಾನಾಂ ಸ್ತಬಕಾನಿಹ ।
ಶಿವಾಂಬುಪಾನಜಾ ಪುಣ್ಯಾ ರೇವಾ ಕಲ್ಪಲತಾ ಕಿಲ ॥ ೩ ॥
ತೀರದ್ವಯೋದ್ಭೂತತೀರ್ಥಪ್ರಸೂನೈಃ ಪುಷ್ಪಿತಾ ಶುಭಾ ।
ಯತ್ಪುಣ್ಯಗಂಧಲಕ್ಷ್ಮ್ಯಾ ವೈ ತ್ರೈಲೋಕ್ಯಂ ಸುರಭೀಕೃತಂ ॥ ೪ ॥
ತತ್ಪುಷ್ಪಮಕರಂದಸ್ಯ ರಸಾಸ್ವಾದವಿದುತ್ತಮಃ ।
ಭ್ರಮರಃ ಖಲು ಮಾರ್ಕಂಡೋ ಮುನಿರ್ಮತಿಮತಾಂ ವರಃ ॥ ೫ ॥

---

## ಕನ್ನಡದ ಅನುವಾದ

### ತೀರ್ಥಸಂಖ್ಯಾಪರಿಗಣನವರ್ಣನ

೧. ಶ್ರೀ ಸೂತನು ಹೇಳುತ್ತಾನೆ:—ಮುನಿವರ್ಯರೆ! ಹಾಗೆಯೇ ಹಿಂದೆ ಹೇಳಿದ ತೀರ್ಥಗಳನ್ನು ಸೇರಿಸಿ ರಚಿಸಿದ ತೀರ್ಥಸ್ತಬಕಗಳನ್ನು ಹೇಳುವೆನು.

೨. ಭಕ್ತರಿಗಾಗಿ ವಿಭಾಗಿಸಿದ ಆನಂದವನ್ನುಂಟುಮಾಡುವ ಈ ತೀರ್ಥ ಸ್ತಬಕವನ್ನು ಹಿಂದೆ ಮಾರ್ಕಂಡೇಯನು ಪ್ರಶ್ನೆಮಾಡಿದ ಯುಧಿಷ್ಠಿರನಿಗೆ ಹೇಳಿರುವನು.

೩–೪. ಹಾಗೆಯೇ ಈ ತೀರ್ಥಸ್ತಬಕಗಳನ್ನು ನಿಮಗೆ ಹೇಳುವೆನು. ಶಿವ ನೆಂಬ ಅಂಬುಪಾನದಿಂದ ಹುಟ್ಟಿದ ನರ್ಮದೆಯೆಂಬ ಕಲ್ಪವೃಕ್ಷವು ಎರಡು ದಡಗಳಲ್ಲಿರುವ ತೀರ್ಥಗಳೆಂಬ ಹೂವುಗಳಿಂದ ಸಹಿತವಾಗಿ ಪುಣ್ಯವೆಂಬ ಗಂಧ ಸಮೃದ್ಧಿಯಿಂದ ಮೂರು ಲೋಕಗಳನ್ನು ಸುವಾಸನೆಗೊಳಿಸಿತು.

೫. ಆ ಪುಷ್ಪದ ಮಕರಂದದ ರಸಾಸ್ವಾದಮಾಡುವುದರಲ್ಲಿ ನಿಪುಣನಾದ ಜ್ಞಾನಿಯಾದ ಮಾರ್ಕಂಡೇಯಮುನಿಯು ಭ್ರಮರದಂತಿರುವನು.

ತತ್ಪುಷ್ಪಮಾಲಾಂ ಹೃದಯೇ ತೀರ್ಥಸ್ತಬಕಚಿತ್ರಿತಾಂ ।
ದಧಾತಿ ಸತತಂ ಪುಣ್ಯಾಂ ಮುನಿರ್ಭೃಗುಕುಲೋದ್ವಹಃ ।
ತಸ್ಯಾಃ ಸ್ತಬಕಸಂಸ್ಥಾನಂ ವಕ್ಷ್ಯೇಽಹಮೃಷಿಸತ್ತಮಾಃ ॥ ೬ ॥
ಓಂಕಾರತೀರ್ಥಮಾರಭ್ಯ ಯಾವತ್ಪಶ್ಚಿಮಸಾಗರಂ ।
ಸಂಗಮಾಃ ಪಂಚತ್ರಿಂಶದ್ವೈ ನದೀನಾಂ ಪಾಪನಾಶನಾಃ ॥ ೭ ॥
ದಶೈಕಮುತ್ತರೇ ತೀರೇ ಸ ತ್ರಿವಿಂಶತಿ ದಕ್ಷಿಣೇ ।
ಪಂಚತ್ರಿಂಶತ್ತಮಃ ಶ್ರೇಷ್ಠೋ ರೇವಾಸಾಗರಸಂಗಮಃ ॥ ೮ ॥
ಸಂಗಮೈಃ ಸಹಿತಾನ್ಯೇವಂ ರೇವಾತೀರದ್ವಯೇಽಪಿ ಚ ।
ಚತುಃಶತಾನಿ ತೀರ್ಥಾನಿ ಪ್ರಸಿದ್ಧಾನಿ ದ್ವಿಜೋತ್ತಮಾಃ ॥ ೯ ॥
ತ್ರಿಶತಂ ಶಿವತೀರ್ಥಾನಿ ತ್ರಯಸ್ತ್ರಿಂಶತ್ಸಮನ್ವಿತಂ ।
ತತ್ರಾಪಿ ವ್ಯಕ್ತಿಶೋ ವಕ್ಷ್ಯೇ ಶೃಣುಧ್ವಂ ತಾನಿ ಸತ್ತಮಾಃ ॥ ೧೦ ॥
ಮಾರ್ಕಂಡೇಶ್ವರತೀರ್ಥಾನಿ ದಶ ತೇಷು ಮುನೀಶ್ವರಾಃ ।
ದಶಾದಿತ್ಯಭವಾನ್ಯತ್ರ ನವೈವ ಕಪಿಲೇಶ್ವರಾಃ ॥ ೧೧ ॥
ಸೋಮಸಂಸ್ಥಾಪಿತಾನ್ಯಷ್ಟೌ ತಾವಂತೋ ನರ್ಮದೇಶ್ವರಾಃ ।
ಕೋಟಿತೀರ್ಥಾನ್ಯಥಾಷ್ಟೌ ಚ ಸಪ್ತ ಸಿದ್ಧೇಶ್ವರಾಸ್ತಥಾ ॥ ೧೨ ॥
ನಾಗೇಶ್ವರಾಶ್ಚ ಸಪ್ತೈವ ರೇವಾತೀರದ್ವಯೇಽಪಿ ತು ।
ಸಪ್ತೈವ ವಹ್ನಿವಿಹಿತಾನ್ಯಥಾಸ್ಯಾವರ್ತಸಪ್ತಕಂ ॥ ೧೩ ॥

---

೬. ಭೃಗುವಂಶಜಾತನಾದ ಮಾರ್ಕಂಡೇಯಮುನಿಯು ತೀರ್ಥಗಳೆಂಬ ಸ್ತಬಕದಿಂದ ಚಿತ್ರಿತವಾದ ಆ ಪುಷ್ಪಮಾಲೆಯನ್ನು ಎದೆಯಲ್ಲಿ ಧರಿಸುವನು. ಅದರ ಸ್ತಬಕಗಳನ್ನು ನಾನು ಹೇಳುವೆನು.

೭. ಓಂಕಾರತೀರ್ಥವನ್ನಾರಂಭಿಸಿ ಪಶ್ಚಿಮ ಸಮುದ್ರದವರೆಗೆ ಪಾಪವನ್ನು ಪರಿಹರಿಸುವ ಮೂವತ್ತೈದು ನದಿಗಳ ಸಂಗಮಗಳಿರುವುವು.

೮–೧೦. ಆ ನರ್ಮದೆಯ ಉತ್ತರದಡದಲ್ಲಿ ಹನ್ನೊಂದು ತೀರ್ಥಗಳು, ದಕ್ಷಿಣದಡದಲ್ಲಿ ಇಪ್ಪತ್ತಮೂರ ತೀರ್ಥಗಳು, ಮೂವತ್ತೈದು ಸಂಗಮಗಳು, ಮುನ್ನೂರಮೂವತ್ತಮೂರು ಶಿವತೀರ್ಥಗಳು ಹೀಗೆ ನಾನೂರು ತೀರ್ಥಗಳು ಪ್ರಸಿದ್ಧವಾಗಿವೆ.

೧೧–೨೫. ಮುನಿವರ್ಯರೆ! ಅವುಗಳಲ್ಲಿ ಹತ್ತು ಮಾರ್ಕಂಡೇಶ್ವರತೀರ್ಥಗಳು, ಹತ್ತು ಆದಿತ್ಯತೀರ್ಥಗಳು, ಒಂಬತ್ತು ಕಪಿಲೇಶ್ವರತೀರ್ಥಗಳು, ಎಂಟು ಸೋಮತೀರ್ಥಗಳು, ಎಂಟು ನರ್ಮದೇಶ್ವರತೀರ್ಥಗಳು, ಎಂಟು ಕೋಟಿತೀರ್ಥಗಳು, ಏಳು ಸಿದ್ಧೇಶ್ವರತೀರ್ಥಗಳು, ಏಳು ನಾಗೇಶ್ವರತೀರ್ಥಗಳು, ಏಳು ಅಗ್ನಿತೀರ್ಥಗಳು, ಏಳು ಆವರ್ತಗಳು, ಐದು ಕೇದಾರೇಶ್ವರತೀರ್ಥಗಳು, ಐದು

ಕೇದಾರೇಶ್ವರತೀರ್ಥಾನಿ ಪಂಚ ಪಂಚೇಂದ್ರಜಾನಿ ಚ ।
ವರುಣೇಶಾಶ್ಚ ಪಂಚೈವ ಪಂಚೈವ ಧನದೇಶ್ವರಾಃ ॥ ೧೪ ॥
ದೇವತೀರ್ಥಾನಿ ಪಂಚೈವ ಚತ್ವಾರೋ ವೈ ಯಮೇಶ್ವರಾಃ ।
ವೈದ್ಯನಾಥಾಶ್ಚ ಚತ್ವಾರಶ್ಚತ್ವಾರೋ ವಾನರೇಶ್ವರಾಃ ॥ ೧೫ ॥
ಅಂಗಾರೇಶ್ವರತೀರ್ಥಾನಿ ತಾವಂತ್ಯೇವ ಮುನೀಶ್ವರಾಃ ।
ಸಾರಸ್ವತಾನಿ ಚತ್ವಾರಿ ಚತ್ವಾರೋ ದಾರುಕೇಶ್ವರಾಃ ॥ ೧೬ ॥
ಗೌತಮೇಶ್ವರತೀರ್ಥಾನಿ ತ್ರೀಣಿ ರಾಮೇಶ್ವರಾಸ್ತ್ರಯಃ ।
ಕಪಾಲೇಶ್ವರತೀರ್ಥಾನಿ ತ್ರೀಣಿ ಹಂಸಕೃತಾನಿ ಚ ॥ ೧೭ ॥
ತ್ರೀಣ್ಯೇವ ಮೋಕ್ಷತೀರ್ಥಾನಿ ತ್ರಯೋ ವೈ ವಿಮಲೇಶ್ವರಾಃ ।
ಸಹಸ್ರಯಜ್ಞತೀರ್ಥಾನಿ ತ್ರೀಣ್ಯೇವ ಮುನಿರಬ್ರವೀತ್ ॥ ೧೮ ॥
ಭೀಮೇಶ್ವರಾಸ್ತ್ರಯಃ ಖ್ಯಾತಾಃ ಸ್ವರ್ಣತೀರ್ಥಾನಿ ತ್ರೀಣಿ ಚ ।
ಧೌತಪಾಪದ್ವಯಂ ಪ್ರೋಕ್ತಂ ಕರಂಜೇಶದ್ವಯಂ ತಥಾ ॥ ೧೯ ॥
ಋಣಮೋಚನತೀರ್ಥಂ ದ್ವೇ ತಥಾ ಸ್ಕಂದೇಶ್ವರದ್ವಯಂ ।
ದಶಾಶ್ವಮೇಧತೀರ್ಥೇ ದ್ವೇ ನಂದಿತೀರ್ಥದ್ವಯಂ ದ್ವಿಜಾಃ ॥ ೨೦ ॥
ಮನ್ಮಥೇಶದ್ವಯಂ ಚೈವ ಭೃಗುತೀರ್ಥದ್ವಯಂ ತಥಾ ।
ಪರಾಶರೇಶ್ವರೌ ದ್ವೌ ಚ ಅಯೋನೀಸಂಭವದ್ವಯಂ ॥ ೨೧ ॥
ವ್ಯಾಸೇಶ್ವರದ್ವಯಂ ಪ್ರೋಕ್ತಂ ಪಿತೃತೀರ್ಥದ್ವಯಂ ತಥಾ ।
ನಂದಿಕೇಶ್ವರತೀರ್ಥೇ ದ್ವೇ ದ್ವೌ ಚ ಗೋಪೇಶ್ವರೌ ಸ್ಮೃತೌ ॥ ೨೨ ॥

---

ಇಂದ್ರತೀರ್ಥಗಳು, ಐದು ವರುಣೇಶ್ವರತೀರ್ಥಗಳು, ಐದು ಧನದೇಶ್ವರತೀರ್ಥಗಳು, ಐದು ದೇವತೀರ್ಥಗಳು, ನಾಲ್ಕು ಯಮೇಶ್ವರತೀರ್ಥಗಳು, ನಾಲ್ಕು ವೈದ್ಯೇಶ್ವರತೀರ್ಥಗಳು, ನಾಲ್ಕು ವಾನರೇಶ್ವರತೀರ್ಥಗಳು, ನಾಲ್ಕು ಅಂಗಾರೇಶ್ವರ ತೀರ್ಥಗಳು, ನಾಲ್ಕು ಸಾರಸ್ವತತೀರ್ಥಗಳು, ನಾಲ್ಕು ದಾರುಕೇಶ್ವರತೀರ್ಥಗಳು, ಮೂರು ಗೌತಮೇಶ್ವರತೀರ್ಥಗಳು, ಮೂರು ರಾಮೇಶ್ವರತೀರ್ಥಗಳು, ಮೂರು ಹಂಸಕೃತವಾದ ಕಪಾಲೇಶ್ವರತೀರ್ಥಗಳು, ಮೂರು ಮೋಕ್ಷತೀರ್ಥಗಳು, ಮೂರು ವಿಮಲೇಶ್ವರತೀರ್ಥಗಳು, ಮೂರು ಸಹಸ್ರಯಜ್ಞತೀರ್ಥಗಳು, ಮೂರು ಭೀಮೇಶ್ವರತೀರ್ಥಗಳು, ಮೂರು ಸ್ವರ್ಣತೀರ್ಥಗಳು, ಎರಡು ಧೌತಪಾಪ ತೀರ್ಥಗಳು, ಎರಡು ಕರಂಜೇಶತೀರ್ಥಗಳು, ಎರಡು ಋಣಮೋಚನತೀರ್ಥಗಳು, ಎರಡು ಸ್ಕಂದೇಶ್ವರತೀರ್ಥಗಳು, ಎರಡು ದಶಾಶ್ವಮೇಧತೀರ್ಥಗಳು, ಎರಡು ನಂದಿತೀರ್ಥಗಳು, ಎರಡು ಮನ್ಮಥೇಶತೀರ್ಥಗಳು, ಎರಡು ಭೃಗುತೀರ್ಥಗಳು, ಎರಡು ಪರಾಶರೇಶ್ವರತೀರ್ಥಗಳು, ಎರಡು ಆಯೋನಿಜತೀರ್ಥಗಳು,

ಮಾರುತೇಶದ್ವಯಂ ತದ್ವದ್ದ್ವೌ ಚ ಜ್ವಾಲೇಶ್ವರೌ ಸ್ಮೃತೌ ।
ಶುಕ್ಲತೀರ್ಥದ್ವಯಂ ಪುಣ್ಯಮಪ್ಸರೇಶದ್ವಯಂ ತಥಾ ॥ ೨೩ ॥
ಪಿಪ್ಪಲೇಶ್ವರತೀರ್ಥೇ ದ್ವೇ ಮಾಂಡವ್ಯೇಶ್ವರಸಂಜ್ಞಿತೇ ।
ದ್ವೀಪೇಶ್ವರದ್ವಯಂ ಚೈವ ಪ್ರಾಹ ತದ್ವದ್ಭೃಗೂದ್ವಹಃ ।
ಉತ್ತರೇಶ್ವರತೀರ್ಥೇ ದ್ವೇ ಅಶೋಕೇಶದ್ವಯಿಾ ತಥಾ ॥ ೨೪ ॥
ದ್ವೇ ಯೋಧನಪುರೇ ಚೈವ ರೋಹಿಣೀತೀರ್ಥಕದ್ವಯಂ ।
ಲುಂಕೇಶ್ವರದ್ವಯಂ ಖ್ಯಾತಮಾಖ್ಯಾನಂ ಮುನಿನಾ ತಥಾ ॥ ೨೫ ॥
ಸೈಕೋನವಿಂಶತಿಶತಂ ತೀರ್ಥಾನ್ಯೇಕೈಕಶೋ ದ್ವಿಜಾಃ ।
ಸ್ತಬಕೇಷು ಕೃತಂ ತೀರ್ಥಂ ದ್ವಿಶತಂ ಸ ಚತುರ್ದಶಂ ॥ ೨೬ ॥
ಶೈವಾನ್ಯೇತಾನಿ ತೀರ್ಥಾನಿ ವೈಷ್ಣವಾನಿ ಚ ಸತ್ತಮಾಃ ।
ಶೃಣುಧ್ವಂ ಪ್ರೋಚ್ಯಮಾನಾನಿ ಬ್ರಾಹ್ಮಶಕ್ತಾನಿ ಚ ಕ್ರಮಾತ್ ॥ ೨೭ ॥
ಅಷ್ಟಾವಿಂಶತಿ ತೀರ್ಥಾನಿ ವೈಷ್ಣವಾನ್ಯಬ್ರವೀನ್ಮುನಿಃ ।
ತೇಷು ವಾರಾಹತೀರ್ಥಾನಿ ಷಡೇವ ಮುನಿಸತ್ತಮಾಃ ॥ ೨೮ ॥
ಚತ್ವಾರಿ ಚಕ್ರತೀರ್ಥಾನಿ ಶೇಷಾಣ್ಯಷ್ಟಾದಶೈವ ಹಿ ।
ವಿಷ್ಣುನಾಧಿಷ್ಠಿತಾನ್ಯೇವ ಪ್ರಾಹ ಪೂರ್ವಂ ಮೃಕಂಡಜಃ ॥ ೨೯ ॥

---

ಎರಡು ವ್ಯಾಸೇಶ್ವರತೀರ್ಥಗಳು, ಎರಡು ಪಿತೃತೀರ್ಥಗಳು, ಎರಡು ನಂದಿಕೇಶ್ವರ ತೀರ್ಥಗಳು, ಎರಡು ಗೋಪೇಶ್ವರತೀರ್ಥಗಳು, ಎರಡು ಮಾರುತೇಶತೀರ್ಥಗಳು, ಎರಡು ಜ್ವಾಲೇಶ್ವರತೀರ್ಥಗಳು, ಎರಡು ಶುಕ್ಲತೀರ್ಥಗಳು, ಎರಡು ಅಪ್ಸರ ಸ್ತೀರ್ಥಗಳು, ಎರಡು ಪಿಪ್ಪಲೇಶ್ವರತೀರ್ಥಗಳು, ಎರಡು ಮಾಂಡವ್ಯೇಶ್ವರ ತೀರ್ಥಗಳು, ಎರಡು ದ್ವೀಪೇಶ್ವರತೀರ್ಥಗಳು, ಎರಡು ಉತ್ತರೇಶ್ವರತೀರ್ಥಗಳು, ಎರಡು ಅಶೋಕೇಶತೀರ್ಥಗಳು, ಎರಡು ಯೋಧನಪುರಗಳು, ಎರಡು ರೋಹಿಣೀ ತೀರ್ಥಗಳು, ಎರಡು ಲುಂಕೇಶ್ವರತೀರ್ಥಗಳು ಆಗಿರುವುವು.

೨೬–೨೭. ನೂರಹತ್ತೊಂಬತ್ತು ಮತ್ತು ಇನ್ನೂರಹದಿನಾಲ್ಕು ತೀರ್ಥ ಗಳನ್ನು ಸೇರಿಸಿ ಶೈವತೀರ್ಥಗುಚ್ಛಗಳಾಗಿರುವುವು. ಇನ್ನು ಕ್ರಮವಾಗಿ ಹೇಳುವ ವೈಷ್ಣವ, ಬ್ರಾಹ್ಮ, ಶಾಕ್ತತೀರ್ಥಗಳನ್ನು ಕೇಳಿರಿ.

೨೮–೨೯. ಇಪ್ಪತ್ತೆಂಟು ವೈಷ್ಣವತೀರ್ಥಗಳಲ್ಲಿ ಆರು ವಾರಾಹತೀರ್ಥ ಗಳೂ, ನಾಲ್ಕು ಚಕ್ರತೀರ್ಥಗಳೂ ಆಗಿರುವುವು. ಉಳಿದ ಹದಿನೆಂಟು ತೀರ್ಥ ಗಳಲ್ಲಿ ಸಾಕ್ಷಾದ್ವಿಷ್ಣುವೇ ನೆಲೆಸಿರುವನು ಎಂದು ಹಿಂದೆ ಮಾರ್ಕಂಡೇಯನು ಹೇಳಿರುತ್ತಾನೆ.

ತಥೈವ ಬ್ರಹ್ಮಣಾ ಸಿದ್ಧ್ಯೈ ಸಪ್ತ ತೀರ್ಥಾನ್ಯವೀವದತ್ ।
ತ್ರಿಷು ಚ ಬ್ರಹ್ಮಣಃ ಪೂಜಾ ಬ್ರಹ್ಮೇಶಾಶ್ಚತುರೋಽಪರೇ ।
ಅಷ್ಟಾವಿಂಶನ್ಮಯಾ ಖ್ಯಾತಾ ಯಥಾಸಂಖ್ಯಂ ಯಥಾಕ್ರಮಂ ॥ ೩೦ ॥
ಏತತ್ಪವಿತ್ರಮತುಲಂ ಹ್ಯೇತತ್ಪಾಪಹರಂ ಪರಂ ।
ನರ್ಮದಾಚರಿತಂ ಪುಣ್ಯಂ ಮಾಹಾತ್ಮ್ಯಂ ಮುನಿಭಾಷಿತಂ ॥ ೩೧ ॥

ಸೂತ ಉವಾಚ:—

ಏವಮುದ್ದೇಶತಃ ಪ್ರೋಕ್ತೋ ರೇವಾತೀರ್ಥಕ್ರಮೋ ಮಯಾ ।
ಯಥಾ ಪಾರ್ಥಾಯ ಸಂಕ್ಷೇಪಾನ್ಮಾರ್ಕಂಡೋ ಮುನಿರಬ್ರವೀತ್ ॥ ೩೨ ॥
ಅವಾಂತರಾಣಿ ತೀರ್ಥಾನಿ ತೇಷು ಗುಪ್ತಾನ್ಯನೇಕಶಃ ।
ಯತ್ರ ಯಾವತ್ಪ್ರಮಾಣಾನಿ ತಾನ್ಯಾಕರ್ಣಯತಾನಘಾಃ ॥ ೩೩ ॥
ಓಂಕಾರತೀರ್ಥಪರಿತಃ ಪರ್ವತಾದಮರಂಕಟಾತ್ ।
ಕ್ರೋಶದ್ವಯೇ ಸರ್ವದಿಕ್ಷು ಸಾರ್ಧಕೋಟಿತ್ರಯೀ ಮತಾ ॥ ೩೪ ॥
ತೀರ್ಥಾನಾಂ ಸಂಖ್ಯಯಾ ಗುಪ್ತ ಪ್ರಕಟಾನಾಂ ದ್ವಿಜೋತ್ತಮಾಃ ।
ಕೋಟಿರೇಕಾತು ತೀರ್ಥಾನಾಂ ಕಪಿಲಾಸಂಗಮೇ ಪೃಥಕ್ ॥ ೩೫ ॥

---

೩೦. ಹಾಗೆಯೇ ಸಿದ್ಧಿಯನ್ನೀಯುವ ಏಳು ಬ್ರಹ್ಮತೀರ್ಥಗಳಿರುವುವು. ಅವುಗಳಲ್ಲಿ ಮೂರು ತೀರ್ಥಗಳಲ್ಲಿ ಬ್ರಹ್ಮನಿಗೆ ಪೂಜೆಯು ನಡೆಯುವುದು. ಉಳಿದ ನಾಲ್ಕು ತೀರ್ಥಗಳು ಬ್ರಹ್ಮೇಶತೀರ್ಥಗಳು. ಹೀಗೆ ಕ್ರಮವಾಗಿ ಇಪ್ಪತ್ತೆಂಟು ತೀರ್ಥಗಳನ್ನು ಹೇಳಿದ್ದೇನೆ.

೩೧. ಮುನಿಯು ಹೇಳಿರುವ ಈ ನರ್ಮದಾಚರಿತ್ರೆಯು ಪವಿತ್ರವೂ, ಪಾಪ ನಾಶಕವೂ ಆಗಿರುವುದು.

೩೨. ಸೂತನು ಹೇಳುತ್ತಾನೆ:—ಮಾರ್ಕಂಡಮುನಿಯು ಯುಧಿಷ್ಠಿರನಿಗೆ ಸಂಕ್ಷೇಪವಾಗಿ ಹೇಳಿರುವಂತೆ ಈ ರೇವಾತೀರ್ಥಕ್ರಮವನ್ನು ಸಂಕ್ಷೇಪವಾಗಿ ಹೇಳಿದ್ದೇನೆ.

೩೩. ಪರಿಶುದ್ಧರಾದ ಮುನಿಗಳೆ! ಅವುಗಳಲ್ಲಿ ಅನೇಕ ಅವಾಂತರತೀರ್ಥ ಗಳು ಅಡಗಿರುವುವು. ಎಲ್ಲಿ ಎಷ್ಟು ತೀರ್ಥಗಳು ಅಡಗಿರುವುವು ಎಂಬುದನ್ನು ಕೇಳಿರಿ.

೩೪. ಓಂಕಾರತೀರ್ಥದ ಸುತ್ತಲೂ ಅಮರಕಂಟಕದಿಂದ ನಾಲ್ಕು ಮೈಲಿ ದೂರದಲ್ಲಿ ಎಲ್ಲ ದಿಕ್ಕುಗಳಲ್ಲಿಯೂ ಮೂರೂವರೆಕೋಟಿ ತೀರ್ಥಗಳಿರುವುವು.

೩೫. ಕಪಿಲಾಸಂಗಮದಲ್ಲಿ ಒಂದುಕೋಟಿ ತೀರ್ಥಗಳು ಗುಪ್ತವಾಗಿರು ವುವು.

ಅಶೋಕವನಿಕಾಯಾಶ್ಚ ತೀರ್ಥಂ ಲಕ್ಷಂ ಪ್ರತಿಷ್ಠಿತಂ ।
ಶತಮಂಗಾರಗರ್ತಾಯಾಃ ಸಂಗಮೇ ಮುನಿಸತ್ತಮಾಃ ॥ ೩೬ ॥
ತೀರ್ಥಾನಾಮಯುತಂ ತದ್ವತ್ಕುಬ್ಜಾಯಾಃ ಸಂಗಮೇ ಸ್ಥಿತಂ ।
ಶತಂ ಹಿರಣ್ಯಗರ್ಭಾಯಾಃ ಸಂಗಮೇ ಸಮವಸ್ಥಿತಂ ॥ ೩೭ ॥
ತೀರ್ಥಾನಾಮಷ್ಟಷಷ್ಟಿಶ್ಚ ವಿಶೋಕಾಸಂಗಮೇ ಸ್ಥಿತಾ ।
ತಥಾ ಸಹಸ್ರಂ ತೀರ್ಥಾನಾಂ ಸಂಸ್ಥಿತಂ ವಾಗುಸಂಗಮೇ ॥ ೩೮ ॥
ಶತಂ ಸರಸ್ವತೀಸಂಗೇ ಶುಕ್ಲತೀರ್ಥೇ ಶತದ್ವಯಂ ।
ಸಹಸ್ರಂ ವಿಷ್ಣುತೀರ್ಥೇಷು ಮಾಹಿಷ್ಮತ್ಯಾಮಥಾಽಯುತಂ ॥ ೩೯ ॥
ಶೂಲಭೇದೇ ಚ ತೀರ್ಥಾನಾಂ ಸಾಗ್ರಂ ಲಕ್ಷಂ ಸ್ಥಿತಂ ದ್ವಿಜಾಃ ।
ದೇವಗ್ರಾಮೇ ಸಹಸ್ರಂ ಚ ತೀರ್ಥಾನಾಂ ಮುನಿರಬ್ರವೀತ್ ॥ ೪೦ ॥
ಲುಂಕೇಶ್ವರೇ ಚ ತೀರ್ಥಾನಾಂ ಸಾಗ್ರಾ ಸಪ್ತಶತೀ ಸ್ಥಿತಾ ।
ತೀರ್ಥಾನ್ಯಷ್ಟೋತ್ತರಶತಂ ಮಣಿನದ್ಯಾಶ್ಚ ಸಂಗಮೇ ।
ವೈದ್ಯನಾಥೇ ಚ ತೀರ್ಥಾನಾಂ ಶತಮಷ್ಟಾಧಿಕಂ ವಿದುಃ ॥ ೪೧ ॥
ಏವಂ ತಾವತ್ಪ್ರಮಾಣಾನಿ ತೀರ್ಥೇ ಕುಂಭೇಶ್ವರೇ ದ್ವಿಜಾಃ ।
ಸಾಗ್ರಂ ಲಕ್ಷಂ ಚ ತೀರ್ಥಾನಾಂ ಸ್ಥಿತಂ ರೇವೋರಿಸಂಗಮೇ ॥ ೪೨ ॥
ತತಶ್ಚಾಪ್ಯಧಿಕಾನಿ ಸ್ಯುರಿತಿ ಮಾರ್ಕಂಡಭಾಷಿತಂ ।
ಅಷ್ಟಾಽಶೀತಿ ಸಹಸ್ರಾಣಿ ವ್ಯಾಸದ್ವೀಪಾಶ್ರಿತಾನಿ ಚ ॥ ೪೩ ॥
ಸಂಗಮೇ ಚ ಕರಂಜಾಯಾಃ ಸ್ಥಿತಮಷ್ಟೋತ್ತರಾಽಯುತಂ ।
ಏರಂಡೀಸಂಗಮೇ ತದ್ವತ್ತೀರ್ಥಾನ್ಯಷ್ಟಾಧಿಕಂಶತಂ ॥ ೪೪ ॥
ಧೂತಪಾಪೇ ಚ ತೀರ್ಥಾನಾಂ ಷಷ್ಟಿರಷ್ಟಾಽಧಿಕಾ ಸ್ಥಿತಾ ।
ಸ್ಕಂದತೀರ್ಥೇ ಶತಂ ಪುಣ್ಯಂ ತೀರ್ಥಾನಾಂ ಮುನಿರುಕ್ತವಾನ್ ॥ ೪೫ ॥

---

೩೬–೪೮. ಅಶೋಕವನಿಕಾತೀರ್ಥದಲ್ಲಿ ಲಕ್ಷತೀರ್ಥಗಳೂ, ಅಂಗಾರಗರ್ತಾಸಂಗಮದಲ್ಲಿ ನೂರು ತೀರ್ಥಗಳೂ, ಕುಬ್ಜಾಸಂಗಮದಲ್ಲಿ ಅಯುತತೀರ್ಥಗಳೂ, ಹಿರಣ್ಯಗರ್ಭಾಸಂಗಮದಲ್ಲಿ ನೂರು ತೀರ್ಥಗಳೂ, ವಿಶೋಕಾಸಂಗಮದಲ್ಲಿ ಅರುವತ್ತೆಂಟು ತೀರ್ಥಗಳೂ, ವಾಗುಸಂಗಮದಲ್ಲಿ ಸಾವಿರ ತೀರ್ಥಗಳೂ, ಸರಸ್ವತೀಸಂಗಮದಲ್ಲಿ ನೂರು ತೀರ್ಥಗಳೂ, ಶುಕ್ಲತೀರ್ಥದಲ್ಲಿ ಇನ್ನೂರು ತೀರ್ಥಗಳೂ, ವಿಷ್ಣುತೀರ್ಥಗಳಲ್ಲಿ ಸಾವಿರ ತೀರ್ಥಗಳೂ, ಮಾಹಿಷ್ಮತಿಯಲ್ಲಿ ಅಯುತತೀರ್ಥಗಳೂ, ಶೂಲಭೇದದಲ್ಲಿ ಲಕ್ಷತೀರ್ಥಗಳೂ, ದೇವಗ್ರಾಮದಲ್ಲಿ ಸಾವಿರ ತೀರ್ಥಗಳೂ, ಲುಂಕೇಶ್ವರದಲ್ಲಿ ಏಳನೂರು ತೀರ್ಥಗಳೂ, ಮಣಿನದೀಸಂಗಮದಲ್ಲಿ ನೂರೆಂಟು ತೀರ್ಥಗಳೂ, ವೈದ್ಯನಾಥದಲ್ಲಿ ನೂರೆಂಟು ತೀರ್ಥಗಳೂ, ಧೂತಪಾಪದಲ್ಲಿ ಅರುವತ್ತೆಂಟು ತೀರ್ಥಗಳೂ, ಸ್ಕಂದತೀರ್ಥದಲ್ಲಿ ನೂರು

ಕೋಹನೇಶೇ ಚ ತೀರ್ಥಾನಾಂ ಷಷ್ಟಿರಷ್ಟಾಧಿಕಾ ಸ್ಥಿತಾ ।
ಸಾರ್ಧಕೋಟೇ ಚ ತೀರ್ಥಾನಾಂ ಸ್ಥಿತಾ ವೈ ಕೋರಿಲಾಪುರೇ ॥ ೪೬ ॥
ರಾಮಕೇಶವತೀರ್ಥೇಚ ಸಹಸ್ರಂ ಸಾಗ್ರಮುಕ್ತವಾನ್ ।
ಅಸ್ಮಾಹಕೇ ಸಹಸ್ರಂಚ ತೀರ್ಥಾನಿ ನಿವಸಂತಿ ಹಿ ॥ ೪೭ ॥
ಲಕ್ಷಾಷ್ಟಕಂ ಸಹಸ್ರೇದ್ವೇ ಶುಕ್ಲತೀರ್ಥೇ ದ್ವಿಜೋತ್ತಮಾಃ ।
ತೀರ್ಥಾನಿ ಕಥಯಾಮಾಸ ಪುರಾ ಪಾರ್ಥಾಯ ಭಾರ್ಗವಃ ॥ ೪೮ ॥
ಶತಮಷ್ಟಾಧಿಕಂ ಪ್ರಾಹ ಪ್ರತ್ಯೇಕಂ ಸಂಗಮೇಷುಚ ।
ನದೀನಾಮವಶಿಷ್ಟಾನಾಂ ಕಾವೇರೀಸಂಗಮಂ ವಿನಾ ॥ ೪೯ ॥
ಕಾವೇರ್ಯಾಃ ಸಂಗಮೇ ವಿಪ್ರಾಃ ಸ್ಥಿತಾ ಪಂಚಶತೀ ತಥಾ ।
ತೀರ್ಥಾನಾಂ ಪರ್ವಸು ತಥಾ ವಿಶೇಷೋ ಮುನಿನೋದಿತಃ ॥ ೫೦ ॥
ಮೋಕ್ಷತೀರ್ಥಂಹಿ ಸತ್ಪ್ರಾಹುಃ ಪುರಾಣಪುರುಷಾಶ್ರಿತಂ ।
ಭೃಗೋಃ ಕ್ಷೇತ್ರೇ ಚ ತೀರ್ಥಾನಾಂ ಕೋಟಿರೇಕಾ ಸಮಾಶ್ರಿತಾ ॥ ೫೧ ॥
ಸಾಧಿಕಾನಾಮೃಷಿಶ್ರೇಷ್ಠಾ ವಕ್ತುಂ ಶಕ್ತೋ ಹಿ ಕೋ ಭವೇತ್ ।
ಸರ್ವಾಮರಾಶ್ರಯಂ ಪ್ರೋಕ್ತಂ ಸರ್ವತೀರ್ಥಾಶ್ರಯಂ ತಥಾ ॥ ೫೨ ॥
ತ್ರಿಷು ಲೋಕೇಷು ವಿಖ್ಯಾತಂ ಪೂಜಿತಂ ಸಿದ್ಧಿಸಾಧನಂ ।
ಭಾರಭೂತ್ಯಾಂಚ ತೀರ್ಥಾನಾಂ ಸ್ಥಿತಮಷ್ಟೋತ್ತರಂ ಶತಂ ॥ ೫೩ ॥

---

ತೀರ್ಥಗಳೂ, ಕೋಹನೇಶದಲ್ಲಿ ಅರುವತ್ತೆಂಟು ತೀರ್ಥಗಳೂ, ಕೋರಿಲಾಪುರದಲ್ಲಿ ಒಂದುವರೆ ಕೋಟಿ ತೀರ್ಥಗಳೂ, ರಾಮಕೇಶವತೀರ್ಥದಲ್ಲಿ ಸಾವಿರ ತೀರ್ಥಗಳೂ, ಅಸ್ಮಾಹಕದಲ್ಲಿ ಸಾವಿರ ತೀರ್ಥಗಳೂ, ಶುಕ್ಲತೀರ್ಥದಲ್ಲಿ ಎಂಟುಲಕ್ಷ ಎರಡು ಸಾವಿರ ತೀರ್ಥಗಳೂ ಇರುವುವು; ಎಂದು ಹಿಂದೆ ಮಾರ್ಕಂಡೇಯನು ಯುಧಿಷ್ಠಿರನಿಗೆ ಹೇಳಿದ್ದಾನೆ.

೪೯. ಕಾವೇರೀಸಂಗಮವನ್ನು ಬಿಟ್ಟು ಉಳಿದ ನದಿಗಳ ಸಂಗಮದಲ್ಲಿ ಪ್ರತ್ಯೇಕವಾಗಿ ನೂರೆಂಟು ತೀರ್ಥಗಳಿರುವುವು ಎಂದು ಹೇಳಿದ್ದಾರೆ.

೫೦. ವಿಪ್ರರೆ! ಕಾವೇರೀಸಂಗಮದಲ್ಲಿ ಐನೂರು ತೀರ್ಥಗಳಿವೆ. ಮುನಿಯು ಇವುಗಳೆಲ್ಲಾ ಪರ್ವಕಾಲಗಳಲ್ಲಿ ವಿಶೇಷವನ್ನು ಹೇಳಿರುತ್ತಾನೆ.

೫೧–೫೩. ಪುರಾಣಪುರುಷಾಶ್ರಿತವಾದ ತೀರ್ಥವನ್ನು ಮೋಕ್ಷತೀರ್ಥವೆನ್ನುವರು. ಭೃಗುಕ್ಷೇತ್ರದಲ್ಲಿ ಒಂದುಕೋಟಿ ತೀರ್ಥಗಳಿರುವುವು. ಋಷಿವರ್ಯರಿರ! ಇದನ್ನು ಹೇಳಲು ಯಾವನು ಶಕ್ತನಾದಾನು. ಇದು ಸಕಲದೇವತೆಗಳಿಗೂ, ಸಮಸ್ತ ತೀರ್ಥಗಳಿಗೂ ಆಶ್ರಯವೂ, ತ್ರಿಭುವನದಲ್ಲಿ ವಿಖ್ಯಾತವೂ, ಸಿದ್ಧಿಸಾಧನವೂ ಆಗಿರುವುದು. ಭಾರಭೂತಿಯಲ್ಲಿ ನೂರೆಂಟು ತೀರ್ಥಗಳಿರುವುವು.

ಅಕ್ರೂರೇಶ್ವರತೀರ್ಥೇ ಚ ಸಾರ್ಧಂ ತೀರ್ಥಶತಂ ಸ್ಥಿತಂ ।
ವಿಮಲೇಶ್ವರತೀರ್ಥೇತು ರೇವಾಸಾಗರಸಂಗಮೇ ।
ದಶಾಯುತಾನಿ ತೀರ್ಥಾನಾಂ ಸಾಧಿಕಾನ್ಯಬ್ರವೀನ್ಮುನಿಃ ॥ ೫೪ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ
ಪಂಚಮೇ ಆವಂತ್ಯಖಂಡೇ ತೃತೀಯೇ ರೇವಾಖಂಡೇ
"ತೀರ್ಥಸಂಖ್ಯಾಪರಿಗಣನವರ್ಣನಂ"
ನಾಮ್ನೈಕತ್ರಿಂಶದಧಿಕದ್ವಿಶತತಮೋಽಧ್ಯಾಯಃ

---

೫೪. ಅಕ್ರೂರೇಶ್ವರತೀರ್ಥದಲ್ಲಿ ನೂರೈವತ್ತು ತೀರ್ಥಗಳೂ, ರೇವಾಸಾಗರ ಸಂಗಮದಲ್ಲಿರುವ ವಿಮಲೇಶ್ವರತೀರ್ಥದಲ್ಲಿ ಒಂದುಲಕ್ಷ ತೀರ್ಥಗಳೂ ಇರುವುವು ಎಂದು ಮುನಿಯು ಹೇಳಿರುತ್ತಾನೆ.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ
ಶ್ರೀ ಸ್ಕಾಂದಮಹಾಪುರಾಣದ ಐದನೆಯ ಆವಂತ್ಯಖಂಡದ ಮೂರನೆಯ ರೇವಾಖಂಡದಲ್ಲಿ
"ತೀರ್ಥಸಂಖ್ಯಾಪರಿಗಣನವರ್ಣನ" ವೆಂಬ
ಇನ್ನೂರಮೂವತ್ತೊಂದನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

# ಅಥ ದ್ವಾತ್ರಿಂಶದಧಿಕದ್ವಿಶತತಮೋಽಧ್ಯಾಯಃ

## ರೇವಾಖಂಡಪುಸ್ತಕದಾನಾದಿಮಾಹಾತ್ಮ್ಯವರ್ಣನಂ

ಸೂತ ಉವಾಚ:—

ಇತಿ ವಃ ಕಥಿತಂ ವಿಪ್ರಾ ರೇವಾಮಾಹಾತ್ಮ್ಯಮುತ್ತಮಂ ।
ಯಥೋಪದಿಷ್ಟಂ ಪಾರ್ಥಾಯ ಮಾರ್ಕಂಡೇಯೇನ ವೈ ಪುರಾ ॥ ೧ ॥
ತಥಾ ತೀರ್ಥಕದಂಬಾಶ್ಚ ತೇಷು ತೀರ್ಥವಿಶೇಷತಃ ।
ಪ್ರಾಧಾನ್ಯೇನ ಮಯಾ ಖ್ಯಾತಾ ಯಥಾಸಂಖ್ಯಂ ಯಥಾಕ್ರಮಂ ॥ ೨ ॥
ಏತತ್ಪವಿತ್ರಮತುಲಂ ಹ್ಯೇತತ್ಪಾಪಹರಂ ಪರಂ ।
ನರ್ಮದಾಚರಿತಂ ಪುಣ್ಯಂ ಮಾಹಾತ್ಮ್ಯಂ ಮುನಿಭಾಷಿತಂ ॥ ೩ ॥
ಸಪ್ತಕಲ್ಪಾನುಗೋ ವಿಪ್ರೋ ನರ್ಮದಾಯಾಂ ಮುನೀಶ್ವರಾಃ ।
ಮೃಕಂಡತನಯೋ ಧೀಮಾನ್ ಪರಮಾರ್ಥವಿದುತ್ತಮಃ ॥ ೪ ॥
ಸಂಸೇವ್ಯ ಸರ್ವತೀರ್ಥಾನಿ ನದೀಃ ಸರ್ವಾಶ್ಚ ವೈ ಪುರಾ ।
ಬಹುಕಲ್ಪಸ್ಮರಾಂ ರೇವಾಮಾಲಕ್ಷ್ಯ ಶಿವದೇಹಜಾಂ ॥ ೫ ॥
ಮೇ ಕಲೇತಿ ಚ ಶರ್ವೋಕ್ತಾಂ ಶರಣಂ ಶರ್ವಜಾಂ ಯಯೌ ।
ಅಜರಾಮಮರಾಂ ದೇವೀಂ ದೈತ್ಯಧ್ವಂಸಕರೀಂ ಪರಾಂ ॥ ೬ ॥

---

## ಕನ್ನಡದ ಅನುವಾದ

### ರೇವಾಖಂಡಪುಸ್ತಕದಾನಾದಿಮಾಹಾತ್ಮ್ಯವರ್ಣನ

೧. ಸೂತನು ಹೇಳುತ್ತಾನೆ:—ವಿಪ್ರರೆ! ಹಿಂದೆ ಮಾರ್ಕಂಡೇಯನು ಯುಧಿಷ್ಠಿರನಿಗೆ ಉಪದೇಶಮಾಡಿದಂತೆ ನಿಮಗೆ ಉತ್ತಮವಾದ ರೇವಾ ಮಾಹಾತ್ಮ್ಯವನ್ನು ಹೇಳಿರುತ್ತೇನೆ.

೨. ಹಾಗೆಯೇ ಮುಖ್ಯವಾದ ತೀರ್ಥಗಳನ್ನೂ ಸಂಖ್ಯಾಕ್ರಮವನ್ನು ಅನುಸರಿಸಿ ಹೇಳಿದ್ದೇನೆ.

೩. ಮುನಿಯು ಹೇಳಿರುವ ಈ ನರ್ಮದಾಮಾಹಾತ್ಮ್ಯೆಯು ಪವಿತ್ರವೂ, ಪಾಪನಾಶಕವೂ, ಅಸದೃಶವೂ ಆಗಿರುವುದು.

೪–೬. ಮುನಿವರ್ಯರೆ! ಏಳು ಕಲ್ಪಗಳನ್ನು ಅನುಸರಿಸಿ ಬಂದವನೂ, ಬುದ್ಧಿವಂತನೂ, ಬ್ರಹ್ಮಜ್ಞಾನಿಗಳಲ್ಲಿ ಶ್ರೇಷ್ಠನೂ ಆದ ಮಾರ್ಕಂಡೇಯನು ಸಕಲತೀರ್ಥಗಳನ್ನೂ, ಸಮಸ್ತ ನದಿಗಳನ್ನೂ ಸೇವಿಸಿ ಅನೇಕ ಕಲ್ಪಸ್ಮರಣೆಯುಳ್ಳವಳೂ, ಶಿವನ ಶರೀರದಿಂದ ಹುಟ್ಟಿದವಳೂ, ಶಿವನಿಂದ ತನ್ನೊಂದು ಕಲೆಯೆಂದು ಹೇಳಲ್ಪಟ್ಟವಳೂ, ಜರಾಮರಣವಿಲ್ಲದವಳೂ, ದೈತ್ಯನಾಶಕಳೂ, ಅತಿ ವೈಭವದಿಂದ

ಮಹಾವಿಭವಸಂಯುಕ್ತಾಂ ಭವಘ್ನೀಂ ಭವಜಾಹ್ನವೀಂ ।
ತಸ್ಯಾಮಾಬಧ್ಯ ಸದ್ಭಕ್ತಿಮ ಜಾತಃ ಸೋಽಪ್ಯಜರಾಮರಃ ॥ ೭ ॥
ಷಷ್ಟಿತೀರ್ಥಸಹಸ್ರಾಣಿ ಷಷ್ಟಿಕೋಟ್ಯಶ್ಚ ಸತ್ತಮಾಃ ।
ವ್ಯವಸ್ಥಿತಾನಿ ರೇವಾಯಾಸ್ತೀರಯುಗ್ಮೇ ಪದೇ ಪದೇ ॥ ೮ ॥
ಸರಿತಃ ಪರಿತಃ ಸಂತಿ ಸತೀರ್ಥಾಸ್ತು ಸಹಸ್ರಶಃ ।
ನ ತುಲಾಂ ಯಾಂತಿ ರೇವಾಯಾಸ್ತಾಶ್ಚಾನ್ಯೇ ಮುನೀಶ್ವರಾಃ ॥ ೯ ॥
ಏತದ್ವಃ ಕಥಿತಂ ಸರ್ವಂ ಯತ್ಪೃಷ್ಟಮಖಿಲಂ ದ್ವಿಜಾಃ ।
ಯನ್ಮಹೇಶಮುಖಾಚ್ಛ್ರುತ್ವಾ ವಾಯುರಾಹ ಋಷೀನ್ ಪ್ರತಿ ॥ ೧೦ ॥
ತದ್ವನ್ಮೃಕಂಡತನಯೋಽಪ್ಯನುಭೂಯಾಖಿಲಾಂ ನದೀಂ ।
ಸತೀರ್ಥಾಂ ಪದಶಃ ಪ್ರಾಹ ಪಾಂಡುಪುತ್ರಾಯ ಪಾವನೀಂ ॥ ೧೧ ॥
ಏತಚ್ಚ ಕಥಿತಂ ಸರ್ವಂ ಸಂಕ್ಷೇಪೇಣ ದ್ವಿಜೋತ್ತಮಃ ।
ನರ್ಮದಾಚರಿತಂ ಪುಣ್ಯಂ ತ್ರಿಷು ಲೋಕೇಷು ದುರ್ಲಭಂ ॥ ೧೨ ॥
ಕಿಮನ್ಯೈಃ ಸರಿತಾಂ ತೋಯೈಃ ಸೇವಿತೈಸ್ತು ಸಹಸ್ರಶಃ ।
ಯದಿ ಸಂಸೇವ್ಯತೇ ತೋಯಂ ರೇವಾಯಾಃ ಪಾಪನಾಶನಂ ॥ ೧೩ ॥

---

ಕೂಡಿದವಳೂ, ಸಂಸಾರದುಃಖನಾಶಕಳೂ, ಭವಜಾಹ್ನವಿಯೂ (ಶಿವಗಂಗೆಯೂ) ಆದ ರೇವಾನದಿಯನ್ನು ನೋಡಿ ಮರೆಹೊಕ್ಕನು. ಅವನು ಅವಳಲ್ಲಿ ಭಕ್ತಿಯನ್ನು ಮಾಡಿ ಜರಾಮರಣರಹಿತನಾದನು.

೮. ಈ ನರ್ಮದಾನದಿಯ ಎರಡು ದಡಗಳಲ್ಲಿ ಅರುವತ್ತುಕೋಟಿ ಅರುವತ್ತುಸಾವಿರ ತೀರ್ಥಗಳಿರುವುವು.

೯. ಮುನಿವರ್ಯರೆ! ಆ ತೀರ್ಥದ ಸುತ್ತಲೂ ಇರುವ ಸಾವಿರಾರು ತೀರ್ಥಗಳೂ ರೇವಾನದಿಯ ಸಾದೃಶ್ಯವನ್ನು ಹೊಂದುವುದಿಲ್ಲ.

೧೦. ದ್ವಿಜರೆ! ವಾಯುವು ಮಹೇಶನ ಮುಖದಿಂದ ಕೇಳಿ ಋಷಿಗಳಿಗೆ ಹೇಳಿದ ಈ ನರ್ಮದಾಚರಿತ್ರೆಯನ್ನು ನೀವು ಕೇಳಿದುದರಿಂದ ನಿಮಗೆ ಹೇಳಿದ್ದೇನೆ.

೧೧. ಅದರಂತೆಯೇ ಮೃಕಂಡುವಿನ ಮಗನಾದ ಮಾರ್ಕಂಡೇಯ ಮುನಿಯು ತೀರ್ಥಗಳಿಂದ ಕೂಡಿರುವುದೂ, ಪವಿತ್ರವೂ ಆದ ನರ್ಮದಾನದಿಯನ್ನು ಸಂಪೂರ್ಣವಾಗಿ ಅನುಭವಿಸಿ ಯುಧಿಷ್ಠಿರನಿಗೆ ಪದಶಃ ಹೇಳಿದ್ದಾನೆ.

೧೨. ದ್ವಿಜವರ್ಯರೆ! ಮೂರು ಲೋಕಗಳಲ್ಲಿ ದುರ್ಲಭವಾದ ಪುಣ್ಯಕರವಾದ ನರ್ಮದಾಚರಿತ್ರೆಯನ್ನು ಸಂಕ್ಷೇಪವಾಗಿ ನಿಮಗೆ ಹೇಳಿದ್ದೇನೆ.

೧೩. ಪಾಪನಾಶಕವಾದ ನರ್ಮದಾನದಿಯ ನೀರನ್ನು ಸೇವಿಸಿದರೆ ಇತರ ಸಾವಿರಾರು ನದಿಗಳ ನೀರನ್ನು ಸೇವಿಸುವುದರಿಂದೇನುಪ್ರಯೋಜನ?

ಮೇಖಲಾಜಲಸಂಸೇವೀ ಮುಕ್ತಿಮಾಪ್ನೋತಿ ಶಾಶ್ವತೀಂ ॥ ೧೪ ॥
ಯಥಾ ಯಥಾ ಭಜೇನ್ಮರ್ತ್ಯೋ ಯದ್ಯದಿಚ್ಛತಿ ತೀರ್ಥಗಃ ।
ತತ್ತದಾಪ್ನೋತಿ ನಿಯತಂ ಶ್ರದ್ಧಯಾಽಶ್ರದ್ಧಯಾಽಪಿ ಚ ॥ ೧೫ ॥
ಇದಂ ಬ್ರಹ್ಮಾ ಹರಿರಿದಮಿದಂ ಸಾಕ್ಷಾತ್ಪರೋ ಹರಃ ।
ಇದಂ ಬ್ರಹ್ಮ ನಿರಾಕಾರಂ ಕೈವಲ್ಯಂ ನರ್ಮದಾಜಲಂ ॥ ೧೬ ॥
ತಾವದ್ಗರ್ಜಂತಿ ತೀರ್ಥಾನಿ ನದ್ಯೋ ಹೃದ್ಯಫಲಪ್ರದಾಃ ।
ಯಾವನ್ನಸ್ಮರ್ಯತೇ ರೇವಾ ಸೇವಾಹೇವಾ ಕಲೌ ನರೈಃ ॥ ೧೭ ॥
ಧ್ರುವಂ ಲೋಕೇ ಹಿತಾರ್ಥಾಯ ಶಿವೇನ ಸ್ವಶರೀರತಃ ।
ಶಕ್ತಿಃಕಾಽಪಿ ಸರಿದ್ರೂಪಾ ರೇವೇಯಮವತಾರಿತಾ ॥ ೧೮ ॥
ತಾವದ್ಗರ್ಜಂತಿ ಯಜ್ಞಾಶ್ಚ ವನಕ್ಷೇತ್ರಾದಯೋ ಭೃಶಂ ।
ಯಾವನ್ನ ನರ್ಮದಾನಾಮಕೀರ್ತನಂ ಕ್ರಿಯತೇ ಕಲೌ ॥ ೧೯ ॥
ಗರಿಮಾ ಗಣ್ಯತೇ ತಾವತ್ತಪೋದಾನವ್ರತಾದಿಷು ।
ನರೈರ್ನಾ ಪ್ರಾಪ್ಯತೇ ಯಾವದ್ಭುವಿ ಭರ್ಗಭವಾ ಧುನೀ ॥ ೨೦ ॥

---

೧೪. ನರ್ಮದಾಜಲವನ್ನು ಸೇವಿಸುವವನು ಶಾಶ್ವತಮುಕ್ತಿಯನ್ನು ಪಡೆಯುವನು.

೧೫. ಮಾನವನು ನರ್ಮದಾತೀರ್ಥದಲ್ಲಿ ನೆಲೆಸಿ ಯಾವಯಾವುದನ್ನು ಇಚ್ಛಿಸುತ್ತ ಶ್ರದ್ಧೆಯಿಂದಾಗಲಿ, ಅಶ್ರದ್ಧೆಯಿಂದಾಗಲಿ ಹೇಗೆ ಹೇಗೆ ಸೇವಿಸುವನೊ ಅದನ್ನು ಹಾಗೆ ಹಾಗೆಯೆ ನಿಶ್ಚಯವಾಗಿಯೂ ಪಡೆಯುವನು.

೧೬. ನರ್ಮದಾಜಲವು ಬ್ರಹ್ಮವಿಷ್ಣುಮಹೇಶ್ವರ ರೂಪವೂ, ನಿರಾಕಾರ ಪರಬ್ರಹ್ಮರೂಪವೂ ಆಗಿರುವುದು.

೧೭. ಕಲಿಯುಗದಲ್ಲಿ ಮಾನವರು ಸೇವಿಸಲರ್ಹವಾದ ರೇವಾನದಿಯನ್ನು ಸ್ಮರಿಸದಿರುವವರೆಗೆ ತೀರ್ಥಗಳೂ, ಮನೋಹರಫಲವನ್ನು ಕೊಡುವ ನದಿಗಳೂ ಗರ್ಜಿಸುವುವು.

೧೮. ಲೋಕದಲ್ಲಿ ಜನರ ಹಿತಕ್ಕಾಗಿ ಶಿವನು ತನ್ನ ಸ್ವಶರೀರದಿಂದಲೇ ರೇವಾನದೀರೂಪವಾದ ಅದ್ಭುತಶಕ್ತಿಯನ್ನು ಉಂಟುಮಾಡಿರುವನು.

೧೯. ಕಲಿಯುಗದಲ್ಲಿ ನರ್ಮದಾನದಿಯ ನಾಮವನ್ನು ಕೀರ್ತಿಸದಿರುವವರೆಗೆ ಯಜ್ಞಗಳೂ, ವನಕ್ಷೇತ್ರಾದಿಗಳೂ ಗರ್ಜಿಸುವುವು.

೨೦. ಭೂಮಿಯಲ್ಲಿ ಮಾನವರು ನರ್ಮದಾನದಿಯನ್ನು ಹೊಂದದೆ ಇರುವವರೆಗೆ ಮಾತ್ರ ತಪಸ್ಸು, ದಾನ, ವ್ರತಾದಿಗಳ ಮಹತ್ವವು ಎಣಿಸಲ್ಪಡುತ್ತದೆ.

ಯೇ ವಸಂತ್ಯುತ್ತರೇ ಕೂಲೇ ರುದ್ರಸ್ಯಾನುಚರಾ ಹಿ ತೇ ।
ವಸಂತಿ ಯಾಮ್ಯತೀರೇ ಯೇ ಲೋಕಂ ತೇ ಯಾಂತಿ ವೈಷ್ಣವಂ ॥ ೨೦ ॥
ಧನ್ಯಾಸ್ತೇ ದೇಶವರ್ಯಾಸ್ತೇ ಯೇಷು ದೇಶೇಷು ನರ್ಮದಾ ।
ನರಕಾಂತಕರೀ ಶಶ್ವತ್ಸಂಶ್ರಿತಾ ಶರ್ವನಿರ್ಮಿತಾ ॥ ೨೨ ॥
ಕೃತಪುಣ್ಯಾಶ್ಚ ತೇ ಲೋಕಾಃ ಶೋಕಾಯ ನ ಭವಂತಿ ತೇ ।
ಯೇ ಪಿಬಂತಿ ಜಲಂ ಪುಣ್ಯಂ ಪಾರ್ವತೀಪತಿಸಿಂಧುಜಂ ॥ ೨೩ ॥
ಇದಂಪವಿತ್ರಮತುಲಂ ರೇವಾಯಾಶ್ಚರಿತಂ ದ್ವಿಜಾಃ ।
ಶೃಣೋತಿ ಯಃ ಕೀರ್ತಯತೇ ಮುಚ್ಯತೇ ಸರ್ವಪಾತಕೈಃ ॥ ೨೪ ॥
ಯತ್ಫಲಂ ಸರ್ವವೇದೈಶ್ಚ ಸ ಷಡಂಗಪದಕ್ರಮೈಃ ।
ಶ್ರುತೈಶ್ಚ ಪಠಿತೈಸ್ತಸ್ಮಾತ್ಫಲಮಷ್ಟಗುಣಂ ಭವೇತ್ ॥ ೨೫ ॥
ಸತ್ರಯಾಜೀಫಲಂ ಯಚ್ಚ ಲಭತೇ ದ್ವಾದಶಾಬ್ದಿಕಂ ।
ಶ್ರುತ್ವಾ ಸಕೃಚ್ಚ ರೇವಾಯಶ್ಚರಿತಂ ತತ್ಫಲಂ ಲಭೇತ್ ॥ ೨೬ ॥
ಸರ್ವತೀರ್ಥಾವಗಾಹಾಚ್ಚ ಯತ್ಫಲಂ ಸಾಗರಾದಿಷು ।
ಸಕೃಚ್ಛ್ರುತ್ವಾ ಚ ಮಾಹಾತ್ಮ್ಯಂ ರೇವಾಯಾಸ್ತತ್ಫಲಂ ಲಭೇತ್ ॥ ೨೭ ॥

---

೨೧. ನರ್ಮದೆಯ ಉತ್ತರತೀರದಲ್ಲಿ ವಾಸಮಾಡುವವರು ರುದ್ರನ ಸೇವಕರಾಗುವರು. ದಕ್ಷಿಣತೀರದಲ್ಲಿ ವಾಸಮಾಡುವವರು ವಿಷ್ಣುಲೋಕವನ್ನು ಹೊಂದುವರು.

೨೨. ನರಕವನ್ನು ನಿವಾರಿಸುವವಳೂ, ಶಿವನಿರ್ಮಿತಳೂ ಆದ ನರ್ಮದೆಯು ಹರಿಯುವ ದೇಶಗಳೇ ಧನ್ಯವಾದುವು.

೨೩. ಶಿವನದಿಯಾದ ನರ್ಮದೆಯ ಜಲವನ್ನು ಕುಡಿಯುವ ಪುಣ್ಯವಂತರಾದ ಮಾನವರು ದುಃಖಗೊಳ್ಳುವುದಿಲ್ಲ.

೨೪. ದ್ವಿಜರೆ! ಪವಿತ್ರವೂ, ಅಸದೃಶವೂ ಆದ ರೇವಾನದಿಯ ಚರಿತ್ರೆಯನ್ನು ಕೇಳುವವನೂ, ಹೇಳುವವನೂ ಸಕಲ ಪಾಪಗಳಿಂದ ಮುಕ್ತನಾಗುವನು.

೨೫. ಷಡಂಗಪದಕ್ರಮಗಳಿಂದ ಕೂಡಿದ ವೇದಗಳನ್ನು ಕೇಳುವುದರಿಂದಲೂ, ಹೇಳುವುದರಿಂದಲೂ ಉಂಟಾಗುವ ಫಲಕ್ಕಿಂತ ನರ್ಮದಾಸೇವೆಯಿಂದ ಎಂಟರಷ್ಟು ಅಧಿಕಫಲವುಂಟಾಗುವುದು.

೨೬. ಹನ್ನೆರಡುವರ್ಷಕಾಲ ಸತ್ರಯಾಗವನ್ನು ಮಾಡುವುದರಿಂದುಂಟಾಗುವ ಫಲವು ರೇವಾಚರಿತ್ರೆಯನ್ನು ಒಂದುಸಾರಿ ಕೇಳುವುದರಿಂದ ಲಭಿಸುವುದು.

೨೭. ಸಮುದ್ರಾದಿ ಸಕಲತೀರ್ಥಗಳಲ್ಲಿ ಸ್ನಾನಮಾಡುವುದರಿಂದುಂಟಾಗುವ ಫಲವು ರೇವಾಮಾಹಾತ್ಮ್ಯವನ್ನು ಒಂದುಸಾರಿ ಕೇಳುವುದರಿಂದ ದೊರೆಯುವುದು.

ಏತದ್ಧರ್ಮ್ಯಮುಪಾಖ್ಯಾನಂ ಸರ್ವಶಾಸ್ತ್ರೇಷ್ವನುತ್ತಮಂ ।
ದೇಶೇ ವಾ ಮಂಡಲೇ ವಾಽಪಿ ನಗರೇ ಗ್ರಾಮಮಧ್ಯತಃ ॥ ೨೮ ॥
ಗೃಹೇ ವಾ ತಿಷ್ಠತೇ ಯಸ್ಯ ಲಿಖಿತಂ ಸಾರ್ವವರ್ಣಿಕಂ ।
ಸ ಬ್ರಹ್ಮಾ ಸ ಶಿವಃ ಸಾಕ್ಷಾತ್ಸಚ ದೇವೋ ಜನಾರ್ದನಃ ॥ ೨೯ ॥
ಧರ್ಮಾರ್ಥಕಾಮಮೋಕ್ಷಾಣಾಂ ಮಾರ್ಗೋಽಯಂ ದೇವಸೇವಿತಃ ।
ಗುರೂಣಾಂ ಚ ಗುರುಃ ಶಾಸ್ತ್ರಂ ಪರಮಂ ಸಿದ್ಧಿಕಾರಣಂ ॥ ೩೦ ॥
ಯಶ್ಚೇದಂ ಶೃಣುಯಾನ್ನಿತ್ಯಂ ಪುರಾಣಂ ದೇವಭಾಷಿತಂ ।
ಬ್ರಾಹ್ಮಣೋ ವೇದವಾನ್ಭೂಯಾತ್ಕ್ಷತ್ರಿಯೋ ವಿಜಯೀ ಭವೇತ್ ॥೩೧॥
ಧನಾಢ್ಯೋ ಜಾಯತೇ ವೈಶ್ಯಃ ಶೂದ್ರೋ ವೈ ಧರ್ಮಭಾಗ್ಭವೇತ್ ॥೩೨॥
ಸೌಭಾಗ್ಯಸಂತತಿಂ ನಾರೀ ಶ್ರುತ್ವೈತತ್ಸಮವಾಪ್ನುಯಾತ್ ।
ಶ್ರಿಯಂ ಸೌಖ್ಯಂ ಸ್ವರ್ಗವಾಸಂ ಜನ್ಮ ಚೈವೋತ್ತಮೇ ಕುಲೇ ॥ ೩೩ ॥
ರಸಭೇದೀ ಕೃತಘ್ನಶ್ಚ ಸ್ವಾಮಿಧ್ರುಗ್ ಮಿತ್ರವಂಚಕಃ ।
ಗೋಘ್ನಶ್ಚ ಗರದಶ್ಚೈವ ಕನ್ಯಾವಿಕ್ರಯಕಾರಕಃ ॥ ೩೪ ॥
ಬ್ರಹ್ಮಘ್ನಶ್ಚ ಸುರಾಪೀ ಚ ಸ್ತೇಯೀ ಚ ಗುರುತಲ್ಪಗಃ ।
ನರ್ಮದಾಚರಿತಂ ಶೃಣ್ವನ್ ತಾಮಬ್ದಂ ಯೋಽಭಿಷೇವತೇ ॥ ೩೫ ॥

---

೨೮–೨೯. ಸಕಲ ಶಾಸ್ತ್ರಗಳಲ್ಲಿ ಉತ್ತಮವೂ, ಧರ್ಮದಾಯಕವೂ, ಸಕಲ ಜಾತಿಯವರೂ ಕೇಳಲರ್ಹವೂ ಆದ ಲಿಖಿತವಾಗಿರುವ ಈ ಉಪಾಖ್ಯಾನವು ಯಾವ ದೇಶದಲ್ಲಾಗಲಿ, ಪಟ್ಟಣದಲ್ಲಾಗಲಿ, ಗ್ರಾಮಮಧ್ಯದಲ್ಲಾಗಲಿ ಇರುವುದೊ, ಆ ದೇಶ ಪಟ್ಟಣ ಗ್ರಾಮಗಳ ಒಡೆಯರು ಸಾಕ್ಷಾತ್ ಬ್ರಹ್ಮ ವಿಷ್ಣು ಮಹೇಶ್ವರರೂಪರಾಗಿರುವನು.

೩೦. ಇದು ದೇವಸೇವಿತವಾದ ಧರ್ಮಾರ್ಥಕಾಮಗಳ ಮಾರ್ಗವೂ, ಗುರುಗಳಿಗೆ ಗುರುವೂ, ಉತ್ತಮಸಿದ್ಧಿಗೆ ಕಾರಣವಾದ ಶಾಸ್ತ್ರವೂ ಆಗಿರುವುದು.

೩೧–೩೨. ದೇವೋಕ್ತವಾದ ಈ ಪುರಾಣವನ್ನು ನಿತ್ಯವೂ ಕೇಳುವ ಬ್ರಾಹ್ಮಣನು ವೇದಜ್ಞನೂ, ಕ್ಷತ್ರಿಯನು ಜಯಶಾಲಿಯೂ, ವೈಶ್ಯನು ಧನವಂತನೂ, ಶೂದ್ರನು ಧರ್ಮವಂತನೂ ಆಗುವನು.

೩೩. ಇದನ್ನು ಕೇಳುವ ಹೆಂಗಸು ಸೌಭಾಗ್ಯವನ್ನೂ, ಸಂಪತ್ತನ್ನೂ, ಸೌಖ್ಯವನ್ನೂ, ಸ್ವರ್ಗವಾಸವನ್ನೂ ಪಡೆದು ಉತ್ತಮಕುಲದಲ್ಲಿ ಜನಿಸುವಳು.

೩೪–೩೫. ಪಂಕ್ತಿಭೇದವನ್ನು ಮಾಡಿದವನು, ಕೃತಘ್ನನು, ಸ್ವಾಮಿದ್ರೋಹಿಯು, ಮಿತ್ರವಂಚಕನು, ಗೋಘ್ನನು, ವಿಷವನ್ನಿತ್ತವನು, ಕನ್ಯೆಯನ್ನು ವಿಕ್ರಯಿಸಿದವನು, ಬ್ರಹ್ಮಘ್ನನು, ಸುರಾಪಾನ ಮಾಡಿದವನು, ಕಳ್ಳನು, ಗುರುಪತ್ನೀಗಮನಮಾಡಿದವನು—ಇವರೆಲ್ಲರೂ ಒಂದು ವರ್ಷಕಾಲ ನರ್ಮದಾಚರಿತ್ರೆಯನ್ನು ಕೇಳುತ್ತ ಆ ನದಿಯನ್ನು ಸೇವಿಸಿದರೆ ನಿಶ್ಚಯವಾಗಿಯೂ ಸಕಲ

ಸರ್ವಪಾಪವಿನಿರ್ಮುಕ್ತೋ ಜಾಯತೇ ನಾಽತ್ರ ಸಂಶಯಃ ।
ಪಾಕಭೇದೀ ವೃಥಾ ಪಾಕೀ ದೇವಬ್ರಾಹ್ಮಣನಿಂದಕಃ ॥ ೩೬ ॥
ಪರೀವಾರೀ ಗುರೋಃ ಪಿತ್ರೋಃ ಸಾಧೂನಾಂ ನೃಪತೇಸ್ತಥಾ ।
ತೇಽಪಿ ಶ್ರುತ್ವಾ ಚ ಪಾಪೇಭ್ಯೋ ಮುಚ್ಯಂತೇ ನಾತ್ರ ಸಂಶಯಃ ॥ ೩೭ ॥
ಯೇ ಪುನರ್ಭಾವಿತಾತ್ಮಾನಃ ಶಾಸ್ತ್ರಂ ಶೃಣ್ವಂತಿ ನಿತ್ಯಶಃ ।
ಪೂಜಯಂತಿ ಚ ತಚ್ಛಾಸ್ತ್ರಂ ನಾರ್ಮದಂ ವಸ್ತ್ರಭೂಷಣೈಃ ॥ ೩೮ ॥
ಪುಷ್ಪೈಃ ಫಲೈಶ್ಚಂದನಾದ್ಯೈರ್ಭೋಜನೈರ್ವಿವಿಧೈರಪಿ ।
ಶಾಸ್ತ್ರೇಽಸ್ಮಿನ್ಪೂಜಿತೇ ದೇವಾ ಪೂಜಿತಾಗುರುವಸ್ತಥಾ ॥ ೩೯ ॥
ಇಹಲೋಕೇ ಪರೇ ಚೈವ ನಾಽತ್ರ ಕಾರ್ಯಾ ವಿಚಾರಣಾ ।
ತಸ್ಮಾತ್ಸರ್ವಪ್ರಯತ್ನೇನ ಗಂಧವಸ್ತ್ರಾದಿಭೂಷಣೈಃ ॥ ೪೦ ॥
ಪೂಜಯೇತ್ಪರಯಾ ಭಕ್ತ್ಯಾ ವಾಡಕಂ ಶಾಸ್ತ್ರಮೇವ ಚ ।
ವೇದಪಾಠೈಶ್ಚ ಯತ್ಪುಣ್ಯಮಗ್ನಿಹೋತ್ರೈಶ್ಚ ಪಾಲಿತೈಃ ॥ ೪೧ ॥
ತತ್ಫಲಂ ಸಮವಾಪ್ನೋತಿ ನರ್ಮದಾಚರಿತೇ ಶುಭೇ ।
ಕುರುಕ್ಷೇತ್ರೇ ಚ ಯತ್ಪುಣ್ಯಂ ಪ್ರಭಾಸೇ ಪುಷ್ಕರೇ ತಥಾ ॥ ೪೨ ॥
ರುದ್ರಾವರ್ತೇ ಗಯಾಯಾಂ ಚ ವಾರಾಣಸ್ಯಾಂ ವಿಶೇಷತಃ ।
ಗಂಗಾದ್ವಾರೇ ಪ್ರಯಾಗೇ ಚ ಗಂಗಾಸಾಗರಸಂಗಮೇ ॥ ೪೩ ॥
ಏವಮಾದಿಷು ತೀರ್ಥೇಷು ಯತ್ಪುಣ್ಯಂ ಜಾಯತೇ ನೃಣಾಂ ।
ನರ್ಮದಾಚರಿತಂ ಶ್ರುತ್ವಾ ತತ್ಪುಣ್ಯಂ ಸಕಲಂ ಲಭೇತ್ ॥ ೪೪ ॥

---

ಪಾಪಮುಕ್ತರಾಗುವರು. ಅಡುಗೆಯನ್ನು ಕೆಡಿಸುವವನೂ, ವ್ಯರ್ಥವಾಗಿ ಅಡುಗೆ ಮಾಡುವವನೂ, ದೇವಬ್ರಾಹ್ಮಣರನ್ನು ನಿಂದಿಸುವವನೂ, ಗುರು, ತಂದೆ ತಾಯಿಗಳು, ಸಾಧುಗಳು, ರಾಜರು ಇವರನ್ನು ಬಯ್ಯುವವನೂ ನರ್ಮದಾಚರಿತ್ರೆಯನ್ನು ಕೇಳಿದರೆ ಪಾಪಮುಕ್ತರಾಗುವರು.

೩೮–೪೪. ಭಕ್ತಿಯಿಂದ ನರ್ಮದಾಚರಿತ್ರೆಯನ್ನು ಕೇಳುವವರೂ, ವಸ್ತ್ರ, ಭೂಷಣ, ಪುಷ್ಪ, ಫಲ, ಚಂದನ, ವಿವಿಧ ಭೋಜನ ಇವುಗಳಿಂದ ಪೂಜಿಸುವವರೂ ಇಹಪರಲೋಕಗಳಲ್ಲಿಯೂ ಗುರುಗಳನ್ನು ಪೂಜಿಸಿದವರಂತಾಗುವರೆಂಬುದರಲ್ಲಿ ವಿಚಾರವಿಲ್ಲ. ಆದುದರಿಂದ ಗಂಧ, ವಸ್ತ್ರ, ಭೂಷಣಾದಿಗಳಿಂದ ನರ್ಮದಾಚರಿತ್ರೆಯನ್ನು ಭಕ್ತಿಯಿಂದ ಪೂಜಿಸಬೇಕು. ನರ್ಮದಾಚರಿತ್ರೆಯಿಂದ ವೇದಪಾಠ, ಅಗ್ನಿಹೋತ್ರಗಳಿಂದುಂಟಾಗುವ ಪುಣ್ಯವು ಲಭಿಸುವುದು. ಕುರುಕ್ಷೇತ್ರ, ಪ್ರಭಾಸ, ಪುಷ್ಕರ, ರುದ್ರಾವರ್ತ, ಗಯಾ, ವಾರಾಣಸೀ, ಗಂಗಾಧಾರ, ಪ್ರಯಾಗ, ಗಂಗಾಸಾಗರಸಂಗಮವೇ ಮೊದಲಾದ ತೀರ್ಥಗಳಲ್ಲಿ ಮಾನವರಿಗೆ ಉಂಟಾಗುವ ಪುಣ್ಯವು ನರ್ಮದಾಚರಿತ್ರೆಯನ್ನು ಕೇಳುವುದರಿಂದುಂಟಾಗುವುದು.

ಆದಿಮಧ್ಯಾವಸಾನೇಷು ನರ್ಮದಾಚರಿತಂ ಶುಭಂ ।
ಯಃ ಶೃಣೋತಿ ನರೋ ಭಕ್ತ್ಯಾ ಶೃಣುಧ್ವಂ ತತ್ಫಲಂ ಮಹತ್ ॥ ೪೫ ॥
ಸಮಾಪ್ಯ ಶಿವಸಂಸ್ಥಾನಂ ದೇವಕನ್ಯಾ ಸಮಾವೃತಃ ।
ರುದ್ರಸ್ಯಾನುಚರೋ ಭೂತ್ವಾ ಶಿವೇನ ಸಹಮೋದತೇ ॥ ೪೬ ॥
ಧರ್ಮಾಖ್ಯಾನಮಿದಂ ಪುಣ್ಯಂ ಸರ್ವಾಖ್ಯಾನೇಷ್ವನುತ್ತಮಂ ।
ಗೃಹೇಽಪಿ ಪಠ್ಯತೇ ಯಸ್ಯ ಚತುರ್ವರ್ಣಸ್ಯ ಸತ್ತಮಾಃ ॥ ೪೭ ॥
ಧನ್ಯಂ ತಸ್ಯ ಗೃಹಂ ಮನ್ಯೇ ಗೃಹಸ್ಥಂ ಚಾಽಪಿ ತತ್ಕುಲಂ ।
ಪುಸ್ತಕಂ ಪೂಜಯೇದ್ಯಸ್ತು ನರ್ಮದಾಚರಿತಸ್ಯ ತು ॥ ೪೮ ॥
ನರ್ಮದಾ ಪೂಜಿತಾ ತೇನ ಭಗವಾಂಶ್ಚ ಮಹೇಶ್ವರಃ ।
ವಾಚಕೇ ಪೂಜಿತೇ ತದ್ವದ್ದೇವಾಶ್ಚ ಋಷಯೋಽರ್ಚಿತಾಃ ॥ ೪೯ ॥
ಲೇಖಯಿತ್ವಾ ಚ ಸಕಲಂ ರೇವಾಚರಿತಮುತ್ತಮಂ ।
ಭೂಷಣಂ ಸರ್ವಶಾಸ್ತ್ರಾಣಾಂ ಯೋ ದದಾತಿ ದ್ವಿಜನ್ಮನೇ ॥ ೫೦ ॥
ನರ್ಮದಾ ಸರ್ವತೀರ್ಥೇಷು ಸ್ನಾನದಾನೇ ಚ ಯತ್ಫಲಂ ।
ತತ್ಫಲಂ ಸಮವಾಪ್ನೋತಿ ಸ ನರೋ ನಾತ್ರ ಸಂಶಯಃ ॥ ೫೧ ॥
ಏತತ್ಪುರಾಣಂ ರುದ್ರೋಕ್ತಂ ಮಹಾಪುಣ್ಯಫಲಪ್ರದಂ ।
ಸ್ವರ್ಗದಂ ಪುತ್ರದಂ ಧನ್ಯಂ ಯಶಸ್ಯಂ ಕೀರ್ತಿವರ್ಧನಂ ॥ ೫೨ ॥

---

೪೫. ನರ್ಮದಾಚರಿತ್ರೆಯನ್ನು ಆದಿಮಧ್ಯಾವಸಾನಗಳಲ್ಲಿ ಭಕ್ತಿಯಿಂದ ಕೇಳುವ ಮಾನವರಿಗುಂಟಾಗುವ ಮಹಾ ಫಲವನ್ನು ಕೇಳು.

೪೬. ರುದ್ರಲೋಕವನ್ನು ಸೇರಿ ದೇವಕನ್ಯೆಯರಿಂದ ಸಹಿತನಾಗಿ ರುದ್ರನ ಸೇವಕನಾಗಿ ಆತನೊಡನೆ ಆನಂದಿಸುವನು.

೪೭–೪೯. ದ್ವಿಜರೆ! ಪುಣ್ಯಕರವೂ, ಸಕಲಾಖ್ಯಾನಗಳಲ್ಲಿ ಉತ್ತಮವೂ ಆದ ಈ ಆಖ್ಯಾನವು ನಾಲ್ಕು ಜಾತಿಗಳಲ್ಲಿ ಯಾವನ ಮನೆಯಲ್ಲಿ ಪಠಿಸಲ್ಪಡುವುದೊ, ಅವನ ಮನೆಯೂ, ವಂಶವೂ, ಗಾರ್ಹಸ್ಥ್ಯವೂ ಧನ್ಯವಾದುವು. ನರ್ಮದಾಚರಿತ್ರೆಯ ಪುಸ್ತಕವನ್ನು ಪೂಜಿಸಿದವನು ನರ್ಮದೆಯನ್ನೂ, ಮಹೇಶ್ವರನನ್ನೂ, ದೇವರ್ಷಿಗಳನ್ನೂ ಪೂಜಿಸಿದವನಂತಾಗುವನು.

೫೦–೫೧. ಸಮಸ್ತ ಶಾಸ್ತ್ರಗಳಿಗೆ ಅಲಂಕಾರಪ್ರಾಯವಾದ ರೇವಾಚರಿತ್ರೆಯನ್ನು ಸಂಪೂರ್ಣವಾಗಿ ಬರೆಯಿಸಿ ಬ್ರಾಹ್ಮಣರಿಗೆ ದಾನಮಾಡುವವನು ನರ್ಮದೆಯಲ್ಲಿರುವ ಸಕಲತೀರ್ಥಗಳಲ್ಲಿ ಸ್ನಾನದಾನಮಾಡುವುದರಿಂದುಂಟಾಗುವ ಫಲವನ್ನು ನಿಶ್ಚಯವಾಗಿಯೂ ಪಡೆಯುವನು.

೫೨–೫೫. ರುದ್ರನು ಹೇಳಿರುವುದೂ, ಅತಿಶಯ ಪುಣ್ಯಫಲವನ್ನೀಯುವುದೂ, ಸ್ವರ್ಗವನ್ನೂ ಪುತ್ರರನ್ನೂ ದೊರಕಿಸುವುದೂ, ಧನ, ಯಶಸ್ಸು, ಕೀರ್ತಿ

ಧರ್ಮ್ಯಮಾಯುಷ್ಯಮತುಲಂ ದುಃಖದುಃಸ್ವಪ್ನ ನಾಶನಂ ।
ಪಠತಾಂ ಶೃಣ್ವತಾಂ ಚಾಽಪಿ ಸರ್ವಕಾಮಾರ್ಥಸಿದ್ಧಿದಂ ॥ ೫೩ ॥
ಯತ್ಪ್ರದತ್ತಮಿದಂ ಪುಣ್ಯಂ ಪುರಾಣಂ ವಾಚ್ಯತೇ ದ್ವಿಜೈಃ ।
ಶಿವಲೋಕೇ ಸ್ಥಿತಿಸ್ತಸ್ಯ ಪುರಾಣಾಕ್ಷರವತ್ಸರೀ ॥ ೫೪ ॥
ಇತಿ ನಿಗದಿತಮೇತನ್ನರ್ಮದಾಯಾಶ್ಚರಿತ್ರಂ
ಪವನಗದಿತಮುಗ್ರ್ಯಂ ಶರ್ವವಕ್ತ್ರಾದವಾಪ್ಯ ।
ತ್ರಿಭುವನಜನವಂದ್ಯಂ ಶ್ವೇತದಾದೌ ಮುನೀನಾಂ
ಕುಲಪತಿಷು ರತಸ್ತತ್ಸೂತಮುಖ್ಯೇನ ಸಾಧು ॥ ೫೫ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ
ಪಂಚಮೇ ಆವಂತ್ಯಖಂಡೇ ತೃತೀಯೇ ರೇವಾಖಂಡೇ
"ರೇವಾಖಂಡಪುಸ್ತಕದಾನಾದಿಮಾಹಾತ್ಮ್ಯವರ್ಣನಂ" ನಾಮ
ದ್ವಾತ್ರಿಂಶದಧಿಕದ್ವಿಶತತಮೋಽಧ್ಯಾಯಃ

**ರೇವಾಖಂಡಂ ಸಮಾಪ್ತಂ**

**ಸಮಾಪ್ತಮಾವಂತ್ಯಖಂಡಂ**

---

ಗಳನ್ನು ಹೆಚ್ಚಿಸುವುದೂ, ಧರ್ಮಾಯುಷ್ಯಗಳನ್ನು ಕೊಡುವುದೂ, ದುಃಖ ದುಃಸ್ವಪ್ನಗಳನ್ನು ನಿವಾರಿಸುವುದೂ ಆದ ಈ ಪುರಾಣವನ್ನು ಪಠಿಸುವವರಿಗೂ, ಕೇಳುವವರಿಗೂ ಸಕಲೇಷ್ಟಾರ್ಥಗಳು ಸಿದ್ಧಿಸುವುವು.

೫೪. ದಾನವಾಗಿ ಕೊಟ್ಟ ಪುಣ್ಯಕರವಾದ ಈ ಪುರಾಣವನ್ನು ಹೇಳುವ ದ್ವಿಜರು ಪುರಾಣಾಕ್ಷರಸಂಖ್ಯೆಯ ಸಂವತ್ಸರಕಾಲ ಶಿವಲೋಕದಲ್ಲಿ ವಾಸಿಸುವರು.

೫೫. ಶಿವನ ಬಾಯಿಯಿಂದ ಕೇಳಿ ವಾಯುದೇವನು ಹೇಳಿದುದೂ, ತ್ರಿಭುವನದ ಜನರಿಗೆ ವಂದ್ಯವೂ ಆದ ಈ ನರ್ಮದಾಚರಿತ್ರೆಯನ್ನು ಸೂತನು ಹೀಗೆ ಮುನಿಗಳಿಗೆ ಹೇಳಿದನು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ
ಶ್ರೀ ಸ್ಕಾಂದಮಹಾಪುರಾಣದ ಐದನೆಯ ಆವಂತ್ಯಖಂಡದ ಮೂರನೆಯ ರೇವಾಖಂಡದಲ್ಲಿ
"ರೇವಾಖಂಡಪುಸ್ತಕದಾನಾದಿಮಾಹಾತ್ಮ್ಯವರ್ಣನ"ವೆಂಬ
ಇನ್ನೂರಮೂವತ್ತೆರಡನೆಯ ಅಧ್ಯಾಯವು ಮುಗಿದುದು

**ಆವಂತ್ಯಖಂಡವು ಸಮಾಪ್ತವಾದುದು**

